# ನಗೆಗನ್ನಡಂ ಗೆಲ್ಗೆ!

## ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಾಸ್ಯ



ಸಂಪಾದಕರು

ಎಚ್. ಕೆ. ನಂಜುಂಡಸ್ವಾಮಿ ಮತ್ತು ಎಚ್. ವೈ. ರಾಜಗೋಪಾಲ್

ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ. ಅಭಿನವ, ಬೆಂಗಳೂರು

ಕನ್ನಡ ಸಾಹಿತ್ಯ ರಂಗ ಪುಸ್ತಕಮಾಲೆ –೩

# ನಗೆಗನ್ನಡಂ ಗೆಲ್ಗೆ!

## ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಾಸ್ಯ


**ಪ್ರಧಾನ ಸಂಪಾದಕರು**

ಎಚ್. ಕೆ. ನಂಜುಂಡಸ್ವಾಮಿ

ಎಚ್. ವೈ. ರಾಜಗೋಪಾಲ್

**ಸಂಪಾದಕ ಮಂಡಲಿ**

ವೈ. ಶ್ರೀ. ನಟರಾಜ

ನಳಿನಿ ಮೈಯ

ಎಚ್. ಕೆ. ಚಂದ್ರಶೇಖರ್

ನಾಗ ಐತಾಳ

ಎಚ್.ವೈ.ರಾಜಗೋಪಾಲ್



**ಕನ್ನಡ ಸಾಹಿತ್ಯ ರಂಗ**

ನ್ಯೂಜೆರ್ಸಿ, ಯು.ಎಸ್.ಎ.

**ಅಭಿನವ**

ಬೆಂಗಳೂರು

**NAGEGANNADAM GELGE!**- A collection of articles on humour in modern Kannada literature. Edited by H.K. Nanjunda Swamy and H.Y. Rajagopal, 3rd book in the series Kannada Sahitya Ranga pustakamale. Published by **Kannada Sahitya Ranga**, Inc., No 26, Frederik Place, Old Bridge, NJ 08857, USA, and **Abhinava**, 17/18-2, 1st Main Marenahalli, Vijayanagara, Bengaluru-560040(India)Ph:080-23505825.E-mail:abhinavaravi@gmail.com
First published in 2007 Pages 546 Price Rs: 250/-


ಮೊದಲ ಮುದ್ರಣ: ೨೦೦೭
ಬೆಲೆ: ಎರಡು ನೂರಾ ಐವತ್ತು ಮಾತ್ರ
ಪ್ರತಿಗಳು: ೧೦೦೦
ಬಳಸಿರುವ ಕಾಗದದ ಗುಣಮಟ್ಟ: ಎನ್.ಎಸ್. ಮ್ಯಾಪ್ಲಿತೋ ೬೦ ಜಿ.ಎಸ್.ಎಮ್.
ಆಕಾರ: ೧/೮ ಡೆಮ್ಮಿ(ಅಷ್ಟದಳ)

**ಮುಖಪುಟ ವಿನ್ಯಾಸ:**
ಜನಾರ್ಧನ ಸ್ವಾಮಿ, ಕ್ಯಾಲಿಫ್ಫೋರ್ನಿಯ, ಯು.ಎಸ್.ಎ., jswamy@jswamy.com

**Cover Design:**
Janardhana Swamy, California, USA, jswamy@jswamy.com

ಮುದ್ರಣ: ಧರಣಿ ಪ್ರಿಂಟರ್ಸ್, ಬೆಂಗಳೂರು

# ಅನುಕ್ರಮಣಿಕೆ

## ಭಾಗ ೨

## **ಹೊರನಾಡ ನಗೆಹೊನಲು**

### **ಹರಟೆ, ಪ್ರಬಂಧಗಳು**

**ಕವನ, ಚುಟಕ, ಇತ್ಯಾದಿ**

## ಅನುಬಂಧಗಳು

# ಸಂಪಾದಕರ ಅರಿಕೆ

ಕನ್ನಡ ಸಾಹಿತ್ಯದಲ್ಲಿ ಹಾಸ್ಯದ ಪ್ರಕಾರವನ್ನು ಕುರಿತು ಜಿ. ಪಿ. ರಾಜರತ್ನಂ ತಮ್ಮ 'ವಿಚಾರ ರಶ್ಮಿ'ಯ ಲೇಖನವೊಂದರಲ್ಲಿ ಹೀಗೆ ಹೇಳಿದ್ದಾರೆ:

'...ಹಿಂದಿನ ಕಾಲದಲ್ಲಿ ನಮ್ಮ (ಕನ್ನಡ) ತಾಯಿ ನಕ್ಕದ್ದು ತುಂಬ ಕಡಿಮೆ. ಅಪರೂಪಕ್ಕೆ ಒಬ್ಬ ರತ್ನಾಕರ, ಒಬ್ಬ ಮುದ್ದಣ, ಸ್ವಾತಂತ್ರ್ಯವನ್ನು ವಹಿಸಿ ನಿಸೂರಾಗಿ ನಕ್ಕಿದ್ದುಂಟು...(ಈಗ) ಕನ್ನಡಿಗರು ಬೆಳೆದಿದ್ದಾರೆ. 'ನಗೆ ಎಲ್ಲಿದೆಯೋ ಅಲ್ಲಿ ನಂದನ' ಎಂಬುದನ್ನು ಕಂಡುಕೊಂಡಿದ್ದಾರೆ. ನಕ್ಕು ನಗಿಸಲು ಬಲ್ಲವರು ನೂರಾರು ಲೇಖಕರು ತಲೆ ಎತ್ತಿದ್ದಾರೆ... ಒಟ್ಟಿನಲ್ಲಿ ನಮ್ಮ ಜನರ ಹಾಸ್ಯ ಶೃಂಗದಿಂದ ಕನ್ನಡಕ್ಕೆ ಹೊಸ ಕೋಡು ಮೂಡಿದಂತಾಗಿದೆ'.

ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಹಾಸ್ಯ ಒಂದು ಹೊಸ ಬೆಳವಣಿಗೆ. ರಾಜರತ್ನಂ ಮಾತಿನಲ್ಲಿ ಹೇಳುವುದಾದರೆ ಹಿಂದೆ ಅಪರೂಪಕ್ಕೆ ನಕ್ಕಿದ್ದ ತಾಯಿ ಈಗ ಧಾರಾಳವಾಗಿ ನಗುತ್ತಿದ್ದಾಳೆ. ಇದೊಂದು ಅತಿ ಗಮನಾರ್ಹವಾದ, ಸಂತಸದ ವಿಷಯವಲ್ಲವೆ? ಆದರಿಂದಲೇ ಕನ್ನಡ ಸಾಹಿತ್ಯ ರಂಗದ ಸಂಪಾದಕ ವರ್ಗ ಈ ವಿಷಯದತ್ತ ಗಮನ ಹರಿಸಿ ಹಾಸ್ಯವನ್ನೇ ತನ್ನ ಪುಸ್ತಕಮಾಲೆಯ ಮೂರನೆಯ ಪುಸ್ತಕದ ಮುಖ್ಯ ವಸ್ತುವಾಗಿಟ್ಟುಕೊಳ್ಳಬೇಕೆಂದು ನಿರ್ಧರಿಸಿತು.

ಈ ನಿರ್ಧಾರ ಕೈಗೊಂಡ ಮೇಲೆ ಸಹಜವಾಗಿಯೇ, ಆ ಪುಸ್ತಕದ ರೂಪುರೇಷೆಗಳ ಕಡೆ ನಮ್ಮೆಲ್ಲರ ಗಮನ ಸರಿಯಿತು. ಪುಸ್ತಕವನ್ನು ಕನ್ನಡ ಹಾಸ್ಯ ಸಾಹಿತ್ಯದ ಇತಿಹಾಸಕ್ಕೆ ಮುಡುಪಿಡಬೇಕೇ? ಆ ಇತಿಹಾಸ ಸ್ಮರಣೆ ಇಡೀ ಕನ್ನಡ ಹಾಸ್ಯ ಸಾಹಿತ್ಯವನ್ನೊಳಗೊಳ್ಳ-ಬೇಕೇ ಅಥವ ಕೇವಲ ಆಧುನಿಕ ಕನ್ನಡ ಹಾಸ್ಯ ಸಾಹಿತ್ಯವಾದರೆ ಸಾಕೇ? ಪುಸ್ತಕ ಹಾಸ್ಯಲೇಖನಗಳ ಸಂಕಲನವಾಗಿರಬೇಕೇ? ಅಂಥ ಲೇಖನಗಳನ್ನು ಬರೆಯುವವರಾರು?

ಪುಸ್ತಕದಲ್ಲಿ ಹೊರನಾಡ (ಅಂದರೆ ಅಮೆರಿಕದಲ್ಲಿ ನೆಲಸಿರುವ) ಕನ್ನಡ ಬರಹಗಾರರ ಸ್ಥಾನವೇನಿರಬೇಕು?–ಇಂಥ ಹತ್ತಾರು ಪ್ರಶ್ನೆಗಳು ನಮ್ಮನ್ನೆದುರಿಸಿದವು.

ಕನ್ನಡ ಸಾಹಿತ್ಯ ರಂಗದ ಧ್ಯೇಯಗಳಲ್ಲಿ, ಅಮೆರಿಕಕ್ಕೆ ಬಂದು ನೆಲಸಿರುವ ಕನ್ನಡಿಗರಿಗೆ ಕನ್ನಡ ಸಾಹಿತ್ಯದ ಅರಿವು ಮರೆಯದಂತೆ ಆಗಾಗ ಅದರ ವಿವಿಧ ಮುಖಗಳನ್ನು ಅವರ ಮುಂದಿಡುವುದು ಮತ್ತು ಅವರ ಸಾಹಿತ್ಯಾಕಾಂಕ್ಷೆಗೆ ಮುದಕೊಟ್ಟು ಅವರ ಸಾಹಿತ್ಯ ಪಸರಿಸಿ ಬೆಳೆಯುವಂತೆ ಉತ್ತೇಜಿಸುವುದು, ಇವು ಮುಖ್ಯವಾದವು. ಇದನ್ನು ಗಮನದಲ್ಲಿಟ್ಟುಕೊಂಡು ಈ ಪ್ರಸ್ತುತ ಗ್ರಂಥವನ್ನು ಎರಡು ಭಾಗವಾಗಿ ವಿಂಗಡಿಸಿ, ಮೊದಲ ಭಾಗದಲ್ಲಿ ಕಳೆದ ಶತಮಾನದ ಕನ್ನಡ ಹಾಸ್ಯ ಸಾಹಿತ್ಯದ ಬೆಳವಣಿಗೆಯನ್ನು ಚಿತ್ರಿಸುತ್ತಾ ಕನ್ನಡದ ಹಿರಿಯ ಹಾಸ್ಯ ಸಾಹಿತಿಗಳ ಕೃತಿಗಳ ಪರಿಚಯವನ್ನು ಮಾಡಿಕೊಡುವುದು ಮತ್ತು ಎರಡನೆಯ ಭಾಗದಲ್ಲಿ ಅಮೆರಿಕದ ಕನ್ನಡಿಗರ ಹಾಸ್ಯ ಲೇಖನಗಳನ್ನು ಪ್ರಕಟಿಸುವುದರ ಮೂಲಕ ಅವರ ಸೃಜನಶೀಲ ಸಾಹಿತ್ಯ ಸಾಧನೆಯನ್ನು ಉತ್ತೇಜಿಸುವುದು ಮತ್ತು ಪುಸ್ತಕದ ಲೇಖನಗಳನ್ನೆಲ್ಲ ಸಾಧ್ಯವಾದಷ್ಟು, ಇಲ್ಲಿನ ಕನ್ನಡಿಗರಿಂದಲೇ ಬರೆಸುವುದು ಎಂದೂ ನಿರ್ಧರಿಸಿದೆವು.

ಪುಸ್ತಕದ ಮೊದಲನೆಯ ಭಾಗವನ್ನು 'ನಗೆನಾಡ ಸಿರಿವಂತರು' ಎಂದು ಕರೆದಿದ್ದೇವೆ. ನಗೆಯೊಂದು ದೊಡ್ಡ ಸಿರಿ. ಅದನ್ನು ನಮ್ಮ ಜನಕ್ಕೆಲ್ಲ ಧಾರಾಳವಾಗಿ ಹಂಚಿದವರನ್ನು ಕೃತಜ್ಞತೆಯಿಂದ ಸ್ಮರಿಸುತ್ತದೆ ಈ ಶೀರ್ಷಿಕೆ.

ಈ ಭಾಗದಲ್ಲಿ, ಇಪ್ಪತ್ತನೆಯ ಶತಮಾನದಲ್ಲಿ ಕನ್ನಡದ ಹಾಸ್ಯ ಸಾಹಿತ್ಯ ಒಂದು ವಿಶಿಷ್ಟ ಪ್ರಕಾರವಾಗಿ ಹೇಗೆ ಬೆಳೆದು ಬಂದಿದೆ, ಅದರ ಬೆಳವಣಿಗೆಯನ್ನು ವೃದ್ಧಿಸಲು ಸಹಕಾರಿಯಾದ ಸಂಗತಿಗಳು ಯಾವುವು, ಕನ್ನಡ ಹಾಸ್ಯ ಸಾಹಿತ್ಯ ಎಲ್ಲೆಲ್ಲಿ ಹೇಗೆ ಕವಲೊಡೆಯಿತು–ಈ ವಿಷಯಗಳನ್ನು ಆ ಕಾಲದ ಹಿರಿಯ ಹಾಸ್ಯ ಸಾಹಿತಿಗಳ ಲೇಖನಗಳನ್ನು ಉದಾಹರಿಸುತ್ತ ಓದುಗರ ಮುಂದಿಡುವ ಪ್ರಯತ್ನ ನಡೆದಿದೆ. ಈ ಭಾಗದಲ್ಲಿನ ೨೮ ಲೇಖನಗಳಲ್ಲಿ ೨೫ ಈ ಕಾಲಮಾನಕ್ಕೆ ಸಂಬಂಧಿಸಿದವು. ಮೂರು ಲೇಖನಗಳು ಇದಕ್ಕೆ ಹೊರತಾದವು. ಈ ಮೂರರಲ್ಲಿ ಒಂದು ಮುಖ್ಯವಾಗಿ ಪುರಂದರದಾಸ ಸಾಹಿತ್ಯವನ್ನು ಕುರಿತದ್ದು. ಇನ್ನೆರಡು ನಮ್ಮ ಜನಪದ ಸಾಹಿತ್ಯವನ್ನು ಕುರಿತವು. ಎಲ್ಲರಿಗೂ ಗೊತ್ತಿರುವಂತೆ ಪುರಂದರದಾಸ ಸಾಹಿತ್ಯ ಹದಿನಾರನೆಯ ಶತಮಾನದ್ದು. ಜನಪದ ಸಾಹಿತ್ಯದ ರಚನೆ ಯಾವಾಗ, ಯಾರಿಂದ ಆಯಿತು ಎಂದು ಹೇಳುವುದು ಕಷ್ಟ. ಪ್ರಾಯಶಃ ಒಂದೆರಡು ಶತಮಾನಗಳ ಹಿಂದೆಯೇ ಆಗಿರಬಹುದು. ಆದರೂ ಈ ಲೇಖನಗಳನ್ನು ಈ ಭಾಗದಲ್ಲಿ ಸೇರಿಸಿಕೊಳ್ಳುವ ನಿರ್ಧಾರವನ್ನು ಮಾಡಿದ್ದಕ್ಕೆ ಕಾರಣ, ಪುರಂದರದಾಸರ ಹಾಡುಗಳು, ನಮ್ಮ ನಾಡಿನ ಜನಪದ ಗೀತೆಗಳು ಇಂದಿಗೂ

ಜೀವಂತವಾಗಿವೆ. ಅವುಗಳ ಭಾಷೆ ಸಾಕಷ್ಟು ಆಧುನಿಕವಾಗಿದೆ ಮತ್ತು ಅವು ಇಂದಿನ ನಮ್ಮ ಜನಜೀವನದ ಅವಿಭಾಜ್ಯ ಭಾಗವಾಗಿವೆ. ಇಲ್ಲಿ ಆಧುನಿಕ ಎಂಬುದನ್ನು ಒಂದು ನಿರ್ದಿಷ್ಟ ಕಾಲಮಾನಕ್ಕೆ (೨೦ನೆಯ ಶತಮಾನ) ಅನ್ವಯಿಸುವುದರ ಜೊತೆಗೆ, ಕೃತಿಗಳ ಪ್ರಸ್ತುತತೆ, ಪ್ರಚಲನೆಗಳಿಗೂ ವಿಸ್ತರಿಸಿದ್ದೇವೆ.

ಈ ಭಾಗದಲ್ಲಿರುವ ೨೮ ಲೇಖನಗಳಲ್ಲಿ ೨೨ ಲೇಖನಗಳನ್ನು ಅಮೆರಿಕದ ಕನ್ನಡಿಗರೇ ಬರೆದಿದ್ದಾರೆ. ಕಾರಣಾಂತರಗಳಿಂದ ಎಲ್ಲಿ ಲೇಖನಗಳನ್ನು ಇಲ್ಲಿನ ಕನ್ನಡಿಗರು ಬರೆಯಲು ಸಾಧ್ಯವಾಗಲಿಲ್ಲವೋ ಅಲ್ಲಿ ಕರ್ನಾಟಕದಲ್ಲಿನ ಲೇಖಕರ ಸಹಾಯವನ್ನು ಕೇಳಿ ಗಳಿಸಿಕೊಂಡಿದ್ದೇವೆ.

ಈ ಮೊದಲ ಭಾಗದ ಲೇಖನಗಳನ್ನು ಆಹ್ವಾನಿತ ಬರಹಗಾರರಿಂದ ಬರೆಸಿದೆವು. ಬರೆಯಬೇಕಾದ ವಿಷಯವನ್ನು ಸೂಚಿಸಿ, ಆ ವಿಷಯದ ಮೇಲೆ ಬರೆಯಬೇಕೆಂದು ಪ್ರಾರ್ಥಿಸಿದಾಗ, ಇಲ್ಲಿನ ಆಹ್ವಾನಿತರಿಂದ ಉತ್ತೇಜಿತ ಸಹಕಾರ ದೊರಕಿತು. ಆದರೆ ತದನಂತರದಲ್ಲೇ, ನಮ್ಮ ಮುಂದೆ ದೊಡ್ಡ ತೊಡಕೊಂದಿದೆಯೆಂದು ನಮಗೆ ಅರಿವಾಯಿತು. ಅದು ಅಮೆರಿಕದಲ್ಲಿ ನಮ್ಮ ಪ್ರಮುಖ ಹಾಸ್ಯ ಲೇಖಕರ, ಲೇಖನಗಳ, ಬಗ್ಗೆ ಆಕರ ಗ್ರಂಥಗಳ ಅಭಾವ. ಪ್ರಾಯಶಃ ಕೈಲಾಸಂ ಒಬ್ಬರನ್ನು ಬಿಟ್ಟು, ಮಿಕ್ಕೆಲ್ಲರ ವಿಷಯದಲ್ಲೂ ಈ ಅಭಾವ ಕಂಡುಬಂದಿತು. ಕೆಲವು ಪುಸ್ತಕಗಳನ್ನು ಬೆಂಗಳೂರಿಗೆ ಹೋಗಿದ್ದವರ ಮೂಲಕ ಇಲ್ಲಿಗೆ ರವಾನಿಸುವ ಪ್ರಯತ್ನ ಮಾಡಿದೆವು. ಅದೂ ಪೂರ್ಣವಾಗಿ ಫಲಪ್ರದವಾಗಲಿಲ್ಲ. ಕೆಲವು ಲೇಖಕರ ಕೃತಿಗಳು ಅಲ್ಲಿಯೂ ದುರ್ಲಭವಾಗಿದ್ದವು. ಇಲ್ಲಿನ ಲೇಖನಗಳಲ್ಲಿ ಒಂದು ಬಗೆಯ ಅಪೂರ್ಣತೆ ಕಂಡುಬಂದರೆ ಅದಕ್ಕೆ ಈ ಆಕರ ಗ್ರಂಥಗಳ ಅಭಾವ ಮುಖ್ಯ ಕಾರಣ ಎನ್ನಬಹುದು.

ಈ ಭಾಗದಲ್ಲಿರುವ ಲೇಖನಗಳು ಕನ್ನಡದ ಹೆಸರಾದ ಹಾಸ್ಯ ಸಾಹಿತಿಗಳ ಜೀವನ ಮತ್ತು ಸಾಧನೆಗಳ ಬಗ್ಗೆ ದೊರೆತ ಹಲವಾರು ಆಕರ ಗ್ರಂಥಗಳನ್ನು ಅವಲಂಬಿಸಿವೆಯಾದರೂ, ಇವು ನಿಜವಾಗಿ ಸಂಶೋಧನಾತ್ಮಕ ಲೇಖನಗಳಲ್ಲ. ಈ ಲೇಖನಗಳ ಧ್ಯೇಯ, ಕನ್ನಡಿಗರಿಗೆ, ಅದರಲ್ಲೂ ಹೊರನಾಡ ಕನ್ನಡಿಗರಿಗೆ ನಮ್ಮ ನಗೆ ಸಾಹಿತ್ಯದ, ನಗೆ ಸಾಹಿತಿಗಳ ಪರಿಚಯ ಮಾಡಿಕೊಡುವುದಷ್ಟೆ ಆಗಿದೆ.

ಈ ಭಾಗದಲ್ಲಿ ಇಪ್ಪತ್ತನೆಯ ಶತಮಾನದ ಮೊದಲಿಂದ ಇಂದಿನವರೆಗಿನ ಕನ್ನಡ ಹಾಸ್ಯ ಸಾಹಿತ್ಯದ ಬೆಳವಣಿಗೆಯನ್ನು ಚಿತ್ರಿಸುವ ನಮ್ಮ ಉದ್ದೇಶ ಸಂಪೂರ್ಣವಾಗಿ ಯಶಸ್ವಿಯಾಗಿದೆ ಎಂದು ಖಂಡಿತ ಹೇಳಿಕೊಳ್ಳಲಾರೆವು. ನಮ್ಮ ನಗೆ ಸಾಹಿತ್ಯದ ಬೆಳವಣಿಗೆಗೆ ಕಾರಣರಾದ ಪ್ರತಿಯೊಬ್ಬ ಲೇಖಕರ ಬಗ್ಗೆಯೂ ಇಲ್ಲಿ ಬರೆಯಲು ಸಾಧ್ಯವಾಗಿಲ್ಲ; ಅದರಲ್ಲೂ, ಉತ್ತರ ಕನ್ನಡ, ದಕ್ಷಿಣ ಕನ್ನಡದ ನಗೆ ಸಾಹಿತಿಗಳು

ಕನ್ನಡಕ್ಕೆ ಸಲ್ಲಿಸಿರುವ ಸೇವೆಯನ್ನು ಇಲ್ಲಿ ಸಾಕಷ್ಟು ಗಮನಿಸಲು ಸಾಧ್ಯವಾಗಿಲ್ಲ ಎಂಬ ಅರಿವು ನಮಗಿದೆ. ಆದರೂ ಇದುವರೆಗೆ ಇಲ್ಲದಿದ್ದ ಇಂಥ ಒಂದು ಗ್ರಂಥವನ್ನು ಕನ್ನಡಕ್ಕೆ ನೀಡಿದ್ದೇವೆ ಎಂಬ ಸಮಾಧಾನ ಸ್ವಲ್ಪವಾದರೂ ಇದೆ. ಒಟ್ಟಿನಲ್ಲಿ ನಮ್ಮ ಪ್ರಯತ್ನ ಎಷ್ಟರಮಟ್ಟಿಗೆ ಸಫಲವಾಗಿದೆ ಎಂಬುದನ್ನು ಓದುಗರೇ ನಿರ್ಧರಿಸಬೇಕು.

ಪುಸ್ತಕದ ಎರಡನೆಯ ಭಾಗವನ್ನು 'ಹೊರನಾಡ ನಗೆಹೊನಲು' ಎಂದು ಕರೆದಿದ್ದೇವೆ. ಇಲ್ಲಿ ಹಾಸ್ಯ ಪ್ರಬಂಧಗಳಿವೆ, ಅಣಕವಾಡುಗಳಿವೆ, ಚುಟಕಗಳಿವೆ, ಪ್ರಹಸನವಿದೆ ಮತ್ತು ಹಾಸ್ಯ ಕಥೆಗಳಿವೆ. ಈ ಎಲ್ಲದರ ಕರ್ತೃಗಳೂ ಹೊರನಾಡ-ಅಮೆರಿಕದಲ್ಲಿ ನೆಲಸಿರುವ-ಕನ್ನಡಿಗರು. ಅವರ ಮಾತೃಭಾಷಾಪ್ರೇಮದ, ಕನ್ನಡ ಸಾಹಿತ್ಯಪ್ರೇಮದ, ಅವರ ಹಾಸ್ಯಪ್ರಜ್ಞೆಯ ಒಂದು ಇಣುಕು ನೋಟ ಇಲ್ಲಿದೆ. ನಮ್ಮ ಕೋರಿಕೆಯನ್ನು ಮನ್ನಿಸಿ ನಮ್ಮ ನಿರೀಕ್ಷೆಗಿಂತಲೂ ಹೆಚ್ಚಿನ ಮಂದಿ ಲೇಖನಗಳನ್ನು ಕಳಿಸಿಕೊಟ್ಟಿದ್ದು ಒಂದು ಸಂತೋಷದ ಸಂಗತಿ.

ವ್ಯಂಗ್ಯಚಿತ್ರಗಳು ಹಾಸ್ಯ ಸಾಹಿತ್ಯದ ಅವಿಭಾಜ್ಯ ಭಾಗ. ಆದುದರಿಂದ, ಪುಸ್ತಕದಲ್ಲಿ ವ್ಯಂಗ್ಯಚಿತ್ರಗಳನ್ನೂ ಉಪಯೋಗಿಸುವ ನಿರ್ಧಾರವನ್ನು ಮಾಡಿದೆವು. 'ಕೊರವಂಜಿ ಮತ್ತು ರಾಶಿ' ಲೇಖನದ ಜೊತೆ ಅಂದಿನ ಕೊರವಂಜಿಯಲ್ಲಿ ಅಚ್ಚಾದ ಕೆಲವು ವ್ಯಂಗ್ಯಚಿತ್ರಗಳನ್ನೂ, 'ಹೊರನಾಡ ಬರಹಗಾರರು ಮತ್ತು ಹಾಸ್ಯ' ಎಂಬ ಲೇಖನದ ಜೊತೆಯಲ್ಲಿ ಮತ್ತು ಪುಸ್ತಕದ ಎರಡನೆಯ ಭಾಗದ ಕೆಲವು ಲೇಖನಗಳೊಡನೆ, ಇಲ್ಲಿನ ವ್ಯಂಗ್ಯಚಿತ್ರಕಾರರ ಕೆಲವು ಕೃತಿಗಳನ್ನು ಉಪಯೋಗಿಸಿಕೊಂಡಿದ್ದೇವೆ. ಈ ಕೆಲವು ವ್ಯಂಗ್ಯಚಿತ್ರಗಳನ್ನು ಬಿಟ್ಟರೆ, ಈ ಪುಸ್ತಕದಲ್ಲಿರುವ ಎಲ್ಲ ಲೇಖನಗಳೂ ಈ ಹಿಂದೆ ಅಪ್ರಕಟಿತ.

ಇಂಥ ಪುಸ್ತಕವೊಂದನ್ನು ಹೊರತರಬೇಕಾದರೆ ಹತ್ತಾರು ಜನರ ಸಲಹೆ, ಸಹಕಾರ, ಸೌಹಾರ್ದ ಅತ್ಯವಶ್ಯಕ. ಈ ಸಂದರ್ಭದಲ್ಲಿ ನಮಗೆ ನೆರವಾಗಿ ಬಂದವರು ಬಹಳ ಮಂದಿ. ಮೊದಲನೆಯದಾಗಿ, ಈ ನಮ್ಮ ಪರಿಶ್ರಮದಲ್ಲಿ ಸಮಭಾಗಿಗಳಾಗಿ ನಿಂತು ನಮ್ಮನ್ನು ಉತ್ತೇಜಿಸಿ, ನಮಗೆ ಬೇಕಾಗಿದ್ದ ಆಕರ ಗ್ರಂಥಗಳನ್ನು ಒದಗಿಸಿಕೊಟ್ಟು, ನಮಗಾಗಿ ಲೇಖನಗಳನ್ನು ಬರೆದುಕೊಟ್ಟ ಕರ್ನಾಟಕದ ಸಾಹಿತಿಗಳಾದ ಸರ್ವಶ್ರೀ ಶ್ರೀನಿವಾಸ ವೈದ್ಯ, ಬೇಲೂರು ರಾಮಮೂರ್ತಿ, ಮುಳುಕುಂಟೆ ರಮೇಶ್, ವೈ. ಎನ್. ಗುಂಡೂರಾವ್, ಎಸ್. ದಿವಾಕರ್ ಮತ್ತು ಶ್ರೀಮತಿ ಭುವನೇಶ್ವರಿ ಹೆಗಡೆ ಅವರಿಗೂ, ನಮ್ಮ ಕರೆಗೆ ಓಗೊಟ್ಟು, ಲೇಖನಗಳನ್ನೂ, ಕವನಗಳನ್ನೂ, ಚುಟಕಗಳನ್ನೂ ಮತ್ತು ವ್ಯಂಗ್ಯಚಿತ್ರಗಳನ್ನೂ ಬರೆದು ಕಳಿಸಿದ ಇಲ್ಲಿನ ಲೇಖಕರಿಗೂ, ಚಿತ್ರಕಾರರಿಗೂ ನಾವು ಆಭಾರಿಯಾಗಿದ್ದೇವೆ. ನಮ್ಮ ಈ ಪ್ರಯತ್ನವನ್ನು ಬಹಳ ಆದರದಿಂದ ಕಂಡು ಪುಸ್ತಕಕ್ಕೆ

ಮುನ್ನುಡಿ ಬರೆದು, ಹರಸಿರುವ ಶ್ರೀ ಚಿ. ಶ್ರೀನಿವಾಸರಾಜು ಅವರಿಗೂ, ಬೆನ್ನುಡಿ ಬರೆದು ಬೆನ್ನು ತಟ್ಟಿದ ಶ್ರೀ ಎಚ್. ಎಸ್. ರಾಘವೇಂದ್ರ ರಾವ್ ಅವರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಪುಸ್ತಕಕ್ಕೆ ಅಂದವಾದ ಹೊರಕವಚವನ್ನು ರಚಿಸಿದ ಇಲ್ಲಿನ ಕನ್ನಡ ಕಲಾವಿದ ಶ್ರೀ ಜನಾರ್ಧನ ಸ್ವಾಮಿಯವರಿಗೆ ನಮ್ಮ ವಂದನೆಗಳು. ನಮ್ಮ ಕೋರಿಕೆಯನ್ನು ಮನ್ನಿಸಿ, ಕೊರವಂಜಿಯಲ್ಲಿ ಪ್ರಕಟವಾಗಿದ್ದ ಕೆಲವು ವ್ಯಂಗ್ಯಚಿತ್ರಗಳನ್ನು ನಮಗೆ ಬಳಸಿಕೊಳ್ಳಲು ಒದಗಿಸಿದ ಶ್ರೀ ಎಂ. ಶಿವಕುಮಾರ್ ಅವರಿಗೂ ಮತ್ತು ಕೊರವಂಜಿ ಅಪರಂಜಿ ಟ್ರಸ್ಟ್‌ಗೂ ನಮ್ಮ ಹಾರ್ದಿಕ ಧನ್ಯವಾದಗಳು. ಈ ಯೋಜನೆಯ ವಿಷಯದಲ್ಲಿ ಮೊದಲಿಂದಲೂ ಆಸಕ್ತಿ ತೋರಿ ನಮಗೆ ಜೊತೆಯಾಗಿ ಈ ಪುಸ್ತಕದ ಪ್ರಕಟಣೆಯ ಭಾರವನ್ನು ಹೊತ್ತಿರುವ 'ಅಭಿನವ' ಪ್ರಕಾಶನದ ಗೆಳೆಯರಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

ವೈಯಕ್ತಿಕವಾಗಿ ಇನ್ನೊಂದು ಮಾತು ಹೇಳಿದರೆ ಮನ್ನಿಸಬೇಕು. ಸಹಸಂಪಾದಕರಾದ ನಾವಿಬ್ಬರೂ ೧೯೫೦ರಲ್ಲಿ ಮೈಸೂರಿನ ಶಾರದಾ ವಿಲಾಸ ಹೈಸ್ಕೂಲು ಸೇರಿದಂದಿನಿಂದ ಗೆಳೆಯರು. ಕೊರವಂಜಿ, ಕೈಲಾಸಂ, ಕಸ್ತೂರಿಯರನ್ನು ಓದುತ್ತಾ ಬೆಳೆದವರು. ನಮ್ಮ ಕಾರ್ಯಕ್ಷೇತ್ರಗಳು ಬೇರೆಯಾಗಿದ್ದರೂ ಒಟ್ಟಿಗೆ ನಗುತ್ತಾ ನಡೆದವರು. ನಮಗೆ ಈಗ ಈ ಹಾಸ್ಯಗ್ರಂಥವನ್ನು ಸಂಪಾದಿಸುವ ಅವಕಾಶ ಸಿಕ್ಕಿದ್ದು ದೊಡ್ಡ ಸಂತಸವಾಗಿದೆ. ಅದಕ್ಕಾಗಿ ನಾವು ಕೃತಜ್ಞರು. ನಮಗೆ ಎಲ್ಲ ವಿಧದಲ್ಲೂ ಸಹಕಾರವಿತ್ತು ಈ ಕೆಲಸವನ್ನು ಸಾಧ್ಯವಾಗಿಸಿದ ನಮ್ಮ ಸಂಪಾದಕ ವರ್ಗದ ಎಲ್ಲ ಸದಸ್ಯರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

**ಎಚ್. ಕೆ. ನಂಜುಂಡಸ್ವಾಮಿ**

**ಎಚ್. ವೈ. ರಾಜಗೋಪಾಲ್**

## ಮುನ್ನುಡಿ ಮುನ್ನುಡಿ . . . . ಮತ್ತು ಮುನ್ನುಡಿ

**ಪ್ರೀತಿಯ ಗೆಳೆಯ,**

ನೀನೇ ನನ್ನನ್ನು ಕಾಪಾಡಬೇಕು. ನಾನು ಕಷ್ಟದಲ್ಲಿ ಸಿಕ್ಕಿಕೊಂಡಿದ್ದೇನೆ. ನನ್ನ ಪ್ರಾರ್ಥನೆಗಳೆಲ್ಲಾ ಪ್ರಯೋಜನಕ್ಕೆ ಬರುತ್ತಿಲ್ಲ. ನನಗೆ ದಿಕ್ಕೇ ತೋಚದಾಗಿದೆ. ತಲೆಮರೆಸಿಕೊಳ್ಳಬೇಕಾದ ಪರಿಸ್ಥಿತಿ. ಕಂಡ ಕಂಡ ದೇವತೆಗಳಿಗೆ ಕೈಮುಗಿದೆ. ಕಾಣದ ಕೇಳದ ದೇವತೆಗಳಿಗೂ ಅಡ್ಡಬಿದ್ದೆ. ನನ್ನ ಕಷ್ಟ ಪರಿಹಾರವಾಗಲಿಲ್ಲ. ರಾಜಕಾರಣಿಗಳಂತೆ ಯಜ್ಞಯಾಗಾದಿಗಳನ್ನು ಮಾಡಿಸೋಣವೆಂದರೆ, ಅಷ್ಟೊಂದು ಗುಪ್ತ ಹಣ ನನ್ನ ಬಳಿ ಇಲ್ಲ. ಇನ್ನು ಎನ್. ಜಿ. ಓ. ಗಳಂತೆ ವಿದೇಶಿ ಹಣವೂ ನನಗೆ ಹರಿದು ಬರುವುದಿಲ್ಲ. ನನ್ನ ಬ್ಯಾಂಕ್ ಬ್ಯಾಲೆನ್ಸ್ ವಿಷಯ ನಿನಗೆ ತಿಳಿದೇ ಇದೆ. ಏನು ಮಾಡಬೇಕೆಂಬುದೇ ಗೊತ್ತಾಗುತ್ತಿಲ್ಲ.

ನಾನೊಂದು 'ಮುನ್ನುಡಿ'ಯನ್ನು ಬರೆಯಲೇಬೇಕಾದ ಗಂಡಾಂತರದಲ್ಲಿ ಸಿಕ್ಕಿಕೊಂಡಿದ್ದೇನೆ. ಯಾವುದೋ ಕೆಟ್ಟ ಗಳಿಗೆಯಲ್ಲಿ 'ಹೂ' ಎಂದುಬಿಟ್ಟೆ. ಈಗ ಒದ್ದಾಡುತ್ತಿದ್ದೇನೆ. ನನಗೆ ಈ ಕಷ್ಟ ವಕ್ಕರಿಸಿದ್ದು ಸ್ವದೇಶದಿಂದಲ್ಲ, ಪಾತಾಳದಿಂದ. ಈ 'ಮುನ್ನುಡಿ' ಭೂತ ಸಮುದ್ರ ಲಂಘನ ಮಾಡಿದೆ. ಎಡಬಿಡದೆ ಕಾಡುತ್ತಿದೆ. ಈ ಸ್ವಯಂ ಅಪರಾಧದಿಂದ ಪಾರಾಗುವುದು ಹೇಗೆ ಎಂದು ಅರ್ಥವಾಗುತ್ತಿಲ್ಲ. ಈ 'ಮುನ್ನುಡಿ' ತುರಿಕೆ ಸುಮ್ಮನೆ ಕೂಡಲೂ ಬಿಡುತ್ತಿಲ್ಲ. ಒಂದು ಪುಸ್ತಕಕ್ಕೆ ಒಂದು ಮುನ್ನುಡಿ ಇರಲೇಬೇಕೆಂದು ನಿಯಮವೇನೂ ಇಲ್ಲ. ಈ ಕೆಟ್ಟ ಸಂಪ್ರದಾಯವನ್ನು ಯಾರು ಮೊದಲು ಮಾಡಿದರೋ ಗೊತ್ತಿಲ್ಲ. ಅಂತವರ ವಂಶ ನಿರ್ವಂಶವಾಗಲಿ, ಅವರ ಪೀಳಿಗೆ ಏಳಿಗೆಯಾಗದಿರಲಿ.

ಈ ಅಮೆರಿಕಾದವರು ಜಗತ್ತಿಗೆ ಕೊಡುವ ಕಷ್ಟಗಳು ಒಂದೇ ಎರಡೇ. ಅವರಿವರ

ಅಂಗಳದಲ್ಲಿ ಕೀಟಲೆಮಾಡಿ, ಕಾಟಕೊಟ್ಟು ತಮಾಷೆ ನೋಡ್ತೋ ಮಂದಿ. ಇದರಿಂದಲೇ ದೊಡ್ಡೋರಾಗಿ, ಹೊಟ್ಟೆತುಂಬಿಸಿಕೊಳ್ಳೋ ಜನ. ಈ ವಿಚಾರ ನನಗಿಂತಲೂ ನಿನಗೆ ಚೆನ್ನಾಗಿ ಗೊತ್ತು. ನನಗೀಗ ಈ ದಿಕ್ಕಿನಿಂದಲೇ ಕಷ್ಟ ಬಂದಿರೋದು. ಇಲ್ಲಿಂದ ಅಲ್ಲಿಗೆ ಹೋದ ಒಳ್ಳೆಯವರು, ಏಕೆ ಕೆಟ್ಟವರಾಗಿಬಿಡುತ್ತಾರೊ ಗೊತ್ತಿಲ್ಲ. ತಮ್ಮ ಬೇಳೆ ಬೇಯಿಸಿಕೊಳ್ಳಲು ಬೇರೆಯವರಿಗೆ ತೊಂದರೆ ಕೊಡುವುದು ಸರಿಯೆ? ಹೊಟ್ಟೆಪಾಡಿಗೋಸ್ಕರ ದೇಶಾಂತರ ಹೋಗಿದ್ದಾರೆ, ಹೋಗಲಿ. ಅದು ಅವರವರ ಹಣೇಬರಹ! ಆದರೆ ಇಲ್ಲಿ ಸುಮ್ಮನೆ ಇದ್ದವರನ್ನು ಅದು ಬರಿ, ಇದು ಬರಿ ಎಂದು ಗೋಳು ಹುಯ್ದುಕೊಳ್ಳುವುದು ಸರಿಯಲ್ಲ. ಅವರ ಡಾಲರ್ ಹಣದಲ್ಲಿ ಬರ್ಗರ್, ಫೀಜಾ ತಿಂದು ತೇಗಿ ಸುಖವಾಗಿರಲಿ. ನಮ್ಮ ಪುಡಿ ಪೈಸೆಯಲ್ಲಿ ಹಿಟ್ಟು ಸೊಪ್ಪು ತಿಂದುಕೊಂಡು ನಾವಿರುತ್ತೇವೆ. ಇವರಿಗೇಕೆ ನಮ್ಮ ಉಸಾಬರಿ. ನಿನಗೇ ಗುತ್ತು ನಾನು ಮಾತಾಡೋ ಬರೆಯೋ ಆಸಾಮಿನೇ ಅಲ್ಲ. ಇನ್ನು 'ಮುನ್ನುಡಿ' ಹೇಗೆ ಬರೆಯಲಿ? ಹೀಗೆ ಹಿಡಿದು ನನಗೆ 'ಮುನ್ನುಡಿ' ಬರೆ ಹಾಕೋದು ಸರಿಯಾ?

ಕನ್ನಡ ನಾಡಿನಿಂದ ಗುಳೇಹೋದ ಈ ಮಹಾನುಭಾವರು, ಕನ್ನಡವನ್ನು ಮರೆಯದೆ ಇರೋದೆ ನನ್ನ ಪಾಲಿಗೆ ದೊಡ್ಡ ಶಾಪವಾಗಿದೆ. ಇದು ಎಲ್ಲಿ ಬಿಡುಗಡೆಯಾಗುವುದೋ? ಹೇಗೆ ಬಿಡುಗಡೆಯಾಗುವುದೊ? ಯಾರಿಂದ ಬಿಡುಗಡೆಯಾಗುವುದೊ? ಗೊತ್ತಿಲ್ಲ. ಶಾಪ ವಿಮೋಚನೆಗಾಗಿ ಎದುರು ನೋಡುತ್ತಿದ್ದೇನೆ. ಅಲ್ಲಿಗೆ ಹೋಗಿ, ಚೆನ್ನಾಗಿ ಡಾಲರ್ ಗಳಿಸಿ ತೆಪ್ಪಗೆ ಇರಿ ಅಂದ್ರೆ, ನಾವು ಕನ್ನಡವನ್ನು ಬಿಡೊಲ್ಲ ಅಂತಾರೆ. ಇಲ್ಲಿರೊ ನನ್ನಂತ ವಯಸ್ಸಾದವರ ನೆಮ್ಮದಿ ಹಾಳು ಮಾಡ್ತಾರೆ. ಕನ್ನಡ ನಾಡಿನಲ್ಲೇ ಕನ್ನಡ ಕಣ್ಮರೆಯಾಗುತ್ತಿರುವಾಗ, ಅಮೆರಿಕಾದಲ್ಲಿ ಅದನ್ನು ಉಳಿಸಲೇಬೇಕು ಎಂಬ ಹಠ ಏಕೆ? ಈ ಟೆನ್‌ಷನ್‌ನಿಂದ ನನ್ನ ಬ್ಲಡ್ ಷುಗರ್ ಷೂಟಪ್ ಆಗಿದೆ.

ಗೆಳೆಯ, ಅಮೆರಿಕಾಕ್ಕೆ ಹೋದ ಬಹುಪಾಲು ಮಂದಿ ಹಿಂದಕ್ಕೆ ಬರೋದು ಅಪರೂಪ. ಹಕ್ಕಿಗಳಿಗೇ ಗಡಿಗಳು ಇಲ್ಲವೆಂದ ಮೇಲೆ, ಇನ್ನು ಮನುಷ್ಯರಿಗೆ ಏಕೆ? ಇದು ನನ್ನ ಸಮಸ್ಯೆಯಲ್ಲ. ಇಲ್ಲಿಂದ ಅಲ್ಲಿಗೆ ಹೋಗ್ತಾರೆ ಸಂಬಂಧಗಳನ್ನೆಲ್ಲಾ ಡಾಲರ್ ಇಸ್ತ್ರಿಮಾಡಿ ಮರೆತುಬಿಡ್ತಾರೆ. ಈ ಜನ ಸಂಬಂಧಗಳು ಇರ್ಲಿ, ಭಾಷೇನೂ ಮರೆತಿಲ್ಲವಲ್ಲ! ಪುಳಿಯೋಗರೆ, ಪುಳ್ಳಂಗಾಯ್ ಉಂಡೆ, ಚಕ್ಕಲಿ, ಕೋಡುಬಳೆ, ಕಬಾಬ್, ಬಿರಿಯಾನಿ, ಆಂಬೊಡೆ, ಪಾಯಸಕ್ಕೆ ಆಗಾಗ ಇಲ್ಲಿಗೂ ಬರ್ತಾರೆ. ಸಿರಾ, ಜೋಳದ ರೊಟ್ಟಿ, ಒಬ್ಬಟ್ಟಿನ ಜನವೂ ಬರ್ತಾರೆ. ಎಂ.ಟಿ.ಆರ್‌ನ ರೆಡಿ-ಟು-ಈಟ್‌ಗಳು ಹೆಚ್ಚಾಗಿ, ಈಗೀಗ ಅಮೆರಿಕಾವನ್ನೇ ಕರ್ನಾಟಕ ಮಾಡಿಕೊಂಡುಬಿಟ್ಟಿದ್ದಾರೆ. ನೀವು ಎಲ್ಲಾದರೂ ಇರಿ, ಹೇಗಾದರೂ ಇರಿ, ಅಲ್ಲೇ ತೆಪ್ಪಗೆ ಇರಿ ಅಂದ್ರೆ ಕೇಳೋ ಮಂದಿನೇ ಅಲ್ಲ.

ನಾನು 'ಮುನ್ನುಡಿ' ಬರೆಯಬೇಕಾಗಿರೊ ಪುಸ್ತಕದ ಹೆಸರು ಹೇಳಿದ್ರೆ ನೀನು ಥಂಗ್ ಬಡಿದೋಕ್ತಿಯ. ಆಶ್ಚರ್ಯದ ಜೊತೆಗೆ ಆಘಾತವೂ ಆಗಬಹುದು. ಆಗ ನಿನಗೆ ಅರ್ಥವಾಗುತ್ತೆ ನಾನು ಎಂತಹ ಸಂಕಷ್ಟದಲ್ಲಿ ಸಿಕ್ಕಿಕೊಂಡಿದ್ದೇನೆ ಅಂಬೋದು. ನಿನಗೆ ಚೆನ್ನಾಗಿ ಗೊತ್ತು. ನಾನು ಅವರಿವರ ಪುಸ್ತಕ ಓದಿ ವಿಮರ್ಶೆ ಬರಿಯೋ ಜಾತಿ ಅಲ್ಲ. ಅತಿಯಾಗಿ ಮಾತಾಡೋ ಪ್ರಾಣೀನೂ ಅಲ್ಲ. ಇಂದಿಗೂ ನಮ್ಮ ಪವಿತ್ರ ಭಾರತದ ಮುನ್ನಡೆ ಎಂದರೆ, ಜಾತಿ ಹುಲಿ ಸವಾರಿನೇ ಆಗಿದೆ. ಜಾತಿಯಿಂದಲೇ ದೊಡ್ಡೋರು-ಚಿಕ್ಕೋರು ಆಗ್ತಾ ಇರೋದು; ಜಾತಿಯಿಂದಲೇ ಇಹ-ಪರಗಳ ತಕ್ಕಡಿ ತೂಗೋದು; ಜಾತಿಯಿಂದಲೇ ಹಣ-ಅಧಿಕಾರ ಬರೋದು ಅನ್ನೋ ವಿಷಯ ನಿನಗೆ ಗೊತ್ತೇ ಇದೆ. ನಾನು ಯಾವ ಜಾತಿಗೂ ಸೇರಿದೋನು ಅಲ್ಲ ಅನ್ನೋದು ನಿನಗೆ ಗೊತ್ತಿದೆ. ಈಗ ನನ್ನನ್ನು ವಿಮರ್ಶಕರ ಜಾತಿಗೆ ಸೇರಿಸೋದು ನ್ಯಾಯವೆ? ಗಾಬರಿಯಲ್ಲಿ ಪುಸ್ತಕದ ಹೆಸರು ಹೇಳೋದೆ ಮರೆತೆ. ಅದರ ಹೆಸರು 'ನಗೆಗನ್ನಡಂ ಗೆಲ್ಗೆ!' ಎಂದು. ಡಿ.ಟಿ.ಪಿ ಮಾಡಿದ ದೊಡ್ಡ ಪುಸ್ತಕ ಟೇಬಲ್ ಮೇಲೆ ಕೂತು ನನ್ನನ್ನೇ ದುರುಗುಟ್ಟಿಕೊಂಡು ನೋಡುತ್ತಿದೆ. ಹೆದರಿಕೆಯಾಗುತ್ತಿದೆ. ಹಾಗೂ ಹೀಗೂ ಮುನ್ನುಡಿ ಬರೆಯೋದನ್ನ ಒಂದಷ್ಟು ಕಾಲ ಮುಂದಕ್ಕೆ ಹಾಕಿದೆ. ಆದರೆ ಕೊನೆ ಗಳಿಗೆ ಬಂದೇಬಿಟ್ಟಿದೆ. ಆ ಪುಸ್ತಕದ ಹಾಸ್ಯ ಬರವಣಿಗೆಗೂ ನನಗೂ ಏನು ಸಂಬಂಧ? ನಾನು ಹಾಸ್ಯ ಸಾಹಿತಿಯೂ ಅಲ್ಲ, ಹಾಸ್ಯಾಸ್ಪದ ಸಾಹಿತಿಯೂ ಅಲ್ಲ. ಈ ವಿಷಯ ನನಗೂ ಗೊತ್ತಿದೆ. ನನ್ನನ್ನು ಕಂಡವರಿಗೆಲ್ಲ ಗೊತ್ತಿದೆ. ನಿನಗಂತೂ ಸ್ಪಷ್ಟವಾಗಿ ಗೊತ್ತಿದೆ. ಇದು ಯಾರೊ ಬೇಕಂತಲೆ ಮಾಡಿರೊ ತರಲೆ ಕೆಲಸ. ಅಮೆರಿಕ ತೆರೆದ ಸಮಾಜವಾದರೂ ಬೇಹುಗಾರಿಕೆ ಬಲವಾಗಿಯೇ ಇದೆ. ನಮ್ಮ ಜಾತಕ ಅವರಿಗೆ ಗೊತ್ತಿರುತ್ತೆ. ಇವರ ಸಿ.ಐ.ಎ ಏಜೆಂಟ್ ಆ 'ಅಭಿನವ' ಆಗಾಗ ಬಂದು, ವಿನಯದಿಂದ ಮೈಕೈ ಹೊಸೆಯುತ್ತಾ ಕಾಲೆಳೆಯುತ್ತಾನೆ. ನಮ್ಮ ದೇಶವನ್ನೆಲ್ಲ ಸಿ.ಐ.ಎ ಅವರು ಆಕ್ರಮಿಸಿಕೊಂಡಿದ್ದಾರೆ ಅಂದ್ರೆ ಹೆದರಿಕೆಯಾಗುತ್ತೆ. ನಮಗೆ ಗೊತ್ತಿಲ್ಲದೆ ನಡೆಮುಡಿ ಹಾಸ್ತಾ ಇದ್ದೇವೆ. ಬದಲಾಗ್ತಾ ಇದ್ದೇವೆ. ಒಂದು ದಿನ ನಮ್ಮದೆಲ್ಲಾ ಕಳೆದುಕೊಳ್ತೀವಿ, ಅವರದನ್ನ ನಮ್ಮದು ಅಂತ ಕೊಂಡಾಡ್‌ತೀವಿ. ನಮ್ಮ ಅಸ್ಮಿತೆ ಇಕ್ಕಟ್ಟು ಬಿಕ್ಕಟ್ಟುಗಳಲ್ಲಿ ಸಿಕ್ಕಿಕೊಂಡಿಲ್ಲವೆ? ಇಲ್ಲಿ ರೈತರು ಆತ್ಮಹತ್ಯೆ ಮಾಡಿಕೊಳ್ಳೋಕೆ; ಚಿಲ್ಲರೆ ಅಂಗಡಿಗಳು ಮುಚ್ಚೋಕೆ; ಕಲಿತ ಭಾಷೆ ಮರೆಯೋಕೆ; ಯಾರು ಕಾರಣ ಅಂತ ಚಿಂತಿಸಿದರೆ ಹೆದರಿಕೆ ಆಗುತ್ತೆ. ಈ ಪ್ರತಿಸೃಷ್ಟಿ ನಮ್ಮ ದುಡ್ಡಿಗೆ, ನಮ್ಮ ಬ್ಲಡ್ಡಿಗೆ ನಿಧಾನವಾಗಿ ಅಡ್ಜೆಸ್ಟ್ ಆಗ್ತಾ ಇದೆ. ಇದಂತೂ ಬೆಚ್ಚಿ ಬೀಳಿಸೊ ವಿಚಾರ. ಗೆಳೆಯ, ನಮ್ಮ ಮನೆ ಬೀದಿ ಮೂಲೆಯಲ್ಲಿ ಫ್ರೆಶ್ ಆದ ಒಂದು ಎಳನೀರು ಅಂಗಡಿ ಇದೆ. ನನ್ನ ಮೊಮ್ಮಗಳಿಗೆ ಕೊಡಿಸೋಣ ಅಂತ ಕರೆದುಕೊಂಡು ಹೋದೆ. ನಾಲ್ಕು ವರ್ಷದ ಪೋರಿ ಬೇಡವೇ ಬೇಡ ಎಂದಳು. ಹೋದ ತಪ್ಪಿಗೆ ನಾನೇ ಕುಡಿದೆ. ಆಮೇಲೆ

ಅವಳು ಮೆಲ್ಲಗೆ ಪಕ್ಕದ ಅಂಗಡಿ ಕಡೆಗೆ ಕೈ ತೋರಿಸಿದಳು. 'ಮಿರಾಂಡ', 'ಮಿಲ್ಕಿಬಾರ್' ಬೇಕೆಂದು ಧರಣಿ ಮಾಡಿದಳು. ಏನು ಹೇಳಬೇಕೋ ಗೊತ್ತಾಗಲಿಲ್ಲ. ಮುಂದೆ ಮಾತಾಡದೆ, ಅವನ್ನ ಕೊಡಿಸಿ ಮನೆಗೆ ಕರೆದುಕೊಂಡು ಬಂದೆ.

ನನ್ನ ಮಾತು ನಮ್ಮ ಜನದಂಗೇ ದಾರಿತಪ್ತಾ ಇದೆ. ಮರಣ ಶಿಕ್ಷೆಗೆ ಗುರಿಯಾದ ಖೈದಿ, ನೇಣುಗಂಬದ ಕಡೆಗೆ ನಡೆಯುವಂತೆ, 'ಮುನ್ನುಡಿ' ವಿಮೋಚನೆಗಾಗಿ ಭಾರದ ಹೆಜ್ಜೆಗಳನ್ನು ಹಾಕುತ್ತಿದ್ದೇನೆ. ಇಂತಹ ಕಠಿಣ ಸಮಯದಲ್ಲಿ ಚಿತ್ತ ಚಂಚಲವಾಗುವುದು ಸಹಜ. ಅಲ್ಲವೆ?

ಕನ್ನಡಗರಲ್ಲಿ ಹಾಸ್ಯಪ್ರಜ್ಞೆಯ ಕೊರತೆ ಇದೆ ಎಂಬ ಮಾತನ್ನು ಲಾಗಾಯ್ತಿನಿಂದ ಹೇಳ್ತಾ ಬಂದಿದ್ದಾರೆ. ಇದೆಯೊ? ಇಲ್ಲವೊ? ಅದಕ್ಕೊಂದು ಸಂಶೋಧನೆಯನ್ನೇ ಎಂ.ಎಸ್. ಸುಂಕಾಪುರ ಅವರು ಮಾಡಿಬಿಟ್ಟಿದ್ದಾರೆ. ಈ ಅಮೆರಿಗನ್ನಡಿಗರು ಹುಚ್ಚೆದ್ದು ಕನ್ನಡದಲ್ಲೂ ಹಾಸ್ಯವಿದೆ, ನಮ್ಮಲ್ಲೂ ಹಾಸ್ಯವಿದೆ ಎಂಬೋದನ್ನು ಸಾಬೀತುಮಾಡಲು ಈ 'ನಗೆಗನ್ನಡಂ ಗೆಲ್ಗೆ!' ಹೆಬ್ಬೊತ್ತಿಗೆಯನ್ನು ಸಿದ್ಧಮಾಡಿದ್ದಾರೆ. ನನಗೆ ತಲೆನೋವು ತಂದಿದ್ದಾರೆ. 'ನಗೆಗನ್ನಡಂ' ಬಗ್ಗೆ ನನಗೆ ಸರಿಯಾಗಿ ಗೊತ್ತಿಲ್ಲ. ಆದರೆ 'ಗೆಲ್ಗೆ!' ಶಬ್ದ ಮಾತ್ರ ನನಗೆ 'ಗಲ್ಗೆ' ರೀತಿಯಲ್ಲಿ ಕಾಣಿಸ್ತಾ ಇದೆ. ಆ ದಿವ್ಯ ದರ್ಶನಕ್ಕೆ ಎದುರು ನೋಡುತ್ತಿದ್ದೇನೆ. ಈ 'ಮುನ್ನುಡಿ'ಯ ಕಿತಾಪತಿಯ ಹಿಂದೆ, ಅಲ್ಲಿಗೂ ಇಲ್ಲಿಗೂ ಲಾಳಿ ಹೊಡೆಯುವ ಇಬ್ಬರು ವಯಸ್ಸಾದವರ ಕೈವಾಡವಿದೆ ಎಂಬ ಬಲವಾದ ಗುಮಾನಿ, ನನಗೆ ಮೊದಲಿನಿಂದಲೂ ಇದೆ. ಹಾಸ್ಯ ಪ್ರವಚನಗಳನ್ನೇ ಮಾಡಿಕೊಂಡು ಖಂಡಾಂತರಗಳಲ್ಲಿ ಅಲಿಯುವುದೇ ಇವರ ಈಗಿನ ವೃತ್ತಿ. ಕುಳ್ಳಗಿದ್ದಾರೆ, ಕೂದಲೂ ಕಡಿಮೆ. ಅದಕ್ಕೆ ಬಣ್ಣವೂ ಹಚ್ಚಿಲ್ಲ. ಕನ್ನಡಕ ಬೇರೆ ಹಾಕ್ತಾರೆ. ಹಳೇ ಮೈಸೂರು ಕಡೆಂಗೋರು. ಕನ್ನಡದಿಂದಲೇ ಪಿಂಚಣಿ ಪಡೆಯೋರು. ಗೊತ್ತಾಯಿತಲ್ಲ. ನಾನು ಇವರಿಬ್ಬರಿಗೂ ಏನೇನೂ ಮಾಡಿಲ್ಲ. ಆದರೂ ನನಗೆ ಏಕೆ ಹೀಗೆ ಕಾಟ ಕೊಡುತ್ತಿದ್ದಾರೋ ಗೊತ್ತಿಲ್ಲ. 'ಮುನ್ನುಡಿ' ಬರೆಯೋ ಶಿಕ್ಷೆ, ಮೀಟರ್ ಬಡ್ಡಿ ತರಹ ಏರ್ತಾಯಿದೆ. ಎಚ್.ಐ.ವಿ ಪಾಜಿಟೀವ್ ನಮ್ಮ ದೇಶದಲ್ಲಿ ದಿಕ್ಕುದೆಸೆ ಇಲ್ಲದೆ ಹಬ್ಬುತಾಯಿದೆ. ಆ ದೂರದ ಅಮೆರಿಕಾದಲ್ಲಿ. ಇವರಿಬ್ಬರು ಹಾಸ್ಯದ ಭಯಂಕರ ಸೋಂಕನ್ನು ಹರಡುತ್ತಿದ್ದಾರೆ. ದೊಡ್ಡ ಭಯೋತ್ಪಾದಕರಾಗಿದ್ದಾರೆ. ಇವರು ಅಮೆರಿಕಾದಲ್ಲೆ ಠಿಕಾಣಿ ಹಾಕಿದರೆ, ಇನ್ನೂ ದೊಡ್ಡ ಭಯೋತ್ಪಾದಕರಾಗುವುದರಲ್ಲಿ ಸಂದೇಹವಿಲ್ಲ. ಅವರು ಅಲ್ಲಿ ಏನೇ ಮಾಡಿಕೊಂಡು ಹೋಗಲಿ. ನನ್ನನ್ನು ಏಕೆ ಕಾಡಬೇಕು? ಇದರಿಂದ ಮುಕ್ತನಾಗಬೇಕಾದರೆ, ಒಂದು ಫಾಲ್ಸ್ ಎನ್‌ಕೌಂಟರ್ ನಡೀಲೇ ಬೇಕು. ಇದನ್ನೇ ಅಮೆರಿಕಾ ಕೈವಾಡ ಅನ್ನೋದು. ನಮಗೆ ಅವರ ರಿಮೋಟ್ ಕಾಣಿಸೋದೇ ಇಲ್ಲ.

ಗೆಳೆಯ, ಈ 'ನಗೆಗನ್ನಡಂ ಗೆಲ್ಗೆ!'ಯನ್ನು ಎರಡು ಭಾಗ ಮಾಡಿದ್ದಾರೆ. ಹಿಂದಿನ ಕನ್ನಡದ ಹಾಸ್ಯ ಸಾಹಿತಿಗಳನ್ನೆಲ್ಲಾ ಜಾಲಾಡಿ, ಅವರಲ್ಲಿರೋ ಹಾಸ್ಯಪ್ರಜ್ಞೆಯ ಬಗ್ಗೆ ಮಾರುದ್ದ ಮಾರುದ್ದ ಲೇಖನಗಳನ್ನು ಬರೆದಿದ್ದಾರೆ. ಇಂತಹ ಕೆಲಸ ಇಲ್ಲೂ ಆಗಿಲ್ಲವೆಂದು ನನ್ನ ತಿಳುವಳಿಕೆ. ಕನ್ನಡದ ತುರುಕೆಯೇ ಈ ಕೆಲಸವನ್ನು ಮಾಡಿಸಿರಬೇಕು. ಇನ್ನೊಂದು ಭಾಗದ ಪುಟಪುಟದಲ್ಲೂ ತಾವೇ ಹಲ್ಲುಕಿರೀತ ದರ್ಶನ ಕೊಟ್ಟಿದ್ದಾರೆ. ಅಲ್ಲಿ ಪ್ರಬಂಧ ಏನು? ಪದ್ಯ ಏನು? ಚುಟುಕ ಏನು? ಲಿಮಿರಿಕ್ ಏನು? ಮಧ್ಯೆ ಮಧ್ಯೆ ಕುಟುಕೋದೇನು? ಹಾಸ್ಯವಾಹಿನಿಯ ಪ್ರಚಂಡ ಟಾರ್ನೆಡೊ ಬಂದು ಎಲ್ಲವನ್ನು ಅಲ್ಲೋಲ ಕಲ್ಲೋಲ ಮಾಡಿಬಿಟ್ಟಿದೆ. ಇಬ್ಬಂದಿ ಸಂಸ್ಕೃತಿಯ ಅವಸ್ಥೆಗಳನ್ನು ದಾಖಲಿಸಿದ್ದಾರೆ. ಒಂದು ಸ್ಯಾಂಪಲ್ ನೋಡು–

ಮಗಳ ಪಕ್ಕ ನಿಂತ ಬಿಳಿಹುಡುಗ
'ಅತ್ತೇ' ಎಂದಾಗ
ನಾ ಅಳದೇ ಅವನ ತಬ್ಬಿ
ವಿಶ್ವಕುಟುಂಬಿ ಎನಿಸಿದೆ.

ಪರವಾಗಿಲ್ಲ ಅಲ್ಲವೆ? ಇಂತಹ ಕಿಡಿಗಳು ಅದರ ತುಂಬಾ ಇದೆ. ಆದರೆ ಏಕೊ ಏನೋ ನಮ್ಮ ಮೂರ್ತಿರಾಯರು, ಕುವೆಂಪು, ರಾ.ಕು, ವಿ.ಸೀ., ಪು.ತಿ.ನ., ತೀ.ನಂ.ಶ್ರೀ ಮುಂತಾದವರ ಲಲಿತ ಪ್ರಬಂಧಗಳ ಪ್ರಸ್ತಾಪವೇ ಆಗಿಲ್ಲ ಅಂತೀನಿ. ಅವುಗಳಲ್ಲಿ ತಿಳಿಹಾಸ್ಯ ಇಲ್ಲವೆ? ಹೋಗ್ಲಿ, ಮುದ್ದಣ–ಮನೋರಮೆಯರನ್ನೇ ನೆನಪು ಮಾಡಿಕೊಂಡಿಲ್ಲ. ಅವರು ಮರೆತದ್ದರಿಂದ ನಾನು ಬಚಾವ್ ಆದೆ. ಜೊತೆಗೆ ಇತ್ತೀಚಿನ ಸತ್ಯನಾರಾಯಣ, ನಿರ್ಮಲಾ, ಈರಪ್ಪ ಎಂ. ಕಂಬಳಿ ಮುಂತಾದವರು ಈ ಹೆಬ್ಬೊತ್ತಿಗೆಯಿಂದ ತಪ್ಪಿಸಿಕೊಂಡಿದ್ದಾರೆ. ಕಡಿಮೆ ಆದಷ್ಟು ಒಳ್ಳೇದು. ನನ್ನ ಭಾರದ ಹೊರೆ ಕಡಿಮೆಯಾಗೋದೆ, ಒಂದು ದೊಡ್ಡ ಸಮಾಧಾನ.

ಈ ಅಮೆರಿಗನ್ನಡಿಗರು ಅಸಾಧ್ಯರು. ನಮಗೇ ಇಲ್ಲದ ಆಸಕ್ತಿ, ಅಭಿಮಾನ ಇವರಿಗಿದೆಯಲ್ಲಾ ಎಂಬ ಸಂತೋಷ. ದೇಶ ಬಿಟ್ಟು ಹೋದರೂ ಭಾಷೆ ಬಿಡಲಿಲ್ಲ. ನಮ್ಮ ಕಡೆ ಜನಕ್ಕೆ ನವೆಂಬರ್ ತಿಂಗಳಲ್ಲಿ ಕನ್ನಡ ಮೈಮೇಲೆ ಬಂದು, ವಸೂಲಿಮಾಡಿ 'ಕನ್ನಡ–ಕನ್ನಡ' ಅಂತ ಬೊಬ್ಬೆ ಹಾಕೊ ವಿಚಾರ ನಿಂಗೂ ಗೊತ್ತಲ್ಲ. ಇವರಿಗಿಂತ ಅಮೆರಿಗನ್ನಡಿಗರು ಸಾವಿರಸಾವಿರ ಪಾಲು ಮೇಲು. ದೂರದಲ್ಲಿ ಕಷ್ಟಪಟ್ಟು ದುಡೀತಾರೆ. ಸಿಕ್ಕೊ ರಜಾಗಿಜಾಗಳಲ್ಲಿ ಒಟ್ಟಿಗೆ ಸೇರಿ, ಕನ್ನಡದಲ್ಲಿ ಬದುಕ್ತಾರೆ, ಮಾತಾಡ್ತಾರೆ. ಅಷ್ಟೇ ಸಾಲ್ದು ಅಂತ ಸಮ್ಮೇಳನ–ಗಿಮ್ಮೇಳನ ಮಾಡಿಕೊಂಡು ಗಳಿಸಿದ ಡಾಲರ್ ಕಳೀತಾರೆ. ಇಂತಹ ಸಂದರ್ಭಗಳಲ್ಲಿ ಕನ್ನಡದ ಬಿಸಿನೆಸ್ ಮಾಡೋ ಸಾಹಿತಿಗಳು

ಇರೋ ವಿಚಾರ ನಿಂಗೂ ಗೊತ್ತಿಲ್ಲ. ಮುಂದೆ ಯಾರಾದ್ರು ತಲೆಕೆಟ್ಟೋರು 'ಕನ್ನಡಕ್ಕೆ ಅಮೆರಿಗನ್ನಡಿಗರ ಕೊಡುಗೆ' ಎಂಬ ಒಂದು ದೊಡ್ಡ ಡಾಕ್ಟರೇಟ್ ಮಹಾಪ್ರಬಂಧಕ್ಕೇ ಕೈಹಾಕಬಹುದು. ನಮ್ಮ ತಲೆಭಾರವನ್ನು ಹೆಚ್ಚಿಸಬಹುದು.

ಅಮೆರಿಕಾ ಅಂದ ಕೂಡಲೆ ಏನೇನೋ ನೆನಪಾಗುತ್ತೆ. ಅಲ್ಲಿಗೆ ಹೋಗೊ ಮೊದಲು ಹುಷಾರಾಗೆ ಹೋಗ್ತಾರೆ. ಶಪಥಗಳನ್ನು ಮಾಡ್ತಾರೆ. ನಿಧಾನವಾಗಿ ಅಲ್ಲಿನ ಲೋಕದಲ್ಲಿ ಕರಗಿಹೋಗ್ತಾರೆ. ಅಮೆರಿಕನ್ನರೇ ಆಗಿಹೋಗ್ತಾರೆ. ಇದು ನಡೆಯೋದೆ ಹೀಗೆ, ಸಹಜ. ಸಂಬಂಧಗಳು ಕಳಚಿಕೊಳ್ಳುತ್ತವೆ. ಭೇಟಿ ಅಪರೂಪವಾಗುತ್ತದೆ. ಕೈತುಂಬ ಹಣವನ್ನೂ ಧಾರಾಳವಾಗಿ ಕಳುಹಿಸಬಹುದು. ಪ್ರೀತಿನ ಕಳಿಸೋಕೆ ಆಗೊಲ್ಲವೆ! ಇಂತಹ ಡಾಲರ್ ವ್ಯೂಹದಲ್ಲಿ, ಈ ಹುಚ್ಚರು ಕನ್ನಡವನ್ನು ಕನಸಿನಲ್ಲೂ ಜಪಿಸ್ತಾರೆ. ಇಂತಹವರಿಂದಲೆ ನನಗೆ ಕಷ್ಟ ಬಂದಿರೋದು.

ಈ 'ಮುನ್ನುಡಿ' ಸಂಕಟಕ್ಕೆ ನನ್ನನ್ನು ಮೊದಲು ಗುರಿಮಾಡಿದೋರು ಎಚ್.ಕೆ. ನಂಜುಂಡಸ್ವಾಮಿ ಅನ್ನೋರು. ಅಮೆರಿಕಾದಿಂದ ದೂರವಾಣಿ ಮೂಲಕ ಮಾತನಾಡಿದರು. ಯಾರಿರಬಹುದು? ಅಂತ ತಲೆಕೆಡಿಸಿಕೊಂಡೆ. ಇಲ್ಲಿ ನಮ್ಮ ಆಕಾಶವಾಣಿ ಎಚ್. ಕೆ. ರಂಗನಾಥ್ ಇದ್ದರಲ್ಲ, ಅವರ ಸೋದರರೇ ಈ ಸ್ವಾಮಿ ಅಂತ ತಿಳೀತು. ಅವರು ಬೀಸಿದ ಬಲೆಗೆ ಬಿದ್ದೆ. 'ನಗೆಗನ್ನಡಂ ಗೆಲ್ಗೆ!' ಪುಸ್ತಕಕ್ಕೆ ಮುನ್ನುಡಿ ಬರೀಬೇಕು ಎಂದರು. ಆ ಕೆಟ್ಟಗಳಿಗೆಯಲ್ಲಿ, ಖೆಡ್ಡಾ ಆಪರೇಷನ್ ಆಗೇ ಹೋಯ್ತು. ಅವಸರದಲ್ಲಿ ಅಜ್ಜಿ ಮೈನೆರೆದಳು. ಈ ರೀತಿ ಹಳ್ಳಕ್ಕೆ ಬಿದ್ದೆ. ನಂಜುಂಡಸ್ವಾಮಿ ಹೆಸರಿನಲ್ಲೇ ಇಲ್ಲವೆ ನಗೆನಂಜು. ಈ ನಂಜು ನನ್ನಂತ ಬಡಪಾಯಿಯನ್ನು ಬಿಡುವುದೆ? ಯಾವ ಗರುಡ ಮಂತ್ರವೂ ಪ್ರಯೋಜನಕ್ಕೆ ಬರಲಿಲ್ಲ. 'ಮುನ್ನುಡಿ' ಬರೆಯುವವರೆಗೂ ಎತ್ತಿದ ಹೆಡೆ ಇಳಿಸೋದಿಲ್ಲ ಎಂದು ದ್ವೇಷ ಸಾಧಿಸೇಬಿಟ್ಟರು. ಆಗಾಗ ರಾಜಗೋಪಾಲ್ ಅನ್ನೋರು ರೂಲ್‌ದೊಣ್ಣೆ ತಕೊಂಡು 'ಮುನ್ನುಡಿ' 'ಮುನ್ನುಡಿ' ಅಂತ ಮೊಟುಕುತಾ ಇದ್ದಾರೆ. ಈ ರಾಜಗೋಪಾಲ್ ನಮ್ಮ ಎಚ್. ವೈ. ಶಾರದಾಪ್ರಸಾದ್ ತಮ್ಮ ಬೇರೆ. ಅವರ ಹಾಗೆ ಪಟ್ಟುಬಿಡದ ಆಸಾಮಿ. ಜೊತೆಗೆ ಈ ಸಿ.ಐ.ಎ ಏಜೆಂಟ್ 'ಅಭಿನವ'ನ ಕಾಟ ಬೇರೆ. ಈ ಸಂಕಷ್ಟದಿಂದ ಪಾರಾಗುವ ಬಗೆ ಯಾವುದು ಅನ್ನೋದೆ ಅರ್ಥವಾಗುತ್ತಿಲ್ಲ.

> ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ
> ಕೈ ಹಿಡಿದು ನಡೆಸೆನ್ನನು.

ಎಂದು ಪ್ರಾರ್ಥಿಸಿದರು ಅರುಣೋದಯವಾಗುತ್ತಿಲ್ಲ.

ನೀನಾದರು ದಾರಿ ತೋರಿಸು ಗೆಳೆಯ. ಕೊಟ್ಟ ಮಾತಿಗೆ ತಪ್ಪಿ ನಡೆಯುವ ಹಾಗೂ ಇಲ್ಲ. ತಪ್ಪಿಸಿಕೊಳ್ಳುವ ಹಾಗೂ ಇಲ್ಲ. ಅಮೆರಿಕಾಕ್ಕೆ ಹೋಗಿ ವಯಸ್ಸಾದವರು

ಅನುಭವಿಸುವ ಒಂಟಿತನದ ಯಾತನಾ ಶಿಬಿರಗಳಲ್ಲಿ ನರಳುವಂತಾಗಿದೆ, ನನ್ನ ಸ್ಥಿತಿ. ಪಾಪ, ಅವರಿಗಂತೂ ಇರುವ ಹಾಗೂ ಇಲ್ಲ, ಬರುವ ಹಾಗೂ ಇಲ್ಲ. ನನಗಂತೂ ಬರೆಯುವ ಹಾಗೂ ಇಲ್ಲ. ಬರೆಯದ ಹಾಗೂ ಇಲ್ಲ. **'ನಗುವು ಸಹಜದ ಧರ್ಮ; ನಗಿಸುವುದು ಪರಧರ್ಮ'** ಅಂತ ಏನೇನೋ ಹೇಳ್ತಾರೆ. ಬರೆಯುವ 'ಮುನ್ನುಡಿ'ಯ ಧರ್ಮದ ಬಗ್ಗೆ ಯಾರೂ ಮಾತನಾಡುವುದಿಲ್ಲ. ಲೇಂಜ ಜೇಮ್ಸನ-

We are Pleased We laugh

We laugh because We are Pleased

ಮಾತಿಗೆ ತಲೆ ಕೆರೆದುಕೊಳ್ಳುತ್ತಿದ್ದೇನೆ. ನಾನಂತು Pleased ಆಗಿಲ್ಲ. ಗೆಳೆಯ, ನನ್ನನ್ನು ಪಾರುಮಾಡು. ಅವರಿಗಂತು ಸಂಬಂಧಗಳ ಬಗ್ಗೆ, ಭಾವನೆಗಳ ಬಗ್ಗೆ ನಂಬಿಕೆಗಳು ಇರುವುದಿಲ್ಲವೆಂದು ಕೇಳಿದ್ದೇನೆ. ಈ ಕನ್ನಡ ಹುಚ್ಚರ ಹಿಡಿತದಿಂದ ಪಾರು ಮಾಡು.

ನಮಸ್ಕಾರ

ನಿನ್ನ

**ಚಿ. ಶ್ರೀನಿವಾಸರಾಜು**

೨೧(ಲ) 'ಚಿರಂಜೀವಿ'
ಹಳೇ ಈಜುಕೊಳದ ರಸ್ತೆ,
ಕೋದಂಡರಾಮಪುರ,
ಮಲ್ಲೇಶ್ವರ, ಬೆಂಗಳೂರು-೫೬೦ ೦೦೩.
ದೂರವಾಣಿ:(೦೮೦) ೨೩೩೪೩೮೯೭

# ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಾಸ್ಯ

ಎಚ್.ಕೆ. ನಂಜುಂಡಸ್ವಾಮಿ

ಕನ್ನಡ ಸಾಹಿತ್ಯದಲ್ಲಿ ಹಾಸ್ಯದ ಬೆಳವಣಿಗೆ ಇಪ್ಪತ್ತನೆ ಶತಮಾನದ ಆದಿಭಾಗದಲ್ಲಿ ಪ್ರಾರಂಭವಾಯಿತು ಎನ್ನಬಹುದು. ಅಲ್ಲಿಯವರೆಗೆ ಸುಪ್ತಾವಸ್ಥೆಯಲ್ಲಿದ್ದ ಕನ್ನಡದ ಹಾಸ್ಯ ಸಾಹಿತ್ಯ ಆಗ ಎದ್ದು ಚಟುವಟಿಕೆಯಿಂದ ಕೈಕಾಲು ಝಾಡಿಸಲು ಪ್ರಾರಂಭಿಸಿತು. ಗದ್ಯ, ಪದ್ಯ, ಪ್ರಹಸನ, ವಿಡಂಬನೆ, ವ್ಯಂಗ್ಯಚಿತ್ರ ಇತ್ಯಾದಿ ಎಲ್ಲ ಪ್ರಾಕಾರಗಳನ್ನೂ ಉಪಯೋಗಿಸಿಕೊಳ್ಳುತ್ತ ತನ್ನ ಮೊದಲ ಹೆಜ್ಜೆಗಳನ್ನಿಟ್ಟಿತು. ಇಪ್ಪತ್ತನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಕನ್ನಡದಲ್ಲಿ ಹಾಸ್ಯ ಸಾಹಿತ್ಯ ದೃಢವಾಗಿ ಬೆಳೆದಿತ್ತು. ನಿಜವಾಗಿ ಇಪ್ಪತ್ತನೆಯ ಶತಮಾನದ ಮೂರು, ನಾಲ್ಕು ಮತ್ತು ಐದನೆಯ ದಶಕಗಳು ಕನ್ನಡ ಹಾಸ್ಯ ಸಾಹಿತ್ಯದ ಸುವರ್ಣಯುಗ ಎನ್ನಬಹುದು.

ಪ್ರಾಯಶಃ ಆಧುನಿಕ ಕನ್ನಡ ಸಾಹಿತ್ಯದ ಮೊದಲ (೧೯೧೦) ಪ್ರಕಟಿತ ಹಾಸ್ಯ ಕೃತಿ ಆರ್. ನರಸಿಂಹಾಚಾರ್ಯರ 'ನಗೆಗಡಲು' (ಆಧಾರ ೧). ಮಂಕ, ಮರುಳ, ಮಡೆಯ, ಮುಟ್ಠಾಳ ಮತ್ತು ಮಡ್ಡಿ ಎಂಬ ಐವರು ಗಾಂಪರು ಮತ್ತು ಅವರ ಹೆಡ್ಡತನದಿಂದ ದಿನಬೆಳಗಾದರೆ ಸಂದಿಗ್ಧ ಪರಿಸ್ಥಿತಿಗೆ ಸಿಕ್ಕಿ ಸಂಕಟಪಡುವ ಅವರ ಗುರುಗಳು, ಇವರ ಹತ್ತಾರು ನಗೆ ಸನ್ನಿವೇಶಗಳು ಕನ್ನಡಿಗರನ್ನು ನಕ್ಕು ನಗಿಸಿದವು. ಗುರುಗಳಿಗಾಗಿ ಕುದುರೆಯೊಂದನ್ನು ಒದಗಿಸಲು ಗಾಂಪರು ಕುದುರೆಯ ಮೊಟ್ಟೆಯನ್ನು ಕೊಂಡು ತಂದುದು, ನೀರಿನಲ್ಲಿನ ಕುದುರೆಯ ಛಾಯೆಯನ್ನು ನೋಡಿ ಅದು ನಿಜವಾದ

ಕುದುರೆಯೆಂದು ಭ್ರಮಿಸಿ ಅದನ್ನು ಮೇಲಕ್ಕೆತ್ತಲು ಗಾಳಹಾಕಿದುದು, ಹೊಳೆಯು ಎದ್ದಿದೆಯೇ ಅಥವಾ ಮಲಗಿದೆಯೇ ಎಂದು ತಿಳಿದುಕೊಳ್ಳಲು ಹೊಳೆಯನೀರಲ್ಲಿ ಉರಿವ ಕೊಳ್ಳಿಯನ್ನಿಟ್ಟು ಅದು 'ಚುಂಯ್' ಎಂದಾಗ ಹೊಳೆ ಎದ್ದಿದೆಯೆಂದು ನಿರ್ಧರಿಸಿ ದಾಟಲು ಹೆದರಿದುದು, ಆಮೇಲೆ ಅದೇ ಆರಿದ ಕೊಳ್ಳಿಯನ್ನು ಹೊಳೆಯೊಳಗಿಟ್ಟು ಈಗ ಅದು ಸದ್ದು ಮಾಡದೇ ಇದ್ದುದರಿಂದ ಹೊಳೆ ಮಲಗಿದೆಯೆಂದು ಧೈರ್ಯವಾಗಿ ಹೊಳೆಯನ್ನು ದಾಟಿದುದು, ಗುರುಗಳಿಗೆ ಹಾಲು ಸರಬರಾಜು ಮಾಡಲು ಬಹು ಹಣಕೊಟ್ಟು ತುಂಟ ಹಸುವೊಂದನ್ನು ಕೊಂಡುತಂದು ಅದರ ಕಾಲಗಳನ್ನು ಕಟ್ಟಲು ಗುರುಗಳ ಉದ್ದವಾದ ಜಡೆಯನ್ನೇ ಉಪಯೋಗಿಸಿದುದು, ಹೀಗೆ ಒಂದೇ ಎರಡೆ? ಗಾಂಪರು ನಿಸ್ತೇಜರಾಗಿದ್ದ ತಮ್ಮ ಗುರುಗಳನ್ನು ಯಾರದೋ ಮನೆಯ ಜಗಲಿಯ ಮೇಲೆ ಮಲಗಿಸಿಕೊಂಡಿದ್ದಾಗ, ಅದು ಹೆಣವೆಂದು ಭ್ರಮಿಸಿದ ಮನೆಯ ಮಾಲೀಕ ಕೋಪದಿಂದ: 'ಏನು ಮಾಡುತ್ತಿದ್ದೀರೊ? ನೀವು ಹೊಟ್ಟೆಗೆ ಏನು ತಿನ್ನುತ್ತೀರೋ?' ಎಂದು ರೇಗಿದಾಗ, ಮಡೆಯ: 'ನೀವು ಏನು ಕೊಟ್ಟರೂ ತಿನ್ನುತ್ತೇವೆ. ಬಹಳ ಹಸಿವು'. ಎಂದುದು ನರಸಿಂಹಾಚಾರ್ಯರ ಹಾಸ್ಯಪ್ರಜ್ಞೆಯ ಉತ್ತಮ ನಿದರ್ಶನ.

'ನಗೆಗಡಲು' ಮೂಲತಃ ಕನ್ನಡ ಕೃತಿ ಎನಿಸಿದರೂ, ಪ್ರಾಯಶಃ ಅದು ಸುಮಾರು ೧೮ನೆಯ ಶತಮಾನದಲ್ಲಿ ತಮಿಳುನಾಡಿನಲ್ಲಿ ನೆಲೆಸಿದ್ದ ಇಟಾಲಿಯನ್ ಪಾದ್ರಿಯೊಬ್ಬನ ತಮಿಳು ಪುಸ್ತಕವನ್ನವಲಂಬಿಸಿದೆ ಎನಲು ಮಾಹಿತಿಯಿದೆ (ಆಧಾರ ೨). ಇದನ್ನು ಗಮನಿಸಿದಾಗ 'ನಗೆಗಡಲು' ಪಾಶ್ಚಾತ್ಯ ನಗೆ ಸಾಹಿತ್ಯದಿಂದ ಸ್ಫೂರ್ತಿಗೊಂಡಿರಬಹುದು ಎನಿಸುತ್ತದೆ.

೧೯೧೯ರಲ್ಲಿ ಪ್ರಕಟಿತವಾದ 'ಟೊಳ್ಳು–ಗಟ್ಟಿ'ಯೊಂದಿಗೆ ಕನ್ನಡ ಪ್ರಹಸನ ಪ್ರಪಿತಾಮಹ ತ್ಯಾಗರಾಜ ಪರಮಶಿವ ಕೈಲಾಸಂ ಅವರು ಕನ್ನಡ ಹಾಸ್ಯ ಸಾಹಿತ್ಯದ ಬೆಳವಣಿಗೆಗೆ ಬುನಾದಿ ಹಾಕಿದರು. ಕೈಲಾಸಂ ಭೂಗರ್ಭಶಾಸ್ತ್ರದಲ್ಲಿ ಉನ್ನತವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೋಗಿ ಏಳು ವರ್ಷವಿದ್ದರು. ಆಗ ಅವರಿಗೆ ಪಾಶ್ಚಾತ್ಯ ರಂಗಭೂಮಿಯನ್ನು ಆಳವಾಗಿ ಅಭ್ಯಸಿಸುವ ಅವಕಾಶ ಸಿಕ್ಕಿತು. ಸಾಮಾನ್ಯರ ಜೀವನವನ್ನು ಅತ್ಯಂತ ಸ್ವಾಭಾವಿಕವಾಗಿ ಚಿತ್ರಿಸುವ ಅಲ್ಲಿನ ಸಾಮಾಜಿಕ ನಾಟಕಗಳು, ಅವುಗಳ ಪ್ರಫುಲ್ಲ ಹಾಸ್ಯಪ್ರಜ್ಞೆ ಕೈಲಾಸಂ ಅವರ ಮನಸ್ಸನ್ನು ಸೆರೆಹಿಡಿಯಿತು. ಅವರ ಈ ಅನುಭವ, ಭಾರತಕ್ಕೆ ಹಿಂದಿರುಗಿದ ಮೇಲೆ ಅವರ ಸಾಮಾಜಿಕ ನಾಟಕಗಳ, ಇತರ ಕೃತಿಗಳ ಮೂಲಕ ಕನ್ನಡ ಸಾಹಿತ್ಯದಲ್ಲಿ ಹಾಸ್ಯದ ಬೆಳವಣಿಗೆಗೆ ಇಂಬು ಕೊಟ್ಟಿತು.

ಅವರ ಹದಿನೇಳು ನಾಟಕಗಳು, ಏಳು ಕವನಗಳು ಮತ್ತು ತಾವರೆಕೆರೆ ಗದ್ಯಗ್ರಂಥಗಳಲ್ಲಿ ಹಾಸ್ಯ ಓತಪ್ರೋತವಾಗಿ ಹರಿದಿದೆ. ಇವುಗಳಲ್ಲಿ ಹಾಸ್ಯಕ್ಕಾಗಿಯೇ

ಬರೆದ ಪ್ರಹಸನಗಳು ಕೆಲವು. ಸಮಾಜದ ಕುಂದು ಕೊರತೆಗಳಿಗೆ ಹಾಸ್ಯದ ಶಾಲನ್ನುಡಿಸಿ ಕನ್ನಡಿ ಹಿಡಿದವು ಕೆಲವು. ನಮ್ಮ ಹಾಸ್ಯಪ್ರಚೋದಕ ನಡೆ ನುಡಿಗಳನ್ನು ಪ್ರತಿಬಿಂಬಿಸಿದವು ಮತ್ತೆ ಕೆಲವು. ಈ ಎಲ್ಲ ಕೃತಿಗಳಲ್ಲೂ ಅವರು ಹಾಸ್ಯದ ಹತ್ತಾರು ಮುಖಗಳನ್ನು ನಮ್ಮ ಮುಂದಿಟ್ಟಿದ್ದಾರೆ. ವಿಡಂಬನೆ, ಕುಚೋದ್ಯ, ವ್ಯಂಗ್ಯೋಕ್ತಿಗಳು, ನಗೆಮಾತು, ಅತಿರೇಕ, ಚುಚ್ಚುಮಾತು, ಪ್ರಾಸ, ನಾಣ್ಣುಡಿ ಮೊದಲಾದ ಹಾಸ್ಯ ತಂತ್ರಗಳನ್ನು ತಮ್ಮ ನಾಟಕಗಳಲ್ಲಿ, ಕವನಗಳಲ್ಲಿ ಯಥೇಚ್ಛವಾಗಿ ಉಪಯೋಗಿಸಿದ್ದಾರೆ. ಅವರ ಈ ಎಲ್ಲ ಕೃತಿಗಳಲ್ಲೂ ಆಂಗ್ಲ ರಂಗಭೂಮಿಯ ವಿಶಿಷ್ಟ ಪ್ರಭಾವವನ್ನು ನಾವು ಕಾಣಬಹುದು.

ಕೈಲಾಸಂ ಅವರ ನಾಟಕಗಳನ್ನು ಮೊದಲು ಓದಿದಾಗ ಜನಸಾಮಾನ್ಯರ, ಹಾಗೂ ವಿದ್ವಾಂಸರ ಗಮನವನ್ನು ಸೆಳೆದದ್ದು ಕೃತಿಗಳಲ್ಲಿ ಯಥೇಚ್ಛವಾಗಿ ಅವರು ಉಪಯೋಗಿಸಿರುವ ಭಾಷಾಮಿಶ್ರಣ. ಇದು ಕನ್ನಡ ನಾಟಕವೋ ಅಥವ ಇಂಗ್ಲಿಷ್ ನಾಟಕವೋ ಎಂದು ಸಂಶಯ ಬರುವಷ್ಟು ಇಂಗ್ಲಿಷ್ ವಾಕ್ಯಗಳು, ಕನ್ನಡ ವಾಕ್ಯಗಳಲ್ಲಿ ಇಂಗ್ಲಿಷ್ ಪದಗಳು, ಇಂಗ್ಲಿಷ್ ವಾಕ್ಯಕ್ಕೆ ಕನ್ನಡ ಪ್ರತ್ಯಯ ಸೇರಿಸಿ ಅದನ್ನು ಕನ್ನಡೀಕರಿಸುವುದು ಮುಂತಾದ ಎಲ್ಲ ಪ್ರಯೋಗಗಳಿವೆ. ಈ ಭಾಷಾ ಮಿಶ್ರಣ ಸಾಧಾರಣವಾಗಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಯ ಬೆರಕೆಯಾದರೂ, ತಮಿಳು, ತೆಲುಗು, ಮಲೆಯಾಳಂ ಮತ್ತು ಉರ್ದು ಭಾಷೆಗಳೆಲ್ಲ ಅವರ ಕನ್ನಡ ನಾಟಕದಲ್ಲಿ ಮನೆಮಾಡಿದ್ದವು. ಕೈಲಾಸಂ ನಾಟಕಗಳ ಈ ಅನನ್ಯ ಲಕ್ಷಣ ಅಂದಿನಿಂದ ಇಂದಿನವರೆಗೂ ವಿದ್ವಾಂಸರ ಚರ್ಚೆಗೆ ಗ್ರಾಸವಾಗಿದೆ. ಈ ಬಗ್ಗೆ ಕೈಲಾಸಂ ಅವರೇ ಹೀಗೆ ಹೇಳಿದ್ದಾರೆ: 'ನಾನು ನಾಟಕ ಬರೆಯಲು ಮೊದಲುಮಾಡಿದ್ದು ನಾಟಕ ಬರೆಯುವ ಬಯಕೆಯಿಂದಲ್ಲ, ಸಮಾಜವನ್ನು ಪ್ರತಿಬಿಂಬಿಸಲೋಸುಗ! ಈಗ ನನ್ನದೆಂಬ ನಾಟಕಗಳಲ್ಲಿ ನಮ್ಮೀ ಸಮಾಜದಲ್ಲಿ ಬಳಕೆಗೆ ಬಂದಿರುವ ಭಾಷೆಯನ್ನು-ಕನ್ನಡ, ಆಂಗ್ಲೋ, ತೆಲುಗು, ತಮಿಳು, ಉರ್ದು, ಕೇರಳಗಳನ್ನು-ಉಪಯೋಗಿಸಬೇಕೇ? ಬೇಡವೇ? ಉಪಯೋಗಿಸಿದರೆ ಸರಿಯೇ? ತಪ್ಪೇ? ಎಂಬ ತೊಡರುಗಳು ನನಗಿರಲಿಲ್ಲ! ಏಕೆಂದರೆ ಜನಜೀವನ ಪ್ರತಿಬಿಂಬನ ನನ್ನ ಗುರಿ..........ನನ್ನ ನಾಟಕದ ಭಾಷೆ ತಪ್ಪಾದರೆ ನಮ್ಮ ಶಿಷ್ಟಜನ ನುಡಿಯುವ ನುಡಿಯೇ ತಪ್ಪು! ತಪ್ಪು ನನ್ನದಲ್ಲ!'(೧೯೪೫ರ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಿಂದ, ಆಧಾರ ೩)

ಕೆಲವು ಕಡೆ ಕೈ ಅವರ ಹಾಸ್ಯ ಬಹಳ ಲಘುವಾಗಿದೆ. ಮತ್ತೆ ಕೆಲವು ಕಡೆ ಅವರ ಹಾಸ್ಯ, ಹಾಸ್ಯಪ್ರಜ್ಞೆ ಯೇ ಇಲ್ಲದ ಮಡ್ಡಿಯನ್ನೂ ಬಡಿದೆಬ್ಬಿಸಿ ನಗಿಸುತ್ತದೆ. 'ಹೋಂ ರೂಲು'ವಿನಲ್ಲಿ ರಾಮಣ್ಣನ ತಾಯಿ, ವಿತಂತು, ಸುಬ್ಬಮ್ಮ ಸೊಸೆಯ ಕಾಟದಿಂದ ರೋಸಿಹೋಗಿ ಆತ್ಮಹತ್ಯೆಮಾಡಿಕೊಳ್ಳಲು ಆಳವಾದ ಭಾವಿಯನ್ನು ಹುಡುಕಿಕೊಂಡು

ಹೊರಟಿದ್ದಾಳೆ. ಎದುರಿನಿಂದ ಬಂದ ಸಾವಿತ್ರಮ್ಮ ಸುಬ್ಬಮ್ಮನ ಕಥೆಯನ್ನು ಕೇಳಿ, ಕತ್ತಲೆಯಲ್ಲಿ ಕಣ್ಣುಕಾಣದೆ ಎಡವಿಬಿದ್ದು ಕಾಲಿಗೆ ಪೆಟ್ಟಾದೀತು ಎಂದು ಎಚ್ಚರಿಸಿದಾಗ ಆತ್ಮಹತ್ಯೆಗೆ ಸಿದ್ಧಳಾಗಿದ್ದ ಸುಬ್ಬಮ್ಮ ಒಪ್ಪಿ ವಾಪಸು ಮನೆಗೆ ಬರುತ್ತಾಳೆ. ಎಂಥ ಲಘು ಹಾಸ್ಯ!

ಆದರೆ 'ಬಂಡ್ವಾಳ್ವಿಲ್ಲದ ಬಡಾಯಿ'ಯಲ್ಲಿ ಕಣಿವೆ ಕೆಳಗಿನ ಅಡಿಗೆಯುವ ಪರುಶುರಾಮನ್ ಮತ್ತು ಲಾಯರ್ ಅಹೋಬ್ಳುವಿನ ಸಂವಾದ ಕೇಳಿ.

ಅಹೋಬ್ಳು: ಹೌದೂ, ಅದೇನು ನೀವು ಕಣಿವೆ ಕೆಳಗಿನ ಕುಕ್ಕುಗಳು....(ಅಡಿಗೆ ಮಾಡುಕ್ಕೆ) ನಂದೇಶಕ್ಕೆ ಬರೋದೂ? ನಮಗೆ..ಕನ್ನಡಿಗರಿಗೆ ಅಡಿಗೆ ಗೊತ್ತಿಲ್ಲಾಂತ್ಲೆ?

ಪರುಶುರಾಮನ್: ಇಲ್ಲ, ಸಾರ್. ಮೈಸೂರಿ ಕಳಿಕೆ ಅಟಿಕೆ ಕೊತ್ತು. ಆತರೆ ತಿಳಿವ್ ಸಾರ್..... ತಿಳಿಯ ರಸಂ ಮಾಟುವುತಕ್ಕೆ ಪರುವುತಿಲ್ಲ.......ನಿಮುಕೆ ತಿಳಿಯ ರಸಮ್ ಕೊತ್ತಿಲ್ಲ ಮಾಟುವುತು....

ಅಹೋಬ್ಳು: ಓಹೋ! ತಿಳಿಯ ಸಾರು ಮಾಡೋಕೇಂತ ಬಂದಿರೋದು ನೀವು! ಮತ್ಯಾಕೆ ನಾವು ಮೈಸೂರಿಗ್ಳು ಮೀಸೆ ಇಟ್ಕೊಂಡಿರೋದು? ಗಟ್ಸಾರು ಮಾಡಿಬಿಡ್ತೇವೆ: ಮೀಸೆ ಮೇಲಿಂದ ಬಾಯ್ಗೆ ಬಿಟ್ಕೋತೇವೆ ಗಟ್ಸಾರ್‌ನ. ಮೀಸೆ ಒಂದು ಜ್ಯೂಯಲ್ ಫ಼ಿಲ್ಟರ್ ಆಗಿ ತಿಳೀಸಾರು ಬಾಯೊಳಗೆ ಹೋಗುತ್ತೆ..... ಮೀಸೆಮೇಲೆ ತಯಾರು...ತೊವ್ವೆ!

Home Ruleಉ, ಬಂಡ್ವಾಳ್ವಿಲ್ಲದ ಬಡಾಯಿ, ನಂಕಂಪ್ನಿ ನಾಟಕಗಳಲ್ಲಿ ಹಾಸ್ಯ ಪ್ರತಿಪುಟದಲ್ಲೂ ಉಬ್ಬಿ ಹರಿದರೆ, ಮತ್ತೆ ಕೆಲವು ನಾಟಕಗಳಲ್ಲಿ ಹಾಸ್ಯ ಅನಿರೀಕ್ಷಿತವಾಗಿ ತಲೆ ಹಾಕುತ್ತದೆ. 'ನಂಕ್ಲಬ್ಬು'ವಿನಲ್ಲಿ ಲಾಯರ್ ಅಹೋಬ್ಳು ತಾನು ಗೆದ್ದ ಕೇಸ್ ಒಂದರ ವಿಷಯ ಹೇಳುತ್ತಾನೆ (ಇದು ನನ್ನ ಸಾರಾಂಶ):

ಲಾಯರನ ಕಕ್ಷಿಗಾರ ಕಳ್ಳತನ ಮಾಡಿ ಸಿಕ್ಕಿಕೊಂಡಿದ್ದಾನೆ. ಲಾಯರು ಅವನ ಪರವಾಗಿ ವಾದಮಾಡುತ್ತ, ಜಡ್ಜಿಯನ್ನು 'ಸಮಾಜದ ಒಬ್ಬ ವ್ಯಕ್ತಿ ಮಾಡಿದ ತಪ್ಪಿಗೆ ಇಡೀ ಸಮಾಜವನ್ನೇ ಶಿಕ್ಷಿಸುವುದು ನಾಯವೇ?' ಎಂದು ಕೇಳುತ್ತಾನೆ. ಜಡ್ಜಿ 'ಖಂಡಿತ ಇಲ್ಲ. ಸಮಾಜದ ಒಂದು ವ್ಯಕ್ತಿಯ ತಪ್ಪಿಗಾಗಿ ಇಡೀ ಸಮಾಜವನ್ನು ಶಿಕ್ಷಿಸುವುದು ಸರ್ವಥಾ ತಪ್ಪು' ಎನ್ನುತ್ತಾನೆ. ಆಗ ಲಾಯರು 'ಮಹಾಸ್ವಾಮಿ, ಕಳ್ಳತನ ಮಾಡಿದ್ದು ನನ್ನ ಕಕ್ಷಿಗಾರನ ಬಲಗೈ. ಆದರೆ ನೀವು ಅವನ ಇಡೀ ದೇಹವನ್ನೇ ಸೆರೆಮನೆಗೆ ಕಳಿಸುತ್ತಿದ್ದೀರಿ. ಇದು ನ್ಯಾಯವೇ?' ಎನ್ನುತ್ತಾನೆ. ಜಡ್ಜಿಯೂ ಘಾಟಿ. 'ಇಲ್ಲಪ್ಪ ನಾನು ಇವನ ಬಲಗೈಯನ್ನು ಮಾತ್ರ ಜೈಲಿಗೆ ಕಳಿಸುತ್ತೇನೆ. ಆ ಕೈನ ಜೊತೆ ಅವನ ದೇಹವೂ ಹೋಗಬೇಕೆಂದು ನಾನೇನೂ ಹೇಳುವುದಿಲ್ಲವಲ್ಲ!' ಎಂದು ಹೇಳಿ ಅದೇ

ರೀತಿ ಜಜ್ಡ್‌ಮೆಂಟನ್ನು ಕೊಡುತ್ತಾನೆ. ಕೂಡಲೆ ಲಾಯರ ಆದೇಶದಂತೆ ಖೈದಿ ತನ್ನ ಕೃತಕ ಬಲಗೈಯನ್ನು ಭುಜದಿಂದ ಕಳಚಿ ಜಡ್ಜಿಯ ಮುಂದಿಟ್ಟು, ಆಚೆಗೆ ಹೊರಟು ಹೋಗುತ್ತಾನೆ! (ಆಧಾರ ೩)

ಆಂಗ್ಲ ಭಾಷೆಯ ಹಾಸ್ಯಪ್ರಜ್ಞೆ ಕೈಲಾಸಂ ಅವರ ಮೂಲಕ ಕನ್ನಡಕ್ಕೆ ಇಳಿದಂತೆಯೇ ಇನ್ನೊಂದು ಹಾದಿಯಿಂದ ಒಳಕ್ಕೆ ಬಂದಿತು. ಬೆಂಗಳೂರಿನ ವೈದ್ಯ ಡಾಕ್ಟರ್ ಎಂ. ಶಿವರಾಂ ಇನ್ನೂ ವಿದ್ಯಾರ್ಥಿಯಾಗಿದ್ದಾಗಲೇ ಒಂದು ದಿನ, ಲೈಬ್ರರಿಯಲ್ಲಿ ಹಾಸ್ಯಕ್ಕಾಗಿಯೇ ಮೀಸಲಾದ, ಇಂಗ್ಲೆಂಡಿನ Punch ಮಾಸಪತ್ರಿಕೆಯನ್ನು ಕಂಡರು. ಶಿವರಾಂ ಅಲ್ಲಿನ ಲೇಖನಗಳು, ಪದ್ಯಗಳು, ಚುಟಕಗಳು, ರಾಜಕೀಯ ವಿಡಂಬನೆಗಳು ಮತ್ತು ವ್ಯಂಗ್ಯಚಿತ್ರಗಳಿಗೆ ಮಾರುಹೋದರು. ಅದರ ನಿತ್ಯ ಓದುಗರಾದರು. ಸ್ವಭಾವತಃ ಹಾಸ್ಯ ಪ್ರವೃತ್ತಿಯವರೂ, ನಗೆಗಾರರೂ ಆದ ಶಿವರಾಂ ಅವರ ಮೇಲೆ Punch ಅಪಾರ ಪ್ರಭಾವವನ್ನು ಬೀರಿತು.

ಮುಂದೆ ಅನೇಕ ವರ್ಷಗಳ ನಂತರ ಬೆಂಗಳೂರಿನಲ್ಲಿ ಸುಪ್ರಸಿದ್ಧ ವೈದ್ಯರಾಗಿದ್ದ ಶಿವರಾಂ ಅವರು Punchನಂತಹ ಹಾಸ್ಯಕ್ಕೇ ಮೀಸಲಾದ 'ಕೊರವಂಜಿ' ಎಂಬ ಕನ್ನಡ ಮಾಸಪತ್ರಿಕೆಯೊಂದನ್ನು ಸ್ಥಾಪಿಸಿ ತಾವೇ 'ರಾಶಿ' ಎಂಬ ಹೆಸರಿನಿಂದ ಅದರ ಸಂಪಾದಕರಾದರು. ಈ ಪ್ರಯತ್ನದಲ್ಲಿ ಅವರಿಗೆ ಒತ್ತಾಸೆ ನೀಡಿದವರು ಕನ್ನಡದ ಇನ್ನೊಬ್ಬ ಹಾಸ್ಯ ಪ್ರಾಚಾರ್ಯ ನಾ. ಕಸ್ತೂರಿಯವರು. ೧೯೪೨ರ ಕಾಮನಹಬ್ಬದಂದು ಜನ್ಮ ತಳೆದ 'ಕೊರವಂಜಿ–ತಿಳಿನಗೆಯ ಮಾಸಪತ್ರಿಕೆ' ಮುಂದಿನ ಇಪ್ಪತ್ತೈದು ವರ್ಷಗಳ ಕಾಲ ತನ್ನ ನಗೆ ಲೇಖನಗಳು ಮತ್ತು ವ್ಯಂಗ್ಯಚಿತ್ರಗಳೊಂದಿಗೆ ಕನ್ನಡಿಗರ ಹಾಸ್ಯದಾಹವನ್ನು ತಣಿಸತೊಡಗಿತು (ಆಧಾರ ೪).

ಕನ್ನಡ ಹಾಸ್ಯ ಸಾಹಿತ್ಯಕ್ಕೆ ರಾಶಿಯವರ, ಕೊರವಂಜಿಯ ಕೊಡುಗೆ ತುಲನಾತೀತ. ಮೊಟ್ಟ ಮೊದಲನೆಯದಾಗಿ ಕೊರವಂಜಿಯು ಉದಯೋನ್ಮುಖ ಹಾಸ್ಯ ಲೇಖಕರ ಲೇಖನಗಳಿಗೆ ತನ್ನ ಬಾಗಿಲನ್ನು ತೆಗೆಯಿತು. ರಾಶಿಯವರ ಉತ್ತೇಜನದಿಂದ ಹಾಸ್ಯ ಸಾಹಿತ್ಯದ ನುರಿತ ಮತ್ತು ಎಳೆಯ, ಲೇಖಕರ ಲೇಖನಗಳು ಕೊರವಂಜಿಯಲ್ಲಿ ಬೆಳಕು ಕಂಡವು. ನಾ.ಕ., ರುದ್ರಮ್ಮ, ಖಾರಾಂತ, ಪಾಟಾಳಿ(ಈ ಹೆಸರುಗಳೆಲ್ಲ ನಾ. ಕಸ್ತೂರಿಯವರದೆಂದು ನನ್ನ ನೆನಪು), ಟೀಯೆಸ್ಸಾರ್, ಕೇಫ಼. ಅ.ರಾ.ಸೇ., ಸುನಂದಮ್ಮ, ಶ್ರೀರಂಗ, ಗೊರೂರು, ಬುಳ್ಳ, ಭಾರತಿ, ವೈಎನ್ಕೆ. ರಾಮ್ಸಾಮಿ, ದಾಶರಥಿ, ಹಾ.ರಾ., ಗಮಾರ ಮೊದಲಾದ ಲೇಖಕರು ಮತ್ತು ಆರ್.ಕೆ. ಲಕ್ಷ್ಮಣ್, ಮೂರ್ತಿ, ಆರಗಂ ಮುಂತಾದ ವ್ಯಂಗ್ಯ ಚಿತ್ರಕಾರರು ಇವರ ಹೆಸರುಗಳೆಲ್ಲ ಕನ್ನಡದಲ್ಲಿ ಮನೆ ಮಾತಾದವು (ಆಧಾರ ೪).

ಮುಖಪುಟದಿಂದ ಹಿಡಿದು, ಒಳಗಿನ, ಕುಹಕಿಡಿಗಳು, ಉರಿಗಾಳು, ಕೊರವಾ-ವಲೋಕನ, ನವೀನ ಗಾದೆಗಳು ಮೊದಲಾದ ಅಂಕಣಗಳು, ಅಣಕವಾಡುಗಳು, ನಗೆಬರಹಗಳು, ವ್ಯಂಗ ಚಿತ್ರಗಳನ್ನು ಓದಲು, ನೋಡಲು ಪ್ರತಿ ತಿಂಗಳು ಕನ್ನಡಿಗರು ಹಾತೊರೆದು ನಿಂತರು.

ಕೊರವಂಜಿಯ-ರಾಶಿಯವರ- ಕೆಲವು ಮುತ್ತು-ರತ್ನಗಳನ್ನು ನೋಡಿ (ಆಧಾರ ೫):

'ಮಂತ್ರಿಯ ಅಳಿಯ ಯಾವುದೇ ಸರಕಾರಿ ಕೆಲಸಕ್ಕೆ ಸೇರಿದರೂ, ಸರ್ವಿಸಿನಲ್ಲಿ ವಿಷ ಏರಿದಂತೆ ಏರಿಬಿಡುತ್ತಾನೆ'.

'ಮದುವೆಯ ಮೆರವಣಿಗೆಯಲ್ಲಿ ಸರ್ವಾಲಂಕೃತರಾದ ಗಂಡಸರೂ, ಗರ್ವಾಲಂಕೃತರಾದ ಹೆಂಗಸರೂ ಹೊರಟಿದ್ದರು'

'ಪ್ರಸಿದ್ಧ ವೈದ್ಯ ಯಾರ ಮನೆಗೆ ವೈದ್ಯಮಾಡುವುದಕ್ಕೆ ಹೋದರೂ ಕೆಲವು ದಿನಗಳ ನಂತರ ವೈದೀಕಕ್ಕೆ ಖಂಡಿತ ಆಮಂತ್ರಣ ಬರುತ್ತಿತ್ತಂತೆ!'

'ಇಂಟರ್ವ್ಯೂಗೆ ಬಂದಿದ್ದ ರಾಜಕಾರಣಿಯೊಬ್ಬ ತನ್ನ ಪ್ರತಿಸ್ಪರ್ಧಿಯಾದ ರಾಶಿಯವರ ಕಡೆ, ಉಪಪತ್ನಿ, ಧರ್ಮಪತ್ನಿಯ ಕಡೆ ನೋಡುವ ಮೂದಲಿಕಾ ದೃಷ್ಟಿಯಿಂದ ನೋಡಿದ!'

'ಹೆಬ್ಬಿ ಗುಬ್ಬಾಲೆಯಲ್ಲಿಬಾವಿ ತೋಡಬೇಕಾದರೆ, ಇಲ್ಲಿ ನಮ್ಮ ವಜ್ರದುಂಗುರ ಕಳೆಧೋಯ್ತು ಅಂದರೆ ಸಾಕು, ಜನಾ ಬಂದು ಅಗೆದೂ ಅಗೆದೂ ಒಳಗಿನ ತನಕ ಹೋಗಿ ಬಿಡ್ತಾರೆ'.

'ಒಪ್ಪತ್ತುಂಡವ ರೋಗಿ
ಎರಡ್‌ಹೊತ್ತುಂಡವ ಮಂತ್ರಿ
ಮೂರ್‌ಹೊತ್ತುಂಡವ ಸೊಸೈಟಿ ಸಿಬ್ಬಂದಿ'

'ಅಪ್ಪ ಸತ್ತ, ಅಳೋ ಮಗನೇ ಅಂದರೆ
ಯಾಕಮ್ಮಾ, ಅವ ವಿಮಾ ಮಾಡಿರಲಿಲ್ವೇ ಎಂದ'.

ಇದೇ ಕಾಲದ ಹಾಸ್ಯ ಸಾಹಿತ್ಯದ ಮತ್ತೊಬ್ಬ ಅಧ್ವರ್ಯು ಶ್ರೀ ನಾ. ಕಸ್ತೂರಿಯವರು. ಕೊರವಂಜಿಯ ಸ್ಥಾಪನೆ ಮತ್ತು ಪ್ರಗತಿಯಲ್ಲಿ ಅವರ ಕೊಡುಗೆಯನ್ನು ಈಗಾಗಲೇ ಸ್ಮರಿಸಿಯಾಗಿದೆ. ಮೊದಲು ಮೈಸೂರಿನ ಬನುಮಯ್ಯ ಹೈಸ್ಕೂಲಿನಲ್ಲಿ,

ಆಮೇಲೆ ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ನಾ. ಕಸ್ತೂರಿಯವರು ತಮ್ಮ ಕೃತಿಗಳ ಮೂಲಕ, ತಮ್ಮ ಶಿಷ್ಯರ ಮೂಲಕ ಕನ್ನಡಕ್ಕೆ ಸಲ್ಲಿಸಿರುವ ಸೇವೆ ಅಮೂಲ್ಯ. ನಾ. ಕಸ್ತೂರಿಯವರು, ಬನುಮಯ್ಯ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾಗ ತಮ್ಮ ಕ್ಲಾಸಿನಲ್ಲಿದ್ದ ಹುಡುಗನೊಬ್ಬನು ಚೆನ್ನಾಗಿ ಚಿತ್ರಗಳನ್ನು ಬರೆಯುತ್ತಿದ್ದುದನ್ನು ಗಮನಿಸಿದ್ದರು. ಕೊರವಂಜಿ ಸ್ಥಾಪನೆಯಾದಾಗ ಆ ಹುಡುಗನ ಕೈಯಲ್ಲಿ ಅದರ ಮುಖಪುಟವನ್ನು ಬರೆಸಿದರು. ಆ ಮುಖಚಿತ್ರ ಮುಂದಿನ ಇಪ್ಪತ್ತೈದು ವರ್ಷ ಕೊರವಂಜಿಯ ಮುಖವಾಗಿ ಮೆರೆಯಿತು. ಕೊರವಂಜಿಯಲ್ಲಿ ವ್ಯಂಗ ಚಿತ್ರಗಳನ್ನು ಬರೆಯಲು ಅವನನ್ನು ಪ್ರೋತ್ಸಾಹಿಸಿದವರೂ ಅವರೇ! ರಾಶಿ ಮತ್ತು ಕಸ್ತೂರಿಯವರ ಆಶ್ರಯದಲ್ಲಿ ಪಳಗಿದ ಈ ಹುಡುಗ ಮುಂದೆ, ಕರ್ಣಾಟಕದಲ್ಲಿ, ಏಕೆ, ಭಾರತದಲ್ಲೇ ಸುಪ್ರಸಿದ್ಧನಾದ ವ್ಯಂಗ್ಯಚಿತ್ರಕಾರನಾದ...ಆರ್.ಕೆ. ಲಕ್ಷ್ಮಣ್.

ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗ ಕಸ್ತೂರಿಯವರು ಬರೆದು ಆಡಿಸಿದ ಆಶು ನಾಟಕಗಳು–ಗಗ್ಗಯ್ಯನ ಗಡಿಬಿಡಿ, ವರಪರೀಕ್ಷೆ, ಮತ್ತು ಕಾಡಾನೆ ಇವು ಕನ್ನಡ ಹಾಸ್ಯ ಸಾಹಿತ್ಯಕ್ಕೆ ಅವರ ಮೊದಲ ಕೊಡುಗೆಗಳು. ಮುಂದೆ ಅವರು ಮೈಸೂರಿನ ಆಕಾಶವಾಣಿಯಲ್ಲಿ ನಿರ್ದೇಶಕರಾಗಿ ಅಲ್ಲಿಂದ ಉತ್ತಮ ದರ್ಜೆಯ ಹಾಸ್ಯ ಕಾರ್ಯಕ್ರಮಗಳನ್ನು ಬಿತ್ತಿಸಿದರು. ಅವರ ಹಾಸ್ಯ ಲೇಖನ ಸಂಕಲನಗಳಾದ, ಯದ್ವಾ–ತದ್ವಾ, ಅಲ್ಲೋಲ, ಕಲ್ಲೋಲ, ಡೊಂಕುಬಾಲ, ಇವು ಅತ್ಯಂತ ಜನಪ್ರಿಯವಾದವು (ಆಧಾರ ೬). ನಾವು ದಿನನಿತ್ಯ ನೋಡುವ ಮತ್ತು ಗಮನಿಸದೇ ಇರುವ ಸನ್ನಿವೇಶಗಳಲ್ಲಿ ಹಾಸ್ಯವನ್ನು ತುಂಬಿ ಕಸ್ತೂರಿಯವರು ನಮ್ಮ ಮುಂದಿಟ್ಟರು. ಉದಾಹರಣೆಗೆ: ಕೊರವಂಜಿಯಲ್ಲಿ ಪ್ರಕಟವಾದ ಅವರ 'ನಾನು ಹೊತ್ತ ತಲೆ' ಪ್ರಬಂಧವನ್ನು ನೋಡಿ. ರೈಲು ಬಂಡಿಯಲ್ಲಿ ಕಿಕ್ಕಿರಿದು ತುಂಬಿರುವ ಜನರ ಮಧ್ಯೆ ಒಬ್ಬ, ಕಸ್ತೂರಿಯವರ ಹೆಗಲಮೇಲೆ ತಲೆಯಿಟ್ಟು ಮಲಗಿದ್ದಾನೆ. ಈ ಸಂದರ್ಭವನ್ನು ಅವರು ವಿವರಿಸಿರುವ ರೀತಿ: 'ಕಕ್ಕುಟಾಸನ, ಮರ್ಕಟಾಸನ, ಆಶ್ವಾಸನ, ಬರೀ ಉಚ್ಛ್ವಾಸನ, ಸಡಿಲಾಸನ, ಮಡಿಲಾಸನ, ಬೂದೀ ನಾಯಾಸನ, ಬೀದೀ ನಾಯಾಸನ, ಏಕಪಾದಾಸನ, ಅರ್ಧಪೃಷ್ಠಾಸನ ಮುಂತಾದ ತಪೋಭಂಗಿಗಳಲ್ಲಿದ್ದ ಆ ಜನಪದಸಮೂಹದ ನಡುವೆ ಆತ ನೆಟ್ಟನೆಯ ಬೆನ್ನು, ಸೊಟ್ಟನೆಯ ತಲೆ ಸಹಿತ ಹೊಸ ಆಸನ ಹಾಕಿ ನಿದ್ದೆ ಮಾಡುತ್ತಿದ್ದ. ನೆರೆಯವನೇ ನನಗೆ ಹೊರೆಯಾದ. ಆ ಗದ್ದಲೆಯ ಗಡಣದಲ್ಲಿ ಅವನೊಬ್ಬನೇ ಪ್ರಶಾಂತ ಮೂರ್ತಿ'.

ನಾ. ಕಸ್ತೂರಿಯವರ ಮುಖ್ಯ ಹಾಸ್ಯಕೃತಿ 'ಅನರ್ಥಕೋಶ'. ಅಮೆರಿಕನ್ ಲೇಖಕ ಅಂಬ್ರೋಸ್ ಬಿಯರ್ಸ್ ೧೯೧೧ರಷ್ಟು ಹಿಂದೆಯೇ ರಚಿಸಿದ 'ದಿ ಡೆವಿಲ್ಸ್ ಡಿಕ್ಷನರಿ'ಯ

ಧಾಟಿಯಲ್ಲಿ ಬರೆದ, ಈ ಪುಸ್ತಕ ಅದರ ಹೆಸರೇ ಹೇಳುವಂತೆ ಒಂದು ಅನರ್ಥಕೋಶ. ಕನ್ನಡದ ಪದಗಳಿಗೆ ಕೊಂಕು ಅರ್ಥಗಳನ್ನು ಕೊಟ್ಟು ಓದುಗರನ್ನು ನಗೆಗಡಲಿನಲ್ಲಿ ತೇಲಿಸುವುದೇ ಅದರ ಉದ್ದೇಶ. ಒಂದು ವಿಷಯದಲ್ಲಿ ಕಸ್ತೂರಿಯವರು ಬಿಯರ್ಸ್‌ಗಿಂತ ಒಂದು ಹೆಜ್ಜೆ ಮುಂದೆ ಹೋದರು. ಕನ್ನಡದಲ್ಲಿ ಹೊಸ ಪದಗಳನ್ನೇ ನಿರ್ಮಿಸಿ ಅವಕ್ಕೆ ಕೊಂಕು ಅರ್ಥಕೊಟ್ಟರು (ಆಧಾರ ೭). ಈ ನಿಘಂಟಿನಲ್ಲಿರುವ ಕೆಲವು ಪದಗಳನ್ನು ನೋಡಿ:

ಬೆಟ್ಟ–ಬೋರಲು ಇರಿಸಿದ ಹಳ್ಳ

ಮೂಗು–ಕೆಲವರ ನಶ್ಯದ ಡಬ್ಬಿ

ತೊಂದ್ರಜಿತ್–ತೊಂದರೆಗಳನ್ನು ಜಯಸಿದ್ದವನು

ಈಜಾನುಬಾಹು–ಈಜಲುಅನುಕೂಲವಾಗುವಷ್ಟು ಬಾಹುಗಳನ್ನುಳ್ಳವನು

ಅನಾಮದೇಹ–ನಾಮ ಬಳಿಯದ ಶ್ರೀವೈಷ್ಣವ ದೇಹ

ಆರತಿ ತಟ್ಟೆ– ಕೀರ್ತನೆಯನ್ನು ಕೇಳಲು ಬಂದಿರುವ ಮಹಾಭಕ್ತರನ್ನು ಚದುರಿಸಲು ಉಪಯೋಗಿಸುವ ಒಂದು ಯಂತ್ರ.

ಏಕಛತ್ರಾಧಿಪತಿ–ಒಂದೇಛತ್ರಿ ಇರುವವನು

ಗುದ್ದಾಮಕವಿ–ಎಲ್ಲ ವಿಮರ್ಶಕರ ಕೈಯಿಂದ ಗುದ್ದಿಸಿಕೊಂಡ ಕವಿ

ಊಳಿಡುವುದು–ರಾತ್ರಿ ಹೊತ್ತು ನಾಯಿ ಊಳಿಟ್ಟರೆ ಸಾವಿನ ಸೂಚನೆ ಎನ್ನುತ್ತಾರೆ. ಏಕೆಂದರೆ ನೆರೆಹೊರೆಯವರು ಆ ನಾಯಿಯನ್ನು ಕಲ್ಲು ಹೊಡೆದು ಸಾಯಿಸುವ ಸಂದರ್ಭವಿದೆ.

ಹೀಗೆ ಆಧುನಿಕ ಕನ್ನಡ ಹಾಸ್ಯಸಾಹಿತ್ಯ ತನ್ನ ಎಳೆತನದಲ್ಲಿ ಸ್ಫೂರ್ತಿಯನ್ನು ಬಹುಮಟ್ಟಿಗೆ ಪಾಶ್ಚಾತ್ಯ ಹಾಸ್ಯ ಸಾಹಿತ್ಯದಿಂದ, ಅದರಲ್ಲೂ ಇಂಗ್ಲೀಷ್‌ನಿಂದ ಪಡೆದುಕೊಂಡಿತ್ತು. ಇಂಗ್ಲಿಷ್ ನಮ್ಮ ದೇಶದಲ್ಲಿ, ಆಡಳಿತ ಭಾಷೆಯಾಗಿದ್ದುದರಿಂದ ಮತ್ತು ಬಳಕೆಯ ಭಾಷೆಯಾಗಿದ್ದುದರಿಂದ, ಇಂಗ್ಲಿಷ್ ಮತ್ತು ಅಮೆರಿಕನ್ನರ ಹಾಸ್ಯಪ್ರಜ್ಞೆ ನಮ್ಮ ಹಾಸ್ಯಪಟುಗಳ ಗಮನ ಸೆಳೆದದ್ದು, ಮತ್ತು ಈ ಹಾಸ್ಯ ಪ್ರಜ್ಞೆಯಿಂದ ನಮ್ಮ ನಗೆ ಲೇಖಕರು ಪ್ರಭಾವಿತರಾದದ್ದು ಆಶ್ಚರ್ಯವೇನಲ್ಲ.

ಬೆಂಗಳೂರು, ಹಳೇ ಮೈಸೂರು ಪ್ರಾಂತ್ಯದಲ್ಲಿ ರಾಶಿಯವರ (ಮತ್ತು ನಾ.ಕಸ್ತೂರಿಯವರ) ಸೈನ್ಯ ಕಾರ್ಯಾಚರಣೆ ನಡೆಸುತ್ತಿದ್ದ ಕಾಲದಲ್ಲೇ, ಪಶ್ಚಿಮ ಕರಾವಳಿಯ ನಗೆ ಲೇಖಕರ ದಂಡು ತನ್ನ ಧಾಳಿಯನ್ನು ಪ್ರಾರಂಭಿಸಿತ್ತು. ದಕ್ಷಿಣ ಕನ್ನಡದಲ್ಲಿ ೧೯೩೦ರ ಹೊತ್ತಿಗೆ ಪಂಜೆ ಮಂಗೇಶರಾವ್ ಅವರಿಂದ ಆರಂಭವಾದ

ನಗೆ ಚಳುವಳಿ, ಉಳ್ಳಾಲ ಮಂಗೇಶರಾವ್, ಪೇಜಾವರ ಸದಾಶಿವ ರಾವ್, ಕಡೆಂಗೊಡ್ಲು ಕೃಷ್ಣಭಟ್ಟ, ಹುರುಳಿ ಭೀಮರಾವ್, ಎಂ.ಎನ್.ಕಾಮತ್, ಪಡುಕೋಣೆ ರಮಾನಂದ ರಾವ್, ಕುಡ್ಡಿ ವಾಸುದೇವ ಶಣೈ, ಜೆ.ವಾಮನಭಟ್ಟ, ರಮಾನಂದ ಘಾಟೆ ಮೊದಲಾದವರ ಲೇಖಣಿಯಿಂದ ಬಹು ತ್ವರಿತವಾಗಿ ಮುಂದುವರೆಯಿತು. ಆಗಿನ ಕರಾವಳಿ ಪತ್ರಿಕೆಗಳಾದ ಸುವಾಸಿನಿ, ಕಂಠೀರವ, ಉದಯ ಭಾರತ, ಸ್ವದೇಶಾಭಿಮಾನ, ಮುಂತಾದವು ಹಾಸ್ಯ ಬರಹಗಳಿಗೆ ಪ್ರತ್ಯೇಕವಾದ ಸ್ಥಾನವನ್ನೇ ಮೀಸಲಿಟ್ಟು ಬೆಳೆಸಿದವು. ೧೯೩೩ರಲ್ಲಿ ಮಂಗಳೂರಿನ ಮಿತ್ರ ಮಂಡಲಿಯವರು ಪ್ರಕಟಿಸಿದ ನಗೆಬರಹಗಳ ಸಂಕಲನದಲ್ಲಿ ಉತ್ತಮ ನಗೆಸಾಹಿತ್ಯವನ್ನು ಕಾಣಬಹುದು. (ಆಧಾರ ೪)

ಧಾರವಾಡದಲ್ಲಿ ಸಾಧನಕೇರಿಯ ಬೇಂದ್ರೆಯವರ ಗೆಳೆಯರ ಗುಂಪಿನ ಚುರ್ ಮುರಿ ಕ್ಲಬ್, ಸಾಹಿತ್ಯ ಕ್ರೀಡೆಗಳಿಂದ ಹಿಡಿದು ಎಲ್ಲ ಪ್ರಾಕಾರದ ಹಾಸ್ಯಕ್ಕೂ ಚಾಲನೆ ಕೊಟ್ಟಿತ್ತು. ಬೇಂದ್ರೆಯವರೆ ಸ್ವತಃ ನಗೆ ನಾಟಕ, ಅಣಕವಾಡು, ಹರಟೆಗಳನ್ನು ಬರೆದರು. ಶ್ರೀರಂಗರ ನಾಟಕಗಳು (ನಗೆ ಮಿಂಚು ಹರಿಸಿದ್ದವು)..... 'ಕನ್ನಡದ ಚುಟುಕು' ಬ್ರಹ್ಮ, ಶ್ರೀ. ದಿನಕರ ದೇಸಾಯಿಯವರು ಹನಿಗವನದ ಪಿತಾಮಹರು ಎಂದರೆ ತಪ್ಪಾಗಲಾರದು. (ಆಧಾರ ೪)

ತಮ್ಮ ನವಿರಾದ ಹಾಸ್ಯದ ಕಥೆಗಳು, ವ್ಯಕ್ತಿಚಿತ್ರಗಳು, ಜನಜೀವನ ಚಿತ್ರಣಗಳನ್ನೊಳಗೊಂಡ ಹತ್ತಾರು ಪುಸ್ತಕಗಳನ್ನು ರಚಿಸಿ ಕನ್ನಡ ಹಾಸ್ಯ ಸಾಹಿತ್ಯದ ಮೇಲೆ ಅಚ್ಚಳಿಯದ ಮುದ್ರೆ ಹಾಕಿದವರು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು. 'ಗೊರೂರು' ಎಂದೇ ಮನೆಮಾತಾಗಿರುವ ಅವರ ಮೊದಲ(?) ಕೃತಿ 'ಗರುಡಗಂಬದ ದಾಸಯ್ಯ'(೧೯೩೯). ಇದೊಂದು ಹಾಸ್ಯ ಸಂಕಲನ. ಅದರ ನಂತರ ಅವರ ಹಾಸ್ಯ ಸಾಹಿತ್ಯ ಅವ್ಯಾಹತವಾಗಿ ಮುಂದುವರೆಯಿತು. 'ಹಳ್ಳಿಯ ಹತ್ತು ಸಮಸ್ತರು', 'ನಮ್ಮ ಊರಿನ ರಸಿಕರು', ಹೇಮಾವತಿ', 'ಹಳ್ಳಿಯ ಚಿತ್ರಗಳು', 'ವೈಯಾರಿ', 'ಮೆರವಣಿಗೆ', 'ಕೊನಷ್ಟೈಲ ಹಾಸ್ಯಕಥೆಗಳು' ಇವೆಲ್ಲ ಮನೆಮನೆಯಲ್ಲಿ ಹಾಸ್ಯರಸ ಹರಿಸಿದವು. ಗೊರೂರು ಅವರ ಹಾಸ್ಯ ತಿಳಿಹಾಸ್ಯ ಜನವನ್ನು ಬಡಿದೆಬ್ಬಿಸುವ ಹಾಸ್ಯವಲ್ಲ. ಪ್ರಧಾನವಾಗಿ ಹಾಸ್ಯ ಸನ್ನಿವೇಶಗಳು ಮತ್ತು ದಿನನಿತ್ಯದ ಸನ್ನಿವೇಶಗಳನ್ನೇ ಹಾಸ್ಯ ಲೇಪನ ಮಾಡಿ ಹೇಳುವ ಅವರ ರೀತಿ ಮನೋಹರವಾಗಿದೆ. ರೋಡ್ ಎಂಜಿನ್, ತಿಗಣೆ, ಕ್ಷೌರ, ಪುಂಗಿ, ಸೇತುವೆ ಇವೆಲ್ಲ ಗೊರೂರರ ಪುಸ್ತಕಗಳಲ್ಲಿ ಹಾಸ್ಯ ಭರಿತವಾಗಿ ಮೆರೆಯುತ್ತವೆ.

ಗೊರೂರರ ಹಾಸ್ಯ ಕೃತಿಗಳಲ್ಲಿ, ಇಂಗ್ಲಿಷ್ ಅಥವಾ ಇತರ ಪರಭಾಷಾ ಹಾಸ್ಯ ಸಾಹಿತ್ಯದ ಪ್ರಭಾವ ಕಾಣುವುದಿಲ್ಲ. ಅವರ ಕೃತಿಗಳು ಮುಖ್ಯವಾಗಿ ನಮ್ಮ ಜನಜೀವನದಲ್ಲಿ ಕಾಣುವ ಸನ್ನಿವೇಶಗಳ ವಿಶಿಷ್ಟ ಚಿತ್ರಣ.

'ನಮ್ಮ ಊರಿನ ರಸಿಕರು'ವಿನಲ್ಲಿನ ಈ ವಿನೋದ ಪ್ರಕರಣವನ್ನು ಓದಿ. (ಮದುವೆಯಲ್ಲಿ) ಉಂಜಲು ನಡೆಯುವಾಗ ಹೊಸ ದಂಪತಿಗಳಲ್ಲದೆ, ಮತ್ತೊಂದು ಜೊತೆ ಉಂಜಲಿನ ಮೇಲೆ ಕುಳಿತುಕೊಳ್ಳುವುದು ವಾಡಿಕೆ............ಅಷ್ಟರಲ್ಲಿ ಹೆಂಗಸರಲ್ಲಿ ಗುಜು ಗುಜು ಉಂಟಾಯಿತು......ನಡುಮನೆಯಿಂದ ಒಂದು ಹುಡುಗಿಯೂ, ಒಬ್ಬ ಹುಡುಗನೂ ಒಳ್ಳೆಯ ರತ್ನಾಭರಣಗಳಿಂದ ಅಲಂಕೃತರಾಗಿ ಸಭಾ ಮಧ್ಯಕ್ಕೆ ಬಂದು ಸಭಿಕರಿಗೆ ವಂದಿಸಿ ಉಂಜಲಿನ ಮೇಲೆ ಕುಳಿತುಕೊಂಡರು. ಹುಡುಗನೇನೋ ರಾಜು ಎಂದು ನೋಡಿದಕೂಡಲೆ ಗೊತ್ತಾಯಿತು.ಹುಡುಗಿ ಯಾರೆಂದು ತಿಳಿಯಲಿಲ್ಲ ....ಹುಡುಗಿಯಲ್ಲ, ಹೆಣ್ಣು ವೇಷ ಹಾಕಿದ ಹುಡುಗ ಎನ್ನುವುದು ಆಮೇಲೆ ತಿಳಿದರೂ ಸಹ ಹುಡುಗ ಯಾರು ಎನ್ನುವುದು ಗೊತ್ತಾಗಲಿಲ್ಲ.....ನಿಜವಾದ ಹುಡುಗಿಯರಿಗಿಂತ ವೇಷದ ಹುಡುಗಿಯೇ ಬಹಳ ಚೆಲುವಾಗಿ ಕಂಡಳು. ಕಿಟ್ಟನೂ (ಮದುವೆ ಗಂಡು) ಕೂಡ ಬೆರಗಾಗಿ ಹುಡುಗಿಯ ಕಡೆ ನೋಡುತ್ತಿದ್ದನು. ಕೊನೆಗೆ ವೇಷದ ಹುಡುಗನು, ಭಟ್ಟನ ಭಾವ ಮೈದುನನೆಂದು ಗೊತ್ತಾಗಿ ನೆರೆದಿದ್ದವರೆಲ್ಲ ಬಹುವಾಗಿ ನಕ್ಕರು..' (ಆಧಾರ ೮). ಹೀಗೆ ಗೊರೂರರ ಹಾಸ್ಯ ಧುಮುಧುಮುಕಿ ಹರಿಯದೇ ತುಂಬಿದ ಹೊಳೆಯಂತೆ ತಿಳಿಯಾಗಿ ಹರಿಯುತ್ತದೆ.

ಇದೇ ಕಾಲದ ಇನ್ನೊಬ್ಬ ಅತಿ ಮುಖ್ಯ ಹಾಸ್ಯ ಲೇಖಕರೆಂದರೆ ಧಾರವಾಡದ 'ಶ್ರೀರಂಗ' ಅವರು. ಆರ್.ವ್ಹಿ. ಜಾಗೀರದಾರ ಎಂಬ ಹೆಸರಿನಲ್ಲಿ ಕಾಲೇಜು ಪ್ರಾಧ್ಯಾಪಕರಾಗಿದ್ದವರು, ಆದ್ಯ ರಂಗಾಚಾರ್ಯ ಎಂಬ ಹೆಸರಿನಲ್ಲಿ ಖ್ಯಾತ ಕನ್ನಡ, ಸಂಸ್ಕೃತ ಮತ್ತು ಮರಾಠಿ ವಿದ್ವಾಂಸರಾಗಿದ್ದವರು, ಶ್ರೀರಂಗ ಎಂಬ ಹೆಸರಿನಲ್ಲಿ ಕನ್ನಡ ನಾಟಕಗಳನ್ನು, ಇತರ ಪ್ರಕಾರಗಳ ಸಾಹಿತ್ಯ ರಚನೆಯನ್ನು ಮಾಡಿದವರು ಅವರು. ಉತ್ತರ ಕರ್ನಾಟಕದ ವಿಲಾಸೀ ರಂಗಭೂಮಿಗೆ, ನಾಟಕದ ವಸ್ತು, ವಿನ್ಯಾಸ ಮತ್ತು ಪ್ರದರ್ಶನ ತಂತ್ರಗಳಲ್ಲಿ ಆಧುನಿಕತೆಯನ್ನು ತಂದು ಕೊಟ್ಟವರು ಶ್ರೀರಂಗರು. ಹಾಸ್ಯ, ವಿಡಂಬನೆ, ವ್ಯಂಗ್ಯ, ಕಟಕಿಗಳ ಮೇಲು ಶಿಖರಗಳನ್ನು ತಮ್ಮ ನಾಟಕಗಳಲ್ಲಿ ಮುಟ್ಟಿದವರು ಅವರು (ಆಧಾರ ೬, ಪುಟ ೧೮೨). ಕೈಲಾಸಂ ಅಂತೆಯೇ ಅಷ್ಟೇ ಮೌಲ್ಯದ, ಅಷ್ಟೇ ಮೊತ್ತದ ಅಷ್ಟೆ ಪ್ರಾಮುಖ್ಯತೆಯ ಕನ್ನಡದ ನಾಟಕಗಳನ್ನು ಬರೆದವರು ಅವರು. 'ಶೋಕ ಚಿತ್ರ', 'ಕತ್ತಲೆ–ಬೆಳಕು', 'ಕೇಳು ಜನಮೇಜಯ', 'ಸ್ವರ್ಗಕ್ಕೆ ಮೂರೇ ಬಾಗಿಲು' ಇವುಗಳಿಂದ ಒಳಗೊಂಡು ಹತ್ತಾರು ನಾಟಕಗಳು, ಪ್ರಬಂಧಗಳು, ಕಾದಂಬರಿಗಳನ್ನು ಬರೆದಿದ್ದಾರೆ. ಶ್ರೀರಂಗರ ಕೃತಿಗಳಲ್ಲಿನ ನಗೆಯ ಚಾಟಿ ಅವರ ವೈಶಿಷ್ಟ್ಯ. ಅವರ ಹರಟೆಗಳ ಬಗ್ಗೆ ಬರೆಯುತ್ತ, ಶ್ರೀ ಅ.ರಾ. ಮಿತ್ರ ಅವರು ಹೇಳಿರುವುದನ್ನು ಕೇಳಿ: 'ಶ್ರೀರಂಗ ಮತ್ತು ಕಾರಂತರಿಬ್ಬರೂ ಹರಟೆಗಳ ರಚನೆಯಲ್ಲಿ ಸಮಾನ ಧರ್ಮಿಗಳು ಎನ್ನಬಹುದು. ಶ್ರೀರಂಗರ 'ಸ್ವಲ್ಪದ್ರಲ್ಲಿ ಸ್ವಾರಸ್ಯ ಮತ್ತು ಇತರ ಹರಟೆಗಳು', ಕಾರಂತರ

'ಮೈಲಿಗಲ್ಲಿನೊಡನೆ ಮಾತುಕತೆಗಳು' ಮುಖ್ಯವಾಗಿ ಗಮನಿಸಬೇಕಾದ ಹರಟೆ(ಯ ಸಂಕಲನ)ಗಳಾಗಿವೆ. ನನ್ನ ಹರಟೆಗಳ ಹಿನ್ನೆಲೆಯಲ್ಲಿ ವಿಚಾರಗಳ ಬೆಟ್ಟವೇ ನಿಂತಿದೆ ಎಂಬ ಶ್ರೀರಂಗರ ಹೇಳಿಕೆ ಇವರಿಬ್ಬರ ಹರಟೆಗಳಿಗೂ ಅನ್ವಯಿಸುತ್ತವೆ. ಇಬ್ಬರೂ ವಿಡಂಬನೆಯ ಕೊಕ್ಕನ್ನು ಚಾಚಿ ಸಮಾಜ ಜೀವನಾಕಾಶದಲ್ಲಿ ಹದ್ದುಗಳಂತೆ ಹಾರಾಡಿದ್ದಾರೆ. ವ್ಯಂಗ್ಯ ಶೈಲಿ, ಮನೋರಂಜಕತೆ, ಚಿತ್ರರೂಪಕತೆ ಇವರ ಬರಹಗಳ ಮುಖ್ಯ ದಿಕ್ಕುಗಳಾಗಿವೆ' (ಆಧಾರ ೧೪).

ತಮ್ಮ ಮರಣವನ್ನು ತಾವೇ ಪ್ರಕಟಿಸಿ, ತಮ್ಮ ಬಗ್ಗೆ ತಾವೇ ಕಟು ಟೀಕೆಯ ವಿಮರ್ಶಾತ್ಮಕ ಲೇಖನವನ್ನು ಬರೆದಿರುವವರು ಕನ್ನಡದಲ್ಲಿ (ಪ್ರಾಯಶಃ ಭಾರತದಲ್ಲೇ) ಶ್ರೀರಂಗರೊಬ್ಬರೇ! 'ಅವರ ಸ್ವಂತ ಶ್ರಾದ್ಧ' ಎಂಬ ಲಲಿತ ಪ್ರಬಂಧವನ್ನು ನೋಡಿ...... 'ನಾನು ಸತ್ತರೆ ಮೂವರು ಸತ್ತಂತೆ' ಎಂದು ಮರಣದ ಹಾಸಿಗೆಯ ಮೇಲೆಯೇ ಶ್ರೀರಂಗರು ನುಡಿದರೆಂಬ ಸುದ್ದಿ ಪ್ರಕಟವಾದಾಗ ಎಷ್ಟು ಜನರು ಆ ಮಾತಿನ ಮರ್ಮವನ್ನು ತಿಳಿದು ಕೊಂಡಿದ್ದರು? ಶ್ರೀರಂಗ, ಆರ್.ವ್ಹಿ. ಜಾಗಿರದಾರ, ಆದ್ಯ ರಂಗಾಚಾರ್ಯ ಈ ಮೂವರೂ ಒಂದೇ ಏಟಿಗೆ ಮರಣವನ್ನೈದಿದರು. ಶ್ರೀರಂಗರ ಮೇಲಿನ ಮೂರು ಹೆಸರುಗಳು ಮೂರು ಬೇರೆ ಬೇರೆ ವ್ಯಕ್ತಿಗಳನ್ನೇ ಸೂಚಿಸುತ್ತವೆ ಎಂದು ಹೇಳಬಹುದು. ಕೊನೆಯ ತನಕ ಈ ಮೂವರಲ್ಲಿ ಒಬ್ಬನೂ ನಿಶ್ಚಿತವಾಗಿ ಉಳಿದಿಬ್ಬರನ್ನು ಜಯಿಸಲಿಲ್ಲ. ಅಂತೆಯೇ ಶ್ರೀರಂಗರ ಜೀವನಕತೆ ಎಂದರೆ 'From failure to glorious failure' ಎಂಬ ರೀತಿಯಲ್ಲಿ ಸಾಗಿತ್ತು. 'ಸತ್ತ ಎಮ್ಮೆಗೆ ಸೇರು ತುಪ್ಪ' ಎಂಬ ಗಾದೆಯಂತೆ ಅನೇಕರು ಅನೇಕ ಒಳ್ಳೆಯ ಮಾತನ್ನೇನೋ ಆಡಿದ್ದಾರೆ. ಮೃತರನ್ನು ನಿಂದಿಸಬೇಕೆಂಬ ಇಚ್ಛೆ ನನಗೂ ಇಲ್ಲ. ಆದರೂ, 'ಶ್ರೇಷ್ಠ ನಾಟಕಕಾರ', 'ಸಾಮಾಜಿಕ ಕ್ರಾಂತಿವೀರ', 'ಪ್ರತಿಭಾವಂತ ವಿಚಾರ ಶೂರ', 'ಶೀಲ ಸಂಪನ್ನಚಾರಿತ್ರ್ಯ ಧೀರ', 'ಆಧುನಿಕ ಕನ್ನಡ ಗದ್ಯ ವಿಧಾತಾ', 'ರಂಗಭೂಮಿಯ ಉತ್ತುಂಗ ಶಿಖರ'– ಇಂತಹ ವಿಶೇಷಣಗಳನ್ನು ಉಪಯೋಗಿಸಿದವರಿಗೆ ಆ ಶಬ್ದಗಳ ಮಹತ್ವವೂ ಗೊತ್ತಿಲ್ಲ, ಶ್ರೀರಂಗರ ಸ್ವಭಾವವೂ ತಿಳಿದಿಲ್ಲ ಎಂದೇ ಹೇಳಬೇಕಾಗುವುದು.........'ತೀರ ಮರಣೋನ್ಮುಖವಾದಾಗಲೇ ರೋಗಿ ತನ್ನ ಕಡೆ ಬರುವಂತೆ ಆಕರ್ಷಿಸುವುದು ಕೆಲವು ಡಾಕ್ಟರರ ಭಾಗ್ಯವಿದೆ. ಹಾಗೆ, ಸಾಯಲಾಗಿದ್ದ ವಿಷಯಗಳ ಬಗ್ಗೆ ಆರ್ಭಟಿಸುವ ಭಾಗ್ಯ ಶ್ರೀರಂಗನದೇನೋ! ಅಂತೂ ಕೊನೆಯ ಸಲ ಈ ವ್ಯಕ್ತಿಗಾಗಿ ನನಗೆ ನಿರಾಶೆಯಾಯಿತು'.(ಆಧಾರ ೧೫)

ಕನ್ನಡದ ಹಾಸ್ಯ ಸಾಹಿತ್ಯದಲ್ಲಿ ಜಿ.ಪಿ. ರಾಜರತ್ನಂ ಅವರದು ಬಹು ಮುಖ್ಯ ಸ್ಥಾನ. ಅವರ 'ರತ್ನನ ಪದಗಳು', 'ನಾಗನ ಪದಗಳು'–ಕವನ ಸಂಕಲನಗಳೂ, ಮತ್ತು

'ನರಕದ ನ್ಯಾಯ'ದಂತಹ ನಾಟಕಗಳೂ 'ಮಹಾಕವಿ ಪುರುಷಸರಸ್ವತಿ', 'ರಾಘವಾಂಕನ ಹಲ್ಲು'ವಿನಂತಹ ಗ್ರಂಥಗಳೂ ನಮ್ಮನ್ನು ನಕ್ಕು ನಲಿಸಿವೆ. ರಾಜರತ್ನಂ ಕನ್ನಡ ಹಾಸ್ಯ ಸಾಹಿತ್ಯಕ್ಕೆ ಹೊಸ ದಾರಿಯನ್ನೇ ತೋರಿಸಿದರು. ಬಹುವಾಗಿ ಅವರು ಉಪಯೋಗಿಸಿದ ಭಾಷೆ, ಗ್ರಾಮ್ಯ, ಪ್ರಕಾರ, ಕವನ. ಅವರ ಒಬ್ಬ ನಾಯಕ ಹಳ್ಳಿಯಲ್ಲಿ ಹುಟ್ಟಿಬೆಳೆದ ಹೆಂಡಕುಡುಕ.ಇನ್ನೊಬ್ಬನೂ ಹಳ್ಳಿಯ ಗಮಾರನೇ. ಈ 'ಅಸಂಸ್ಕೃತ'ರಿಬ್ಬರ ಬಾಯಲ್ಲಿ ಬರುವ, ಗ್ರಾಮ್ಯ ಭಾಷೆಯ, ಭಾಷಾಪ್ರೇಮದ, ರಾಷ್ಟ್ರಪ್ರೇಮದ ಗೀತೆಗಳು, ವೇದಾಂತದ ತುಣುಕುಗಳು ಕನ್ನಡಿಗರ ಮನಸ್ಸನ್ನು ಸೂರೆ ಹೊಡೆದಿವೆ. ಅದರೊಳಗಿನ ಹಾಸ್ಯ ಹುಚ್ಚು ಹೊಳೆಯಾಗಿ ಹರಿಯುತ್ತದೆ :

ಯಿಸ್ನು ಪಡಚ
ಪದ್ವಿ ನೋಡ್ಕೊಂಡ್ ದೊಡ್ಡೋವ್ನ್ ಅನ್ನೋದ್
ಲೋಕಕ್ ಒಂದ್ ಆಳ್ ರೋಗ
ಇದನ್ ಕಾಣ್ಬೌದ್ ಎಲ್ಲಾರೂನೆ
ಇಸ್ನೂನ್ ಒಗಳೋದ್ರಾಗ!

ಏನ್ ಇಸ್ನೂನೋ! ಬೆಪ್ಪಂಗ್ ಬಿದ್ದೌನ್
ಆಲಿನ್ ಸೌಂದ್ರದ್ ಮದ್ಯ!
ಆಲ್ನಲ್ ಬೆರಳಾಕ್ ಚೀಪ್ತಾನಿರಾಕ್
ಅಸ್ಮಗೂನ ಸುದ್ದ?

ಬುಲ್ಡೇಲ್ ಔನ್ಗ್ ಒಂದ್ ಇಂಕ್ರಾನಾರ
ಬುದ್ದೀ ಗಿದ್ದೀ ಇದ್ರೆ!
ಯೋಚ್ನೆ ಬೇಡ್ವ–ಯಾವಾಗ್ನಾರ
ಆಲ್ ಒಡೆದ್ ಉಳ ಬಿದ್ರೆ!

ನಾನೇನಾರ ಯಿಸ್ನಾಗಿದ್ರೆ
ಗೊತ್ತಾ ಏನ್ಮಾಡ್ತಿದ್ದೆ?
ಎಂಡದ್ ಸೌಂದ್ರದ್ ಮದ್ದಕ್ಕೋಗಿ
ಝಾಂಡಾ ಆಕ್ಬುಡ್ತಿದ್ದೆ.

ಸೇಸನ್ ಸಾವ್ರ ತಲೆಗಳ್ಗೊವೆ
ಸಾಲಾ ಇಸ್ಕೊಂಬುಟ್ಟು
ಸೌಂದ್ರಕ್ ಬಾಯಿಟ್ ಈರ್ದಾಂತಂದ್ರೆ
ಸೌಮ್ದ್ರುಕ್ ಸೌಂದ್ರೇ ಚಟ್ಟು!

ಬುದ್ದಿ ಇದ್ದೋರ್ಗ್ ಎಲ್ಲೈತ್ ಸಕ್ತಿ?
ಏನೇಳ್ಕೊಂಡ್ ಏನ್ಬತ್ತು!
ಸಕ್ತಿ ಇಲ್ದೋರ್ಗ್ ಬುದ್ದಿ ಇಲ್ದಿದ್ರ್
ಅದೂ ಒಂದು ಗತ್ತು!

ದೊಡ್ಡೋನ್ ಇಸ್ನು ಕಲ್ತೊಕ್ಕೇ ಬಾರ್ದಾ
ಚಿಕ್ಕೋನ್ ಕುಡುಕನ್ ಸೇರಿ!
ಚೆ!ಚೆ!ಚೆ!ಚೆ! ಎಲ್ಲಾರ್ ಉಂಟ!
ಆಲ್ನಲ್ಲೇ ಔನ್ ಗೋರಿ! (ಆಧಾರ ೯)

ರಾಜರತ್ನಂ ಅವರ ಸಾಹಿತ್ಯದ ಸವಿ ಆಸ್ವಾದಿಸಿದವರಿಗೇ ಗೊತ್ತು.

ಐವತ್ತರ ದಶಕದಲ್ಲಿ ಹಾಸ್ಯ ನಾಟಕಗಳನ್ನು ಬರೆದು ಜನಪ್ರಿಯರಾದ ನಾಟಕಕರ್ತರು ಶ್ರೀ ನರಸಿಂಗರಾವ್ ಪರ್ವತವಾಡಿಯವರು. ಇವರು ಪರ್ವತವಾಣಿ ಎಂಬ ಹೆಸರಿನಲ್ಲಿ ನಲವತ್ತೈದಕ್ಕೂ ಮೀರಿ ನಾಟಕಗಳನ್ನು ಬರೆದರು. ಇವರ ನಾಟಕಗಳಲ್ಲಿ ಅನೇಕವು ಆಂಗ್ಲ ನಾಟಕಗಳಿಂದ ಸ್ಫೂರ್ತಿ ಪಡೆದವೇ. ಆದರೆ ಅವು ಅನುವಾದಗಳಲ್ಲ. ಇಂಗ್ಲಿಷ್ ನಾಟಕದ ಕಥಾ ಸನ್ನಿವೇಶವನ್ನು ನಮ್ಮ ಸಮಾಜಕ್ಕೆ ಅಳವಡಿಸಿಕೊಂಡು ಅತ್ಯಂತ ನೈಸರ್ಗಿಕವಾಗಿ ನಮ್ಮ ನಡೆನುಡಿಗಳನ್ನು ಪ್ರತಿಬಿಂಬಿಸುವ ಉತ್ತಮ ಹಾಸ್ಯ ನಾಟಕಗಳು. ಅವರ 'ಉಂಡಾಡಿ ಗುಂಡ' ಶೇಕ್ಸ್‌ಪಿಯರನ 'She Stoops to Conquer'ಅನ್ನು ಅವಲಂಬಿಸಿದ್ದು. ಆದರೆ ಪರ್ವತವಾಣಿಯವರೇ ಹೇಳುವಂತೆ ಇಲ್ಲಿನ 'She' stoopಊ ಮಾಡುವುದಿಲ್ಲ, conquerಊ ಮಾಡುವುದಿಲ್ಲ.'ಮಾತೇ ಆಡುವುದಿಲ್ಲ ಎಂದರೂ ತಪ್ಪಾಗಲಾರದು'. ಅಂತೆಯೇ ಅವರ 'ಬಹದ್ದೂರ್ ಗಂಡ' ಶೇಕ್ಸ್‌ಪಿಯರಿನ 'Taming of the Shrew'ವಿನಿಂದ ಪ್ರೇರಿತವಾದುದು. ಪರ್ವತವಾಣಿಯವರ ಈ ನಾಟಕಗಳನ್ನು ಓದಿದಾಗ ಅವು ಅನುವಾದಗಳು ಎಂದೇನಿಸುವುದಿಲ್ಲ.

ಕನ್ನಡ ವಿಲಾಸೀ ರಂಗಭೂಮಿಯಲ್ಲಿ ಪರ್ವತವಾಣಿಯವರ ನಾಟಕಗಳು ಕೈಲಾಸಂ ನಾಟಕಗಳಷ್ಟೇ ಜನಪ್ರಿಯವಾಗಿ ಮೆರೆದವು. ಆದರೆ ಕೈಲಾಸಂ ಅವರ ನಾಟಕಗಳಿಗೂ

ಪರ್ವತವಾಣಿಯವರ ನಾಟಕಗಳಿಗೂ ಒಂದು ದೊಡ್ಡ ವ್ಯತ್ಯಾಸವಿದೆ. ಕೈಲಾಸಂ ಅವರ ನಾಟಕಗಳಲ್ಲಿ ಚಮತ್ಕಾರವಾದ ಮಾತುಗಳು, ಶ್ಲೇಷೆಗಳೂ(ಎರಡರ್ಥ ಬರುವಂಥ ಪದಗಳು–Pun), ಬೆರಕೆಯ ಭಾಷಾ ಚಾತುರ್ಯದ ಉಪಯೋಗ ಮತ್ತು ಸಮಾಜದ ಸುಧಾರಣೆಯ ಧ್ಯೇಯ, ಇವು ಹೇರಳವಾಗಿದ್ದರೆ, ಪರ್ವತವಾಣಿಯವರ ನಾಟಕಗಳಲ್ಲಿ, ಸಾಂದರ್ಭಿಕ ಹಾಸ್ಯ, ಜನಜೀವನದ ದಿನನಿತ್ಯದ ನಡೆವಳಿಕೆಗಳ ಪ್ರತಿಬಿಂಬನೆ, ಇವಕ್ಕೆ ಅಗ್ರಸ್ಥಾನ. ಹಾಗೆಂದರೆ, ಸಂಭಾಷಣೆಯ ಹಾಸ್ಯ ಇಲ್ಲಿಲ್ಲವೆಂದಲ್ಲ. ಇವೆ. ಆದರೆ ಅದರ ಉಪಯೋಗ ಅಲ್ಲಲ್ಲಿ ಮಾತ್ರ.

ಉದಾಹರಣೆಗೆ: 'ಉಂಡಾಡಿ ಗುಂಡ' ನಾಟಕದಲ್ಲಿ ಗುಂಡ, ಊರಿಗೆ ಹೊಸದಾಗಿ ಬಂದ ಭಾವಿ ಅಳಿಯ ಮತ್ತು ಗೆಳೆಯನನ್ನು ಕುರಿತು 'ಇಲ್ಲಿ, ಮಲೆನಾಡಿನಲ್ಲಿ, ಹುಲಿಗಳು, ಸಾರ್! (ರಸ್ತೆಯ ಈ ಕೊನೆಯಿಂದ ಆ ಕೊನೆಯವರೆಗೆ ತೋರಿಸುತ್ತ) ಈ ಕಡೆ ತಲೆ, ಆ ಕಡೆ ಬಾಲ' ಎಂದಾಗ ಅದನ್ನು ಕೇಳಿದ ಗೆಳೆಯ 'ನಮ್ಮಲ್ಲೂ ಹಾಗೇ ಕಣಯ್ಯ, ಹುಲಿಗಳಿಗೆ ತಲೆ ಇಲ್ಲಿ, ಬಾಲ ಅಲ್ಲಿ ಇರುತ್ತವೆ. ಎರಡು ಒಂದೇ ಕಡೆ ಇರೋದಿಲ್ಲ' ಎನ್ನುತ್ತಾನೆ. ಆದರೆ ಅವರ ನಾಟಕದ ಸ್ವಾರಸ್ಯ ಇಂಥ ಚಮತ್ಕಾರದ ಮಾತುಗಳಲ್ಲಿಲ್ಲ. ಅವರ ನಾಟಕಗಳು ಮನರಂಜಕ ಸನ್ನಿವೇಶಗಳನ್ನು ನೇಯ್ದು ತಯಾರಿಸಿದ ಕಸೂತಿಯ ಕೆಲಸ. ತಂದೆಯ ಮನೆಯನ್ನು ಹೊಟೇಲೆಂದು ಹೇಳಿ ಅಳಿಯ–ಗೆಳೆಯರನ್ನು ತನ್ನ ಮನೆಗೇ ಕಳಿಸಿ, ಗುಂಡ ಪ್ರೇಕ್ಷಕರಿಗೆ ಹಾಸ್ಯದೂಟವುಣಿಸುತ್ತಾನೆ. 'ಬಹದ್ದೂರ್ ಗಂಡ'ದಲ್ಲಿ ಸ್ವೇಚ್ಛೆಯಾಗಿ ಬೆಳೆದು ಗಂಡನ ಮನೆಗೆ ಬಂದಿರುವ ಗಂಡುಬೀರಿ ಹೆಣ್ಣನ್ನು ಗಂಡ ಪಳಗಿಸಿ ತನ್ನ ದಾರಿಗೆ ತಂದ ಸನ್ನಿವೇಶ ಮನೋಹರವಾಗಿ ಚಿತ್ರಿತವಾಗಿದೆ.

ಹಾಗಾಗಿ ಪರ್ವತವಾಣಿಯವರ ನಾಟಕಗಳೆಲ್ಲ ಅನುವಾದಗಳೆಂದಲ್ಲ. ಸುಮಾರು ಮೂವತ್ತು ನಾಟಕಗಳು ಅನುವಾದಗಳು–ಭಾವಾನುವಾದಗಳು. ಮತ್ತೆ ಸುಮಾರು ಹದಿನೈದು ನಾಟಕಗಳು ಸ್ವತಂತ್ರ ರಚನೆಗಳು. ಅವರ ಸ್ವತಂತ್ರ ರಚನೆಗಳಲ್ಲೂ, ಮೇಲೆ ಹೇಳಿದ, ಅನುವಾದಗಳಲ್ಲಿ ಕಾಣ ಬರುವ ರೂಪುರೇಷೆಗಳೇ ಕಾಣುತ್ತವೆ.

೧೯೩೫ರಲ್ಲಿ ಪ್ರಾಯೋಗಿಕವಾಗಿ ಡಾ. ಗೋಪಾಲಸ್ವಾಮಿಯವರು ಮೈಸೂರಿನಲ್ಲಿ ತಮ್ಮ ಮನೆಯಲ್ಲೇ ಒಂದು ರೇಡಿಯೊ ಸ್ಟೇಷನ್ ಪ್ರಾರಂಭಿಸಿದರು. ಈ ರೇಡಿಯೋ ನಿಲಯ–ಆಕಾಶವಾಣಿ–ಕರ್ನಾಟಕದಲ್ಲೇ ಮೊದಲ ರೇಡಿಯೋ ಸ್ಟೇಷನ್. ಒಂಬತ್ತು ವರ್ಷಗಳ ನಂತರ ಈ ರೇಡಿಯೋ ಸ್ಟೇಷನ್ ಅನ್ನು ಸರ್ಕಾರ ವಹಿಸಿಕೊಂಡು ಅದರದೇ ಆದ ಭವ್ಯವಾದ ಭವನಕ್ಕೆ ವರ್ಗಾಯಿಸಿತು. ನಂತರ ಇದರ ಮೊದಲ ನಿರ್ದೇಶಕರು ಶ್ರೀ ನಾ. ಕಸ್ತೂರಿಯವರು. ಕಸ್ತೂರಿಯವರು. ಈಗಾಗಲೇ ಹೇಳಿದಂತೆ ಕನ್ನಡ ಸಾಹಿತ್ಯದ ಹಾಸ್ಯ ಪ್ರಾಚಾರ್ಯರು (ಆಧಾರ ೬, ಪುಟ ೯೪). ಅಂತೆಯೇ ಈ ರೇಡಿಯೋ

ಸ್ಟೇಷನ್ನಿನಿಂದ ಕನ್ನಡ ಹಾಸ್ಯ ಸಾಹಿತ್ಯಕ್ಕೆ ಹೊಸ ಕುಮ್ಮಕ್ಕು ಸಿಕ್ಕಿತು. ಹಾಸ್ಯ ಪ್ರಹಸನಗಳು, ಹಾಸ್ಯ ಪೂರಿತ ಭಾಷಣಗಳು, ವಿಡಂಬನೆಗಳು, ಕವನಗಳು ಅದರ ಮೂಲಕ ಬೆಳಕು ಕಂಡವು. ಈ ವಿಷಯದಲ್ಲಿ ಕಸ್ತೂರಿಯವರ ಶ್ರಮಕ್ಕೆ ಭುಜಕೊಟ್ಟು ನಿಂತವರು ಅವರ ಪಟ್ಟ ಶಿಷ್ಯ ಎಚ್.ಕೆ. ರಂಗನಾಥ್. ಹೈಸ್ಕೂಲಿನಿಂದಲೇ ಕಸ್ತೂರಿಯವರೊಡನೆ ನಾಟಕರಂಗದಲ್ಲಿ ಭಾಗವಹಿಸಿ ಪಳಗಿದ್ದ ರಂಗನಾಥ್ ಆಕಾಶವಾಣಿಯ ಮೊದಲ ನಾಟಕ ನಿರ್ದೇಶಕರಾಗಿ ನೇಮಕಗೊಂಡರು. ಮುಂದಿನ ಹತ್ತಾರು ವರ್ಷ ಮೈಸೂರು, ಧಾರವಾಡ ಮತ್ತು ಬೆಂಗಳೂರು ರೇಡಿಯೋ ಕೇಂದ್ರಗಳಲ್ಲಿ ನಾಟಕ ನಿರ್ದೇಶಕರಾಗಿ ಉತ್ತಮ ದರ್ಜೆಯ ನಾಟಕಗಳನ್ನೂ ಇತರ ಕಾರ್ಯಕ್ರಮಗಳನ್ನೂ ಬಿತ್ತರಿಸಿದರು.

ಮೊದಮೊದಲು ಇದ್ದ ಸಾಹಿತ್ಯ ಕೃತಿಗಳನ್ನೇ ರೇಡಿಯೋವಿಗೆ ಅಳವಡಿಸಿಕೊಳ್ಳಬೇಕಾಗಿತ್ತು. ಆದರೆ ರೇಡಿಯೋ ಒಂದು ವಿಶಿಷ್ಟ ಸಂವಹನ ಮಾಧ್ಯಮ. ಅದರ ಅಗತ್ಯತೆಗಳೇ ಬೇರೆ. ಆದ್ದರಿಂದ ರೇಡಿಯೋವಿಗಾಗಿಯೇ ಬರದ ನಾಟಕಗಳ, ಲೇಖನಗಳ ಮತ್ತು ಇತರ ಕಾರ್ಯಕ್ರಮಗಳ ಅಗತ್ಯತೆ ಕಂಡುಬಂದಿತು. ಮಿಕ್ಕ ಸಾಹಿತ್ಯದಂತೆ ಕನ್ನಡದ ಹಾಸ್ಯ ಸಾಹಿತ್ಯವೂ ಇಲ್ಲಿ ಕವಲೊಡೆಯಬೇಕಾಯಿತು.

ಈ ಕರೆಗೆ ಓಗೊಟ್ಟು ಅನೇಕ ಹಾಸ್ಯ ಸಾಹಿತಿಗಳು ರೇಡಿಯೋವಿಗಾಗಿಯೇ ಕೃತಿಗಳನ್ನು ರಚಿಸತೊಡಗಿದರು. ಇದರಲ್ಲಿ ಮೊದಲ ಕೃತಿಗಳು ರಂಗನಾಥರದೇ ಆದ 'ಬ್ರಹ್ಮಲಿಪಿ', 'ಅಳಿಯ', 'ಸುಮುಹೂರ್ತಾ ಸಾವಧಾನ', 'ಪಾಕಶಾಸ್ತ್ರ', ಎ.ಕೆ.ರಾಮಾನುಜಂ ಅವರ 'ನಾದಬಿಂದು', 'ಬಡಪಾಯಿ ಬ್ರಹ್ಮರಾಕ್ಷಸ', ಟೀಯೆಸ್ಸಾರ್ ಅವರ 'ಮಹಾಭಾರತದಲ್ಲಿ ಕ್ರಿಕೆಟ್', ವಿ.ಕೆ.ಶ್ರೀನಿವಾಸನ್ ಅವರ 'ನೀರಗಂಟಿ ಮಾರ' ಇತ್ಯಾದಿ. ಮುಂದಿನ ಐದು ದಶಕಗಳಲ್ಲಿ ರೇಡಿಯೋವಿಗಾಗಿಯೇ ಬರೆದ ಹಾಸ್ಯ ಕೃತಿಗಳು ಚೆನ್ನಾಗಿ ಬೆಳೆದಿವೆ.

ಹಾಸ್ಯ ಸಾಹಿತ್ಯಕ್ಕೆ ಎಚ್.ಕೆ. ರಂಗನಾಥರ ಕೊಡುಗೆ ವಿಶಿಷ್ಟವಾದದ್ದು. 'ಕ್ಯಾಪಿಟಲ್ ಪನಿಷ್‌ಮೆಂಟ್'– ಅವರು ದೆಹಲಿಯಲ್ಲಿ ಪಟ್ಟ ಬವಣೆ, 'ಪರದೇಶಿಯಾದಾಗ' – ಅವರ ವಿದೇಶಯಾತ್ರೆಗಳ ಚಿತ್ರಣ, 'ವೈದ್ಯನಲ್ಲದ ಡಾಕ್ಟರು' – ಅವರು ವೈದ್ಯನಾಗಲು ಹಾತೊರೆದು, ಸಾಧ್ಯವಾಗದೆ, ಕಡೆಗೆ ಪಿ.ಎಚ್.ಡಿ. ಡಾಕ್ಟರಾದದ್ದು, 'ಇವರೆಲ್ಲಾ ನಮ್ಮವರೇ'– ಅವರ ಹರಟೆಗಳ ಸಂಗ್ರಹ, ಇವೆಲ್ಲ ಕೃತಿಗಳಲ್ಲಿ ಮುಖ ಶೀರ್ಷಿಕೆಯಿಂದ ಕೊನೆಯ ಪುಟದ ಕೊನೆಯ ಸಾಲಿನವರೆಗೆ ಹಾಸ್ಯ ಓತಪ್ರೋತವಾಗಿ ಹರಿಯುತ್ತದೆ.

ಉತ್ಪ್ರೇಕ್ಷಾಲಂಕಾರವನ್ನು ಹಾಸ್ಯಕ್ಕಾಗಿ ಯಶಸ್ವಿಯಾಗಿ ತಮ್ಮ ಕೃತಿಗಳಲ್ಲಿ ಉಪಯೋಗಿಸಿಕೊಂಡವರಲ್ಲಿ ರಂಗನಾಥ್ ಅಗ್ರಗಣ್ಯರು. ಉದಾಹರಣೆಗೆ ಅವರ 'ಹಲ್ಲು' ಎಂಬ ಹರಟೆಯನ್ನು ಗಮನಿಸಿ:

'.....ಆದರೆ ನಮ್ಮ ವೆಂಕಟಲಕ್ಷ್ಮಿಗೆ ಯಾರೂ ಮೂವತ್ತೆರಡು ಹಲ್ಲುಗಳನ್ನೂ ಉದುರಿಸುತ್ತೇನೆ ಎಂದು ಹೇಳಲು ಸಾಧ್ಯವಾಗುತ್ತಿರಲಿಲ್ಲ. ಅಥವಾ ಕೇವಲ ಮೂವತ್ತೆರಡು ಹಲ್ಲುಗಳು ಹೋದರೆ ಅವಳಿಗೆ ಏನು ನಷ್ಟವೂ ಆಗುತ್ತಿರಲಿಲ್ಲ. ಏಕೆಂದರೆ, ಅವಳ 'ಅಕ್ಷಯಪಾತ್ರೆ'ಯಲ್ಲಿ ಅದೆಷ್ಟು ಹಲ್ಲುಗಳಿವೆ ಎಂಬುದು ಎಣಿಕೆಗೆ ಸಿಗದ ವಿಷಯ. ಅವಳ ಬೃಹದ್ಬಾಯಿಯಲ್ಲಿ ಒಂದರ ಹಿಂದೆ ಒಂದರಂತೆ ಎರಡು ಸಾಲು ಹಲ್ಲುಗಳೂ ಮಧ್ಯೆ ಕಣಿವೆಯಲ್ಲಿ ಅನೇಕ ಚಿಲ್ಲರೆ ಹಲ್ಲುಗಳೂ ಮನೆಮಾಡಿಕೊಂಡಿದ್ದವು. ಆದರೆ ಇಷ್ಟು ಹಲ್ಲುಗಳಿಗೂ ಸಿಕ್ಕಿಕೊಳ್ಳದೆ ಚಕ್ಕರ್ ಹೊಡೆದು ಅವಳ ನಾಲಿಗೆ ಹರಟೆ ಕುಟ್ಟುತ್ತಲೇ ಇತ್ತು....ಹೀಗೆಯೇ ಕೆಲವು ಕಾಲ ಕಳೆದ ಮೇಲೆ ಪಲ್ಲು ಹಲ್ಲುಗಳಿಗೆ ಸ್ಥಳದ ವತ್ತಡದಮೇಲೆ ಭಿನ್ನಾಭಿಪ್ರಾಯ ಬಂದು ಅಕ್ಷಯಪಾತ್ರೆಯಲ್ಲಿ ದೊಡ್ಡ ಆಂದೋಲನವಾಯಿತು. ಒಂದೊಂದು ಹಲ್ಲಿಗೆ ನೋವು ಬಂದರೇ ಸಹಿಸುವುದು ಕಷ್ಟ. ಇನ್ನು ವೆಂಕಟಲಕ್ಷ್ಮಿಯ ಐವತ್ತೊಂಬತ್ತೂ ಚಿಲ್ಲರೆ ಹಲ್ಲುಗಳೂ ಒಟ್ಟಿಗೆ ಕಿರುಗುಟ್ಟಲು ಪ್ರಾರಂಭಿಸಿದರೆ ಕೇಳಬೇಕೆ? ಆಕೆಯ ಒದ್ದಾಟ ಹೇಳತೀರದು. ನೋವಿನ ಸಿಡಿತಕ್ಕೆ ತಹತಹಿಸಿ ವೆಂಕಟಲಕ್ಕು ಹೆಂಚಿನಮೇಲಿಂದ ಹಾರಿದಳು, ಸರಸರನೆ ಮನೆಯ ಮುಂದಿನ ತೆಂಗಿನ ಮರ ಹತ್ತಿದಳು, ಬಚ್ಚಲು ಒಲೆಯಲ್ಲಿ ಕಾಲು ತೂರಿದಳು, ದೇವರಪಟಗಳಿಗೆ ಮೆಣಸಿನಪುಡಿ ಸುರಿದಳು, ಪಕ್ಕದಮನೆಯ ನಾಯಿಮರಿಗೆ ಗುರಿಯಿಟ್ಟು ಕಲ್ಲು ಹೊಡೆದಳು, ಮಧ್ಯಾಹ್ನ ಮಲಗಿ ವಿಶ್ರಾಂತಿಪಡೆಯುತ್ತಿದ್ದ ಗಂಡ ಶಾಮಯ್ಯನವರ ಮೀಸೆ ಸುಟ್ಟಳು. ಕೊನೆಗೆ ಅವಳು ಬೀದಿಯಲ್ಲಿ ಕಬ್ಬು ಮಾರುತ್ತ ಹೋಗುತ್ತಿದ್ದವನನ್ನು ಅಟ್ಟಿಸಿಕೊಂಡು ಹೋಗಿ ಅವನ ಮೈಮೇಲೆ ಬಿಸಿನೀರು ಸುರಿದ ದಿನ, ಅವಳ ಹಲ್ಲುಗಳನ್ನು ಕೀಳಿಸಲೇಬೇಕೆಂದು ಸಂಕಲ್ಪವಾಯಿತು.....' (ಆಧಾರ ೧೦).

ಅದೇ ಪ್ರಬಂಧದಲ್ಲಿ ಮುಂದೆ.... 'ಹಲ್ಲಸಾಲದು ಡೊಂಕು, ಬಿದ್ದಕಿರಣವು ಡೊಂಕೇ?' ಎಂದು ಹಾಡಿದ ಬೇಂದ್ರೆಯವರು ನಮ್ಮ ಸುಬ್ಬಪ್ಪನ ದಂತವಕ್ರಗಳನ್ನು ಕಂಡಿಲ್ಲವೆಂಬುದು ಖಂಡಿತವೇ. ಅವನ್ನು ನೋಡಿದ್ದರೆ ಅವರು ಎಂದಿಗೂ ಹಾಗೆ ಬರೆಯುತ್ತಿದ್ದಿಲ್ಲ. ಅವನ ಹಲ್ಲ ಸಾಲದು ಮಾತ್ರವಲ್ಲ, ಹಲ್ಲುಗಳೇ ಶುದ್ಧ ಡೊಂಕು. ಇನ್ನು ಕಿರಣದ ಪ್ರತಿಬಿಂಬವೆಂದರೆ ತಾಮ್ರದ ಚೊಂಬಿನಂತಿರುವ ಅವನ (ಖಾಲಿ) ಬೋಳು ಬುರುಡೆಯಿಂದಲೇ...'

೧೯೫೦, ೬೦, ೭೦ರ ದಶಕಗಳಲ್ಲಿ ಕನ್ನಡದ ಹಾಸ್ಯ ಸಾಹಿತ್ಯದಲ್ಲಿ ಮಿರುಗಿದ ಇನ್ನೊಂದು ತಾರೆ ಶ್ರೀಯುತ ಬೀಚಿಯವರು. ಬೀChi ಎಂಬ ಕಾವ್ಯ ನಾಮದಿಂದ ವಿಡಂಬನ ಶೈಲಿಯಲ್ಲಿರುವ ಕಾದಂಬರಿಗಳು, ನಾಟಕಗಳು, ಕಥೆ-ಕವನಗಳು, ಹರಟೆ, ಆತ್ಮಚರಿತ್ರೆ-ಈ ಎಲ್ಲವೂ ಸೇರಿದಂತೆ ಒಟ್ಟಾರೆಯಾಗಿ ರಚಿಸಿರುವ ಕೃತಿಗಳ ಸಂಖ್ಯೆ

ಅರವತ್ತು ಮೂರು. ... ಅವರು ಸೃಷ್ಟಿಸಿರುವ ತಿಂಮನ ಪಾತ್ರ ತಮ್ಮನ್ನೇ ಆದ್ಯಂತವಾಗಿ ಪ್ರತಿಬಿಂಬಿಸುವ ಪಾತ್ರ. ತಾವು ಹೇಳಬೇಕೆಂದಿದ್ದ ಅನೇಕ ಸೂಕ್ಷ್ಮ ವಿಚಾರಗಳನ್ನು ತಿಂಮನ ಮೂಲಕ ಹೇಳಿರುವುದು ಬೀಚಿಯವರ ವೈಶಿಷ್ಟ್ಯ. 'ತಿಂಮನ ತಲೆ', 'ತಿಂಮರಸಾಯನ', 'ಅಂದನಾ ತಿಂಮ', 'ಬೆಳ್ಳಿತಿಂದು ನೂರೆಂಟು ಹೇಳಿದ' ಮುಂತಾದ ಪುಸ್ತಕಗಳ ಮೂಲಕ ಸಾಹಿತ್ಯ ಹಾಗೂ ಸಾರಸ್ವತ ಲೋಕಕ್ಕೆ 'ತಿಂಮ' ಎಂಬ ಶಕ್ತಿಯುತ ನಾಯಕನನ್ನು ಇತ್ತಿರುವ ಹೆಗ್ಗಳಿಕೆ ಬೀಚಿಯವರಿಗೆ ಸೇರುತ್ತದೆ' (ಆಧಾರ ೧೧).

'ತಿಂಮಾ!'

'ಏನಪ್ಪ?'

'ತೆಗೆದುಕೋ, ಈ ಗೈಡು ತಂದಿದ್ದೀನಿ'

'ಒಳ್ಳೇದೇನಪ್ಪಾ ಇದು?'

'ನಿಮ್ಮ ಕ್ಲಾಸ್ ಟೀಚರೇ ಹೇಳಿದರಪ್ಪಾ, ಇದನ್ನು ಓದಿ ಬಿಡು, ಅರ್ಧ ಪಾಸಾದಂತೆಯೇ! ಅಂತ'.

'ಹಾಗಾದ್ರೆ ಎರಡು ಪ್ರತಿಗಳನ್ನು ತರಬೇಕಾಗಿತ್ತು, ಪೂರ್ತಿ ಪಾಸಾಗುತ್ತಿದ್ದೆ'.

*

ಹೆಂಡತಿ: 'ಅಲ್ರೀ ಕೇಳಿದ್ರಾ ಸುದ್ದೀನ? ಪಕ್ಕದಮನೆ ಕುಬೇರ ಶೆಟ್ರು ತಮ್ಮ ಅಳಿಯನಿಗೆ ಮದುವೆಯಲ್ಲಿ ಎಂಟು ಕೇ.ಜಿ. ಚಿನ್ನ ಕೊಟ್ರಂತೆ'.

ಗಂಡ: 'ಅದು ಸರಿ, ಹಾಗೇ ಎಂಬತ್ತು ಕೇ.ಜಿ. ಕಬ್ಬಿಣಾನ್ನೂ ಕೊಟ್ರಂತಲ್ಲ!'

*

'ಗ್ಯಾರಂಟಿಯಾದ ನಕಲಿ ವಜ್ರಗಳು ಬೇಕಿದ್ದರೆ ನಮ್ಮಲ್ಲಿಗೇ ಬನ್ನಿ. ಇತರೇ ಅಂಗಡಿಗಳಲ್ಲಿ ಮೋಸ ಹೋಗಬೇಡಿ'.

*

ಪ್ರಶ್ನೆ: 'ಸಾಹಿತಿಯಾಗಬೇಕಾದರೆ ಅತಿ ಮುಖ್ಯವಾಗಿ ಏನು ಬೇಕು ಸಾರ್?'

ಉತ್ತರ: 'ದೊಡ್ಡ ಕಸದ ಬುಟ್ಟಿ'.

*

ತಿಂಮನ ಹೆಂಡತಿ: (ಹಾವಾಡಿಗನನ್ನು ನೋಡಿ) 'ಈ ಹಾವು ಗಂಡೋ ಹೆಣ್ಣೋ?'

ತಿಂಮ: 'ಅದು ನಿನಗ್ಯಾಕೆ? ಇನ್ನೊಂದು ಹಾವು ಅದನ್ನು ನೋಡಿಕೊಳ್ಳುತ್ತದೆ'.

*

ತಿಂಮ ಮಗನನ್ನು ಸ್ಕೂಲಿಗೆ ಸೇರಿಸುವಾಗ ಮಾಸ್ತರಿಗೆ: 'ನಾವು ಇವನನ್ನು ಜೋಪಾನವಾಗಿ ಬೆಳೆಸಿದ್ದೇವೆ. ದಯವಿಟ್ಟು ಇವನನ್ನು ಹೊಡೆದು ಬೈದು ಮಾಡಬೇಡಿ'.

ಮಾಸ್ತರು: 'ಹೊಡೆಯದೇ ಬೈಯದೇ ಇರಲು ಸಾಧ್ಯವೇ? ಅವನೇನಾದರೂ ತಪ್ಪು ಮಾಡಿದರೆ?...'

ತಿಂಮ: 'ಪಕ್ಕದ ಹುಡುಗನನ್ನು ಹೊಡೆದುಬಿಡಿ. ಇವನು ಕೂಡಲೇ ತಪ್ಪು ತಿದ್ದಿಕೊಂಡುಬಿಡುತ್ತಾನೆ'.

ಕನ್ನಡದ ಹಾಸ್ಯ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೋದ್ಯಮಿಗಳು ದೊಡ್ಡ ಪಾತ್ರ ವಹಿಸಿದ್ದಾರೆ. ದಿನಪತ್ರಿಕೆಗಳ, ವಾರಪತ್ರಿಕೆಗಳ ಮತ್ತು ಮಾಸಪತ್ರಿಕೆಗಳ ಅಂಕಣಗಳಲ್ಲಿ ಬರೆಯುತ್ತ ಹಾಸ್ಯದ ಹೊಳೆಹರಿಸಿದ್ದಾರೆ. ಇವರಲ್ಲಿ ಟೀಯೆಸ್ಸಾರ್ರಾವ್, ವೈಯೆನ್ಕೆ ಮತ್ತು ಲಾಂಗೂಲಾಚಾರ್ಯರು ಮೊದಲಿಗರು.

ಪ್ರಜಾವಾಣಿಯ ಸಂಪಾದಕರಾಗಿ ಅನೇಕ ವರ್ಷ ಸೇವೆ ಸಲ್ಲಿಸಿದ ಟೀ.ಎಸ್. ರಾಮಚಂದ್ರರಾಯರು ಕೊರವಂಜಿಯ ಬಳಗದಲ್ಲಿ ಬೆಳೆದವರು. 'ಟೀಯೆಸ್ಸಾರ್' ಎಂಬ ಕಾವ್ಯನಾಮದಡಿಯಲ್ಲಿ ಕೊರವಂಜಿಯ ನಿತ್ಯ ಲೇಖಕರಾಗಿದ್ದರು. ಅಲ್ಲಿದ್ದಾಗ ಅವರು ಬರೆದ ಅನೇಕ ಲೇಖನಗಳಲ್ಲಿ 'ಫಣಿಯಪ್ಪನ ಹುಲಿಗಳು' ಎಂಬ ಅಂಕಣದ ನಾಲ್ಕಾರು ಲೇಖನಗಳು ಬಹಳ ಜನಪ್ರಿಯವಾದವು. ಫಣಿಯಪ್ಪ ಅಸಾಧಾರಣ ಬೇಟೆಗಾರ. ಮೈಸೂರಿನ ಹುಲಿಗಳು ಘಾಟಿ ಹುಲಿಗಳು. ಇವರಿಬ್ಬರ ಪರಸ್ಪರ ಸ್ಪರ್ಧೆ ಈ ಲೇಖನಗಳ ತಿರುಳು.

ಒಮ್ಮೆ ಹುಲಿಯೊಂದು ಮಲೆನಾಡಿನಲ್ಲಿ ಬಹಳ ತೊಂದರೆ ಕೊಡುತ್ತಿತ್ತು ಎಂದು ತಿಳಿದು, ಫಣಿಯಪ್ಪ, ಅದನ್ನು ಕೊಲ್ಲಲು ಹೊರಟ. ಕಾಡಿನಲ್ಲಿ ಕತ್ತಲೆಯಲ್ಲಿ ಮರದಮೇಲೆ ಹತ್ತಿ ಕುಳಿತ. ಅರ್ಧರಾತ್ರಿಯಲ್ಲಿ, ಸರಸರ ಶಬ್ದ! ಕತ್ತಲೆಯಲ್ಲಿ ಹೊಳೆಯುತ್ತಿರುವ ಎರಡು ಕಣ್ಣುಗಳು! ಫಣಿಯಪ್ಪ ಕಣ್ಣುಗಳೆರಡರ ನಡುವೆ ಗುರಿಯಿಟ್ಟು, 'ಢುಂ' ಎಂದು ಗುಂಡು ಹೊಡೆದ. ರಾತ್ರಿಯೆಲ್ಲ ಮರದಮೇಲೆಯೇ ಕುಳಿತಿದ್ದು ಬೆಳಗ್ಗೆ ಕೆಳಗಿಳಿದ. ಹುಲಿಯ ಸುಳಿವೇ ಇಲ್ಲ. ಒಂದು ತೊಟ್ಟು ರಕ್ತವೂ ಇಲ್ಲ. ಫಣಿಯಪ್ಪ

ಗುರಿತಪ್ಪಿದ್ದು ಇದೇ ಮೊದಲು. ಕೋಪದಿಂದ ಫಣಿಯಪ್ಪ ಮಾರನೆಯ ರಾತ್ರಿ ಪುನಃ ಆ ಹುಲಿಯನ್ನು ಕೊಲ್ಲಲು ಹೊರಟ. ಪುನಃ ಅದೇ ಕಥೆ. ಫಣಿಯಪ್ಪ ತನ್ನನ್ನು ತಾನೇ ನಂಬಲಾರದಾದ. ಮೂರನೆಯ ರಾತ್ರಿ, ಮತ್ತೆ ಮರದ ಮೇಲೆ ಹೋಗಿ ಕುಳಿತ. ಅರ್ಧರಾತ್ರಿಯಲ್ಲಿ ಸರ ಸರ ಶಬ್ದ. ಎರಡು ಕಣ್ಣುಗಳು. ಗುರಿಯಿಟ್ಟು ಗುಂಡು ಹೊಡೆಯಬೇಕೆಂದಿದ್ದವನು, ಮನಸ್ಸು ಬದಲಾಯಿಸಿ, ಪಕ್ಕದಲ್ಲಿದ್ದ ಬ್ಯಾಟರಿ ಲೈಟನ್ನು ಹತ್ತಿಸಿ ನೋಡಿದ. ಎದುರಿಗೆ ಎರಡು ಹುಲಿಗಳು ಪಕ್ಕ ಪಕ್ಕದಲ್ಲಿ ನಿಂತಿವೆ! ಒಂದು ತನ್ನ ಎಡಗಣ್ಣನ್ನು ಮುಚ್ಚಿಕೊಂಡಿದೆ. ಇನ್ನೊಂದು ತನ್ನ ಬಲಗಣ್ಣನ್ನು ಮುಚ್ಚಿಕೊಂಡಿದೆ! ಫಣಿಯಪ್ಪ ಈ ಎರಡು ಕಣ್ಣುಗಳ ಮಧ್ಯೆ ಗುರಿಯಿಟ್ಟು ಹೊಡೆಯುತ್ತಿದ್ದ! ಎಂಥ ಕಿಲಾಡಿ ಹುಲಿಗಳು!

ಟೀಯೆಸ್ಸಾರ್ ಪ್ರಜಾವಾಣಿಯ ಸಂಪಾದಕರಾಗಿದ್ದಾಗ 'ಭೂಬಾಣ' ಎಂಬ ಅಂಕಣದ ಅಡಿಯಲ್ಲಿ ಲೇಖನಗಳನ್ನು ಬರೆಯುತ್ತಿದ್ದರು. 'ಭೂಬಾಣ' ಹಾಸ್ಯ ಭರಿತವಾದ ರಾಜಕೀಯ ದರ್ಶನ. ಅಂದಿನ ರಾಜಕೀಯದ ಮತ್ತು ಜನಜೀವನದ ಅತಿರೇಕಗಳನ್ನು ಗೇಲಿಮಾಡಿ ಬರೆದ ಈ ಲೇಖನಗಳು ಬಹಳ ಜನಪ್ರಿಯವಾಗಿದ್ದವು. ಟೀಯೆಸ್ಸಾರ್ ಅವರು ಚಿಕ್ಕವಯಸ್ಸಿನಲ್ಲೇ ಅಕಾಲಮರಣಕ್ಕೆ ತುತ್ತಾದರು. ಅವರ ಅಗಲಿಕೆ ಕನ್ನಡ ಹಾಸ್ಯ ಸಾಹಿತ್ಯಕ್ಕೆ ದೊಡ್ಡ ನಷ್ಟ.

ಪತ್ರಿಕೋದ್ಯಮದಿಂದ ಕನ್ನಡದ ಹಾಸ್ಯ ಸಾಹಿತ್ಯಕ್ಕೆ ಮುದಕೊಟ್ಟವರಲ್ಲಿ ಇನ್ನೊಬ್ಬರು, ವೈಯೆನ್ಕೆಯವರು (ಯಳಂದೂರು ನರಸಿಂಹಮೂರ್ತಿ ಕೃಷ್ಣಮೂರ್ತಿ). ಟೀಯೆಸ್ಸಾರ್ ಅವರು ಪ್ರಜಾವಾಣಿಯ ಸಂಪಾದಕರಾಗಿದ್ದ ಕಾಲದಲ್ಲೇ ಅಲ್ಲಿಯ ಸಂಪಾದಕೀಯ ವೃಂದದಲ್ಲಿದ್ದ ವೈಯೆನ್ಕೆಯವರು, ನಂತರ ಪ್ರಜಾವಾಣಿಯ ಸಂಪಾದಕರಾಗಿದ್ದು, ಆಮೇಲೆ ಅಲ್ಲಿಂದ ನಿವೃತ್ತರಾಗಿ, ಉದಯವಾಣಿ, ಆನಂತರ ಕನ್ನಡ ಪ್ರಭ ಪತ್ರಿಕೆಗಳ ಸಂಪಾದಕರಾಗಿ ಅಲ್ಲಿ Wonderಕಣ್ಣು ಎಂಬ ಅಂಕಣದ ವೇದಿಕೆಯಿಂದ ತಿಳಿನಗೆಯ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರು (ಅಂಕಣದ ಶೀರ್ಷಿಕೆಯನ್ನು ಗಮನಿಸಿ. ಇಂಗ್ಲಿಷಿನ awesome, ಮತ್ತು ಕನ್ನಡದ ವಕ್ರದೃಷ್ಟಿ ಈ ಎರಡು ಅರ್ಥವೂ ಬರುತ್ತದೆ.) ಸ್ಥಳೀಯ ರಾಜಕೀಯ, ವಿಶ್ವದ ರಾಜಕೀಯ, ವಿಡಂಬನೆ, ಸಾಹಿತ್ಯ, ಕಲೆ ಇವೆಲ್ಲ ಅವರ ಬರವಣಿಗೆಗೆ ಗ್ರಾಸವಾದವು. ಅವರು ಮುಟ್ಟದ ವಸ್ತುವೇ ಇಲ್ಲ. ಮುಂದಿನ ದಶಕದಲ್ಲಿ ಹೇರಳವಾಗಿ ಅವರ ಲೇಖನಗಳು ಹೊರ ಬಂದವು. ಒಂದು ಉದಾಹರಣೆ: ಕನ್ನಡದ ಮಣ್ಣಿನ ಮಗ ಪ್ರಧಾನಿಯಾಗಿದ್ದಾಗ, ಅವರು ನಿದ್ರಾವಶರಾಗಿದ್ದ ಚಿತ್ರಗಳು ಎಲ್ಲ ಪತ್ರಿಕೆಗಳಲ್ಲೂ ಪ್ರಕಟವಾಗುತ್ತಿದ್ದವು. 'ಮುದ್ದೆ'ಗೂ ನಿದ್ದೆಗೂ ಸಂಬಂಧವಿದೆ ಎನ್ನುವ ಟೀಕೆಗಳು ಸಾಕಷ್ಟು ಬರುತ್ತಿದ್ದವು. 'ನಾನು ನಿದ್ರಿಸುತ್ತಿರಲಿಲ್ಲ,

ಸಮಸ್ಯೆಗಳ ಬಗ್ಗೆ ಯೋಚಿಸುತ್ತಿದ್ದೆ' ಎಂದು ಮಾಜಿಪ್ರಧಾನಿ ಹೇಳಿದರೂ ಜನ ಅದನ್ನು ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ. 'ಭವ್ಯ ಭಾರತದ ಕನಸು ಕಾಣುತ್ತಿದ್ದಾರೆ, ನಿದ್ರಿಸುತ್ತಿಲ್ಲ' ಎಂದೂ ಅನೇಕರು ಕಾಮೆಂಟ್ ಮಾಡಿದ್ದರು..... ಲೋಕಸಭೆಯಲ್ಲೂ ವಿಧಾನ ಸಭೆಗಳಲ್ಲೂ ಸದಸ್ಯರು ನಿದ್ರಿಸಿರುವ ವರದಿಗಳು ಆಗಾಗ ಬಂದಿವೆ. 'ನಿದ್ರಿಸಬಹುದು, ಆದರೆ ಗೊರಕೆ ಹೊಡೆದು ಪಕ್ಕದವರ ನಿದ್ರಾಭಂಗ ಮಾಡಬಾರದು' ಎಂಬ ಒಪ್ಪಿಗೆ ಅವರಲ್ಲಿದೆಯಂತೆ'.

wonderಕಣ್ಣಿನ ಮೂಲಕವಲ್ಲದೆ ಇನ್ನೊಂದು ಸ್ವರೂಪದಲ್ಲಿ ವೈಯೆನ್ಕೆಯವರು ಕನ್ನಡದ ಹಾಸ್ಯ ಸಾಹಿತ್ಯಕ್ಕೆ ಕಾಣಿಕೆಯನ್ನಿತ್ತರು. ಇದು ಅವರ ಹಾಸ್ಯ ಕವಿತ್ವದಿಂದ. ಕನ್ನಡ-ಇಂಗ್ಲಿಷು, ಕನ್ನಡ-ಸಂಸ್ಕೃತ ಮತ್ತು ಇತರ ಭಾಷೆಗಳನ್ನು ಸೇರಿಸುತ್ತ ಪ್ರಾಸಬದ್ಧವಾದ ಕಿರುಗವನಗಳನ್ನು ಬರೆದು ನಗೆಯ ಹೊಳೆ ಹರಿಸಿದರು.

**ಶುದ್ಧೋಧನನ ಮಗ:**

ಕಪಿಲವಸ್ತುವಿನ ರಾಜ ಶುದ್ಧೋಧನ,
ಅವನ ಮಗ ರಾತ್ರೋರಾತ್ರಿ ಎದ್‌ಹೋದನ.

ಹೆಂಡತಿ ಮಗೂನ ಬಿಟ್ಟು ಒಬ್ಬನೇ ಪರಾರಿ,
ನಿದ್ದೆ ಬರದವರಿಗೆಲ್ಲ ಇದೇ ಸರಿಯಾದ ದಾರಿ.

ಹಿಂದಿರುಗಿ ಬಂದಾಗ ಪೂರ್ತಿ ಬದಲಾಯಿಸಿದ್ದ,
ಹೆಸರೂ ಕೂಡ: ಸಿದ್ಧಾರ್ಥ ಆಗಿದ್ದ ಬುದ್ಧ.

**ಉಪನಯನೆ:**

Girls who are spectacled,
Seldom get their neck tickled.

Ogden Nash

(ಏ ಉಪನಯನೆ, ನೀನು ಯಾರಿಗೂ ಬೇಡವೇನೆ?)

ಕನ್ನಡಕಧಾರಿ, ನಾರಿ,
Don't worry, don't worry.
If nobody calls you, 'ಪ್ಯಾರೀ'.

ಅತ್ತಲಿತ್ತ ಸುಳಿವ ಪೋರರೆಲ್ಲ ಬಳಿ ಸಾರಿ,
ನೋಡಿ ನಿನ್ನ ಮಾರಿ, ಹೇಳುವರು, 'Sorry',

ಹೀಗೆಲ್ಲ ಅಂದರೆ ಬಾಯ್ಸು, ಬಿಡದೆ ನೀ ದಬಾಯ್ಸು.
ಹೇಗೆಂದರೆ ಕೇಳು ಮೀನಾಕ್ಷಿ, ನೀನಾಗು ಕೃತಕಾಕ್ಷಿ,-ಸ್ಪರ್ಷಾಕ್ಷಿ.

ಅರ್ಥಾತ್ ನೀ ಧರಿಸು ಕಾಂಟಾಕ್ಟು ಲೆನ್ಸು,
ಎಲ್ಲರೂ ಬಿಡಲಿ ಕಣ್ ಕಣ್, ಅವರಿಗೆ ತಿನ್ಸು, ನೀ ಚಳ್ಳೆ ಹಣ್.

## Journey:

ಜೀವನದ journeyಯು,
ತುಂಡರಿಪುದು hernia.
ತುಂಡರಿಸಿ hernia,
ಮುಂದರಿಸಿ journeyಯ (ಆಧಾರ ೧೨)

ಪತ್ರಿಕೋದ್ಯಮಿಯಾಗಿ ಕನ್ನಡ ಹಾಸ್ಯಸಾಹಿತ್ಯವನ್ನು ಶ್ರೀಮಂತಗೊಳಿಸಿದ ಇನ್ನೊಬ್ಬ ವ್ಯಕ್ತಿ ಶ್ರೀ ಪಾ.ವೆಂ. ಆಚಾರ್ಯರು. (ಕಾವ್ಯನಾಮ, ಲಾಂಗೂಲಾಚಾರ್ಯ) ಹುಬ್ಬಳ್ಳಿ-ಧಾರವಾಡದ ಕಸ್ತೂರಿ ಮಾಸಪತ್ರಿಕೆಯ ಸಂಪಾದಕರಾಗಿದ್ದ ಆಚಾರ್ಯರು ಅದರ ಮತ್ತು ಅದರ ಸೋದರ ಪ್ರಕಾಶನಗಳಾದ ಕರ್ಮವೀರ ಮತ್ತು ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ತಮ್ಮ ಲಲಿತ ಪ್ರಬಂಧ(ಹರಟೆ)ಗಳನ್ನು ಬೆಳಕಿಗೆ ತಂದರು. ಶುದ್ಧ ಕನ್ನಡದಲ್ಲಿ ಬರೆಯುತ್ತ, ನವಿರಾದ ಹಾಸ್ಯವನ್ನು ಲೇಪಿಸುತ್ತ ಬರೆದ ಇವರ ಲೇಖನಗಳು ತುಂಬ ಜನಪ್ರಿಯವಾದವು. ನೂರಾರು ಹರಟೆಗಳನ್ನು ಬರೆದಿರುವ ಆಚಾರ್ಯರು ಮುಟ್ಟದ ವಿಷಯವಿಲ್ಲ.

ಲಾಂಗೂಲಾಚಾರ್ಯರು ತಮ್ಮನ್ನು ವರ್ಷಗಟ್ಟಲೆ ಕಾಡಿದ್ದ ಆಸ್ತಮದ, ಮೂವತ್ತನೆಯ ಹುಟ್ಟಿದಹಬ್ಬವನ್ನು ಆಚರಿಸಲು ಮಾಡಿಕೊಳ್ಳುತ್ತಿದ್ದ ಸಿದ್ಧತೆಯ ಬಗ್ಗೆ ಓದಿರಿ: 'ಈ ವರ್ಷ ನಾನು ನನ್ನ ಆಸ್ಥಮಾ ಅಥವ ಗೂರಲುಬ್ಬಸದ ಅರ್ಧ ಷಷ್ಟ್ಯಬ್ಧಿಯನ್ನು ಆಚರಿಸಲು ನಿರ್ಧರಿಸಿದ್ದೇನೆ. ನನಗೆ ಆಸ್ಥ್ಮಾ ಪ್ರಾರಂಭವಾಗಿ ಈ ನವೆಂಬರಿಗೆ ಸರಿಯಾಗಿ ಮೂವತ್ತು ವರ್ಷಗಳಾಗುತ್ತವೆ. ಈ ಸಂದರ್ಭದಲ್ಲಿ ನಾನು ಈ ಮೂವತ್ತು ವರ್ಷಗಳಲ್ಲಿ ನುಂಗಿದ, ಮೂಸಿದ ಮತ್ತು ಚುಚ್ಚಿಸಿಕೊಂಡ ಹೋಮಿಯೋ ಪಥಿ, ಅಲ್ಲೋಪಥಿ, ಆಯುರ್ವಥಿ ಮೊದಲಾದ ಪಥಿಗಳ ಸುಮಾರು ೩೭ ಬಗೆಯ

ಔಷಧಗಳ ಒಂದು ಪ್ರದರ್ಶನವನ್ನು ಏರ್ಪಡಿಸಬೇಕೆಂದಿದ್ದೇನೆ; ಮತ್ತು ಆಸ್ತ್ಮಾಕ್ಕೆ ನಾನು ಪ್ರಯೋಗಿಸಬೇಕಾದ ರಾಮಬಾಣೋಪಾಯಗಳಾವುವೆಂಬ ಬಗ್ಗೆ ನನಗೆ ವಿವಿಧ ಮಿತ್ರರಿಂದ ಬಂದ ಉಪದೇಶಗಳ ಸಂಗ್ರಹವನ್ನು ಪ್ರಕಟಿಸಬೇಕೆಂದಿದ್ದೇನೆ. ಈ ಉಪಾಯಗಳು ದೀರ್ಘ ಶ್ವಾಸ ಬಿಡುವುದರಿಂದ ಬೀಡಿ ಸೇದುವವರೆಗೆ, ಮಂತ್ರ ಹಾಕಿಸಿಕೊಳ್ಳುವುದರಿಂದ ಮೀನು ನುಂಗುವುದರವರೆಗೆ ಬಹುಮುಖವಾಗಿವೆ. ಇದೇ ಸಂದರ್ಭದಲ್ಲಿ ನಾನು ಆಸ್ತ್ಮಾಕ್ಕಾಗಿ ಅರ್ಧರಾತ್ರಿಯಲ್ಲಿ ಕರೆಸಿದ ೨೬ ಡಾಕ್ಟರಿಗೊಂದು ಪಾರ್ಟಿಯನ್ನೂ ಕೊಡಬೇಕೆಂದಿದ್ದೇನೆ......'( ಆಧಾರ ೧೩)

ಅಂತರರಾಷ್ಟ್ರೀಯ ಖ್ಯಾತಿಯ ಸಸ್ಯಶಾಸ್ತ್ರಜ್ಞ, ಬಹುಮುಖ ಪ್ರತಿಭೆಯ ಬಿ.ಜಿ.ಎಲ್. ಸ್ವಾಮಿಯವರು ಕನ್ನಡ ಹಾಸ್ಯ ಸಾಹಿತ್ಯವನ್ನು ಬೇರೊಂದು ದಿಕ್ಕಿನಲ್ಲೇ ಕರೆದೊಯ್ದರು. ವೈಜ್ಞಾನಿಕ ಲೇಖನಗಳನ್ನು ಸರಳವಾಗಿಬರೆದು, ಹಾಸ್ಯಲೇಪನಮಾಡಿ ಜನಸಾಮಾನ್ಯರ ಮುಂದಿಟ್ಟರು. ಅವರು ಬರೆದ ಸುಮಾರು ಮೂವತ್ತಕ್ಕೂ ಮೀರಿದ ವಿದ್ವತ್ಪೂರ್ಣ ಕನ್ನಡ ಪುಸ್ತಕಗಳು ಮತ್ತು ಕಿರುಹೊತ್ತಗೆಗಳಲ್ಲಿ ನವಿರಾದ ಹಾಸ್ಯ ಓತಪ್ರೋತವಾಗಿ ಹರಡಿದೆ. ವೈಜ್ಞಾನಿಕ ಲೇಖನವೇ ಆಗಿರಲಿ, ಸಾಹಿತ್ಯಿಕ ಪ್ರಬಂಧವೇ ಆಗಿರಲಿ, ಇತಿಹಾಸಕ್ಕೆ ಸಂಬಂಧಿಸಿದ ಗ್ರಂಥವೇ ಆಗಿರಲಿ ಅಥವಾ ತಮ್ಮ ಅನುಭವ ಕಥನವೇ ಆಗಿರಲಿ ಹಾಸ್ಯ ಅದರ ಅವಿಭಾಜ್ಯ ಭಾಗವಾಗಿದ್ದಿತು. ಸ್ವಾಮಿಯವರು ಒಳ್ಳೆಯ ವ್ಯಂಗ್ಯ ಚಿತ್ರಕಾರರು. ತಮ್ಮ ಪುಸ್ತಕಗಳಿಗೆ ತಾವೇ ವ್ಯಂಗ್ಯ ಚಿತ್ರಗಳನ್ನು ಬರೆದರು. 'ಅಮೆರಿಕದಲ್ಲಿ ನಾನು', 'ತಮಿಳುತಲೆಗಳ ನಡುವೆ', 'ಪ್ರಾಧ್ಯಾಪಕನ ಪೀಠದಲ್ಲಿ', 'ಮೈಸೂರು ಡೈರಿ', 'ಕಾಲೇಜು ರಂಗ', 'ಕಾಲೇಜು ತರಂಗ'–ಈ ಅನುಭವ ಕಥನಗಳೆಲ್ಲ ಹಾಸ್ಯ ಗರ್ಭಿತ ಪುಸ್ತಕಗಳು.

ಮೈಸೂರು ದಸರ ಮೆರವಣಿಗೆಯನ್ನು ಸ್ವಾಮಿಯವರು ವಿವರಿಸಿರುವ ರೀತಿ: 'ಎಲ್ಲ ಮತಗಳೂ ಒಂದೇ' ಎಂಬುದನ್ನು ಶ್ರುತಪಡಿಸಲು ಬ್ರಾಹ್ಮಣ, ಕ್ರಿಸ್ತ, ಮುಸಲ್ಮಾನ್ (ಇನ್ನೂ ಒಂದೆರಡು ಮತೀಯರಿದ್ದರು ನನಗೆ ಸರಿಯಾಗಿ ಕಾಣಲಿಲ್ಲ)–ನಾಟಕ ವೇಷಧಾರಿಗಳನ್ನು ಒಂದೇ ಲಾರಿಯ ಮೇಲೆ ಗೂಬೆಗಳಂತೆ ನಿಲ್ಲಿಸಿದ್ದ ಫ್ಲೋಟೊಂದು ಹರಿಯಿತು. ಈ ಎಲ್ಲ ಮತಗಳಾಗಲೀ ಮತಧರ್ಮಗಳಾಗಲೀ ಒಂದೇ ಎಂದು ಈ ಫ್ಲೋಟು ಯಾವ ರೀತಿಯಲ್ಲಿ ಶ್ರುತಪಡಿಸುತ್ತದೆ? ಒಂದೇ ಹಲಗೆಯ ಮೇಲೆ ನಿಂತುಕೊಂಡರೆ, ಹುಳು, ಹಾವು, ಹಸು, ಆನೆ, ಕುದುರೆ, ಒಂಟೆಗಳು, ಒಂದೇ ಎಂದು ನಿರ್ಣಯವಾಗುತ್ತದೆಯೇ?'(ಆಧಾರ ೧೬)

ಇಂದಿನ ಕನ್ನಡ ಹಾಸ್ಯ ಸಾಹಿತ್ಯದ ಬಗ್ಗೆ ನಾಲ್ಕು ಮಾತು. ಕನ್ನಡದ ಹಾಸ್ಯ ಸಾಹಿತ್ಯ ಎಂದರೆ, ಕೈಲಾಸಂ, ರಾಶಿ, ನಾಕ, ರಾಜರತ್ನಂ ಇವರ ಕಾಲಕ್ಕೆ ಮುಗಿಯಿತು

ಎಂಬ ಭಾವನೆ ಇದೆ. ಈಗಾಗಲೇ ನೀವು ಮೇಲೆ ಓದಿರುವಂತೆ ಇದು ನಿಜವಲ್ಲ. ಕನ್ನಡದಲ್ಲಿ ನಗೆಹೊನಲು ಇಂದಿಗೂ ಹರಿದು ಬಂದಿದೆ. ಉದ್ದಾಮ ಸಾಹಿತಿಗಳೂ, ಶ್ರೇಷ್ಠ ಹಾಸ್ಯ ಲೇಖಕರುಗಳಾದ ಅ.ರಾ.ಮಿತ್ರ, ಪ್ರಭುಶಂಕರ ಇವರಿಂದ ಹಿಡಿದು, ದುಂಡಿರಾಜ್, ಶ್ರೀನಿವಾಸ ವೈದ್ಯ, ಸಿ.ಎನ್.ಕೃಷ್ಣಮಾಚಾರ್, ಭುವನೇಶ್ವರಿ ಹೆಗಡೆ, ಎಂ. ಶಿವಕುಮಾರ್, ಬೇಲೂರು ರಾಮಮೂರ್ತಿ, ಬಿ.ಎಸ್. ಚಂದ್ರಶೇಖರ್, ವೈ.ಎನ್. ಗುಂಡೂರಾವ್ ಇತ್ಯಾದಿ ಇನ್ನೂ ಅನೇಕರ ಲೇಖಣಿಯಿಂದ ಉತ್ತಮ ಹಾಸ್ಯ ಸಾಹಿತ್ಯ ಇಂದಿಗೂ ಹರಿಯುತ್ತಿದೆ.

೧೯೪೨ರಲ್ಲಿ ಆರಂಭವಾದ 'ಕೊರವಂಜಿ' ೨೫ ವರ್ಷಗಳ ಕಾಲ ಕನ್ನಡದ ಹಾಸ್ಯ ಸಾಹಿತ್ಯಕ್ಕೆ ಬೇಕಾಗಿದ್ದ ಕುಮ್ಮಕ್ಕು ಕೊಟ್ಟು, ಕನ್ನಡಿಗರಿಗೆ ನಗುವುದನ್ನು ಕಲಿಸಿ ೧೯೬೭ರಲ್ಲಿ ನಮ್ಮನ್ನಗಲಿದಳು. ಇದಾದ ಹದಿನಾರು ವರ್ಷಗಳ ನಂತರ, ರಾಶಿಯವರು ಇನ್ನೂ ಬದುಕಿರುವಾಗಲೇ ಅವರ ಆಶೀರ್ವಾದದೊಡನೆ ಕೊರವಂಜಿಯ ಮಗಳು 'ಅಪರಂಜಿ' ಬೆಳಕು ಕಂಡಳು. ಕೊರವಂಜಿಯಂತೆ ಅಪರಂಜಿಯೂ ಹೊಸ ಪೀಳಿಗೆಯ ಹಾಸ್ಯ ಲೇಖಕರಿಗೆ ಸುಸ್ವಾಗತದ ಚಾಪೆಯನ್ನು ಹಾಸಿದಳು. ಅಪರಂಜಿಯ ಹಾಸ್ಯ ಲೇಖಕರ ಬಳಗ ಬೆಳೆಯತೊಡಗಿತು. ಶ್ರೀನಿವಾಸ ವೈದ್ಯ, ಎಂ.ಎಸ್.ಕೆ. ಪ್ರಭು ಇವರ ಉತ್ತಮ ಹಾಸ್ಯ ಸಾಹಿತ್ಯದಿಂದ ಭೂಷಿತಳಾದ 'ಅಪರಂಜಿ' ರಾಶಿಯವರ ಪುತ್ರ ಶಿವ ಕುಮಾರ್ (ಅಪರಂಜಿ ಶಿವು) ಅವರ ನೇತೃತ್ವದಲ್ಲಿ, ವೃದ್ಧಿಸಿದಳು. ಬಹುಜನ ಮಹಿಳಾ ಲೇಖಕಿಯರು 'ಅಪರಂಜಿಯ' ಬೆಳವಣಿಗೆಯಲ್ಲಿ ಪಾಲುಗೊಂಡರು. ಶಿವ ಕುಮಾರ್ ಅವರು ಹೇಳುವಂತೆ: 'ಹಾಗೆ ನೋಡಿದರೆ, ಅಪರಂಜಿ ಮಹಿಳಾ ಬರಹಗಾರ್ತಿಯರ ಒಂದು ದಂಡನ್ನೇ ಸೃಷ್ಟಿಸಿದೆಯೇನೋ ಅನ್ನಿಸುತ್ತದೆ. ಮೊದಲ ಸಂಚಿಕೆಗಳಿಗೆ ಬರೆಯುತ್ತಿದ್ದ, ಲೀಲಾ ಮಿರ್ಲೆ, ಕಮಲಾ ರಾಮಸ್ವಾಮಿ, ಭುವನೇಶ್ವರಿ ಹೆಗಡೆ ಇವರುಗಳೇ ಅಲ್ಲದೆ, ಟಿ.ಎಸ್.ಅಂಬುಜಾ, ಚಂಚಲಾ ಶ್ರೀಕಂಠಯ್ಯ, ಚಂಚಲಾ ಸುರತ್ಕಲ್, ಇಂದು ರಮೇಶ್, ಜ್ಯೋತ್ಸ್ನಾ ಕಾಮತ್, ಸರೋಜ ಆಚಾರ್ಯ, ಶೈಲಜಾ ಪ್ರಭಾಕರ್, ಶೋಭಾ ಪ್ರಮೋದ್, ವಿಜಯಾ ಸಚ್ಚಿದಾನಂದ್, ನಂದಿನಿ ಕಾಪಡಿ, ಶ್ಯಾಮಲಾ ರವಿಶಂಕರ್, ಕುಮುದಾ ಪುರುಷೋತ್ತಮ್, ಅರುಣಾ ಕಾರಂತ, ಲೀಲಾ ಶೇಖರ್ ಇವರೇ ಮೊದಲಾಗಿ ಅನೇಕ ಲೇಖಕಿಯರು 'ಅಪರಂಜಿ'ಯನ್ನು ತಮ್ಮ ನಗೆ ಪ್ರಜ್ಞೆಯಿಂದ ಶ್ರೀಮಂತ ಗೊಳಿಸಿದ್ದಾರೆ' (ಆಧಾರ ೧೩).

೧೯೬೦ರ ದಶಕದಲ್ಲಿ, ಅಮೆರಿಕದ ಶಾಸನದಲ್ಲಾದ ದೊಡ್ಡ ಬದಲಾವಣೆಯಿಂದ, ಭಾರತದಿಂದ ಅಮೆರಿಕಕ್ಕೆ ವಲಸೆ ಬರುವುದು ಸುಲಭವಾಯಿತು. ಈ ಸದವಕಾಶವನ್ನು ಉಪಯೋಗಿಸಿಕೊಳ್ಳುತ್ತ, ಹೆಚ್ಚುಹೆಚ್ಚು ಸಂಖ್ಯೆಯಲ್ಲಿ ಭಾರತೀಯರು ಅಮೆರಿಕಕ್ಕೆ

ಬರುವುದು ಪ್ರಾರಂಭವಾಯಿತು. ಇದರಲ್ಲಿ ಒಂದು ದೊಡ್ಡ ಭಾಗ ಕನ್ನಡಿಗರದ್ದು. ಹೀಗೆ ಬಂದ ಕನ್ನಡಿಗರು ತಮ್ಮೊಡನೆ ತಂದ ಸಂಸ್ಕೃತಿ, ಭಾಷೆ, ಕಲೆ, ಸಾಹಿತ್ಯಗಳನ್ನು ಇಲ್ಲಿ ಪೋಷಿಸುತ್ತ ಬಂದರು. ಕಳೆದ ಇಪ್ಪತ್ತು ವರ್ಷಗಳಲ್ಲಿ ಅಮೆರಿಕದಲ್ಲಿ ಕನ್ನಡ ಸಾಹಿತ್ಯ ಕೃಷಿ ಚೆನ್ನಾಗಿಯೇ ನಡೆದಿದೆ. ಆದರೆ ಅದರಲ್ಲಿ ಹಾಸ್ಯ ಸಾಹಿತ್ಯ ಕಡಿಮೆ. ಇಲ್ಲಿನ ವಿವಿಧ ಕನ್ನಡ ಕೂಟಗಳ ಆಶ್ರಯದಲ್ಲಿ ಹೊರಬರುತ್ತಿರುವ ವಿಶೇಷ ಸಂಚಿಕೆಗಳು ಕನ್ನಡ ಲೇಖನಗಳ ಆಕರವಾಗಿವೆ. ಇಲ್ಲಿನ ಹಾಸ್ಯ ಲೇಖನಗಳ ವಸ್ತು ಮುಖ್ಯವಾಗಿ ಎರಡು ವಿಭಿನ್ನ ಸಂಸ್ಕೃತಿಗಳು ಬೆರೆತಾಗ ಉದ್ಭವಿಸುವ ಹಾಸ್ಯ ಪ್ರಸಂಗಗಳನ್ನವಲಂಬಿಸಿವೆ. ಈ ದೃಷ್ಟಿಯಿಂದ ಇವು ಕನ್ನಡದಲ್ಲಿ ವಿಶಿಷ್ಟವಾದ ಹೊಸ ಹಾಸ್ಯ ಸಾಹಿತ್ಯವನ್ನು ಸೃಷ್ಟಿಸುತ್ತಿವೆ. ಉದಾಹರಣೆಗೆ, ಉದ್ದುದ್ದದ ಹೆಸರಿನ ಭಾರತೀಯರು ಇಲ್ಲಿಗೆ ಬಂದಾಗ ಅವರ ಹೆಸರಿಗೆ ಆಗುವ ಕತ್ತರಿ ಪ್ರಯೋಗ, ಭಾರತೀಯರು ಅಮೆರಿಕದ ನಡೆನುಡಿಗಳನ್ನು ಅನುಸರಿಸಲು ಹೋಗಿ ಪುಕ್ಕ ತರಿದುಕೊಳ್ಳುವ ಸನ್ನಿವೇಶಗಳು, ಇಲ್ಲಿನ ಊಟ ಅಡಿಗೆಗಳಿಗೆ ಹೊಂದಿಕೊಳ್ಳಲು ಪಡುವ ಬವಣೆ, ಇಲ್ಲಿಂದ ಇವರು ಭಾರತಕ್ಕೆ ಹೋದಾಗ, ಅಲ್ಲಿಯವರು ಇಲ್ಲಿಗೆ ಬಂದಾಗ, ಆಗುವ ಅವಾಂತರಗಳು ಇವು ಅನೇಕ ಹಾಸ್ಯ ಲೇಖನಗಳ ವಸ್ತುವಾಗಿವೆ. ನಳಿನಿ ಭಟ್, ಆಶಾ ಬಾಲ ಕೃಷ್ಣ ಭಟ್, ಪಿ. ಎಸ್. ಮಯ್ಯ, ನಳಿನಿ ಮಯ್ಯ, ಶ್ರೀವತ್ಸ ಜೋಷಿ, ತಾವರೆಕೆರೆ ಶ್ರೀಕಂಠಯ್ಯ, ಅಶ್ವತ್ಥ ಎನ್. ರಾವ್, ಎಚ್.ವೈ.ರಾಜಗೋಪಾಲ್ ಇವರೆಲ್ಲ ಉತ್ತಮ ಹಾಸ್ಯ ಲೇಖನಗಳನ್ನು ಬರೆದಿದ್ದಾರೆ. ರುದ್ರ ಶಿವ, ಕಪ್ಪಿನಿಯ ಮತ್ತು ಎಂ.ಎಸ್. ನಟರಾಜ ಇವರು ಹಾಸ್ಯ ಭರಿತ ಕವನಗಳನ್ನು ಬರೆದಿದ್ದಾರೆ. ಶ್ರೀಮತಿ ಅಲಮೇಲು ಅಯ್ಯಂಗಾರ್ ಅವರು ಎಂಟು ಪ್ರಹಸನಗಳನ್ನು ಬರೆದು ಈ ನಾಡಿನ ಅನೇಕ ರಂಗಸ್ಥಳಗಳಲ್ಲಿ ಆಡಿಸಿದ್ದಾರೆ. ಅವರ ನಾಲ್ಕು ಹಾಸ್ಯನಾಟಕಗಳ ಪ್ರಕಟಿತ ಸಂಕಲನ 'ಹೈಟೆಕ್ ಹಯವದನಾಚಾರ್' ಉತ್ತಮ ಪುಸ್ತಕ. ಎಚ್.ಕೆ.ನಂಜುಂಡಸ್ವಾಮಿಯವರ ಹಾಸ್ಯ ಪ್ರಧಾನವಾದ ನಾಲ್ಕು ಕನ್ನಡ ಪುಸ್ತಕಗಳು, 'ನಿಶ್ಶಬ್ದ ಸಂಗೀತ', 'ಕಾನನದ ಮಲ್ಲಿಗೆ', 'ಕಲಸು ಮೇಲೋಗರ', ಮತ್ತು 'ಸುಶ್ರುತ ನಡೆದ ಹಾದಿಯಲ್ಲಿ....' ವಿಮರ್ಶಕರ ಗಮನವನ್ನು ಸೆಳೆದಿವೆ. ಜನಾರ್ಧನ ಸ್ವಾಮಿಯವರು ಉತ್ತಮದರ್ಜೆಯ ವ್ಯಂಗ್ಯ ಚಿತ್ರಗಳನ್ನು ಬರೆದು ಪ್ರಕಟಿಸಿದ್ದಾರೆ. ಈ ಮೇಲಿನ ಎಲ್ಲ ಲೇಖಕರೂ, ಮೇಲೆ ಹೆಸರಿಸದ ಅನೇಕರೂ ಹೊರನಾಡ ಕನ್ನಡಿಗರ ಹಾಸ್ಯ ಸಾಹಿತ್ಯವನ್ನು ಅಕ್ಕರೆಯಿಂದ ಮುಂದೂಡುತ್ತಿದ್ದಾರೆ.

ಹೀಗೆ 'ನಗೆಗಡಲು'ವಿನಿಂದ, ಹೊರನಾಡ ಕನ್ನಡಿಗರವರೆಗೆ ಆಧುನಿಕ ಕನ್ನಡ ಹಾಸ್ಯ ಸಾಹಿತ್ಯ ತನ್ನ ಸೆರಗನ್ನು ಪಸರಿಸಿದೆ. ಮೊದಮೊದಲು ಇಂಗ್ಲಿಷಿನಿಂದ ಪ್ರಭಾವಿತವಾದ ಕನ್ನಡ ಹಾಸ್ಯ ಸಾಹಿತ್ಯ ಶತಮಾನ ಪೂರ್ತಿ ಇಂಗ್ಲಿಷಿನೊಡನೆ ನಿಕಟ

ಬಾಂಧವ್ಯವನ್ನು ಉಳಿಸಿಕೊಂಡೇ ಬಂದಿದೆ. ಕಳೆದ ಶತಮಾನದಲ್ಲಿ ಹತ್ತಾರು ಹಾಸ್ಯ ಪ್ರಾಚಾರ್ಯರು ವಿವಿಧ ದಿಕ್ಕಿನಲ್ಲಿ ಕನ್ನಡದ ಹಾಸ್ಯ ಸಾಹಿತ್ಯದ ಮುನ್ನಡೆಯನ್ನು ನಿರ್ದೇಶಿಸುತ್ತ ನಡೆಸಿಕೊಂಡು ಬಂದಿದ್ದಾರೆ. ಈ ಲೇಖನದಲ್ಲಿ ಅವರೆಲ್ಲರನ್ನೂ ಸ್ಮರಿಸಲು ಸಾಧ್ಯವಾಗಿಲ್ಲ. ಇದಕ್ಕಾಗಿ ಓದುಗರ ಕ್ಷಮೆ ಬೇಡಿ ಈ ಪಕ್ಷಿನೋಟವನ್ನು ಮುಗಿಸುತ್ತೇನೆ.

ನಗೆಗನ್ನಡಂ ಗೆಲ್ಗೆ.

ಗ್ರಂಥಋಣ


೧ ಆರ್. ನರಸಿಂಹಾಚಾರ್ಯ: 'ನಗೆಗಡಲು', ೧೯೧೦

೨ ಎಡ್ಯೆಯೂರ್ ಶಿವಮತಿ: 'ಗಾಂಪರೊಡೆಯರ ಕಥೆಗಳು', ಸುರಾ ಬುಕ್ಸ್. ಬೆಂಗಳೂರು, ೨೦೦೩

೩ ಎಚ್.ತಿಪ್ಪೆರುದ್ರಸ್ವಾಮಿ, (ಸಂ.) 'ಕೈಲಾಸಂ ಕೃತಿಗಳು', ಕನ್ನಡ ಅಧ್ಯಯನ ಸಂಸ್ಥೆ, ೧೯೮೭

೪ ಅಪರಂಜಿ ಶಿವು:'ಕನ್ನಡದ ಹಾಸ್ಯ ಸಾಹಿತ್ಯ ಪರಂಪರೆ' ವಿಕಾಸ, (ಸಂ.) ಯು.ಬಿ. ವಾಸುದೇವ್, ಶ್ರೀಗಂಧ ಕನ್ನಡ ಕೂಟ, ೨೦೦೪

೫. ಶ್ರೀನಿವಾಸ ವೈದ್ಯ: 'ರಾಶಿರಾಶಿ ನೆನಪು'. (ಸಂ.) ಶಿವ ಕುಮಾರ್, ಕೊರವಂಜಿ ಅಪರಂಜಿ ಟ್ರಸ್ಟ್, ೨೦೦೫, ಪುಟ ೧೨೪

೬. ಎಚ್.ಕೆ. ರಂಗನಾಥ್: 'ನೆನಪಿನ ನಂದನ', ಸಾಹಿತ್ಯ ಮಂದಿರ, ೨೦೦೦, ಪುಟ ೪೩

೭. ನಾ. ಕಸ್ತೂರಿ: 'ಅನರ್ಥಕೋಶ', ಅಂಕಿತ ಪ್ರಕಾಶನ, ಬೆಂಗಳೂರು ೫೬೦ ೦೦೪, ಮರುಮುದ್ರಣ ೨೦೦೬

೮. ಗೊರೂರು ರಾಮಸ್ವಾಮಿ ಅಯ್ಯಂಗಾರ್: 'ನಮ್ಮ ಊರಿನ ರಸಿಕರು', ಐ.ಬಿ.ಎಚ್. ಪ್ರಕಾಶನ, ೨೦೦೬, ಪುಟ ೧೦೦

೯ ಜಿ.ಪಿ.ರಾಜರತ್ನಂ: 'ರತ್ನನ ಪದಗಳು-ನಾಗನ ಪದಗಳು', ಶಾಕ್ಯ ಸಾಹಿತ್ಯ ಮಂಟಪ, ೨೦೦೦, ಪುಟ ೯೧

೧೦. ಎಚ್.ಕೆ. ರಂಗನಾಥ್: 'ವೈದ್ಯನಲ್ಲದ ಡಾಕ್ಟರು', ಪ್ರಿಸಮ್ ಬುಕ್ಸ್(ಪ್ರೈ) ಲಿ., ೨೦೦೦, ಪುಟ ೨೮

೧೧. ಜಿ.ಎಸ್. ಕೇಶವರಾವ್: 'ಬೀchi: ಬುಲೆಟ್ಸು, ಬಾಂಬ್ಸು, ಭಗವದ್ಗೀತೆ', ಅಂಕಿತ ಪುಸ್ತಕ, ೨೦೦೫ (ವಿವಿಧ ಪುಟಗಳಿಂದ)

೧೨. ವೈ ಎನ್ ಕೆ. 'ಬೆಸ್ಟ್ ಆಫ್ ವಂಡರ್ಸ್', (ಸಂ.) ವಿಶ್ವೇಶ್ವರ ಭಟ್, ಅಂಕಿತ ಪುಸ್ತಕ, ೨೦೦೩, (ವಿವಿಧ ಪುಟಗಳಿಂದ)

೧೩. ಲಾಂಗೂಲಾಚಾರ್ಯ: 'ಆಸ್ತ್ಮಾ-ಅರ್ಧ ಷಷ್ಟ್ಯಬ್ಧಿ', ಲಲಿತ ಪ್ರಬಂಧಗಳು, (ಸಂ) ಅ.ರಾ. ಮಿತ್ರ, ವಿಶ್ವ ಕನ್ನಡ ಸಮ್ಮೇಳನ, ೧೯೮೨, ಪುಟ ೨೦೯

೧೪. ಅ.ರಾ. ಮಿತ್ರ: ಪ್ರಸ್ತಾವನೆ, 'ಲಲಿತ ಪ್ರಬಂಧಗಳು', ವಿಶ್ವ ಕನ್ನಡ ಸಮ್ಮೇಳನ, ೧೯೮೨ ಪುಟ xi

೧೫. ಶ್ರೀರಂಗ: ಸ್ವಂತ ಶ್ರಾದ್ಧ, 'ಲಲಿತ ಪ್ರಬಂಧಗಳು', (ಸಂ.) ಅ.ರಾ. ಮಿತ್ರ, ವಿಶ್ವ ಕನ್ನಡ ಸಮ್ಮೇಳನ, ೧೯೮೨, ಪುಟ ೪೭

೧೬. ಬಿ.ಜಿ.ಎಲ್. ಸ್ವಾಮಿ: 'ಮೈಸೂರು ಡೈರಿ', ಕಾವ್ಯಾಲಯ, ಮೈಸೂರು, ೧೯೯೬, ಪುಟ ೧೦೭



*ಕನ್ನಡ ಹಾಸ್ಯ ಸಾಹಿತ್ಯಕ್ಕೆ ನಾಂದಿ ಹಾಡಿದ ಪಿತಾಮಹ*

# 'ಕಾರಣ ಪುರುಷ' ಕೈಲಾಸಂ

## ಎಚ್.ವೈ. ರಾಜಗೋಪಾಲ್

ಕೈಲಾಸಂ ಎಂದೊಡನೆ ಮನಸ್ಸಿನಲ್ಲಿ ಅವರು ಸೃಷ್ಟಿಸಿದ ಹಲವಾರು ಪಾತ್ರಗಳ ಒಂದು ಮೆರವಣಿಗೆಯೇ ಹೊರಡುತ್ತದೆ. ನಾಟಕಗಳಲ್ಲಿ ಆ ಪಾತ್ರಗಳು ಬಂದುಹೋದ ಸನ್ನಿವೇಶಗಳು, ಅವರಾಡಿದ ಮಾತುಗಳು, ಹಾಸ್ಯದ ಚಟಾಕಿಗಳು ಮನಸ್ಸಿನಾಳದಿಂದ ಮತ್ತೆ ಮೇಲೆದ್ದು ನಗುವಿನ ಹೊನಲು ಹರಿಸುತ್ತವೆ. ಅವರ ಮಾತುಗಳನ್ನು ಮತ್ತೆ ಮತ್ತೆ ಸವಿಯಬೇಕೆನ್ನಿಸುತ್ತದೆ.

ಆ ಮೆರವಣಿಗೆಯಲ್ಲಿ ಪ್ರಧಾನವಾಗಿ ಕಾಣುವವಳು ನಾಗತ್ತೆ. ಟೊಳ್ಳು ಗಟ್ಟಿ, ಪಾತೂ ತೌರ್ಮನೆ, ಸಾತೂ ತೌರ್ಮನೆಗಳಲ್ಲಿ ಬರುವ ನಾಗತ್ತೆ ವಿತಂತು. ಮಡಿಹೆಂಗಸು. ನಮ್ಮ ನಾಟಕರಂಗದ ಮೇಲೆ ಕಾಣಿಸಿಕೊಂಡ ಮೊಟ್ಟಮೊದಲ ಮಡಿಹೆಂಗಸು. ನಾಗತ್ತೆಯ ನಾಲಗೆ ಬಲು ಹರಿತ. ಬಿಂಕ ಬೆಡಗಿನ ಮಾತಿಗೆ, ಥಳುಕುಪಳುಕಿಗೆ ಮನಸೋಲುವವಳಲ್ಲ. ಬೂಟಾಟಿಕೆ ಕಂಡರೆ ನಿರ್ದಾಕ್ಷಿಣ್ಯವಾಗಿ ಅದನ್ನು ಪ್ರತಿಭಟಿಸುತ್ತಾಳೆ. ಆದರೆ ಅವಳದ್ದು ನೊಂದ ಹೃದಯ. ಅಂದಿನ ದಿನಗಳಲ್ಲಿ ನಮ್ಮ ಸಮಾಜ ವಿತಂತುಗಳಿಗೆ ಕೊಟ್ಟ ಹಿಂಸೆ ಸಾಮಾನ್ಯವಲ್ಲ. 'ಪಾಪಿ ಜನ್ಮ ನಂದು' ಎಂದು ಸಂಕಟಪಡುತ್ತಾಳೆ. ತನ್ನ ತಮ್ಮ ಹಿರಿಯಣ್ಣಯ್ಯನ ಸೊಸೆಯರು ಪಾತು ಸಾತುಗಳನ್ನು ಅವರವರ ತೌರ್ಮನೆಗಳಿಗೆ ತಲುಪಿಸಲು ಹೊರಟಿದ್ದಾಳೆ. ಪಾತು ಅನುಕೂಲಸ್ಥರ ಮನೆ ಹೆಣ್ಣು. ಅವಳ ತಂದೆ ರಾಮಣ್ಣ ರಾಂಪುರದ ಮಾಮಲೆದಾರ. ಮನೆಯಲ್ಲಿ

ಜಾತಿ ನಾಯಿ ಬೆಳೆಸಿದ್ದಾರೆ. ಪಾತು ಮನೆ ಸಮೀಪಿಸುವ ಹೊತ್ತಿಗೆ ಆಳು-ಬೋರ ನಾಯಿಗೆ ಸ್ನಾನ ಮಾಡಿಸಿಕೊಂಡು ಬರಲು ಕೆರೆಗೆ ಹೊರಟಿದ್ದಾನೆ. ಅದನ್ನು ತಿಳಿದು-

ನಾಗತ್ತೆ: ... ಜಾತೀ ನಾಯೀ...ಹುಂ...ಕೆರೇಲಿ ಶುಭ್ರವಾಗಿ ಸ್ನಾನ ಮಾಡ್ಬಿಟ್ಟು, ಸ್ವಾಮಿ ದರ್ಶನ ಮಾಡಿಕೊಂಡ್ ಬರುತ್ತೇನೋ, ಈ ಶ್ವಾನ ಮುಂಡೇದು!... ಮುಂಜಿಯೇನಾದ್ರೂ ಆಗಿದೆಯೇನು, ಈ ಮೃಗಕ್ಕೆ? ...

ಮನೆಯ ಗೇಟಿನ ಬಳಿ ಬಂದಾಗ ಮನೆಗೆ ಒಂದು ಬೋರ್ಡು ತಗಲಿಸಿರುವುದು ಕಾಣುತ್ತದೆ. ಅದೇನೆಂದು ನಾಗತ್ತೆ ಕೇಳುತ್ತಾಳೆ.

ಪಾತು: ಅದು ನಮ್ಮನೆ ಹೆಸ್ರು...ಜ್ಞಾನ ವಿಲ್ಲಾ (Villa) ಅಂತ.

ನಾಗತ್ತೆ: ಗೊತ್ತೂ! ಅದನ್ನ ನಾಚಿಕೆ ಹೇಸ್ಕೆ ಇಲ್ಲದೆ ಬೀದೀಲಿ ಬಡಕೊಳ್ಳೋಧೇ?...!

ಪಾತು: ವಿಲ್ಲ (Villa) ಅಂಬೋದು ಇಂಗ್ಲೀಷು... ಇಲ್ಲ ಅಂತಲ್ಲ.

ನಾಗತ್ತೆ: ಗೊತ್ತೂ! ಇಧೆ ಇಧೇ ಅಂತರ್ಥ...ಇಂಗ್ಲಿಷ್ ಭಾಷೇ...ತಳ್ಕಳ್ಕು...ತುರುಕಿನ ಹಾಗೆ...ಇಲ್ಲ ಅಂದ್ರೆ ಇಧೇ. ಮನೆ ಅಂದ್ರೆ ಮಷಾಣ...ಮನುಷ್ಯರು ಅಂದ್ರೆ ಪ್ರೇತಗಳು...! ನಡಿ, ನಡಿ...

ಇಷ್ಟು ಹೊತ್ತಿಗೆ ಅವರು ವೆರಾಂಡ ತಲುಪಿರುತ್ತಾರೆ. ಪಾತು ತಾಯಿ ಲಕ್ಷೀದೇವಮ್ಮ ಆ ಊರಿನ Women's Progressive Unionನ ಅಧ್ಯಕ್ಷೆ. ಆಕೆ ತನ್ನ ಭಾಷಣವೊಂದರ ವರದಿ ಪತ್ರಿಕೆಯಲ್ಲಿ ಬಂದಿದ್ದನ್ನು ಪಾತುವಿಗೆ ತೋರಿಸುತ್ತಾಳೆ. ಅದೇನು ಭಾಷಣ ಮಾಡಿದಿರಿ ಎಂದು ನಾಗತ್ತೆ ಕುತೂಹಲದಿಂದ ಕೇಳುತ್ತಾಳೆ. ಉತ್ತರವಾಗಿ ಲಕ್ಷ್ಮೀದೇವಮ್ಮ '...ಮಕ್ಕಳ್ನ ಸಾಕೋದು ಹೂವಿನ ಗಿಡ ಸಾಕಿದ ಹಾಗೆ ...ಪಾತಿ ಚೆನ್ನಾಗಿ ಕಟ್ಟಿ, ಅಹಾರ ಇತ್ಯಾದಿಗಳ್ನ ಚೆಲ್ಲಿ ಶುಭ್ರವಾದ ನೀರು ಬಿಟ್ಟು ನಾಜೋಕಾಗಿ ಹ್ಯಾಗೆ ಹೂವಿನಗಿಡಗಳನ್ನ ಬೆಳೆಸ್ತೇವೋ ಅದೇಪ್ರಕಾರ...ಅಂಬೋದು ನನ್ನ lectureನ ಸಾರಾಂಶ' ಎನ್ನುತ್ತಾಳೆ. ಅದಕ್ಕೆ ನಾಗತ್ತೆಯ ಉದ್ಗಾರ:

ನಾಗತ್ತೆ: ಹ್ಯಾಗಿರಬೇಕು, ಹ್ಯಾಗೆ ಮಾಡಬೇಕು, ಅಂಬೋದನ್ನೆಲ್ಲಾ ಸಿಕ್ಕಾಪಟ್ಟೆ ಬಾಯಿಂದ ಬೊಗಳೋ ಬದಲಾಗಿ ತಾನೇ ತನ್ನ ಹೊಟ್ಟೇಲಿ ಹೆತ್ತ ಒಂದೆರಡು ಮಕ್ಕಳನ್ನ ಸಾಕಿ ನಮೂನೆಯಾಗಿ ತೋರ್ಸೋದಲ್ವೇ ಉತ್ತಮಾ? ...

ಪಾತುವಿನ ಮನೆಗೆ ಅದೇ ಊರಿನ ಲಾಯರಿ ರಾಮಣ್ಣನೂ ಅವನ ಪತ್ನಿ ಪಾರ್ವತಮ್ಮನೂ ವರಾನ್ವೇಷಣೆಗೆ ಬಂದಿದ್ದಾರೆ. ಪಾತುವಿನ ತಮ್ಮ ಕಿಟ್ಟಿ ಮದುವೆಗಿದ್ದಾನೆ. ಅವನ ನೆಪದಲ್ಲಿ ಸಾಕಷ್ಟು ದುಡ್ಡು ಕೀಳಬೇಕೆಂದು ರಾಮಣ್ಣ-

ಲಕ್ಷ್ಮೀದೇವಮ್ಮ ಇಬ್ಬರೂ ಡಬ್ಬಲ್ ಡಕಾಯಿತಿ ಮಾಡಲು ತಂತ್ರ ಹೂಡುತ್ತಾರೆ. ರಾಮಣ್ಣ ತಾನು ವರದಕ್ಷಿಣೆ ಕೇಳುವಷ್ಟು ಕೀಳು ಮನುಷ್ಯನಲ್ಲ ಎಂದು ಸೋಗು ಹಾಕುತ್ತ, ಮಾತುಮಾತಿಗೂ ಜೋಕೂ ಎಂದು ನರಸಿಂಹಯ್ಯನ ಪಕ್ಕೆಯನ್ನು ಚುಚ್ಚುತ್ತಿರುತ್ತಾನೆ. ನರಸಿಂಹಯ್ಯನಿಗೆ ಸಹನೆ ಮೀರಿ ತಾನೂ ಒಂದು ಜೋಕು ಮಾಡಿ ರಾಮಣ್ಣನ ಪಕ್ಕೆಯನ್ನು ಬಲವಾಗಿ ತಿವಿದಾಗ–

ರಾಮಣ್ಣ: (ಪಕ್ಕೆಯನ್ನು ಸವರಿಕೊಳ್ಳುತ್ತ) ಕ್ಷಮಿಸು dear boy! ನಿನಗೆ ಇಷ್ಟು sharp sense of humour ಇರೋದು ನನಗೆ ಗೊತ್ತಿರಲಿಲ್ಲ...ಎನ್ನುತ್ತಾನೆ!

ಕಿಟ್ಟಿಗೆ ಇನ್ನೂ ಜುಟ್ಟಿದೆ. ಅದೊಂದು ಶನಿ, ಅದನ್ನು ಹೇಗಾದರೂ ತೆಗೆಸಬೇಕು ಅಂತ ಅವನ ಆಸೆ. ಎಷ್ಟು ಜೋರಾಗಿ ಡ್ರೆಸ್ ಮಾಡಿಕೊಂಡರೂ, ತಾನು ಜುಟ್less ಆಗೋವರಿಗೂ ಜೋರು ಕಂಡುಬರೋದಿಲ್ಲ ಅಂತ ಅವನ ಕೊರಗು. ಆದರೆ ಅವನ ತಾಯಿಯ ಯೋಚನೆಯೇ ಬೇರೆ.

ಲಕ್ಷ್ಮೀದೇವಮ್ಮ: ಚೆನ್ನಾಗಿದೆ ನಿನ್ನ ಬುದ್ಧಿ! ನಿಮ್ಮಜ್ಜಿ ಕೈಲಿರೋದು ೨೦೦೦ ರೂಪಾಯಿ. ನಿನಗೇ ಅಂತ ಹೇಳಿಧಾಳೆ. ಇವತ್ತೋ ನಾಳೆಯೋ ಸಾಯೋ ಹಾಗೂ ಇಧಾಳೆ...ಇಷ್ಟರಲ್ಲಿ ನೀನು ತಲೆಬೋಳಿಸಿಕೊಂಡು ನಿಲ್ಲೊ...ಇದನ್ನೋಡಿ ಈ ಕೊಂಗನ ಕೈ ಪಿಂಡ ನನಗೆಲ್ಲಿ ಮುಟ್ಟುತ್ತೆ ಮೇಲೆ ಲೋಕದಲ್ಲೀ ಅಂತಾ ಕಾಶೀನೋ ರಾಮೇಶ್ವರಾನೋ ಎದ್ದುಬಿಡಲಿ ಅವಳು...ಕೈಗೆ ಬಂದ ರೂಪಾಯೀನೂ ಕಳಕೊಂಡು ...ನಿನ್ನ ಕ್ರಾಪ್ ತಲೇನೂ ಸವರಿಕೊಳ್ತಾ, ಕಣ್ಕಣ್ ಬಿಡೋ, ಕಪಿಯೇ!

–ಎಂದು ಮಗನ ಹೆಡ್ಡತನಕ್ಕೆ ಮದ್ದುಕೊಡುತ್ತಾಳೆ.

*

ಇನ್ನು ಬಂಡ್ವಾಳ್ವಿಲ್ಲದ ಬಡಾಯಿ...ಬಹುಶಃ ಕಾಲೇಜು ರಂಗಗಳಲ್ಲಿ ಇದರಷ್ಟು ಬಾರಿ ಆಡಿಸಿಕೊಂಡ ಕೈಲಾಸಂ ನಾಟಕ ಬೇರೆ ಇರಲಾರದು. ಇದರ ನಾಯಕ ಅಹೋಬ್ಲು ಏನೇನೂ ಸಂಪಾದನೆಯಿಲ್ಲದ ಆದರೆ ಅತೀ ಬಡಾಯಿ ಕೊಚ್ಚುವ ಒಬ್ಬ ಲಾಯರಿ. ತೀರ ಟೊಳ್ಳು ಮನುಷ್ಯ. ಅಹೋಬ್ಲುವಿನ ಕಕ್ಷಿಗಾರರು ಯಾರೂ ಅವನಿಗೆ ಮುಂಗಡ ಹಣ ಕೊಡುವವರಲ್ಲ. ಆದಕ್ಕೇ ಅಹೋಬ್ಲು ಯಾವಾಗಲೂ ಹೇಳುತ್ತಿರುತ್ತಾನೆ: 'ನನಗ್ಬರೋ ಫೀಸೆಲ್ಲಾ conditional upon my succesಉ, which again is always problematicಉ. ತನ್ನ ಗುಮಾಸ್ತೆ ಬಾಳು, ಮನೆಗೆಲಸದ ಬೋರ ಇವರಿಗೆ ಕೊಡಬೇಕಾದ ಸಂಬಳ ಕೊಡದೆ ಬಾಕಿ ಉಳಿಸಿಕೊಂಡಿದ್ದಾನೆ. ಅವರಾರ ಬಗೆಗೂ ಅವನಿಗೆ ಅನುಕಂಪವಿಲ್ಲ. ಕಡೆಗೆ ತನ್ನ ಮಗನ ಬಗ್ಗೆ ಕೂಡ ಅವನಿಗೆ ಅನುಕಂಪವಾಗಲೀ, ಪ್ರೀತಿಯಾಗಲೀ ಇಲ್ಲ. ಅ ಮಗ–ಮುದ್ಮಣಿ– ಸ್ವಲ್ಪ ಮಂದ, ಬುದ್ಧಿಯೂ ಅಷ್ಟೆ,

ಬಣ್ಣವೂ ಅಷ್ಟೆ. ಅದನ್ನು ತಂದೆಯಾದವನೇ ಸ್ವಲ್ಪವೂ ಸಂಕೋಚವಿಲ್ಲದೆ ಎಗತಾಳಿ ಮಾಡುತ್ತಾನೆ. ಅಹೋಬ್ಳು ಹೆಂಡತಿ ಜೀವು ಮಗನನ್ನು ಅತಿ ಮುದ್ದುಮಾಡುವ ಜಾತಿ.

ಬಾಳು ದಿನವೂ ಕೆಲಸಕ್ಕೆ ಬರುವುದು ಲೇಟು. ಆ ದಿನ ಅಹೋಬ್ಳು ಬಾಳುವಿನ ವರ್ತನೆ ಬಗ್ಗೆ ಬಹಳ ಸಿಟ್ಟಾಗಿದ್ದಾನೆ. ಈ ಹೊತ್ತೇನು, ಯಾವ ಹೊತ್ತೇನು? ಇವನ ಹಣೆಬರಹವೆಲ್ಲ lateಉ. ಹತ್ನೇ ತಿಂಗ್ಳಲ್ಲಂತೆ ಹುಟ್ಟಿದ್ದು ಇವ್ನು...ಹುಟ್ಟಿದ್ದೇ lateಉ!... ಎನ್ನುತ್ತಾನೆ.

ಕೆಲಸದಾಳು ಬೋರ ವೃದ್ಧ. ತಾತ ಮುತ್ತಾತನ ಕಾಲದಿಂದಲೂ ಅವನ ಮನೆಯವರೆಲ್ಲ ಕಸ ಗುಡಿಸಿ, ಗುಡಿಸಿ, ಈಗ ಅವನ ಹಟ್ಟೇಲಿ ಹುಟ್ಟುವ ಮಕ್ಕಳೆಲ್ಲ ಸೊಂಟ ಮುರಿದುಕೊಂಡೇ ಹುಟ್ಟುತ್ತವಂತೆ. ಅವನಿಗೆ ಅಹೋಬ್ಳು ಕೊಡುವ ಶಹಭಾಸ್‌ಗಿರಿ 'ಅವನಿಗೆ ಯಾವ ಕೆಲಸ ಹೇಳಿದ್ರೂ ಮೈ ಬಗ್ಗಿ ಮಾಡ್ತಾನೆ' ಎಂದು. ಶೆಟ್ಟರ ಅಂಗಡಿಯಿಂದ ದುಡ್ಡುಕೊಡದೆ (ನಾಳೆ ನಿಮ್ಮ ಕೇಸಿನ hearing ಇದೆ ಅಂತ ಹೇಳೋ) ಸಕ್ಕರೆ ತಂದು ಬಾಗಿಲ ಬಳಿ ಬಗ್ಗಿ ನಡೆಯುತ್ತಿರುವ ಆ ಬಡ ಬೋರನನ್ನು ನೋಡಿ ಅಹೋಬ್ಳು ಹೇಳುವುದೇನು? ಬೀದೀಲೇನಾದ್ರು ಬಿಡಿಕಾಸು ಬಿದ್ದಿದೇಂತ ಬಗ್ನೋಡ್ತ ಬರ್ತಿಧೀಯೇನೋ ಬಕ್ವೆ? ಆಮೇಲೆ ತನಗೆ ತಾನೇ ಕೊಟ್ಟುಕೊಳ್ಳುವ ಶಹಭಾಸ್‌ಗಿರಿ: ಚನ್ನಾಗಿ ಚುನಾಯಿಸ್ದೆ ಚಾಕರೀಗೆ ಈ ಚತುಷ್ಪಾದಾನ!

ಇನ್ನೊಂದು ಸನ್ನಿವೇಶ: ಬಾಳು ಚಿಕ್ರಾಯರ್ನ ಅಂದರೆ ಮುದ್ಮಣಿಯನ್ನ ಸ್ಕೂಲಿಗೆ ಕರೆದುಕೊಂಡುಹೋಗಬೇಕು. ಮುದ್ಮಣಿಯ ನೆರಳು ಅಲ್ಲಿ ಬೀಳುತ್ತಲೇ ಅಹೋಬ್ಳು ಇದೇನು ಗ್ರಹಣವೇ ಎಂಬ ಶಂಕೆಗೊಳಗಾಗುತ್ತಾನೆ. ಬಾಳುವನ್ನು ಸೂರ್ಯ ಗ್ರಹಣ ಅಂದರೇನು, ಚಂದ್ರ ಗ್ರಹಣ ಅಂದರೇನು ಎಂದೆಲ್ಲ ಕೇಳಿ ಕಡೆಯಲ್ಲಿ–

ಅಹೋಬ್ಳು: Goodಉ. Very goodಉ! ಇದ್‌ಹೇಳು ನೋಡೋಣ! 'Eclipse of the Earthoo' ಅಂದ್ರೇನು?

ಬಾಳೂ: (ಭ್ರುಕುಟಿಗಳನ್ನು ಗಂಟುಹಾಕಿ) Eclipse of the Eathoo...? ಎಲ್ಲಾದ್ರೂ ಉಂಟೆ ಸಾರ್?

ಅಹೋಬ್ಳು: ಉಂಟು ಬಾಳು, ಉಂಟು. Shadow of the Sunಉ...

ಬಾಳು: Sunಗೆ shadow ಉಂಟೆ ಸಾರ್?

ಅಹೋಬ್ಳು: ಉಂಟು ಬಾಳು, ಉಂಟು. Shadow of my sonಉ on this Eathoo!

ಜೀವೂಗೆ ಮುದ್ಮಣಿಯ ಫ್ಲೋಟೋ ತೆಗೆಸಬೇಕೆಂಬಾಸೆ. ಮುದ್ಮಣಿ ಬಣ್ಣ ಕಪ್ಪು. ಜೀವುಗೆ ಫ್ಲೋಟೋದಲ್ಲಾದರೂ ತನ್ನ ಮುದ್ದಿನ ಮಗ ಸ್ವಲ್ಪ ತಿಳಿಯಾಗಿ ಕಾಣಲಿ ಅಂತ ಆಸೆ.

ಜೀವು:...ಕಪ್ಪಗಿದ್ರೂನೂವೆ ಕೆಂಪಗೆ ಕಾಣೋಹಾಗೆ ಫ್ಲೋಟೋ ತೆಗಿಯೋಕೆ ಆಗೋದಿಲ್ವೇ?

ಅಹೋಬ್ಲು: Yes, yes. The answer is in the 'Negative!'...

ಅಯ್ಯರಿ (ಪರಶುರಾಮ ಪಟ್ಟರ್) ಅಹೋಬ್ಲುವಿನ ಕಕ್ಷಿಗಾರನಾಗಿ ಬರುವ ಒಬ್ಬ ವ್ಯಕ್ತಿ. ಅವನು ತನ್ನ ತಮಿಳು-ಕನ್ನಡದಲ್ಲಿ ಆಡುವ ಮಾತುಗಳು ನಗುವಿನ ಪ್ರವಾಹವನ್ನೇ ಉಕ್ಕಿಸುತ್ತವೆ. ಅಯ್ಯರಿ ಒಬ್ಬರ ಮನೆಯಲ್ಲಿ ಅಡಿಗೆ ಪರಿಚಾರಕ. ಅವನನ್ನು ಮನೆಯ ಯಜಮಾನಿ ಕೆಲಸದಿಂದ ತೆಗೆದುಹಾಕಿದ್ದಾಳೆ.

ಪರಶು: ಅಮ್ಮಾವ್ರ್ ನೀನು ಪಂದಾಕಿನಿಂದ ಮನೇಲಿ ಅರಶಿ ಪರಪ್ ನೆಯ್ಯಿ ಪಾಲ್ ಲೆಕ್ಕಂ ಟಪಲ್ ಆಕಿ ಓಯ್ತ್! ಒರಟ್ ಓಗ್! ಅನ್ನ್ ವೆರಟಿಬಿಟ್ರ!

ಅಹೋಬ್ಲು: ಅಮ್ಮಾವ್ರು ಹೇಳಿದ್ರೇನು? ಯಜಮಾನ್ರಿಗೆ appeal ಮಾಡ್ಕೊಳ್ಳಿಲ್ವೇ ನೀವು?

ಪರಶು: ಯಶಮಾನ್ರನ್ ಕೇಳಿತೆ. ಅದಕ್ಕೆ ಅವರ್ ಅಪ್ಪ, ನಾನು ಏನು ಮಾಟಲಿ? ನಿಂಕುಂ ಯಚಮಾನಿ ಅಮ್ಮಾವ್ರ್; ನನಕುಂ ಯಚಮಾನಿ ಅಮ್ಮಾವ್ರ್! ಕಲಾಟೆ ಮಾಟತೆ...ಅಮ್ಮಾವ್ರ ಮಾತ್ ನಾನ್ ಕೇಳುವ ಆಕೆ...ನೀನೂ ಕೇಳಿಕೊಂಡ್ ಒರಟ್‌ಓಗಿ ಬಾ ಅನ್ ಏಳಿತ್ರ್.

ಇನ್ನು ಮುದ್ಮಣಿ ತನಗೆ ಬೇಕೆಂದು ಕೇಳುವ ವಸ್ತುಗಳು: ದ್ಬಂರೋಟು, ಫ್ಲುರ್ಫುರ್ ಬಾಣ, ಸ್ಫಕ್ರೆ, ದ್ಬೆಲ್ಲ-ಇತ್ಯಾದಿಗಳ ಪಟ್ಟಿ ಕೈಲಾಸಂ ತಿಳಿದವರಿಗೆಲ್ಲಾ ಗೊತ್ತು!

*

ಹೀಗೆ ಹೇಳುತ್ತ ಹೇಳುತ್ತ ಸಂಜೆಗಳನ್ನು ಕಳೆಯಬಹುದು, ದಶಕಗಳ ಹಿಂದೆ ನಾವು ನಾಟಕದ ಹುಚ್ಚಿದ್ದ ಗೆಳೆಯರು ಸೇರಿದಾಗ ಹೇಳಿಕೊಳ್ಳುತ್ತಿದ್ದಂತೆ. ಕೈಲಾಸಂರವರ ೧೭ ನಾಟಕಗಳಲ್ಲಿ ಅರ್ಧಕ್ಕಿಂತ ಹೆಚ್ಚು ಹಾಸ್ಯನಾಟಕಗಳು. ಅವುಗಳಿಂದ ಇಂಥ ಪ್ರಸಂಗಗಳನ್ನು ಎಷ್ಟು ಬೇಕಾದರೂ ಎತ್ತಿಕೊಳ್ಳಬಹುದು. ನನ್ನ ಪ್ರೀತಿಯ ಗೆಳೆಯನೊಬ್ಬನಿದ್ದ-ಎಂ. ಬಾಲಸುಬ್ರಮಣ್ಯಂ-ಕೈಲಾಸಂನ ನೂರಾರು ಸಾಲುಗಳು ಅವನ ಬಾಯಲ್ಲಿರುತ್ತಿತ್ತು. ಈ ಮೇಲೆ ಉದ್ಧರಿಸಿದ ಸಾಲುಗಳನ್ನು ಆಧಾರ ೧ ರಿಂದ ತೆಗೆದುಕೊಂಡಿದ್ದೇನೆ.

೨

೧೯೨೦ರ ದಶಕದ ಸುಮಾರಿನಲ್ಲಿ ಕನ್ನಡಕ್ಕೆ, ಕನ್ನಡ ಜನತೆಗೆ ಹೊಸ ಉಸಿರು ತುಂಬಿದ ಇಬ್ಬರು ಪ್ರಮುಖರು ಆಚಾರ್ಯ ಬಿ.ಎಂ.ಶ್ರೀ. ಮತ್ತು ಟಿ.ಪಿ. ಕೈಲಾಸಂ. ನವೋದಯದ ಪ್ರವರ್ತಕರಾಗಿ ಬಿ.ಎಂ.ಶ್ರೀ. ಕನ್ನಡ ಕಾವ್ಯಕ್ಕೆ ಒಂದು ಹೊಸ ದಾರಿ ತೋರಿಸಿಕೊಟ್ಟರು. ಅದರ ಪ್ರಭಾವ ಕಾವ್ಯಕ್ಕೆ ಮಾತ್ರವಲ್ಲದೆ ಸಾಹಿತ್ಯದ ಇತರ ಪ್ರಕಾರಗಳಿಗೂ ಹಬ್ಬಿತು. ಕೈಲಾಸಂ ಕನ್ನಡ ನಾಟಕಕ್ಕೆ ಒಂದು ಹೊಸ ಆಯಾಮ ತೆರೆದುಕೊಟ್ಟರು. ಅಂದಿನವರೆಗೆ ಕೇವಲ ಪೌರಾಣಿಕ, ಚಾರಿತ್ರಿಕ ವಸ್ತುಗಳಿಗೇ ಮೀಸಲಾಗಿದ್ದು, ನಾನಾ ರೀತಿಯ ಅಸಂಬದ್ಧಗಳಿಗೆ ಒಳಗಾಗಿದ್ದ ನಮ್ಮ ರಂಗಭೂಮಿಗೆ ಸಾಮಾಜಿಕ ವಸ್ತುವನ್ನೂ ಸಹಜತೆಯನ್ನೂ ತಂದುಕೊಟ್ಟರು.

ಈ ಇಬ್ಬರೂ ವಿಶಿಷ್ಟ ವ್ಯಕ್ತಿಗಳು. ಅಷ್ಟೇ ವಿಭಿನ್ನರೂ ಕೂಡ. ಇಬ್ಬರೂ ಒಂದೆರಡು ವರ್ಷದ ಅಂತರದಲ್ಲಿ ಹುಟ್ಟಿ (ಬಿ.ಎಂ.ಶ್ರೀ. ೧೮೮೪ರಲ್ಲಿ, ಕೈಲಾಸಂ ೧೮೮೫ ಅಥವಾ ೧೮೮೬ರಲ್ಲಿ) ಒಂದೇ ವರ್ಷದಲ್ಲಿ (೧೯೪೬) ಗತಿಸಿದವರು. ಇಬ್ಬರೂ ಇಂಗ್ಲಿಷ್ ಸಾಹಿತ್ಯದಿಂದ ಪ್ರಭಾವಿತರಾದವರಾದರೂ, ಬಿ.ಎಂ.ಶ್ರೀ. ಸ್ವದೇಶದಲ್ಲೇ ಇದ್ದುಕೊಂಡು ಇಂಗ್ಲಿಷ್ ಸಾಹಿತ್ಯವನ್ನು ಕರಗತಮಾಡಿಕೊಂಡವರು. ಕೈಲಾಸಂ ಭೂಗರ್ಭಶಾಸ್ತ್ರದಲ್ಲಿ ಹೆಚ್ಚಿನ ಓದಿಗೆಂದು ದಾಮೋದರದಾಸ್ ವಿದ್ಯಾರ್ಥಿವೇತನ ಪಡೆದು ಇಂಗ್ಲೆಂಡಿಗೆ ಹೋಗಿ ಅಲ್ಲಿ ಆರು ವರ್ಷವಿದ್ದು ತಮ್ಮ ಶಾಸ್ತ್ರದಲ್ಲಿ ವಿಶೇಷ ಪರಿಣತಿ ಗಳಿಸಿದ್ದಲ್ಲದೆ ಅಲ್ಲಿನ ರಂಗಭೂಮಿ, ಜನಸಾಮಾನ್ಯರ ಪರಿಚಯವನ್ನು ಖುದ್ದಾಗಿ ಪಡೆದರು. ಬಿ.ಎಂ.ಶ್ರೀ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್-ಕನ್ನಡ ಪ್ರಾಧ್ಯಾಪಕರಾಗಿ ಸಾವಿರಾರು ವಿದ್ಯಾರ್ಥಿಗಳ ಒಲವನ್ನು ಕನ್ನಡದ ಕಡೆ ತಿರುಗಿಸಿದರು. ಒಂದು ಸುವ್ಯವಸ್ಥಿತ ಶಿಷ್ಯ ಪರಂಪರೆಯನ್ನು ಸ್ಥಾಪಿಸಿ ಕನ್ನಡ ನವೋದಯಕ್ಕೆ ಭದ್ರವಾದ ತಳಹದಿ ಹಾಕಿ ಪೋಷಿಸಿದರು. ತಮ್ಮ ವಿಶಿಷ್ಟ ಸೇವೆಯಿಂದ ಹೊಸಗನ್ನಡ ಯುಗಪ್ರವರ್ತಕರೆನ್ನಿಸಿಕೊಂಡರು.

ಕೈಲಾಸಂ ಆದರೋ ಇಂಗ್ಲೆಂಡಿನಿಂದ ಸ್ವದೇಶಕ್ಕೆ ಮರಳಿದಮೇಲೆ ಕೆಲವು ಕಾಲ ಮೈಸೂರು ಸರ್ಕಾರದ ಭೂಗರ್ಭ ಇಲಾಖೆಯ ಕೆಲಸದಲ್ಲಿದ್ದು ಏನೋ ಅಜಾಗ್ರತೆಯಿಂದ ಕೆಲಸ ಕಳೆದುಕೊಂಡರು. ಆಮೇಲೆ ಕೆಲವೇ ಕಾಲ ಕೇರಳದಲ್ಲಿ ಕೆಲಸಮಾಡಿ ಅದನ್ನೂ ಬಿಟ್ಟ ಮೇಲೆ ಅವರಿಗೆ ಮತ್ತೆ ನಿಶ್ಚಿತ ಕೆಲಸವೆಂಬುದೇ ಇರಲಿಲ್ಲ. ನಾಟಕವೇ ಅವರ ಮುಖ್ಯ ಆಸಕ್ತಿಯಾಯಿತು. ಆದರೆ ಅದೂ ಕೂಡ ಸರಿಯಾದ ಜೀವನೋಪಾಯ-ವಾಗಲಿಲ್ಲ. ಅಂದಿನಿಂದ ಕಡೆಯವರೆಗೂ ಅವರು ಯಾವ ಸಂಪ್ರದಾಯ ಕಟ್ಟು ಕಟ್ಟಳೆಗಳಿಗೂ ಬದ್ಧವಾಗದ, ಸಿಗರೇಟು, ಜಿನ್, ಟೀಗಳಿಂದ ತುಂಬಿದ ಜೀವನ

ನಡೆಸಿದರು. ತಮ್ಮ ಅಸಾಧಾರಣ ಬುದ್ಧಿವಂತಿಕೆಯಿಂದ, ವಾಕ್ಚಾತುರ್ಯದಿಂದ, ಚುರುಕು ಹಾಸ್ಯದಿಂದ ಕೇಳುಗರ ಮನಸ್ಸನ್ನು ಸೂರೆಗೊಳ್ಳುವಂತೆ ಮಾತನಾಡಬಲ್ಲವರಾಗಿದ್ದರು. ಅವರು ನಿಂತಲ್ಲೇ ನಾಟಕ. ಅವರ ಸುತ್ತ ಅವರ ವಿಚಿತ್ರ ಜೀವನ ರೀತಿಗೆ, ಹೊಸ ದೃಷ್ಟಿಗೆ, ಮಾತಿನ ಚಮತ್ಕಾರಕ್ಕೆ, ಸಮಾಜದ ಢಾಂಬಿಕತೆಯನ್ನು ನುಚ್ಚುನೂರು ಮಾಡುವ ತೀಕ್ಷ್ಣ ಮಾತಿಗೆ ಮಾರುಹೋದ ಯುವಕರ ಗುಂಪು. ಬಿ.ಎಂ.ಶ್ರೀ. ಕನ್ನಡಕ್ಕೆ ತಂದದ್ದು ೧೮-೧೯ನೆಯ ಶತಮಾನಗಳ ಇಂಗ್ಲಿಷ್ ರಮ್ಯಕಾವ್ಯವಾದರೆ, ಕೈಲಾಸಂ ನಮಗೆ ಪರಿಚಯಿಸಿದ್ದು ಅಲ್ಲಿನ ೨೦ನೆಯ ಶತಮಾನದ ಮೊದಲಿನ ಸಮಕಾಲೀನ ರಂಗಭೂಮಿಯನ್ನು. ಬಿ.ಎಂ.ಶ್ರೀ.ಗೆ ವಿದ್ಯಾವಂತರು, ರಾಜರು, ಇಂಗ್ಲೆಂಡಿನ ಆಳರಸರು ಬೇಕು. ಮಹಾತ್ಮ ಗಾಂಧಿ ಒಬ್ಬ collossal humbug ಅವರಿಗೆ (ಆಧಾರ ೨). ಕೈಲಾಸಂಗಾದರೋ, ಸಿನೆಮಾ ಥಿಯೇಟರಿನಲ್ಲಿ ನಾಲ್ಕಾಣೆ ಸೀಟಿನಲ್ಲಿ ಕೂಡುವ ಜನ ಬೇಕು. ಗಾಂಧಿ ಎಂದರೆ ಆತನೊಬ್ಬ ಮಹಾಪುರುಷ, ಆತನೆದುರಿಗೆ ಕೂರುವುದಕ್ಕೂ ಕೈಲಾಸಂಗೆ ಸಂಕೋಚ (ಆಧಾರ ೩).

ಈ ತೀವ್ರ ವೈಯುಕ್ತಿಕ ಭಿನ್ನತೆಗಳಿಂದ ಎರಡು ವಿಷಯಗಳನ್ನು ಗುರುತಿಸಬಹುದು. ಒಂದು, ಕನ್ನಡ ನಾಟಕದ ನವೀಕರಣ ನವೋದಯದ ಪ್ರಭಾವದಿಂದ ಆದದ್ದಲ್ಲ, ಅದಕ್ಕೆ ಪ್ರೇರಣೆ ಕೈಲಾಸಂರವರ ಸ್ವಂತ ಸ್ಫೂರ್ತಿಯಿಂದಲೇ ಬಂತು; ಈ ಎರಡು ಮುಖ್ಯ ಬೆಳವಣಿಗೆಗಳು ಸಮಕಾಲೀನವಾದರೂ ಹೆಚ್ಚುಕಡಿಮೆ ಸ್ವತಂತ್ರವಾಗಿ ಆದವು ಎನ್ನುವುದು. ಎರಡು, ಈ ಹೊಸನಾಟಕದ ಬೆಳವಣಿಗೆ ನವೋದಯದಷ್ಟು ಶಕ್ತಿಯುತವಾದ, ವ್ಯಾಪಕವಾದ, ಸುಸಂಘಟಿತ ಚಳುವಳಿ ಆಗಲಿಲ್ಲ.

ಆದರೆ ಕೈಲಾಸಂ ಅವರ ಟೊಳ್ಳು ಗಟ್ಟಿ ಬರುವ ಹೊತ್ತಿಗೆ (೧೯೧೯) ನಮ್ಮ ಕನ್ನಡ ನಾಟಕ ರಂಗ ಪೂರ್ತಿ ಬತ್ತಿಹೋಗಿತ್ತು ಎಂದಾಗಲೀ ಒಳ್ಳೆಯ ಪ್ರತಿಭಾವಂತ ನಟರೇ ಇರಲಿಲ್ಲ ಎಂದಾಗಲೀ ತಿಳಿಯಬಾರದು. ಮೈಸೂರಿನ ವರದಾಚಾರ್ಯರಂಥ ಶ್ರೇಷ್ಠ ನಟರು ಮೆರೆದ ಕಾಲ ಅದು. ಹಲವಾರು ವೃತ್ತಿ ನಾಟಕ ಸಂಸ್ಥೆಗಳು ಆಗಿನ್ನೂ ಜೀವಂತವಾಗಿದ್ದವು. ಆದರೆ ನಮ್ಮ ರಂಗಸ್ಥಳ ಪೌರಾಣಿಕ, ಚಾರಿತ್ರಿಕ ನಾಟಕಗಳ ಬಲೆಯಲ್ಲಿ ಸಿಕ್ಕಿಕೊಂಡಿತ್ತು. ಆ ನಾಟಕಗಳಿಗೂ, ಜನಜೀವನಕ್ಕೂ, ನಿತ್ಯದ ಸಮಾಜದ ಆಗುಹೋಗುಗಳಿಗೂ, ಸಮಾಜವನ್ನು ಕಾಡಿಸುವ ಸಮಸ್ಯೆಗಳಿಗೂ ಏನೂ ಸಂಬಂಧವಿರಲಿಲ್ಲ. ಇಂಗ್ಲೆಂಡಿನಲ್ಲಿ ಬರ್ನಾರ್ಡ್ ಷಾ, ಇಬ್ಸನ್ ಮುಂತಾದವರ ನಾಟಕಗಳನ್ನು ಕಂಡ ಕೈಲಾಸಂಗೆ ನಮ್ಮ ನಾಟಕಗಳಲ್ಲಿ ಕಾಣುವ ಸಮಾಜಪ್ರಜ್ಞೆಯ ಕೊರತೆ ನಮ್ಮ ಸಮಾಜದ ಪ್ರಗತಿಯನ್ನೇ ಕುಂಠಿಸುವ ದೊಡ್ಡ ನ್ಯೂನತೆಯಾಗಿ ಕಂಡಿತು. ಆ ಹೊತ್ತಿಗೆ ಇಂಗ್ಲಿಷ್ ವಿದ್ಯಾಭ್ಯಾಸದಿಂದ ನಮ್ಮಲ್ಲಿ ಮಧ್ಯಮವರ್ಗದ ಸಮಾಜವೊಂದು

ಅಸ್ತಿತ್ವಕ್ಕೆ ಬಂದಿತ್ತು. ನಮ್ಮ ನಾಟಕ ಈ ಸಮಾಜವನ್ನು ಯಥಾವತ್ತಾಗಿ, ಜೀವಂತವಾಗಿ ಚಿತ್ರಿಸಬೇಕು, ಅದರ ದೊಡ್ಡತನ-ಸಣ್ಣತನ, ಔದಾರ್ಯ-ಕಾರ್ಪಣ್ಯ, ಅದರ ಶಕ್ತಿ-ದೌರ್ಬಲ್ಯಗಳೆಲ್ಲವೂ ಮೈಗೂಡಿಬರುವಂತೆ, ನಮ್ಮ ಜನ ದಿನನಿತ್ಯ ಬಳಸುವ ಆಡುಭಾಷೆಯಲ್ಲಿ ಚಿತ್ರಿಸಬೇಕು ಎಂಬ ನಿಲುವು ತಳೆದರು ಕೈಲಾಸಂ. ಅದೂ ಅಲ್ಲದೆ ಇಂಥ ಗಂಭೀರ ಉದ್ದೇಶದ ನಿರ್ವಹಣೆಗೆ ಸಾಧನವಾಗಿ ಹಾಸ್ಯಮಾರ್ಗವನ್ನು ಬಳಸಿಕೊಂಡರು.

'ಟೊಳ್ಳು ಗಟ್ಟಿ'ಯಲ್ಲಿ ನಾವು ಕಾಣುವುದು ಒಂದು ಮಧ್ಯಮ ವರ್ಗದ ಸಂಸಾರದ ಚಿತ್ರ. (ಇದಕ್ಕೆ ಕೈಲಾಸಂ 'ಮಕ್ಕಳಿಸ್ಕೂಲ್ ಮನೇಲಲ್ವೇ?' ಎಂಬ ಇನ್ನೊಂದು ಹೆಸರನ್ನೂ ಇಟ್ಟಿದ್ದಾರೆ. ಕೈಲಾಸಂ ತಮ್ಮ ನಾಟಕಗಳಿಗೆ ಈ ರೀತಿ ಎರಡು ಮೂರು ಹೆಸರುಗಳನ್ನು ಕೊಡುತ್ತಿದ್ದರು, ಕನ್ನಡ ಇಂಗ್ಲಿಷ್ ಎರಡರಲ್ಲೂ ಹೆಸರುಗಳನ್ನು ಕೊಡುವುದೂ ಇತ್ತು.) ನಮ್ಮ ಇಂಗ್ಲಿಷ್ ವಿದ್ಯಾಭ್ಯಾಸ ಕ್ರಮ ಹೇಗೆ ಕೇವಲ ಪರೀಕ್ಷೆಯಲ್ಲಿ ಪಾಸುಮಾಡುವ ಪುಸ್ತಕಕ್ರಿಮಿಗಳನ್ನು, ಮುಂದೆ ಸರ್ಕಾರೀ ನೌಕರಿಗೆ ಕೈಯೊಡ್ಡುವವರನ್ನು ತಯಾರಿಸುತ್ತಿದೆ, ನಿಜವಾದ ಆತ್ಮವಿಕಾಸಕ್ಕೆ, ಮಾನವೀಯ ಗುಣಗಳ ಬೆಳವಣಿಗೆಗೆ ಗಮನ ಕೊಡುತ್ತಿಲ್ಲ ಎಂಬುದನ್ನು ಎತ್ತಿತೋರುವ ಚಿಕ್ಕ ಪ್ರಹಸನ ಇದು. ಹೆಡ್‌ಮುನುಶಿ ಹಿರಿಯಣ್ಣಯ್ಯನ ದೊಡ್ಡ ಮಗ, ಪ್ರತಿ ಪರೀಕ್ಷೆಯಲ್ಲೂ ಸ್ಥಾನ ಗಿಟ್ಟಿಸುವವನು ಮನೆಗೆ ಬೆಂಕಿ ಬಿದ್ದಾಗ ಇನ್ನೊಬ್ಬರ ಯೋಚನೆ ಮಾಡದೆ ತನ್ನ ಪುಸ್ತಕಗಳನ್ನೆಲ್ಲ ಎತ್ತಿಕೊಂಡು ಓಡುತ್ತಾನೆ. ಆದರೆ ಪರೀಕ್ಷೆಗಳಲ್ಲಿ ಫ಼ೇಲಾಗಿತ್ತಿದ್ದ ಎರಡನೆ ಮಗ ಮಾಧು ಸಂಸಾರವನ್ನೆಲ್ಲ ರಕ್ಷಿಸುತ್ತಾನೆ. ೧೯೧೯ರಲ್ಲಿ ಬೆಂಗಳೂರಿನ Amateur Dramatic Association (A.D.A.) ಏರ್ಪಡಿಸಿದ್ದ ನಾಟಕ ಸ್ಪರ್ಧೆಯಲ್ಲಿ 'ಟೊಳ್ಳು ಗಟ್ಟಿ'ಗೆ ಮೊದಲ ಬಹುಮಾನ, ಸಂಸರ 'ಸುಗುಣ ಗಂಭೀರ' ನಾಟಕಕ್ಕೆ ಎರಡನೆಯ ಬಹುಮಾನ ಬಂದದ್ದು ನಮ್ಮ ಮಧ್ಯಮ ವರ್ಗದ ಸಮಾಜದ ಅಂದಿನ ಮನಃಸ್ಥಿತಿಯನ್ನು, ಅದರ ಒಲವು ಆಕಾಂಕ್ಷೆಗಳನ್ನು ಚೆನ್ನಾಗಿ ವ್ಯಕ್ತಪಡಿಸುತ್ತದೆ. ಇದು ನಮ್ಮ ಇತಿಹಾಸದ ಒಂದು ಭಾಗವಾಗಿದೆ ಎನ್ನುತ್ತಾರೆ ಕುರ್ತಕೋಟಿ (ಆಧಾರ ೪).

೩

ಕೈಲಾಸಂ ತಮ್ಮ ಮನೋಧರ್ಮದ ಬಗ್ಗೆ, ಸಾಹಿತ್ಯಧರ್ಮದ ಬಗ್ಗೆ, ಕಲೆಯ ಬಗ್ಗೆ ಏನನ್ನಾದರೂ ಬರೆದಿರುವುದು ಅಪರೂಪ. ಅಂಥ ಒಂದು ಅಪರೂಪದ ಅಮೂಲ್ಯವಾದ ಒಂದು ಆಕರ ಅವರು ೧೯೪೫ರಲ್ಲಿ ಮದರಾಸಿನಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ವಾರ್ಷಿಕ ಸಮ್ಮೇಳನದಲ್ಲಿ ಮಾಡಿದ ಅಧ್ಯಕ್ಷ ಭಾಷಣ (ಆಧಾರ ೧). ಅವರ ಕಲೆಯ ತಾತ್ವಿಕ ತಳಹದಿಯನ್ನು ಬಹಳ ಸಮರ್ಪಕವಾಗಿ ಸಂಗ್ರಹಿಸುವ ಈ ಭಾಷಣ ಮನನಯೋಗ್ಯವಾದದ್ದು.

'ನನ್ನ ಲೋಕ ಧೀರಕರ್ಮದ ಲೋಕವಲ್ಲ! ನನ್ನದು–ಮೃದುಲೋಕ! ಹಾಸ್ಯದ ಮೃದುಲೋಕ!' ಎಂದು ಮೊದಲಿಗೇ ಹೇಳುತ್ತಾರೆ ಕೈಲಾಸಂ'....ಸುತ್ತಲೂ ನಡೆವುದನ್ನು ಕಣ್ಣಿಂದ ನೋಡಿ ಕಿವಿಯಿಂದ ಕೇಳಿ ಯಾವಾಗಲೋ ಒಂದು ಸಲ ಮನಸ್ಸಿನ ಯಾವುದೋ ಒಂದು ಮೋಡಿಯಲ್ಲಿ, ಕಂಡು ಕೇಳಿದ ಅಂಶಗಳಿಗೆ ಕಳೆ ತುಂಬಿಸಿ, ನಾಟಕ ಕಟ್ಟಿ, ನಾನೇ ಆನಂದಪಟ್ಟು, ಅದನ್ನು ನಾಲ್ಕಾರು ಜನ ರಸಿಕ ಮಿತ್ರರಿಗೆ ಹೇಳಿ, ಅವರನ್ನೂ ಆನಂದಪಡಿಸುವ ಸಾಮಾನ್ಯ ಜೀವಿ ನಾನು...' ಎಂದು ಹೇಳಿಕೊಳ್ಳುತ್ತಾರೆ.

ಆದರೆ ಹಾಗೆ ಕಂಡು ಕೇಳಿದ್ದನ್ನು ಯಥಾವತ್ತಾಗಿ ಹೇಳಿದರೆ ಅದು ನಾಟಕವಾದೀತೆ? ಕಲೆಯಾದೀತೆ? ಇಲ್ಲ. ಅದಕ್ಕೊಂದು ಸಂಸ್ಕಾರ ಆಗಬೇಕು. '...ನನಗೊಂದು ವಕ್ರದೃಷ್ಟಿ ಇದೆ. ಐರಾವತಕ್ಕೂ ಅಡಿ ಜಾರುತ್ತೆ. ಸಮಾಜದಲ್ಲಿ ದೊಡ್ಡವರ ಕೊಂಕುಗಳೂ ಬಡಬಗ್ಗರ ನಮ್ರತೆಯಿಂದ ಹುಟ್ಟಿದ ಔನ್ನತ್ಯವೂ ಕಾಣುತ್ತದೆ. ಸಮಾಜ ಸರಿ ಎಂದು ಮೆಚ್ಚುವ ಕಡೆ ಎಲ್ಲೋ ಐಬು ಕಾಣುತ್ತದೆ, ನನ್ನ ಕಣ್ಣಿಗೆ...ಸಾಧಾರಣವಾಗಿ ನಿರ್ದೋಷವೆಂದು ಕಂಡದ್ದರಲ್ಲಿನ ಲೋಪ ಈ ನನ್ನ ವಕ್ರದೃಷ್ಟಿಗೆ ಎದ್ದು ಕಾಣುತ್ತದೆ. ದೋಷವೆನಿಸಿಕೊಂಡದ್ದರಲ್ಲಿ ಗುಣವಿದ್ದರೆ ಅದೂ ಕಾಣುತ್ತದೆ. ಬಿಳಿಯ ಬಣ್ಣದಲ್ಲಿ ಅಡಗಿದ ಏಳು ಬಣ್ಣಗಳಂತೆಯೇ ಅನೇಕಾನೇಕ ಪರೆಗಳಿವೆ, ಜೀವನದಲ್ಲಿ. ಸಾಧಾರಣ ದೃಷ್ಟಿಗೆ ಈ ಒಂದೇ ಬಿಳಿಯ ಬಣ್ಣವು ಕಂಡುಬಂದರೂ ನನ್ನ ವಕ್ರದೃಷ್ಟಿಗೆ ಸಹಸ್ರಾರು ಬಣ್ಣಗಳು ಕಂಡುಬರುತ್ತವೆ...' ಶಿವರಾಮ ಕಾರಂತರು ಇವರ ಈ ವಕ್ರದೃಷ್ಟಿಯ ಬಗ್ಗೆ ಹೇಳಿದುದನ್ನು ಇಲ್ಲಿ ನೆನೆಯಬಹುದು: '...ಎಲ್ಲರಂತೆ ನೇರಾಗಿ ನಿಂತು ನೆಟ್ಟಗೆ ಕಣ್ಣನ್ನು ಬಿಡಿಸಿ ಕಾಣುವ ರೂಢಿ ಅವರದ್ದಲ್ಲ. ನಾನು ನಡುರಸ್ತೆಯಿಂದ ನೋಡುವವನಾದರೆ ಅವರು ಮರದ ತುದಿಯ ಮೇಲೆ, ತಲೆಕೆಳಗಾಗಿ ನಿಂತು ಅರೆಗಣ್ಣಿನಿಂದ ಕಾಣುವವರು...' (ಆಧಾರ ೫).

ಮುಂದುವರೆಯುತ್ತ ಕೈಲಾಸಂ ಬಹಳ ಮುಖ್ಯವಾದ ಮಾತನ್ನು ಹೇಳುತ್ತಾರೆ: 'ಇದು ವ್ಯಂಗ್ಯಚಿತ್ರಗಳ ಕಾಲ. ವ್ಯಂಗ್ಯಚಿತ್ರ ಮಾತನ್ನು ಮನಮುಟ್ಟುವಂತೆ ತಿಳಿಸುತ್ತದೆ. ಇದು ವಿದೂಷಕ ಸಮ್ಮಿತಿಯ ಕಾಲ. ಜನಪದ ಸಾಹಿತ್ಯದಲ್ಲಿ ಈ ಸಮ್ಮಿತಿಯೇ ಮುಖ್ಯ. ರಾಜಸಮ್ಮಿತ ಕಾಂತಾಸಮ್ಮಿತಗಳಿಗಿಂತ ಪ್ರಕೃತದಲ್ಲಿ ಈ ಸಮ್ಮಿತವನ್ನು ಬಳಸಿ ಸಾಧಿಸಬೇಕು. ಕನ್ನಡಕ್ಕೆ ಈ ಹೊಸ ಸಿದ್ಧಾಂತವನ್ನು ಕೊಟ್ಟ ಖ್ಯಾತಿ ಕೈಲಾಸಂ ಅವರದ್ದು.

ಈ ವ್ಯಂಗ್ಯಚಿತ್ರಕಾರನ ಕೈವಾಡ ಕೈಲಾಸಂ ನಾಟಕಗಳಲ್ಲಿ ಚೆನ್ನಾಗಿ ಎದ್ದು ಕಾಣುತ್ತದೆ. ಸಮಾಜವನ್ನು, ದಿನನಿತ್ಯದ ಜೀವನವನ್ನು ಚಿತ್ರಿಸುವುದು ವ್ಯಂಗ್ಯಚಿತ್ರಕಾರನ ಉದ್ದೇಶವಾದರೂ ಅವನು ಯಾವುದನ್ನೂ ನೇರವಾಗಿ ಚಿತ್ರಿಸುವುದಿಲ್ಲ. ತಾನು ಚಿತ್ರಿಸುವ ವ್ಯಕ್ತಿಗಳಲ್ಲಿರುವ ಮುಖ್ಯವಾದ ಅಂಗವಿನ್ಯಾಸವನ್ನೋ, ಗುಣವನ್ನೋ ಪ್ರಧಾನವಾಗಿ

ಎತ್ತಿತೋರಿಸಿ ಚಿತ್ರವನ್ನು ನೋಡಿದೊಡನೆ ಆ ವ್ಯಕ್ತಿಯನ್ನು ಗುರುತಿಸುವಂತೆ ಮಾಡುತ್ತಾನೆ. ಇದಕ್ಕೆ ಉತ್ಪ್ರೇಕ್ಷೆ ಅವಶ್ಯಕ. ಸಹಜ ಚಿತ್ರ ಬರೆದರೆ ಅದು cartoon ಅಗುವುದಿಲ್ಲ. ಕೈಲಾಸಂ ಮಾಡುವುದೂ ಇದನ್ನೆ. ಆದರೆ ವ್ಯಂಗ್ಯಚಿತ್ರಕಾರ ಅದನ್ನು ತನ್ನ ಗೆರೆಗಳಲ್ಲಿ ಬಿಡಿಸಿದರೆ ಕೈಲಾಸಂ ಅದನ್ನು ಶಬ್ದಗಳಲ್ಲಿ, ಮಾತಿನಲ್ಲಿ, ಭಾಷೆಯಲ್ಲಿ ಕಾಣಿಸುತ್ತಾರೆ.

ಇನ್ನೂ ಒಂದು ಅಂಶ ಗಮನಿಸಬಹುದು. ಈಗ ಬಹಳ ಬಳಕೆಯಲ್ಲಿರುವ cartoon strip ಅವರ ಕಾಲಕ್ಕೆ ಎಷ್ಟು ಪ್ರಸಿದ್ಧವಾಗಿತ್ತೋ ಖಚಿತವಾಗಿ ಹೇಳಲಾರೆ. ಆದರೆ ಅವುಗಳಂತೆಯೇ ಕೈಲಾಸಂ ನಾಟಕಗಳಲ್ಲೂ ಬಹಳ ಮಂದಿ ಪಾತ್ರಧಾರಿಗಳು ಕಾಣುವುದಿಲ್ಲ. ಅವುಗಳಲ್ಲಿ ಪಾತ್ರಗಳು ಕೆಲವೇ ಇದ್ದುಕೊಂಡು ವಿವಿಧ ಸನ್ನಿವೇಶಗಳಿಗೆ ಸ್ಪಂದಿಸುವಂತೆಯೇ, ಕೈಲಾಸಂ ನಾಟಕಗಳಲ್ಲಿ ಅವವೇ ಪಾತ್ರಗಳು ಬೇರೆ ಬೇರೆ ನಾಟಕಗಳಲ್ಲಿ ಕಾಣಬರುತ್ತವೆ. ಉದಾ: 'ಟೊಳ್ಳು ಗಟ್ಟಿ'–'ತಾಳೀಕಟ್ಟೋಕ್ಕೂಲೀನೇ' ಗಳಲ್ಲಿ ಕಾಣುವ ಪಾತ್ರಗಳು; ಟೊಳ್ಳು ಗಟ್ಟಿಯ ಮಾಧುವೇ ಮುಂದೆ ಪೋಲೀ ಕಿಟ್ಟೀಯಾಗಿ ಮಾರ್ಪಡುವುದು.

ಈ ವ್ಯಂಗ್ಯಚಿತ್ರಗಳಲ್ಲೂ ಕೈಲಾಸಂ ಬಳಸುವುದು ವಿಡಂಬನೆಗಿಂತ ಅವರು ಹಿಂದೆಯೆ ಹೇಳಿದ ಮೃದುಹಾಸ್ಯವನ್ನು. 'ಹಾಸ್ಯದೃಷ್ಟಿಯ ಭೂತಕನ್ನಡಿಯಲ್ಲಿ ಜನರು ನಿಸ್ಸಂಕೋಚವಾಗಿ ತಮ್ಮನ್ನು ತಾವೇ ನೋಡಿಕೊಳ್ಳುವುದು ಬಹಳ ಸುಲಭ' ಎನ್ನುತ್ತಾರೆ. ಹಾಸ್ಯದ ಶಕ್ತಿ, ಇತಿ–ಮಿತಿಗಳನ್ನು ಕುರಿತು ಅವರು ಹೇಳುವುದು ಮನಸ್ಸಿಗೆ ತಟ್ಟುವಂತಿದೆ: 'ಹಾಸ್ಯದ ಶಕ್ತಿ–ಕ್ಲಾಂತಿಯಿಂದ ಮುಕ್ತಿ. ವ್ಯಷ್ಟಿತ್ವವನ್ನು ಮರೆಸಿ ಸಮಷ್ಟಿತ್ವವನ್ನು ಗೋಚರಪಡಿಸುವ ಶಕ್ತಿ– ಹಾಸ್ಯ. ಅದನ್ನು ಕಾವ್ಯದಲ್ಲಿ ಬಳಸಿದರೆ ಪ್ರಯೋಜನವುಂಟು. ಆಂಗ್ಲರಲ್ಲಿ ಹಾಸ್ಯ ಬೆಳೆದ ಹಾಗೆ ನಮ್ಮ ಕಾವ್ಯಗಳಲ್ಲಿ ಬೆಳೆದಿಲ್ಲ. ನಮ್ಮ ಜನರಲ್ಲಿ ಹಾಸ್ಯಪ್ರಿಯತೆಯೇನೂ ಕಡಮೆಯಿಲ್ಲ. ಆದರೆ ಅದನ್ನೇ ಕ್ರಮವಾಗಿ ಬಳಸಿ, ಅದರಿಂದ ಫಲವನ್ನು ನಾವು ಪಡೆದಿಲ್ಲ. ಕೇವಲ ಹಾಸ್ಯವನ್ನೇ ಅಧಾರ ಮಾಡಿಕೊಂಡು ಕತೆಗಳನ್ನು ಬರೆದವರು ನಮ್ಮಲ್ಲಿ ಕಡಮೆ. ಆಂಗ್ಲೇಯರ ಅಣಕವಾಡು, ಲಿಮೆರಿಕ್ (ಪಂಚಪಂಕ್ತಿ), ಇತ್ಯಾದಿ ಆಯುಧಗಳು ನಮ್ಮಲ್ಲಿ ಕಡಮೆ. ಬರೀ ಹಾಸ್ಯದ ನಾಟಕ ಹೆಚ್ಚಾಗಿ ಬೆಳೆದಿಲ್ಲ. ಮೊದಲಿನಿಂದ ಕೊನೆಯವರೆಗೂ ಪುರಾಣ, ಇತಿಹಾಸ, ಕಾದಂಬರಿಗಳೆ ಇವೆ. ನಿರ್ಮಲ ಹಾಸ್ಯ ಸೃಷ್ಟಿ ಹೆಚ್ಚಾಗಿ ಆಗಬೇಕು'.

ಈ ನಿರ್ಮಲ ಹಾಸ್ಯ ಎಂಥದು? ಅದರ ಗುಣಲಕ್ಷಣಗಳೇನು? 'ಹಾಸ್ಯವು ಮಿಂಚಿನಂತೆ. ಅದನ್ನು ಬೆಳಕಾಗಿ ಉರಿಸಲಾಗದು. ಆದರೆ ಅಂಧಕಾರಮಗ್ನರಿಗೆ ಕ್ಷಣಮಾತ್ರ ಪರಿಸ್ಥಿತಿಯನ್ನು ತೋರುವುದು–ಇದೇ ಹಾಸ್ಯ. ಹಾಸ್ಯ ನಿರ್ಮಲವಾಗದಿದ್ದರೆ, ಹಾಸ್ಯ

ಅಪಹಾಸ್ಯವಾಗಿ ವಿಘಾತವಾಗಿ ಪರಿಣಮಿಸುತ್ತದೆ. ಶಸ್ತ್ರವೈದ್ಯನ ಶಸ್ತ್ರದಂತೆ ಹಾಸ್ಯ. ಅನನ್ಯ ಚಿತ್ತವಾಗಿರಬೇಕು. ಕಂಡದ್ದು ಕಾಣಿಸದ ಹಾಗೆ ಕಾಣಿಸಿದರೆ, ಕಬ್ಬಿಣದಂತಹ ಸ್ನೇಹ.

ಹಾಸ್ಯವು ವಿಕಟತನವಲ್ಲ. ಕೇವಲ ಕುಚೋದ್ಯಕ್ಕಾಗಿ, ಪರಿಣಾಮದ ಕಡೆಗೆ ಲಕ್ಷ್ಯಕೊಡದೆ ಮಾಡಿದ ಹಾಸ್ಯ ಬಹುವೇಳೆ ಅನರ್ಥಕಾರಿ!...'

'The barque of humour often veers

From shoals of smiles to seas of tears' ಎನ್ನುತ್ತಾರೆ.

ಹಾಸ್ಯವನ್ನು ಹೀಗೆ ಜಾಗರೂಕತೆಯಿಂದ ಬಳಸಿರುವುದರಿಂದಲೇ, ಶ್ರೀರಂಗರು ಹೇಳುವಂತೆ (ಆಧಾರ ೬), ನಮಗೆ ಅಹೋಬ್ಲು, ರಾಮಣ್ಣರಂಥ ವ್ಯಕ್ತಿಗಳನ್ನು ಕಂಡಾಗಲೂ ಅವರ ಬಗ್ಗೆ ಕೋಪ, ತಿರಸ್ಕಾರ ಹುಟ್ಟುವುದಿಲ್ಲ. ನಾಗತ್ತೆಯ ಕಟು ಮಾತು ಕೇಳಿದರೂ ಅವಳ ಬಗ್ಗೆ ಅನುಕಂಪವೇ ಹುಟ್ಟುತ್ತದೆ. ಅವಳನ್ನು ಆ ಸ್ಥಿತಿಗೆ ತಂದ ಸಮಾಜದ ಕಡೆಗೆ ನಮ್ಮ ದೃಷ್ಟಿ ಹೊರಳುತ್ತದೆ.

ಕೈಲಾಸಂ ಹಾಸ್ಯದ ಮುಖ್ಯ ಸಾಧನ ಭಾಷೆ. ಅವರ ನಾಟಕಗಳಲ್ಲಿ ಸಾಂದರ್ಭಿಕ ಹಾಸ್ಯ (situational humor) ಬಹಳ ಕಮ್ಮಿ. ಹಲವಾರು ಭಾಷೆಗಳನ್ನು ಬಲ್ಲ ಕೈಲಾಸಂ ಅವನ್ನು ಲೀಲಾಜಾಲವಾಗಿ ತಮ್ಮ ಪಾತ್ರಗಳ ಬಾಯಲ್ಲಿ ಆಡಿಸುತ್ತಾರೆ. ಅವರ ನಾಟಕಗಳು ಮುಖ್ಯವಾಗಿ ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬಗಳಿಗೆ ಸೇರಿದ್ದರಿಂದಲೂ, ಆ ವರ್ಗದ ಜನ ಜೀವನೋಪಾಯಕ್ಕೆ ಇಂಗ್ಲಿಷ್ ವ್ಯಾಸಂಗಕ್ಕೆ ತೊಡಗಿ ತಮ್ಮ ದಿನನಿತ್ಯದ ಮಾತಿನಲ್ಲಿ ವಿಪರೀತ ಇಂಗ್ಲಿಷ್ ಬೆರೆಸುವುದನ್ನೂ ಕಂಡಿದ್ದ ಕೈಲಾಸಂ ಅದನ್ನೇ ತಮ್ಮ ನಾಟಕದ ಮುಖ್ಯ ಭಾಷಾಮಾಧ್ಯಮವನ್ನಾಗಿ ಬಳಸಿದರು. ಇದರ ಬಗ್ಗೆ ಅನೇಕ ಆಕ್ಷೇಪಣೆಗಳನ್ನು ಜನ ಎತ್ತಿದ್ದಾರೆ. ಅದಕ್ಕೆ ಪರಿಹಾರವಾಗಿ ಕೈಲಾಸಂ ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೀಗೆ ಹೇಳಿದ್ದಾರೆ: ನಾನು ನಾಟಕ ಬರೆಯಲು ಮೊದಲು ಮಾಡಿದ್ದು– ನಾಟಕ ಬರೆಯುವ ಬಯಕೆಯಿಂದಲ್ಲ! ಸಮಾಜವನ್ನು ಪ್ರತಿಬಿಂಬಿಸಲೋಸುಗ! ಇದನ್ನು ಮೊದಲು ಮಾಡಿದಾಗ–ಈಗ ನನ್ನದೆಂಬ ನಾಟಕಗಳಲ್ಲಿ, ನಮ್ಮೀ ಸಮಾಜದಲ್ಲಿ..ಬಳಕೆಗೆ ಬಂದಿರುವ ಭಾಷೆಯನ್ನು–ಕನ್ನಡ, ಆಂಗ್ಲೋ, ತೆಲುಗು, ತಮಿಳು, ಉರ್ದು, ಕೇರಳಗಳನ್ನು–ಉಪಯೋಗಿಸಬೇಕೆ? ಬೇಡವೆ? ಉಪಯೋಗಿಸಿದರೆ ಸರಿಯೆ? ತಪ್ಪೆ? ಎಂಬ ತೊಡರುಗಳು ನನಗಿರಲಿಲ್ಲ. ಏಕೆಂದರೆ ಜನಜೀವನ ಪ್ರತಿಬಿಂಬ ನನ್ನ ಗುರಿ. ಸಾಹಿತ್ಯೋಪಾಸಕನಲ್ಲ ನಾನು! ನನ್ನ ನಾಟಕದ ಭಾಷೆ ತಪ್ಪಾದರೆ, ನಮ್ಮ ಶಿಷ್ಟಜನ ನುಡಿಯುವ ನುಡಿಯೇ ತಪ್ಪು! ತಪ್ಪು–ನನ್ನದಲ್ಲ!... ಜನರಾಡುವ ಭಾಷೆಯನ್ನೇ ಸಹಜವಾಗಿ ಬಳಸಿದ್ದೇನೆಂದು ಕೈಲಾಸಂ ಹೇಳಿದರೂ, ಅಲ್ಲಿಯೂ ವ್ಯಂಗ್ಯಚಿತ್ರಕಾರನ

ಕೈವಾಡ (ಉತ್ಪ್ರೇಕ್ಷೆ) ಎದ್ದುಕಾಣುವುದನ್ನು ಮರೆಯುವಂತಿಲ್ಲ. 'ಬಂಡ್ವಾಳ್ವಿಲ್ಲದ ಬಡಾಯಿ' ಕಟ್ಟೆಕಡೆಯಲ್ಲಿ ಜೀವು ಅಪೋಬ್ಲುವಿಗೆ ಹೇಳುವ ಮಾತು ಬಹಳ ಗಮನಾರ್ಹ: ನೀವ್ಮೆಡೋದೆಲ್ಲಾ ನಿಮ್ಮ ಬಡಾಯಿ..., ...ನಿಮ್ಮ ಇಂಗ್ಲಿಷ್ ಬೆರೆಸಿದ ಕನ್ನಡ(ದಿಂದ)...

ಕೈಲಾಸಂರಲ್ಲಿ ಹಾಸ್ಯ-ಭಾಷೆಗಳ ಸಂಬಂಧ ಬಹಳ ಗಟ್ಟಿಯಾದದ್ದು. ಆದ್ದರಿಂದ ಭಾಷೆಯ ತಿಳುವಳಿಕೆ ಅತ್ಯಗತ್ಯ. ಭಾಷೆ ತಿಳಿಯದಿದ್ದರೆ ಹಾಸ್ಯ ಎಲ್ಲಿಂದ ಬಂದೀತು? ಅವರು ಬಳಸುವ ಇಂಗ್ಲಿಷ್ ಅದರೂ ಅಷ್ಟೆ. ಕೇವಲ ಸ್ವಲ್ಪಮಟ್ಟಿಗೆ ತಿಳಿದಿದ್ದರೆ ಸಾಲದು; ಚೆನ್ನಾಗಿ ತಿಳಿದಿರಬೇಕು, ಆ ಭಾಷೆಯಲ್ಲಿ ಪ್ರಭುತ್ವವಿರಬೇಕು ಎನ್ನುತ್ತಾರೆ ಶ್ರೀರಂಗ (ಆಧಾರ ೬). ಇದರಿಂದಾಗಿಯೇ ಮುಂದೆ ಇಂಗ್ಲಿಷಿನ ಪ್ರಭಾವ, ತಿಳುವಳಿಕೆ ಕಡಿಮೆಯಾದರೆ ಇವರ ಹಾಸ್ಯ ಯಾರಿಗೆ ಅರ್ಥವಾದೀತು ಎಂಬ ಸಂಶಯವನ್ನು ಶ್ರೀರಂಗರಾದಿಯಾಗಿ ಹಲವರು ವ್ಯಕ್ತಪಡಿಸಿದ್ದಾರೆ. ಆದರೆ ಈ ಶಂಕೆ ಸ್ವಲ್ಪ ವಿವಾದಾಸ್ಪದ. ಇಲ್ಲಿನ ವಿಪರ್ಯಾಸವೆಂದರೆ, ನಮ್ಮ ಕರ್ನಾಟಕದಲ್ಲಿ ಇಂಗ್ಲಿಷಿನ ಪ್ರಭಾವ ಕಡಿಮೆಯಾಗುವುದರ ಬದಲು ಹೆಚ್ಚುತ್ತಿದೆ. ಆದ್ದರಿಂದ ಆ ಬಗ್ಗೆ ಚಿಂತಿಸಬೇಕಿಲ್ಲ. ಆದರೆ ಭಾಷೆಯ ಮೇಲಿನ ಪ್ರಭುತ್ವ ಇಲ್ಲದೆ ಹೋಗಬಹುದು, ಅಷ್ಟೆ! ಕೈಲಾಸಂ ಹಾಸ್ಯ ನಮ್ಮ ಇಂದಿನ ಯುವಪೀಳಿಗೆಗೆ ಹಿಡಿಸುತ್ತದೆಯೇ ಎಂಬ ಪ್ರಶ್ನೆಗೆ ಕನ್ನಡ ರಂಗದ ಶ್ರೇಷ್ಠ ನಟ, ಕೈಲಾಸಂ ಹೃದಯವನ್ನೇ ಜನಕ್ಕೆ ತೆರೆದಿಟ್ಟ ಶ್ರೀ ಸಿ. ಆರ್. ಸಿಂಹ ಹೌದು ಎಂದು ನಿಸ್ಸಂದೇಹವಾಗಿ ಉತ್ತರಕೊಡುತ್ತಾರೆ. ಅದಕ್ಕೆ ತಮ್ಮ ಅನುಭವವೇ ಸಾಕ್ಷಿ ಎನ್ನುತ್ತಾರೆ.

ಭಾಷೆಯೇ ಅವರ ಹಾಸ್ಯದ ಮೂಲ ವಾಹಕವಾದ್ದರಿಂದ ಅವರು ಭಾಷೆಯ ಉಪಯೋಗದಲ್ಲಿ ಹಲವು ಬಗೆಯ ಅಲಂಕಾರಗಳನ್ನೂ, ಸಾಧನಗಳನ್ನೂ ಉಪಯೋಗಿಸಿಕೊಳ್ಳುತ್ತಾರೆ. ಇವುಗಳಲ್ಲಿ ಅವರು ಬಹುವಾಗಿ ಉಪಯೋಗಿಸುವುದು ಶ್ಲೇಷಾರ್ಥ ಕೊಡುವ ಚಮತ್ಕಾರದ ಪದಪ್ರಯೊಗ ಅಥವಾ pun. ಭೂಮಿಯ ಗ್ರಹಣ ಎಂದರೇನೆಂದು ವಿವರಿಸುವ shadow of my sonಉ on this earthಉ, matrimony has become a matter of money, the answer is in the negative ಕೆಲವು ಉದಾಹರಣೆಗಳು. ಪನ್ನಿನ ಹಾಸ್ಯ ಬಹಳ ಹಿಂದಿನದು. ಸಂಸ್ಕೃತದಲ್ಲಿ ಆ ಬಗೆಯ ಚಮತ್ಕಾರಗಳು ಅನೇಕ. ಶೇಕ್ಸ್‌ಪಿಯರ್ ೩೦೦೦ ಪನ್ನುಗಳನ್ನು ಬಳಸಿದ್ದಾನೆಂದು ಒಂದು ಅಂದಾಜು (ಅಧಾರ ೭). ಹಿಂದೆ ಗಂಭೀರ ಸನ್ನಿವೇಶಗಳಲ್ಲೂ ಅದರ ಉಪಯೋಗವಿತ್ತು. ಆದರೆ ಈಗ ಅದು ಮುಖ್ಯವಾಗಿ ಹಾಸ್ಯದಲ್ಲಿ ಮಾತ್ರ ಕಾಣುತ್ತದೆ. ಅಲ್ಲಿಯೂ ಕೂಡ-ಮುಖ್ಯವಾಗಿ ಅಮೆರಿಕದ ಸಾಹಿತ್ಯ ಕ್ಷೇತ್ರದಲ್ಲಿ-ಪನ್

ಎಂಬುದು ಕೆಳಮಟ್ಟದ ಹಾಸ್ಯ ಎಂದು ಮೂದಲಿಸುವವರಿದ್ದಾರೆ(ಆಧಾರ ೮). ಕನ್ನಡದಲ್ಲಿ ಪನ್ ಬಳಕೆ ಬಹಳ ವ್ಯಾಪಕವಾಗಿದೆ, ಬಹುಶಃ ಕೈಲಾಸಂ ಪ್ರಭಾವದಿಂದಲೋ ಏನೋ. ಆದರೆ ಅಮೆರಿಕನ್ ಸಾಹಿತ್ಯದ ಪ್ರಭಾವದಲ್ಲಿ ಬೆಳೆಯುವ ನಮ್ಮ ಮುಂದಿನ ಪೀಳಿಗೆಯವರಿಗೆ ಈ ಬಗೆಯ ಹಾಸ್ಯದ ಬಗ್ಗೆ ಒಲವು ಸ್ವಲ್ಪ ತಗ್ಗಬಹುದೇನೋ.

ಕೈಲಾಸಂ ಭಾಷಾಪ್ರಯೋಗದಲ್ಲಿ ನಾವು ಕಾಣುವ ಇನ್ನೊಂದು ವಿಶೇಷ–ಇದು ಅವರ ಹಾಸ್ಯಕ್ಕೂ ಪುಷ್ಟಿಕೊಡುತ್ತದೆ–ಅವರು ಜನರ ಆಡುಮಾತಿನಲ್ಲಿರುವ ಸೂಕ್ಷ್ಮ ಧ್ವನಿಗಳನ್ನೂ, ಪ್ರಯೋಗಗಳನ್ನೂ ಗುರುತಿಸಿರುವುದು. ಕನ್ನಡದ ನಾನಾ ಪ್ರಾಂತ ಭಾಷೆಗಳಲ್ಲಿ ಕಾಣುವ ವಿಶಿಷ್ಟತೆಗಳನ್ನು ತಮ್ಮ ಪಾತ್ರಗಳ ಮಾತಿನಲ್ಲಿ ತಂದಿದ್ದಾರೆ (ಪಶ್ಚಿಮ ಕರಾವಳಿ, ಉತ್ತರ ಕರ್ನಾಟಕ ಉಳಿದು). ಉದಾಹರಣೆಗೆ, ಟೊಳ್ಳು ಗಟ್ಟಿಯ ಪೂರ್ವರಂಗದಲ್ಲಿ ಗ್ರಂಥಕರ್ತ ಗುಂಡೂರಾಯ ಮಾತನಾಡುತ್ತ '...ಒಂದು ಲೆಕ್ಚರ್ರು ಕೊಡ್ತೇನೂ...' ಎನ್ನುತ್ತಾನೆ. ಮಾಡ್ತೇನೂ, ವಿವರಿಸ್ತೇನೂ–ಎಂಬ ಪ್ರಯೋಗಗಳಿವೆ ಅಲ್ಲಿ. ಶ್ರೀ ಸಿಂಹ ಅವರ ಪ್ರಕಾರ ಇದು ಕೊಯಮತ್ತೂರು ಪ್ರಾಂತದ ಕನ್ನಡ ಜನ ಬಳಸುವ ಪ್ರಯೋಗ.(ತಮಿಳುನಾಡಿನಲ್ಲೇ ಬಹುಕಾಲ ವಾಸವಿದ್ದ ಇನ್ನೊಬ್ಬ ಕನ್ನಡಿಗರೊಬ್ಬರೂ ಅದನ್ನು ಸಮರ್ಥಿಸಿದರು.) ಕೈಲಾಸಂ ಕಿವಿ ಬಹು ಚುರುಕು. ಜನರ ಮಾತಿನ ಧಾಟಿ ಅವರ ಕಿವಿಯಲ್ಲಿ ಸೂಕ್ಷ್ಮವಾಗಿ ಒಳಹೊಕ್ಕು ಭದ್ರವಾಗಿ ನಿಲ್ಲುತ್ತದೆ. ಅವರ ನಾಟಕದ ಸಂಭಾಷಣೆಗಳನ್ನು ಸಮರ್ಥವಾಗಿ ಆಡಬೇಕಾದರೂ ಈ 'ಕೇಳ್ಮೆ' ಅತಿ ಮುಖ್ಯ. ಆ ಮಾತಿನ ಲಯಬದ್ಧ ಏರಿಳಿತ (cadence) ಚೆನ್ನಾಗಿ ಕೇಳಿ ಕರ್ಣಗತಮಾಡಿಕೊಳ್ಳದಿದ್ದರೆ ಅವರ ಭಾಷೆಯನ್ನು ಆಡುವುದು ಕಷ್ಟ. ಅದಕ್ಕೆ ತುಂಬ ಅಭ್ಯಾಸ ಬೇಕು, blank verse ಮಾತಾಡಲು ಬೇಕಾಗುವಂತೆ. ಅವರ ಈ ಸೂಕ್ಷ್ಮತೆ ಕೇವಲ ನಮ್ಮ ಭಾಷೆಗಳಿಗೆ ಸೀಮಿತವಾಗಿರಲಿಲ್ಲ. ಲಂಡನ್ನಿನಲ್ಲಿದ್ದ ಆರು ವರ್ಷದಲ್ಲಿ cockneyಯಂಥ ಅಲ್ಲಿನ ಮಾತಿನ ವಿಶಿಷ್ಟ ಪ್ರಬೇಧಗಳನ್ನು ಕರತಲಾಮಲಕ ಮಾಡಿಕೊಂಡಿದ್ದರು. ಇಂಗ್ಲಿಷ್–ಸ್ಕಾಚ್–ಐರಿಷ್ ಭೇದ ಪ್ರಬೇಧಗಳನ್ನಲ್ಲದೆ ಇಂಗ್ಲೆಂಡಿನಲ್ಲಿಯೆ ಯಾರ್ಕ್‌ಷೈರಿನವನಿಗೂ, ಸರ್‍ರೆಯವನಿಗೂ ಇರುವ ವ್ಯತ್ಯಾಸವನ್ನು ಹಿಡಿದು ಚಮತ್ಕೃತಿಗೈಯುವ ಸಾಮರ್ಥ್ಯ ಕೈಲಾಸಂಗಿತ್ತು ಎನ್ನುತ್ತಾರೆ ಕಂದಾಡೆ ಕೃಷ್ಣ ಅಯ್ಯಂಗಾರ್ (ಆಧಾರ ೩).

ಕೈಲಾಸಂ ನಾಟಕಗಳನ್ನು ನೋಡಿದಾಗ ಸ್ಪಷ್ಟವಾಗಿ ತೋರುವ ಮತ್ತೊಂದು ಅಂಶವೆಂದರೆ, ಭಾಷೆ ಹಾಸ್ಯದ ಮಾಧ್ಯಮವಾಗಿರುವುದಷ್ಟೇ ಅಲ್ಲದೆ, ಕೆಲವು ವೇಳೆ ಅದರ ವಸ್ತುವೇ ಕೂಡ ಆಗಿರುವುದು. ಬಂಡ್ವಾಳ್ವಿಲ್ಲದ ಬಡಾಯಿ, ಪೋಲೀ ಕಿಟ್ಟೀ ಇವುಗಳಲ್ಲಿ ಇದು ಎದ್ದು ಕಾಣುತ್ತದೆ.

ಆದರೆ ಕೈಲಾಸಂರಲ್ಲಿ ಈ ಭಾಷೆ, ಮಾತುಗಳ ಸೌಲಭ್ಯ ಒಂದು ಶಕ್ತಿಯಾದಂತೆ ದೌರ್ಬಲ್ಯವೂ ಹೌದು. ಅನೇಕ ವೇಳೆ ಅವರ ಮಾತು ವಿಪರೀತವಾಗಿ ಹಾವಳಿಯ ಮಟ್ಟಕ್ಕೂ ಬಂದುಬಿಡುತ್ತದೆ. ಇದನ್ನು ಡಾ. ವಿಜಯಾ ‘ಶಬ್ದಗಳೊಂದಿಗಿನ ಚೆಲ್ಲಾಟ’ ‘ವಾಚಾಳಿತನ’ ಎನ್ನುತ್ತಾರೆ. ಮಾತುಗಳು ಹೆಚ್ಚಿದಷ್ಟೂ ಹಾಸ್ಯದ ಸ್ವಾರಸ್ಯ ಕಡಿಮೆಯಾಗುತ್ತದೆ. ಅಷ್ಟೇ ಅಲ್ಲ. ಇದರಿಂದ ಇಡೀ ನಾಟಕಕ್ಕೆ ಹಾನಿಯಾಗಬಹುದು. ಅದನ್ನು ಕುರಿತು ಡಾ. ವಿಜಯಾ ಹೀಗೆ ಹೇಳಿದ್ದಾರೆ (ಆಧಾರ ೯): ‘ಕೈಲಾಸಂ ಅವರಿಗಿದ್ದಿರಬಹುದಾದ ಬಹು ದೊಡ್ಡ ದೌರ್ಬಲ್ಯವೆಂದರೆ ಶಬ್ದಗಳೊಂದಿಗಿನ ಚೆಲ್ಲಾಟ- ಅದು ಕೇಳಲು, ನಗಲು ಚಂದ. ಆದರೆ ಅದೇ ಎಲ್ಲವೂ ಆದಾಗ ‘ಕೈ’ ಹೇಳುವ ಪ್ರತಿ ಮಾತಿಗೂ ಅದನ್ನೇ ಹುಡುಕಿ ಸುಖಿಸುತ್ತಾ ಮುಖ್ಯವಾದ ವಸ್ತು ಮತ್ತು ಅದರ ಗಾಢತೆ ಸರಿದುಹೋಗುತ್ತದೆ. ಕೈ ಅವರ ಬಹುಪಾಲು ನಾಟಕಗಳು ಇದರಿಂದಾಗಿಯೇ ಅತ್ಯುತ್ತಮವಾದ ವಸ್ತುವನ್ನು ಹೊಂದಿದ್ದೂ ಕೂಡ ಮಾತಿನ ಚಮತ್ಕಾರದಲ್ಲಿ ತೇಲಿ ಹೋಗಿವೆ.

ಇಂದಿನ ಸಮಾಜದ ಅಭಿರುಚಿಗೆ, ಮೌಲ್ಯಗಳಿಗೆ ಹೊಂದದೇ ಹೋಗಬಹುದಾದ ಒಂದು ವಿಷಯ ಕೈಲಾಸಂ ನಾಟಕಗಳಲ್ಲಿ ನಾಗತ್ತೆ, ಅಹೋಬ್ಳು ಮುಂತಾದವರು ಇತರರ ಮೈ ಬಣ್ಣ ಅಥವಾ ದೈಹಿಕ, ಮಾನಸಿಕ ಕುಂದುಗಳ ಬಗ್ಗೆ ಆಡುವ ಅವಹೇಳನಕರವಾದ ಮಾತುಗಳು. ಜನರ ಬಗ್ಗೆ ತುಂಬ ಅನುಕಂಪವುಳ್ಳವರು ಕೈಲಾಸಂ. ಅವರ ಅಧ್ಯಕ್ಷ ಭಾಷಣದಲ್ಲಿ ನಿರ್ಮಲ ಹಾಸ್ಯ-ಅಪಹಾಸ್ಯಗಳನ್ನು ಕುರಿತು ಅವರು ಹೇಳಿರುವುದನ್ನು ಈಗಾಗಲೇ ನೋಡಿದ್ದೇವೆ. ಆದ್ದರಿಂದ ಹೀಗೆ ಅಪಹಾಸ್ಯ ಮಾಡುತ್ತಿರುವವರು ಅವರೇ ಅಲ್ಲ, ಅದು ಆಗ್ಗೆ ಭಾರತೀಯ ಸಮಾಜದಲ್ಲಿ ಆಳವಾಗಿ ಬೇರೂರಿದ್ದ ಪೂರ್ವಾಗ್ರಹಗಳ ಪ್ರತಿಬಿಂಬವಷ್ಟೆ ಎಂದು ತೋರುತ್ತದೆ. ಅಹೋಬ್ಳುವಂತೂ ತೀರ ಅಲ್ಪ ಮನುಷ್ಯ. ಅವನಲ್ಲಿ ಸುಸಂಸ್ಕೃತ ಭಾವನೆಗಳನ್ನು ಅಪೇಕ್ಷಿಸಬಹುದೆ! ಕಪ್ಪು-ಬಿಳಿಯ ಮೈ ಬಣ್ಣಗಳ ಬಗ್ಗೆ ಈಗಲೂ ನಮ್ಮ ಸಮಾಜದಲ್ಲಿ ಬೇಕಾದಷ್ಟು ಅಸಾಧುವಾದ, ಅನಾದಾರ ಭಾವನೆಗಳಿವೆ. ಭಾರತೀಯರ ಶ್ವೇತಪಕ್ಷಪಾತ ನಾಚಿಕೆಗೇಡಿನ ಸಮಾಚಾರ. ನಮ್ಮ ಸಾಮಾಜಿಕ ಪ್ರಜ್ಞೆ ಉತ್ತಮಗೊಂಡಿದೆ, ನಿಜ. ಆದರೆ ಬಹು ವೇಳೆ ನಮ್ಮ ನಡಾವಳಿಕೆ ನಿಜವಾದ ಉನ್ನತ ಸಾಮಾಜಿಕ, ನೈತಿಕ ಪ್ರಜ್ಞೆಗಿಂತ ಸಂದರ್ಭೋಚಿತ ರಾಜಕೀಯ ಪ್ರಜ್ಞೆ ಅಥವಾ political correctnessನಿಂದ ಪ್ರೇರಿತವಾದದ್ದು ಎನ್ನಿಸುತ್ತದೆ.

೪

ಇನ್ನು ಕೈಲಾಸಂ ಕವಿತೆಗಳ ಬಗ್ಗೆ ಒಂದೆರಡು ಮಾತು. ಅವರ ಹಾಸ್ಯ ಗೀತೆಗಳಲ್ಲಿ ನಾಲ್ಕು (ಆಧಾರ ೧)-ತಿಪ್ಪಾರ್ ಹಳ್ಳಿ, ಕೋಳೀಕೆ ರಂಗಾ, ನಂಜೀ ನನ್ ಅಪರಂಜೀ, ಮತ್ತು ಕಾಶೀಗ್ ಹೋದ ನಂ ಬಾವ-ಕನ್ನಡದ ಶ್ರೇಷ್ಠ, classic ಎನ್ನಬಹುದಾದ, ಗೀತೆಗಳು. ಜನಪದ ಗೀತೆಗಳನ್ನು ಬಿಟ್ಟರೆ, ನಮ್ಮ ಸಮುದಾಯ ಗೀತೆಗಳೆಲ್ಲ ಸಾಧರಣವಾಗಿ ಭಕ್ತಿಗೀತೆಗಳು, ಶ್ಲೋಕಗಳು. ಇಂಗ್ಲೆಂಡಿನ ಪಬ್‌ಗಳಲ್ಲಿ, music hallsನಲ್ಲಿ ಜನ ಸ್ವಚ್ಛಂದವಾಗಿ ಹಾಡಿ ನಲಿಯುವ ಸಂಪ್ರದಾಯ ನೋಡಿದ ಕೈಲಾಸಂಗೆ ನಮ್ಮ ಸಮಾಜದ ಅತಿಮಡಿಯ ಮನೋಧರ್ಮ ಉಸಿರುಕಟ್ಟಿಸಿರಬೇಕು. ನಮ್ಮವರೂ ನಗಬಾರದೆ, ನಮ್ಮವರೂ ಹಾಡಿ ಕುಣಿದು ಕುಪ್ಪಳಿಸಬಾರದೆ ಎನ್ನಿಸಿರಬೇಕು. ಆದರಿಂದಲೆ ಈ ಹಾಡುಗಳು. ಇಷ್ಟು ಒಳ್ಳೆಯ ಲಘುಹಾಸ್ಯ ನಮಗೆ ಇನ್ನಾವ ಹಾಡುಗಳಲ್ಲೂ ದೊರೆಯುವುದಿಲ್ಲ. ಇವುಗಳಲ್ಲಿ ತಿಪ್ಪಾರ್ ಹಳ್ಳಿ ಮೊದಲ ಮಹಾಯುದ್ಧದ ಕಾಲದಲ್ಲಿ ಜನಪ್ರಿಯವಾಗಿದ್ದ It's a Long way to Tipperary ಎಂಬ ಇಂಗ್ಲಿಷ್ ಗೀತೆಯಿಂದ ಸ್ಫೂರ್ತಿಗೊಂಡುದು. Jack Judge ಮತ್ತು Harry (Henry James) Williams ೧೯೧೨ರಲ್ಲಿ ಬರೆದ ಮೂಲವನ್ನು ಓದುಗರ ಅವಗಾಹನೆಗಾಗಿ ಅನುಬಂಧದಲ್ಲಿ ಕೊಟ್ಟಿದೆ (ಅಂತರ್ಜಾಲದ ಮೂಲಕ ಪಡೆದದ್ದು). ಮೂಲದಲ್ಲಿ Paddyತನ್ನ ಪ್ರೇಯಸಿ Mollyಗೆ ಕಾಗದ ಬರೆಯುತ್ತ ಹೇಳುತ್ತಾನೆ: ನಿನಗೆ ಈ ಕಾಗದ ತಲುಪದಿದ್ದರೆ, ಹಾಗೆಂದು ನನಗೆ ಬರೆದು ತಿಳಿಸು-ಎಂದು! ಆದರೆ Paddyಗೆ ಬೇರೊಂದು ಸುದ್ದಿ ಕಾದಿದೆ. Molly ತನ್ನನ್ನು Mike Maloney ಮದುವೆಯಾಗಲು ಕೇಳಿದ್ದಾನೆ, ಬೇಗ ನೀನು ಇಲ್ಲಿ ಬರಬೇಕು, ಇಲ್ಲದಿದ್ದರೆ ಅದು ನಿನ್ನ ತಪ್ಪು; ಈ ಪ್ರೇಮದಲ್ಲಿ ನಾನು ಹುಚ್ಚಳಂತಾಗಿದ್ದೇನೆ-ಎನ್ನುತ್ತಾಳೆ. ಕೈಲಾಸಂನ ಆಳವಾದ ಭಾರತೀಯ ಮೌಲ್ಯಗಳಿಗೆ ಮಾಲಿಯ ಈ ಧೋರಣೆ ಹಿಡಿಸಿರಲಾರದು. ಅದನ್ನು ನಮ್ಮ ಸಂಸ್ಕೃತಿಗೆ ತಕ್ಕಂತೆ ಅಳವಡಿಸಿದರು. ಅವರ ತಿಪ್ಪಾರ್ ಹಳ್ಳಿಯಲ್ಲಿ ಬೋರನಿಗೆ ಈಗಾಗಲೆ ಮದುವೆಯಾಗಿದೆ. ಅವನು ತನ್ನ ಹೆಂಡತಿ ಬಸವಿಗಾಗಿ ಹಾತೊರೆಯುತ್ತಿದ್ದಾನೆ. ಪದ್ಯದ ಮೊದಲ ಭಾಗ ಮೂಲಕ್ಕೆ ಹತ್ತಿರವಾದರೂ ಆ ಮುಂದೆ ಎರಡೂ ಬೇರೆ ಬೇರೆ. ಈ ವ್ಯತ್ಯಾಸವನ್ನು ಗಮನಿಸಲು ಅನುಕೂಲವಾಗುವಂತೆ ಇದನ್ನೂ ಅನುಬಂಧದಲ್ಲಿ ಕೊಟ್ಟಿದೆ.

ಕೋಳೀಕೆ ರಂಗಾ ಹಾಡಿಗೆ Constantinople ಎಂಬ ಇಂಗ್ಲಿಷ್ ಹಾಡಿನ ಧಾಟಿ ಪ್ರೇರಕ. ನಂಜೀ ನನ್ ಅಪರಂಜೀ ಒಂದು ಸುಂದರ ಪ್ರೇಮಮಯ ಸಂಸಾರದ ಹಾಡು. ರಾಜರತ್ನಂ ಚಿವರ ಪದಗಳಲ್ಲಿ ಕಾಣುವ ನಂಜಿಯ ಹಾಡುಗಳಿಗೆ ಇದು ಸ್ಫೂರ್ತಿಯೋ

ಎನ್ನಿಸುತ್ತವೆ. ಕಾಶೀಗ್ ಹೋದ ನಂ ಬಾವ ಅವರ ಸ್ವಂತ ಕಲ್ಪನೆಯೋ, ಅದೂ ಇತರ ಹಾಡಿನಿಂದ ಸ್ಫೂರ್ತಿಯಾದದ್ದೋ ತಿಳಿದಿಲ್ಲ. ಏನೇ ಆದರೂ, ಈ ಹಾಡುಗಳು ನಮ್ಮ ಜನರ ಹೃನ್ಮನಗಳನ್ನು ಗೆದ್ದಿವೆ. ಶಾಶ್ವತ ಜನಪ್ರೀತಿಯನ್ನು ಗಳಿಸಿವೆ. ನಮ್ಮ ಜನಕ್ಕೆ ಧಾರಾಳವಾಗಿ ಯಾವ ಭಕ್ತಿಭಾವವೂ ಇಲ್ಲದೆ, ಪಾಪಭೀತಿಯಿಲ್ಲದೆ, ಸ್ವಚ್ಛಂದವಾಗಿ ಹಾಡಿ ನಲಿಯುವ ನರ್ತಿಸುವ ಅವಕಾಶ ಕಲ್ಪಿಸಿವೆ!

೫

ಈ ಲೇಖನದ ಪರಿಮಿತಿಯಲ್ಲಿ ಕೈಲಾಸಂ ಅವರ ಕೃತಿಗಳಲ್ಲಿ ಕಾಣುವ ಹಾಸ್ಯದ ಸ್ವರೂಪ, ಅವರ ವಿದೂಷಕ ಸಮ್ಮಿತಿ ಸಿದ್ಧಾಂತ ಇವುಗಳ ಬಗ್ಗೆ ಮಾತ್ರ ಪರಿಶೀಲಿಸಿದೆ. ಆದರೆ ಒಂದು ವಿಚಾರ ಮರೆಯಲಾಗದು: ಕೈಲಾಸಂ ಕೇವಲ ಹಾಸ್ಯಗಾರರಲ್ಲ, ನಾಟಕಕಾರರಲ್ಲ. ಕೈಲಾಸಂ ತಮ್ಮೆಲ್ಲ ಕೃತಿಗಳನ್ನೂ ಮೀರಿದ ಒಬ್ಬ ವಿಶಿಷ್ಟ, ವಿಲಕ್ಷಣ ವ್ಯಕ್ತಿ. ಅಂಥ ಒಬ್ಬ ವ್ಯಕ್ತಿ ಕನ್ನಡ ನಾಡಿನಲ್ಲಿ ಹುಟ್ಟಿ, ಕನ್ನಡಕ್ಕೆ ತನ್ನ ಸೇವೆ ಸಲ್ಲಿಸಿದ್ದು ನಮ್ಮ ಜನ ಹೆಮ್ಮೆಪಡಬಹುದಾದ ವಿಷಯ. (ಅವರನ್ನು ನಾನು ನನ್ನ ಚಿಕ್ಕಂದಿನಲ್ಲಿ ನೋಡಿದ್ದೆ ಎಂಬುದು ವೈಯುಕ್ತಿಕವಾಗಿ ನನಗೊಂದು ದೊಡ್ಡ ವಿಚಾರ.) ಅವರ ಸಮಕಾಲೀನರಲ್ಲಿ ಅನೇಕ ಹಿರಿಯ ವಿದ್ವಾಂಸರಿಗೆ ಅವರ ಅಸಾಧಾರಣ ಮೇಧಾಶಕ್ತಿಯ ಬಗ್ಗೆ, ಕಲಾವಂತಿಕೆಯ ಬಗ್ಗೆ ವಿಶೇಷವಾದ ಗೌರವವಿತ್ತು. ಡಿವಿಜಿ 'ಅವರ ಬಗ್ಗೆ ನಮ್ಮ ಸಾಹಿತ್ಯವನ್ನು ಕೃತಕತೆಯಿಂದ ಸಹಜತೆಗೆ–ಗ್ರಂಥಭಾಷೆಯನ್ನು ಅತಿ ಗ್ರಾಂಥಿಕತೆಯ ಶಿಖರದಿಂದ, ನಾಟಕವನ್ನು ಅತಿ ನಾಟಕೀಯತೆಯ ಶಿಖರದಿಂದ–ಇಳಿಸಿ ಜನಸಾಮಾನ್ಯದ ಮಟ್ಟಕ್ಕೆ ತಂದ ಕಾರಣಪುರುಷ ಕೈಲಾಸಂ' ಎನ್ನುತ್ತಾರೆ. ಕೈಲಾಸಂ ಕೃತಿಗಳು ಎಷ್ಟು ಕಾಲ ಬದುಕಿದ್ದಾವು ಎಂದು ಪ್ರಶ್ನಿಸುತ್ತ, ಹೂವಿಗಿರುವ ಪ್ರಶ್ನೆ ತಾನು ಎಷ್ಟು ಹೊತ್ತು ಬದುಕಿದ್ದೇನೆಂಬುದಲ್ಲ, ಬದುಕಿರುವಷ್ಟು ಹೊತ್ತಿನಲ್ಲಿ ಎಷ್ಟು ಮಂದಿಗೆ ಬೇಕಾದೇನು, ಹೇಗೆ ಹೇಗೆ ಬೇಕಾದೇನು – ಎಂಬುದು...ಕಲಾಕೃತಿಯ ಚಿರಂಜೀತ್ವದ ಚರ್ಚೆ ನಿಷ್ಫಲಶ್ರಮವೆಂದು ನನ್ನ ಭಾವನೆ ಎಂಬ ತಾತ್ತ್ವಿಕ ಹಾಗೂ ಕಲಾತ್ಮಕ ಉತ್ತರ ಕೊಡುತ್ತಾರೆ (ಆಧಾರ ೧೦). ಕೈಲಾಸಂ ಬಾಳು ಪಡೆದುಕೊಂಡ ವಿಚಿತ್ರ ತಿರುವನ್ನು ನೆನೆಯುತ್ತ ಮಾಸ್ತಿಯವರು 'ಯಾರದೇ ಜೀವನ ಅದು ನಡೆಯುವಂತೆ ಏಕೆ ನಡೆಯುತ್ತದೆ? ಬೇರೆ ರೀತಿ ಏಕೆ ನಡೆಯುವುದಿಲ್ಲ? ಗಯಟೇ ಕವಿ ಒಮ್ಮೆ ಒಂದು ಸೂಕ್ತಿಯನ್ನು ನುಡಿದರು: If God had had an another plan, He would have made another man. ನಾನು ಇದನ್ನು ಓದಿದಾಗ ಜೀವನವನ್ನು ಕುರಿತು ಒಂದು ಹೊಸ ದೃಷ್ಟಿಯನ್ನೇ ಗಳಿಸಿದ ಸಂತೋಷವನ್ನು ಅನುಭವಿಸಿದೆನು' ಎನ್ನುತ್ತಾರೆ ತಮ್ಮ 'ಭಾವ'ದಲ್ಲಿ (ಆಧಾರ ೧೧). ಕೈಲಾಸಂ ಅವರ ನಿಷ್ಕಪಟ, ನಿಷ್ಕಲ್ಮಷ, ಸರಳ, ಸುಂದರ

ಚೇತನ ವನ್ನು ನೆನೆಯುತ್ತ ಒಂದು ಅತ್ಯಂತ ಹೃದಯಸ್ಪರ್ಶಿಯಾದ ಚಿತ್ರ ಕೊಟ್ಟಿದ್ದಾರೆ. ಗೋಕಾಕರು ಕೈಲಾಸಂ ಬಗ್ಗೆ ತಾವು ಬರೆದ ಕನ್ನಡ ಪದ್ಯವೊಂದರ ಇಂಗ್ಲಿಷ್ ಅನುವಾದದಲ್ಲಿ (ಆಧಾರ ೧೨), 'O, Prince of Playwrights and Actors! Unwilling to don a robe in the open-air shows of the world, you staged the scenes sprung from your own imagination. Burning your personal joy and sorrow as incense on the altar of Deity, you became the great Witness, attaining the fulfillment of the Unattached' ಎಂದು ಮುಕ್ತವಾಗಿ ಅವರನ್ನು ಕೊಂಡಾಡಿದ್ದಾರೆ. ತಮಗೆ ಸ್ಫೂರ್ತಿ, ಮಾರ್ಗದರ್ಶನ ನೀಡಿದ ಕೈಲಾಸಂರನ್ನು ಕುರಿತು ಜಿ.ಪಿ. ರಾಜರತ್ನಂ, ಕೆ.ವಿ. ಐಯ್ಯರ್, ಡಾ. ಶಿವರಾಂ – ಮುಂತಾದ ಎಷ್ಟೋ ಲೇಖಕರು ಅವರಿಗೆ ತಮ್ಮ ಗೌರವ ಸಲ್ಲಿಸಿದ್ದಾರೆ. ಅವಧೂತನ ಲಕ್ಷಣಗಳನ್ನು ಹೊಂದಿದ್ದ ಅವರನ್ನು ಬಹುಶಃ ಯಾರೂ ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲಾರರೇನೋ! 'ಪೋಲೀ ಕಿಟ್ಟೀ' ಬಹುಮಟ್ಟಿಗೆ ಅವರ ಅತ್ಮಬಿಂಬವೇ ಎನಿಸುವ ವ್ಯಕ್ತಿ. ಹೊರನೋಟಕ್ಕೆ ಒರಟಾಗಿ ಕಾಣುವ ಈತನ ಹೃದಯ ಕುಸುಮದಂತೆ ಮೃದು. ತಮ್ಮ ಖಾಯಿಲೆ ದಿನಗಳಲ್ಲಿ ತಮ್ಮನ್ನು ಕೈಲಾಸಂ ಎಷ್ಟು ವಾತ್ಸಲ್ಯ ಶ್ರದ್ಧೆಗಳಿಂದ ನೋಡಿಕೊಂಡರು, ಅವರದು ಎಂಥ ಕುಸುಮಹೃದಯ ಎಂಬುದನ್ನು ತಿರುಮಲೆ ರಾಜಮ್ಮನವರು ಬರೆದಿದ್ದಾರೆ (ಅಧಾರ ೩).

'ಪೋಲೀ ಕೀಟ್ಟೀ' ನಾಟಕದಲ್ಲಿ ಬೆಂಕಿ ಬಿದ್ದ ಮನೆಯಿಂದ ತಮ್ಮನ್ನು ರಕ್ಷಿಸಿದವನನ್ನು ಕುರಿತು ಮನೆಯಾತ ಅನ್ನುತ್ತಾನೆ: 'ಅಪ್ಪಾ...ನಿನ್ನಡ್ತೆ, ನಿನ್ಭಾಷೆ, ನಿನ್ಮಾತು, ಒಂದಕ್ಕೊಂದು ಹೊಂದೋದೆ ಇಲ್ಲ. ಧೀರನ್ಹಾಗೆ ಬೆಂಕೀಗ್ ನುಗ್ತೀಯಾ! ಹೆಂಗಸಿನ್ಹಾಗೆ ಮಗೂನ ಲಾಲಿಸ್ತೀಯಾ; ತುರ್ಕ, ಸಂಸ್ಕೃತ, ಕನ್ನಡ, ಇಂಗ್ಲೀಷು ಕಲಸ್ಮೇಲೋಗ್ರ ಮಾಡಿ ಮಾತಾಡ್ತೀಯಾ! ಎಷ್ಟು ಯೋಚಿಸಿದ್ರೂನೂವೆ ಬಿಡಿಸ್ಲಾಗ್ದ ವಗ್ಟೇ ಹಾಗಿದ್ದಿಯಲ್ಲಪ್ಪಾ ನೀನು? ಆಗ ಕಿಟ್ಟಿ ಅನ್ನುತ್ತಾನೆ: ನಿಮಗೇನೂ?...ಎಂಥೆಂಥಾ ಶುಕ್ರಾಚಾರ್ರುಗ್ಳಿಗ್ಗೇನೇ ಬಿಡಿಸ್ಲಾಗ್ದ ವಗ್ಟೇ ನಾನೂ!...

ಹೌದು, ಬಹುಮಟ್ಟಿಗೆ ಕೈಲಾಸಂ ಒಂದು ಬಿಡಿಸಲಾರದ ಒಗಟೇ!

ಕೃತಜ್ಞತೆ

ತಮ್ಮ 'ಟಿಪಿಕಲ್ ಟಿ.ಪಿ. ಕೈಲಾಸಂ' ಪ್ರದರ್ಶನಗಳಿಂದ ಕೈಲಾಸಂ ವ್ಯಕ್ತಿತ್ವವನ್ನು ಮತ್ತೆ ನಮ್ಮ ಜನರ ಕಣ್ಣೆದುರಿಗೆ ನಿಲ್ಲಿಸಿ ಕನ್ನಡಿಗರ ಚಿರಪ್ರೀತಿಗೆ ಒಳಗಾಗಿರುವ ಶ್ರೇಷ್ಠ ನಟ ಶ್ರೀ ಸಿ.ಆರ್. ಸಿಂಹರವರು ಕೈಲಾಸಂ ಬಗ್ಗೆ ಡಿಸೆಂಬರ್ ೧೯, ೨೦೦೬ರಂದು ತಮ್ಮ ಮನೆಯಲ್ಲಿ ಒಂದು ಬಹಳ ಉಪಯುಕ್ತವಾದ, ದೀರ್ಘ ಸಂಭಾಷಣೆ ನಡೆಸಲು ಅವಕಾಶ ಕೊಟ್ಟರು. ಅಲ್ಲದೆ, ಗೋಕಾಕರ ಲೇಖನದ ಪ್ರತಿಯನ್ನೂ ಕೊಟ್ಟು ಉಪಕರಿಸಿದರು. ಇದಕ್ಕಾಗಿ ಅವರಿಗೆ ನನ್ನ ಪ್ರೀತಿಪೂರ್ವಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಕೈಲಾಸಂ ಬಗ್ಗೆ ಇತರ ಆಕರಗಳನ್ನು ಒದಗಿಸಿದ ಪ್ರಿಯ ಮಿತ್ರರೆಲ್ಲರ ನೆರವನ್ನೂ ಕೃತಜ್ಞತೆಯಿಂದ ನೆನಸಿಕೊಳ್ಳುತ್ತಿದ್ದೇನೆ.

ಆಧಾರಗಳು

೧. ಕೈಲಾಸಂ ಕೃತಿಗಳು, ಪ್ರಧಾನ ಸಂ. ಡಾ. ಎಚ್. ತಿಪ್ಪೇರುದ್ರಸ್ವಾಮಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭

೨. ಎ.ಎನ್.ಮೂರ್ತಿರಾವ್: ಸಂಜೆಗಣ್ಣಿನ ಹಿನ್ನೋಟ, ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು, ೧೯೯೦, ಪು. ೨೦೪

೩. ಕಂದಾಡೆ ಕೃಷ್ಣ ಅಯ್ಯಂಗಾರ್ ಮತ್ತು ತಿರುಮಲೆ ರಾಜಮ್ಮ: ನಾವು ಕಂಡ ಕೈಲಾಸಂ (ಸಂಯುಕ್ತ ಸಂಪುಟ), ವಸಂತ ಪ್ರಕಾಶನ, ಬೆಂಗಳೂರು

೪. ಕೀರ್ತಿನಾಥ ಕುರ್ತಕೋಟಿ: ಟಿ.ಪಿ. ಕೈಲಾಸಂ, ನಮ್ಮ ಕೈಲಾಸಂ (ನೆನಪಿನ ಸಂಪುಟ), ವಿವಿಧ ಲೇಖಕರಿಂದ, ಸಂ. ಪ್ರೊ. ಜಿ. ಶ್ರೀನಿವಾಸರಾಜು, Prism Books Pvt Ltd., Bangalore, 2000, ಪು. ೧೧೪

೫. ಎಚ್.ವೈ. ರಾಜಗೋಪಾಲ್: ಕಾರಂತರ ಕಣ್ಣಿನಲ್ಲಿ ಇತರರು, ಕಾರಂತ ಚಿಂತನ, ಕಡಲಾಚೆಯ ಕನ್ನಡಿಗರಿಂದ, ಸಂ. ನಾಗ ಐತಾಳ (ಆಹಿತನಲ), ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ, ೨೦೦೦, ಪು. ೫೪

೬. ಶ್ರೀರಂಗ: ಕೈಲಾಸಂ ಅವರ ನಾಟಕಗಳು, ನಮ್ಮ ಕೈಲಾಸಂ (ಸಂಯುಕ್ತ ಸಂಪುಟ) (ವಿವರಗಳಿಗೆ ಆಧಾರ ೪ ನೋಡಿ), ಪು. ೧೧೦

೭. Fowler's Modern English Usage, 3rd Ed., R.W. Burchfield (Editor), Clarendon Press, Oxford, 1996, p. 638

೮. Bergen and Cornelia Evans: A Dictionary of Contemporary American Usage, Random House, New York, 1957

೯. ಡಾ. ವಿಜಯಾ: ಕೈಲಾಸಂ ನಾಟಕಗಳ ಪ್ರಸ್ತುತತೆ, ನಮ್ಮ ಕೈಲಾಸಂ (ಸಂಯುಕ್ತ ಸಂಪುಟ) (ವಿವರಗಳಿಗೆ ಆಧಾರ ೪ ನೋಡಿ), ಪು. ೧೯೯

೧೦. ಡಿವಿಜಿ: ಕಾರಣಪುರುಷ, ನಮ್ಮ ಕೈಲಾಸಂ (ಸಂಯುಕ್ತ ಸಂಪುಟ) (ವಿವರಗಳಿಗೆ ಆಧಾರ ೪ ನೋಡಿ), ಪು. ೯೪

೧೧. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಭಾವ, ಭಾಗ ೩, ಜೀವನ ಕಾರ್ಯಾಲಯ, ಬೆಂಗಳೂರು, ೧೯೬೯, ಪು. ೯೩

೧೨. V.K. Gokak: Kailasam, the Playwright-Witness of Karnataka, The TRIVENI Quarterly, Madras, December 1945, p. 235

ಅನುಬಂಧ ೧

**It's A Long Way to Tipperary**

It's a long way to Tipperary,
It's a long way to go
It's a long way to tipperary
To the sweetest girl I know!
Goodbye Piccadilly,
Farewell Leicester Square!
It's a long way to Tipperary,
But my heart's right there.

Up to mighty London
Came an Irishman one day
As the streets are paved with gold
Sure, everyone was gay
Singing songs of Piccadilly.
Strand and Leicester Square
Till Paddy got excited

And he shouted to them there...
It's a long way to Tipperary...

Paddy wrote a letter
To his Irish Molly-O,
Saying, "Should you not receive it
Write and let me know!"
"If I make mistakes in spelling
Molly dear," said he,
"Remember, it's the pen that's bad,
Don't lay the blame on me!"

It's a long way to Tipperary...

Molly wrote a neat reply
To Irish Paddy-O
Saying Mike Maloney
Wants to marry me and so
Leave the Strand and Piccadilly
Or you will be to blame
For love has fairly drove me silly
Hoping you're the same!

It's a long way to Tipperary...

*-Jack Judge and Harry (Henry James) Williams (1912)*

## ಅನುಬಂಧ ೨

ತಿಪ್ಪಾರ್‌ಹಳ್ಳಿ

ಬೋರೇಗೌಡನೆಂಬೋ ಗೌಡ ಬಂದ ಬೆಂಗ್ಳೂರ್ಗೆ
ಬಳೇಪೇಟೆ ಬಾಟೆಮೇಲೆ ಬರುತಿದ್ದಾಗ
ಪೌಡರ್ ಗಿವ್ಡರ್ ಹಾಕಿಕೊಂಡ ಮನುಷ್ಯಳೊಬ್ಬಳು
ಕಣ್ಣುಗಿಣ್ಣು ಮಿಟಕ್ಸಿ ಗಿಟಕ್ಸಿ ನೋಡಿ ನಕ್ಕಾಗ–

(ಹಾಡ್ದ)ತಿಪ್ಪಾರಳ್ಳಿ ಬಲುದೂರ
ನಡಿಯೋಕ್ ಬಲುದೂರ
ತಿಪ್ಪಾರಳ್ಳಿ ಬಲುದೂರ
ನನ್ನೆಂಡ್ರಿರೋ ತಾಕೇ...
ಬೇಡವ್ವಾ ಬಳೇಪೇಟೆ
ನಮಸ್ಕಾರ ನಗರ್ತ್‌ಪೇಟೇ
ನಂ ತಿಪ್ಪಾರಳ್ಳಿ ಬಲುದೂರ–
ಆದರ್ ನಮ್ ಬಸವ್ಯಲ್ಲವ್ವೆ.

ತಮಾಷ್ ನೋಡಾಕ್ ಬೋರಾ ವೊಂಟ ಲಾಲ್‌ಬಾಗ್ ತೋಟಕ್ಕೆ
ವುಲೀನ್ ನೋಡಿ ಬರೇ ಆಕಿದ್ ದೊಡ್‌ಬೆಕ್ ಅನ್ಕೊಂಡ
ಬೋನ್ನೊಳಕ್‌ನುಗ್ಗಿ ವುಲೀನ್ ಸವರ್ತ ಪುಸ್‌ಪುಸ್ ಅಂತಿದ್ದ
–ಬೋರ ಪುಸ್‌ಪುಸ್ ಅಂತಿದ್ದ

ವುಲೀ ರೇಕ್ಕೊಂಡ್ ಬೋರನ್ ಕೆಡವ್ಕೊಂಡ್ ಅಲ್ಗಳ್ ಬಿಟ್ಟಾಗ
ಬೋರ ಬೆದರ್ಕೊಂಡ್ ಕಣ್ಣೀರ್ ಸುರಸ್ತ ಕೈಮುಗ್ದ್ ಕಿರಿಚ್ದ–

ತಿಪ್ಪಾರಳ್ಳಿ ಬಲುದೂರ
ನಡಿಯೋಕ್ ಬಲುದೂರ
ತಿಪ್ಪಾರಳ್ಳಿ ಬಲುದೂರ
ನನ್ನೆಂಡ್ರಿರೋ ತಾಕೇ...
ಬುಟ್ಬುಡಪ್ಪಾ ಬೆಕ್ಕಿನ್‌ರಾಯಾ
ನಮಸ್ಕಾರಾ ನನ್ ಒಡೆಯಾ
ತಿಪ್ಪಾರಳ್ಳಿ ಬಲುದೂರ–
ಆದರ್ ನಮ್ ಬಸವ್ಯಲ್ಲವ್ಪೆ.

ಬಸ್ವೀನ್ ಕರ್ಕೊಂಡ್ ಮೈಸೂರ್ಗ್‌ಬಂದ ಯಿಜೀದಸ್ಮೀಗೆ
ಅರ್ಮನ್ ಗೇಟ್ಮುಂದ್ ಅಂಬಾರ್‌ಕಟ್ಟಿದ್ ಆನೇನ್ ನೋಡಿದಾ
ಅಂಬಾರ್ ಮೆಟ್ಲ್‌ಮೇಲ್ ಬಸ್ವೀನ್ ಅತ್ಸ್‌ಬುಟ್ ತಾನೂ ಅತ್ಬುಟ್ಟ
–ಬೋರಾ ಬುರ್‌ಬುರ್ನ್ ಅತ್ಬುಟ್ಟ

ಮಾವ್ತರ್ ಮಂಕಾಗ್ ಗುರಿಕಾರ್ರ್ ಗುಮ್ಮಾಗ್ ಇಳೀಂತ್ ಕಿರ್ಬ್ಟಗ
ಆನೆ ಕೊರಳಾಗ್ ಒದೀತ್ ನಡಸ್ತ ಅಡ್ತ ಓಗ್ತಿದ್ದ–
ತಿಪ್ಪಾರಳ್ಳಿ ಬಲುದೂರ
ನಡಿಯೋಕ್ ಬಲುದೂರ
ತಿಪ್ಪಾರಳ್ಳಿ ಬಲುದೂರ
ನಾವಿಬ್ರ್ ಇರೋ ತಾಕೇ...
ಗಂಟ್ಳ್ ಉಳಿಸ್ಕೊಳ್ರಪ್ಪಾ ಗುರಿಕಾರ್ರ
ಮನೇಗೋಗಿ ಮಾವುತ್‌ಸಾಬರ್ರ.
ತಿಪ್ಪಾರಳ್ಳಿ ಬಲು ದೂರ–
ಅಲ್ಲೀಗ್ ನಡಿವೊಲ್ಲು ನಂ ಬಸ್ವಿ.



# ಕೊರವಂಜಿ ಮತ್ತು ರಾಶಿ

ಎಚ್. ಕೆ. ಚಂದ್ರಶೇಖರ್

ಕಳೆದ ಶತಮಾನದಲ್ಲಿ ಆರಂಭವಾದ ಸಾಹಿತ್ಯ ಪರಂಪರೆಗೆ ಒಂದು ಅಸಾಧಾರಣ ಮೈಲಿಗಲ್ಲಾಗಿ ಕೊರವಂಜಿಯ ಪ್ರಕಟಣೆ ವಿಜೃಂಭಿಸಿದೆ. ಅದರ ಸಂಸ್ಥಾಪಕರಾದ ಡಾ.ಎಂ. ಶಿವರಾಂ ಬಹುಮುಖ ಪ್ರತಿಭೆಯುಳ್ಳವರಾಗಿದ್ದು ಕನ್ನಡದಲ್ಲಿ ಹಾಸ್ಯಪ್ರಕಾರವನ್ನು ಪುಷ್ಟವಾಗಿ ಬೆಳೆಸಿದ ಶ್ರೇಷ್ಠ ಮಾನವೀಯ ವೈದ್ಯರು. ಈ ಅಪರೂಪದ ನಗೆಗಾರ ಸಾಹಿತಿಯಾಗಿ, ಹಾಸ್ಯವಲ್ಲದೆ ವೈದ್ಯಕೀಯ ಮತ್ತು ಮನೋವಿಜ್ಞಾನ ಸಾಹಿತ್ಯ ಗ್ರಂಥಗಳನ್ನೂ ಕನ್ನಡಿಗರಿಗೆ ನೀಡಿದರು. ಕೊರವಂಜಿಯ ಅಸ್ತಿತ್ವ ಡಾ. ಶಿವರಾಂ ಅವರ ಬಾಳಿನಲ್ಲಿ ಹಾಸುಹೊಕ್ಕಾಗಿ ಸೇರಿರುವುದರಿಂದ ಈ ಲೇಖನದಲ್ಲಿ ಅವರ ಜೀವನ ವಿಷಯ ಮತ್ತು ಕೊರವಂಜಿಯ ಕತೆಯನ್ನು ಒಟ್ಟಿಗೆ ಹೇಳುತ್ತ ಹೋಗಿದ್ದೇನೆ.

ಕನ್ನಡ ನಾಡಿನಲ್ಲಿ ನವೋದಯ ಸಾಹಿತಿಗಳು ಇಂಗ್ಲಿಷ್ ಸಾಹಿತ್ಯ ಪ್ರಕಾರಗಳ ಪ್ರಬಲ ಆಕರ್ಷಣೆಗೊಳಗಾಗಿ ಪ್ರಭಾವಿತರಾಗಿದ್ದು ಸಹಜವಾಗಿಯೇ ಇಂಗ್ಲಿಷ್ ಲಘುಹಾಸ್ಯ ಪ್ರಬಂಧಗಳ ಮಾದರಿಯಲ್ಲಿ ಕನ್ನಡದಲ್ಲಿಯೂ ರಚನೆ ಮಾಡಿದರು. ಪರರ ಕುಂದುಕೊರತೆಗಳನ್ನು ಆಡಿಕೊಂಡು ನಗುವ ಬದಲು ತಾವು ಬದುಕಿದ್ದ ಸಮಾಜದಲ್ಲಿ ಕಂಡ ಹುಳುಕುಗಳಿಗೆ ಕನ್ನಡಿ ಹಿಡಿದು ನಗೆ ಹೊಮ್ಮಿಸಿ ಆ ಮೂಲಕ ಸಮಾಜ ಸುಧಾರಣೆಯ ಪ್ರಯತ್ನ ನಡೆಸಿದರು. ಈ ಬಗೆಯ ಬರಹಗಾರರಲ್ಲಿ ಟಿ.ಪಿ.ಕೈಲಾಸಂ, ಪರ್ವತವಾಣಿ, ನಾ.ಕಸ್ತೂರಿ ಮೊದಲಾದವರಿದ್ದರು. ಕೈಲಾಸಂ ಬರೆದಿರುವ ಅನೇಕ

ಸಾಮಾಜಿಕ ನಾಟಕಗಳು–ಸಂಕಂಪ್ಷಿ, ಅನುಕೂಲಕ್ಕೊಬ್ಬಣ್ಣ, ಪೋಲೀಕಿಟ್ಟಿ, ಬಂಡ್ವಾಳ್ವಿಲ್ಲದ ಬಡಾಯಿ ಇತ್ಯಾದಿ ಸಮಾಜದಲ್ಲಿ ಕಂಡ ಕೊಂಕುಗಳನ್ನು ಗೇಲಿಮಾಡುವುದರಲ್ಲಿ ಯಶಸ್ವಿಯಾದವು. ಹಾಗೆಯೇ ಪರ್ವತವಾಣಿಯವರ ಉಂಡಾಡಿ ಗುಂಡ, ಬಹದ್ದೂರ್ ಗಂಡ, ಹಣಹದ್ದು, ಮೀನಾ ಮದುವೆ ಮುಂತಾದ ಕೃತಿಗಳೂ ಕಸ್ತೂರಿಯವರ ಗಗ್ಗಯ್ಯನ ಗಡಿಬಿಡಿ, ಕಾಡಾನೆ ಮುಂತಾದ ಪ್ರಹಸನಗಳೂ ಇವೇ ಜಾತಿಯುವಾಗಿದ್ದು ಅತ್ಯಂತ ಜನಪ್ರಿಯವಾದವು. ಈ ನಾಟಕಗಳಂತೆ ಅನೇಕ ಹಾಸ್ಯಲೇಖಕರ ನವಿರು ಹಾಸ್ಯಭರಿತ ಲಲಿತ ಪ್ರಬಂಧಗಳು, ಕತೆಗಳು, ಕಾದಂಬರಿಗಳು –ಇವುಗಳಿಂದ ನಗೆ ಸಾಹಿತ್ಯ ಬೆಳೆಯುತ್ತ ಬಂತು. ಎ.ಎನ್.ಮೂರ್ತಿರಾಯರ ಅನೇಕ ಲಘು ಪ್ರಬಂಧಗಳು, ನಾ.ಕಸ್ತೂರಿ, ಶ್ರೀರಂಗರ ಹಾಸ್ಯಲೇಖನಗಳು, ಮಾಸ್ತಿಯವರ ಕತೆಗಳು ಮುಂತಾದ ಕೊಡುಗೆಗಳಿದ್ದಂತೆ ಡಾ.ಶಿವರಾಂ ಅವರ ಮೊಟ್ಟ ಮೊದಲ ಪುಸ್ತಕ 'ತುಟಿ ಮೀರಿದುದು' ಒಂದು ನಗೆಬರಹಗಳ ಸಂಕಲನವಾಗಿ ೧೯೩೯ರಲ್ಲಿ ಪ್ರಕಟವಾಯಿತು.

'ತುಟಿ ಮೀರಿದುದು' ಸಂಕಲನದ ಮುಖಪುಟದಲ್ಲಿ ಕೃತಿಕಾರರ ಹೆಸರು 'ರಾಶಿ' ಎಂದಿತ್ತು. ತಮ್ಮ ಹೆಸರಿನಿಂದ ಎರಡು ಅಕ್ಷರಗಳನ್ನು ತೆಗೆದು ಜೋಡಿಸಿ 'ರಾಶಿ' ಎಂಬ ಕಾವ್ಯನಾಮ ಬಳಸಿದ್ದರು. 'ಈ ಪುಸ್ತಕದಲ್ಲಿ ಇಂಗ್ಲಿಷ್ ಮೂಲಗಳಿಂದ ಧಾರಾಳವಾಗಿ ಕತ್ತರಿಪ್ರಯೋಗ ನಡೆಸಿ ಬರೆದ ಲೇಖನಗಳಿವೆ' ಎಂದು ಅವರೇ ಹೇಳಿಕೊಂಡಿದ್ದಾರೆ. ಆಗಿನ ಕಾಲದ ಹೊಸ ಕವಿಗಳ ಕವನ ರಚನಾ ಸ್ವಾತಂತ್ರ್ಯವನ್ನು ಲೇವಡಿ ಮಾಡಿ ಬರೆದ ಪ್ರಬಂಧ 'ಸ್ವತಂತ್ರ ಶೈಲಿ' ಈ ಸಂಕಲನದಲ್ಲಿದೆ. ತಮ್ಮ ಬಗ್ಗೆ ತಾವೇ ಟೀಕಿಸಿಕೊಂಡು ನಗುವುದು ರಾಶಿಯವರ ಹುಟ್ಟುಗುಣವಾಗಿತ್ತು. ಸಂಕಲನದಲ್ಲಿನ 'ಕನ್ನಡಿಯೊಳಗಿನ ಗಂಟು' ಈ ಪ್ರವೃತ್ತಿಗೆ ನಿದರ್ಶನ. ಅನೇಕ ಹಾಸ್ಯ ವ್ಯಕ್ತಿಚಿತ್ರಗಳನ್ನು ಇದರಲ್ಲಿ ಅವರು ನೀಡಿದರು. ಕುಪ್ಪಣ್ಣ, ಸೋಪಿನ ಶಾಮಿ, ಸಿದ್ಧಾಂತಿಗಳು, ಎಮ್ಡನ್ ನಾಯ್ಡು, ಚೆಲುವಿನ ಚೆನ್ನ–ಇಂಥ ವ್ಯಕ್ತಿಗಳು ನಿಜಜೀವನದಲ್ಲಿ ಕಂಡರೂ ಇವರ ಗುಣ ವಿಶೇಷಗಳನ್ನು ರಾಶಿಯವರ ಲೇಖನಿ ಅನುಕಂಪಭರಿತ ಹಾಸ್ಯದಿಂದ ಲೇಪಿಸಿ ಇತರ ಬರಹಗಾರರು ಅನುಕರಿಸಬಹುದಾದ ವಿಶಿಷ್ಟ ಸಾಹಿತ್ಯವ್ಯಕ್ತಿಗಳನ್ನಾಗಿಸಿತು. ಅಣಕವಾಡುಗಳು ಈ ಸಂಕಲನದಲ್ಲಿ ಮೊದಲು ತಲೆದೋರಿದವು.

೧೯೪೨ರಲ್ಲಿ 'ರಾಶಿ' ಆರಂಭಿಸಿದ 'ಕೊರವಂಜಿ' ಮಾಸಪತ್ರಿಕೆ ಶತಮಾನದ ಹಾಸ್ಯಸಾಹಿತ್ಯರಚನೆಯಲ್ಲಿ ದಾರಿದೀಪವಾಗಿ ರಂಜಿಸಿತು. ರಾಶಿಯವರ ಒಲವು ನಗೆಸಾಹಿತ್ಯದ ಕಡೆ ಹೊರಳಲು ಅವರು ಬಿ.ಎ. ವಿದ್ಯಾರ್ಥಿಯಾಗಿ ಸೆಂಟ್ರಲ್ ಕಾಲೇಜಿನಲ್ಲಿ

ಓದುತ್ತಿದ್ದಾಗ ಅವರ ಲೈಬ್ರೆರಿಯಲ್ಲಿ ಉಚ್ಚಮಟ್ಟದ ಹಾಸ್ಯಕ್ಕೆ ಹೆಸರಾದ Punch ಓದಲು ಸಿಗುತ್ತಿದ್ದುದೂ ಒಂದು ಮುಖ್ಯ ಕಾರಣವಾಗಿತ್ತು. ಅವರೇ ಹೇಳಿರುವಂತೆ ಪ್ರತಿಮಧ್ಯಾಹ್ನ ಕಾಲೇಜಿನ ಅವರ ಸ್ನೇಹಿತರೆಲ್ಲ ತಿಂಡಿ ತಿನ್ನಲು ಹೋಗುತ್ತಿದ್ದರು. ತಮಗೆ ಆ ಸೌಕರ್ಯವಿಲ್ಲದ್ದರಿಂದ, ಶ್ರೀಮಂತ ಸ್ನೇಹಿತರೊಡನೆ ಆ ವೇಳೆಯಲ್ಲಿ ಇರಬಾರದಾದ್ದರಿಂದ, ಲೈಬ್ರೆರಿಗೆ ಹೋಗಿ Punch ನೋಡಲು ಆರಂಭಿಸಿದರು. ಅದರಲ್ಲಿ ಇರುತ್ತಿದ್ದ ವ್ಯಂಗ್ಯಚಿತ್ರಗಳು, ಲೇಖನಗಳು, ಕುಹಕಿಡಿಗಳು ಅವರ ಮನಸ್ಸನ್ನು ಸೆರೆಹಿಡಿದವು. ಆಗಿನ ಇಂಗ್ಲೆಂಡಿನ ಜೀವನ ವೈಪರೀತ್ಯಗಳನ್ನು ಚುರುಕಾಗಿ ಎತ್ತಿ ತೋರಿಸುವ ಬರವಣಿಗೆ ಇವರ ಪಾಲಿಗೆ ವಿದ್ಯಾರ್ಜನೆಯಾಗಿ ಪರಿಣಮಿಸಿತು. Punchನಿಂದ ದೊರಕಿದ ಸಂತೋಷದಿಂದ ಪ್ರೇರಿತರಾಗಿ ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಆಗ್ಗೆ ಅವರ ಮಿತ್ರ ಅಶ್ವತ್ಥನಾರಾಯಣರಾಯರು ಹೊರತರುತ್ತಿದ್ದ 'ನವಜೀವನ' ಎಂಬ ದಿನಪತ್ರಿಕೆಯಲ್ಲಿ 'ಸೋಮವಾರದ ಸುಸುದ್ದಿ'ಎಂಬ ಶೀರ್ಷಿಕೆಯಲ್ಲಿ ಚುಟಕಗಳು, ನಗೆಚಟಾಕಿಗಳು ಬರೆಯಲು ಆರಂಭಮಾಡಿದರು. ಆಗಾಗ ಕೊರವಂಜಿ ಎಂಬ ಕಾವ್ಯನಾಮದಿಂದ ಲೇಖನಗಳನ್ನು ಬರೆದದ್ದುಂಟು. ಆ ವೇಳೆಗಾಗಲೆ ಅವರಿಗೆ ಕೈಲಾಸಂರ ಪರಿಚಯ ಮತ್ತು ಒಡನಾಟ ಅವರ ಜೀವನದೃಷ್ಟಿಯನ್ನೇ ಬದಲಾಯಿಸುವ ಪರಿಣಾಮ ಬೀರಿತ್ತು. ಆಗ ರಾಶಿ ಬೆಂಗಳೂರಿನ ವಿಕ್ಟೋರಿಯ ಆಸ್ಪತ್ರೆ ಕಾಂಪೌಂಡಿನೊಳಗೆ ನಡೆಯುತ್ತಿದ್ದ ಮೆಡಿಕಲ್ ಕಾಲೇಜಿನಲ್ಲಿ ವ್ಯಾಸಂಗಮಾಡುತ್ತಿದ್ದರು. ತರಗತಿಗಳನ್ನು ಮುಗಿಸಿಕೊಂಡು ಮಿಂಟೋ ಕಣ್ಣಾಸ್ಪತ್ರೆಯ ಎದುರಿಗಿದ್ದ ಜಸ್ಟಿಸ್ ಪರಮಶಿವಯ್ಯರ್ ಮನೆ 'ವೈಟ್ ಹೌಸ್' ಹಿಂಭಾಗದಲ್ಲಿ ಔಟ್‌ಹೌಸಿನಂತಿದ್ದ ಕೋಣೆಯನ್ನು ಸೇರಿಕೊಳ್ಳುತ್ತಿದ್ದರು. ಆ ಕೋಣೆಯಲ್ಲೇ ಅಯ್ಯರ್ ಮಗ ಕೈಲಾಸಂ ಇದ್ದದ್ದು. ತಂದೆಯ ಕಣ್ಣು ತಪ್ಪಿಸಿ ಮಗನ ಕೋಣೆ ತಲುಪಿಕೊಳ್ಳಬೇಕಾಗುತ್ತಿತ್ತು. ಅನಂತರ ಸೈಕಲ್‌ಗಳ ಮೇಲೆ ಕುಳಿತು ಇಬ್ಬರೂ ಕಂಟೋನ್ಮೆಂಟಿಗೆ ಹೋಗುತ್ತ ಉದ್ದಕ್ಕೂ ಮಾತುಕತೆ. ಅನೇಕ ಬಾರಿ ಪೆರೇಡ್ ಗ್ರೌಂಡ್ಸ್ ಹತ್ತಿರ ಇದ್ದ ಚರ್ಚ್ ಆವರಣದಲ್ಲಿ ಕೂತು ಏಕಲವ್ಯ, ಮಾರ್ಕಂಡೇಯ, ಕರ್ಣ ಮುಂತಾದ ಪಾತ್ರಗಳ ಬಗ್ಗೆ ಕೈಲಾಸಂ ಮಾಡುತ್ತಿದ್ದ ಕಥನಗಳನ್ನು ಮನಸ್ಸಿಟ್ಟು ಕೇಳುತ್ತಿದ್ದರಂತೆ. ಈ ಶ್ರವಣದಿಂದ ತಮ್ಮ ನೈತಿಕ ನಿಲುವುಗಳು ಸ್ವಚ್ಛಗೊಂಡವು ಎಂದು ಹೇಳಿಕೊಂಡಿದ್ದಾರೆ ರಾಶಿ.

೧೯೪೨ರಿಂದ ಸತತವಾಗಿ ೨೫ ವರ್ಷಗಳ ಕಾಲ ನಾಡನ್ನು ರಂಜಿಸಿದ ಮಾಸಪತ್ರಿಕೆ ಕೊರವಂಜಿಯ ಹುಟ್ಟಿಗೆ ನಾ.ಕಸ್ತೂರಿ ಒತ್ತಾಸೆಯಾಗಿ ನಿಂತರು. ಸಮಾನ ಮನೋಧರ್ಮದ ಇವರಿಬ್ಬರ ಭೇಟಿ ಕನ್ನಡ ಹಾಸ್ಯಪ್ರಪಂಚಕ್ಕೆ ಮಹತ್ವದ ಘಟನೆಯಾಗಿ ಪರಿಣಮಿಸಿತು. ಆ ಕಾಲದಲ್ಲಿ ಮೈಸೂರಿನ ಬನುಮಯ್ಯ ಶಾಲೆಯಲ್ಲಿ ಕಸ್ತೂರಿ ಚರಿತ್ರೆಯ ಉಪಾಧ್ಯಾಯರಾಗಿದ್ದರು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಹಾಸ್ಟೆಲಿನಲ್ಲಿ

ವಿದ್ಯಾರ್ಥಿಗಳ ಆರೋಗ್ಯರಕ್ಷಣೆಯ ಹೊಣೆಯನ್ನು ಹೊತ್ತಿದ್ದ ರಾಶಿ ಅಲ್ಲಿಗೆ ಹೋದಾಗಲೆಲ್ಲ ವಿದ್ಯಾರ್ಥಿಗಳೊಂದಿಗೆ ಹಾಸ್ಯ ಚಟಾಕಿಗಳನ್ನು ಹಾರಿಸುತ್ತಿದ್ದುದನ್ನು ಆದೇ ಹಾಸ್ಟೆಲಿನಲ್ಲಿದ್ದ ನಾ. ಕಸ್ತೂರಿಯವರ ಮಗ ನಾರಾಯಣಮೂರ್ತಿ ಬಹುವಾಗಿ ಮೆಚ್ಚಿಕೊಂಡಿದ್ದ. ಮೈಸೂರಿನಲ್ಲಿದ್ದ ತಂದೆಗೆ ರಾಶಿಯನ್ನು ಉತ್ಸಾಹದಿಂದ ಪರಿಚಯಿಸಿದ.



ಸತ್ಯಕ್ಕೆ ಬೆನ್ನು ತಿರುಗಿಸದವರು
'ಹಾಳು ಛತ್ರಿ ಎಲ್ಲಿ ಮರೆತೆ?'

ನಾ. ಕಸ್ತೂರಿ ತಮ್ಮ ವಿದ್ಯಾರ್ಥಿವೃಂದದಲ್ಲಿ ಒಬ್ಬ ಪ್ರತಿಭಾವಂತ ವ್ಯಂಗ್ಯ ಚಿತ್ರಕಾರರನ್ನು ಗುರುತಿಸಿದ್ದರು. ಅವರೇ ಮುಂದೆ ಅಂತರರಾಷ್ಟ್ರೀಯ ಖ್ಯಾತಿಪಡೆದ ಆರ್.ಕೆ. ಲಕ್ಷ್ಮಣ್. ರಾಶಿಯವರ ಸಂಪಾದಕತ್ವ, ನಾ. ಕಸ್ತೂರಿಯವರ ಸಲಹೆ, ಪ್ರೋತ್ಸಾಹ, ಪ್ರತಿಭಾವಂತ ಲಕ್ಷ್ಮಣ್ ವ್ಯಂಗ್ಯ ಚಿತ್ರಗಳು ಎಲ್ಲ ದೊರಕಿ ಕೊರವಂಜಿ ಪ್ರಕಟಣೆಗೆ ಸಿದ್ಧವಾಯಿತು. ಬಿ.ಎನ್.ಗುಪ್ತ ಪ್ರಕಾಶನದ ಭಾರ ಹೊತ್ತರು. ಕೊರವಂಜಿಯ ಮೊದಲ ಸಂಚಿಕೆ ಬಂದದ್ದು ೧೯೪೨ರ ಮಾರ್ಚ್ ೧೬, ಯುಗಾದಿಯ ದಿನ. ಆಗ ಜಗತ್ತಿನ ಎರಡನೆಯ ಯುದ್ಧ ಭೀಕರವಾಗಿ ನಡೆದಿದ್ದರೂ ಇಂತಹ ಹಾಸ್ಯಪತ್ರಿಕೆಗೆ ಒಳ್ಳೆಯ ಭವಿಷ್ಯವಿದೆ ಎನ್ನುವುದು ಎಲ್ಲರ ತಿಳುವಳಿಕೆಯಾಗಿತ್ತು. ಏಕೆಂದರೆ ಆಗಿನ ದಾರುಣ ಸ್ಥಿತಿಯಲ್ಲಿ ಜನಸಾಮಾನ್ಯರನ್ನು ನಗಿಸಿ ಮನಸ್ಸು ಹಗುರಮಾಡುವ ಯಾವುದೇ ಕೆಲಸವೂ ಸಮಾಜದ ಆರೋಗ್ಯಕ್ಕೆ ಅವಶ್ಯಕವಾಗಿತ್ತು. ಆಹಾರದ ರೇಷನ್. ಬಟ್ಟೆಯ ನಿಯಂತ್ರಣ, ಓಡಾಟದಲ್ಲಿ ಅಡಚಣೆ ಇವೆಲ್ಲ ಇದ್ದ ಕಾಲ ಅದು. ಮೊದಲ ಸಂಚಿಕೆಯಲ್ಲಿ ಪ್ರಮುಖವಾಗಿ ರಾಶಿ ಮತ್ತು ಕಸ್ತೂರಿಯವರ ನಗೆ ಲೇಖನಗಳು, ಲಕ್ಷ್ಮಣ್ ವ್ಯಂಗ್ಯಚಿತ್ರಗಳು ಇದ್ದವು. ಸಂಪಾದಕೀಯದಲ್ಲಿ ರಾಶಿ ಹೀಗೆ ಬರೆದಿದ್ದರು:'....ಸಮಾಜದ ಕುಂದುಕೊರತೆಗಳು ಕೊರವಂಜಿಯ ವಸ್ತುವೇ ವಿನಾ ಸಮಾಜದ ವ್ಯಕ್ತಿಗಳಲ್ಲ. ರೂಢಿಯ ಅವಿವೇಕಗಳನ್ನು ಹಾಸ್ಯಮಾಡುವುದೇ ವಿನಾ ರೂಢಿಗಾರರನ್ನಲ್ಲ.... ಸಂಗ್ರಾಮಕಾಲದಲ್ಲಿ ಜನರೆಲ್ಲರೂ ಕಳವಳಪಡುತ್ತಿರುವಾಗ ಹಾಸ್ಯದ ಅವಶ್ಯಕತೆಯೂ ಹೆಚ್ಚು. ಹಾಗಾಗಿ ಈಗ ಕೊರವಂಜಿಯು ಹೊರಟಿದೆ..' ಆಶ್ಲೀಲದ ಸೋಂಕಿಲ್ಲದೆ ತಿಳಿಗನ್ನಡದ ಆಡುಭಾಷೆಯಲ್ಲಿ ನವುರಾದ ಹಾಸ್ಯ ಹರಡಲು ಕೊರವಂಜಿ ಸಿದ್ಧವಾದಳು. ಮುಖಪುಟದಲ್ಲಿ ಬೊಂಬೆ ಹಿಡಿದ ಮಧ್ಯವಯಸ್ಸಿನ ಹಳ್ಳಿಯ ಹೆಣ್ಣಿನ ಚಿತ್ರ –ಲಕ್ಷ್ಮಣ್ ಬರೆದದ್ದು. ಬಿಡಿಪ್ರತಿಯ ಬೆಲೆ ಎರಡಾಣೆ!

ಕೊರವಂಜಿಯ ಪ್ರಾರಂಭದ ದಿನಗಳಲ್ಲಿ ರಾಶಿ ಬೆಂಗಳೂರಿನಲ್ಲಿದ್ದು ಕಸ್ತೂರಿ ಮೈಸೂರಿನಲ್ಲಿದ್ದುದರಿಂದ ಇವರಿಬ್ಬರ ನಡುವೆ ವಿಚಾರ ವಿನಿಮಯ ನಡೆಯುತ್ತಿದ್ದುದು ಪತ್ರವ್ಯವಹಾರದ ಮೂಲಕವೇ. ಕೊರವಂಜಿಯ ಮೊದಲ ದಶಕಗಳಲ್ಲಿ ಅನೇಕ ಬರಹಗಳನ್ನು ರಾಶಿ ಮತ್ತು ಕಸ್ತೂರಿಯವರೇ ಬೇರೆಬೇರೆ ಹೆಸರುಗಳಲ್ಲಿ ಬರೆಯುತ್ತಿದ್ದರು. ಬಚ್ಚ, ಕುಮಾರ್ ಇಂಥ ಹೆಸರುಗಳಲ್ಲಿ ರಾಶಿ; ರುದ್ರಮ್ಮ, ಪಾಟಾಳಿ, ಖಾರಾಂತ, ರೇವಣ್ಣ ಎಂಬ ಹೆಸರುಗಳಲ್ಲಿ ಕಸ್ತೂರಿ ಬರೆಯುತ್ತಿದ್ದರು. ಯುದ್ಧಕಾಲದ ಕಷ್ಟಕಾರ್ಪಣ್ಯಗಳು, ಅಭಾವಗಳು ಹಾಸ್ಯ ಚಟಾಕಿಗಳಿಗೆ ಆಧಾರವಾದವು. ಈ ಚುಟಕಗಳನ್ನು ನೋಡಿ:

ಆತ್ಮಹತ್ಯೆ ಮಾಡಿಕೊಳ್ಳುವುದಕ್ಕಾಗಿ ರೈಲು ಕಂಬಿ ಮೇಲೆ ತಲೆ ಇರಿಸಿಕೊಂಡು ಮಲಗಿದ್ದ ಬಡಪ್ರಾಣಿ ಒಬ್ಬ ರೈಲಿಗಾಗಿ ಕಾದು ಕಾದು ಉಪವಾಸದಿಂದಲೇ ಪ್ರಾಣ ಬಿಟ್ಟನಂತೆ.

*

ಬಟ್ಟೆ ಸರಬರಾಜು ಮಾಡುವಾಗ ಪ್ರತಿಯೊಬ್ಬ ಭಾರತೀಯನಿಗೂ ೧೨ ಗಜ ಬೇಕೆ ಅಥವಾ ೧೦ ಗಜ ಸಾಕೇ ಎಂಬ ಪ್ರಶ್ನೆ ಎದ್ದಿದೆಯಂತೆ.

ಅದು ಅಕ್ಕಿ-ಸರಬರಾಜಿನ ಮೇಲೆ ಹೋಗುತ್ತೆ.

*

ಏನು ರಾಯರೆ ಬುತ್ತಿ ಕಟ್ಟಿಕೊಂಡು ಯಾವ ಊರಿಗೆ ಹೊರಟಿರಿ?

ಸೌದೆ ತರುಕ್ಕೆ ಅಂತ ಸೌದೆ ಡಿಪೋಗೆ ಹೊರಟಿದೀನಿ ಸ್ವಾಮಿ

*

ಕೊರವಂಜಿಯಲ್ಲಿ ಯಾವಾಗಲೂ ಇರುತ್ತಿದ್ದ ಅಂಕಣಗಳೆಂದರೆ ಕುಹಕಿಡಿಗಳು ಮತ್ತು ಉರಿಗಾಳು. ಎರಡನ್ನೂ ರಾಶಿಯವರೇ ಬರೆಯುತ್ತಿದ್ದರು. ಕೆಲವನ್ನು ನೋಡಿ:

ಇನ್‌ಫ್ಲೂಂಯೆಂಜ಼ ರೋಗಕ್ಕೆ ಒಂದು ಔನ್ಸ್ ಬ್ರಾಂದಿ ಒಳ್ಳೆಯ ಔಷಧ........ ಇನ್‌ಫ್ಲೂಯೆಂಜ಼ ಎಲ್ಲೆಲ್ಲೂ ಹರಡಿದೆ..

ಪತ್ರಿಕೆಯಲ್ಲಿ ಅಕ್ಕಪಕ್ಕದ ಸುದ್ದಿಗಳು.

–ಮತ್ತಿನ್ನೇನು, ಔಷಧಿ ಆಸೆಗೆ ರೋಗ ಹರಡದೆ ಇರುತ್ಯೇ?

*

ನಮ್ಮ ಮಗು ಏನೇನೋ ಮಾತಾಡುತ್ತಿದೆ. ಒಂದೂ ಖಚಿತವಾಗಿ ಅರ್ಥವಾಗುಲ್ಲ ಅಂತ ತಾಯಿ ಹೇಳಿದರೆ,

'ಹೆದರಬೇಡಿ ತಾಯಿ ಮುಂದೆ ಮಂತ್ರಿ ಆಗ್ತಾನೆ' ಅಂತ ವೈದ್ಯರು ಭರವಸೆ ನೀಡಿದರಂತೆ

*

ಅಂದವಾದ ಸ್ತ್ರೀಯರ ಗಡಿಯಾರಗಳು ನಮ್ಮಲ್ಲಿ ದೊರೆಯುತ್ತವೆ– ಜಾಹೀರಾತು

ಆ ಸ್ತ್ರೀಯರ ಫೋಟೋಗಳನ್ನ ನಮಗೆ ಕಳಿಸಿದರೆ ಗಡಿಯಾರ ಆರಿಸುವ ಕೆಲಸ ಸುಲಭ.

ಕುಹಕಿಡಿಗಳಷ್ಟೇ ಜನಪ್ರಿಯವಾದ ಇನ್ನೊಂದು ಅಂಕಣವೆಂದರೆ ನಾ.ಕ. ಅವರ ಅನರ್ಥಕೋಶ. ಕಸ್ತೂರಿಯವರ ಈ ಅಣಿಮುತ್ತುಗಳನ್ನು ಒಟ್ಟಿಗೆ ಸೇರಿಸಿದ ಅನರ್ಥಕೋಶವೆಂಬ ಪುಸ್ತಕವೇ ಪ್ರಕಟವಾಗಿದೆ. ಕೆಲವು ಉದಾಹರಣೆಗಳನ್ನು ನೋಡಿ:

ದಂಪತಿ : ದಮ್ಮು ಹಿಡಿದು ದುಡಿಯುವ ಗಂಡುಜೀವ.

ಅಗಸ: ಕೇವಲ ಬಟ್ಟೆಗಳಿಂದಲೇ ಬಂಡೆಗಳನ್ನು ಪುಡಿಮಾಡಲು ಯತ್ನಿಸುವವ

ಆರ್ಯಪುತ್ರ:'ಮಾವನ ಮಗನೇ' ಎಂದು ಭಾರತೀಯ ನಾರಿಯರು ಹಿಂದೆ ಕರೆಯುತ್ತಿದ್ದ ರೀತಿ. ಈಗ 'ಬರೀ ಮಗನೇ' ಎನ್ನುತ್ತಾರೆ.

ಗಾಯಕ: ಗಾಯಪಡಿಸುವವನು.

ವೃದ್ಧ: ಅರುವತ್ತು ವರ್ಷಗಳಿಂದಲೂ ಲಾರಿ ಅನಾಹುತಗಳಿಗೆ ಸಿಕ್ಕದ ಚುರುಕ.

ತ್ಯಾಗಿ: ಸುಖ ಪಡಬಾರದು ಎಂಬ ಬೋಧನೆಗೆ ಕಿವಿ ಕೊಟ್ಟ ದಡ್ಡ.



'ನೋಡಿ ಸ್ವಾಮಿ, ನನ್ಮಗ ನಾಲ್ಕು ವರ್ಷ ಆಗ್ಲೆ ಇಪ್ಪತ್ತರ ವರ್ಗ ಒಂದು ಎರಡು ಹೇಳ್ತಾನೆ'
'ಪರವಾಗಿಲ್ಲ, ಇಪ್ಪತ್ತು ವರ್ಷಕ್ಕೆ ನೂರರ ವರ್ಗ ಕಲೀತಾನೆ'

ಕನ್ನಡದಲ್ಲಿ ಹಾಸ್ಯಲೇಖನಗಳನ್ನು ರಚಿಸುವ ಆಸಕ್ತಿ ಕೊರವಂಜಿ ಹುಟ್ಟಿಸಿದ್ದಲ್ಲದೆ ಲೇಖಕರಿಗೆ ಅದೇ ಉತ್ತಮ ಕಾರ್ಯಕ್ಷೇತ್ರವಾಗಿ ಪರಿಣಮಿಸಿತು. ರಾಶಿ ಮತ್ತು ಕಸ್ತೂರಿ ಬರೆಯುತ್ತಿದ್ದುದನ್ನು ಅನುಕರಿಸಿ ಅನೇಕ ಲೇಖಕರು,ಲೇಖಕಿಯರು ಕೊರವಂಜಿಯ ಬಳಗವನ್ನು ಸೇರಿದರು. ಕೊರವಂಜಿಯ ಮೊದಲ ಮಹಿಳಾ ಲೇಖಕಿಯಾಗಿ ಖ್ಯಾತರಾದ ಟಿ.ಸುನಂದಮ್ಮ-ಕುಟುಂಬವನ್ನು ಪ್ರಧಾನವಾಗಿಟ್ಟುಕೊಂಡು ಚುರುಕು ಬುದ್ಧಿಯ ಸರಸು, ಮಂದಬುದ್ಧಿಯ ಮೈಲಾರಯ್ಯ-ಮುಂತಾದ ಪಾತ್ರಗಳಿಂದ ಶುಚಿರುಚಿಯಾದ ಹಾಸ್ಯ ಹೊಮ್ಮಿಸುತ್ತಿದ್ದರು. ನಲವತ್ತರ ದಶಕದಲ್ಲಿ ಬೀರಣ್ಣ ಎಂಬ ಕಾವ್ಯನಾಮದಿಂದ ಉತ್ತಮ ಲೇಖನಗಳನ್ನು ಕೊಟ್ಟ ಬಿ.ಆರ್.ನಾರಾಯಣಯ್ಯಂಗಾರ್ ರಾಶಿಗೆ ಆಪ್ತಸ್ನೇಹಿತರು. ಇವರು ಬರೆದ ಪುಟ್ಟೂರಾಯನ ಪಥ್ಯ, ಗಾಳಿ ಬಂದಾಗ ತೂರಿಕೊ, ರಂಗಪ್ಪ ಮತ್ತು ರಾವಣಭಾತ್-ಉತ್ತಮ ನಗೆಬರಹಕ್ಕೆ ಸಾಕ್ಷಿಯಾಗಿ ಉಳಿದಿವೆ.

ರಾಶಿ ಬರೆದ ಇನ್ನೊಂದು ಆಕರ್ಷಕ ಅಂಕಣ 'ಕೊರವಾವಲೊಕನ'. ಇದರಲ್ಲಿ ಹೀರೋ ಕೊರವ. ಅವನು ಸರಸಿ, ತೀಕ್ಷ್ಣಮತಿ, ಮಾತುಗಾರ. ಸೆಂಚುರಿ ಕ್ಲಬ್ಬಿನಲ್ಲಿ ಇವನು ಬಂದು ಕೂತರೆ ಇವನದ್ದೇ ದರ್ಬಾರ್. ಪಿ. ಜಿ. ವೋಡ್‌ಹೌಸ್ ಪಾತ್ರರಚನೆಯನ್ನು ಹೋಲುತ್ತಿದ್ದ ಕೊರವನನ್ನು ರಾಶಿಯವರು ತಮ್ಮ ತದ್ರೂಪಿನಲ್ಲಿ ಸೃಷ್ಟಿಸಿಕೊಂಡಿದ್ದರೆಂಬುದನ್ನು ಅವರ ಬಳಗದವರೆಲ್ಲ ತಿಳಿದಿದ್ದರು. ರಾಶಿ ಸೆಂಚುರಿ ಕ್ಲಬ್‌ಗೆ ಟೆನಿಸ್ ಆಡಲು ಹೋಗುತ್ತಿದ್ದ ದಿನಗಳಲ್ಲಿ ಸಂಜೆ ಆಟ ಮುಗಿದಮೇಲೆ ಸ್ನೇಹಿತರೊಂದಿಗೆ ಕುಳಿತು ಏಳು ಗಂಟೆಯವರೆಗೂ ಹಾಸ್ಯಭರಿತ ಹರಟೆ ನಡೆಸುತ್ತಿದ್ದರು. ರಾಶಿಯವರ ಸಾಂದರ್ಭಿಕ ಜೋಕುಗಳನ್ನು ಕೇಳಲೆಂದೇ ಅನೇಕರು ಅಲ್ಲಿಗೆ ಆಗಮಿಸುತ್ತಿದ್ದರಂತೆ. ಈ ಅನುಭವದಿಂದ ಹುಟ್ಟಿದ ಪಾತ್ರ ಕೊರವ, ಸಮಾಜದ ಏರುಪೇರುಗಳನ್ನು ಲೇವಡಿ ಮಾಡಿ ಅರೆದದ್ದೇ ಕೊರವಾವಲೋಕನ

ಐವತ್ತರ ದಶಕದಲ್ಲಿ ಕೊರವಂಜಿಗೆ ಬರೆಯಲು ಪ್ರಾರಂಭಿಸಿದವರಲ್ಲಿ ದಾಶರಥಿ ದೀಕ್ಷಿತ್, ಕೇಫ, ಅರಾಸೇ ಮುಖ್ಯರು. ದೀಕ್ಷಿತರು ಸೃಷ್ಟಿಸಿದ ದಫೇದಾರ್ ದೇರಣ್ಣನವರು, ಅವರ ಪತ್ನಿ ಸಾವಂತ್ರಮ್ಮ ಕೊರವಂಜಿಯ ವೇದಿಕೆಯಲ್ಲಿ ನಲಿಸಿಹೋದ ಮೆಚ್ಚಿನ ಪಾತ್ರಗಳು. ದೇರಣ್ಣನ ಪಕೋಡಪ್ರಿಯತೆಗೂ, ಸಾವಂತ್ರಮ್ಮನ ಮಹತ್ವಾಕಾಂಕ್ಷೆಗೂ ಸದಾ ತಿಕ್ಕಾಟ. ಹಾಸ್ಯದ ಹೊನಲು ಹರಿಸಿದ ಈ ಪಾತ್ರಗಳಲ್ಲದೆ ದೀಕ್ಷಿತರು ಗಾಂಪರ ಸಾಹಸಗಳನ್ನು ಕುರಿತ ಲೇಖನಗಳನ್ನೂ ಬರೆಯುತ್ತಿದ್ದರು. ಅವರು ಕೆಲಸಮಾಡುತ್ತಿದ್ದ ಎಚ್. ಎ.ಎಲ್ ಕಾರ್ಖಾನೆ ಅವರನ್ನು ಇಂಗ್ಲೆಂಡಿಗೆ ಕಳಿಸಿದಾಗ ಗಾಂಪರ ವಿದೇಶಯಾತ್ರೆ ಕಥನ ಪ್ರಕಟವಾಯಿತು.

ಅರಾಸೇಯವರು (ಸೇತುಮಾಧವ) ಕೊರವಂಜಿಯಲ್ಲಿ ಬರೆಯಲು ಪ್ರಾರಂಭಿಸಿದ ನಂತರ ಅವರ ಲೇಖನಗಳಿಗೆ ಅಗ್ರಸ್ಥಾನ ದೊರೆಯುತ್ತಿತ್ತು. ರಾಶಿಯವರು ಒಮ್ಮೆ



ಅಳಬೇಡ, ಆನೆ ತೋರಿಸ್ತೀನಿ, ಕುದುರೆ ಬೇಡದೇ ಇದ್ರೆ, ಲೇ, ಬೇಗ ಬಾರೆ, ಮಗು ಅಳುತ್ತೆ.

ಅರಾಸೇಯವರ ಪ್ರತಿಭೆಗೆ ತಲೆದೂಗಿ 'ನೀನು ಅಮೆರಿಕೆಯಲ್ಲಿದ್ದಿದ್ದರೆ ನ್ಯೂಯಾರ್ಕರ್ ಅಂಥ ಪತ್ರಿಕೆಗಳ ಸಂಪಾದಕ ಮಂಡಲಿಯಲ್ಲಿರುತ್ತಿದ್ದೆ. ದುರದೃಷ್ಟದಿಂದ ಈ ನಾಡಿನಲ್ಲಿ ಹುಟ್ಟಿದ್ದೀಯೆ....ಹಾಸ್ಯಕೃಷಿ ಮುಂದುವರೆಸು' ಎಂದು ಬೆನ್ನುತಟ್ಟಿದ್ದರಂತೆ. ಅರಾಸೇಯವರ ಹಾಸ್ಯ ವಿಶಿಷ್ಟವಾದದ್ದು. ಅಪಾರ ಲೋಕಜ್ಞಾನ, ವಿವಿಧ ಶಾಸ್ತ್ರಗಳಲ್ಲಿ ನಡೆದಿರುವ ಮುನ್ನಡೆಯ ಬಗ್ಗೆ ಸ್ಪಷ್ಟ ಅರಿವು, ಖ್ಯಾತಕವಿಗಳ ಕವನಗಳ ಅಣಕು ರೂಪಗಳನ್ನು ರಚಿಸಿ ಸವಿಸುವ ರಸಿಕತೆ ಇವೆಲ್ಲ ಅವರ ಪ್ರತಿಭಾವಿಶೇಷಗಳು. ಅವರ 'ಮಧ್ಯಂತರ ಕವಿವಿಚಾರ' ಅತಿ ಉತ್ಕೃಷ್ಟ ನಗೆಸಾಹಿತ್ಯ. ಇದರಲ್ಲಿ ನಾಗವರ್ಮ, ಕೊಂಡಗೂಳಿ ಕೇಶಿರಾಜ ಮುಂತಾದವರ ಬಗ್ಗೆ ವಿದ್ವತ್ಪೂರ್ಣವಾಗಿ ಬರೆದಿದ್ದಾರೆ.

ಕೊರವಂಜಿಯ ಇನ್ನೊಬ್ಬ ಪ್ರಸಿದ್ಧ ಲೇಖಕರೆಂದರೆ ಕೇಫ಼. (ನಿಜನಾಮ ಡಾ.ಕೇಶವಮೂರ್ತಿ) ನಲವತ್ತರ ದಶಕದ ಉತ್ತರಭಾಗದಲ್ಲಿ ಅವರು ಬರೆಯಲು ಆರಂಭಿಸಿದ 'ಯಾತ್ರಿಕರ ಪತ್ರ' ಇಂದಿಗೂ ಅಪರಂಜಿಯಲ್ಲಿ ಮುಂದುವರೆದಿದೆ.

ಮೂವರು ಮಿತ್ರರು ತಲಕಾಡಿಗೆ ಸೈಕಲ್‌ನಲ್ಲಿ ಪ್ರವಾಸ ಹೊರಟದ್ದು ನಲವತ್ತು ವರ್ಷಗಳ ನಂತರ ಇನ್ನೂ ದಾರಿಯಲ್ಲಿನ ಹಳ್ಳಿಗಳಲ್ಲಿ ತಂಗಿ ಅಲ್ಲಿಂದ ತಪ್ಪದೆ ವರದಿಗಳನ್ನು ಕಳಿಸುತ್ತಿದಾರೆ. ಕೇಫ಼ರ ಇನ್ನೊಂದು ಸ್ಮರಣೀಯ ಕೊಡುಗೆ ಎಂದರೆ ಪಾಂಡು, ಶೌರಿಯ ರೂಪದಲ್ಲಿ ವೋಡ್‌ಹೌಸ್ ಪಾತ್ರಗಳಾದ ಬರ್ಟಿ ವೂಸ್ಟರ್, ಜೀವ್ಸ್ ಇವರ ಚಿತ್ರಣ.

ಆ ಕಾಲದ ಅನೇಕ ಖ್ಯಾತ ಲೇಖಕರೂ ಕೊರವಂಜಿಗೆ ಲೇಖನಗಳನ್ನು ಬರೆದದ್ದುಂಟು. ಶಿವರಾಮ ಕಾರಂತ, ಶ್ರೀರಂಗ, ಜಿ.ಪಿ.ರಾಜರತ್ನಂ, ಟೀಎಸ್ಸಾರ್ರಾವ್, ಎ.ಎಸ್.ರಾಮಕೃಷ್ಣ ಮುಖ್ಯರು.

೧೯೬೭ರಲ್ಲಿ ರಾಶಿಯವರು ಕೊರವಂಜಿಯನ್ನು ಕಾಡಿಗೆ ಕಳಿಸಿದಾಗ ನಾಡಿಗೆ ನಾಡೇ ಖಿನ್ನವಾಯಿತು. ಗ್ರಾಹಕರ ಅಭಾವವೇ? ಇಲ್ಲವೆ ಪ್ರಕಾಶನದ ಬೆಲೆ ಹೆಚ್ಚಿತೆಂದೇ? ಇವು ಭಾಗಶಃ ನಿಜವಾದರೂ ಅವರ ಮಗ ಶಿವಕುಮಾರ್ ಹೇಳುವಂತೆ ರಾಶಿ ಕೊನೆಗೆ ಆಧ್ಯಾತ್ಮಕ್ಕೆ ಮನಸ್ಸು ಕೊಟ್ಟು ಕೊರವಂಜಿಯ ತುಂಟುಹಾಸ್ಯರಚನೆಯಲ್ಲಿ ಆಸಕ್ತಿ ಕಡಮೆ ಮಾಡಿಕೊಳ್ಳುತ್ತ ಬಂದದು ಮುಖ್ಯ ಕಾರಣ. ಒಂದೊವ್ಮೆ ತಾವು ಆರೋಗ್ಯವಾಗಿರುವಾಗಲೇ ಕೊರವಂಜಿಯನ್ನು ಪುನಃ ತರಲು ಇಷ್ಟಪಟ್ಟಿದ್ದರು. ಆದರೆ ಪತ್ರಿಕೆಯನ್ನು ನಡೆಸಲು ಬಂದ ಪ್ರಕಾಶಕರು ಅವರಿಗೆ ಒಪ್ಪಿಗೆಯಾಗುತ್ತಿರಲಿಲ್ಲ. ಕೊರವಂಜಿಯನ್ನು ನಿಲ್ಲಿಸಿ ಅದರ ಖಾತೆಯಲ್ಲಿದ್ದ ಆರು ಸಾವಿರ ರೂಪಾಯಿ ಮೊಬಲಗನ್ನು ೧೯೭೬ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿಗೆ ದತ್ತಿನಿಧಿಯಾಗಿ ನೀಡಿದರು. 'ಡಾ.ಎಂ.ಶಿವರಾಂ ಅವರ ಕೊರವಂಜಿ ಬಳಗದ ದತ್ತಿನಿಧಿ' ಎಂಬ ಹೆಸರಿನ ನಿಧಿಯ ಉದ್ದೇಶ ಪರಿಷತ್ತಿನ ವತಿಯಿಂದ ಹಾಸ್ಯ ಸಾಹಿತ್ಯ ಪ್ರಕಟಣೆ ಇಲ್ಲವೆ ಕಾರ್ಯಕ್ರಮಗಳ ವಿತರಣೆ. ಅದು ಪರಿಷತ್ತಿನಲ್ಲಿ ಈಗಲೂ ನಡೆಯುತ್ತ ಬಂದಿದೆ.

ಕೊರವಂಜಿಯ ಕೊನೆಯ ಸಂಚಿಕೆ(ಮಾರ್ಚ್ ೧೯೬೭)ಒಂದು ವಿಶಿಷ್ಟ ರೀತಿಯಲ್ಲಿ ಹೊರಬಂದಿತ್ತು. ಅದರಲ್ಲಿ ಕೊರವಂಜಿಯ ಎಂದಿನ ಬರಹಗಾರರಾದ ಶ್ರೀರಂಗ, ಸುನಂದಮ್ಮ, ರಾಮಿ, ದೀಕ್ಷಿತ್, ಅರಾಸೇ ಇವರುಗಳು 'ಹೋಗಿ ಬರ್ತೀಯಮ್ಮ' ಎಂಬ ಶೀರ್ಷಿಕೆಯಲ್ಲಿ. ತಮ್ಮ ಅಳಲನ್ನು ತೋಡಿಕೊಂಡರು.

### ರಾಶಿಯವರ ವ್ಯಕ್ತಿತ್ವ ಮತ್ತು ಸಾಧನೆ:

ಡಾ.ಎಂ.ಶಿವರಾಂ ಹುಟ್ಟಿದ್ದು ನವೆಂಬರ್ ೧೦, ೧೯೦೫ ರಂದು. ಬೆಂಗಳೂರು ಅಠಾರಾ ಕಚೇರಿಯಲ್ಲಿ ಸೂಪರಿಂಟೆಂಡೆಂಟ್ ಕೆಲಸದಲ್ಲಿದ್ದ ತಂದೆ ರಾಮಸ್ವಾಮಯ್ಯ ಪೂರಾ ದೈವಭಕ್ತರು. ಯಾವಾಗಲೂ ಪೂಜೆ ಪುನಸ್ಕಾರ, ಮನೆಗೆ ಬಂದ ಸಾಧುಗಳಿಗೆ ಮಠದವರಿಗೆ ಪಾದಪೂಜೆ ಇತ್ಯಾದಿ ಮಾಡುತ್ತ ಹಣ ವೆಚ್ಚ ಮಾಡುತ್ತಿದ್ದುದರಿಂದ ಮನೆಯ ಖರ್ಚಿಗೆ ಹೆಚ್ಚು ಹಣ ಒದಗುತ್ತಿರಲಿಲ್ಲ...ರಾಶಿಯವರಿಗೆ ಈ ಸನ್ನಿವೇಶದಲ್ಲಿ

ಅತಿಯಾದ ದೈವಶ್ರದ್ಧೆ ಹಿಡಿಸುತ್ತಿರಲಿಲ್ಲ. ಮುಂದೆ ಅವರ ಜೀವನದಲ್ಲಿ ದೇವಸ್ಥಾನಗಳಿಗೆ ಹೋಗುವುದಾಗಲಿ, ಮನೆಯಲ್ಲಿ ದೇವರ ಪೂಜೆ ಮಾಡುವುದಾಗಲಿ ಮಕ್ಕಳು ನೋಡಿಯೇ ಇರಲಿಲ್ಲ. 'ಸಮಾಜಕ್ಕೆ ಒಳಿತನ್ನು ಮಾಡುವುದು, ಸದ್ಗೃಹಸ್ಥನಾಗಿ ನಗುನಗುತ್ತ ಬಾಳುವುದೇ ಅವರ ಧ್ಯೇಯವಾಗಿತ್ತು. ತಂದೆಯ ಮನೆಯಲ್ಲಿ ಆರು ಜನ ಗಂಡುಮಕ್ಕಳು (ರಾಶಿ ಅವರ ಹಿರಿಯ ಮಗ), ಇಬ್ಬರು ಹೆಣ್ಣುಮಕ್ಕಳು ಮತ್ತು ಹತ್ತಿರದ ಬಳಗದವರು ಇರುತ್ತಿದ್ದ ಸಂಸಾರದಲ್ಲಿ ಶಿವರಾಂ ಅವರ ತಾಯಿ ಹೆಣಗಿ ನಲುವತ್ತು ವರ್ಷಕ್ಕೇ ತೀರಿಕೊಂಡರು. ಒಂದು ದಿನ ತಂದೆ ಸನ್ಯಾಸ ಸ್ವೀಕರಿಸಿ ನಂಜನಗೂಡಿಗೆ ಹೊರಟೇಬಿಟ್ಟರು. ಸಂಸಾರದ ಜವಾಬುದಾರಿ ಮೊದಲ ಮಗನ ಮೇಲೆ ಬಿದ್ದಿತು.

೧೯೨೫ರಲ್ಲಿ ಬಿ.ಎ.ಮುಗಿಸಿದ ನಂತರದಲ್ಲಿ ಹಾಸನದ ವಕೀಲ್ ಬೆಳವಾಡಿ ಸೂರ್ಯನಾರಾಯಣರಾಯರ ಮಗಳು ನಾಗಮ್ಮ ಅವರನ್ನು ವಿವಾಹವಾದರು. ಬಿ.ಎ. ಮುಗಿದಮೇಲೆ ಬಿ.ಎಂಶ್ರೀ.ಯವರು ಅವರನ್ನು ವೈದ್ಯರಾಗಲು ಸಲಹೆ ಮಾಡಿದರಂತೆ. ಮನೆಯಲ್ಲಿ ಹಣದ ಮುಗ್ಗಟ್ಟು ಇದ್ದದ್ದರಿಂದ ಆಗ್ಗೆ ಭವನಾನಿಯವರು ಚಿತ್ರಿಸುತ್ತಿದ್ದ ವಸಂತಸೇನಾ ಚಿತ್ರದಲ್ಲಿ ಪಾತ್ರವಹಿಸಿ ಸಂಸಾರವನ್ನು ತೂಗಿಸಲು ನಿರ್ಧರಿಸಿದರಂತೆ. ಆ ಚಿತ್ರದಲ್ಲಿ ವಿದೂಷಕನ ಪಾತ್ರಧಾರಿಯಾಗಿದ್ದ ಕೈಲಾಸಂ, ಭವನಾನಿಯವರಿಗೆ ಈ ಹುಡುಗನನ್ನು ಈ ಪರಿಸರದಲ್ಲಿ ಸೇರಿಸಬೇಡ, ಬಂದರೆ ಓಡಿಸು ಎಂದು ಹೇಳಿದರಂತೆ. ಹಾಗೆಯೇ, ಶಿವರಾಂರನ್ನು ಕರೆದು 'ಓದು ಮುಗಿಸಿ ಡಾಕ್ಟರಾಗು; ಓದು ಬಿಟ್ಟು ಹಾಳಾಗಬೇಡ' ಎಂದು ಬುದ್ಧಿವಾದ ಹೇಳಿದರೆಂದು ಅವರ ಮಕ್ಕಳು ಬರೆದಿದ್ದಾರೆ.

ಶಿವರಾಂಗೆ ಮೊದಲಿನಿಂದ ಓದುವ ಹುಚ್ಚು. ಮನೆಯಲ್ಲಿ ಸಹಸ್ರಾರು ಪುಸ್ತಕಗಳ ಭಂಡಾರವನ್ನು ನಿರ್ಮಿಸಿಕೊಂಡಿದ್ದರು. ಮುಂದೆ ವೈದ್ಯರಾದ ಮೇಲೆ ಬಿಡುವಿಲ್ಲದೆ ಕೆಲಸ ಮಾಡಿದರು. ಬೆಳಗ್ಗೆ ಮನೆಯ ವರಾಂಡಾದಲ್ಲಿ ರೋಗಿಗಳು ಕಾದಿರುತ್ತಿದ್ದರು. ಅವರನ್ನೆಲ್ಲ ನೋಡಿ ಡ್ರಾಯಿಂಗ್ ರೂಮಿಗೆ ಬಂದರೆ ಮಿತ್ರರ ಬೆಳಗಿನ ಗೋಷ್ಠಿ. ಮಿತ್ರರೊಂದಿಗೆ ಉಪಾಹಾರ ಮುಗಿಸಿ ಬಳೇಪೇಟೆಯಲ್ಲಿದ್ದ ತಮ್ಮ ಸಿಟಿ ಡಿಸ್ಪೆನ್ಸರಿ ದವಾಖಾನೆಗೆ ತೆರಳುತ್ತಿದ್ದರು. ಮಧ್ಯಾಹ್ನ ಮನೆಗೆ ಬಂದು ಊಟ ಮಾಡಿ ವಿಶ್ರಮಿಸಿ ನಾಲ್ಕು ಗಂಟೆಗೆ ಸೆಂಚುರಿ ಕ್ಲಬ್ ನಲ್ಲಿ ಟೆನಿಸ್, ಮಿತ್ರಗೋಷ್ಠಿಯ ನಂತರ ದವಾಖಾನೆ. ತಂದೆಯ ಶಿಸ್ತಿನ ಸ್ವಭಾವ ತಿಳಿದಿದ್ದ ಮಕ್ಕಳು ಅವರೊಂದಿಗೆ ಭಯ ಸಂಕೋಚಗಳಿಂದ ವರ್ತಿಸುತ್ತಿದ್ದರು. ಚೊಕ್ಕವಾದ ಪೋಷಾಕು, ಬೋ ಟೈ ಧರಿಸಿದ ತಂದೆಯನ್ನು ನೋಡಲು ಬೆಳಗ್ಗೆ ಮಾತ್ರವೇ ಸಾಧುವಾದ ಸಮಯ ಎಂದು ಮಕ್ಕಳಿಗೆ ತಿಳಿದಿತ್ತು. ಅವರ ಸಾಹಿತಿಮಿತ್ರರ ಬಳಗ ಹಿರಿದು. ಶಿವರಾಮ ಕಾರಂತ, ಶ್ರೀರಂಗ, ಜಿ.ಪಿ ರಾಜರತ್ನಂ, ಡಿ.ವಿ.ಜಿ, ಬೇಂದ್ರೆ, ವೀಸೀ, ಬಿ. ಪುಟ್ಟಸ್ವಾಮಯ್ಯಮುಂತಾದವರು ಮನೆಗೆ ಬರುತ್ತಿದ್ದರು.

'ಇದೇನಪ್ಪ, ಎಲ್ಲ ಗೋಣೀಚೀಲ'
'ಒಗ್ಗ್ಬಿ ಇಸ್ತ್ರಿ ಮಾಡಿ ಮಡಿ ಮಾಡ್ಕೊಂಡು ಬಂದಿದೀನಿ ತಾಯಿ ....ನಾನೇ ನೀವ್ಹೇಳಿದ್ರಲ್ಲ, ಹೊಸ ಆಗಸ'



ಇವರಿಗೆಲ್ಲ ಫಲಾಹಾರ ಒದಗಿಸುವುದೂ ಅವರಿಗೆ ಪ್ರಿಯವಾದ ಕೆಲಸ. ಊಟ ತಿಂಡಿಗಳಲ್ಲಿ ಅವರಿಗೆ ಬಹು ಪ್ರೀತಿ ಎಂದು ಮಗಳು ವಿಮಲಾ ಶೇಷಾದ್ರಿ ಬರೆದಿದ್ದಾರೆ.

ಅವರ ಮಿತ್ರಬಳಗದಲ್ಲಿ ವೈದ್ಯಮಿತ್ರರ ಗುಂಪೇ ಬೇರೆ, ಸಾಹಿತಿಗಳದ್ದೇ ಬೇರೆ, ಕೈಗಾರಿಕೋದ್ಯಮಿಗಳದ್ದೇ ಇನ್ನೊಂದು ಕೂಟ. ಎಲ್ಲರನ್ನೂ ರಾಶಿಯ ಕಡೆಗೆ ಆಕರ್ಷಿಸುತ್ತಿದ್ದ ಮುಖ್ಯ ಗುಣಗಳೆಂದರೆ ಅವರ ಹಾಸ್ಯ ಮನೋವೃತ್ತಿ, ವಿಚಾರಪೂರಿತ ಸಂಭಾಷಣೆ ಮತ್ತು ನಿಷ್ಕಪಟ ಸ್ನೇಹ. ಕೆಲವರನ್ನು ಅವರು ಆಪ್ತಮಿತ್ರರೆಂದು ಗಣಿಸಿದ್ದರು. ಈ ಗುಂಪಿನಲ್ಲಿ ಬಿ.ಆರ್.ನಾರಾಯಣಯ್ಯಂಗಾರ್, ಡಿ ಎಸ್. ಲಕ್ಷ್ಮಣರಾವ್ ಜಾರ್ಜ್ ಚಾಂಡಿ, ಎಂ.ಎಸ್.ಪಾರ್ಥಸಾರಥಿ, ಪೂರ್ಣೇಂದು ಮೋಹನ್ ಲಹಿರಿ ಮುಂತಾದವರಿದ್ದರು.

ರಾಶಿಯವರಿಗೆ ಕರ್ನಾಟಕ ರಾಜ್ಯ ಪ್ರಶಸ್ತಿ ಮತ್ತು ರಾಜ್ಯೋತ್ಸವ ಪ್ರಶಸ್ತಿಗಳು ದೊರಕಿದ್ದವು. ೧೯೬೦ರಲ್ಲಿ ಭಾರತೀಯ ವೈದ್ಯರ ತಂಡವೊಂದು ಐರೋಪ್ಯ ರಾಷ್ಟ್ರಗಳಲ್ಲಿ ವೈದ್ಯಕೀಯ ಪ್ರಗತಿಯ ಅಧ್ಯಯನ ನಡೆಸಲು ಅವಕಾಶವಾಗುವಂತೆ ಪ್ರವಾಸೀ ಸಂಸ್ಥೆಯೊಂದು ಕರೆ ನೀಡಿತು. ರಾಶಿಯವರು ತಂಡದೊಂದಿಗೆ ಪ್ರವಾಸ ಮಾಡಿ ರಷ್ಯ, ಸ್ವೀಡನ್, ಜರ್ಮನಿ,ಆಸ್ಟ್ರಿಯ ,ಫ್ರಾನ್ಸ್, ಇಟಲಿ ಸುತ್ತಿಬಂದು 'ಕೊರವಂಜಿಯ ಪಡುವಣ ಯಾತ್ರೆ' ಎಂಬ ಹಾಸ್ಯಭರಿತ ಪುಸ್ತಕ ಬರೆದರು. ಒಟ್ಟು ಅವರು ಮಾಡಿದ ಕೃತಿರಚನೆಗಳ ಸಂಖ್ಯೆ ೪೦. ನಗೆ ಸಾಹಿತ್ಯ, ದೈಹಿಕ, ಮಾನಸಿಕ ಆರೋಗ್ಯ ಸಾಹಿತ್ಯ, ವಿಚಾರ ಸಾಹಿತ್ಯ, ವ್ಯಕ್ತಿಚಿತ್ರಗಳು, ಕಾದಂಬರಿ ಕಥಾಸಂಕಲನಗಳು ಮತ್ತು ಅಧ್ಯಾತ್ಮ ವಿಚಾರ ಈ ಕೃತಿಸಮೂಹದ ವಸ್ತುಗಳು.

ಅವರಿಗೆ ಬಾಳಿನಲ್ಲಿ ವಿಶೇಷ ಗೌರವವಿತ್ತು. ತಾವು ಜೀವಿತದಲ್ಲಿ ಗಳಿಸಬಹುದಾದ ಜ್ಞಾನ ಯಶಸ್ಸು ಇವುಗಳ ಅರಿವು, ತಮಗೆ ಕ್ರಮಿಸಲು ಸಾಧ್ಯವಾಗದ ಹಾದಿಗಳ ಬಗ್ಗೆಯೂ ಸ್ಫುಟವಾದ ತಿಳುವಳಿಕೆ ಇದ್ದದ್ದು ಅವರ ಹೆಚ್ಚುಗಾರಿಕೆ. ತಮ್ಮ ಎದುರಿಗೆ ಬಂದ ಸಮಸ್ಯೆಗಳನ್ನು ಬೇರೆಬೇರೆಯಾಗಿ ಪರೀಕ್ಷಿಸಿ ಚಿಂತಿಸಿ ಸಮರ್ಪಕ ನಿರ್ಧಾರ ಕೈಗೊಳುತ್ತಿದ್ದರು . ದೊಡ್ಡ ಕುಟುಂಬ,ಮನೆಯ ಮದುವೆ ಸಮಾರಂಭಗಳು, ಮಕ್ಕಳೆಲ್ಲರ ವಿದ್ಯಾಭ್ಯಾಸ ಹೀಗೆ ಅನೇಕ ಹೊಣೆಗಳ ಜತೆಗೆ ತಿಂಗಳು ತಿಂಗಳಿಗೆ ಕರಾರುವಾಕ್ಕಾಗಿ ಕೊರವಂಜಿ ಪತ್ರಿಕೆಯನ್ನು ಹೊರಡಿಸುವ ಕೆಲಸ. ಇವನ್ನೆಲ್ಲ ನಿಭಾಯಿಸಿಕೊಂಡು ಐದಾರು ವರ್ಷಗಳ ಕಾಲ ಸತತವಾಗಿ ದುಡಿದು ತಮ್ಮ ಕನಸಿನ ಕೂಸು ಬೆಂಗಳೂರು ಮೆಡಿಕಲ್ ಕಾಲೇಜನ್ನು ಯೋಜಿಸಿ ಕಾರ್ಯರೂಪಕ್ಕೆ ತಂದ ಹೆಗ್ಗಳಿಕೆ ಅವರದು.

## ಬೆಂಗಳೂರು ಮೆಡಿಕಲ್ ಕಾಲೇಜು

ರಾಶಿಯವರು ಓದುತ್ತಿದ್ದಾಗ ಬೆಂಗಳೂರಿನಲ್ಲಿದ್ದ ಮೆಡಿಕಲ್ ಕಾಲೇಜು ಅವರ ಓದಿನ ನಂತರ ಮೈಸೂರಿಗೆ ಸ್ಥಳಾಂತರಿತವಾಯಿತು. ಬೆಂಗಳೂರಿನಲ್ಲಿ ವಿಕ್ಟೋರಿಯ, ವಾಣೀವಿಲಾಸ, ಮಿಂಟೋನಂಥ ದೊಡ್ಡ ಆಸ್ಪತ್ರೆಗಳಿದ್ದರೂ ವೈದ್ಯ ವಿಜ್ಞಾನದ ಕಲಿಕೆಗೆ ಅವುಗಳನ್ನು ಬಳಸದೆ ಇರುವುದು ಒಂದು ಕೊರತೆ ಎಂದು ಆಗಾಗ ಅವರು ಹೇಳುತ್ತಿದ್ದರು. ಈ ಕೊರತೆಯನ್ನು ನೀಗಲು ರಾಶಿಯವರೇ ಮುಂದಾಳತ್ವ ವಹಿಸಿ ಮೈಸೂರು ಎಡ್ಯುಕೇಷನಲ್ ಸೊಸೈಟಿ ಎಂಬ ಸಂಸ್ಥೆಯನ್ನು ೧೯೫೪ರಲ್ಲಿ ಸ್ಥಾಪಿಸಿ ಸರಕಾರದ ಒಪ್ಪಿಗೆಯನ್ನು ಪಡೆದರು. ಬೆಂಗಳೂರಿನ ಹಿರಿಯ ವೈದ್ಯರುಗಳಾಗಿದ್ದ ಡಾ.ಟಿ.ಶೇಷಾಚಲಂ, ಡಾ.ಸಿಂಗಾರವೇಲು ಮುದಲಿಯಾರ್, ಡಾ. ಷಫಿ ಮೇಕ್ರಿ, ಡಾ.ಬಿ.ವಿ.ರಾಮಸ್ವಾಮಿ, ಡಾ.ಸಿರ್ಸಿ, ಇವರಲ್ಲದೆ ತಾತಾ ವಿಜ್ಞಾನಮಂದಿರದ ಡಾ. ಎಂ.ಎಸ್.ಥ್ಯಾಕರ್ ಇವರು ಸ್ಥಾಪಕ ಸದಸ್ಯರಾದರು. ರಾಶಿಯವರ ವಿದ್ಯಾಗುರುಗಳಾಗಿದ್ದ ಡಾ. ಬಿ.ಕೆ.ನಾರಾಯಣರಾಯರು ಸಮಿತಿಯ ಅಧ್ಯಕ್ಷರಾದರು. ರಾಶಿ ಸಂಸ್ಥೆಯ ಗೌರವ ಕಾರ್ಯದರ್ಶಿಯಾದರು. ಕೇವಲ ಹನ್ನೆರಡು ತಿಂಗಳಲ್ಲಿ ಕಾಲೇಜು ಅಸ್ತಿತ್ವಕ್ಕೆ ಬಂತು.

೧೯೫೫ ಜೂನ್ ತಿಂಗಳಿಂದ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವ ಕೆಲಸ ಆರಂಭ-ವಾಯಿತು. ಎಲ್ಲ ಕೆಲಸಕಾರ್ಯಗಳೂ ನಡೆದದ್ದು ರಾಶಿಯವರ ಮನೆಯಲ್ಲಿ. ಅಭ್ಯರ್ಥಿಗಳ ಪಟ್ಟಿಯನ್ನು ಮನೆಯ ಹೆಣ್ಣುಮಕ್ಕಳು ತಯಾರಿಸಿದರು. ಮನೆಯ ಡ್ರಾಯಿಂಗ್ ರೂಮಿನಲ್ಲಿ ಕಾರ್ಯಕಾರಿ ಸಮಿತಿಯ ಸಭೆ...ಬಂದು ಹೋಗುವವರಂತೂ ಲೆಕ್ಕವಿಲ್ಲದಷ್ಟು ಮಂದಿ. ಡಾ. ಬಿ.ಕೆ.ನಾರಾಯಣರಾಯರು ರಾಶಿಯವರ ಪತ್ನಿ ನಾಗಮ್ಮನವರನ್ನು ಕುರಿತು 'ನೋಡಮ್ಮ ನಿನ್ನ ಗಂಡ ಸಂಪಾದನೆ ಎಲ್ಲ ಮರೆತು ಕಾಲೇಜು ಸ್ಥಾಪನೆಗೆ ಒದ್ದಾಡುತ್ತಿದಾನೆ...ನಿಜವಾದ ಹುಚ್ಚು' ಎಂದು ಅಭಿಮಾನದಿಂದ ಹೇಳಿದ್ದರಂತೆ! ಕಾಲೇಜು ಆರಂಭವಾದ ಎರಡು ವರ್ಷಗಳಲ್ಲಿ ಕಾಲೇಜ್ ಡಾನ್ ಎಂಬ ಸಮಾರಂಭ ಇಟ್ಟುಕೊಂಡು ರಾಶಿ ಕಾಲೇಜನ್ನು ಸರಕಾರಕ್ಕೆ ಒಪ್ಪಿಸಿದರು.

ಕಡೆಯ ಮಾತು

ಕೊರವಂಜಿಯ ಕತೆ ಮೇಲೆ ಬರೆದಿದ್ದಾಗಿದೆ. ಅದಂತೂ ರಾಶಿಯವರು ಕನ್ನಡ ಸಾಹಿತ್ಯಕ್ಕಿತ್ತ ಅದ್ಭುತವಾದ ಕೊಡುಗೆ. ಸಾರ್ವಜನಿಕ ಕ್ಷೇತ್ರದಲ್ಲಿ ಅವರು ಮೆಡಿಕಲ್ ಕಾಲೇಜಿನ ನಿರ್ಮಾಣದ ಕನಸು ಕಂಡು ಅದು ಅಸ್ತಿತ್ವಕ್ಕೆ ಬಂದುದನ್ನೂ 'ಕಣ್ಣಾರೆ ನೋಡಿ ಕೃತಾರ್ಥರಾದರು

ನಗೆಸಾಹಿತ್ಯ, ವಿಚಾರಸಾಹಿತ್ಯ ಇವುಗಳಲ್ಲಿ ರಚನೆ ಮಾಡಿದ್ದಲ್ಲದೆ ರಾಶಿ ತಮ್ಮ ಮನೋವೈಜ್ಞಾನಿಕ ಗ್ರಂಥಗಳನ್ನು ರಚಿಸಿ ಪ್ರಖ್ಯಾತರಾದರು. ಅವರ ''ಮನಮಂಥನ' ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆಯಿತು. ಜಗತ್ತಿನ ಸೃಷ್ಟಿಜೀವಿಗಳ ಉಗಮ, ಮಾನವನ ವಿಕಾಸದ ಹಾದಿಯಲ್ಲಿ ಮೈಗೂಡಿದ ಪ್ರಾಚೀನ ನೆನಪುಗಳು-ಇವೆಲ್ಲದರ ಬಗ್ಗೆ ಅವರಿಗೆ ವಿಶೇಷ ಆಸಕ್ತಿ ಇತ್ತು. ಫ್ರೆಡ್ ಹಾಯ್ಲ್, ಜೇಮ್ಸ್ ಜೀನ್ಸ್, ಜಾರ್ಜ್ ಗಾಮೊ, ರಾಬರ್ಟ್ ಆರ್ಡ್ರೆ, ಆಲ್ಡಾಸ್ ಹಕ್ಸ್ಲೀರಂಥ ವಿದ್ವಾಂಸರ ಗ್ರಂಥಗಳು ಅವರ ಅಧ್ಯಯನ ಸಾಮಗ್ರಿಗಳಾಗಿದ್ದವು. ಹೊಸ ವೈಜ್ಞಾನಿಕ ಸಾಧನೆಗಳನ್ನು ನಮ್ಮ ಸನಾತನ ಗ್ರಂಥಗಳೊಂದಿಗೆ ತಾಳೆಹಾಕಿ ಅವುಗಳ ಸಾಮ್ಯ ಹುಡುಕಿ ತೋರಿಸುತ್ತಿದ್ದರು. ಇಂಥ ಆಳವಾದ ಚಿಂತನೆ ನಡೆಸಿ ಬರೆದ ವಿಚಾರ ಸಾಹಿತ್ಯ ಪುಸ್ತಕಗಳೆಂದರೆ 'ಮನನ' ಹಾಗೂ 'ಮೃಗಶಿರ'

ಎಲ್ಲಕ್ಕಿಂತ ಮೇಲಾಗಿ ಅವರಲ್ಲಿ ಕಾಣುವುದು ಅವರ ಮಾನವೀಯತೆ. ತಮ್ಮನ್ನು ಕಾಣಬರುವ ರೋಗಿಗಳ ವಿಷಯದಲ್ಲಿ ಅತೀವ ಅನುಕಂಪ. ವೈದ್ಯವಿಜ್ಞಾನದಲ್ಲಿ ಅದಮ್ಯ ಕುತೂಹಲ ಇದ್ದಂತೆ ಅನುಕಂಪ ಭರಿತ ಚಿಕಿತ್ಸೆ ನೀಡುತ್ತ ಅವರು ಉದ್ಯೋಗದಲ್ಲಿ ಇತರರಿಗೊಂದು ಮಾದರಿಯಾಗಿ ಬದುಕಿದರು. ಸಾಹಿತ್ಯ ಕ್ಷೇತ್ರದಲ್ಲಿ ನಗೆ ಸಾಮ್ರಾಟರಾಗಿ ಅಜರಾಮರರಾದರು.

ಗ್ರಂಥಋಣ:

ಈ ಲೇಖನದಲ್ಲಿ ನಾನು ಡಾ.ಶಿವರಾಂ ಅವರ ಪುತ್ರ ಶ್ರೀ ಶಿವಕುಮಾರ್ ಅವರೊಡನೆ ಮುಖತಃ ನಡೆಸಿದ ಸಂಭಾಷಣೆಯನ್ನು ಹೇರಳವಾಗಿ ಆಧರಿಸಿದ್ದೇನೆ.

೧. ಎಂ.ಶಿವಕುಮಾರ್. 'ಡಾ.ಎಂ.ಶಿವರಾಂ'. ಕನ್ನಡ ಸಾಹಿತ್ಯ ಪರಿಷತ್ತು. ೧೯೯೨

೨. ವಿವಿಧ ಲೇಖಕರು. 'ರಾಶಿರಾಶಿ ನೆನಪು'. ಸಂ. ಎಂ.ಶಿವಕುಮಾರ್. ಕೊರವಂಜಿ ಅಪರಂಜಿ ಟ್ರಸ್ಟ್. ೨೦೦೫

೩. ವಿಮಲ ಶೇಷಾದ್ರಿ.'ರಾ.ಶಿ'. ಪ್ರಕಾಶಕರು–ವಿಮಲ ಶೇಷಾದ್ರಿ. ೧೯೮೪

**ವಿ.ಸೂ: ಈ ಲೇಖನದಲ್ಲಿ ಬಳಸಿರುವ ಚಿತ್ರಗಳು ಅಂತರರಾಷ್ಟ್ರೀಯ ಖ್ಯಾತಿಯ ಕಲಾವಿದ ಶ್ರೀ ಆರ್. ಕೆ. ಲಕ್ಷ್ಮಣ್ ಅವರದು. ಕೃಪೆ: ಕೊರವಂಜಿ ಪತ್ರಿಕೆಯಿಂದ. ಸಹಾಯ: ಶ್ರೀ ಅಪರಂಜಿ ಶಿವು**



# ಕನ್ನಡ ಸರಸತಿಯ ನಗೆ ಕಸ್ತೂರಿ

ಕೆ. ತ್ರಿವೇಣಿ ಶ್ರೀನಿವಾಸರಾವ್

## ಪ್ರಸ್ತಾವನೆ

'ನಿಮಗೆ ನಾರಾಯಣ ಕಸ್ತೂರಿ ರಂಗನಾಥ ಶರ್ಮ ಗೊತ್ತೇ?'ಎಂದರೆ ಅರೆಕ್ಷಣ ಯಾರಿಗೂ ತಿಳಿಯದಿರಬಹುದು. ಆದರೆ 'ನಾ. ಕಸ್ತೂರಿ' ಎನ್ನಿ. ತಕ್ಷಣ ಗಲಿಬಿಲಿಗೊಂಡ ಮುಖದಲ್ಲಿ ಚಿರಪರಿಚಿತ ಭಾವವೊಂದು ಇಣುಕುತ್ತದೆ. ತಿಳಿಹಾಸ್ಯದ ಹೊಳೆ ಹರಿಸಿದ ಕಸ್ತೂರಿಯವರ ಸವಿನೆನಪಿನಿಂದ ಕೇಳುಗರ ಮುಖಾರವಿಂದ ಅರಳುತ್ತದೆ. ನಾ. ಕಸ್ತೂರಿಯುವರು ಕನ್ನಡದ ಹಾಸ್ಯ ಬರಹಗಾರರಲ್ಲಿ ಅಗ್ರಪಂಕ್ತಿಯುಲ್ಲಿ ನಿಲ್ಲಬಲ್ಲಂತಹವರು. ಗಂಭೀರ ಬರವಣಿಗೆಯೇ ಪ್ರಧಾನವಾಗಿದ್ದ ಕನ್ನಡ ಸಾಹಿತ್ಯಲೋಕದಲ್ಲಿ ಹಾಸ್ಯಕ್ಕೂ ಒಂದು ಪ್ರಮುಖ ಸ್ಥಾನವನ್ನು ಕಲ್ಪಿಸಿಕೊಟ್ಟವರು. ಬಿಗುಮುಖದ ಕನ್ನಡಿಗರಿಗೆ ನಗು ಕಲಿಸಿದವರು ಕಸ್ತೂರಿ. ಕಸ್ತೂರಿಯುವರು ಕನ್ನಡಿಗರಲ್ಲದಿದ್ದರೂ, ಕನ್ನಡನಾಡಿನ ಭಾಗ್ಯವೆಂಬಂತೆ ಕರ್ನಾಟಕಕ್ಕೆ ಬಂದರು, ಕನ್ನಡ ಕಲಿತರು, ಕನ್ನಡದಲ್ಲಿ ಬರೆದರು. ತಮ್ಮ ನವಿರು ಹಾಸ್ಯದಿಂದ ಕನ್ನಡ ಸಾಹಿತ್ಯ ಶಾರದೆಯ ಮುಡಿಗೆ ನಗೆಮಲ್ಲಿಗೆ ದಂಡೆಯೇರಿಸಿದರು.

## ಕಸ್ತೂರಿಯುವರ ಬದುಕಿನ ಕೆಲವು ವಿವರಗಳು

ನಾ. ಕಸ್ತೂರಿ ಎಂದು ಖ್ಯಾತರಾದ ನಾರಾಯಣ ಕಸ್ತೂರಿ ರಂಗನಾಥ ಶರ್ಮ ಕೇರಳದ ತಿರುಪುನಿತ್ತೂರ್ ಗ್ರಾಮದಲ್ಲಿ ಜನಿಸಿದರು. ಜನ್ಮದಿನ ೧೮೯೭ ಡಿಸೆಂಬರ್

೨೫. ತಂದೆ ನಾರಾಯಣ ವಕೀಲರೊಬ್ಬರ ಬಳಿ ಕಾರಕೂನರಾಗಿದ್ದರು. ಕಸ್ತೂರಿ ೬ ವರ್ಷದ ಬಾಲಕನಾಗಿದ್ದಾಗ ಮೈಲಿ ಬೇನೆಯಿಂದಾಗಿ ತಂದೆ ತೀರಿಕೊಂಡರು. ಕಸ್ತೂರಿ, ತಮ್ಮ ಅಜ್ಜನ (ತಾಯಿಯವರ ತಂದೆಯ) ಆಶ್ರಯದಲ್ಲಿ ಬೆಳೆಯಬೇಕಾಯಿತು.

ತಮ್ಮ ಪ್ರತಿಭೆ ಹಾಗೂ ಪರಿಶ್ರಮದ ಫಲದಿಂದ ಕಸ್ತೂರಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ರಾಜ್ಯಕ್ಕೆ ೫ನೆಯ ಸ್ಥಾನ ಪಡೆದರು. ಮುಂದಿನ ಎರಡು ವರ್ಷ ವಿದ್ಯಾರ್ಥಿ ವೇತನದ ಸಹಾಯದಿಂದ ಎರ್ನಾಕುಲಮ್ ಮಹಾರಾಜಾ ಕಾಲೇಜಿನಲ್ಲಿ ಇಂಟರ್‌ಮೀಡಿಯೇಟ್ ಓದಿದರು (೧೯೧೪-೧೬). ರಾಜ್ಯಕ್ಕೆ ೨ನೆಯ ಸ್ಥಾನ ಪಡೆದ ಕಸ್ತೂರಿ ತಿರುವನಂತಪುರದ ಮಹಾರಾಜಾ ಕಾಲೇಜಿನಲ್ಲಿ ಬಿ.ಎ.(ಆನರ್ಸ್) ಪದವಿ ಪಡೆದರು.

ಕಸ್ತೂರಿ ೧೪ ವರ್ಷದವರಿದ್ದಾಗಲೆ ಅವರ ವಿವಾಹ ೯ವರ್ಷದ ಹುಡುಗಿ-ಯೊಂದಿಗೆ ಜರುಗಿತು. ಕಸ್ತೂರಿಯವರ ತಂದೆಯ ಸೋದರಿ ಪತಿಗೃಹದಿಂದ ಪರಿತ್ಯಕ್ತಳಾಗಿ, ತನ್ನ ಇಬ್ಬರು ಮಕ್ಕಳೊಂದಿಗೆ ತಂದೆಯ ಆಶ್ರಯ ಪಡೆದಿದ್ದಳು. ಅವಳ ಮಗಳನ್ನೇ ಕಸ್ತೂರಿಯವರು ವಿವಾಹವಾಗಿದ್ದರು.

ತಿರುವನಂತಪುರದಲ್ಲಿ ಪ್ರೌಢಶಾಲೆಯ ಅಧ್ಯಾಪಕನ ನೌಕರಿ ಹಿಡಿದು ದೊಡ್ಡ ಸಂಸಾರವನ್ನು ಸಾಕುವ ಭಾರ ಹೊತ್ತರು ಕಸ್ತೂರಿ. ಸಂಜೆ ಕಾಲೇಜಿನಲ್ಲಿ ಕಾನೂನುಶಾಸ್ತ್ರದ ವ್ಯಾಸಂಗ ಮಾಡುತ್ತಿದ್ದರು. ಅದೇ ಸಮಯದಲ್ಲಿ ದಾಮೋದರನ್ ಪೊಟ್ಟಿ ಎನ್ನುವವರು ನಡೆಸುತ್ತಿದ್ದ 'ಪೀಪಲ್ಸ್ ಫ್ರೆಂಡ್' ಎನ್ನುವ ಮಾಸಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದರು. ತಮ್ಮ ಹೈಸ್ಕೂಲು ಹಾಗೂ ಕಾನೂನು ಕಾಲೇಜುಗಳಲ್ಲಿ ನಾಟಕಗಳನ್ನು ಬರೆದು ಆಡಿದರು ಹಾಗೂ ಆಡಿಸಿದರು. ನಾಟಕದಿಂದ ಕೂಡಿದ ನಿಧಿಯನ್ನು ಬಡ ವಿದ್ಯಾರ್ಥಿಗಳ ನೆರವಿಗಾಗಿ ನೀಡುತ್ತಿದ್ದರು.

## ಕನ್ನಡನಾಡಿಗೆ ಕಸ್ತೂರಿ ನಂಟು

ಕರ್ನಾಟಕದೊಡನೆ ಕಸ್ತೂರಿಯವರ ನಂಟು ಮೈಸೂರಿನ ಡಿ.ಬಿ.ಸಿ. ಹೈಸ್ಕೂಲಿನಿಂದ ಪ್ರಾರಂಭವಾಯಿತು. ಅಲ್ಲಿ ಅಧ್ಯಾಪಕರಾಗಿ ನೌಕರಿ ಪಡೆದ ಕಸ್ತೂರಿಯವರು ಬಳಿಕ ಡಿ. ಬನುಮಯ್ಯ ಕಾಲೇಜಿನಲ್ಲಿ ಉಪನ್ಯಾಸಕರಾದರು. ಚರಿತ್ರೆ, ಇಂಗ್ಲಿಷ್ ಹಾಗು ಅರ್ಥಶಾಸ್ತ್ರ ಬೋಧಿಸುವುದರ ಜೊತೆಗೆ ಕಾಲೇಜು ಪತ್ರಿಕೆಯನ್ನೂ ನಡೆಸುತ್ತಿದ್ದರು. ವಿದ್ಯಾರ್ಥಿ ಪಾರ್ಲಿಮೆಂಟ್ ರಚಿಸಿದರು. ಈ ಸಮಯದಲ್ಲಿ ಅನೇಕ ನಾಟಕಗಳನ್ನು ಆಡಿಸಿದರು. ಸ್ವತಃ ತಾವೂ ನಟಿಸಿದರು. ಕಸ್ತೂರಿಯವರ ಮೊದಲ ಮಗ ಮೈಸೂರಿನಲ್ಲಿ ೧೯೨೩ರಲ್ಲಿ ಜನಿಸಿದರು.

ಮೈಸೂರಿನಲ್ಲಿ ರಾಮಕೃಷ್ಣ ಆಶ್ರಮ ಸ್ಥಾಪಿಸಿದ ಸ್ವಾಮಿ ಸಿದ್ಧೇಶ್ವರಾನಂದರು ಕಸ್ತೂರಿಯವರ ಸಹಪಾಠಿಗಳು. ರಾಮಕೃಷ್ಣಾಶ್ರಮದ ಸ್ಥಾಪನೆಗಾಗಿ ಸ್ವಾಮೀಜಿ ಅವರೊಂದಿಗೆ ಕಸ್ತೂರಿಯವರೂ ಹಗಲಿರುಳು ಶ್ರಮಿಸಿದರು. ರೋವರ್ ಲೀಡರ್ ತರಬೇತಿ ಪಡೆದು ವಿವೇಕಾನಂದ ರೋವರ್ಸ್ ದಳವನ್ನು ಸ್ಥಾಪಿಸಿದರು. ನಾಟಕಗಳನ್ನು ಆಡಿ ಆಶ್ರಮಕ್ಕಾಗಿ ನಿಧಿ ಕೂಡಿಸಿದರು. ಆಶ್ರಮದ ಗ್ಯಾರೇಜಿನಲ್ಲಿ ಕುಸ್ತಿಯ ಅಖಾಡ ಮಾಡಿ ಹಲವಾರು ಪೈಲ್ವಾನರನ್ನು ತಯಾರು ಮಾಡಿಸಿದರು. ಆಧ್ಯಾತ್ಮಿಕ ಶಿಬಿರಗಳನ್ನು, ಉಪನ್ಯಾಸಗಳನ್ನು ಏರ್ಪಡಿಸಿದರು.

ಕುವೆಂಪು ಅವರು ಸಿದ್ಧೇಶ್ವರಾನಂದರ ಆಶ್ರಮದಲ್ಲಿ ವಾಸ ಮಾಡಲು ಪ್ರಾರಂಭಿಸಿದಾಗ, ಕಸ್ತೂರಿಯವರಿಗೆ ಅವರ ಸಂಪರ್ಕ ಒದಗಿ ಬಂತು. ಕುವೆಂಪು ಅವರು ತಮ್ಮ ಕವನ, ನಾಟಕಗಳನ್ನು ಬರೆದ ನಂತರ ಗುರು ಸಿದ್ಧೇಶ್ವರಾನಂದರಿಗೂ ಮತ್ತು ಕಸ್ತೂರಿಯವರಿಗೂ ಓದಿ ಹೇಳುತ್ತಿದ್ದರು. ಆಗ ಕಸ್ತೂರಿಯವರಿಗೆ ಕನ್ನಡ ಅಷ್ಟಾಗಿ ಬರುತ್ತಿರಲಿಲ್ಲವಾದ್ದರಿಂದ ಕುವೆಂಪು ಅವರ ಕೃತಿಗಳನ್ನು ವಿಮರ್ಶಿಸಲು ಸಮರ್ಥರಾಗಿರಲಿಲ್ಲವಂತೆ. ಕುವೆಂಪು ಅವರು ಕಸ್ತೂರಿಯವರೊಂದಿಗೆ ಒಡನಾಡಿದ ನೆನಪುಗಳನ್ನು ತಮ್ಮ ಆತ್ಮಕಥನ 'ನೆನಪಿನ ದೋಣಿ'ಯಲ್ಲಿ ಹಂಚಿಕೊಂಡಿದ್ದಾರೆ.

ಆಶ್ರಮದ ಸಂಪರ್ಕವಲ್ಲದೆ ವಯಸ್ಕರ ಶಿಕ್ಷಣ ಪ್ರಸಾರ, ದಲಿತರಿಗಾಗಿ ಶಿಕ್ಷಣ, ಬಾಲಬೋಧೆ ಪಠ್ಯಗಳ ರಚನೆ, ಹಳ್ಳಿಗಳಲ್ಲಿ ಹರಿಕೀರ್ತನೆ ಹಾಗೂ ಸಂಗೀತ ನಾಟಕಗಳ ಮೂಲಕ ಜ್ಞಾನಪ್ರಸಾರವನ್ನು ಕೈಗೊಂಡರು. ಹರಿಕಥೆ, ಪ್ರಹಸನಗಳ ಮೂಲಕ ಮುಗ್ಧರ ಮೂಢನಂಬಿಕೆಯನ್ನು ಹೋಗಲಾಡಿಸಲು ಪ್ರಯತ್ನಿಸಿದರು. ತಾವೇ ಸ್ವತಃ ಹರಿದಾಸರ ವೇಷದಲ್ಲಿ ಸಾಮಾಜಿಕ ಕೀರ್ತನೆಗಳನ್ನು ರಚಿಸಿ ಹಾಡಿದರು. ಸಾಮೂಹಿಕ ಭಜನೆ ಹಾಗು ವಾಚನಾಲಯಗಳ ಸ್ಥಾಪನೆಗೆ ಪ್ರೇರಣೆ ನೀಡಿದರು. ದಿವಾನ್ ಮಿರ್ಜಾ ಅವರ ಕಾಲದಲ್ಲಿ ಮೈಸೂರಿನಲ್ಲಿ ನಡೆದ ಜನಗಣತಿಯ ಕಾರ್ಯದಲ್ಲಿ ಆದಿಕರ್ನಾಟಕ ಕಾಲೊನಿಯನ್ನು ಆರಿಸಿಕೊಂಡು ಅಲ್ಲಿ ತಮ್ಮ ಸಹೋದ್ಯೋಗಿಗಳ ಜೊತೆಗೆ ಕಾರ್ಯಕ್ರಮ ನಡೆಸಿದರು. ಎನ್.ಎಸ್.ಎಸ್ ಹಾಗೂ ವಯಸ್ಕರ ಶಿಕ್ಷಣಕ್ಕೆ ಭದ್ರ ಬುನಾದಿಯನ್ನು ಹಾಕಿಕೊಟ್ಟರು.

ಈ ಸಮಯದಲ್ಲಿ ಡಾ. ಎಂ.ವಿ. ಗೋಪಾಲಸ್ವಾಮಿಯವರ ಪ್ರಯತ್ನದ ಫಲವಾಗಿ ಮೈಸೂರು ಆಕಾಶವಾಣಿ ಪ್ರಾರಂಭವಾಯಿತು. 'ಆಕಾಶವಾಣಿ' ಎನ್ನುವ ಹೆಸರನ್ನು ಸೂಚಿಸಿದವರೂ ಕಸ್ತೂರಿಯವರೇ. ಪೂರ್ಣಾವಧಿಯ ಅಸಿಸ್ಟೆಂಟ್ ಡೈರೆಕ್ಟರ್ ಆಗಿ ಮೈಸೂರು ಆಕಾಶವಾಣಿಯಲ್ಲಿ ಕೆಲ ಕಾಲ ಸೇವೆ ಸಲ್ಲಿಸಿದ ಬಳಿಕ, ತಮ್ಮ ಮೂಲ ಹುದ್ದೆಗೆ ಮರಳಿದರು; ಆದರೆ ಶಿವಮೊಗ್ಗಕ್ಕೆ ವರ್ಗವಾಗಿ ಹೋಗಬೇಕಾಯಿತು. ಅಲ್ಲೂ

ಸಹ ಕಸ್ತೂರಿಯವರು 'ವರ್ಷಾಗಮ ಮಹೋತ್ಸವ', 'ಆಶುನಾಟಕ ಸ್ಪರ್ಧೆ', 'ಹಾಸ್ಯಚಟಾಕಿ' ಮೊದಲಾದ ಕಾರ್ಯಕ್ರಮಗಳನ್ನು ಏರ್ಪಡಿಸಿ ಬಹಳ ಜನಪ್ರಿಯರಾದರು. ೧೯೪೬ರವರೆಗೆ ಶಿವಮೊಗ್ಗದಲ್ಲಿದ್ದ ಕಸ್ತೂರಿಯವರು, ಬೆಂಗಳೂರಿಗೆ ತೆರಳಿ, ೧೯೪೯ರಲ್ಲಿ ಸೂಪರಿಂಟೆಂಡೆಂಟ್ ಆಗಿ ಭಡ್ತಿ ಪಡೆದು ದಾವಣಗೆರೆ ಇಂಟರ್‌ಮೀಡಿಯೆಟ್ ಕಾಲೇಜಿಗೆ ವರ್ಗವಾಗಿ ಹೋದರು. ೧೯೫೪ರಲ್ಲಿ ವಿಶ್ವವಿದ್ಯಾಲಯದ ಸೇವೆಯಿಂದ ಕಸ್ತೂರಿ ನಿವೃತ್ತರಾದರು.

ಕಸ್ತೂರಿಯವರು ೧೯೨೭ರಲ್ಲಿಯೆ ಶಿವಾನಂದ ಸ್ವಾಮಿಗಳಿಂದ ಶ್ರೀ ರಾಮಕೃಷ್ಣ ಮಂತ್ರೋಪದೇಶ ಪಡೆದಿದ್ದರು. ೧೯೪೭ರ ಆಗಸ್ಟ್ ತಿಂಗಳಿನಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ೯ ದಿನಗಳ ಬಳಿಕ ಅವರ ಕಿರಿಯ ಮಗ, ೧೮ರ ಪ್ರಾಯದ, ವೆಂಕಟಾದ್ರಿ ವಿಷಮಶೀತ ಜ್ವರದಿಂದ ಗತಿಸಿದ. ಆನಂತರ ಕಸ್ತೂರಿಯವರಿಗೆ ಬದುಕೇ ಶೂನ್ಯವಾಯಿತು. ಈ ಸಮಯದಲ್ಲಿ ಅವರಿಗೆ ಮಾನಸಿಕ ನೆಮ್ಮದಿಯನ್ನು ದೊರಕಿಸಿ ಕೊಟ್ಟ ತಾಣ ಪುಟ್ಟಪರ್ತಿಯ ಸತ್ಯ ಸಾಯಿಬಾಬ ಅವರ ಆಶ್ರಮ. ಅಲ್ಲಿಯೇ ಕಸ್ತೂರಿಯವರು ನಿಧನರಾಗಿದ್ದು ೧೯೮೭ರಲ್ಲಿ.

## ಹಾಸ್ಯ ಸಾಹಿತ್ಯ ಮತ್ತು ಕಸ್ತೂರಿ

ಕಸ್ತೂರಿಯವರು ಕರ್ನಾಟಕಕ್ಕೆ ಬಂದಿದ್ದು ನವೋದಯ ಸಾಹಿತ್ಯ ರೂಪುಗೊಳ್ಳಲು ತೊಡಗಿದ್ದ ಕಾಲದಲ್ಲಿ. ಬಿ.ಎಂ. ಶ್ರೀಯವರ ನೇತೃತ್ವದಲ್ಲಿ ನವೋದಯ ಸಾಹಿತ್ಯದ ತೇರು ಹೊರಟಿದ್ದ ಸಂದರ್ಭವದು (ಅಧಾರ ೧). ಆಗಿನ ಬಹುಪಾಲು ಲೇಖಕರಂತೆ ಕಸ್ತೂರಿಯವರೂ ಕೂಡ ಆಂಗ್ಲ ಸಾಹಿತ್ಯದಿಂದ ಪ್ರಭಾವಿತರಾಗಿದ್ದವರು. 'ಕನ್ನಡದ ಹಾಸ್ಯಬ್ರಹ್ಮ' ರಾ.ಶಿ. ಅವರು ಕಸ್ತೂರಿಯವರನ್ನು ತಮ್ಮ ಹಾಸ್ಯ ಮಾಸಿಕ 'ಕೊರವಂಜಿ'ಯತ್ತ ಸೆಳೆದುಕೊಂಡರು. ರಾಶಿಯವರ ಜೊತೆಗೂಡಿ ಕೊರವಂಜಿಯನ್ನು ಹಾಸ್ಯ ಲೇಖನಗಳಿಂದ ಸಿಂಗರಿಸಿದರು ಕಸ್ತೂರಿ. ಮುಂದೆ ಈ ಪತ್ರಿಕೆ ನಗೆ ಲೇಖಕರ ದೊಡ್ಡ ಬಳಗವನ್ನೇ ಹುಟ್ಟು ಹಾಕಿದ್ದು ಇತಿಹಾಸ. ಆರ್.ಕೆ. ಲಕ್ಷ್ಮಣ್ ಅವರಿಂದ ಪ್ರಥಮ ವ್ಯಂಗ್ಯಚಿತ್ರವನ್ನು ಕೊರವಂಜಿಗೆ ಬರೆಸಲಾಯಿತು. ಗಂಭೀರ ಸಾಹಿತಿಗಳಾದ ಶಿವರಾಮ ಕಾರಂತ, ಶಿವರುದ್ರಪ್ಪನವರನ್ನೂ ಹಾಸ್ಯ ಲೇಖನ ಬರೆಯಲು ಪ್ರೇರೇಪಿಸಿದ ಪತ್ರಿಕೆ ಇದು.

ಆರಂಭದ ಹಂತದಲ್ಲಿ ಲೇಖಕರ ಅಭಾವವಿದ್ದಾಗ ರಾಶಿ ಮತ್ತು ಕಸ್ತೂರಿಯವರೇ ಅನೇಕ ಹೆಸರುಗಳಿಂದ ಬರೆದು ಪುಟ ತುಂಬಿಸುತ್ತಿದ್ದರು. ಶ್ರೀಮತಿ ರುದ್ರಮ್ಮ, ಶ್ರೀಮತಿ ಕೇಸರಿ, ಪಾಟಾಳಿ, ನಾಕ, ತಾರಕ, ನಾ.ಕಾ.ಖಾರಾಂತ ಇತ್ಯಾದಿ ಹೆಸರುಗಳೆಲ್ಲ ಕಸ್ತೂರಿಯವರ ಗುಪ್ತನಾಮಗಳು. ಈ ಕಾವ್ಯನಾಮಗಳಲ್ಲಿ ಕಸ್ತೂರಿಯವರು

'ಕೊರವಂಜಿ'ಗಾಗಿ ವಿಪುಲ ವಿನೋದ ಸಾಹಿತ್ಯ ರಚನೆ ಮಾಡಿದರು. ಇದೇ ಕಾಲಕ್ಕೆ 'ಶಂಕರ್ಸ್ ವೀಕ್ಲಿ'ಯಲ್ಲಿ ಸಹ 'ಮಿಯರ್ ಪ್ರಾಟಲ್' ಎನ್ನುವ ಅಂಕಣವನ್ನು ಬರೆಯುತ್ತಿದ್ದರು. ಕನ್ನಡದಲ್ಲಿ ಹಾಸ್ಯಲೇಖನ, ನಾಟಕ, ಕಾದಂಬರಿ, ಕವನಗಳು, ಗಾದೆಗಳು, ಚುಟುಕುಗಳು, ಹಾಸ್ಯ ಚಟಾಕಿಗಳನ್ನಲ್ಲದೆ ಅನರ್ಥಕೋಶವೆಂಬ ಹೊಸ ಪ್ರಕಾರವನ್ನೇ ಸೃಷ್ಟಿಸಿದರು.

## ನಾಟಕಕಾರರಾಗಿ ಕಸ್ತೂರಿ

ಕಸ್ತೂರಿಯವರು ಮುಖ್ಯವಾಗಿ ಬರೆದಿದ್ದು ನಾಟಕಗಳನ್ನು. ನಾಟಕವನ್ನು ರಚಿಸುವುದು ಮಾತ್ರವಲ್ಲದೆ ಅದರ ನಿರ್ದೇಶನ, ಪಾತ್ರಾಭಿನಯವನ್ನೂ ನಿರ್ವಹಿಸುತ್ತಿದ್ದರು. ಆ ಕಾರಣದಿಂದಾಗಿ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು 'ನಾ. ಕಸ್ತೂರಿ ಎಂದರೆ ನಾಟಕದ ಕಸ್ತೂರಿ'ಎಂದು ಅರ್ಥೈಸಿದ್ದರು(ಆಧಾರ ೨). ಕಾಲೇಜು ದಿನಗಳಿಂದಲೇ ನಾಟಕಗಳಲ್ಲಿ ಅಭಿನಯಿಸುತ್ತಿದ್ದ ಕಸ್ತೂರಿಯವರು, 'ಹೆಡ್ ಮಾಸ್ಟರ್ಸ್ ಡಾಟರ್'ಎಂಬ ನಾಟಕವನ್ನು ರಚಿಸಿ, ಆಡಿಸಿ ನಾಟಕಕಾರರೆಂದು ಜನರಿಂದ ಗುರುತಿಸಲ್ಪಟ್ಟಿದ್ದರು. ಮುಂದೆ ಅನೇಕ ನಾಟಕಗಳನ್ನು ರಚಿಸಿದರು.

ಕಸ್ತೂರಿಯವರ ಅಪ್ರಕಟಿತ ನಾಟಕಗಳಲ್ಲಿ ೧೯೨೭ರಲ್ಲಿ ರಚಿಸಿದ 'ಗುಂಡೂ-ರಾಯರ ಮದುವೆ' ಒಂದು ಮುಖ್ಯ ನಾಟಕ. ಇದು ರಂಗದ ಮೇಲೆ ಯಶಸ್ವಿಯಾದರೂ ಇದಕ್ಕೆ ಪ್ರಕಟಣೆಯ ಯೋಗವಿರಲಿಲ್ಲ. ಕಸ್ತೂರಿಯವರಿಗೆ ಜನಪ್ರಿಯತೆ ತಂದುಕೊಟ್ಟ ನಾಟಕವೆಂದರೆ 'ಗಗ್ಗಯ್ಯನ ಗಡಿಬಿಡಿ'. ಇದು 'ಮೆಸ್ಕರ್ ಡಿ ಫೋರ್‌ಸೆನ್ಯಾಕ್' ಎಂಬ ಆಂಗ್ಲ ನಾಟಕದ ರೂಪಾಂತರ. ಈ ನಾಟಕದ ಪ್ರಮುಖ ಪಾತ್ರವಾದ ಮೂಗಯ್ಯನ ಪಾತ್ರವನ್ನು ಕಸ್ತೂರಿಯವರೇ ಅಭಿನಯಿಸುತ್ತಿದ್ದರು. ಇದೇ ರೀತಿ ಕಾಡಾನೆ, ವರಪರೀಕ್ಷೆ, ತಾಪತ್ರಯ ತಪ್ಪಿತು, ಬ್ಯಾಂಕಿನ ದಿವಾಳಿ, ರಾಮಕೃಷ್ಣಯ್ಯನ ದರ್ಬಾರು, ಚಿತ್ರ ವಿಚಿತ್ರ ಮುಂತಾದ ನಾಟಕಗಳನ್ನು ಬರೆದಿದ್ದಾರೆ. ಜೊತೆಗೆ ಇನ್ನು ಕೆಲವು ಸಮಯ ಸಂದರ್ಭಕ್ಕೆ ತಕ್ಕಂತೆ ರಚಿತವಾದ ಆಶುನಾಟಕಗಳೂ ಇವೆ. ಆಶುನಾಟಕದ ಪರಿಕಲ್ಪನೆಯನ್ನು ಮೊದಲಿಗೆ ಹುಟ್ಟುಹಾಕಿದವರು ಕಸ್ತೂರಿ.

'ಗುಳಿಗೆ ವೈದ್ಯ' ಆಶುನಾಟಕ ಸ್ಪರ್ಧೆಗೆಂದು ಬರೆದ ನಾಟಕ. ಪರೀಕ್ಷೆ ಸಂದರ್ಭದಲ್ಲಿ ವಿದ್ಯಾರ್ಥಿಗಳನ್ನು ಕಾಡುವ ಮರೆವಿಗೆ ಕಸ್ತೂರಿ ಕಂಡು ಹಿಡಿದಿರುವ ಔಷಧವೇ ಈ ಗುಳಿಗೆಗಳು. ಒಂದೊಂದು ಪುಸ್ತಕಕ್ಕೆ ಒಂದೊಂದು ಗುಳಿಗೆ. ಆಯಾ ಪಠ್ಯ ಪುಸ್ತಕಗಳ ಹಾಳೆಯನ್ನು ಹರಿದು ಚೂರು ಮಾಡಿ, ನೀರಿನಲ್ಲಿ ನೆನೆಸಿಡುವುದು. ನಂತರ ಅದಕ್ಕೆ ಮೆಂತ್ಯ ಬೆರಸಿ ದೋಸೆ ಹಿಟ್ಟಿನಂತೆ ನುಣ್ಣಗೆ ರುಬ್ಬಿ, ಮಾತ್ರೆಗಳನ್ನು ತಯಾರಿಸುವುದು. ಒಂದೊಂದು ವಿಷಯಕ್ಕೆ ಒಂದೊಂದು ಗುಳಿಗೆ ನುಂಗಿದರೆ ಆಯಿತು. ಕನ್ನಡಕ್ಕೊಂದು

ಗುಳಿಗೆ, ವಿಜ್ಞಾನಕ್ಕೊಂದು ಗುಳಿಗೆ. ಸಂಗೀತಕ್ಕೂ ಯಮನ್, ಕಲ್ಯಾಣಿ, ಮೋಹನ ಗುಳಿಗೆಗಳುಂಟು. ಯಾವುದೋ ವಿಷಯಕ್ಕೆ ಬೇರಾವುದೋ ಗುಳಿಗೆಗಳನ್ನು ನುಂಗಿ ಆಗುವ ಫಜೀತಿ ಓದುಗರನ್ನು ನಗೆಗಡಲಿನಲ್ಲಿ ಮುಳುಗಿಸುತ್ತದೆ. ವಿಮರ್ಶಕರು ಅಭಿಪ್ರಾಯ ಪಡುವಂತೆ– ಉಕ್ಕಿ ಹರಿವ ನಗೆಯ ಹೊಳೆಯೇ ನಾಟಕದ ಸಿದ್ಧಿ. ಇಲ್ಲಿ ತರ್ಕ ಚಿಂತನೆಯ ಆಳಗಳು ಗೈರುಹಾಜರು.

ಅಂದಿನ ಕಾಲೇಜು ಸಮಾರಂಭಗಳಲ್ಲಿ ಕಸ್ತೂರಿಯವರ ನಾಟಕಗಳು ಬಹಳ ಜನಪ್ರಿಯವಾಗಿದ್ದವು. ಬಿಗಿದ ಮುಖಗಳನ್ನು ಸಡಿಲಿಸುವುದಷ್ಟೇ ತಮ್ಮ ನಾಟಕಗಳ ಉದ್ದೇಶವೆಂದು ಭಾವಿಸಿದ್ದ ಕಸ್ತೂರಿಯವರು ಹೇಳುತ್ತಾರೆ: 'ತಾವು ತುಂಬಾ ಪ್ರೀತಿಸುತ್ತಿದ್ದ ಕಾಲೇಜನ್ನು ಬಿಟ್ಟು ತೆರಳುವಾಗ ವಿದ್ಯಾರ್ಥಿಗಳಿಗೆ ದುಗುಡ ಸಹಜ. ಅಂತಹ ಸಂದರ್ಭಗಳಲ್ಲಿ ಅತಿ ಗಂಭೀರ ನಾಟಕಗಳಿಂದ ಅವರ ಸಂಕಟ ಹೆಚ್ಚಿಸುವುದು ಕೇವಲ ಕ್ರೌರ್ಯ. ಅವರನ್ನು ನಕ್ಕು ನಗಿಸಿ ಮನೆಗೆ ಕಳಿಸುವುದೇ ಈ ನಾಟಕಗಳ ಉದ್ದೇಶ.... '

## ಹಾಸ್ಯ ಪ್ರಬಂಧಗಳು

ಹರಟೆ ಪ್ರಕಾರಕ್ಕೆ ಸೇರುವ ಹಲವಾರು ಪ್ರಬಂಧಗಳನ್ನು ಕಸ್ತೂರಿಯವರು ಬರೆದಿದ್ದಾರೆ. ಎ.ಎನ್. ಮೂರ್ತಿರಾಯರು ಅಭಿಪ್ರಾಯಪಡುವಂತೆ– ಕಸ್ತೂರಿಯವರ ಹಾಸ್ಯ ಗಟ್ಟಿಮುಟ್ಟಾದ ಹಾಸ್ಯ. ರಕ್ತ ಮಾಂಸಗಳನ್ನುಳ್ಳ ಹಾಸ್ಯ. ಮನಸ್ಸಿಗೆ ತಾತ್ಕಾಲಿಕ ಹಿತವನ್ನು ತಂದುಕೊಡಬಲ್ಲದು. ಡೀಪ್ ಆಗಬೇಕೆಂದು ಹಟವಿಲ್ಲ. (ಆಧಾರ ೩) ತಮ್ಮ ಬರಹಗಳಿಂದ ಸಮಾಜಕ್ಕೆ ನೀತಿಬೋಧನೆಯ ಉದ್ದೇಶ ಕಸ್ತೂರಿಯವರಿಗೆ ಇರಲಿಲ್ಲವಾದರೂ, ಅವರ ಹಾಸ್ಯ ಬರಹಗಳು ನಗೆಯ ಮುಖವಾಡದಲ್ಲಿ ಸಮಾಜದ ಓರೆಕೋರೆ, ಅಂಕುಡೊಂಕುಗಳನ್ನು ಬೊಟ್ಟು ಮಾಡಿ ತೋರುವ ಪ್ರಯತ್ನವನ್ನೂ ಮಾಡಿವೆ.

ಉದಾಹರಣೆಗೆ 'ಶೇಷಮ್ಮನ ಕಾರು' ನಗೆ ಪ್ರಬಂಧ 'ತೋಟ ಶೃಂಗಾರ ಒಳಗೆ ಗೋಣಿ ಸೊಪ್ಪು' ಎಂಬ ಗಾದೆಯನ್ನು ನೆನಪಿಸುವಂತಿದೆ. ಶೇಷಮ್ಮ ಎಂಬ ಹೆಂಗಸು ತನ್ನಲ್ಲಿ ಕಾರಿದೆ ಎಂಬುದನ್ನು ಪ್ರದರ್ಶಿಸಲೆಂದೇ ಗೆಳತಿಯನ್ನು ತನ್ನ ಮನೆಗೆ ಭೋಜನಕ್ಕೆ ಆಹ್ವಾನಿಸಿರುತ್ತಾಳೆ. ಗೆಳತಿಯಾದರೋ ಕಾರಿಟ್ಟ ಶೇಷಮ್ಮನ ಸೌಭಾಗ್ಯಕ್ಕಾಗಿ ಇಡೀ ರಾತ್ರಿ ನಿದ್ರೆಗೆಟ್ಟು ಕರುಬುತ್ತಲೇ ಮರುದಿನ ಬಂದ ಕಾರನ್ನೇರುತ್ತಾಳೆ. ಚಿಂತಾಜನಕ ಸ್ಥಿತಿಯಲ್ಲಿದ್ದ ಆ ಕಾರಿನಲ್ಲಿ ಕುಳಿತು ಶೇಷಮ್ಮನ ಮನೆ ಸೇರುವುದರೊಳಗೆ ಕಾರಿನ ಬಗ್ಗೆ ಇದ್ದ ಅವಳ ಭ್ರಮೆ ನಿರ್ನಾಮವಾಗಿರುತ್ತದೆ. 'ಕಣ್ಣಿಲ್ಲದ ಕಪೋತಿ, ಶ್ಲೇಷ್ಮ

ತುಂಬಿದ ಶ್ವಾಸನಾಳ, ಎದೆ ಸೀಳಿದರೆ ಎರಡು ಪ್ಲಗ್ಗಿಲ್ಲ, ಕಸ ಗುಡಿಸಿ ಕಲ್ಪಾಂತವಾಗಿದೆ, ಹರಿದ ಹಾರನ್ನು; ತೇಪೆಯ ಟಯರು; ಸೋರುವ ಸೂರು; ಒಡೆದ ಕನ್ನಡಿ, ಭಗವಂತನೇ ಬ್ರೇಕು; ಗಿಯರಿಗೆ ಗೋವಿಂದನೇ ಶರಣು; ಸ್ವಪ್ನದಲ್ಲೂ ಸ್ಪೆಪ್ನಿ ಮುಖ ನೋಡಿಲ್ಲ- ಹೀಗೆ ಅತಿ ಕೆಟ್ಟ ಸ್ಥಿತಿಯಲ್ಲಿದ್ದ ಆ ಕಾರನ್ನು ಕಸ್ತೂರಿಯವರು ವರ್ಣಿಸುವುದಂತೂ ಓದುಗನನಿಗೆ ಇನ್ನಿಲ್ಲದಂತೆ ನಗು ತರಿಸುತ್ತದೆ.

'ಟಾ-ಟಾ' ಪ್ರಬಂಧದಲ್ಲಿ ಯಾರನ್ನಾದರೂ ಬೀಳ್ಕೊಡುವಾಗ 'ಟಾ-ಟಾ' ಎಂದು ಕೈಬೀಸುವ ಪದ್ಧತಿ ಕಸ್ತೂರಿಯವರ ವಿಡಂಬನೆಗೆ ಆಹಾರವಾಗಿದೆ. ಕಸ್ತೂರಿಯವರ ಅಭಿಪ್ರಾಯದಲ್ಲಿ ಈ ಟಾ-ಟಾ ನಾಟಕದ ಸವಿಯನ್ನು ಅನುಭವಿಸಬೇಕಾದರೆ, ನಾವು ಟಾ-ಟಾ ಹೇಳುವ ತಂಡಕ್ಕೂ ಸೇರಿರಬಾರದು. ಟಾ-ಟಾ ಹೇಳಿಸಿಕೊಳ್ಳುವ ಆಸಾಮಿಯೂ ಆಗಿರಬಾರದು. ಕೇವಲ ಪ್ರೇಕ್ಷಕನಾಗಿರಬೇಕು, ಅದೇ ಉತ್ತಮ.

'ಕಾಟದಿಂದ ರಕ್ಷೆ'- ಇದು ಬಸ್ಸಿನಲ್ಲಿ, ರೈಲಿನಲ್ಲಿ ಪ್ರಯಾಣಿಸುವಾಗ ಸುಮ್ಮನಿದ್ದವರನ್ನು ಬಿಡದೆ ಮಾತಿಗೆಳೆಯುವ ಚಾಳಿಯವರತ್ತ ವಾರೆ ನೋಟ ಹರಿಸುತ್ತದೆ. ಈ ರೀತಿ ನಮ್ಮ ವೈಯುಕ್ತಿಕ ವಿಷಯಗಳಲ್ಲಿ ಅನಗತ್ಯವಾಗಿ ತಲೆ ಹಾಕಿ ನಮ್ಮನ್ನು ಮುಜುಗರಕ್ಕೀಡುಮಾಡುವ ಇಂತಹ ಜನರಿಂದ ತಪ್ಪಿಸಿಕೊಳ್ಳಲು ಒಂದು ಸೊಗಸಾದ ಉಪಾಯವನ್ನೂ ಸೂಚಿಸುತ್ತಾರೆ ಕಸ್ತೂರಿ. ಅದೇನೆಂದರೆ ಒಂದು ಪುಸ್ತಕವನ್ನು ಕೈಯಲ್ಲಿ ಹಿಡಿದು ನೂರ ಎಂಟನೆಯ ಪುಟವನ್ನೇ ಹಿಡಿದು ಓದಿ ಕಿಲಕಿಲನೆ ನಗುತ್ತಿರುವುದು. ಆ ಪುಟದಲ್ಲಿ, ಬಿಡದೆ ಮಾತಿಗೆಳೆದು ಕಾಡಿದ ಒಬ್ಬನ ಕೆನ್ನೆಗೆ ಇನ್ನೊಬ್ಬ ನಾಲ್ಕು ಬಡಿದ ವರ್ಣನೆ ಇದೆ ಎಂದು ಕಾಡುತ್ತಿದ್ದವರಿಗೆ ಹೇಳುವುದು.

'ದೇವರಿಗೆ ಹೂವು' ಪ್ರಬಂಧದಲ್ಲಿ 'ಹೋಗೋ, ಪರವಾ ಇಲ್ಲ. ದೇವರಿಗೆ ತಾನೇ ಹೂವು? ತಾರೊ' ಎನ್ನುತ್ತಾ ಮಗನನ್ನು ಅವರಿವರ ಮನೆಯ ಹೂವು ಕದ್ದು ತರಲು ಕಳಿಸುತ್ತಿದ್ದ ಸುಬ್ರಹ್ಮಣ್ಯ ಶಾಸ್ತ್ರಿಗಳಿಗೆ ಮುಂದೆ ಮಗ ಕಳ್ಳನಾಗಿ ಪೋಲಿಸರ ಕೈಗೆ ಸಿಕ್ಕು ಬಿದ್ದಾಗ ಪಶ್ಚಾತ್ತಾಪವಾಗುವ ಪ್ರಸಂಗವಿದೆ. 'ಮಗನಿಗೆ ಒಳ್ಳೇ ಬುದ್ಧಿ ಬರಲಿ, ಅವನು ಸತ್ಯವಂತನಾಗಿ ಬಾಳಲಿ, ಎಂದು ಪ್ರಾರ್ಥಿಸುತ್ತಾ ದೇವರಿಗೆ ಅಷ್ಟೋತ್ತರ ಅರ್ಚನೆ ಮಾಡುತ್ತಿದ್ದಾರೆ.... ಅದೇ ಬಂಗಲೆಯಿಂದ ತಾವೇ ಬೆಳಗಾಗುವುದರೊಳಗೆ ಹೂವು ಕದ್ದು ತಂದು...' ಎನ್ನುವ ಕಸ್ತೂರಿಯವರ ಈ ಬರಹ ಮಕ್ಕಳ ಸನ್ನಡತೆಯನ್ನು ರೂಪಿಸುವಲ್ಲಿ ಹೆತ್ತವರ ಪಾಲೆಷ್ಟಿದೆ ಎಂಬುದನ್ನು ಅರಿವು ಮಾಡಿಕೊಡುವಂತಿದೆ.

ಇದೇ ರೀತಿ 'ಸಾಲಾಸ್ತ್ರ ಪ್ರಯೋಗ', 'ರಾಜಸೂಯ', 'ಒಂದು ಸಭೆ', 'ನೀವೂ ಕವಿ', 'ಶ್ರೀರಂಗಪಟ್ಣ', 'ಉಪಚಾರ', 'ಉಗುಳಬೇಡಿ', 'ಅಡಿಗೆಯ ಹೆಂಗಸು', 'ಗಂಡ ಹೆಂಡಿರು', 'ಬಾಲವೇ ನಾಸ್ತಿ', 'ಮುಖವೇ ಮುಖ್ಯ' ಮುಂತಾದ ಬರಹಗಳು ಸಮಾಜದ

ವಿಲಕ್ಷಣತೆಯನ್ನು ಹಾಸ್ಯದ ಮೂಲಕ ಎತ್ತಿ ತೋರಿಸುತ್ತವೆ. ಕಸ್ತೂರಿಯವರ ವಿಶಿಷ್ಟ ಪ್ರಬಂಧಶೈಲಿಯ ಪರಿಚಯದ ಸಲುವಾಗಿ ಅವರ 'ನಾನು ಹೊತ್ತ ತಲೆ' ಪ್ರಬಂಧದ ಮೊದಲ ಭಾಗವನ್ನು ಕೆಳಗೆ ಕೊಟ್ಟಿದೆ:

'ಕುದುರೆಗಳು ನಿಂತೇ ನಿದ್ದೆ ಮಾಡುತ್ತವಂತೆ. ಏಕೆಂದರೆ, ಕೂತು ನಿದ್ದೆ ಮಾಡಲು ಅಭ್ಯಾಸ ಬೇಕು. ಬೆನ್ನೆಲುಬಿಗೆ ಬಲ ಬೇಕು. ಅಕ್ಕ ಪಕ್ಕದಲ್ಲಿ ಒತ್ತಿಗೆ ಧಾಂಡಿಗರು ಬೇಕು. ರೈಲು ಪ್ರಯಾಣ ಮಾಡುವಾಗ, ಕೂತು ನಿದ್ದೆ ಮಾಡುವ ಇಂಥ ವಿಚಿತ್ರ ಪ್ರಾಣಿಗಳನ್ನು ನಾವು ನೂರುಗಟ್ಟಲೆ ಕಾಣಬಹುದು. ಐದಾರು ಮೈಲಿ ಕಳೆದು ಕೂಡಲೇ ಎದುರಿಗಿರುವ ಜನ ಕೊಂಚ ಮೆತ್ತಗಾಗುತ್ತಾರೆ. ಅವರ ಮಾತಿನಲ್ಲಿ ಉತ್ಸಾಹ ಕಡಿಮೆಯಾಗುತ್ತೆ. ಅವರ ವೇಗ ಕುಂದಿ, ಅವರ ತರ್ಕ ಬುಡಮೇಲಾಗಿ, ಅವರು ಸಪ್ಪಗಾಗುತ್ತಾರೆ. ಮೇಲುಗಣ್ಣು ತೇಲುಗಣ್ಣಾಗುತ್ತದೆ. ತುಟಿಯ ತುದಿಗಳು ಜೋಲು ಬೀಳುತ್ತವೆ. ಕಿವಿ ಕಪ್ಪಾಗುತ್ತದೆ. ಷರ್ಟಿನ ಗುಂಡಿಗಳನ್ನು ಬಿಚ್ಚುತ್ತ ಅವರು ಕಿಟಕಿ ಬಾಗಿಲನ್ನು ಕೆಳಕ್ಕಿಳಿಸಿ ಅದರ ಮೇಲೆ ತಲೆಯನ್ನೊರಗಿಸಿ, ರುಮಾಲನ್ನು ತೆಗೆದು ಮಡಿಲಲ್ಲಿ ಮಲಗಿಸಿಕೊಳ್ಳುತ್ತಾರೆ. ಆಯಿತು! ನಿದ್ರಾಸಮಾಧಿ ಸ್ಥಿತಿಃ. ಈ ಲೋಕಕ್ಕೂ ಅವರಿಗೂ ಸಂಬಂಧ ತಪ್ಪಿದಂತೆಯೇ!

ಇನ್ನು ಕೆಲವರು ನೆಟ್ಟನೆ ಕುಳಿತಲ್ಲೇ ಕುಳಿತು ಬೆನ್ನು ಬಾಗಿಸದೆಯೇ ಇಹಲೋಕವನ್ನು ತ್ಯಜಿಸುತ್ತಾರೆ. ಇಂತಹವರು ನಮ್ಮ ಪಕ್ಕದಲ್ಲಿದ್ದರೆ, ನಮಗೆ ಗ್ರಹಚಾರ ವಕ್ರಿಸಿದಂತೆಯೇ ಸರಿ. ಕಳೆದ ತಿಂಗಳು ನನಗೆ ಈ ಜಾತಿ ಶನಿ ಒಬ್ಬನ ನೆರೆ ಸಿಕ್ಕಿ ಬಿಟ್ಟಿತ್ತು. ನನ್ನ ಬಲಗಡೆ ಕುಳಿತಿದ್ದ ಆತನ ಭಾರವಾದ ದೇಹವನ್ನು ನಿದ್ರಾದೇವಿ ಕಾಡಿಸುತ್ತಿದ್ದುದ್ದನ್ನು ಕಂಡು ನಾನು ಗಾಬರಿಗೊಂಡೆ. ಆಸನವನ್ನು ಎಡಕ್ಕೆ ಜರುಗಿಸೋಣವೆಂದರೆ, ಯುದ್ಧಾನಂತರ ಜಗತ್ತಿನಲ್ಲಿ ಅದಕ್ಕೆ ಅವಕಾಶವೆಲ್ಲಿ? ಆಕಳಿಸಿ ಈಕಳಿಸಿ ತೂಗಾಡಿ ತೇಗಾಡಿ ರೆಪ್ಪೆ ಇಳಿಸಿ ಎವೆ ಎತ್ತಿ ಕಡೆಗೂ ಅವನು ನಿದ್ರೆಯ ಮುದ್ದೆಯಾದ! ತಲೆ ಬುರುಡೆ ಸೀಸದ ಗುಂಡಾಯಿತು. ಆತ ಎಡಚ ಇರಬೇಕು. ಏಕೆಂದರೆ, ಉದ್ದವಾದ ಕತ್ತಿನ ಮೇಲೆ ನಿಲ್ಲಲಾರದೆ ತಲೆತೂಗಿ ಬಾಗಿದಾಗಲೆಲ್ಲ ಅದು ಎಡಗಡೆ ಇದ್ದ ನನ್ನ ಹೆಗಲ ಮೇಲೆಯೇ ಬೀಳುತ್ತಿತ್ತು. ಚಕ್ ಎಂದು ಆತನ ತಲೆ ನನ್ನ ಭುಜದ ಮೇಲೆ ಬಿದ್ದಾಗಲೆಲ್ಲ ನಾನು ಹಲ್ಲು ಕಚ್ಚಿ ನೋವು ತಿನ್ನುತ್ತಿದ್ದೆ.

ಉಳಿದವರಿಗೆಲ್ಲ ಇದೊಂದು ಆಟವಾಯಿತು. ಅವರು ನನ್ನ ಪಾಡನ್ನು ನೋಡಿ ನಲಿದರು. ಕಡೆಗೆ, ಆತ ತನ್ನ ತಲೆಯನ್ನು ನನ್ನ ತೋಳಿಂದ ತೆಗೆಯಲೇ ಇಲ್ಲ. ಗುಬ್ಬಿಯಿಂದ ಬೆಂಗಳೂರುವರೆಗೂ ನಾನು ಅದನ್ನು ಹೊತ್ತು ಕೂರಬೇಕಾಗಿ ಬಂತು. ಎಂಥ ಕಲ್ಲುನಿದ್ದೆ, ಅವನದು! ಸುತ್ತಮುತ್ತಲಿನ ನಲವತ್ತೆಂಟು ಜನರ ನೂಕುನುಗ್ಗಲು ಕೆಮ್ಮಲು ಶೀನಲು

ದೊಂಗಲು ಯಾವುದೂ ಅದನ್ನು ಪದಗೆಡಿಸಲಿಲ್ಲ. ನಾಲ್ಕೈದು ಹಸುಗೂಸುಗಳು ಅಂಬಾ ಎಂದು ಗೋಗರೆದಾಗಲೂ ಅವನು 'ಭದ್ರಂ ಕರ್ಣ'ನಾಗಿಯೇ ಇದ್ದ. ಗೊಬ್ಬರ, ಧನ, ಧಾನ್ಯಗಳ ಅಭಾವ. ಬೆಲೆ ಹತೋಟಿಯ ಒಳತೋಟಿ ಮುಂತಾದವುಗಳನ್ನು ಜನ ಒಬ್ಬರಿಗೊಬ್ಬರು ಅಬ್ಬರಿಸಿಕೊಂಡರು. ಅವನ ತಲೆದೆಸೆಯ ಕಿಟಕಿಯನ್ನೇ ಯಾರೋ ತೆರೆದರು, ಮುಚ್ಚಿದರು, ಗಡಗಡಿಸಿದರು. ಅದರ ಮೂಲಕ ಹಲವರ ರುಂಡಗಳು ಒಳಬಂದವು. ಒಳಕ್ಕೆ ನೆಗೆದರು; ಹೊರಕ್ಕೆ ಹಾರಿದರು. ಆದರೂ, ಆತನ ಬಂಡೆತನ ಪುಡಿಪುಡಿಯಾಗಲಿಲ್ಲ.

ಕುಕ್ಕುಟಾಸನ ಮರ್ಕಟಾಸನ ಅಶ್ವಾಸನ ಬರೀ ಉಚ್ಛಾಸನ ಸಡಿಲಾಸನ ಮಡಿಲಾಸನ ಬೂದೀನಾಯಾಸನ ಬೀದೀ ನಾಯಾಸನ ಏಕಪಾದಾಸನ ಅರ್ಧ ಪೃಷ್ಠಾಸನ ಮುಂತಾದ ತಪೋಭಂಗಿಗಳಲ್ಲಿದ್ದ ಆ ಜನಸಮೂಹದ ನಡುವೆ ಆತ ನೆಟ್ಟನೆಯ ಬೆನ್ನು ಸೊಟ್ಟನೆಯ ತಲೆ ಸಹಿತ ಹೊಸ ಆಸನ ಹಾಕಿ ನಿದ್ದೆ ಮಾಡುತ್ತಿದ್ದ. ನೆರೆಯವರೇ ನನಗೆ ಹೊರೆಯಾದ ಆ ಗದ್ದಲದ ಗಡಣದಲ್ಲಿ ಅವನೊಬ್ಬನೇ ಪ್ರಶಾಂತಮೂರ್ತಿ... '

## ಅಣಕವಾಡುಗಳು ಮತ್ತು ಮುಕ್ತಕಗಳು

ಕವಿತೆ ಕಸ್ತೂರಿಯವರ ಆಸಕ್ತಿಯ ಕ್ಷೇತ್ರವಲ್ಲ. ಮೊದಲಿಂದಲೂ ಅವರು ಗದ್ಯಕ್ಕೆ ಮನಸೋತವರು. ಕನ್ನಡ ಕಲಿತ ನಂತರ ತಮ್ಮ ಸುತ್ತಲೂ ನಡೆಯುತ್ತಿದ್ದ ಕಾವ್ಯ ರಚನೆಯನ್ನು ಗಮನಿಸಿ, ಕವಿತಾ ರಚನೆ ತಮ್ಮಿಂದಲೂ ಸಾಧ್ಯವೇ ಎಂದು ಪ್ರಯತ್ನಿಸಿದ್ದಾರೆ. ಆದರೆ ಕವಿತೆಯನ್ನೂ ಕೂಡ ಹಾಸ್ಯಕ್ಕೆ ಪೂರಕವಾಗಿಯೇ ಬಳಸಿಕೊಂಡಿದ್ದಾರೆ. ಈ ರೀತಿ ರಚನೆಯಾದವುಗಳು ಅವರ ಅಣಕವಾಡುಗಳು. ಈ ಅಣಕುವಾಡುಗಳು ಪ್ರಬುದ್ಧ ಕರ್ನಾಟಕ, ಪ್ರಜಾಮತ, ಕೊರವಂಜಿ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದವು. ೧೯೪೭೦ರಲ್ಲಿ ಇವು 'ಅಣುಕು ಮಿಣುಕು' ಸಂಕಲನವಾಗಿ ಹೊರಬಂದಿವೆ. ತಾವು ಅನುಕರಿಸಿದ ಕವಿಗಳ ಭಾಷೆ, ಶೈಲಿಯನ್ನು ಸೂಕ್ಷ್ಮವಾಗಿ ಗಮನಿಸಿ ತಮ್ಮ ರಚನೆಯಲ್ಲೂ ಅದನ್ನೇ ಅನುಸರಿಸಿದ್ದಾರೆ. ಕಸ್ತೂರಿಯವರು ತಮ್ಮ ಬಹಳಷ್ಟು ಅಣಕುವಾಡುಗಳಿಗೆ ದಾಸಸಾಹಿತ್ಯದ ರಚನೆಗಳನ್ನೇ ಆರಿಸಿಕೊಂಡಿದ್ದಾರೆ.

'ಆವರೋಗವೋ ಎನಗೆ ದೇವ ಧನ್ವಂತರಿ', 'ನಾನೇಕೆ ಬಡವನು', 'ಊರಿಗೆ ಬಂದರೆ ದಾಸಯ್ಯ', 'ಎನಗೂ ಆಣೆ ರಂಗ', 'ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ', 'ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ' ಮುಂತಾದ ದಾಸರ ಪದಗಳು ಕಸ್ತೂರಿಯವರ ಅಣಕುವಾಡುಗಳಾಗಿ ಹಾಸ್ಯ ರಸಾಯನವಾಗಿವೆ. 'ಈ ಪರಿಯ ಸೊಬಗಾವ ದೇವರಲಿ'–ಈ ದೇವರನಾಮ ಕಸ್ತೂರಿಯವರ ಕೈಯಲ್ಲಿ 'ಈ ಪರಿಯ ಕೊರಗಾವ ದೇಶದಲು ನಾ ಕಾಣೆ, ಕೋಪಿಸದ ಕಂನಾಡಲಲ್ಲದೆ' ಆಗುತ್ತದೆ. 'ಎನಗೂ

ಆಣೆ ರಂಗಾ ನಿನಗೂ ಆಣೆ' ಎನ್ನುವುದು 'ಎನಗೂ ನಾಮ, ನಿನಗೂ ನಾಮ, ಎನಗೂ ನಿನಗೂ ಇಬ್ಬರಿಗೂ ಪಂಗನಾಮ'ವಾಗಿ ಬದಲಾಗಿ ಬೇಡವೆಂದರೂ ನಗು ಉಕ್ಕಿಸುತ್ತದೆ. 'ಊರಿಗೆ ಬಂದರೆ ದಾಸಯ್ಯ! ದೊಡ್ಡ ಕಾರಲ್ಲಿ ಬಾ ಕಂಡ್ಯ ದಾಸಯ್ಯ'ಎಂದು ಹರಿದಾಸರ ಬಡ ದಾಸಯ್ಯನನ್ನು ಹಾಸ್ಯದ ದೊಡ್ಡ ಕಾರಿನಲ್ಲಿಯೇ ಕೂಡಿಸಿ ಮೆರವಣಿಗೆ ಮಾಡಿಸಿದ್ದಾರೆ ಕಸ್ತೂರಿಯವರು.

ಕುವೆಂಪು ಅವರ 'ಕುಮಾರವ್ಯಾಸನು ಹಾಡಿದನೆಂದರೆ' ಕವನ ಇವರ ಅಣಕವಾಡಿಗೆ ಸಿಲುಕಿ ಕುತಾರ ಸ್ವಾಮಿಯು ಹಾಡಿದ ಹಾಡಾಗಿ ಬದಲಾಗಿದೆ–

ಕುತಾರ ಸ್ವಾಮಿಯು ಹಾಡಿದನೆಂದರೆ
ಸಭೆಯಲಿ ಗುಡುಗೇ ಮೊಳಗುವುದು
ಕೋಪವು ಕಣ್ಣಲಿ ಸಿಡಿಯುವುದು, ಬಾಯಲಿ
ಶಾಪದ ಪದ ತುಳುಕಾಡುವುದು.

ಈ ಅಣಕುವಾಡುಗಳ ನಡುವೆ ಕಸ್ತೂರಿಯವರು ಸರ್ವಜ್ಞನ ತ್ರಿಪದಿಗಳನ್ನು ಹೋಲುವ ವಚನಗಳನ್ನೂ ಮತ್ತು ಕೆಲವು ಮುಕ್ತಕಗಳನ್ನೂ ರಚಿಸಿದ್ದಾರೆ. ಸರ್ವಜ್ಞ ಎಂದೇ ಅಂಕಿತವಿದ್ದರೂ ಈ ತ್ರಿಪದಿಗಳಲ್ಲಿ ಕಸ್ತೂರಿತನ ಎದ್ದು ಕಾಣುತ್ತದೆ. ಮೂರು ಸಾಲುಗಳ ಈ ಪುಟ್ಟ ವಚನಗಳಲ್ಲಿ ನಗೆಸಿಂಚನವಂತೂ ಧಾರಾಳವಾಗಿಯೇ ಇದೆ. ಸರ್ವಜ್ಞ ಕವಿಯ 'ಸಾಲವನು ಕೊಂಬಾಗ ಹಾಲೋಗರ ಉಂಡಂತೆ' ಎಂಬ ವಚನವನ್ನು ಹೋಲುವ ಇದು ಕಾಲೇಜು ವಿದ್ಯಾರ್ಥಿಯನ್ನು ಕುರಿತು ಬರೆದಿರುವ ಕಸ್ತೂರಿ ವಚನ:

ಕಾಲೇಜು ಸೇರ್ದಾಗ ಹಾಲ್ಫೇಣಿ ಮೆದ್ದಂತೆ
ಹಾಲಿನಲಿ ಪೇಪರನು ಕೊಡುವಾಗ, ಬಲಗಾಲ
ಹೀಲು ಮುರಿದಂತೆ ಸರ್ವಜ್ಞ

ತಮ್ಮ ಮಕ್ಕಳು ಎಲ್ಲದರಲ್ಲೂ ಅದ್ವಿತೀಯರಾಗಿರಬೇಕೆಂಬ ಮಹತ್ವಾಕಾಂಕ್ಷೆಯುಳ್ಳ ತಂದೆ–ತಾಯಿಯರನ್ನು ಕುರಿತು:

ಹಸುಳೆ ಮಕ್ಕಳ ಹಿಂಡಿ ಹಿಸಿದು ಪ್ರಾಡಿಜಿ ಮಾಡಿ
ಕಸಿದು ಕಾಸನು ತಿಂಬ, ನರಮನುಜ–
ರಸುರರೇ ಅಕ್ಕು, ಸರ್ವಜ್ಞ।

**ಪೊಳ್ಳುಕವಿಗಳ ಬಗ್ಗೆ:**

ಪೊಳ್ಳು ಕಗ್ಗವ ಗೀಚಿ ಕನ್ನಡಂ ಗೆಲ್ಗೆಂದು
ಹಲ್ಲು ಕಿರಿದಾಕೆಗೆ ಕೊಡುವಾತ, ಕೇಸರಿಗೆ
ಹುಲ್ಲು ಕೊಟ್ಟಂತೆ, ಸರ್ವಜ್ಞ।

ಕೆಟ್ಟಚಾಳಿಯ ಪದ್ಯ, ಸೊಟ್ಟ ಶೈಲಿಯ ಗದ್ಯ
ಹಿಟ್ಟಿನಾಸೆಯ ಕ್ರಿಟ್ಟಿಸಿಸಮುಗಳ ಬರಿಕಸದ
ಬುಟ್ಟಿಗೇ ಬಿಸುಡು ಸರ್ವಜ್ಞ!

ಇನ್ನು ಕಸ್ತೂರಿಯವರ ಕನ್ನಡ ಅಭಿಮಾನ ಮೆರೆಯುವುದನ್ನು ನೋಡಿ:

ಕನ್ನಡವ ಕುಲಗೆಡಿಸಿ ಬನ್ನ ಬಡಿವುತ ನುಡಿದು
ಉನ್ನತದಿ ಮೆರೆವಾ ಕನ್ನಡಿಗನಿರವಿನಿಂ
ಕುನ್ನಿಲೇಸೆಂದ ಸರ್ವಜ್ಞ!

'ಅನಾಥಾಲಯ'ಎಂಬುದು ಕಸ್ತೂರಿಯವರ ಮುಕ್ತಕಗಳಲ್ಲೊಂದು. ಚಿಕ್ಕದಾಗಿದ್ದರೂ ಅರ್ಥಪೂರ್ಣವಾಗಿದೆ:

'ನೆಲವಕ್ಕಿ ತಾಯಿಯನು
ತುಳಿದು ಕೊಂದಿತು ಆನೆ
ಒಲವುಕ್ಕಿ ತತ್ತಿಗೆ
ಕುಳಿತು ಕೊಟ್ಟಿತು ಕಾವ'

ಕಸ್ತೂರಿಯವರು ಮನಸ್ಸು ಮಾಡಿದ್ದರೆ ಇಂತಹ ಮುಕ್ತಕಗಳನ್ನು ಇನ್ನೂ ರಚಿಸಿರುತ್ತಿದ್ದರೇನೊ. ಆದರೆ ಅವರ ಹಾಸ್ಯಪ್ರಿಯ ಮನಸ್ಸು ಅಣಕುವಾಡುಗಳಿಗೇ ಹೆಚ್ಚಾಗಿ ಒಲಿದಂತಿದೆ. ಅಣಕುವಾಡುಗಳ ರಚನೆಯಲ್ಲಿ ಕಸ್ತೂರಿ ಅಗ್ರಗಣ್ಯರೆನಿಸುತ್ತಾರೆ. ಇಲ್ಲಿ ಇಂಗ್ಲಿಷ್ ಶಬ್ದಗಳು ಕನ್ನಡದ ರೂಪ ತಾಳುತ್ತವೆ. ತ್ರಿಪದಿ, ಷಟ್ಪದಿ, ರಗಳೆ, ಕಂದ ಪದ್ಯಗಳಲ್ಲಿ ಅಣಕುವಾಡುಗಳನ್ನು ರಚಿಸಿದ್ದಾರೆ. ಇದಕ್ಕೆ ಬಳಸಿರುವುದು 'ಸ್ವಚ್ಛಂದಸ್ಸು' ಎಂದು ಅವರೇ ಹೇಳಿಕೊಂಡಿದ್ದಾರೆ. ತಮ್ಮ ಅಣಕುವಾಡುಗಳನ್ನು 'ಮೇಲು ಕವಿತೆಗಳಿಗೆ ಬರೆದ ಕೀಳು ಕವಿತೆಗಳು' ಎಂದು ಕರೆದುಕೊಂಡಿದ್ದಾರೆ. ಎಂತಹ ಬಿಗುಮುಖವನ್ನೂ ನಗಿಸುವಲ್ಲಿ ಈ ಅಣಕವಾಡುಗಳು ಯಶಸ್ವಿಯಾಗುತ್ತವೆ.

## ಕಾದಂಬರಿಗಳು

ಕಸ್ತೂರಿಯವರು ಕನ್ನಡ ಕಲಿತು ಕೃತಿ ರಚನೆಗೆ ತೊಡಗಿಕೊಂಡ ಸಂದರ್ಭದಲ್ಲಿ ಕನ್ನಡದಲ್ಲಿ ಕಾದಂಬರಿ ಪ್ರಕಾರ ಸ್ಥಿರವಾಗಿ ಬೆಳೆದಿತ್ತು. ಅನಕೃ, ಶಿವರಾಮ ಕಾರಂತರು ಆದಾಗಲೇ ಕಾದಂಬರಿಗಳನ್ನು ಜನಪ್ರಿಯಗೊಳಿಸಿದ್ದರು. ಕಾದಂಬರಿಗಳಲ್ಲಿ ಅಲ್ಲಲ್ಲಿ ಹಾಸ್ಯ ಸನ್ನಿವೇಶಗಳು ಹೊರಹೊಮ್ಮಿದ್ದರೂ, ನಗೆ ಕಾದಂಬರಿ ಎಂಬ ವಿಶಿಷ್ಟ ಪ್ರಕಾರವೊಂದು ರೂಪುಗೊಂಡಿರಲಿಲ್ಲ. ಹಲವಾರು ಲೇಖಕರು ವಿಡಂಬನೆಯನ್ನೇ

ವಸ್ತುವಾಗಿಸಿಕೊಂಡು ನಗೆ ಪ್ರಬಂಧ, ಹರಟೆಗಳನ್ನು ಬರೆದಿದ್ದರು. ಆದರೆ ಪೂರ್ಣ ಕಾದಂಬರಿಯನ್ನು ಹಾಸ್ಯದ ವಶಕ್ಕೊಪ್ಪಿಸಿದ ಕೀರ್ತಿ ಕಸ್ತೂರಿಯವರದು.

ವಿನೋದ ಸಾಹಿತ್ಯಕ್ಕೆ ಸೇರಬಹುದಾದ ಆರು ಕಾದಂಬರಿಗಳನ್ನು ಕಸ್ತೂರಿಯವರು ಬರೆದಿದ್ದಾರೆ. ಗಾಳಿಗೋಪುರ, ಗೃಹದಾರಣ್ಯಕ, ಚಕ್ರದೃಷ್ಟಿ, ರಂಗನಾಯಕಿ, ಶಂಖವಾದ್ಯ- ಹಾಸ್ಯಮಯವೆನ್ನಬಹುದಾದರೆ, ಚೆಂಗೂಲಿ ಚೆಲುವ ವಿಭಿನ್ನ ರೀತಿಯದು. ನಾಟಕಗಳಲ್ಲಿ ನಗಿಸುವುದನ್ನೇ ಮುಖ್ಯ ಉದ್ದೇಶ ಮಾಡಿಕೊಂಡಿದ್ದ ಕಸ್ತೂರಿಯವರು ಕಾದಂಬರಿಗಳಲ್ಲಿ ಗಂಭೀರ ಚಿಂತನೆಯನ್ನೂ ನಡೆಸಿದ್ದಾರೆ. ಇಂಗ್ಲಿಷ್ ಸಾಹಿತ್ಯದಲ್ಲೇ ಅತಿ ಪ್ರಸಿದ್ಧವಾದ ಲೂಯಿ ಕ್ಯಾರೊಲ್ ಬರೆದ Alice in Wonderland ಕೃತಿಯನ್ನು ಅಳವಡಿಸಿ ಬರೆದ 'ಪಾತಾಳದಲ್ಲಿ ಪಾಪಚ್ಚಿ' ಶಿಶುಸಾಹಿತ್ಯ ಪ್ರಕಾರಕ್ಕೆ ಸೇರುವ ಒಂದು ಕಾದಂಬರಿ.

೧೯೪೪ರಲ್ಲಿ ಪ್ರಕಟವಾದ 'ಶಂಖವಾದ್ಯ' ಕಾದಂಬರಿಯು ಪರಿಸರದ ಪ್ರಭಾವ ವ್ಯಕ್ತಿಯ ಒಳಮನಸ್ಸನ್ನು ಹೇಗೆ ಮಾರ್ಪಾಡಿಸುತ್ತಾ ಹೋಗುತ್ತದೆ ಎಂಬುದನ್ನು ನವಿರಾಗಿ ಚಿತ್ರಿಸಿದೆ. ಹೆಂಡತಿಯ ಅತಿ ಪ್ರೀತಿಯ ಹಿಂದಿರುವ ದಬ್ಬಾಳಿಕೆಯ ಮನೋಭಾವಕ್ಕೆ ಈ ಕಾದಂಬರಿ ಕನ್ನಡಿ ಹಿಡಿಯುತ್ತದೆ.

೧೯೫೫ರಲ್ಲಿ ಪ್ರಕಟವಾದ 'ಗೃಹದಾರಣ್ಯಕ' ತನ್ನ ಶೀರ್ಷಿಕೆಯಿಂದಲೇ ಮನ ಸೆಳೆಯುವ ಕಾದಂಬರಿ. ಮನೆಯ ಸದಸ್ಯರ ನಡುವೆ ಉಂಟಾಗುವ ವಿರಸಗಳು, ಮನಸ್ತಾಪಗಳಿಂದಾಗಿ ಬದುಕು ಕಹಿಯಾಗಿ ಗೃಹವೇ ಅರಣ್ಯವೆನಿಸುವುದು ಸಹಜ. ಇದು ಮನೆಮನೆಗೂ ಅನ್ವಯಿಸುವ ಉಪನಿಷತ್ತು. ಇದನ್ನೇ ಈ ಕಾದಂಬರಿ ಸೊಗಸಾಗಿ ಅನಾವರಣಗೊಳಿಸುತ್ತಾ ಹೋಗುತ್ತದೆ.

'ಚೆಂಗೂಲಿ ಚೆಲುವ' ಒಬ್ಬ ವಾಚ್‌ಮನ್ ಜೀವನ ಕಥನ. ಮನೆ ಕಟ್ಟಿದ ಮೇಲೆ ನಾವು ಮೊದಲು ಓಡಿಸುವುದು ವಾಚ್‌ಮ್ಯಾನನ್ನು. ಆದರೆ ಕಸ್ತೂರಿಯವರು ಹಾಗೆ ಮಾಡದೆ, ಅವನನ್ನು ಕೆಲಕಾಲ ಉಳಿಸಿಕೊಂಡು, ಕುರುಕಲು ತಿಂಡಿಯನ್ನು ಅವನ ಮುಂದಿಟ್ಟು, ಅವನ ಆತ್ಮಕಥನ ಕೇಳುತ್ತಾ ಬರೆದ ಜೀವನ ಕಾದಂಬರಿ. ಇಂತಹ ಕೆಲಸ ಕಸ್ತೂರಿಯವರಿಂದ ಮಾತ್ರ ಸಾಧ್ಯವೆನ್ನಿಸುತ್ತದೆ. ಬಡವರ ಬಗ್ಗೆ ಅವರಿಗಿದ್ದ ಪ್ರೀತಿ, ವಿಶ್ವಾಸ, ಗೌರವವನ್ನು ಈ ಕಾದಂಬರಿಯಲ್ಲಿ ನೋಡಬಹುದು.(ಆಧಾರ ೪)

'ಚಕ್ರದೃಷ್ಟಿ' ಕಾದಂಬರಿಯಲ್ಲಿ ನಾಯಕನನ್ನು ಅವನ ಸುತ್ತಮುತ್ತಲಿನ ಪಾತ್ರಗಳ ಮೂಲಕ ಪರಿಚಯಿಸುವ ವಿನೂತನ ಪ್ರಯೋಗ ಮಾಡಲಾಗಿದೆ. ಕಸ್ತೂರಿಯವರು ಸಾಯಿಬಾಬರ ಸನ್ನಿಧಿಯಲ್ಲಿ ನೆಲೆಗೊಂಡ ನಂತರವೂ ಅವರ ಹಾಸ್ಯ ದೃಷ್ಟಿ

ಮಸುಕಾಗಿರಲಿಲ್ಲವೆಂಬುದಕ್ಕೆ ನಿದರ್ಶನ ಅವರ 'ರಂಗನಾಯಕಿ' ಕಾದಂಬರಿ. ಬಹಳ ಕಾಲದ ಅಂತರದ ನಂತರ ಬಂದ ಈ ಕಾದಂಬರಿ ಮಧ್ಯಮವರ್ಗದಲ್ಲಿ ಸಾಮಾನ್ಯವಾಗಿದ್ದ ಎರಡನೆಯ ಮದುವೆ, ಅದರ ತಾಪತ್ರಯಗಳನ್ನು ತಿಳಿಹಾಸ್ಯದ ಮೂಲಕ ನಿರೂಪಿಸಿದೆ.

## ಕಸ್ತೂರಿ ಗಾದೆಗಳು

ಬಹುಮುಖ ಪ್ರತಿಭೆಯ ಕಸ್ತೂರಿಯವರು ಕೈಹಾಕದ ಕ್ಷೇತ್ರವಿಲ್ಲ. 'ಪಿಲ್ ನುಂಗಿ ಸಾಯದವನು ಬಿಲ್ ನುಂಗಿ ಸತ್ತಾನೇ?', 'ಮಕ್ಕಳಿಗೆ ಶಿಶುವಿಹಾರ, ದೊಡ್ಡವರಿಗೆ ಉಪಕಾರ', 'ತಾನುಂಟೋ ಮೂರು ವೊಳವುಂಟೋ', 'ಪಾಪಿ ಬಸ್ಸಿಗೆ ಹೋದರೆ ಮೊಣಕಾಲು ಮಡಿಸಲು ಜಾಗವಿಲ್ಲ', 'ಬೊಗಳೋ ಹುಡುಗ ಬರೆಯೋದಿಲ್ಲ, ಬರೆಯೋ ಹುಡುಗ ಬೊಗಳೋದಿಲ್ಲ' , 'ಪಾಲಿಗೆ ಬಂದವನೇ ಪುರುಷಾಮೃಗ' ಇಂತಹ ಹಲವಾರು ನವೀನ ಗಾದೆಗಳನ್ನು ತಮ್ಮ ಪ್ರತಿಭೆಯಿಂದ ಕಸ್ತೂರಿಯವರು ಸೃಷ್ಟಿಸಿದರು. ಹಿಂದೆಂದೂ ಕಂಡು ಕೇಳರಿಯದ ಹೊಸ ಪ್ರಯೋಗಗಳನ್ನು ಹಾಸ್ಯಸಾಹಿತ್ಯದಲ್ಲಿ ಮಾಡಿ ತೋರಿಸಿದರು.

## ಅನರ್ಥಕೋಶ

ಕಸ್ತೂರಿಯವರು ಆಂಬ್ರೋಸ್ ಬಿಯರ್ಸ್‌ನ 'ಡೆವಿಲ್ಸ್ ಡಿಕ್ಷನರಿ' ಮತ್ತು 'ಕಾಮಿಕ್ ಡಿಕ್ಷನರಿ'ಯನ್ನು ಹೋಲುವ ಹೊಸದೊಂದು ಪ್ರಕಾರವನ್ನು ಕನ್ನಡದಲ್ಲಿ ಸೃಷ್ಟಿಸಿ ಅದನ್ನು 'ಅನರ್ಥಕೋಶ'ಎಂದು ಕರೆದರು. ಈ ಕೋಶವನ್ನು ಓದುವುದು ಹೇಗೆಂಬ ಸೂಚನೆಯನ್ನೂ ಕೊಟ್ಟಿದ್ದಾರೆ: 'ಒಂದೇ ಕೂರಲ್ಲಿ ಓದಬೇಡಿ, ಕೈಗೆಟುಕುವಂತೆ ಇಟ್ಟುಕೊಳ್ಳಿ. ಕಣ್ಣಲ್ಲೇನೋ ಬಂದು, ತುಟಿಯಲ್ಲೇನೋ ನಿಂತಾಗ, ಸರಕ್ಕನೆ ನಾಲ್ಕೈದು ಮಾತುಗಳನ್ನು ಓದಿ; ಥಟಕ್ಕನೆ ರುಚಿ ಗೊತ್ತಾಗದಿದ್ದರೆ ಎರಡು ಬಾರಿ ಆಕಳಿಸಿ, ಗ್ರಂಥವನ್ನು ದೂರದಲ್ಲಿರಿಸಿ, ಸಮಾಧಾನವಾಗಿರಿ'.

ಈ ಅನರ್ಥಕೋಶದಲ್ಲಿ ಕಸ್ತೂರಿಯವರು ಹೊಸ ಪದಗಳನ್ನು ಹುಟ್ಟು ಹಾಕಿದ್ದಾರೆ. ಇಂಗ್ಲಿಷಿನ ಪದಗಳನ್ನು ಕಡತಂದು ಅದನ್ನು ಕನ್ನಡದ್ದೇನೋ ಎನಿಸಿದ್ದಾರೆ. ಕಸ್ತೂರಿಯವರ ಅನರ್ಥಕೋಶದ ಸೊಬಗನ್ನು ಓದಿಯೇ ಸವಿಯಬೇಕು. ಪ್ರತಿ ಪದಕ್ಕೂ ಕಸ್ತೂರಿಯವರು ಸೃಷ್ಟಿಸಿರುವ ಹೊಸ ಅರ್ಥಗಳು ಉಕ್ಕಿಸುವ ನಗೆಯ ಅಲೆಯಲ್ಲಿ ಓದುಗ ಕೊಚ್ಚಿ ಹೋಗುತ್ತಾನೆ. ಜಿ.ಎಸ್.ಶಿವರುದ್ರಪ್ಪನವರಿಗೆ 'ದಿಬ್ಬಯ್ಯ' ಎಂಬ ಗುಪ್ತನಾಮವನ್ನು ಸೂಚಿಸಿದವರು ಕಸ್ತೂರಿಯವರು. ಆಗ ಅವರಿಬ್ಬರೂ ದಾವಣಗೆರೆಯ ದಿಬ್ಬವೊಂದರ ಮೇಲೆ ಕೂತಿದ್ದರಿಂದ ಈ ಪದ ಸೃಷ್ಟಿಯಾಯಿತಂತೆ.

ಹೀಗೆ ಕೂತಲ್ಲಿ, ನಿಂತಲ್ಲಿ ಇದ್ದಕ್ಕಿದ್ದಂತೆ ಹೊಸ ಶಬ್ದಗಳನ್ನು ಹುಟ್ಟುಹಾಕುವ ಚಮತ್ಕಾರ ಕಸ್ತೂರಿಯವರಲ್ಲಿತ್ತು. ಪದಗಳನ್ನು ಒಡೆಯುವುದು, ತಿರುಚುವುದು,

ಪದಗಳೊಡನೆ ಆಟವಾಡುವುದು ಅವರಿಗೆ ಸಹಜವಾಗಿ ಬರುತ್ತಿತ್ತು. ಗಾದೆಗಳನ್ನು ತಿರುಚಿ ಹೊಸ ಗಾದೆಗಳನ್ನು ಹೊಸೆಯುತ್ತಿದ್ದರು. ದೇವಸ್ಥಾನಗಳಲ್ಲಿ ಕೊಂಚವೇ ಸಿಗುವ ಪಂಚಾಮೃತಕ್ಕೆ 'ಕೊಂಚಾಮೃತ' ಎಂದು ಹೆಸರಿಟ್ಟು ಎಲ್ಲರನ್ನೂ ನಗಿಸುತ್ತಿದ್ದರಂತೆ. ಈ ರೀತಿ ಪ್ರತಿ ಶಬ್ದಾರ್ಥಗಳಿಗೂ ವಕ್ರಾರ್ಥ, ವ್ಯಂಗ್ಯಾರ್ಥಗಳನ್ನು ಕಲ್ಪಿಸಿ ಓದುಗರ ಹೊಟ್ಟೆ ಹುಣ್ಣಾಗುವಂತೆ ನಗಿಸಿದ್ದಾರೆ. ಜೊತೆಗೇ ಓದುಗರನ್ನು ಹೊಸ ದಿಕ್ಕಿನ ಯೋಚನೆಗೆ ಹಚ್ಚಿದ್ದಾರೆ.

ಕಸ್ತೂರಿಯವರ ಅನರ್ಥಕೋಶದ ಒಂದೆರಡು ಪದಗಳನ್ನು ಉದಾಹರಿಸುವುದಾದರೆ:

ಖುದಾಸೀನ-ದೇವರಿದ್ದಾನೆ ಎಂದು ಉದಾಸೀನನಾಗಿರುವುದು

ಕಡಲೆ-ಹಲ್ಲಿದ್ದಾಗ ಸಿಗದ ವಸ್ತು

ವಸಂತ-ಕವಿಗಳಿಗೆ ಹುಚ್ಚು ಬರುವ ಕಾಲ

ಸಾಲಗ್ರಾಮ-ಸಾಲದಿಂದ ಕಟ್ಟಿರುವ ಮನೆಗಳ ಸಾಲು

ವಧು-ನಾವು ಮಾವನಿಂದ ಪಡೆದ ಮೊದಲನೆಯ ವಸ್ತು

ಕ್ಷಾಮಧೇನು-ಬಡಕಲು ಹಸು

ಕೇಳು-ಜನಮೇಜಯ ಮಹಾರಾಜನಿಗೆ ಮುನಿ ಆಗಾಗ ಆಜ್ಞಾಪಿಸುತ್ತಿದ್ದದ್ದು

**ಉಪಸಂಹಾರ**

ನಾ. ಕಸ್ತೂರಿಯವರು ಅನೇಕ ಕೃತಿಗಳನ್ನು ರಚಿಸಿದ್ದರೂ ಅವುಗಳಲ್ಲಿ ಬಹುಪಾಲು ನಮ್ಮ ಓದಿಗೆ ಲಭ್ಯವಿಲ್ಲ ಎಂಬುದು ದುರ್ದೈವದ ಸಂಗತಿ. ಈ ಲೇಖನವನ್ನು ಸಿದ್ಧಪಡಿಸುವಾಗ ನನಗೆ ಅವರ ಮೂಲಕೃತಿಗಳಾವುವೂ ಓದಿಗೆ ಸಿಗಲಿಲ್ಲ. ಇಂತಹ ಅಮೂಲ್ಯ ಕೃತಿಗಳ ಹಕ್ಕುಗಳನ್ನು ಹೊಂದಿರುವವರು ಅವುಗಳನ್ನು ಮರುಮುದ್ರಿಸುವ ಮೂಲಕ ಕಸ್ತೂರಿಯವರ ಬರವಣಿಗೆ ಸಾಹಿತ್ಯಾಸಕ್ತರ ಕೈಸೇರುವಂತಾಗಲಿ ಎಂದು ಕೇಳಿಕೊಳ್ಳುತ್ತಿದ್ದೇನೆ. ಕೈಗೆಟುಕಿದ ಸೀಮಿತ ಮಾಹಿತಿಯಿಂದಾಗಿ ಈ ಲೇಖನ ಕಸ್ತೂರಿಯವರ ಸಮಗ್ರ ಸಾಹಿತ್ಯದ ಒಂದು ಸ್ಥೂಲ ಪರಿಚಯ ಮಾತ್ರವಾಗಿದೆ.

ಕಸ್ತೂರಿ ಎಂಬ ಹೆಸರಿನಲ್ಲೇ ಕನ್ನಡದ ಕಂಪು ತುಂಬಿರುವಂತೆ, ಕಸ್ತೂರಿಯವರ ಸಾಹಿತ್ಯದಲ್ಲೂ 'ನಗೆಮಲ್ಲಿಗೆಯ' ಪರಿಮಳ ಪಸರಿಸಿದೆ. ತಮಿಳು ಭಾಷಿಗರಾಗಿದ್ದು, ಕೇರಳದಲ್ಲಿ ಹುಟ್ಟಿ, ಬೆಳೆದು, ಆಂಧ್ರದ ಪುಟ್ಟಪರ್ತಿಯಲ್ಲಿ ವಿಶ್ರಾಂತರಾದ

ಕಸ್ತೂರಿಯವರು ತಮ್ಮ ವೃತ್ತಿ ಜೀವನ ನಡೆಸಿದ್ದು, ಸಾಮಾಜಿಕ ಕಾರ್ಯಕರ್ತರಾಗಿ ಸೇವೆ ಸಲ್ಲಿಸಿದ್ದು ಕನ್ನಡದ ನೆಲದಲ್ಲಿ. ಹುಟ್ಟಾ ಕನ್ನಡಿಗರನ್ನೂ ಮೀರಿಸುವಂತೆ ನಮ್ಮೀ ಭಾಷೆಯನ್ನು ಕೈವಶವಾಗಿಸಿಕೊಂಡಿದ್ದ ಕಸ್ತೂರಿ ನಿಜವಾಗಿಯೂ ಕನ್ನಡ ಕಸ್ತೂರಿಯೇ! ತಾವು ಪ್ರಬುದ್ಧ ಜೀವನ ನಡೆಸಿದ ನೆಲದ ಭಾಷೆಯಲ್ಲಿ ಕಸ್ತೂರಿಯವರು ಬರೆಯದೇ ಇದ್ದಿದ್ದರೆ ನಮ್ಮ ಕನ್ನಡ ಸಾರಸ್ವತಲೋಕಕ್ಕೆ ಆಗಿರುತ್ತಿದ್ದ ನಷ್ಟ ಊಹೆಗೂ ನಿಲುಕದ್ದು!

## ಕೃತಜ್ಞತೆಗಳು:

ಕಸ್ತೂರಿಯವರ ಕುರಿತಾದ ಮಾಹಿತಿ ಅಭಾವದಿಂದ ಬಳಲುತ್ತಿದ್ದಾಗ, ತಮ್ಮಲ್ಲಿರುವ ಡಾ. ಎ.ಎಸ್. ವೇಣುಗೋಪಾಲ್ ಅವರ ನಾ. ಕಸ್ತೂರಿ ಪುಸ್ತಕದ ಕೆಲವು ಪುಟಗಳನ್ನು ಈಮೈಲ್ ಮೂಲಕ ಕಳುಹಿಸಿಕೊಟ್ಟ ಧಾರವಾಡದ ಹಿರಿಯ ಮಿತ್ರರಾದ ಶ್ರೀಯುತ ಸುನಾಥ್ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಆಧಾರಗಳು

೧. ಬೆಸ್ಟ್ ಆಫ್ ಕಸ್ತೂರಿ – ಸಂ. ವೈ.ಎನ್. ಗುಂಡೂರಾವ್, ಅಂಕಿತ ಪ್ರಕಾಶನ, ೨೦೦೫

೨. ನಾ. ಕಸ್ತೂರಿ – ಲೇಖಕರು, ಡಾ. ಎ.ಎಸ್. ವೇಣುಗೋಪಾಲ್

೩. ಚಿತ್ರಗಳು ಪತ್ರಗಳು – ಎ.ಎನ್. ಮೂರ್ತಿರಾವ್

೪. ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟಿತ ಲೇಖನ (೧೧/ಸೆಪ್ಟೆಂಬರ್/೨೦೦೫)



# ಜಿ.ಪಿ. ರಾಜರತ್ನಂ

## ಅನುರಾಧ ಅರುಣ್

'ಬಣ್ಣದ ತಗಡಿನ ತುತ್ತೂರಿ, ಕಾಸಿಗೆ ಕೊಂಡನು ಕಸ್ತೂರಿ......'ಇದೇನಪ್ಪ ಮಕ್ಕಳ ಪದ್ಯದ ಬಗ್ಗೆ ಬರೀತಿದಾಳೆ ಅನಿಸುತ್ತಿದೆ ಅಲ್ಲವೇ? ನಿಜ. ರಾಜರತ್ನಂ ಮಕ್ಕಳಿಗೆಂದು ಸಾಹಿತ್ಯ ಕಡಿಮೆಯಿದ್ದ ಕಾಲದಲ್ಲಿ ಮನೋಹರವಾಗುವಂತೆ, ಹೃನ್ಮನಗಳಿಗೆ ಹಿತವಾಗುವಂತೆ ಕಥೆ ಹಾಗೂ ಪದ್ಯಗಳನ್ನು ಬರೆದರು. ಗುಬ್ಬಚ್ಚಿ ಪುಸ್ತಕ ಮಾಲೆಯಲ್ಲಿ ಸಣ್ಣ ಮಕ್ಕಳಿಗೆ ಬಾಯಿಗೆ ಹಿತವಾದ ಭಾಷೆ ಮತ್ತು ಮನಸ್ಸಿಗೆ ಹಿತವಾದ ಭಾವ, ಕಣ್ಣಿಗೆ ಹಿತವಾದ ಮುದ್ರಣ, ಕೈಗೆ ಹಿತವಾದ ಕಾಗದ ಎಲ್ಲ ಬಳಸಿ ಪುಸ್ತಕಗಳನ್ನು ರೂಪಾಯಿಗೊಂದರಂತೆ ಮಾರುತ್ತಿದ್ದರು. ಈ ಮಕ್ಕಳ ಸಾಹಿತ್ಯದಿಂದಲೇ ನಮ್ಮ ಅವರ ಪರಿಚಯ ಮಲ್ಲೇಶ್ವರದಲ್ಲಿ ಬೆಳೆದದ್ದು. ಸದಾ ಅವರ ಮನೆಗೆ ಹೋಗಿ ಕಥೆ ಕೇಳುವುದು ನಮ್ಮ ಅಭ್ಯಾಸಗಳೊಂದಾಗಿತ್ತು. ಪದ್ಯಗಳನ್ನು ಅವರ ಬೊಚ್ಚು ಬಾಯಿಂದಲೇ ಕೇಳುವುದೆಂದರೆ ನಮಗೆಲ್ಲ ಬಹಳ ಸಂತೋಷ. 'ಅಡು ಮುಟ್ಟದ ಸೊಪ್ಪಿಲ್ಲ!!'ಎಂಬಂತೆ ರಾಜರತ್ನಂ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಅದರಲ್ಲಿ ಹಾಸ್ಯದ ಸ್ಥಾನ ವಿಶಿಷ್ಟವಾದದ್ದು.

ಡಿಸೆಂಬರ್ ೫, ೧೯೦೪ರಲ್ಲಿ ಮೈಸೂರಿನಲ್ಲಿ ಹುಟ್ಟಿದ ಜಿ.ಪಿ. ರಾಜರತ್ನಂ ಗುಂಡ್ಲು ಪಂಡಿತ ವಂಶಕ್ಕೆ ಸೇರಿದವರು. ತಾಯಿಯ ಪ್ರೀತಿ ಕಾಣದೆ ತಂದೆಯ ಹಾಗೂ ಅಜ್ಜಿಯ ಅಕ್ಕರೆಯಲ್ಲಿ ಬೆಳೆದರು ರಾಜರತ್ನಂ. ಮನೆಯಲ್ಲಿ ಕಡು ಬಡತನ. ವಿದ್ಯಾರ್ಜನೆಗಾಗಿ

ಪಡಬಾರದ ಕಷ್ಟ ಪಟ್ಟವರು. ನಮ್ಮಕಷ್ಟಕ್ಕೆ ನಾವಾಗಿ, ಇದ್ದುದರಲ್ಲಿ ಹಾಯಾಗಿ ಬಾಳಬೇಕೆಂದರೆ, ಸುತ್ತಿನವರು ಅನೇಕ ಸಲ ಸುಮ್ಮನೆ ಕಾಟ ಕೊಡುವುದುಂಟು. ಅಂಥ ಸಂದರ್ಭಗಳಲ್ಲಿ, ಮನಸ್ಸಿನಲ್ಲಿ ಕೊರತೆ ಪಡುತ್ತಾ ಕೊರಗುವುದಕ್ಕಿಂತ ಗದ್ಯಪದ್ಯಗಳ ಮೂಲಕ ಕಾರಿಬಿಡುವುದು ಸೂಕ್ತವೆಂದು ತಿಳಿಸುತ್ತಾರೆ. ಅನ್ನವಸ್ತ್ರಗಳ ಬಡತನ ಏನೇ ಇದ್ದರೂ, ಮನಸ್ಸಿನ ಬಡತನ ಮಾತ್ರ ಇರಬಾರದು. ಸ್ವಾತಂತ್ರ್ಯಪೂರ್ವದಲ್ಲೇ ಕನ್ನಡ ಎಂ.ಎ. ಮುಗಿಸಿ ಶಿಶುವಿಹಾರ ಹಾಗೂ ತಂದೆಯ ಶಾಲೆಯಲ್ಲಿ ಮೇಷ್ಟ್ರು ಆದರು. ಅಲ್ಲಿಯೇ 'ತುತ್ತೂರಿ' ಶಿಶು ಗೀತೆಗಳ ಸಂಕಲನ ಬರೆದರು. ಬಹಳಷ್ಟು ಕಡೆ ಕೆಲಸಕ್ಕಾಗಿ ಅಲೆದಾಡಿ, ನಿರಾಶರಾಗಿ ಬೆಂಗಳೂರಿಗೆ ಬಂದು ಜನಗಣತಿ ಕಚೇರಿಯಲ್ಲಿ ಕೆಲಸಕ್ಕೆ ಅರ್ಜಿ ಹಾಕಿದರು. ಆದರೆ, ಅಲ್ಲಿದ್ದ ಮಾಸ್ತಿಯವರು ಇವರ ಸಾಹಿತ್ಯ ಸಾಮರ್ಥ್ಯವನ್ನು ಗುರುತಿಸಿ ಖಾಸಗಿಯಾಗಿ ಇವರಿಗೆ ಅಷ್ಟೇ ವೇತನ ಕೊಟ್ಟು ಅವರನ್ನು ಸಾಹಿತ್ಯ ಸೇವೆಯಲ್ಲಿ ತೊಡಗಿಸಿದರು. ಅದೇ ಮುಂದೆ ರಾಜರತ್ನಂ ಅವರಿಂದ ಉತ್ತಮ ಸಾಹಿತ್ಯ ನಿರ್ಮಾಣಕ್ಕೆ ದಾರಿಯಾಯಿತು.

ಅನಂತರದ ದಿನಗಳಲ್ಲಿ ರಾಜರತ್ನಂ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿ ಸೇರಿದರು. ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಯವರು ಸ್ಥಾಪಿಸಿದ್ದ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಅದರ ಘನತೆ, ಕೀರ್ತಿಗಳನ್ನು ಹೆಚ್ಚಿಸಿದರು. ಮುಂದೆ ನೂರಾರು ಮಕ್ಕಳ ಗೀತೆಗಳು ಬಂದುವು. ಕನ್ನಡದ ಅನನ್ಯ ಕೃತಿ 'ರತ್ನನ ಪದಗಳು' ಬಂತು. 'ಮಹಾಕವಿ ಪುರುಷ ಸರಸ್ವತಿ' ಬಂತು. ಜೈನ, ಬೌದ್ಧ ಧಾರ್ಮಿಕ ಚಿಂತನೆಯ ಗ್ರಂಥಗಳು ಬಂದುವು. ೧೯೬೯ ರಲ್ಲಿ ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ ಪಡೆದ ರಾಜರತ್ನಂ ಅವರು, ೧೯೭೬ರಲ್ಲಿ ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನ ಹಾಗೂ ಶಿವಮೊಗ್ಗ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ೧೯೭೭ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಡಾಕ್ಟರೇಟ್ ಪ್ರಶಸ್ತಿ ಲಭಿಸಿತು. ೧೯೭೮ರಲ್ಲಿ ದೆಹಲಿಯಲ್ಲಿ ಸುವರ್ಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ೧೯೭೯ರಲ್ಲಿ ಕಣ್ಮರೆಯಾಗುವ ಕೆಲವೇ ದಿನಗಳ ಮುಂಚೆ ಧರ್ಮಸ್ಥಳ ಸಾಹಿತ್ಯ ಸಮ್ಮೇಳನದಲ್ಲಿ ಮಕ್ಕಳ ಸಾಹಿತ್ಯ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು.

ರಾಜರತ್ನಂ ಅವರ ಸಾಹಿತ್ಯ ಸೇವೆಗೆ ಎರಡು ಮುಖ. ಒಂದು ಸಾಹಿತ್ಯ ಸೃಷ್ಟಿ, ಮತ್ತೊಂದು ಸಾಹಿತ್ಯ ಪರಿಚಾರಿಕೆ. 'ರತ್ನನ ಪದಗಳು' ರಾಜರತ್ನಂ ಅವರ ವಿಶಿಷ್ಟ ಕೊಡುಗೆ. ಇದರಲ್ಲಿ ಅವರ ಜೀವನ ದರ್ಶನವಿದೆ. ವೈಷ್ಣವ ಸಂಪ್ರದಾಯದಲ್ಲಿ ಬೆಳೆದು, ಕುಡುಕರಲ್ಲದೆಯೇ ಬಡ ಕುಡುಕನೊಬ್ಬನನ್ನು ತಮ್ಮಲ್ಲಿ ಆವಿರ್ಭವಿಸಿಕೊಂಡು ಅವನ ಕಾಣ್ಕೆ, ನೋವು, ನಲಿವು, ಒಲವು, ಗೆಲವು, ಸೋಲು ಎಲ್ಲವನ್ನೂ ಈ 'ಪದ'ಗಳಲ್ಲಿ

ತುಂಬಿಸಿದ್ದಾರೆ. ಅವರ ಪ್ರಮುಖ ಕೃತಿಗಳು: ರತ್ನನ ಪದಗಳು, ನಾಗನ ಪದಗಳು, ಮಹಾಕವಿ ಪುರುಷ ಸರಸ್ವತಿ, ಬುದ್ಧನ ಜಾತಕಗಳು, ಧರ್ಮದಾನಿ ಬುದ್ಧ, ಭಗವಾನ್ ಮಹಾವೀರ, ಮಹಾವೀರನ ಮಾತುಕತೆ, ತುತ್ತೂರಿ, ಕಡಲೆಪುರಿ, ಗುಲಗಂಜಿ, ಕಂದನ ಕಾವ್ಯ ಮಾಲೆ ಇತ್ಯಾದಿ. ಗೌತಮ ಬುದ್ಧ–ಪಠ್ಯ ಪುಸ್ತಕವಾಗಿತ್ತು. ಇವರಲ್ಲಿನ ಹಾಸ್ಯ ಪ್ರತಿಭೆಗೆ ಸಾಕ್ಷಿಯಾಗಿರುವುದೆಂದರೆ ರತ್ನನ ಪದಗಳು ಹಾಗೂ ಮಹಾಕವಿ ಪುರುಷ ಸರಸ್ವತಿ.

ತಾವೇ ಪ್ರತಿಭಾವಂತ ಲೇಖಕರಾಗಿದ್ದಾಗಲೂ ಇತರ ಲೇಖಕರ ಸಾಹಿತ್ಯ ಪ್ರಚಾರಕ್ಕೆ ರಾಜರತ್ನಂ ವಿನಿಯೋಗಿಸಿದ್ದಷ್ಟು ಕಾಲ ಹಾಗೂ ಶಕ್ತಿಗಳನ್ನು ಇನ್ನೊಬ್ಬ ಲೇಖಕರು ವಿನಿಯೋಗಿಸಿಲ್ಲವೆಂದು ಡಾ. ಹಾ.ಮಾ. ನಾಯಕರು ಬರೆಯುತ್ತಾರೆ (ಆಧಾರ ೧). ಕೈಲಾಸಂ ತೀರಿಕೊಳ್ಳುವ ಮೂರು ದಿನ ಮುಂಚೆ ರಾಶಿಯವರು ಅವರನ್ನು ನೋಡಲು ಹೋಗಿದ್ದಾಗ ಕೈಲಾಸಂ ರಾಜರತ್ನಂ ಬಗ್ಗೆ ಹೀಗೆ ಹೇಳಿದರಂತೆ(ಆಧಾರ ೨): 'ಅಚ್ಚುಕಟ್ಟಾಗಿ ಸ್ವಂತ ಸಾಹಿತ್ಯಸೃಷ್ಟಿಯನ್ನು ಅವನೇ ಮಾಡಬಲ್ಲ. ಅದಕ್ಕೆಲ್ಲಾ ತುಂಡುಹಾಕಿ ನನ್ನ ನಾಟಕಗಳನ್ನು ಕುರಿತು ಹೋದಲ್ಲೆಲ್ಲ ಪ್ರಚಾರ ಮಾಡುತ್ತಾನೆ. ಕನ್ನಡದ ಪ್ರಚಾರವೇ ಅವನಿಗೆ ಮುಖ್ಯ'. ಕೈಲಾಸಂ ಬಗ್ಗೆ ರಾಜರತ್ನಂಗೆ ಅಪಾರ ಗೌರವ. ಕೈಲಾಸಂ ಅವರ ಸಾಹಿತ್ಯ ಪ್ರಭಾವ, ಭಾಷೆಯ ಬಳಕೆ ರಾಜರತ್ನಂ ಅವರ ಮೇಲೆ ಬಹಳವಾಗಿತ್ತು (ಅಧಾರ ೩).

ಮಾನವನ ಮಾನಸಿಕ ಅಸ್ವಸ್ಥತೆಯನ್ನು ಪರಿಹರಿಸುವ ದಿವ್ಯೌಷಧಿಗಳಲ್ಲಿ ಹಾಸ್ಯವೂ ಒಂದು. ಹಾಸ್ಯ ಮನೋಭಾವನೆಯನ್ನು ಸಹಜವಾಗಿ ಉಳ್ಳವರು ಕೊನೆಯ ಪಕ್ಷ ರಕ್ತದ ಒತ್ತಡವನ್ನಾದರೂ ಕಡಿಮೆ ಮಾಡಿಕೊಳ್ಳುತ್ತಾರೆ. ರಾಜರತ್ನಂಗೆ ಯಾವಾಗಲೂ ಇತರರೊಡನೆ ಹಂಚಿಕೊಳ್ಳುವ ಸಾಮಾಜಿಕ ಗುಣ ಇದೆಯಾಗಿ ಅವರ ಹಾಸ್ಯ ಜೊತೆಯಲ್ಲಿ ನಗುವ ಜನಗಳ ಮುಖದ ಗಂಟು ಮಾಯವಾಗಿಸಿ, ಮಾನಸಿಕ ಸ್ವಾಸ್ಥ್ಯವನ್ನು ಒದಗಿಸುತ್ತದೆ. ನಗುವಿನ ಬಗ್ಗೆ ಬೀಚಿ ಅವರು ಒಂದು ಮಾತು ಹೇಳುತ್ತಾರೆ. 'ಟೂತ್ ಬ್ರಷ್ ಒಂದಕ್ಕೆ ಮಾತ್ರ ಹಲ್ಲು ತೋರಿಸುವ ನಮ್ಮ ಕನ್ನಡ ಜನರಿಗೆ ಕಚಗುಳಿ ಇಡುವ ಸಾಹಸ ಮಾಡುವುದು ಮೂರ್ಖತನದ ಪರಮಾವಧಿಯಾಗುತ್ತದೆ. ಯಾಕೆಂದರೆ ಹಾಸ್ಯವನ್ನು ಸ್ವೀಕರಿಸುವ ಮನಸ್ಸು ಹೇಳುವವನಲ್ಲಿ, ಕೇಳುವವನಲ್ಲಿ ಸಮ ಪ್ರಮಾಣದಲ್ಲಿರಬೇಕು. ಇಲ್ಲದಿದ್ದಲ್ಲಿ, ಕುಂಬಳಕಾಯಿ ಕಳ್ಳನೆಂದರೆ ಹೆಗಲು ಮುಟ್ಟಿ ನೋಡಿಕೊಂಡಂತಾಗುತ್ತದೆ.ಒಂದುಬಾರಿ ಗೆಳೆಯರೊಂದಿಗೆ ಉಭಯಕುಶಲೋಪರಿಯಾಗಿ ಏನ್ರೀ ಗುಟ್ಟಳ್ಳಿ? ಅಂತಾ ಹಾಸ್ಯವಾಗಿ ಮಾತನಾಡಿದಾಗ, ಯಾಕ್ರೀ ಗುಟ್ಟಳ್ಳಿ ಅಂತೀರಾ? ಅಂತಾ ಸಿಡಿಮಿಡಿ ಪ್ರಾರಂಭವಾಯಿತು. ಗುಟ್ಟಳ್ಳಿಯಿಂದ ಬಂದವರನ್ನು ಹಾಗೆನ್ನದೆ ಹಾರೋಹಳ್ಳಿ ಅನ್ನಲಾಗುವುದಿಲ್ಲವಲ್ಲ!'

'ನಮ್ಮ ಕನ್ನಡದಲ್ಲಿಯಂತೂ ಹಿಂದಿನ ಕಾಲದಲ್ಲಿ ನಮ್ಮ ತಾಯಿ ನಕ್ಕದ್ದು ತುಂಬ ಕಡಿಮೆ. ಅಪರೂಪಕ್ಕೆ ಒಬ್ಬ ರತ್ನಾಕರ, ಒಬ್ಬ ಮುದ್ದಣ, ಸ್ವಾತಂತ್ರ್ಯವನ್ನು ವಹಿಸಿ ನಿಸೂರಾಗಿ ನಕ್ಕಿದ್ದುಂಟು. ಆದರೆ ಅವರಿಗೆ ಆ ಕಾಲದಲ್ಲಿ ಅಷ್ಟು ಪ್ರೋತ್ಸಾಹ ದೊರಕಲಿಲ್ಲ. ಮುದ್ದಣನನ್ನು ಆವನ ಹೆಂಡತಿ ಮನೋರಮೆಯೇ 'ನೀಂ ಕಬ್ಬಿಗನೋ? ಸಬ್ಬವಕಾರನೋ(ಹಾಸ್ಯಗಾರನೋ)?' ಎಂದು ತರಾಟೆಗೆ ತೆಗೆದುಕೊಂಡಳು. ಮುದ್ದಣನಾದರೂ 'ಸಾಲ್ಗುಮೀ ಪರಿಹಾಸಂ' ಎಂದು ಮುಂದಿನ ಕತೆಯನ್ನು ಹೇಳಿಕೊಂಡು ಹೋದ.... (ತದನಂತರದಲ್ಲಿ) ಕನ್ನಡಿಗರು ಬೆಳೆದಿದ್ದಾರೆ. 'ನಗೆ ಎಲ್ಲಿರುತ್ತದೋ ಅಲ್ಲಿ ನಂದನ' ಎಂಬುದನ್ನು ಕಂಡುಕೊಂಡಿದ್ದಾರೆ. ನಕ್ಕು ನಗಿಸಲು ಬಲ್ಲವರು ನೂರಾರು ಲೇಖಕರು ತಲೆ ಎತ್ತಿದ್ದಾರೆ. ಹಳೆಯ ಇಲಿಗಳ ಜೊತೆಯಲ್ಲಿ ಎಳೆಯ ಇಲಿಗಳೂ ಕಚಗುಳಿಯಿಡಲು ಕಲಿಯುತ್ತಿವೆ. 'ಒಟ್ಟಿನಲ್ಲಿ ನಮ್ಮ ಜನರ ಹಾಸ್ಯ ಶೃಂಗದಿಂದ ಕನ್ನಡಕ್ಕೆ ಹೊಸ ಕೋಡು ಮೂಡಿದಂತಾಗಿದೆ' ಎಂದು ರಾಜರತ್ನಂ ತಮ್ಮ 'ವಿಚಾರ ರಶ್ಮಿ'ಯಲ್ಲಿ ಬರೆಯುತ್ತಾರೆ (ಆಧಾರ ೪) ಎಂಥಾ ದೊಡ್ಡ ಮಾತು!

'ಇದ್ದದ್ದು ಇದ್ದ ಹಾಗೆ ಹೇಳಿದರೆ ಎದ್ದು ಬಂದು ಎದೆಗೆ ಒದ್ದರಂತೆ!' ಈ ಗಾದೆ ಹಾಸ್ಯಕ್ಕೆ ಬಹಳ ಚೆನ್ನಾಗಿ ಒಪ್ಪುತ್ತದೆ. 'ಪುರುಷ ಸರಸ್ವತಿ'ಯ ಭಿನ್ನಹದಲ್ಲಿ ರಾಜರತ್ನಂ ಹೀಗೆ ಹೇಳಿದ್ದಾರೆ: 'ಇತರರಲ್ಲಿ ಕಂಡುಬರುವ ಅತಿಗಳನ್ನೂ ವಿಕಾರಗಳನ್ನೂ ಸಾಹಿತ್ಯದ ಸೊಬಗಿನಿಂದ ಕಂಡುತೋರುವ ಪದ್ಧತಿ ಲೋಕದ ಎಲ್ಲ ಕಡೆಯೂ ಇದೆ'.

ಬದುಕಿನಲ್ಲಿ ನಗುವಿಗೆ ಕಾರಣವಿರುತ್ತೆ. ಇತರರ ರೀತಿ, ನೀತಿ, ವಿಚಾರಗಳನ್ನು ನೋಡಿ ನಗಲು ವಿಶೇಷ ಸಂಸ್ಕಾರವೇನೂ ಬೇಡ. ಅದನ್ನು ಕಂಡು ನಕ್ಕರೆ, ಆಗ ಆ ನಗುವಿಗೆ ಕೆರಳದಿರಬೇಕಾದರೆ, ಅದಕ್ಕೆ ವಿಶೇಷ ಸಂಸ್ಕಾರ ಬೇಕು. ಅದರಲ್ಲೂ, ತನ್ನ ವಿಕಾರಗಳನ್ನು ಕಂಡು ನಗುವ ಅನ್ಯರೊಡನೆ ತಾನೂ ಒಂದಾಗಿ, ತನ್ನ ವಿಕಾರಗಳಿಂದಾದ ಹಾಸ್ಯವನ್ನು ತಾನೂ ಕಂಡುಕೊಂಡು ನಗಬೇಕಾದರೆ, ಅದಕ್ಕೆ ಬೇಕಾದ ಸಂಸ್ಕಾರಗಳು ಅಷ್ಟಿಷ್ಟಲ್ಲ. ಈ ರೀತಿಯ ಸಂಸ್ಕಾರಗಳು ಕೆಲವು ಜನರಲ್ಲಿ ಸುತರಾಂ ಇರುವುದಿಲ್ಲ. ಹಾಸ್ಯವನ್ನು ಸ್ವೀಕರಿಸುವ ಮನೋಭಾವ ಜನರಲ್ಲಿ ಅದರಲ್ಲೂ ಕನ್ನಡಿಗರಲ್ಲಿ ಯಾವಾಗಲೂ ಅಭಾವವೇ.

ಹಾಗೆಂದು ಬರೆಯುವವರು ನಿಲ್ಲಿಸಿದರೆ ಹಾಸ್ಯಕ್ಕಿರುವ ಶಕ್ತಿಯೇ ನಶಿಸಿ ಹೋಗುತ್ತದೆ.

'ಓದುವವರೋದುವರು ಸಹಿಸದೆ ಸೀದು ಸಿಡಿಮಿಡಿಗೊಂಡು ನಡುವಣ
ಬೀದಿಯಲಿ ಬೈದಾಡುವವರು ಬೈದಾಡುವರು ಬಿಡೆಲಾ

ವೇದನಾಲ್ಕರ ಪಿರಿಯ ಬೊಮ್ಮನ ಮೇದಿನಿಯ ಮೇಲೆತ್ತಿದವನನ

ನಾದಿಮೂರುತಿ ಶಿವನ ನೆನೆಯುತೆ ನುಡಿಯು ತೊಡಗುವೆನು'

–ಎಂದು ರಾಜರತ್ನಂ ತಮ್ಮಲ್ಲಿ ರೂಢಿಸಿಕೊಂಡಿದ್ದ ಹಾಸ್ಯೋಕ್ತಿಯನ್ನು ತಡೆಯದೆಯೆ ಹರಿಬಿಟ್ಟರು (ಆಧಾರ ೫). ಇಲ್ಲದಿದ್ದರೆ, ಅವರಲ್ಲಿದ್ದ ಅಪಾರ ಹಾಸ್ಯವನ್ನೂ ಅವರ ಇನ್ನೊಂದು ಮುಖವನ್ನು ಮಣ್ಣುಗೂಡಿಸಿಬಿಟ್ಟಿರುತ್ತಿತ್ತು ಆಗಿನ ಸಮಾಜ. ಬದುಕಿನಲ್ಲಿ ಸಾಕಷ್ಟು ಕಷ್ಟಗಳನ್ನು ಅನುಭವಿಸಿದ್ದವರಾದ್ದರಿಂದ ಅಹಂ ಎನ್ನುವುದು ಅವರ ಹತ್ತಿರ ಸುಳಿದಿರಲಿಲ್ಲ. ಆದರೂ ತಾವು ನಂಬಿದ್ದನ್ನು ಲೋಕಕ್ಕೆ ತಿಳಿಸುವ ಕಾರ್ಯದಲ್ಲಿ ಯಶಸ್ಸನ್ನು ಕಂಡವರು. ಜೀವನದಲ್ಲಿ ಸಣ್ಣ ಸಣ್ಣ ವಿಷಯಗಳಲ್ಲಿ ಅತ್ಯಂತ ಸುಖ ಕಾಣುವ ತೃಪ್ತಿಜೀವಿ ರಾಜರತ್ನಂ. ಈ ಮಾತುಗಳನ್ನು 'ರತ್ನನ ಪದಗಳು'ನಲ್ಲಿ ಬರುವ 'ರತ್ನನ್ ಪರ್ಪಂಚ' ದಲ್ಲಿ ಕಾಣಬಹುದಾಗಿದೆ (ಆಧಾರ ೬).

ಯೋಳ್ಕೊಳ್ಳಾಕ್ ಒಂದ್ ಊರು
ತಲೇಮ್ಯಾಗ್ ಒಂದ್ ಸೂರು
ಮಲಗಾಕ್ ಬೂಮ್ತಾಯಿ ಮಂಚ;
ಕೈ ಯಿಡದೋಳ್ ಪುಟ್ನಂಜಿ
ನೆಗನೆಗತ ಉಪ್ಗಂಜಿ
ಕೊಟ್ರಾಯ್ತು ರತ್ನನ್ ಪರ್ಪಂಚ!

ಪದ್ಯದಲ್ಲಿ ಹೇಳಿದಂತೆಯೇ ನಡೆದವರು ಜಿ.ಪಿ. ಥಳುಕಿಲ್ಲ, ಬಳುಕಿಲ್ಲ. ಕಪಟ, ಮೋಸಗಳ ಸ್ನೇಹವಿಲ್ಲ. ಶುಭ್ರ ಶ್ವೇತ ಖಾದಿ ವಸ್ತ್ರಧಾರಿ. ಬಾಯಿ ತುಂಬಾ ನಗು. ಇಷ್ಟು ಕಷ್ಟಗಳನ್ನು ಬಾಳಿನಲ್ಲಿ ಎದುರಿಸಿದ್ದಾರೆಂಬುದರ ಅರಿವೆಯೇ ಇಲ್ಲವೆಂಬಂತೆ ಧೀಮಂತ ವ್ಯಕ್ತಿತ್ವವನ್ನು ಮೆರೆದ ಮಹಾನ್ ತೇಜಸ್ಸು. ನಾಳೆಗೆ ಉಳಿಸಬೇಕೆಂಬುದರಲ್ಲಿ ವಿಶ್ವಾಸವಿಲ್ಲದೆ ತಂದದ್ದರಲ್ಲಿ ಜೀವನ ನಡೆಸುವುದು ಬಾಳಿನ ಆದರ್ಶವನ್ನಾಗಿಸಿಕೊಂಡಿದ್ದರು. ಸರಸದ ಸಂಸಾರ, ವಿರಸವಿಲ್ಲ ಎಂದಲ್ಲ. ಹೆಂಡತಿ ಕೂಡಿಡುವುದೆಂದರೆ, ತಾವು ಸಾಲಮಾಡಲಂಜುವೆ ಆದರೆ ಕೂಡಿಡುವುದು ಭಾದಕವೆನ್ನುತ್ತಾರೆ.

'ರತ್ನನ ಪದಗಳು' ನವೀನ ಪದಗಳ ಗ್ರಾಮೀಣ ಭಾಷೆಯ ಕೃತಿ. ಯಥೇಚ್ಛವಾಗಿ ಗ್ರಾಮೀಣ ಭಾಷೆಯನ್ನು ಉಪಯೋಗಿಸಿರುವುದರಿಂದ ಕನ್ನಡದ ಮರ್ಯಾದೆಯನ್ನು ಹಾಳುಮಾಡುತ್ತಿದ್ದಾನೆಂದು ರಾಜರತ್ನಂ ಅವರ ತಂದೆಗೆ ದೂರಿದವರಿದ್ದಾರೆ. 'ನಿಮ್ಮ ಮಗನಿಗೆ ಬುದ್ಧಿ ಹೇಳಬಾರದೇ?' ಎಂದು ಕೇಳಿದಾಗ ತಂದೆ: 'ಅವನ ಬುದ್ಧಿ ಅವನ ಕೈಯಲ್ಲಿದೆ' ಎಂದರಂತೆ. ತಂದೆಯ ಪ್ರೋತ್ಸಾಹ ಬಹುಮಟ್ಟಿಗೆ ಇವರ ಸಾಹಿತ್ಯ ಕೃಷಿಗೆ

ಸಹಾಯ ಮಾಡಿದೆ ಎನ್ನಬಹುದು. 'ಆಧುನಿಕ ಕಾವ್ಯದಲ್ಲಿ ರತ್ನನ ಪದಗಳು' ಒಂದು ಉಜ್ವಲ ರತ್ನವಾಗಿದೆ. ಹೆಂಡದಂಗಡಿಗಳಲ್ಲಿ ಅಮಲೇರಿದಾಗ ಹಾಡುವವರು ನಿಕೃಷ್ಟ ಸ್ಥಿತಿಯಲ್ಲಿರುವ ಪಾಮರರು. ಆದರೂ ಈ ರತ್ನನ ಪದಗಳಲ್ಲಿ ಒರಟುತನವಾಗಲಿ, ಅಶ್ಲೀಲತೆಯಾಗಲಿ ಇಲ್ಲ. ಮದ್ಯವನ್ನು ಸೇವಿಸುವವರಲ್ಲಿಯೂ ಸದ್ಗುಣಗಳಿರಬಹುದೆಂದು ತೋರಿಸಿ, ಸಂಪ್ರದಾಯದ ಹೆಸರಿನಲ್ಲಿ ನೂರು ಕೋಟಿ ಪಾಪಗಳನ್ನು ಎಸಗುತ್ತಿರುವ ಪುಣ್ಯಾತ್ಮರ ದೋಷಗಳನ್ನು ಬಯಲಿಗೆಳೆಯುತ್ತಾನೆ. ಯೆಂಡಕುಡುಕನ ಜಗತ್ತೆಂಬ ಕನ್ನಡಿಯಲ್ಲಿ ನಿಜವಾದ ಜಗತ್ತಿನ ವಿಲಕ್ಷಣಗಳನ್ನು ಪ್ರತಿಬಿಂಬಿಸಿ ರತ್ನ ತೋರಿಸುತ್ತಾನೆ. ಯೆಂಡಕುಡುಕರ ಜೀವನವನ್ನೂ, ಭಾಷೆಯನ್ನೂ ಇಷ್ಟು ಪರಿಶೀಲಿಸಿ, ಇಷ್ಟು ತಾದಾತ್ಮ್ಯದಿಂದ ಅವರು ಹಾಡುಗಳನ್ನು ಹಾಡಿರುವುದು ಶ್ಲಾಘನೀಯ ವಿಷಯ. 'ಈ ಪದಗಳ ಮೂಲಕ ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಮಾರ್ಗವನ್ನು ರತ್ನ ತೆರೆದಿದ್ದಾನೆ' (ಅಧಾರ ೬).

ಎಂದೂ ಒಂದು ಹನಿ ಮದ್ಯ ಮುಟ್ಟದ ಈ ವೈಷ್ಣವ ಸಂಪ್ರದಾಯಸ್ಥನಿಗೆ ಒಬ್ಬ ಕುಡುಕನ ಅಂತಃಕರಣ ಹೇಗೆ ಮುಟ್ಟಿತೋ ಎಂಬುದು ಆಶ್ಚರ್ಯದ ಸಂಗತಿ. ಸ್ವಾನುಭವವೇ ಉತ್ತಮ ಸಾಹಿತ್ಯಕ್ಕೆ ಆಧಾರ ಎನ್ನುವವರಿಗೊಂದು ಸವಾಲು!

ಹೆಂಡ ಅಪವಿತ್ರ ಎನ್ನುವ ಭಾವಕ್ಕೆ ವಿರುದ್ಧವಾಗಿ 'ರತ್ನ' ಬ್ರಮ್ಮನಿಗೆ ಈ ಪ್ರಾರ್ಥನೆ ಸಲ್ಲಿಸುತ್ತಾನೆ:

**ಪ್ರಾರ್ತನೆ**

ಬ್ರಮ್ಮ! ನಿಂಗೆ ಜೋಡಿಸ್ತೀನಿ
ಯೆಂಡ ಮುಟ್ಟಿದ್ ಕೈನ!
ಬೂಮೀ ಉದ್ಕ ಬೋಗ್ಗಿಸ್ತೀನಿ
ಯೆಂಡ ತುಂಬ್ಕೊಂಡ್ ಮೈನ!
ಬುರ್ ಬುರ್ ನೊರೆ ಬಸಿಯೋವಂತ
ಒಳ್ಳೆ ವುಳಿ ಯೆಂಡ
ಕೊಡ್ತೀನ್ ನನ್ದು ಪ್ರಾರ್ತ್ನೆ ಕೇಳು
ಸರಸೋತಮ್ಮನ್ ಗಂಡ!

ಕುಡುಕರ ಜೀವನ, ಅವರ ಮಾತು ಕತೆ ಬಗ್ಗೆ ಬರೆಯಬೇಕಾದರೆ ಹೆಂಡಕುಡುಕರನ್ನೇ ಆಶ್ರಯಿಸಬೇಕೆಂದು ರಾಜರತ್ನಂ ನಿಶ್ಚಯಿಸಿದರು. ಕುಡುಕರ ನಡುವೆ ಓಡಾಡಿ

ಅವರೊಂದಿಗಿರಲು ಯತ್ನಿಸುತ್ತಿದ್ದರು. ಕೈಯಲ್ಲಿ ಪುಡಿಕಾಸಿದ್ದ ಒಬ್ಬ, ಕೈಯಲ್ಲಿ ಅಷ್ಟೂ ಕಾಸಿಲ್ಲದ ಹಲವರೊಂದಿಗೆ ತನ್ನ ಹೆಂಡವನ್ನು ಹಂಚಿಕೊಳ್ಳುತ್ತಿರುವುದನ್ನು ನೋಡಿದರು. ಹೆಂಡದಂಗಡಿಯ ಹೊರಗಿನ ಸಭ್ಯರು ಕುಡುಕರ ಈ ಒಳ್ಳೆಯ ಗುಣವನ್ನು ಕಲಿಯಬಾರದೇ ಎನ್ನಿಸಿತು. ಅದರಿಂದ 'ಯೆಂಡ ಕುಡುಯೋರ್ ನಾವು' ಪದ್ಯ ಬರೆದರು.

ಯೆಂಡ ಕುಡಿಯೋರ್ ನಾವ್ ಇಂಗಿಲ್ಲ!
ಬುಂಡೆ ಪೂರ ತಂದಿ
ಪಕ್ದೋನ್ ಕೈಲಿ ಕಾಸ್ ಇಲ್ದಿದ್ರೆ
ಔನ್ಗೂ ಕೊಡತೀವ್ ಸೇಂದಿ!!

ಗಂಡ ತಂದ ಜೀತವನ್ನೆಲ್ಲ ಹೆಂಡತಿ ಕಿತ್ತುಕೊಂಡು ಇವನೆಷ್ಟು ಕೇಳಿದರೂ ಕುಡಿಯಲು ಕಾಸುಕೊಡದಿದ್ದಾಗ, ಅವನು ಕದ್ದು ಜೀತದಲ್ಲಿ ಹೆಂಡಕ್ಕಾಗಿ ಕಾಸು ತೆಗೆದಿರಿಸುತ್ತಿದ್ದನಂತೆ. ಹಾಗಾಗಿ ಹುಟ್ಟಿತು, 'ಈ ಮೋಸ ದೋಸವಲ್ಲಪದ್ಯ'.

ಯೆಂಡಕ್ ಒಂದ್ ಎಳ್ಡಾಣೆ
ಕೂದ್ಲಾಗ ಸಿಕ್ಸಿ
ಅಟ್ಟೀಗ್ ಬಂದ್ ತಕ್ಸಾನ
ಜೋಬ್ ಒದ್ರಿ ಬೊಗ್ಸಿ
ಯೆಡ್ತೀಗೆ ಮೋಸ
ಮಾಡ್ದ್ರೆ ಸಂತೋಸ!

ಯೆಂಗೀಸ್ಗ ಎಂಗೆ ಅರಸ್ನ ಕುಂಕ್ಮ–
ಗಂಡೀಸ್ಗ ಅಂಗೆ ಯೆಂಡ.
ಉಟ್ಟಿದ್ ಮನ್ಸ ರುಂಡಾಂತ್ ಅಂದ್ರೆ
ಯೆಂಡದ್ ಬುಂಡೆ ಮುಂಡ.

ಮನ್ಸನ್ ಜನ್ಮ ಒಂದಿದ್ರೂನೆ
ಈರ್ದೆ ವೋದ್ರೆ ಯೆಂಡ–
ಅಂತಾ ಮನ್ಸ ಬೂಮೀಗ್ ಬಾರ!
ಬದುಕಿರೋದು ದಂಡ!

ಬಹುಶಃ ರಾಜರತ್ನಂ ಅವರನ್ನು ನಮ್ಮ ಜನ ಎಂದೆಂದಿಗೂ ಸ್ಮರಿಸುವುದು ಅವರ 'ಕನ್ನಡ ಪದಗೊಳು' ಪದ್ಯದಿಂದ. ಅವರ ಕನ್ನಡ ಅಭಿಮಾನ ಅತ್ಯಂತ ಪ್ರಖರವಾಗಿ ಕಾಣುವುದು ಈ ಪದ್ಯದಲ್ಲಿ.

ಯೆಂಡ ಯೆಡ್ತಿ ಕನ್ನಡ್ ಪದಗೊಳ್
ಅಂದ್ರೆ ರತ್ನಂಗ್ ಪ್ರಾಣ!
ಬುಂಡೇನ್ ಎತ್ತಿ ಕುಡುದ್ಬುಟ್ಟಾಂದ್ರೆ-
ತಕ್ಕೊ! ಪದಗೊಳ್ ಬಾಣ!

....................................

ನರ್ಕಕ್ಕ್ ಇಳ್ಸಿ ನಾಲ್ಗೆ ಸೀಳ್ಸಿ
ಬಾಯ್ ಒಲಿಸಾಕಿದ್ರೂನೆ-
ಮೂಗ್ನಲ್ ಕನ್ನಡ್ ಪದವಾಡ್ತೀನಿ!
'ನನ್ ಮನಸನ್ನ್ ನೀ ಕಾಣೆ!

'ಯೆಂಡ ಬುಟ್ಟೆ, ಯೆಡ್ತೀನ್ ಬುಟ್ ಬುಡ್!'
ಅಂತ್ ಔನ್ ಏನಾರ್ ಅಂದ್ರೆ-
ಕಳದೋಯ್ತ್ ಅಂತ ಕುಣದಾಡ್ತೀನಿ
ದೊಡ್ಡ್ ಒಂದ್ ಕಾಟ! ತೊಂದ್ರೆ!
ಯೆಂಡ ಓಗ್ಲಿ! ಯೆಡ್ತಿ ಓಗ್ಲಿ!
ಎಲ್ಲಾ ಕೊಚ್ಕೊಂಡ್ ಓಗ್ಲಿ!
ಪರ್ಪಂಚ್ ಇರೋ ತನಕ ಮುಂದೆ
ಕನ್ನಡ್ ಪದಗೊಳ್ ನುಗ್ಲಿ!

ರಾಜರತ್ನಂ ಈ ಪದ್ಯ ಬರೆದಾಗ ಅವರ ಹೆಂಡತಿ ಕ್ಷಯರೋಗಕ್ಕೆ ತುತ್ತಾಗಿ ಆಸ್ಪತ್ರೆಯಲ್ಲಿದ್ದರು. ಅವರ ಕಿವಿಗೆ ಈ ಸಾಲುಗಳು ಬಿದ್ದಾಗ ಮನಸ್ಸು ತೀರ ನೊಂದಿತು. ತಮ್ಮ ಅನೌಚಿತ್ಯವನ್ನು ಮನಗಂಡ ರಾಜರತ್ನಂ

'ಪುಟ್ನಂಜೀ ರೂಪ' ಬರೆದು ಅವರಿಗೆ ಓದಿ ಹೇಳಿದರು:

'ಕೈಯಿಡಿದೋಳ್ ಪುಟ್ನಂಜಿ ನಗನಗ್ತ ಉಪ್ಗಂಜಿ ಕೊಟ್ರಾಯ್ತು ರತ್ನನ್ ಪರ್ಪಂಚ'.

ಆಲ್ನಲ್ ಕಮಲದ್ ವೂ ತೇಲ್ಬುಟ್ಟಿ
 ಮೇಲ್ ಒಂದ್ ತೆಳ್ನೆ ಲೇಪ
ಚಿನ್ನದ್ ನೀರ್ನಲ್ ಕೊಟ್ಟಂಗೈತೆ
 ನನ್ ಪುಟ್ನಂಜೀ ರೂಪ!

 ಅಮಾಸೇಲಿ ಅತ್ತೀಸ್ದಂಗೆ
 ಒಂದ್ ಅತ್ ನೂರ್ ಮತಾಪ
ಬೆಳಕಾಗ್ತೈತೆ ಕಂಡ್ರೆ ನನ್ಗೆ
ನನ್ ಪುಟ್ನಂಜೀ ರೂಪ!

ಹಾಸ್ಯದ ಹೊದಿಕೆಯಲ್ಲಿ ವೀರ, ಕರುಣಗಳನ್ನು ತುಂಬಿಕೊಂಡು ಬಂದ ಕವನಗಳು 'ರತ್ನನ ಪದಗಳು'. ಹಕ್ಕಿಯಂತೆ ಹಗುರವಾದ ಮನಸ್ಸು, ಅನ್ಯಾಯವನ್ನು ಸಹಿಸದ ಆಳ್ತನ, ಯಾರ ಹಂಗಿಗೂ ಒಳಗಾಗದ ಅಭಿಮಾನ, ಕಷ್ಟವನ್ನೆದುರಿಸಿ ಮೆಟ್ಟಿ ನಗುತ್ತ ಬದುಕುವ ಕೌಶಲ–ಈ ಎಲ್ಲ ವಿಶಿಷ್ಟ ಗುಣಗಳು ನಡೆದರೆ ದೇವರು ನಡೆಸಿದ ಹಾಗೆ ನಂಬಿಕೆಯಿಂದ ಬದುಕಬೇಕೆಂದು ತೋರಿಸಿದ ಜೀವವೊಂದರ ಹೆಜ್ಜೆಗಳನ್ನು 'ರತ್ನನ ಪದಗಳು' ಗುರುತುಮಾಡಿ ಕೊಟ್ಟಿವೆ. 'ಕನ್ನಡದಷ್ಟೇ ಬಾಳಬಲ್ಲ ಯೆಂಡಕುಡ್ಕ ರತ್ನನನ್ನು ಕನ್ನಡದಲ್ಲಿ ಸೃಷ್ಟಿಸಿದ ರಾಜರತ್ನರನ್ನು ನಾನು ಕನ್ನಡ ಸಾಹಿತ್ಯದ ಬೊದಲೈರ್ (Baudelaire) ಕವಿ ಎಂದು ಬಗೆದಿದ್ದೇನೆ' ಎಂದಿದ್ದಾರೆ ಘನವಿದ್ವಾಂಸರಾದ ಗೋವಿಂದ ಪೈ ೧೯೩೪ರಷ್ಟು ಹಿಂದೆಯೇ(ಆಧಾರ ೫). ರತ್ನನ ಪದಗಳ ನಂತರ ಬಂದದ್ದು 'ಮಹಾಕವಿ ಪುರುಷ ಸರಸ್ವತಿ'. ಇದರ ಹಿನ್ನೆಲೆ ಬಹಳ ಸ್ವಾರಸ್ಯವಾಗಿದೆ. ನವೋದಯ ಕಾಲದಲ್ಲಿ ಹೊಸರೂಪ ತಳೆದ ನಮ್ಮ ಕನ್ನಡ ಕಾವ್ಯ ಎಷ್ಟೇ ಜನಪ್ರಿಯತೆ ಗಳಿಸಿದರೂ ಪಂಡಿತ ವರ್ಗದಿಂದ ಅದಕ್ಕೆ ಮನ್ನಣೆ ದೊರೆತಿರಲಿಲ್ಲ. ಅವರಿಂದ ಆ ಬಗ್ಗೆ ಅನೇಕ ರೀತಿಯ ಅನಾದರ, ಟೀಕೆಗಳು, ಆಕ್ಷೇಪಣೆಗಳೂ ಇದ್ದವು. ನವೋದಯದ ಕವಿಗಳು ಹಿಂದಿನಿಂದ ಬಂದ ಛಂದಸ್ಸು, ಪ್ರಾಸ ಇತ್ಯಾದಿ ಕಾವ್ಯಬಂಧಗಳನ್ನು ಕಡೆಗಣಿಸಿ ಕಾವ್ಯಕ್ಕೆ ಅಪಚಾರ ಮಾಡುತ್ತಿದ್ದಾರೆಂಬ ಆಕ್ಷೇಪಣೆ ತೀವ್ರವಾಗಿತ್ತು. ರಾಜರತ್ನಂರ ಈಗ ವಿಖ್ಯಾತವಾಗಿರುವ ಶಿಶುಗೀತೆಗಳ ಬಗೆಗೂ ಈ ಅಪವಾದ ತಪ್ಪಿರಲಿಲ್ಲ. ಅವರ ರತ್ನನ ಪದಗಳು ಬಂದಮೇಲಂತೂ ಈ ವಿವಾದದ ಜ್ವಾಲೆಗೆ ತುಪ್ಪ ಸುರಿದಂತಾಯಿತು. ಗ್ರಾಮ್ಯ ಭಾಷೆಯನ್ನು ಬಳಸಿ ಕಾವ್ಯ ಸರಸ್ವತಿಗೆ ಅಪಚಾರ ಮಾಡಿದ್ದಾರೆಂಬ ಟೀಕೆಯ ಬಗ್ಗೆ ಹಿಂದೆಯೇ ಹೇಳಿದೆಯಷ್ಟೆ.

೧೯೩೮-೪೦ರ ಸಮಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ದೊಡ್ಡ ಚರ್ಚೆಯಲ್ಲಿ ಸಿಕ್ಕಿಕೊಂಡಿತು. ಪರಿಷತ್ತಿಗೆ ಈಗಿನ ಹೆಸರು ಶಾಶ್ವತವಾಗುವ ಮುಂಚೆ ಅದಕ್ಕೆ 'ಕರ್ಣಾಟಕ ಸಾಹಿತ್ಯ ಪರಿಷತ್ತು' ಎಂಬ ಅಭಿದಾನವಿತ್ತು. ಆದರೆ ಮೊದಲ ಪದದ ಬಳಕೆಯಲ್ಲಿ ಏಕತೆ ಇರಲಿಲ್ಲ. ಮೈಸೂರು ಪ್ರಾಂತದವರು 'ಕರ್ಣಾಟಕ' ಎಂದು ಬರೆದರೆ ಉತ್ತರ ಪ್ರಾಂತಗಳವರು 'ಕರ್ನಾಟಕ' ಎಂದು ಬರೆಯುತ್ತಿದ್ದರು. ಈ 'ನ-ಣ'ಗಳಲ್ಲಿ ಣತ್ವದ ಪ್ರಯೋಗವೇ ಸಾಧು ಎಂದು ಮೈಸೂರಿನ ವಿದ್ವಾಂಸರು ಕೈಗೊಂಡ ಠರಾವನ್ನು ರಾಜರತ್ನಂ ತೀವ್ರವಾಗಿ ವಿರೋಧಿಸಿದರು. ಈ ಚರ್ಚೆ ಅಲ್ಲಿಗೆ ನಿಲ್ಲದೆ ಮುಂದೆ ೧೯೪೦ರ ಅಧಿವೇಶನದಲ್ಲಿ ಕರ್ನಾಟಕ, ಕರ್ಣಾಟಕ ಎರಡನ್ನೂ ಬಿಟ್ಟು ಕನ್ನಡ ಸಾಹಿತ್ಯ ಪರಿಷತ್ತು ಎಂಬ ಹೆಸರನ್ನು ಅಂಗೀಕರಿಸುವ ಒಪ್ಪಂದವಾಗಿ ಈ ವಿವಾದ ಮುಕ್ತಾಯವಾಯಿತು.

ಆದರೆ ಈ ವಿವಾದಗಳಲ್ಲಿ ಪಂಡಿತವರ್ಗ ಮಂಡಿಸಿದ ಒಣಚರ್ಚೆಗಳು ರಾಜರತ್ನಂಗೆ ಹುಲುಸಾದ ವಿಡಂಬನೆಯ ವಸ್ತುವಾಗಿ ಕಾಣಿಸಿತು. 'ಮಹಾಕವಿ ಪುರುಷ ಸರಸ್ವತಿ' ಸಿದ್ಧವಾಯಿತು (೧೯೩೯-೪೦).

ಈ ಕಾವ್ಯದಲ್ಲಿ ಮೂರು ಭಾಗಗಳಿವೆ:

೧. ಕರ್ಣನಾಟಕ ಪುರಾಣವು ಅರ್ಥಾತ್ ಣತ್ವೋದ್ಧರಣ ಮಹಾಕ್ಷುದ್ರಕಾವ್ಯ ಪ್ರಪಂಚವು

೨. ಹಾರ್ಮೋನಿಯಂ ಹರಣವು ಎಂಬ ಹಾರ್ಮೋನಿಯಂನ್ನು ಹರಣಮಾಡಲು ಹೋದವನ ಹರಣವು ಹರಣವಾದ ಹ(ಗ)ರಣವು

೩. ಪು.ಸ.ಮಿತ್ರನ (ಪುರುಷ ಸರಸ್ವತಿ ಮಿತ್ರನ) ಅಪ**ಕ**ಥಾ ವಲ್ಲರಿ (ಅಪ್ರಸಿದ್ಧ ಕವಿಕಥಾ ವಲ್ಲರಿ) ಎಂಬ ಮೂದಲೆಯ ಮನುಸ್ಕೃಪ್ತುಗಳು.

ರಾಜರತ್ನಂರೇ ಹೇಳುವಂತೆ ವಿಡಂಬನವೇ ಈ ಕೃತಿಯ ಉದ್ದೇಶ. ಈ ಕೃತಿ 'ಪುರುಷ ಸರಸತಿಯು ಸೋಗಿನಲಿ ಸಾಹಿತ್ಯಜೀವನದೀಗಳಿನ ವಿಕೃತಿಗಳನತಿಗಳ ಲಾಗಹಾಕಿಸುವ' ಕೃತಿಯಾಗಿದೆ.

ವಿಡಂಬನೆ ಆಗಿನ ಕಾಲಕ್ಕೆ ಇನ್ನೂ ಹೊಸದು. ಕೈಲಾಸಂ ನಾಟಕಗಳು ನಮ್ಮ ಅರ್ಥಹೀನ ಸಂಪ್ರದಾಯಗಳ ಕಡೆಗೆ, ಆಂಗ್ಲ ವಿದ್ಯಾಭ್ಯಾಸದ ಫಲವಾಗಿ ಸಾಂಸ್ಕೃತಿಕ ಗೊಂದಲಕ್ಕೆ ಈಡಾದ ಹೊಸದಾಗಿ ಏರ್ಪಟ್ಟ ಮಧ್ಯಮ ವರ್ಗದ ಹಾಸ್ಯಾಸ್ಪದ ಆಚರಣೆ-ಅನುಕರಣೆಗಳ ಕಡೆಗೆ, ಡಾಂಭಿಕತೆಯ ಕಡೆಗೆ ಬೆಟ್ಟುಮಾಡಿ ಅವನ್ನು ಲೇವಡಿ ಎಬ್ಬಿಸಿದ್ದರೂ, ಒಟ್ಟಿನಲ್ಲಿ ನಮ್ಮ ಸಮಾಜಕ್ಕೆ ಅದರಲ್ಲೂ ಪಂಡಿತವರ್ಗಕ್ಕೆ ವಿಡಂಬನೆ ಹಿಡಿಸದ ವಿಷಯವಾಗಿತ್ತು. ಅಂಥವರಿಗೆ 'ಮಹಾಕವಿ ಪುರುಷ ಸರಸ್ವತಿ'ಯನ್ನು ಒಪ್ಪಿಕೊಳ್ಳುವುದು ಇನ್ನೂ ಕಷ್ಟವಾಯಿತು.

ಪುರುಷ ಸರಸ್ವತಿ ತನ್ನ ವಸ್ತುವಿನಿಂದ ವಿಶಿಷ್ಟವಾಗಿರುವಂತೆಯೇ ಅದಕ್ಕೆ ಬರೆಸಿರುವ (ರಾಜರತ್ನಂರವರದೂ ಸೇರಿದಂತೆ) ಎಂಟು ಮುನ್ನುಡಿಗಳಿಂದಲೂ ವಿಶಿಷ್ಟವಾಗಿದೆ. ಈ ಮುನ್ನುಡಿಗಳನ್ನು ಬರೆದವರಾದರೂ ಅಂಥಿಂಥವರಲ್ಲ: ಸರ್ವಮಾನ್ಯರಾದ ಗೋವಿಂದ ಪೈ, ವಿ.ಕೃ. ಗೋಕಾಕ, ಶಿವರಾಮ ಕಾರಂತ, ಎಸ್.ವಿ. ರಂಗಣ್ಣ, ಅರ್.ವಿ. ಜಾಗಿರದಾರ (ಶ್ರೀರಂಗ), ಎನ್.ಎಸ್. ನಾರಾಯಣ ಶಾಸ್ತ್ರೀ ಮತ್ತು ದ.ರಾ. ಬೇಂದ್ರೆ. ಇವರು ತಮ್ಮ ಮುನ್ನುಡಿಗಳಲ್ಲಿ ಈ ಕೃತಿಯ ಬಗ್ಗೆ ಮಾತ್ರವಲ್ಲದೆ, ಸಾಹಿತ್ಯದಲ್ಲಿ ಹಾಸ್ಯ–ವಿಡಂಬನೆಗಳ ಸ್ಥಾನ, ಹಾಸ್ಯದ ವಿವಿಧ ಮುಖಗಳು, ಪ್ರಭೇದಗಳು – ಇವೆಲ್ಲದರ ಬಗ್ಗೆ ವಿಚಾರಪೂರಿತ ಲೇಖನಗಳನ್ನು ಬರೆದಿದ್ದಾರೆ. ಇವುಗಳಿಂದ ಸಂಗ್ರಹಿಸಿದ ಹಲವು ವಿಷಯಗಳನ್ನು ಮುಂದೆ ಕೊಟ್ಟಿದೆ.

ಗೋವಿಂದ ಪೈಗಳು, 'ರಾಜರತ್ನಂರಿಗೆ ತಾನು ಮುಟ್ಟಿದ್ದನ್ನು ನವಾಯಿಸುವ ಕೈಗುಣವಿದೆ. ಅವರ ಬರಹದಲ್ಲಿ ಜಗಳಕ್ಕೆ ಇಂಬಾಗುವ ಅವಗುಣಗಳೂ ಇದೆ. ಇದಿಲ್ಲದಿದ್ದರೆ ಯೆಂಡ್ಕುಡ್ಕ ರತ್ನನಿರುತ್ತಿರಲಿಲ್ಲ. ಪುರುಷ ಸರಸ್ವತಿಯೂ ಬರುತ್ತಿರಲಿಲ್ಲ' ಎಂದಿದ್ದಾರೆ. ಗೋಕಾಕರು ತಮ್ಮ ವಿಸ್ತಾರವಾದ ಮುನ್ನುಡಿಯಲ್ಲಿ ಇಂಗ್ಲಿಷ್ ಸಾಹಿತ್ಯದ ಅಧಾರದ ಮೇಲೆ ಹಾಸ್ಯದ ವಿವಿಧ ರೂಪಗಳನ್ನು ಕುರಿತು ತಿಳಿಸುತ್ತ, ಹೀಗೆನ್ನುತ್ತಾರೆ:

'ಹಾಸ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ವಿಡಂಬನೆಯೊಂದಾಗಿದೆ. ನಮಗಾಗದವರನ್ನು, ನಮ್ಮ ತತ್ವಗಳಿಗೆ ಹೊರತಾದವರನ್ನು ಇಲ್ಲವೆ ನಮ್ಮ ಶತ್ರುಗಳನ್ನು ವಾಗ್ಯುದ್ಧದಲ್ಲಿ ಹೊಡೆದೋಡಿಸುವ ಆಯುಧವೆಂದರೆ ವಿಡಂಬನೆಯೇ ಸರಿ. ಸಮಾಜದ ದುರ್ಗುಣಗಳ ದುಷ್ಪರಿಣಾಮಗಳಿಗೆ ನಾವು ಕನ್ನಡಿಯನ್ನು ಹಿಡಿದು ದುರ್ಜನರನ್ನು ತಿದ್ದುವುದು, ಮೂರ್ಖತನವನ್ನು ಎತ್ತಿ ತೋರಿಸುವುದು ವಿಡಂಬನಕಾರನ ಪ್ರಯತ್ನ. ಸಿಟ್ಟಿನೊಡನೆ ಸ್ವಾಭಿಮಾನವನ್ನೂ ತುಸು ವಿನೋದವನ್ನೂ ಕೂಡಿಸಿದಾಗ ಹುಟ್ಟಿಬರುವುದು ಅಪಹಾಸವಲ್ಲ. ವಿಡಂಬನೆ ಅಣಕಕ್ಕೆ ಸಮೀಪವಾಗಿದ್ದರೂ ವಿನೋದದ ಅಂಶ ಇನ್ನೂ ಹೆಚ್ಚಿರುತ್ತದೆ... 'ಸಮುದ್ರಕ್ಕೆ ಬೆಂಕಿ ಹತ್ತಿದರೆ ಮೀನುಗಳು ಏನು ಮಾಡುತ್ತವೆ? ಎಂದರೆ, ಮರಗಳನ್ನೇರುತ್ತವೆ' ಎಂದು ಉತ್ತರ ಬಂತಂತೆ.

ಹಳೆಯ ಸಂಪ್ರದಾಯದ ಜೀವಾಳವೆಲ್ಲ ಕಳೆದುಹೋಗಿ ಪರಂಪರಾನುಗತಿಕರು ಅದನ್ನು ಶುಷ್ಕವಾಗಿ ಅನುಭವಿಸುತ್ತಿರುವಾಗ ಸಂಭವಿಸುವ ಬಹುತರ ಎಲ್ಲ ಪ್ರಮಾದಗಳು ರಾಜರತ್ನಂರ ವಿಡಂಬನೆಗೆ ಸಿಕ್ಕಿದೆ. ಕಷ್ಟಪಟ್ಟು ಓದಿದರೆ ಈ ಕೃತಿ ಓದುಗರನ್ನು ಪ್ರಸನ್ನಚಿತ್ತರನ್ನಾಗಿ ಮಾಡುವುದು... ಪುರುಷ ಸರಸ್ವತಿ'ಯು ಕನ್ನಡ ಕಾವ್ಯದಲ್ಲಿ ಮೊದಲನೆಯ ಸುದಿರ್ಘ ಸಾಹಿತ್ತಿಕ ವಿಡಂಬನೆಯೆಂದು ಹೇಳಬಹುದು'.

'ನ–ಣ'ಗಳ ವ್ಯಾಕರಣ ವ್ಯಾಜ್ಯದಿಂದ ಬೇಸತ್ತ ಕಾರಂತರು 'ಜನಕ್ಕೆಲ್ಲ ನವಿರಲಿ, ಹೆಣಕ್ಕೆಲ್ಲ ಣವಿರಲಿ' ಎಂದು ಅದನ್ನು ತಳ್ಳಿಹಾಕುತ್ತಾರೆ!

ಇನ್ನು ಈ ಕಾವ್ಯದಿಂದ ಒಂದೆರಡು ಉದಾಹರಣೆಗಳು:

'ಬಾಯಿ ತಿರುಗದ ಕೆಲರು ಸುಲಭೋ
ಪಾಯ ಚತುರರು ರೂಪಿಗದಕ
ನ್ಯಾಯ ಮಾಡಿಯೆ ೫ ವನೆ ನುಡಿಯಲು ನಕ್ಕೆ ಬದಲಾಗಿ
ಆಯಿತಾ ಕರ್ಣ್ಣಾಟಕವು ಮೇಲ್
ರಾಯ ಕರ್ಣಾಟಕವು ಬಂದಿತು
ಹೇಯ ಕರ್ನಾಟಕವು ಬರುತಿದೆಯೆಚ್ಚರೆಚ್ಚರಿಕೆ

೫ತ್ಪ್ರೋದ್ಧರಣ ಮಹಾಕ್ಷುದಕಾವ್ಯ ಪ್ರಪಂಚವು' – ಪ್ರಾಚೀನ ಭಾಮಿನಿಯನ್ನು ಈ ನವೀನ ಕವಿಗಳು ಗೌರವವಾಗಿ ನಡೆಸಿಕೊಳ್ಳಬಲ್ಲರೆಂಬುದಕ್ಕೆ ಸಾಕ್ಷಿ.

ಡಸ್ಟಿನಲಿ ಗೋಲ್ಡ್‌ಡಸ್ಟು ಮೌಂಟೆವ
ರೆಸ್ಟು ಗಿರಿಗಳ ಗಡಣದಲಿ ಫ಼ಾ
ರೆಸ್ಟು ಬೀಸ್ಟುಗಳೊಳಗೆ ಲಯನೆಂತಪ್ರತಿಮವಂತೆ
ವೇಸ್ಟು ಬರಿಮಾತೇಕೆಯೀ ಫ಼್ಲೋರ್
ಮೋಸ್ಟು ಪೊಯೆಟನು ನೆನೆಯೆ ತಾನೆ
ಕ್ಲಾಸ್ಟು ಕವಿಗಳ ಲಿಸ್ಟಿನೊಳಗೊಬ್ಬಂಟಿ ನರವಾಣಿ

ಪಾಸ್ಟೊಳಿರಲಿಲ್ಲ ಪ್ರೆಸೆಂಟಿನ
ಪೋಸ್ಟುಡೇಟಿನ ಗರ್ಭದೊಳಗ
ಕ್ಯಾಸ್ಟುಮಾಡಲು ಪುರುಷ ಸರಸತಿಯನದರಿನ್ನಿಲ್ಲ
ಲಾಸ್ಟು ಲಾಸ್ಟೋ ಲಾಸ್ಟು ವರಕವಿ
ಈಸ್ಟು ವೆಸ್ಟೆಲ್ಲೆಡೆಯೊಳಟ್‌ವನ್ಸ್
ಹೇಸ್ಟಿನಿಂದೀ ಕವಿಜಯಂತಿಯನೆಸಗಲಿಟ್ಸ್ ವರ್ತಿಟ್

'ಕನ್ನಡಾಂಗ್ಲೋಭಯಭಾಷಾ ಚಕ್ರವರ್ತಿ' ಎಂದು ಕರೆಸಿಕೊಂಡಿರುವ ರಾಜರತ್ನಂ ಬಹುಭಾಷಾ ಪಾಂಡಿತ್ಯವನ್ನು ಹೊಂದಿದ್ದರೆಂದು ಅರಿವಾಗುತ್ತದೆ. ಅಲ್ಲದೆ, ಗ್ರಾಮೀಣ ಪದಗಳನ್ನು ಉಪಯೋಗಿಸಿ ಕವಿತೆಗಳನ್ನು ರಚಿಸಿದ್ದರೂ (ರತ್ನನ ಪದಗಳು) 'ಭಾಷಾಮಾತೆಗೆ ಅವಮಾನವನ್ನು ಗೈದ' ಜಿ.ಪಿ. ಎಷ್ಟು ಪ್ರಾಸಬದ್ಧವಾಗಿ ಬರೆಯಬಲ್ಲರು ಎಂಬುದಕ್ಕೂ ಇದು ಸಾಕ್ಷಿ.

ಕರ್ಣಾಟಕ ಶಬ್ದವು ಮಹಾಭಾರತದಲ್ಲಿ ಮೊಟ್ಟ ಮೊದಲು ಕಂಡು ಬರುವುದೆಂಬುದು ಈ ಪುರುಷ ಸರಸ್ವತಿಯ ಕಾವ್ಯದಿಂದಲೂ ಪುಷ್ಟೀಕರಿಸಲ್ಪಡು-ತ್ತಿರುವುದನ್ನು ಗಮನಿಸಬೇಕು.

ಶಾಸನಗಳಲ್ಲಿ 'ಕರ್ಣನಾಟಕ'ವೆಂಬ ಮೂಲರೂಪವು ಕರ್ಣಾಟಕವಾಗಿದ್ದಾದರೂ ಅದನ್ನು ಬಳಸಬೇಡಿರೆಂದು ತಿಳಿಸುತ್ತಾರೆ. 'ಕನ್ನಡನಾಡನ್ನು ಕರ್ನಾಟಕವೆಂದೇ ಕರೆಯುತ್ತೇವೆ. ಆದರೆ, ಕರ್ಣಾಟಕವೆನ್ನುವುದಿಲ್ಲ. ಕನ್ನಡಿಗರು ಕರ್ಣನಂತೆ ದಾನಶೂರರು.... ಕರೆದು ತಣಿಯರು, ಕೊಟ್ಟು ತಣಿಯರು, ಹರಿದು ತಮ್ಮದ ಹಂಚಿ ತಣಿಯರು ನಾಡನಿತರರಿಗೆ ಎಂದು ೭೦ ವರುಷದ ಹಿಂದೆಯೇ ಸತ್ಯವನ್ನು ಆಡಿದ್ದರು. ಎಷ್ಟೇ, ಕರ್ನಾಟಕಕ್ಕೂ ಕರ್ಣನಿಗೂ ಸಂಬಂಧವಿಲ್ಲೆಂದು ತಿಳಿಸಿದರೂ, ವಾದವಿವಾದಗಳಾದರೂ, ನಮ್ಮ ನಾಡಿನ ನಕ್ಷೆ ಕರ್ಣ ಆಕಾರದಲ್ಲಿರುವುದಂತೂ ಸತ್ಯದ ಸಂಗತಿ.

ರೂಪ ಕರ್ಣ್ನಾಟಕವೆ ಮೊದಲು ಸು
ರೂಪ ಕರ್ಣ್ಣಾಟಕವೆ ಬಳಿಕಲು
ರೂಪ ಕರ್ಣಾಟಕವೆ ಬಳಕೆಯ ರೂಪಗಳ ರೂಪ
ಭಾಪು ಕರ್ಣಾಟಾಂಕ ಣತ್ವವ
ಕಾಪಿಡಲು ಪರಮಾತ್ಮನೊಲಿವನು
ಪಾಪಮಯ ಕರ್ನಾಟಕವ ತೆಗೆ ತಳ್ಳು ನೂಕುತ್ತ

ಣತ್ವಯುತ ಕರ್ಣಾಟಕವ ತಾ
ವೊತ್ತರಿಸಿ ನಾವುಗಳು ಬಳಸದ
ನತ್ವಯುತ ಕರ್ನಾಟಕವ ಹಿಡಿದೆತ್ತಿ ರೂಢಿಸುವ
ಕುತ್ತವಿದ ಕುಡಿಯಲ್ಲೆ ಕಡಿದು ಮ
ಹತ್ವವೆಮ್ಮದನೆತ್ತಿ ಬೆಳೆಸುವ
ಣತ್ವಶೂರರು ನಾವು ನಮ್ಮದು ನತ್ವವೆಲ್ಲಂದ

ಮಹಾಭಾರತದ ನೆನಪನ್ನು ಅಳಿಸಲೋಸುಗ ವಾದವಿವಾದ ಹಾಗೂ ಪ್ರತಿವಾದಗಳಲ್ಲಿ ಕರ್ನಾಟಕವು ಗೆದ್ದಿರಬಹುದು. ಆದರೆ, ಇಂದು ಭಾಷೆಯ ಉಳಿವಿಗಾಗಿ ಯುದ್ಧಭೂಮಿಯನ್ನೇ ಮರು ಸೃಷ್ಟಿಸಿದ್ದೇವೆ. ಯಾವಾಗಲೂ ನೀರಿಗಾಗಿ, ಗ್ರಾಮಗಳಿಗಾಗಿ, ನೀನು ಹೆಚ್ಚು–ನಾನು ಹೆಚ್ಚು ವ್ಯಾಜ್ಯಗಳು ಇದ್ದದ್ದೇ. ಆದರೆ, ಇಷ್ಟೆಲ್ಲ ಕಷ್ಟಪಟ್ಟು

ಸಂಭಾವಿಸಿ ಉಳಿಸಿದ ಭಾಷೆಯನ್ನು ವಿದೇಶಿ ವ್ಯಾಮೋಹಕ್ಕೆ ಬಲಿ ಕೊಡುತ್ತಿದ್ದೇವೆಂದರೆ ನಾಚಿ ತಲೆತಗ್ಗಿಸುವ ಹಾಗಾಗುವುದು. ಯಾರೇನು ಬರೆದರೂ ನನಗೇನು ಪ್ರಯೋಜನವಿಲ್ಲ ಎಂಬ ಸಂದೇಶ ಸಾರುತ್ತಿರುವುದು ಶೋಚನೀಯ ವಿಷಯ.

'ಜ್‌ಇ. ಪ್‌ಇ. ರ್‌ಆಜ್‌ಅರ್‌ಅತ್‌ನ್‌ಆಮ್' ಮಹಾಕವಿ ಪುರುಷ ಸರಸ್ವತಿ ಸ್ತೋತ್ರ ಪಂಚಕದಲ್ಲಿ ನಮ್ಮನ್ನು ನಗಿಸುವ mirth ಗೆ ಕನ್ನಡದಲ್ಲಿ awful dearth ಎನ್ನುತ್ತಾರೆ:

ವರ್ರ್ತು ನೋಟೀಸಿಂಗು ನಗಿಸುವ
ಮರ್ರ್ತಿಗೀ ಕನ್ನಡಳಾಫ಼ು
ಲ್ಡರ್ರ್ತು ವೈಗಾಡ್ ಪುರಿಸ ಸರಸತಿ ಓಯೆಸಿಸ್ಸು ಕಣಾ
ಬರ್ರ್ತು ತಾವರೆಪುರದ ಕರಿ ಮದ
ರರ್ರ್ತಿನಲಿ ಮೇಣವನ ಫ಼ೇಮಿನ
ಗರ್ರ್ತು ಗಣನಾತೀತ ತುದಿಗಳೆ ಹೆವನು ಹೆಲ್ಲುಗಳು

ತಮ್ಮ ಮುನ್ನುಡಿಯಲ್ಲಿ:

ಪೆಸರಿನಲಿ ನಾ ಪುರಿಸ ಸರಸತಿ
ಹಸುರು ಹುಲ್ಲಿನ ಮೇಲೆ ಮಂಜಿನ
ಕುಸುರಿ ಕೆಲಸದ ಕುಶಲಕರ್ಮದ ನುಣುಪು ನಯಗಾರ
ಮಸೆದ ಹುಲ್ಲಿನದೆರಡು ಹಿಡಿ ಗರ
ಗಸದ ಕುಯಿತವನಾರ್ಪುದಲ್ಲದೆ
ರಸರಸಾಂತರಗಳನು ಬಣ್ಣಿಸಬಲ್ಲುದೆನ್ನಳವು

ಎನ್ನುತ್ತಾರೆ.

ಮಹಾಕವಿ ಪುರುಷ ಸರಸ್ವತಿ ಪ್ರಶಸ್ತಿಯಲ್ಲಿ –

ರಾಜರತ್ನಂ, ಜೀ.ಪಿ.ಯೆಂಬೆಂ
ಗೇಜಿನವರೆಂಶತ್ತು ಕನ್ನಡ
ಪೇಜಿನೊಂದೆರಡೇನೊ ಪದ್ಯದ ಬುಕ್ಕುಗಳ ಬರೆದು
ಪೂಜೆ ತನಗಿನಿಸಿಲ್ಲವೆಂದೆ
ನ್ರೇಜುಗೊಂಡಿಹರಂತೆ ಮೇಣ್ತಾ
ದ್ರೇಜಿನಿಂದಲೆ ನ್ಯಾಸ್ಟಿಯಾಗಿಹರಂತೆ ಪೂರೋಲ್ಡ್ ಛ್ಯಾಪ್

ಈ ಪುರುಷ ಸರಸ್ವತಿಯಲ್ಲಿನ 'ಪಂಕ್ತಿ ಪಂಕ್ತಿಯ ಹಿಂದೆ ನಡುನಡುವೆ ಕಾಯುತಿಹ ಕುಟುಕುಗಳ... ಸೋರುವ ಗಾಯಕುಪ್ಪಿನ ಚಿಟಿಕೆಗಳನ್ನು' ಬಿಡಿಸಿ ಬಿಡಿಸಿ ತಿಳಿಸಲು ಹೊರಟರೆ, ಅದಕ್ಕೇ ಒಂದು ಪುಸ್ತಕ ಬೇಕಾದೀತು. ಆದರೆ, ಕುಟುಕು ಕೊಂಡವರಿಗೆ... ಚಿಟುಕುಕೊಂಡವರಿಗೆ 'ಇದು ನೋವು' ಎಂದು ಯಾರೂ ಹೇಳಬೇಕಾಗಿಲ್ಲ. ಅವರಿಗೇ ಗೊತ್ತಾಗುತ್ತದೆ... ತಾಳಿಯೆಂಬ ಒಂದೆ ಸಾಕ್ಷಿಯಿದ್ದರೆ, ಆ ಹೆಂಗುಸಿಗೆ ಮದುವೆಯಾಗಿರುವುದನ್ನು ತಿಳಿಸಲು ಹೇಗೆ ಬೇರೆ ಸಾಕ್ಷಿಗಳು ಬೇಕಿಲ್ಲವೋ ಹಾಗೆಯೇ, ಕಚಗುಳಿಯಿಂದ ನಗಲಾರದವ ಗೊರ್ಕಲ್ಲಿದ್ದಂತೆ!!!

'ನಮ್ಮದು ಘನ ಗಂಭೀರವಾದ ದೇಶ. ಹಾಗೆ ಅನವಶ್ಯಕವಾಗಿ ನಾವು ನಗುವವರಲ್ಲ. ನರ ದೌರ್ಬಲ್ಯಗಳನ್ನು ತೋರ್ಪಡಿಸುವವರೂ ಅಲ್ಲ. ಅಣಕವೂ ಎಲ್ಲರಲ್ಲಿ ಫಲಕಾರಿಯಾಗಲಾರದು. ಅದು ಫಲಕಾರಿ ಆಗಬೇಕಾದರೆ ಮೆದುಳಿನ ಚಿಪ್ಪು ೧/೨' ಗಿಂತಾ ತೆಳ್ಳಗಿರಬೇಕೆನ್ನುತ್ತೆ ವಿಜ್ಞಾನ. ಚಿಪ್ಪು ಈ ಅಳತೆಗೂ ಮೀರಿದಲ್ಲಿ ಅಣಕವು ಒಬ್ಬರನ್ನು ರೇಗಿಸಬಹುದು. ಹಾಗಂತ, ನಮ್ಮಲ್ಲಿ ಹಾಸ್ಯ ಮನೋಭಾವ ಇಲ್ಲವೆಂದಲ್ಲ. ಹಿಂದೂಸ್ತಾನದಲ್ಲಿ ಬಡತನ ತುಂಬಿದೆ ಎಂದು ಒಬ್ಬ ಪಾಶ್ಚಾತ್ಯನು ನುಡಿದರೆ, ಕೂಡಲೆ ಸಾರ್ವಜನಿಕ ಸಭೆಮಾಡಿ 'ನಮ್ಮ ಪ್ರಾಚೀನ ಭಾರತದಲ್ಲಿ ವಿದ್ಯಾರಣ್ಯರು ಸುವರ್ಣವೃಷ್ಟಿ ಕರೆದಿದ್ದರು' ಎನ್ನುವವರು ನಾವು. ಸಮಾಜದಲ್ಲಿಯಾಗಲಿ, ಜನರಲ್ಲಾಗಲಿ ಅಣಕ ಅವಹಾಸಗಳು ನೋವಿಲ್ಲದೇ ಮಾಡುವ ಶಸ್ತ್ರಚಿಕಿತ್ಸೆಯಂತೆ ಜೀವನದ ಬೆಳವಣಿಗೆಗೆ ಸಹಾಯವಾಗುವುದು. ಪುರುಷ ಸರಸ್ವತಿಯನ್ನು ಸ್ವೀಕಾರ ಮಾಡಲು ಈ ನಗುಶೀಲತೆ ಬೇಕು' ಎನ್ನುತ್ತಾರೆ ಶಿವರಾಮ ಕಾರಂತರು.

ಎರಡನೆಯ ಕಾವ್ಯ 'ಹಾರ್ಮೋನಿಯಂ ಹರಣವು' ಭಾಮಿನಿ ಷಟ್ಪದಿಯಲ್ಲಿ ಬರೆದ ೫೦ ಪದ್ಯಗಳನ್ನೊಳಗೊಂಡ ಕಾವ್ಯ. ಅದರ ವಸ್ತು ಹೀಗಿದೆ:

ಬೈಳೂರಿನ ನಿವಾಸಿ ವೇಂಕಟಾರ್ಯರು ವೇಂಕಟೇಶ ದೇವರ ಕೃಪೆಯಿಂದ ಪಡೆದ ಮಗಳು ವೆಂಕುವಿಗೆ ಪ್ರಾಪ್ತ ವಯಸ್ಸಾಗಲು ಅವಳಿಗೆ ಮದುವೆಮಾಡಲು ನಿರ್ಧರಿಸಿ, ಅದಕ್ಕೆ ತಕ್ಕ ಸಿದ್ಧತೆಗೆಂದು ಹಾರ್ಮೋನಿಯಂ ಕೊಂಡುತಂದು ತಾವೇ ಅವಳಿಗೆ ಸಂಗೀತ ಕಲಿಸಲು ತೊಡಗುತ್ತಾರೆ. ಪಕ್ಕದ ಮನೆಯಲ್ಲಿ ಚಿಕ್ಕಕೋಣೆಯೊಂದರಲ್ಲಿ ಬಾಡಿಗೆಗಿರುವ ವಿದ್ಯಾರ್ಥಿ ನಿಂಗನಿಗೆ ಇನ್ನು ಏಳು ದಿನಕ್ಕೆ ದೊಡ್ಡ ಪರೀಕ್ಷೆ. ಅದಕ್ಕೆ ಓದಿಕೊಳ್ಳುತ್ತಿದ್ದಾನೆ. ಈ ತಂದೆ-ಮಗಳ ಹಾರ್ಮೋನಿಯಂ ಪಾಠದ ಘೋರ ಶಬ್ದದಿಂದಾಗಿ ಅವನಿಗೆ ಏನೇನೂ ಓದಲಾಗದೆ, ಇವರ ಮನೆಗೆ ಬಂದು ಕೆಲಕಾಲ ಈ ಪಾಠ ನಿಲ್ಲಿಸಲು ಸಾಧ್ಯವೇ ಎಂದು ಬೇಡುತ್ತಾನೆ. ಆದರೆ ವೇಂಕಟಾರ್ಯ ನಿರಾಕರಿಸುತ್ತಾನೆ. ಆಗ ನಿಂಗ ಹೇಗಾದರೂ ಮಾಡಿ ಈ ವಾದ್ಯವನ್ನು ಅಪಹರಿಸುವ ಯೋಚನೆ ಮಾಡುತ್ತಾನೆ.

ಆ ರಾತ್ರಿ ಆವನು ಮೆಲ್ಲಗೆ ಇವರ ಮನೆ ಹೊಕ್ಕು ಆ ಹಾರ್ಮೋನಿಯಂ ಅನ್ನು ಕದಿಯಲು ಕೈ ಇಟ್ಟರೆ ಅದು ಕೂಡಲೆ ಕೀ ಎಂದು ಸದ್ದುಮಾಡುತ್ತದೆ. (ಅದರ ತಿದಿ ಮುಚ್ಚಿರಲಿಲ್ಲ!) ಕೂಡಲೆ ತಂದೆ ಎದ್ದು ಇವನನ್ನು ಹಿಡಿದು ಚೆನ್ನಾಗಿ ಥಳಿಸುತ್ತಾನೆ. ಬೇರೆ ದಾರಿಗಾಣದೆ ನಿಂಗ ಕೆರೆಯಲ್ಲಿ ಬಿದ್ದು ಸಾಯುತ್ತಾನೆ. (ಈ ಆತ್ಮಹತ್ಯೆ ಅಮಂಗಳಕರ ಎಂದು ಕವಿ ಬೇರೊಂದು ಮಂಗಳಕರ ಮುಕ್ತಾಯವನ್ನೂ ಸೂಚಿಸಿದ್ದಾರೆ. ಅದರ ಪ್ರಕಾರ ವೇಂಕಟಾರ್ಯರು ಅವನಿಗೆ ಶಿಕ್ಷಾರೂಪವಾಗಿ ತಮ್ಮ ಮಗಳನ್ನೇ ಕೊಟ್ಟು ಮದುವೆಮಾಡುತ್ತಾರೆ!)

ಆ ಕಾವ್ಯದಿಂದ ಒಂದೆರಡು ಪದ್ಯಗಳು:

ಮುದ್ದು ಮಗಳಿಗೆ ಕಲಿಸಬೇಕೆಂ
ದೆದ್ದು ಪೇಟೆಯೊಳುದ್ದ ಪರಿಕಿಸಿ
ಕದ್ದುತಂದರು ಸದ್ದು ಹೆಚ್ಚಿನ ಹಾರುವೋನಿಯವ
ನಿದ್ದೆಗಿದ್ದೆಯ ಬಿಟ್ಟು ಸಂತತ
ವೊದ್ದು ಹೊಡೆದಂತೆದ್ದ ದನಿಯಲಿ
ಖುದ್ದು ತಾವೇ ಕಲಿಸತೊಡಗಿದರಾತ್ಮಜೆಗೆ ಪದವ

ತಾವೆ ತಮಗಾಚಾರ್ಯರಾಗಿ ಮ
ಹಾ ವಿಲಾಸದಿ ನಾದದೇವನ
ಸೇವೆಯನು ಕೈಗೊಂಡು ಮಗಳಿಗು ಕಟ್ಟಿ ಕಂಕಣವ
ಮೇವನರಸುವ ಕುರುಡುಕರುವಿನ
ಗೋವಿನೋಪಾದಿಯಲಿ ಕಾಣದ
ಕಾವಲನು ತಡಕಿದರು ಸಂಗೀತದ ಸಮುದ್ರದಲಿ

ಮೂರನೆಯ ಕಾವ್ಯ 'ಪು.ಸ. ಮಿತ್ರನ ಅಪ್ರಸಿದ್ಧ ಕಥಾ ವಲ್ಲರಿ' ಹನ್ನೆರಡು ಕಲ್ಪಿತ ಅಪ್ರಸಿದ್ಧ ಕವಿಗಳ ಚರಿತೆ. ಅದರ 'ಅರಿಕೆ'ಯಲ್ಲಿ ರಾಜರತ್ನಂ ಹೀಗೆ ಹೇಳುತ್ತಾರೆ:

'ಆಗಿನ ಕಾಲದ 'ಕವೀಂದ್ರಂಮನ್ಯ'ರನ್ನು, ಅವರ ಅತೃಪ್ತಿಯಿಂದಾಗುತ್ತಿದ್ದ ನವೀನ ಸಾಹಿತ್ಯ ವೈರವನ್ನು, ಸಾಹಿತಿಗಳಿಗೂ ಸಾಹಿತ್ಯಕ್ಕೂ ಜಾತಿಮತಗಳ ಮಾನದಿಂದ ಬೆಲೆಕಟ್ಟುತ್ತಿದ್ದ ಅವಿವೇಕವನ್ನೂ, ಆಗ ಕನ್ನಡದಲ್ಲಿ ಯಥೇಚ್ಛವಾಗಿ ನಡೆಯುತ್ತಿದ್ದ ಕೃತಿಚೌರ್ಯವನ್ನು, ಯಾವ ಬರಹ ಬಂದರೂ ಅದರ ತತ್ವವನ್ನು ತೊರೆದು ಅದನ್ನು

ಬೇರಾವುದಕ್ಕೋ ಅನ್ವಯಿಸುತ್ತಿದ್ದ ಅನ್ಯಾಯಮಾರ್ಗವನ್ನು, ನಗುವನ್ನು ನೋಡಿ ಸಹಿಸದ ಅನೀತಿಯನ್ನು, ಇತರರು ಮುನ್ನುಡಿ ಬರೆಯುವುದನ್ನು ಕಂಡು ಕಾರುತ್ತಿದ್ದ ಕರುಬನ್ನು, ಸಂಶೋಧನೆಯ ಹೆಸರಿನಲ್ಲಿ ನಡೆಯುತ್ತಿದ್ದ ಆಭಾಸಗಳನ್ನು, ಇನ್ನೂ ಈ ತೆರನ ಹಲವು ಹಾಸ್ಯಾಸ್ಪದಗಳನ್ನು, ಇಲ್ಲಿ ಕವಿಚರಿತೆಯ ಸೋಗಿನಿಂದ ವಿಡಂಬನೆ ಮಾಡಿ ಈ 'ಅಪ್ರಸಿದ್ಧ ಕಥಾವಲ್ಲರಿ'ಯನ್ನು ರಚಿಸಲಾಯಿತು.'

ಮುಂದುವರೆಯುತ್ತಾ 'ಇಲ್ಲಿರುವುದು ಮಾರ್ಗಗಳ ವಿಡಂಬನೆಯೇ ಹೊರತು ಯಾವ ಮಾರ್ಗಿಯನ್ನೂ ವೈಯುಕ್ತಿಕವಾಗಿ ಕುರಿತದ್ದಲ್ಲ' ಎಂದೂ ಹೇಳಿದ್ದಾರೆ.

ಈ ಕಾವ್ಯಗಳಲ್ಲಿ ನಾವು ಕಾಣುವ ಪಂಡಿತ ಶೈಲಿ, ನೂರಾರು ಅಡಿಟಿಪ್ಪಣಿಗಳು, ವ್ಯಾಖ್ಯಾನಗಳು, ಸಣ್ಣಪುಟ್ಟ ವಿಚಾರಗಳನ್ನೂ ಅವು ಮಹಾ ದೊಡ್ಡ ವಿಚಾರಗಳೇನೋ ಎನ್ನುವಂತೆ ಬರೆಯುವುದು–ಇವೆಲ್ಲ ತುಂಬ ವಿಡಂಬನಾತ್ಮಕವಾಗಿವೆ. 'ಅಣಕು ಗಾಂಭೀರ್ಯ' (mock seriousness) ಅವರು ಹೇಳುವುದೆಲ್ಲ ನಿಜವೇನೋ ಎನ್ನುವ ಭ್ರಮೆ ಹುಟ್ಟಿಸುತ್ತದೆ!

ಈ 'ಅಪ್ರಸಿದ್ಧ' ಕವಿಗಳಲ್ಲಿ ಹನ್ನೊಂದನೆಯವನು 'ಎರಡನೆಯ ಶ್ಮಶಾನ ಕವಿ'. ಅವನ ವೃತ್ತಾಂತ ಹೀಗಿದೆ:

ಹತ್ತನೆಯ ಶತಮಾನದ ಕ್ಷುದ್ರಕನ ಆಸ್ಥಾನದಲ್ಲಿ ಒಬ್ಬ ಶ್ಮಶಾನ ಕವಿ ಆಗಲೇ ಇದ್ದುದರಿಂದ, ಈ ಹತ್ತೊಂಬತ್ತನೆಯ ಶತಮಾನದ ಶ್ಮಶಾನಕವಿಯನ್ನು ಎರಡನೆಯವನೆಂದು ಕರೆಯಲಾಗಿದೆ. ಇವನಂತಹ ಕನ್ನಡಕವಿ ಇವನೊಬ್ಬನೇ. ಇವನು ಮಹಾನುಭಾವ.

ಸಾವು ಸನ್ನಿಹಿತರಾದವರ ಮೇಲೆ ಇವನು ಶ್ಮಶಾನ ಗೀತೆಗಳನ್ನು ರಚಿಸುತ್ತಿದ್ದನು. ಆಯಾ ಗೀತೆಗಳ ಪಾತ್ರಗಳು ತಮ್ಮ ಚರಮಗೀತೆಯನ್ನು ತಾವೇ ನೋಡಿ, ಮೆಚ್ಚಿ, ಒಪ್ಪಿ, ಸಂತೋಷದಿಂದ ಕಣ್ಣುಮುಚ್ಚಲು ಅನುಕೂಲ ಮಾಡಿಕೊಡುತ್ತಿದ್ದ ಅದೃಷ್ಟಪೂರ್ವ, ಅಶ್ರುತಪೂರ್ವ ಕವಿಯೆಂದರೆ ಇವನೇ.

ಇವನು ಬರೆಯುವಾಗ ಅನುಕರಿಸುತ್ತಿದ್ದ ಧಾಟಿಗಳು ಏಳು:

೧.'ನಾಗವೇಣಿ ನಗರಿಗೆ ನಾಂ ಪೋಗಿ ಬರುವೆನೇ' ಎಂಬಂತೆ

೨.'ಅಂತಕನ ದೂತರಿಗೆ ಕಿಂಚಿತ್ತು ದಯೆಯಿಲ್ಲ'ಎಂಬಂತೆ

೩.'ಏನು ಸುಖಾ! ಇದು ಏನು ಸುಖಾ!'ಎಂಬಂತೆ

೪.'ಇದಿ ನ್ಯಾಯಮಾ, ಶ್ರೀರಾಮಚಂದ್ರ?' ಎಂಬಂತೆ

೫.'ಏದೀ ಗತಿ, ನಾಕು?' ಎಂಬಂತೆ

೬.'ಹಾ ಪ್ರಿಯಾ, ಪ್ರಶಾಂತ ಹೃದಯಾ' ಎಂಬಂತೆ

೭.'ಬ್ಯಾಟರಾಯ ಸ್ವಾಮಿ ದೇವ್ರುಡಾ' ಎಂಬಂತೆ.

ಇವುಗಳನ್ನು 'ಶ್ಮಶಾನದ ಸಪ್ತಸೋಪಾನಗಳು' ಎಂದು ಅವನು ಕರೆಯುತ್ತಿದ್ದನು.

ನಗುವು ಸಹಜದ ಧರ್ಮ; ನಗಿಸುವುದು ಪರ ಧರ್ಮ
ನಗುವ ಕೇಳುತ ನಗುವುದತಿಶಯದ ಧರ್ಮ
ನಗುವ ನಗಿಸುವ ನಗಿಸಿ ನಗುತ ಬಾಳುವ ವರವ
ಮಿಗೆ ನೀನು ಬೇಡಿಕೊಳೊ – ಮಂಕುತಿಮ್ಮ

–ಈ ಧರ್ಮ ಪಾಲಿಸುತ್ತ, ತಮ್ಮ ದಿಟ್ಟತನದಿಂದ ಕನ್ನಡವನ್ನು ಮೆರೆಸಿದ ರಾಜರತ್ನಂ, ಧರ್ಮಸ್ಥಳದ ಮಕ್ಕಳ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿ, ಮಂಜುನಾಥನಿಗೆ ಅಂತಿಮ ನಮನಗಳನ್ನು ಸಲ್ಲಿಸಿ ಮಾರ್ಚ್ ೧೩, ೧೯೭೯ ರಂದು ಕಣ್ಮರೆಯಾದರು. ಕನ್ನಡಕ್ಕೊಬ್ಬನೇ ರತ್ನ! ನಾ ಕಂಡಿದ್ದ ಹಿರಿಯ ಆ ಚೇತನಕ್ಕೊಂದು ಅಕ್ಷರ ನಮನ.

ಆಧಾರಗಳು


೧. ಹಾ.ಮಾ. ನಾಯಕ– ಕಣ್ಮರೆಯಾದ ರತ್ನ, ಪ್ರಜಾಮತ, ಏಪ್ರಿಲ್ ೧, ೧೯೭೯

೨. ರಾ.ಶಿ.– ಜಿ.ಪಿ. ರಾಜರತ್ನಂ, ಪ್ರ. ಕನ್ನಡ ಸಂಘ, ಶೇಷಾದ್ರಿಪುರಂ ಕಾಲೇಜು, ಬೆಂಗಳೂರು ೫೬೦ ೦೨೦, ೧೯೮೦

೩. ನೀಲತ್ತಹಳ್ಳಿ ಕಸ್ತೂರಿ– ಅರದ ಬೆಳಕು, ಪ್ರ. ಜಿ.ಪಿ. ರಾಜರತ್ನಂ ಸ್ಮಾರಕ ಸಮಿತಿ, ಸರ್ ಎಂ. ವಿಶ್ವೇರಯ್ಯ ಪ್ರೌಢಶಾಲೆ, ಕೋನೇನ ಅಗ್ರಹಾರ, ವಿಮಾನಪುರ, ಬೆಂಗಳೂರು ೫೬೦ ೦೧೭, ೧೯೮೦(ಪುನರ್ ಮುದ್ರಣ ೨೦೦೬ ಅಭಿನವ ಬೆಂಗಳೂರು)

೪. ಜಿ.ಪಿ. ರಾಜರತ್ನಂ– ವಿಚಾರ ರಶ್ಮಿ, ಸಂಪುಟ ೨, ಪ್ರ. ಶಾಕ್ಯ ಸಾಹಿತ್ಯ ಮಂಟಪ, ಮಲ್ಲೇಶ್ವರಂ, ಬೆಂಗಳೂರು ೫೬೦ ೦೫೫, ೧೯೭೨

೫. ಜಿ.ಪಿ. ರಾಜರತ್ನಂ– ಮಹಾಕವಿ ಪುರುಷ ಸರಸ್ವತಿ, ಪ್ರ.'ವಿದೇಹ' ೭೭೧, ೧೭ನೆಯ ಕ್ರಾಸ್ ರೋಡ್, ಮಲ್ಲೇಶ್ವರಂ, ಬೆಂಗಳೂರು ೫೬೦ ೦೫೫, ೧೯೬೫

೬.ಜಿ.ಪಿ. ರಾಜರತ್ನಂ–ರತ್ನನ ಪದಗಳು, ಪ್ರ. ಶಾಕ್ಯ ಸಾಹಿತ್ಯ ಮಂಟಪ, ಮಲ್ಲೇಶ್ವರಂ, ಬೆಂಗಳೂರು ೫೬೦ ೦೫೫, ೧೯೮೪




# ಶ್ರೀರಂಗರ ಪ್ರಖರ ಹಾಸ್ಯ

## ಶ್ರೀನಿವಾಸ ವೈದ್ಯ

ಹಾಸ್ಯದ ಎದ್ದು ಕಾಣುವ ಒಂದು ಗುಣವೆಂದರೆ, ಸಾಮಾನ್ಯವಾಗಿ ಅದು ಮನಕ್ಕೆ ಚಕ್ಕುಲಗುಲಿ ಇಟ್ಟು ನಗು ಉಕ್ಕಿಸುವಂಥದು. ಉಕ್ಕಿದ ನಗು ಇಳಿದಮೇಲೆ ಆಗೀಗ ಈ ಚಕ್ಕುಲಗುಲಿ ನಮ್ಮನ್ನು ಗಂಭೀರ ಚಿಂತನೆಗೆ ಈಡು ಮಾಡಿದರೂ, ಮುಖ್ಯವಾಗಿ ಹಾಸ್ಯದ ಗುಣ ರಂಜನೆ, ಉಲ್ಲಾಸ. ಹಾಸ್ಯದ ಉದ್ದೇಶ ಸಂತೋಷವನ್ನುಂಟುಮಾಡುವಂತಹುದು. ಇಂತಹ ಹಾಸ್ಯದಲ್ಲಿ ವ್ಯಂಗ್ಯ ವಿಡಂಬನೆ ವಕ್ರೋಕ್ತಿಗಳು ಝಗ್ಗೆಂದು ಮಿಂಚಿದಾಗ ಬಿಗಿಹಿಡಿದ ಮನಸ್ಸು ಕ್ಷಣಕಾಲ ಸಡಿಲಾಗಿ 'ವಾ! ಭಲೆ' ಎಂದು ಮೆಚ್ಚಿ ಆನಂದ ಸೂಸುವುದು.

ಈ ದೃಷ್ಟಿಯಿಂದ ನೋಡಿದಾಗ ಬಲು ತೀಕ್ಷ್ಣ ಬುದ್ಧಿಯ ಪ್ರಖರತೆಯಿಂದ ಪ್ರಜ್ವಲಿಸುವ ಶ್ರೀರಂಗರ ಮೊನಚು ಮೊನಚಾದ ಚತುರೋಕ್ತಿಗಳನ್ನು ಹಾಸ್ಯವೆಂದು ಅಥವಾ ಕೇವಲ ಹಾಸ್ಯವೆಂದು ಪರಿಗಣಿಸಬಹುದೇ ಎಂಬ ಸಂಶಯ ಕಾಡದೇ ಇರದು. ಎಷ್ಟೋ ಸಲ ಮೇಲುನೋಟಕ್ಕೆ ಅಥವಾ ಮೊದಲ ಓದಿಗೆ ಇವರ ಬರಹಗಳಲ್ಲಿನ ಹಾಸ್ಯ ಎದ್ದುಕಾಣುವುದೇ ಇಲ್ಲ.

ಉದಾಹರಣೆಗೆ: ೧೯೩೮ರಲ್ಲಿ ಬಳ್ಳಾರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಶ್ರೀರಂಗವಿರಚಿತ ವರದಿಯನ್ನು ನೋಡಬಹುದು. ಈ ವರದಿಯ ತಲೆಬರಹ 'ಸು..ಮ್ಮ..ನಿದ್ರೆ ಸಮ್ಮೇಳನ ಅರ್ಥಾತ್ ಬಳ್ಳಾರಿಯಲ್ಲಿ ಬರೆಗಾಲ' ಎಂದು. ತೀಕ್ಷ್ಣ

ವ್ಯಂಗ್ಯದಿಂದ ತುಂಬಿದ ಈ ತಲೆಬರಹದಲ್ಲಿ 'ಸು..ಮ್ಮ..ನಿದ್ರೆಯಲ್ಲಿನ ನಿದ್ರೆ, 'ಬರೆಗಾಲ ದಲ್ಲಿನ ಬರೆಗಳು', ಮೊದಲ ಓದಿಗೇ ಓದುಗರ ಗಮನ ಸೆಳೆಯದಿದ್ದರೆ ಆಶ್ಚರ್ಯವೇನಿಲ್ಲ. ಇದೇ ವರದಿಯ ಕೆಲವು ತುಣುಕುಗಳು ಹೇಗಿವೆ ನೋಡಿ:

...ಅಖಿಲ ಕರ್ನಾಟಕ ಎಂಬ ಅಪರನಾಮಾ ವಿಧಾನದಿಂದ ಕಂಗೊಳಿಸುವ ಬೆಂಗಳೂರು ನಗರದಲ್ಲಿ ನೆಲೆಗೊಂಡ ಸಾಹಿತ್ಯ ಪರಿಷತ್ತಿನ ಆಶ್ರಯದೊಳ್...

...ಸಮ್ಮೇಳನಕ್ಕೆ ಎತ್ತುಗಳ ಮೆರವಣಿಗೆ ಯಾಕೆ ಎಂಬ ಪ್ರಶ್ನೆಗೆ ಯಾಕೆಂದರೇನು? ...ಸಾಹಿತಿಗಳಿಗೆ ಎತ್ತು ಒಂದು ಸಂಕೇತವಾಗಿದೆ, ಮಂದಗಾಮಿತ್ವದ ಸಂಕೇತ...

...ಅಂತೂ ನಮಗೆ ಎಚ್ಚರವಾದಾಗ ಶ್ರೀ ಮುದವೀಡುಕರ ಕೃಷ್ಣರಾಯರು ಮಾತಾಡುತ್ತಿದ್ದರು (ಅದರಿಂದಲೇ ನಮಗೆ ಎಚ್ಚರವಾಗಿರಬಹುದು)...ಅದಿರಲಿ, ಮುಖ್ಯ ಭಾಷಣಗಳ ಅಚ್ಚಾದಪ್ರತಿಯನ್ನು ಮುಂಚಿತವಾಗಿ ಹಂಚಿದ್ದಿಲ್ಲವೆಂದರೆ ನಮಗೆ ನಿದ್ದೆಯೇ ಬರುತ್ತಿರಲಿಲ್ಲವೆಂದು ನನ್ನ ಅಭಿಪ್ರಾಯ...

...ಮರುದಿನ ಕೊನೆಯ ದಿನ ಎಂದು ಎಲ್ಲರಿಗೂ ಉತ್ಸಾಹ...

...'ಈ ಸಮ್ಮೇಳನ ಅತ್ಯಂತ ಯಶಸ್ವಿಯಾಯಿತೆಂದು, ಈ ಅಧಿವೇಶನ ತೀರ್ಮಾನಿಸುತ್ತದೆ' ಎಂಬ ಕೊನೆಯ ಠರಾವನ್ನು ಎಲ್ಲರೂ ಮಂಡಿಸಿ...

ಮೇಲಿನ ಉದಾಹರಣೆಗಳು ಶ್ರೀರಂಗರ ಹಾಸ್ಯದ ಪರಿ. ಈ ತಿವಿಯುವ, ಚುಚ್ಚುವ ವ್ಯಂಗ್ಯವನ್ನು ಅರ್ಥಮಾಡಿಕೊಳ್ಳಬೇಕಾದರೆ, ಓದುಗನೂ ಬೌದ್ಧಿಕ ಕಸರತ್ತು ಮಾಡಬೇಕಾಗಬಹುದೇನೋ ಎನಿಸುವುದಿಲ್ಲವೇ? ಶ್ರೀರಂಗರ ಇಂತಹ ಹಾಸ್ಯದಲ್ಲಿ ಮನಕ್ಕೆ ಕಚಗುಳಿ ಇಡುವ ಸಮಾನ್ಯ ಹಾಸ್ಯದ ಕುಚೋದ್ಯಕ್ಕಿಂತ ಹೆಚ್ಚಾಗಿ ವ್ಯವಸ್ಥೆಯ ವಿರುದ್ಧ, ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧ ಅಸಹನೆಯಿಂದ ಸಿಡಿದೇಳುವ ಶ್ರೀರಂಗರ ಆಕ್ರೋಶವನ್ನು, ಒಮ್ಮೊಮ್ಮೆ ಹತಾಶೆ ಆಕ್ರೋಶವನ್ನು ಕಾಣಬಹುದು.

ಶ್ರೀರಂಗರು ಕೊನೆಯವರೆಗೂ ಎಂದರೆ ಬದುಕಿನ ಪೆಟ್ಟುಗಳು ಅವರನ್ನು ಮಾಗಿಸಿದಾಗಲೂ ಹೀಗೆಯೇ angry youngman ಅಗಿದ್ದರೆಂದು ಕೇಳಿದ್ದೇನೆ. ಅವರ ಈ ಮನಃಸ್ಥಿತಿಗೆ ಅವರು ಹುಟ್ಟಿದ ಹಿನ್ನೆಲೆ, ಬೆಳೆದ ವಾತಾವರಣಗಳೂ ಕಾರಣವಾಗಿದ್ದವೋ ಏನೋ?

ಸಂಸ್ಕೃತ ಪಾಂಡಿತ್ಯಕ್ಕೆ ಹೆಸರಾಗಿ ಅಂದಿನ ರಾಜರಿಂದ ಸಂಸ್ಥಾನಿಕರಿಂದ ಕೆಲವು ಗ್ರಾಮಗಳನ್ನೇ ಜಹಗೀರಿಯಾಗಿ ಪಡೆದು ಲಕ್ಷ್ಮೀಸರಸ್ವತಿಯರಿಬ್ಬರನ್ನೂ ಒಲಿಸಿಕೊಂಡದ್ದು

ಒಂದು ಕಡೆಯಾದರೆ, ಇದೇ ವಂಶದ ಹಿರಿಯರೊಬ್ಬರು ಆ ದಿನಗಳಲ್ಲಿ ವಿಧವಾ ವಿವಾಹದಂತಹ ಕ್ರಾಂತಿಕಾರೀ ಬದಲಾವಣೆಯನ್ನು ಆಚರಣೆಗೆ ತಂದದ್ದು ಇನ್ನೊಂದು ಕಡೆ. ಹೀಗೆ ಸಂಪ್ರದಾಯದ ಚೌಕಟ್ಟಿನಲ್ಲಿಯೇ ಸಂಪ್ರದಾಯವನ್ನು ಧಿಕ್ಕರಿಸುವ ಬಂಡಾಯ ಪ್ರವೃತ್ತಿ, ವಿಚಿತ್ರ ಛಲ, ಇತರರಿಗಿಂತ ಭಿನ್ನ ಎನ್ನಿಸಿಕೊಳ್ಳಬೇಕೆಂಬ ಮನೋಧರ್ಮ– ಇವುಗಳೆಲ್ಲ ಶ್ರೀರಂಗರಿಗೆ ರಕ್ತಗತವಾಗಿಯೇ ಬಂದ ಗುಣಗಳು.

ಕ್ರಮೇಣ ಕರಗಿದ ಶ್ರೀಮಂತಿಕತೆ, ಸ್ಕೂಲುಕಾಲೇಜುಗಳಲ್ಲಿದ್ದಾಗ ಬಲವಾಗಿ ಬೀಸಿದ ಸ್ವಾತಂತ್ರ್ಯಸಂಗ್ರಾಮದ ಸೆಳೆತ, ಗಾಂಧಿ ಪ್ರಭಾವ, ಸಮಾಜ ಸುಧಾರಣೆಯ ಹುಚ್ಚು, ಇಂಗ್ಲೆಂಡಿನ ವಾಸ್ತವ್ಯ, ಆ ವಾಸ್ತವ್ಯದಲ್ಲಿ ನೋಡಿದ ಇಂಗ್ಲಿಷ್ ನಾಟಕಗಳ ಪರಿಣಾಮ, ಏಕೀಕರಣ ಚಳುವಳಿಯಲ್ಲಿ ವಹಿಸಿದ ಬಲು ಮಹತ್ವದ ಪಾತ್ರ, ಮರಾಠಿಗರೊಡನೆ ತಿಕ್ಕಾಟ– ಹೀಗೆಲ್ಲ ಮೊದಮೊದಲಿನ ವರುಷಗಳಲ್ಲಿ ಶ್ರೀರಂಗರು ಸಾಹಿತ್ಯಕ್ಷೇತ್ರಕ್ಕಿಂತ ಸಾಮಾಜಿಕ ಚಟುವಟಿಕೆಗಳಲ್ಲಿಯೇ ತಮ್ಮನ್ನು ತೊಡಗಿಸಿಕೊಂಡದ್ದು ಹೆಚ್ಚು. ಆಮೇಲೆ ಬಲು ಶೀಘ್ರವಾಗಿ ಬದುಕಿನ ಎಲ್ಲಾ ಕ್ಷೇತ್ರಗಳಿಗೂ ಪಿಡುಗಿನಂತೆ ಹಬ್ಬಿದ ಆಷಾಢಭೂತಿತನ, ಭ್ರಷ್ಟಾಚಾರ, ಅಸಹ್ಯ ಹುಟ್ಟಿಸುವ ಜಾತೀಯತೆ, ಸ್ವಜನ ಪಕ್ಷಪಾತ, ಲಂಚ ಒಂದು ಮೌಲ್ಯವಾಗಿ ಬೆಳೆದ ಸ್ಥಿತಿ, ಇವೆಲ್ಲವುಗಳಿಂದ ಭ್ರಮನಿರಸನಗೊಂಡ ಶ್ರೀರಂಗರು ಬದುಕಿನ ಚಿಲ್ಲರೆಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಲಾರದ ಒಂದು ದೊಡ್ಡ ದುರಂತವ್ಯಕ್ತಿಯಾಗಿಯೇ ಬೆಳೆದರು. ಅಂತೆಯೇ ಅವರ ಆಕ್ರೋಶದಿಂದ, ಹತಾಶೆಯಿಂದ ಹುಟ್ಟಿದ ವ್ಯಂಗ್ಯ ಹಾಸ್ಯಕ್ಕಿಂತ ಹೆಚ್ಚಾಗಿ ದುರಂತವನ್ನೇ ಧ್ವನಿಸುತ್ತದೆ.

ಈ ಕಾಲದಲ್ಲಿ ಶ್ರೀರಂಗರು ಧಾರವಾಡದಿಂದ ಹೊರಡುತ್ತಿದ್ದ 'ನರಸಿಂಹ' ಎಂಬ ಮಾಸಪತ್ರಿಕೆಗೆ ನಿಯಮಿತವಾಗಿ ಬರೆಯುತ್ತಿದ್ದರು. ಇವರು ಆಗ ಬರೆದ, 'ಕುಸ್ತಿಗೂ ಕುಲ ಬೇಕು', 'ಜಾತೀಯತೆಗೆ ಒಂದೇ ಜಾತಿ', 'ಬಾಂಧವರ ಬ್ಯೂರಾಕ್ರಸಿ', 'ಅನಾದರ್ ಸಮಿತಿ'(ದರ್ ಸಮಿತಿಯ ವ್ಯಂಗ್ಯ), 'ದುರ್ಬುದ್ಧಿವಂತಿಕೆ', 'ಮುಂದಾಳುಗಳ ಹಿಂಜೋಲಿ', 'ಅಯೋಗ್ಯ ಮುಂದಾಳುತನ', 'ಮುಂದಾಳುಗಳೇ, ಮುಂದೇನು?'–ಮುಂತಾದ ಲೇಖನಗಳು ಅಂದಿನ ಅಥವಾ ಅಂದಿನಿಂದಲೇ ಹದಗೆಡುತ್ತಿರುವ ನಮ್ಮ ರಾಜಕೀಯ ಸಾಮಾಜಿಕ ಜೀವನ ಶ್ರೀರಂಗರನ್ನು ಹೇಗೆ ಕಲಕಿತ್ತೆಂದು ತೋರುತ್ತವೆ.

ಹಾಸ್ಯ ಹೀಗೇ ಇರಬೇಕು ಎಂಬ ಸ್ಪಷ್ಟ ವ್ಯಾಖ್ಯೆ ಇದ್ದಂತಿಲ್ಲ. ಕೈಲಾಸಂ ಹೇಳುವಂತೆ, 'ಮಿಂಚಿನಂತೆ ಸಾಮಾಜಿಕ ದೋಷಗಳ ಮೇಲೆ ಬೆಳಕು ಚೆಲ್ಲಿ ಮರೆಯಾಗುವುದು ಹಾಸ್ಯದ ಸ್ವಭಾವ!' ಸಾಹಿತ್ಯ ಕಾಂತಾಸಮ್ಮಿತವಾಗುವುದಕ್ಕಿಂತ ವಿದೂಷಕ ಸಮ್ಮಿತವಾಗಬೇಕೆಂಬ ಸಿದ್ಧಾಂತವನ್ನೇ ಕೈಲಾಸಂ ಮಂಡಿಸಿದ್ದರು. ವಿದೂಷಕ ರಾಜನ ಮಿತ್ರ. ಹಾಸ್ಯದ ಚಟಾಕಿಯಿಂದಲೇ ಅವನು ರಾಜನ ಲೋಪದೋಷಗಳನ್ನು ಎತ್ತಿ

ತೋರುತ್ತ, ರಾಜನನ್ನು ಸರಿ ದಾರಿಗೆ ತರುತ್ತಿರುತ್ತಾನೆ. ಪ್ರಜಾಪ್ರಭುತ್ವದಲ್ಲಿ, ಪ್ರಜೆಗಳಿಗೂ ಪ್ರಭುಗಳಿಗೂ ಕೂಡಿಯೇ ಶ್ರೀರಂಗರಂತಹರ ಚಾಟಿಯೇಟುಗಳು ಅವಶ್ಯ ಎಂದು ತೋರುತ್ತವೆ.

ತಮ್ಮ ಸಮಕಾಲೀನರಾದ ಕೈಲಾಸಂರ ಸಾತೂ, ಪಾತೂ, ಬೋರ, ನಾಗತ್ತೆಯರಂತೆ, ಗೊರೂರರ ಸಾಣಿ, ಶೀನಪ್ಪ, ಶಾಲುಸಾಬಿ, ಜೋಡಿದಾರರಂತೆ- ಶ್ರೀರಂಗರು ಯಾವ ಶಾಶ್ವತ ಪಾತ್ರವನ್ನೂ ನಿರ್ಮಿಸಲಿಲ್ಲ. ಶ್ರೀರಂಗರ ಧರೆಪ್ಪ ಕೂಡ ಅತಿಬುದ್ಧಿವಂತಿಕೆಯ ಮಾತೇ ಆಡುತ್ತಾನಾದ್ದರಿಂದ ಅವನು ನಮಗೆ ಬೋರನಂತೆ, ರಂಗೇಗೌಡನಂತೆ ಆತ್ಮೀಯನೆನಿಸುವುದಿಲ್ಲ.

ಕೈಲಾಸಂ, ಗೊರೂರರ ಹಾಸ್ಯ ದೃಷ್ಟಿ ತಿಳಿನಗೆಯಿಂದ ಸಂತಸದಿಂದ ಕೂಡಿದ ಹಾಸ್ಯ ದೃಷ್ಟಿ. ಶ್ರೀರಂಗರದು ಬೇಟೆಗಾರನ ದೃಷ್ಟಿ. ತೀವ್ರವ್ಯಂಗ್ಯದ ಶರಾಘಾತದ ದೃಷ್ಟಿ. ಎಷ್ಟೋ ಸಲ ಇವರಿಗೆ ಸಾಹಿತ್ಯದ ಸಮಷ್ಟಿಗಿಂತ, ಬರವಣಿಗೆಯ ಲಯಕ್ಕಿಂತ, ಚುಚ್ಚುವುದು, ತಿವಿಯುವುದೇ ಮುಖ್ಯವಾಗಿಬಿಡುತ್ತದೆ. ಈ ಮಾತಿಗೆ ಉದಾಹರಣೆಯಾಗಿ:

'ಶ್ರಾದ್ಧ ಸೋಶಲಿಸಂ' ಏಕಾಂಕ ನಾಟಕದಲ್ಲಿ ವಿಕ್ಷಿಪ್ತ ವೆಂಕ 'ಯಾವ ರಾಕ್ಷ್ಸಾನೂ ಅಲ್ಲೋ! ದಮ್ಮಾಕ್ರಸಿ! ಕೂಲಿಗಾಗಿ ತೇಕುವ ಬಡವರು, ನೌಕರಿಗಾಗಿ ತೇಕುವ ತರುಣರು, ಸಾಯುವುದಕ್ಕೆ ತೇಕುವ ಮುದುಕರು, ಇಂತಹ ರೋಗಕ್ಕೆ ದಮ್ಮು-ದಮ್ಮು ದಮಾಕ್ರಸಿ ಅಂತ ಹೆಸರು...' ಕಾಲಾನುಸಾರ ಶ್ರಾದ್ಧದ ಸ್ವರೂಪ ಬದಲಾಯಿಸಿದೆ. ಆದ್ದರಿಂದ ಇಂದಿನ ಶ್ರಾದ್ಧವೂ ಸೋಶಿಯಲಿಸ್ಟ ಶ್ರಾದ್ಧವಾಯಿತು ಎಂದರೆ ಸಾಮುದಾಯಿಕ ಶ್ರಾದ್ಧ...

'ಅಶ್ವಮೇಧ' ನಾಟಕದ ಕೊನೆಯಲ್ಲಿ (ಮದುವೆಯಾಗದ ಕನ್ಯೆಯ ತಂದೆ ವೆಂಕಪ್ಪ):

ಊರ್ವಿಯೊಳ್ ವೆಂಕಪ್ಪ ಪಡೆದ ಕುವರಿಯು
ಕಮಲೆಯೋರ್ವಳ್ ಅಕೆಯ ಮದುವೆ;
ಯಾರ್ಯಾರಿಗೆ ಉದರನಿರ್ವಹಣ ಶಕ್ತಿ
ಆ ತರುಣಳಿವಳನ್ನ ಪಡೆದು ಮದುವೆಯಾಗಲಿ

'ವಿಶ್ವಾಮಿತ್ರ ಸೃಷ್ಟಿಯಲ್ಲಿ', ರಂಗಣ್ಣ ಪೂಜೆಮಾಡುವಾಗ ತಟ್ಟೆಯಲ್ಲಿದ್ದ ಶಾಲಿಗ್ರಾಮ ಅವನ ಕೈಯಿಂದ ಜಾರಿ ನಾರಾಯಣನ ಹತ್ತಿರ ಪಾದರಕ್ಷೆ (ಚಪ್ಪಲಿ)ಗಳನ್ನಿಟಿದ್ದ ಸ್ಥಳದಲ್ಲಿ ಬಂದು ಬೀಳುವುದು.

ಮೇಲಿನ ಮೂರು ಸಂದರ್ಭದಲ್ಲಿ ಶ್ರೀರಂಗರ ಹಾಸ್ಯ ತುಸ ಅತಿ ಅಯಿತೇನೋ, macabre ಆಯಿತೇನೋ ಎನ್ನಿಸದೆ ಇರದು. ಆದರೆ ಶ್ರೀರಂಗರ ಹಾಸ್ಯದಲ್ಲಿ ತಿಳಿಹಾಸ್ಯ,

ಸ್ವಲ್ಪ ಲಘುತ್ವ ಇಲ್ಲವೆ ಇಲ್ಲವೆಂತಲ್ಲ. ಆದರೆ ಅಲ್ಲಿಯೂ ಕೂಡ ಅವರ ಬುದ್ಧಿವಂತಿಕೆ, ಸಾಂಕೇತಿಕತೆ ಬೆರಗುಗೊಳಿಸುವಂತಹದು.

'ಸಂಧ್ಯಾಕಾಲ' ನಾಟಕದ ಕೊನೆಯಲ್ಲಿ ಧರೆಪ್ಪ ಕಂದೀಲನ್ನು ಎತ್ತಿಹಿಡಿದು, 'ಮುಗದೇತರಿ ಇದರ ಕಾಲ, ಅಣ್ಣಾ ಅವರ, ಒಳಗ ಇಟ್ಟರ ಸೋರತೈತಿ, ಹೊರಗ ಇಟ್ಟರ ಆರತೈತಿ.' ಇದು ಇಡೀ ದೇಶದ ಮುಪ್ಪನ್ನೇ ಕಂಡು ಆಡಿದ ಮಾತಂತೆ!

'ಮುಷ್ಕರ ಮೀಮಾಂಸೆ ಎಂಬ ಪ್ರಬಂಧದಲ್ಲಿ,

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ

ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಾಂ ಸೃಜಾಮ್ಯಹಮ್

ಎಂಬುದನ್ನು, ದಂಗೆ ಲೂಟಿ ಕೊಲೆ ಕೊಳ್ಳೆ ಪರಮಾವಧಿಯನ್ನು ಮುಟ್ಟಿದಮೇಲೆಯೇ ಸರಕಾರವು ತನ್ನ ಕರ್ತವ್ಯಕ್ಕಾಗಿ ಅವತರಿಸುವುದು ಎಂದು ಅರ್ಥೈಸಿ, ಅಷ್ಟಕ್ಕೆ ಬಿಡದೇ, 'ನೀವೆಲ್ಲಾ ಕೆಟ್ಟು ಹಾಳಾಗಿಹೋಗುವ ತನಕ ನಾನು ಬರುವುದೇ ಇಲ್ಲ' ಎಂದು ಪರಮಾತ್ಮನೇ ಮುಷ್ಕರ ಹೂಡಿ, ನಮಗೆ ಭಗವದ್ಗೀತೆಯಲ್ಲಿ ಬೋಧಿಸಿದ್ದಾನೆ, ಎಂಬಲ್ಲಿ ಶ್ರೀರಂಗರ ತರ್ಕ(ಒಮ್ಮೊಮ್ಮೆ ಕುತರ್ಕ) ಬರೀ ಬೆರಗುಗೊಳಿಸುವಷ್ಟೇ ಏಕೆ ದಂಗು-ಬಡಿಸುತ್ತದೆ.

ಶ್ರೀರಂಗರು ಸೃಷ್ಟಿಸಿದ ವಿಪುಲ ಸಾಹಿತ್ಯದಲ್ಲಿ, ತೀರ ತಿಳಿಹಾಸ್ಯವನ್ನು, ಬುದ್ಧಿಗೆ ತ್ರಾಸ ಕೊಡದೆ ಮನಕ್ಕೆ ಮಾತ್ರ ಕಚಗುಳಿ ಇಡುವ ತಿಳಿಹಾಸ್ಯವನ್ನು ಅಲ್ಲಲ್ಲಿ ಹೆಕ್ಕಬೇಕಾಗುತ್ತದೆ. ಉದಾಹರಣೆಗೆ:

'ದೋಸೆಯ ಪ್ರಾಣಹಿಂಸೆ' ಎಂಬ ಪ್ರಬಂಧದಲ್ಲಿ ಬರುವ ಶ್ಲೋಕ-

ಚೂರ್ಣಮದಃ ಚೂರ್ಣಮಿದಮ್

ಚೂರ್ಣಾತ್ ಚೂರ್ಣಮುದಚ್ಯತೇ

ಚೂರ್ಣಸ್ಯ ಚೂರ್ಣಮಾದಯ

ಚೂರ್ಣಮೇವಾವಶಿಷ್ಯತೇ

(ಚೂರ್ಣ ಮಾಡಿದರೆ ಮದವೇರುವುದು, ಚೂರ್ಣಮಾಡಲು ಮಿದುವಾಗಿರುವುದು, ಚೂರ್ಣ ಮಾಡಿದಂತೆ ಮುದ ಎನಿಸುವುದು, ಎಷ್ಟು ಚೂರ್ಣಮಾಡಿದರೂ ಇನ್ನಿಷ್ಟು ಮಾಡಬೇಕಿನಿಸುವುದು ಅಥವಾ ಚೂರ್ಣ ಮಾಡಬೇಕೆಂಬ ಇಚ್ಛೆ ಇನ್ನೂ ಉಳಿಯುವುದು);

'ವಿಶ್ವಾಮಿತ್ರನ ಸೃಷ್ಟಿಯಲ್ಲಿ' 'ಟ್ರೇನು ಪ್ರವಾಸದಲ್ಲಿ ತಿಪಟೂರು ಜಂಕ್ಷನ್' ಎಂಬುದನ್ನು ಕನ್ನಡದಲ್ಲಿ ಆಧ್ವಾಸವಾಗಿ 'ತೆಪೂರು ಜಂಗತಿನ್' ಎಂದು ಬರೆದದ್ದು;

ಅದೇ ಟ್ರೇನು ಪ್ರವಾಸದ ಸಂದರ್ಭದಲ್ಲಿ ಕನ್ನಡ ಬಾರದ ಟಿಕೀಟು ಕಲೆಕ್ಟರನು ಒಬ್ಬ ಹಳ್ಳಿಯ ಚೆಲುವೆಯ ಟಿಕೇಟು ಕೇಳುತ್ತ ಅವಳು 'ಬ್ಯಾಳೀಗಂಟಿನ ಚುಂಗಿನಾಗೈತಿ' ಎಂದದ್ದನ್ನು 'ಬಾಳೀಗಂಟು' ಎಂದು ತಪ್ಪಾಗಿ ಹೇಳಿ ಬೈಸಿಕೊಂಡದ್ದು (ಬಾಳೀಗಂಟು ಎಂದರೆ ಸೀರೆ ಜಾರದಂತೆ ತಿರುವಿದ ಉಡಿಗಂಟು).

ಮೇಲಿನ ಕೆಲವು ಶ್ರೀರಂಗರ ತಿಳಿಹಾಸ್ಯಕ್ಕೆ ಸಾಕ್ಷಿಯಾಗಬಹುದೇನೋ! 'ವಿಶ್ವಾಮಿತ್ರ ಸೃಷ್ಟಿ' ಇಡೀ ಕಾದಂಬರಿಯಲ್ಲಿ ಕಥನಾಯಕ ನಾರಾಯಣ, ಅವನ ವಸ್ತುಸ್ಥಿತಿಗೂ ಅವನೇ ತನ್ನ ಕಲ್ಪನೆಯಲ್ಲಿ ತನ್ನನ್ನು ಕಲ್ಪಿಸಿಕೊಳ್ಳುವ ಅಸಾಮಾನ್ಯತೆಗೂ ಹೊಂದಾಣಿಕೆಯಾಗದಿರುವುದೇ ಹಾಸ್ಯಕ್ಕೆ ಕಾರಣವಾಗುತ್ತದೆ.

ಶ್ರೀರಂಗರ ಅನೇಕ ಕೃತಿಗಳಲ್ಲಿ ಹಾಸ್ಯದ ಹತ್ತು ಮುಖಗಳನ್ನು ಕಾಣಬಹುದು. ಆದರೆ ಇವರ ಹಾಸ್ಯ ಮುಖ್ಯವಾಗಿ ಚತುರೋಕ್ತಿಯಿಂದ, ಪ್ರಖರ ಬುದ್ಧಿವಂತಿಕೆಯಿಂದ, ಅತಿತಾರ್ಕಿಕತೆಯಿಂದ ಕೂಡಿದ್ದು. ಹಾಗಾಗಿ ಇವರ ಹಾಸ್ಯ ತಿಳಿನಗುವಿಗಿಂತ ಹೆಚ್ಚಾಗಿ ಮೆಚ್ಚುಗೆಯನ್ನು, ಬೆರಗನ್ನು ಹುಟ್ಟಿಸುವಂತಹದು.

ವಿ.ಸೀ. ಯವರು ಹೇಳುವಂತೆ 'ಹೃದಯಕ್ಕಿಂತ ಬುದ್ಧಿಯ ಭಾಗವೇ ಸನ್ನಿವೇಶ ಕಲ್ಪನೆ, ಕಥಾಕ್ರಿಯೆಯಲ್ಲಿ ನಿರ್ವಹಣೆಯಲ್ಲಿ ಉಳಿಯುತ್ತವೆ.....'ಇನ್ನಷ್ಟು ಸಹನೆ, ಮೃದುತೆ, ಅಂತಃಕರಣಗಳಿಂದ ನೋಡಿದ್ದರೆ ಜೀವನ ಚಿತ್ರಗಳು ಮಾನವ ಹೃದಯವನ್ನು ಹೆಚ್ಚು ರಸಾರ್ದ್ರವಾಗಿ ಕಾಣಿಸಬಹುದಿತ್ತು.

ಕೀರ್ತಿನಾಥ ಕುರ್ತಕೋಟಿಯವರು ಕೈಲಾಸಂ ಕುರಿತು 'ಕೈಲಾಸಂ ಹಾಸ್ಯವನ್ನು ಕುರಿತು ಒಂದೆರಡು ಮಾತು ಹೇಳಬಹುದು. ಅದು ನಿಶ್ಚಯವಾಗಿ ವಿದಗ್ಧವಾದ ಸುಸಂಸ್ಕೃತ ವಿನೋದ. ವಿದಗ್ಧತೆಗೆ ಕಾರಣ ಅವರ ಅಪಾರ ಪಾಂಡಿತ್ಯ, ಸುಸಂಸ್ಕೃತೆಗೆ ಅವರ ಹೃದಯ ಸಂಸ್ಕಾರ ಕಾರಣ. ಆದರೆ ಅಣಕದ ಮೋಹ ವಿಪರೀತವಾದಾಗ ಹಾಸ್ಯ ನಿರ್ಮಮವಾಗುತ್ತದೆ...' ಇದೇ ಮಾತನ್ನು ಯಥಾವತ್ತಾಗಿ ಶ್ರೀರಂಗರ ಬಗೆಗೂ ಹೇಳಬಹುದೇನೋ? ಕೈಲಾಸಂರಿಗೆ ಅಣಕದ ಮೋಹ, ಶ್ರೀರಂಗರಿಗೆ ತರ್ಕದ ಮೋಹ.



# ಗೊರೂರು ಅವರಲ್ಲಿ ಹಾಸ್ಯ ಪ್ರವೃತ್ತಿ

ಸೌಮ್ಯ ಶ್ರೀನಿವಾಸ್

ಹಾಸ್ಯ ವಿವಿಧ ಮುಖಗಳನ್ನೊಳಗೊಂಡ ಒಂದು ರಸ. ತೀಕ್ಷ್ಣವಾದ ಹಾಸ್ಯ, ನಿಸ್ಸಾರವಾದ ಹಾಸ್ಯ, ಲಘುವಾದ ಹಾಸ್ಯ, ಹೊಟ್ಟೆ ಉಮ್ಮಳಿಸಿಕೊಂಡು ನಗು ಹತ್ತು ಹನ್ನೆರಡು ಕಡೆಯಿಂದ ಕಿತ್ತು ಬರುವಂಥ ಹಾಸ್ಯ, ಹೀಗೆ ನಾನಾ ವಿಧಗಳನ್ನು ನೋಡುತ್ತೇವೆ. ಉದಾಹರಣೆಗೆ, ಕೈಲಾಸಂ ಅವರ ಹಾಸ್ಯ ತೀಕ್ಷ್ಣವಾದ ಹಾಸ್ಯ. ಅವರ ಹಾಸ್ಯ ಕತ್ತಿಯ ಮೊನೆಯಂತೆ ಇರಿದರೂ ಆ ಹಾಸ್ಯದ ಹಿನ್ನೆಲೆಯಲ್ಲಿ ಅಂದಿನ ಸಮಾಜದ ಭೀಕರತೆಯನ್ನು ನಿಚ್ಚಳವಾಗಿ ತೆರೆದು ತೋರಿಸುವಂಥ ಹಾಸ್ಯ. ನಗೆಯ ಹಿಂದೆ ನೋವು ಕಾಣುವ ಹಾಸ್ಯ. ಗೋರೂರದು ಈ ತರಹದ ಹಾಸ್ಯವಲ್ಲ. ಆದರೆ, ಒಣಗಿದ ತರಗೆಲೆಯಂತೆ ನಿಸ್ಸಾರವಾದ ಹಾಸ್ಯವೂ ಅಲ್ಲ. ನವಿರಾದ ಕಚಗುಳಿ ಇಡುವ ಹಾಸ್ಯ. ಓದಿ ನಕ್ಕು ನಲಿಯುವಂತಹ ಹಾಸ್ಯ. ಗೋರೂರರು ಅಂದಿನ ಸಮಾಜದ ಸನ್ನಿವೇಶಗಳನ್ನು, ಘಟನೆಗಳನ್ನು, ಅನುಭವಗಳನ್ನು ನವುರಾದ ಹಾಸ್ಯದ ಮರೆಯಲ್ಲಿ ನಮ್ಮ ಮುಂದಿಡುತ್ತಾರೆ. ಅವರ ಹಾಸ್ಯ ಓದಿ ನಕ್ಕು ನಲಿದುದಲ್ಲದೆ ಮೇಲೆ ಮೇಲೆ ಮೆಲಕಾಡುವಂತಹ ಹಾಸ್ಯ. ಅವರ ಹಾಸ್ಯಕ್ಕೊಂದು ವಿಶಿಷ್ಟವಾದ ಕೈಚಳಕವಿದೆ. ನಗುವಿನ ಅಲೆಯೊಂದಿಗೆ ತೇಲುತ್ತಾ, ಮುಳುಗುತ್ತ ಹಾಸ್ಯದ ಮಡುವಿನಲ್ಲಿ ಮುಳುಗೆದ್ದು ಬರುವ ಹೊಸ ಅನುಭವವಾಗುತ್ತದೆ.

'ಗರುಡಗಂಬದ ದಾಸಯ್ಯ' (ಮೊದಲ ಮುದ್ರಣ ೧೯೩೪) ಬಹುಶಃ ಅವರ ಮೊದಲ ಹಾಸ್ಯಲೇಖನಗಳ ಸಂಗ್ರಹ. 'ಗರುಡಗಂಬವನ್ನು' ಆದಿಕರ್ನಾಟಕರಿಗೆ

ಗೋರೂರರು ಕೊಡಿಸುವ ಪ್ರಸಂಗ ಬಹು ಮೋಜಿನದಾಗಿದೆ. ಕಂಭವನ್ನು ಎಲ್ಲರಿಂದ ಮುಚ್ಚಿಟ್ಟು ಗುಟ್ಟಾಗಿ ರೈಲ್ವೇ ಸ್ಟೇಷನ್ನಿಗೆ ಬಂದು ರೈಲಿನ ಗಾಡಿಯಲ್ಲಿ ಕುಳಿತು ತಾನು ದಾಸಯ್ಯನೆಂದು ತಿಳಿಯಬಾರದೆಂದು ಕುಳಿತವರೊಂದಿಗೆ ಇಂಗ್ಲಿಷಿನಲ್ಲಿ ಮಾತನಾಡುತ್ತ ಅವರ ಅಸಮಾಧಾನಕ್ಕೆ ಒಳಗಾಗಿ ಕೊನೆಗೆ ಸ್ಟೇಷನ್ನಿನಲ್ಲಿ ಇಳಿದು ಆದಿಕರ್ನಾಟಕ ಭಜನ ಮಂದಿರದಕಡೆ ಓಟಕಿತ್ತಾಗ, ಅದನ್ನು ಕಂಡ ಸ್ಟೇಷನ್ ಮಾಸ್ಟರು, 'ಅದ್ಯಾರೋ ದಾಸಯ್ಯ ಟಿಕೇಟಿಲ್ಲದೆ ಓಡ್ತಿರೋನು?' ಎಂದಾಗ, ಅದುವರೆವಿಗೂ ಕಂಭದ ದೆಸೆಯಿಂದ ಪಟ್ಟ ಪಾಡು ಈಗ ಸಿಟ್ಟಿನಿಂದ ಹೊರಗೆ ಬಂದು, 'ನಿಮ್ಮಪ್ಪ ದಾಸಯ್ಯ' ಎಂದು ಕೂಗಿ ಓಡಿದ ಪ್ರಸಂಗ ಹಾಸ್ಯ ಪೂರಿತವಾಗಿದೆ.

ಹಾಸ್ಯ ಗೊರೂರರ ಜೀವನದಲ್ಲಿ ಹಾಸು ಹೊಕ್ಕಾಗಿ ಬಂದದ್ದು. ಸ್ವಾಭಾವಿಕವಾದ ಹಾಸ್ಯವನ್ನು ಅವರ ನಡೆನುಡಿಯಲ್ಲಿ ಕಾಣುತ್ತೇವೆ. ಅವರ ಲೇಖನಗಳಲ್ಲಿ ಹಾಸ್ಯ ತಾನೇ ತಾನಾಗಿ ಹರಿದು ಬರುತ್ತದೆ. ಉದಾಹರಣೆಗೆ ಅವರ 'ಮಲ್ಲಿಗೆ ಹಳ್ಳಿಯ ಬಯಲಾಟ'ದಲ್ಲಿ ಹಳ್ಳಿಯವರು ರಾಮಾಯಣ ಆಡಿದಾಗ ಆಗುವ ಅನಾಹುತ, ಅವ್ಯವಸ್ಥೆ, ಸನ್ನಿವೇಶಗಳ ಅಸಂಬದ್ಧತೆ, ಇವುಗಳನ್ನು ಓದಿಯೇ ಅನುಭವಿಸಬೇಕು. ಮಾದನು ರಾಮನ ಪಾತ್ರವನ್ನು ವಹಿಸಿಕೊಂಡಿದ್ದರೂ, ಹನುಮಂತನ ಆವೇಶವನ್ನು ತಂದುಕೊಂಡು, ರಬ್ಬರ್ ಚೆಂಡು ಪುಟವಿಟ್ಟಂತೆ 'ಧೀಂತಕ ಧಾಂ' ಎಂದು ಕುಣಿದಾಡಿ, ಪ್ರೇಕ್ಷಕರನ್ನು ಮೂಕರನ್ನಾಗಿಸಿದ ಬಗೆ ಓದುಗರ ಮನಸ್ಸಿನಲ್ಲಿ ಹಾಸ್ಯದ ತೆರೆಗಳನ್ನೆಬ್ಬಿಸುತ್ತದೆ. ಅನಂತಾಚಾರ್ಯರ ಆಂಜನೇಯನ ಪಾತ್ರದಿಂದ ಆದ ಆಭಾಸ ಮುಂತಾದ ಸಂಗತಿಗಳನ್ನು ಗೊರೂರರು ಹಾಸ್ಯವತ್ತಾಗಿ ಹೇಳಿರುವುದು ಮನಮುಟ್ಟುತ್ತದೆ. ಇವೆಲ್ಲವನ್ನೂ ಅವರು ಬರೆದು ಐವತ್ತು-ಅರವತ್ತು ವರ್ಷಗಳಾದರೂ ಓದಿದಾಗ ಇಂದೇ ಈಗಲೇ ನಡೆಯಿತೇನೋ ಎನ್ನುವಷ್ಟು ಹಚ್ಚ ಹಸುರಾಗಿದೆ. ಇದು ಅವರ ಬರವಣಿಗೆಯ ವೈಶಿಷ್ಟ್ಯ. ಅವರ ಬರವಣಿಗೆ ಅಷ್ಟು ಜೀವಂತವಾದುದು. ಅವರೇ ಹೇಳುವಂತೆ: 'ಯಾವ ಚೌಕಟ್ಟಿನೊಳಗೂ ಅಡಗದ, ಬಾಳಿನ ವಿಶ್ವರೂಪ ದರ್ಶನದ ಸೂಕ್ಷ್ಮ ಪರಿಚಯವನ್ನು ಕಾಂತಾ ಸಂಮಿತಿಯ ಕಮನೀಯ ರೂಪದಲ್ಲಿ ವಾಚಕರ ಮುಂದೆ ಈ ಕತೆಗಳಲ್ಲಿ ನಿರೂಪಿಸಿದೆ' (ಆಧಾರ ೧).

ಗೊರೂರರ ಹಾಸ್ಯ ಈಗ ಓದಿ ನಾಳೆ ಮರೆಯುವಂತಹುದಲ್ಲ. ಓದುಗರ ಮನಸ್ಸಿನಲ್ಲಿ ಆಳವಾಗಿ ನಿಲ್ಲುವಂಥ ಹಾಸ್ಯ. ಯಾವುದೇ ಸಂದರ್ಭವಾದರೂ ಅವರ ಲೇಖನಿಯಿಂದ ಹೊರಬಂದಾಗ ಓದುಗನ ಮನಸ್ಸಿಗೆ ತಟ್ಟುವಂತೆ ಹೇಳುವ ಚಾಕಚಕ್ಯತೆ ಅವರ ಹಾಸ್ಯಕ್ಕೆ ಇದೆ. ಉದಾಹರಣೆಗೆ 'ಜಾತ್ರೆ' ಎಂಬ ಲೇಖನದಲ್ಲಿ ಊರಿನ ಜಾತ್ರೆಗಳ ವೈಖರಿಯನ್ನು ವಿವರಿಸುತ್ತ ದೇವಸ್ಥಾನದ ಊಟದ ವಿಷಯ ಹೀಗೆ

ಹೇಳುತ್ತಾರೆ: 'ಅನ್ನದ ರಾಶಿಯನ್ನು ನೋಡಿದರೆ ಊಟಕ್ಕೆ ಕುಳಿತವರ ಕೈಕಾಲುಗಳೆಲ್ಲ ಅನ್ನಕ್ಕಾಗಿ ಮಾಡಿರುವ ಚೀಲಗಳಂತೆ ತೋರುತ್ತವೆ.' ಇನ್ನೊಂದು ಪ್ರಸಂಗದಲ್ಲಿ, 'ಶಾಮಯ್ಯಂಗಾರ್ರು ಬಿಟ್ಟಿರುವ ಗಡ್ಡ, ಜೇನುಗೂಡಿನಂತೆ ಕರ್ರಗೆ ದಟ್ಟವಾಗಿ ಉದ್ದವಾಗಿ ಇಳಿಬಿದ್ದಿತ್ತು.' ಹೀಗೆ ಸನ್ನಿವೇಶಗಳ ಹೋಲಿಕೆಯಿಂದ ಚಿತ್ರ ಕಣ್ಣಿಗೆ ಕಟ್ಟಿ ಮನ ನಗುವಿನಲ್ಲಿ ಮುಳುಗಿ ಮುಂದುವರೆಯುತ್ತದೆ. ಸಾಮಾನ್ಯವಾದ ವಿಚಾರವನ್ನು ಅಸಾಮಾನ್ಯವಾದ ಪದಚಮತ್ಕಾರದಿಂದ ಹೇಳುವ ಕಲೆ ಅವರಿಗೆ ಒಗ್ಗಿದೆ.

'ಹಳ್ಳಿಯ ಚಿತ್ರಗಳು' ಅವರ ಮತ್ತೊಂದು ಲೇಖನಗಳ ಸಂಗ್ರಹ. ಇದರಲ್ಲಿ ಬರುವ ಬಹುತೇಕ ವರ್ಣನೆಗಳು ಪ್ರಕೃತಿಗೆ ಸಂಬಂಧಪಟ್ಟವುಗಳಾಗಿವೆ. ಅವರು ಹೇಗೆ ಹಾಸ್ಯ ಪ್ರವೃತ್ತಿಯವರೋ ಹಾಗೆಯೇ ಪ್ರಕೃತಿಯ ಉಪಾಸಕರೂ ಹೌದು. ಅವರೇ ಹೇಳುವಂತೆ: 'ಪ್ರಕೃತಿ ಎಷ್ಟು ಸವಿದರೂ ಇನ್ನೂ ಬೇಕು ಎನಿಸುವ ಮಾಟಗಾತಿ' ('ಒಂದು ಸಂಜೆ'ಯಲ್ಲಿ). ಪ್ರಕೃತಿಯನ್ನು ನಮಗೆ ಅನೇಕ ಲೇಖನಗಳ ಮೂಲಕ ತೋರಿಸಿದ್ದಾರೆ. ಹೇಮಾವತಿ ನದಿಯ ಬೆಡಗು ಬಿನ್ನಾಣ, ಆಕೆ ನಲಿನಲಿದು ಹರಿಯುವ ಸೊಗಸು, ಬಾಗಿ ಬಳುಕಿ, ಅಲ್ಲಿ ಮಿಂಚುತ್ತಾ, ಇಲ್ಲಿ ನಲಿಯುತ್ತಾ, ಮತ್ತೊಂದು ಕಡೆ ಕುಣಿಯುತ್ತಾ ಹೋಗುವ ಅವಳ ಸೌಂದರ್ಯವನ್ನು ಓದಿಯೇ ತಿಳಿಯಬೇಕಷ್ಟೆ. ಪ್ರಕೃತಿ ವರ್ಣನೆಯೇ ಆಗಲಿ, ನಡೆದ ಘಟನೆಯೇ ಆಗಲಿ, ತಮ್ಮ ಸ್ವಂತ ಅನುಭವವೇ ಆಗಲಿ ಹೇಳುವಾಗ ನವಿರಾದ ಹಾಸ್ಯದ ಹೊನಲು ತಾನೇ ತಾನಾಗಿ ಎಲ್ಲ ಕಡೆಗೆ ಹರಿಯುತ್ತದೆ.

ಓದುತ್ತ ಹೋದಂತೆಲ್ಲ ನಾವು ಇವರ ಪ್ರಕೃತಿ ವರ್ಣನೆಯಲ್ಲಿ ಒಂದಾಗಿ ಹೋಗುತ್ತೇವೆ. ಅವರ ಬಸ್ಸಿನ ಪಯಣವೇ ಆಗಲಿ, ಹೇಮಾವತಿ ನದಿಯನ್ನು ದಾಟಿದ ಅನುಭವವೇ ಆಗಲಿ, ಅಯ್ಯಂಗಾರರ ನಾಮದ ಕಥೆಯೇ ಆಗಲಿ, ತಿಗಣೆಯಂಥ ಕ್ರಿಮಿಯೇ ಆಗಲಿ, ಕೋರ್ಟಿನಲ್ಲಿ ಗೆದ್ದ ಎಮ್ಮೆಯ ಕಥೆಯೇ ಆಗಲಿ, ಹಳ್ಳಿಯವರು ಕುಣಿದ ರಾಮಾಯಣದ ಪ್ರಸಂಗವಾಗಲಿ, ಯಾವ ಸನ್ನಿವೇಶವನ್ನು ತೆಗೆದುಕೊಂಡರೂ ಗೊರೂರರ ಬರವಣಿಗೆಯಲ್ಲಿ ಅವುಗಳಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ.

ಗೊರೂರರ ಹಾಸ್ಯ ಬರೆಯಬೇಕೆಂದು ಬರೆದ ಹಾಸ್ಯವಲ್ಲ. ಸ್ವಾಭಾವಿಕವಾದ ಹಾಸ್ಯ. ಆಗೊಮ್ಮೆ, ಈಗೊಮ್ಮೆ ಮಿಂಚಿನಂತೆ ಮಿನುಗಿ, ಗುಡುಗಿನಂತೆ ಗುಡುಗಿ ಓದುಗನನ್ನು ಬೇರೆಯ ಲೋಕಕ್ಕೆ ಎಳೆದೊಯ್ಯುವ ಶಕ್ತಿ ಅವರ ಹಾಸ್ಯಕ್ಕಿದೆ. ಅವರ ಅನುಭವದಲ್ಲಿ ನಾವೂ ಕೂಡ ಒಂದಾಗಿ ಹೋಗುತ್ತೇವೆ. ಅವರು ಬಿಡಿಸುವ ಚಿತ್ರ ನಮ್ಮ ಮನಸ್ಸಿನಲ್ಲಿ ಬಹುಕಾಲ ಉಳಿಯುವಂತಹುದು. ಬೆಸ್ತರ ಕರಿಯುನನ್ನು ವಿವರಿಸುವಾಗ, ಅವರೇ ಹೇಳುವಂತೆ: 'ದೇವರ ಕಪ್ಪು ಶ್ಯಾಮವರ್ಣ, ದೊಡ್ಡವರ ಕಪ್ಪುಎಣ್ಣೆಗೆಂಪು, ಬೆಸ್ತರ ಕರಿಯನದು ಟಾರು.' ಮತ್ತೊಂದು ಕಡೆ ಅವನ

ದೇಹಕಾಯುವನ್ನು ವರ್ಣಿಸುವಾಗ, 'ಕೆಳಕ್ಕೆ ಬಿದ್ದ ಕೌಶಿಕನ ಅಸ್ತ್ರದಂತೆ ರೋಗಗಳು ಇವನನ್ನು ಸೋಕಿದ ಕೂಡಲೇ ನಿರ್ವೀರ್ಯವಾಗುತ್ತವೆ.' ಹೀಗೆ ನಾವು ಕೇವಲ ನಗುವಿನಿಂದ ಮಾತ್ರ ಮುಂದೆಹೋಗದೆ ಅವರ ಅನುಭವದಲ್ಲಿ ಒಂದಾಗಿ ಮುಂದುವರೆಯುತ್ತೇವೆ.

'ನಮ್ಮ ಎಮ್ಮೆಗೆ ಮಾತು ಬರುತ್ತದೆಯೆ?' ಎಂಬುದು ಹಾಸ್ಯ ಭರಿತವಾದ ವಿನೋದ ಸಂಗತಿ. ಎಮ್ಮೆ ಕರು ಹಾಕುವ ಪ್ರಸಂಗವನ್ನು ಗೊರೂರರು ಸುಂದರವಾಗಿ ವರ್ಣಿಸಿದ್ದಾರೆ. 'ನಮ್ಮ ಮನೆಯ ಎಮ್ಮೆ–ಇದು ಸಾಧಾರಣವಾಗಿ ಕರು ಹಾಕಬೇಕಾದರೆ ನಿಂತು ಕೊಂಡೇ ಕರುವನ್ನು ಎಸೆದು ಬಿಡುತ್ತಿದ್ದಿತು. ಅಂತಹ ಒರಟು ಪ್ರಾಣಿ!.......... ಆ ಬೆಳಗ್ಗೆ ತೂರ ನನ್ನೊಂದಿಗೆ,

'ಇವತ್ತು ಸಾಯಂಕಾಲ ಎಮ್ಮೆ ಕರ ಹಾಕುತ್ತೆ' ಎಂದ. ಈ ವಿಷಯ ಅವನಿಗೆ ಚೆನ್ನಾಗಿ ಅನುಭವ. ತೂರ ಎಮ್ಮೆಗೆ ಕೇಳಿಸುವಂತೆ, 'ಇರಲಿ, ನಿನಗೆ ಮಾಡುತ್ತೇನೆ, ಕರ ಎಸೀತೀಯಾ?' ಎಂದ. ನನ್ನೊಂದಿಗೆ

'ಗೋಣೀಚೀಲ ತೆಗೆದುಕೊಂಡು ಆತುಕೋ ಬೇಕು' ಎಂದ. ಆ ಮಾತನ್ನು ಕೇಳಿ ಎಮ್ಮೆ ಸರ್ರನೆ ಒಂದು ಸಲ ನಮ್ಮ ಕಡೆ ತಿರುಗಿ ನೋಡಿತು. ಆ ನೋಟವನ್ನು ನೋಡಿ ನಾನು ಬೆಚ್ಚಿಬಿದ್ದೆ. ಒಬ್ಬನನ್ನು ನೀವು ಮನಸ್ಸಿನಲ್ಲೇ ಬೈದುಕೊಂಡು ಹೋಗುತ್ತಿರುವಾಗ ಆತ ನಿಮ್ಮೆದುರಿಗೇ ಬಂದು ನಿಂತರೆ ಹೇಗಾಗುತ್ತದೋ ಹಾಗೆ ಆಯಿತು.....ಆ ನೋಟ ಅದರ ಮುಖದಲ್ಲಿ ಕಂಡುದು ಒಂದೇ ಕ್ಷಣ. ಮರುಕ್ಷಣ ಎಮ್ಮೆ ಮುಖವನ್ನು ಬೇರೆ ಕಡೆ ತಿರುಗಿಸಿಕೊಂಡಿತು....ಸಂಜೆಯಾಯಿತು. 'ಎಮ್ಮೆಗೆ ಪ್ರಸವ ವೇದನೆ', ಎಂದು ತೂರ ಸೂಚಿಸಿದ. ಎಮ್ಮೆ ನಿಂತುಕೊಂಡೇ ಇದ್ದಿತು. 'ಇದು ಮಲಗಿಕೊಂಡು ಕರ ಹಾಕುವುದಿಲ್ಲ. ಅದೇ ಇದರ ಕೆಟ್ಟ ಚಾಳೀ' ಎಂದ ತೂರ. ನಾವು ಅಂದಾಜುಮಾಡಿ, ಎಮ್ಮೆ ನಿಂತಿದ್ದ ನೇರದಿಂದ ಒಂದು ಮಾರು ಆಚೆಗೆ, ಪ್ರಾಯಶಃ ಕರುವನ್ನು ಅಲ್ಲಿಗೆ ಎಸೆಯಬಹುದು ಎಂದುಕೊಂಡು ಗೋಣೀಚೀಲವನ್ನು ಆಚೆ ಈಚೆ ಹಿಡಿದುಕೊಂಡು ನಿಂತುಕೊಂಡೆವು. ಎಮ್ಮೆ ಒಂದು ಮಾರು ಬಲಗಡೆಗೆ ತನ್ನ ಹಿಂಭಾಗವನ್ನು ತಿರುಗಿಸಿಕೊಂಡು ನಿಂತಿತು. ನಾವು ಸರ್ರನೆ ಚೀಲದೊಂದಿಗೆ ಅದರ ನೇರಕ್ಕೆ ಹಾರಿ ನಿಂತುಕೊಂಡೆವು. ಎಮ್ಮೆ ಕೂಡಲೆ ಎರಡುಮಾರು ಎಡಗಡೆಗೆ ತನ್ನ ಹಿಂಭಾಗವನ್ನು ತಿರುಗಿಸಿತು. ನಾವೂ ಗೋಣಿ ಚೀಲದೊಂದಿಗೆ ಹಾರಿದೆವು. ಎಮ್ಮೆ ನಿಮಿಷ ನಿಮಿಷಕ್ಕೂ ತಿರುಗ ತೊಡಗಿತು. ನಾವೂ ನಿಮಿಷ ನಿಮಿಷಕ್ಕೂ 'ಕೊಕ್'ಇನ ಆಟದಲ್ಲಿಯಂತೆ ಹಾರ ತೊಡಗಿದೆವು. ಸರ್ಕಸಿನಲ್ಲಿ ಮೇಲುಗಡೆ ಒಬ್ಬ ಆಟಗಾರ ಸಾಧನೆ ಮಾಡುತ್ತಿದ್ದಾಗ, ಅವನ ಕೈಕಾಲು ಜಾರೀತೆಂಬ

ಭಯದಿಂದ ಕೆಳಗಡೆ ಹತ್ತಾರು ಜನ ಒಂದು ಜಮಖಾನವನ್ನು ಹಿಡಿದುಕೊಂಡು ಅದರ ನೇರದಲ್ಲಿ ತಿರುಗುವುದನ್ನು ನೀವು ಕಂಡಿದ್ದೀರಿ. ನಮಗೂ ಎಮ್ಮೆಗೂ ಉಂಟಾದ ಸ್ಪರ್ಧೆ ಈ ಬಗೆಯದಾಯಿತು. ಬರುಬರುತ್ತಾ ಎಮ್ಮೆ ನಿಮಿಷಕ್ಕೆ ಎರಡು ಸಲ ತಿರುಗಲು ಪ್ರಾರಂಭಿಸಿತು. ಅದು ಈ ವಿನೋದದಲ್ಲಿ ಕರು ಹಾಕಬೇಕೆಂಬುದನ್ನು ಪೂರ್ತಿ ಮರೆತಂತೆ ತೋರಿತು. ಈ ಓಡಾಟದಲ್ಲಿ ಎಮ್ಮೆಗಿಂತ ನಮಗೇ ಹೆಚ್ಚು ಸುಸ್ತಾಗಿ ನಮ್ಮ ಅಳ್ಳೆಗಳು ಹೊಡೆದುಕೊಳ್ಳ ತೊಡಗಿದವು! ಎಮ್ಮೆ ಮಾತ್ರ ಹಿಂದಿನ ಚೇಷ್ಟೆಯ ನಗುವಿನಿಂದ ನನ್ನ ಕಡೆ ನೋಡಿತು. ಇದು ಸದ್ಯಕ್ಕೆ ಕರು ಹಾಕುವುದಿಲ್ಲ. ಇನ್ನು ಒಂದು ಘಂಟೆ ಬಿಟ್ಟು ಬರೋಣವೆಂದು ನಾನೂ, ತೂರನೂ ಚೀಲವನ್ನು ಒಂದು ಮೂಲೆಯಲ್ಲಿಟ್ಟು ಒಳಗೆ ಹೋದೆವು. ಒಂದು ನಿಮಿಷದೊಳಗಾಗಿ, ಕೊಟ್ಟಿಗೆಯಲ್ಲಿ ದೊಪ್ಪೆಂದು ಸದ್ದಾಯಿತು. ಹೋಗಿ ನೋಡಿದರೆ, ಎಮ್ಮೆ ಪದ್ಧತಿಯಂತೆ ನಿಂತುಕೊಂಡೇ ಎರಡು ಮಾರು ಆಚೆ ಕರುವನ್ನು ಎಸೆದಿತ್ತು.'

'ಪಾಕಶಾಲೆ' ಅವರ ಮತ್ತೊಂದು ಲೇಖನ. ಅಡುಗೆ ಮಾಡದ ಗಂಡಸು ಪಾಕಶಾಲೆಯಲ್ಲಿಳಿದು ಕೈಸುಟ್ಟುಕೊಳ್ಳುವುದರ ಜೊತೆಗೆ ಕಟ್ಟಿಕೊಂಡ ಹೆಂಡತಿಯಕೈಲಿ ಟೀಕೆಯನ್ನು ಹೆಜ್ಜೆ ಹೆಜ್ಜೆಗೆ ಅನುಭವಿಸುವ ಚಿತ್ರ ನಮ್ಮನ್ನು ನಗುವಿನಲ್ಲಿ ಮುಳುಗಿಸುತ್ತದೆ. 'ಹೆಣ್ಣುಗಳ ನಿಜವಾದ ದರ್ಪವನ್ನು ನೋಡಬೇಕಾದರೆ ನೀವು–ಗಂಡನಾದವರು–ಅಡಿಗೆ ಭಟ್ಟನಾಗಿ ಕುಳಿತಾಗಲೇ ಸಾಧ್ಯ. ಒಲೆಯಲ್ಲಿ ಹಾಕಿದ್ದ ಸೌಟಿನಲ್ಲಿನ ತುಪ್ಪ ಕಾದು ಕೊನೆಗೆ ಸೌಟು ಭುಗ್ಗೆಂದು ಹತ್ತಿ ಉರಿಯಲು ಪ್ರಾರಂಭಿಸಿತು. ಏನು ಮಾಡಲೂ ತೋಚದೆ ಆ ಸೌಟನ್ನು ತೆಗೆದು ಸಾರಿನ ಪಾತ್ರೆಗೆ ಅದ್ದಿಬಿಟ್ಟೆ. ದೊಡ್ಡ ಪಟಾಕಿಯ ಶಬ್ದವಾಯಿತು. ಒಗ್ಗರಣೆ ಬಿದ್ದಕೂಡಲೆ ಸಾರು ಹೀಗೆ ರೇಗುವುದೆಂದು ನನಗೆ ತಿಳಿದಿರಲಿಲ್ಲ.' ಇವು ಗೊರೂರರ ಪದ ಚಮತ್ಕಾರಗಳಿಗೆ ಉದಾಹರಣೆಗಳು.

ನಲ್ಲನಲ್ಲೆಯರ ಪ್ರೇಮಕಲಹವೇ ಆಗಲಿ, ನವದಂಪತಿಗಳ ಜೀವನವೇ ಆಗಲಿ, ಹಳ್ಳಿಯ ಜೀವನದ ಅನುಭವವೇ ಆಗಲಿ, ಯಾವುದನ್ನು ತೆಗೆದುಕೊಂಡರೂ ಅದರಲ್ಲಿ ಹಾಸ್ಯ ಒಂದು ವಿಶಿಷ್ಟತೆಯನ್ನು ಪಡೆಯುತ್ತದೆ. ಉದಾಹರಣೆಗೆ, 'ಹೆಂಡತಿ ಎಂಬುವುದನ್ನು ಮರೆತರೆ' ಎಂಬ ಲೇಖನದಲ್ಲಿ ಮಡದಿಯ ಕೋಪ ಗಂಡನಮೇಲೆ ಎಲ್ಲಿಯವರೆಗೆ ಮುಟ್ಟುತ್ತದೆ ಎಂಬುದನ್ನು ಬಹಳ ಕುತೂಹಲಕಾರಿಯಾಗಿ ತೆಗೆದುಕೊಂಡು ಹೋಗಿ ಅದು ತುತ್ತ ತುದಿಗೆ ಏರಿದಾಗ ಆಕೆಯ ಕೋಪ ಭುಗಿಲ್ಲೆಂದು ಹತ್ತಿ ಅವನ ಮೇಲೆ ಧಾಳಿಯಿಡುವ ಪ್ರಸಂಗವನ್ನು ಸೊಗಸಾಗಿ ಚಿತ್ರಿಸಿದ್ದಾರೆ.

'ವಿಧವಾ ವಿವಾಹ' ಒಂದು ಚಮತ್ಕಾರವಾದ ಹಾಸ್ಯ ಪ್ರಬಂಧ. ಇದರಲ್ಲಿ ವಿಧವೆ ಕರುಣಾ, ಎಳೆಯ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡು, ಆನಂತರ ಮುಂದಿನ

ವಿದ್ಯಾಭ್ಯಾಸಕ್ಕಾಗಿ ಮದರಾಸಿಗೆ ಹೋಗಿ ಅಲ್ಲಿ ಒಂಬತ್ತು ವರ್ಷವಿದ್ದು ಊರಿಗೆ ವಾಪಸು ಬಂದು, ಊರವರಿಗೆ ವಿಧವಾ ವಿವಾಹ, ವಿವಾಹ ವಿಚ್ಛೇದನ, ನಗರೋದ್ಧಾರ ಇತ್ಯಾದಿ ವಿಷಯಗಳಲ್ಲಿ ಮಾರ್ಗದರ್ಶನ ಮಾಡುತ್ತ ನಿದ್ರಿಸುತ್ತಿದ್ದ ಅಲ್ಲಿನ ಯುವ ಜನಾಂಗವನ್ನು ಬಡಿದೆಬ್ಬಿಸುತ್ತಾಳೆ. ಅದನ್ನು ಗೊರೂರರವರಿಂದಲೇ ಕೇಳಿ: 'ಆ ವರುಷ ಮಲ್ಲಿಗೆ ಹಳ್ಳಿಯ ಯುವಕರಿಗೆ ಗೊತ್ತಾಗಿದ್ದ ಮದುವೆಗಳೆಲ್ಲ ನಿಂತೇಹೋದವು. ಎಲ್ಲ ಯುವಕರೂ, 'ವಿಧವಾವಿವಾಹ' ಎಂದುಬಿಟ್ಟರು. ಆದರೆ ಯಾರೂ ಯಾವ ವಿಧವೆಗಾಗಿಯೂ, ಊರಲ್ಲಿದ್ದ ವಿಧವೆಯ ಪಿತೃವನ್ನು ಕೇಳಲಿಲ್ಲ. ಯುವಕರೆಲ್ಲ ಕರುಣಾವಿನ ಮನೆಯಲ್ಲಿ ಹೊಂಚು ಹಾಕುತ್ತಿದ್ದರು. ರಾಮಣ್ಣ, ಮುತ್ತಣ್ಣ, ಶೇಷು, ರಾಮು ಒಬ್ಬರನ್ನು ಬಿಟ್ಟು ಒಬ್ಬರು ಇರುತ್ತಿರಲಿಲ್ಲ.... ಒಬ್ಬರಿಗೆ ಕಾಣದಂತೆ ಇನ್ನೊಬ್ಬರು ಕರುಣಾವಿನೊಂದಿಗಾಗಲೀ, (ಕರುಣಾಳ ತಂದೆ) ಶ್ರೀನಿವಾಸನೊಂದಿಗಾಗಲೀ, ಎಲ್ಲಿ ಮಾತನಾಡಿಬಿಡುತ್ತಾರೆಯೋ ಎಂದು ಇತರರಿಗೆ ಭಯವಿದ್ದಂತೆ ತೋರುತ್ತಿದ್ದಿತು. ಶೇಷು, ಒಂದು ದಿನ ಸ್ವಲ್ಪ ಧೈರ್ಯವಾಗಿ 'ನನ್ನ ಮದುವೆಯಾಗಲು ಗೊತ್ತಾಗಿದ್ದ ಎಳೆಯ ಮಗುವನ್ನು ತಿರಸ್ಕರಿಸಿದೆ. ಇನ್ನು ಮೇಲೆ ವಿಧವಾ ವಿವಾಹ. ವಿಧವಾ ವಿವಾಹವೇ ನಮ್ಮ ದೇಶದ ಮೋಕ್ಷ' ಎಂದನು. ಅಲ್ಲೇ ಕುಳಿತಿದ್ದ ಮುತ್ತಣ್ಣನೂ, ಶಾಮನೂ, ಗೋಪಾಲನೂ 'ಆ ರೀತಿ ಅವತ್ತೇ ನಾವೆಲ್ಲ ತೀರ್ಮಾನ ಮಾಡಿದ್ದೇವಲ್ಲ. ನಮ್ಮೆಲ್ಲರ ಅಭಿಪ್ರಾಯವೂ ಅದೇಯೇ.' ಎಂದರು. ಶೇಷುವು ಕೋಪದಿಂದ ಅವರನ್ನೆಲ್ಲಾ ನುಂಗುವಂತೆ ನೋಡಿದನು. ಕರುಣ ಇದೊಂದೂ ತಿಳಿಯದವಳಂತೆ ತನ್ನ ಪಾಡಿಗೆ ತಾನು ಇದ್ದಳು.

ಒಂದು ಬೆಳಗಿನ ಝಾವ ಒಂದು ಕಾರು ಬಂದು ...... ಶ್ರೀನಿವಾಸನ ಮನೆಯ ಬಾಗಿಲಲ್ಲಿ ನಿಂತಿತು...... ಮುಂಚೆ ಎದ್ದಿದ್ದ (ಶೇಷ) ಮುತ್ತಣ್ಣ, ಶಾಮಣ್ಣ, ರಾಮು, ಸುಂದರ, ನರಸಿಂಹಮೂರ್ತಿ, ಸುಬ್ಬು, ಸುದರ್ಶನ, ಕಿಟ್ಟು...(ಎಲ್ಲರ) ಮನಸ್ಸಿನಲ್ಲಿಯೂ ಇದ್ದುದು ಒಂದೇ ಪ್ರಶ್ನೆ: ಬಂದ ಕಾರು ಯಾರದಾಗಿರಬಹುದು? ಎಂದು. ಆ ವೇಳೆಗೆ ಅಲ್ಲಿಗೆ ಶ್ರೀನಿವಾಸನೂ ಬಂದನು. 'ಶೇಷು, ಕಾರಿನಲ್ಲಿ ಬಂದವರು ಯಾರು?' ಎಂದು ಕೇಳಿದನು. ಶ್ರೀನಿವಾಸನು, 'ಅವರೇ, ನಮ್ಮ ಸ್ನೇಹಿತರು' ಎಂದನು. ಅನಂತರ ಎಲ್ಲರೂ ಶ್ರೀನಿವಾಸನ ಮನೆಗೆ ಹೋದರು. ಸುಮಾರು ಇಪ್ಪತ್ತು ವರುಷದ ವ್ಯಕ್ತಿ ಕುರ್ಚಿಯ ಮೇಲೆ ಕುಳಿತು ಪುಸ್ತಕ ಓದುತ್ತಿದ್ದಿತು....(ಶ್ರೀನಿವಾಸ) 'ಇವರು ರಾಮಚಂದ್ರ. ಕರುಣಾವಿನ ಗಂಡ. ಮದರಾಸಿನಲ್ಲಿ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ' ಎಂದನು. ಆ ಗುಂಪಿನ ನಡುವೆ ಸಿಡಿಲು ಬಿದ್ದಿದ್ದರೂ ಯುವಕರಿಗೆ ಆ ಮಾತನ್ನು ಕೇಳಿದಾಗ ಆದಷ್ಟು ಗಾಬರಿಯಾಗುತ್ತಿರಲಿಲ್ಲ.........ಆ ಮಧ್ಯಾಹ್ನ ಕರುಣಾ ರಾಮಚಂದ್ರನೊಡನೆ ಅದೇ ಕಾರಿನಲ್ಲಿ ಮದರಾಸಿಗೆ ಹೊರಟು ಹೋದಳು. ಮಲ್ಲಿಗೆ ಹಳ್ಳಿಯೂ, ಅದರ

ಯುವಕರೂ ಮತ್ತೆ ತಮ್ಮ ಹಳೆಯ ನಿದ್ರಾವಸ್ಥೆಗೇ ಸಂದರು. ಎಲ್ಲವೂ ಮತ್ತೆ ಮೊದಲಿನಂತೆಯೇ ಆಯಿತು. ವಿಧವಾ ವಿವಾಹ, ಗ್ರಾಮ ಪುನರುಜ್ಜೀವನ, ಎಲ್ಲಾ ಮಾತೂ ನಿಂತೇಹೋಯಿತು. ಪುರೋಹಿತರು, ಇವರಿಗೆ ಬೇಕಾಗಿರುವುದು ವಿಧವೆಯೇ ಹೊರತು ವಿಧವಾ ವಿವಾಹವಲ್ಲ' ಎಂದು ಗೊಣಗುಟ್ಟಿದರು.

'ಹಳ್ಳಿಯ ಚಿತ್ರಗಳು' ಅವರ ಇನ್ನೊಂದು ಹಾಸ್ಯ ಲೇಖನ ಸಂಗ್ರಹ. 'ಜೋಡೀದಾರರು ಹೊಳೆ ದಾಟಿದ್ದು', 'ಜೋಡಿದಾರರು ಕುದುರೆಯಿಂದ ಬಿದ್ದುದು', 'ನಾನು ರತ್ನಳ ಮನೆಗೆ ಹೋದುದು', 'ಶಿವಪ್ಪನ ವಾಕಿಂಗ್' ಇವೆಲ್ಲ ಸೊಗಸಾದ ಚಿತ್ರಗಳು. ಇಲ್ಲಿ ಹೇಗೆ ಪದಜೋಡಣೆಯಿಂದ ಹಾಸ್ಯ ಸಹಜತೆಯನ್ನು ಪಡೆದಿದೆ ಎಂಬುದನ್ನು ಕಾಣಬಹುದು:

'ಕುದುರೆ ಈ ರೋಣಗಲ್ಲನ್ನು ಎಳೆಯಲಾರದೆ ಏದುತ್ತ ಅಲ್ಲೇ ನಿಂತುಬಿಟ್ಟಿತು. ಜೋಡೀದಾರರಿಗೆ ಏಟು ತಗುಲಿತು. ಮಂಡಿಯು ಸುಲಿದುಹೋಗಿ ರಕ್ತ ಸೋರುತ್ತಿದ್ದಿತು. ಹೇರಳೇಕಾಯಿ ಗಾತ್ರದ ಅವರ ಮೂಗು, ತೆಂಗಿನಕಾಯಿಯಂತೆ ಬುರುಬುರು ಊದಿಕೊಂಡಿತು. ಆ ಊದಿನಿಂದ ಮುಖದಲ್ಲಿ ಕಣ್ಣು ಮೂಗು, ಬಾಯಿ ಯಾವುದೂ ಗೊತ್ತಾಗದೆ ಎಲ್ಲಾ ಒಂದೇ ಸಮನಾಗಿದ್ದವು.' ('ಜೋಡೀದಾರರು ಕುದುರೆಯಿಂದ ಬಿದ್ದುದು')

'ಕಂಡಕ್ಟರ್ ಮಹಾಶಯನು ಚೀಲಕ್ಕೆ ಧಾನ್ಯವನ್ನು ತುಂಬುವಂತೆ ಅವರನ್ನೆಲ್ಲಾ ಗಾಡಿಯೊಳಕ್ಕೆ ತುಂಬಿದನು' ('ನಾನು ರತ್ನಳ ಮದುವೆಗೆ ಹೋದುದು')

'ಅವನು ಎದ್ದು ನಿಂತುಕೊಂಡು ಕಣ್ಣು, ಕಿವಿ, ಮೂಗು ಎಲ್ಲದನ್ನೂ ಒಂದಾಗಿ ಮಾಡಿದ ಜೇಡಿಮಣ್ಣನ್ನು ಕೈಯಿಂದ ತೆಗೆದು ಹಾಕಿ, ಕಿವಿಯನ್ನೂ, ಕಣ್ಣನ್ನೂ, ಹುಡುಕುತ್ತಿದ್ದನು'. ('ಶಿವಪ್ಪನ ವಾಕಿಂಗ್')

'ಸಂಚಾರಿ ಚಲನಚಿತ್ರ' ಇವರ ಮತ್ತೊಂದು ನಗೆ ಬರಹ. ಅವರು ವಿವರಿಸುವಂತಹ 'ಟೂರಿಂಗ್ ಟಾಕೀಸ್' ನಮ್ಮ ಹಳ್ಳಿಗಳಲ್ಲಿ ಇಂದು ಇವೆಯೋ ಇಲ್ಲವೋ ಗೊತ್ತಿಲ್ಲ. ಅದಿದ್ದ ಕಾಲದಲ್ಲಿ ಸಂಚಾರಿ ಚಲನಚಿತ್ರಗಳ, ನಾಟಕ ಮಂಡಲಿಯವರ ಆಭಾಸಗಳು, ಅಸಂಬದ್ಧತೆಗಳಿಂದ ಜನಗಳಿಗೆ ಆಗುತ್ತಿದ್ದ ಮನರಂಜನೆಗಳನ್ನು ಗೊರೂರರು ಸಾರವತ್ತಾಗಿ ಚಿತ್ರಿಸಿದ್ದಾರೆ. ಆಧುನಿಕ ಯುಗದಲ್ಲಿ ನಾಗರಿಕತೆ ತನ್ನ ಸೆರಗನ್ನು ಎಲ್ಲ ಕಡೆ ಹಾಸಿದಮೇಲೆ ಹಳ್ಳಿ ಹಳ್ಳಿಗಳಲ್ಲಿ ಟೀವಿ, ರೇಡಿಯೋ, ಸಿನಿಮಾ ಟಾಕೀಸುಗಳು ಬಂದಮೇಲೆ ಈ ಸಂಚಾರೀ ಚಲನಚಿತ್ರಗಳು ಇನ್ನಿಲ್ಲವಾಗಿವೆ. ಆದರೆ ಅವಿದ್ದ ಕಾಲದಲ್ಲಿ ಅವುಗಳಿಂದ ಆಗುತ್ತಿದ್ದ ಆಭಾಸ, ಲೀಲಾ ವಿನೋದಗಳಿಂದ ಜನ ಹೇಗೆ

ಸಂತೋಷಿಸುತ್ತಿದ್ದರು ಎಂಬುದು ಈ ಲೇಖನದ ಸಾರ ಸರ್ವಸ್ವ. ಇದೇ ಲೇಖನದಲ್ಲಿ 'ಯಕ್ಷಗಾನ' 'ಬಯಲಾಟ'ಗಳ ಬಗ್ಗೆ ಗೊರೂರರ ವಿವರಣೆಯನ್ನು ಓದಿ:

'ಹೀಗೆ ತನಗೆ ಅನಿರೀಕ್ಷಿತವಾಗಿ ಸಿಕ್ಕಿದ ಪಾತ್ರವನ್ನು ರಂಗನಿಗಿಂತ ಯಶಸ್ವಿಯಾಗಿ ನಡೆಸಿ ಜನರಿಂದ 'ಭೇಷ್' ಎನಿಸಿಕೊಳ್ಳಬೇಕೆಂಬುದು (ಹೊಸದಾಗಿ ದ್ರೌಪದಿಯ ಪಾತ್ರ ವಹಿಸಿದ್ದ) ಶಾಮನ ಉದ್ದೇಶವಾಗಿದ್ದಿತು. ಅವನು ಸೊಗಸಾಗಿ, ಜನರೆಲ್ಲ 'ಹಾ! ಹಾ!' ಎಂದು ಬಾಯಿಬಿಡುವಂತೆ ಅಲಂಕಾರ ಮಾಡಿಕೊಂಡು ರಂಗಮಂಟಪಕ್ಕೆ ಬಂದನು. ಸಕಾಲದಲ್ಲಿ ದ್ರೌಪದಿಯ ವಸ್ತ್ರಾಪಹರಣದ ಸರದಿಯೂ ಬಂದಿತು. ಎಂದಿನಿಂದಲೂ ದುಶ್ಶಾಸನನ ಪಾತ್ರವನ್ನು ವಹಿಸಿದ್ದ ಪುಟ್ಟಪ್ಪನೇ ಅಂದೂ ಆ ಪಾತ್ರವನ್ನು ವಹಿಸಿದ್ದನು. ಮಾಮೂಲು ದ್ರೌಪದಿಯು ವಸ್ತ್ರಾಪಹರಣಕ್ಕಾಗಿ ನಾಲ್ಕು ಸೀರೆಗಳನ್ನು ಉಟ್ಟುಕೊಳ್ಳುವುದು ಪದ್ಧತಿ. ಅವುಗಳಲ್ಲಿ ಮೂರನ್ನು ದುಶ್ಶಾಸನನು ಎಳೆದು ಹಾಕುತ್ತಿದ್ದನು. ಶಾಮ, ಅಂದು ಹೊಸದಾಗಿ ದ್ರೌಪದಿಯ ಪಾತ್ರವನ್ನು ವಹಿಸಿದಾಗಲೂ, ದುಶ್ಶಾಸನನು ಹಾಗೆ ಮೂರು ಸೀರೆಗಳನ್ನು ಎಳೆದನು. ದ್ರೌಪದಿ ಸಾಧಾರಣವಾಗಿ ಪ್ರತಿಭಟಿಸಿ ಸೀರೆಯನ್ನು ಬಿಗಿಯಾಗಿ ಹಿಡಿದುಕೊಂಡು ಅಡ್ಡಿಪಡಿಸಬೇಕಾಗಿದ್ದಿತು. ಆದರೆ ಈ ಹೊಸ ದ್ರೌಪದಿ ಅಷ್ಟೇನೂ ಸೀರೆಯನ್ನು ಬಿಗಿಹಿಡಿಯಲಿಲ್ಲ. ಅಷ್ಟೇ ಅಲ್ಲ, ದುಶ್ಶಾಸನನು ಮೂರು ಸೀರೆಗಳನ್ನು ಎಳೆದ ಮೇಲೆ, ಅವನಾಗಲೀ ಪ್ರೇಕ್ಷಕರಾಗಲೀ ಅದುವರೆಗೆ ನಿರೀಕ್ಷಿಸದೇ ಇದ್ದ ಮತ್ತೊಂದು ಸಂಗತಿ ನಡೆಯಿತು. ದ್ರೌಪದಿ ದುಶ್ಶಾಸನನಿಗೆ, 'ಇನ್ನೂ ಸೀರೆ ಎಳಿ' ಎಂದು ಎರಡು ಮೂರು ಸಲ ಸಂಜ್ಞೆ ಮಾಡಿದಳು. ಆದರೆ ಮಾಮೂಲು ಪದ್ಧತಿಗಳಿಗನುಸಾರವಾಗಿ ವಸ್ತ್ರಾಪಹರಣದಲ್ಲಿ ಮೂರು ಸೀರೆಗಳನ್ನು ಮಾತ್ರ ತಾನು ಎಳೆದು ಹಾಕಬೇಕಾಗಿದ್ದು, ಅಷ್ಟನ್ನು ಎಳೆದುದರಿಂದ ತನ್ನ ಭಾಗದ ಕೆಲಸವಾಯಿತೆಂದು ದುಶ್ಶಾಸನನು ಸುಮ್ಮನೆ ನಿಂತಿದ್ದನು. ಹೊಸ ದ್ರೌಪದಿಯು ಅನಿರೀಕ್ಷಿತವಾದುದನ್ನು ಮಾಡಿದುದು ಆಗಲೇ. ಆಕೆ, 'ಎಲೋ ನೀಚ, ದುಶ್ಶಾಸನಾ! ಸೀರೆಯನ್ನು ಸೆಳೆದುಸೋತೆಯಲ್ಲವೇ? ಪಾಂಡವ ಪಕ್ಷಪಾತಿಯಾದ ಕೃಷ್ಣಪರಮಾತ್ಮ ಸಾಧ್ವಿಯರಿಗೆ ಎಂದೂ ಮಾನಭಂಗ ಮಾಡುವುದಿಲ್ಲ. ಇನ್ನೂ ಎಷ್ಟುಬೇಕಾದರೂ ಸೀರೆಯನ್ನು ಎಳಿ. ಹೇಡಿಯಾದ ನಿನ್ನ ಕೈಲಿ ಆಗದಿದ್ದರೆ ನಾನೇ ಬಿಚ್ಚಿ ಎಸೆಯುತ್ತೇನೆ' ಎಂದು ಹೇಳಿದವಳೇ, ಉಟ್ಟಿದ್ದ ಇನ್ನೂ ಮೂರು ನಾಲಕ್ಕು ಸೀರೆಗಳನ್ನು ಎಳೆದು ಹಾಕಿದಳು. ಆ ವೇಳೆಗೆ ಅವಳು ಒಳಗೆ ಉಟ್ಟಿದ್ದ ನೀಲಿ ರೇಸಿಮೆಯ ಗೇಣುದ್ದ ಜರಿಯ ಜರ್ಬಾದ ಸೀರೆ ಹೊರಕ್ಕೆ ಕಾಣಿಸಿತು. ಅದು ಪ್ರೇಕ್ಷಕರಿಗೆ ಕಾಣಬೇಕೆಂಬುದೇ ಅವಳ ಉದ್ದೇಶವಾಗಿದ್ದಿತು. ಮುಂದಿನ ತನ್ನ ಪಾತ್ರಗಳನ್ನೆಲ್ಲ ದ್ರೌಪದಿ ಆಕರ್ಷಣೀಯವಾದ ಸೀರೆಯಲ್ಲಿಯೇ ನೆರವೇರಿಸಿದಳು'.

ತೀರ ಸಾಮಾನ್ಯವಾದ ವಸ್ತು ವಿಷಯಗಳೂ ಕೂಡ ಗೊರೂರರ ದೃಷ್ಟಿಯಲ್ಲಿ ದೊಡ್ಡವಿಷಯವಾಗಿ ಕಾಣುತ್ತವೆ. ಹೀಗಾಗಿ ಪ್ರಾಮುಖ್ಯತೆ ಹೆಚ್ಚಿ ವಿಶೇಷ ಸ್ಥಾನ

ದೊರೆಯುತ್ತದೆ. ಉದಾಹರಣೆಗೆ 'ತಿಗಣೆ', 'ರೋಡ್ ಎಂಜಿನ್', 'ಕ್ಷೌರ', 'ಪುಂಗಿ', 'ಕೋರ್ಟಿನಲ್ಲಿ ಗೆದ್ದ ಎತ್ತು', 'ಸೇತುವೆ', 'ನಮ್ಮ ಎಮ್ಮೆಗೆ ಮಾತು ತಿಳಿವುದೇ?', 'ಪಾಕಶಾಲೆಯಲ್ಲಿ' ಇವೆಲ್ಲ ನಮಗೆ ಹೊಸದಲ್ಲದಿದ್ದರೂ ಹೊಸದಾಗಿ ಕಂಡು ಮನಸ್ಸನ್ನು ಮುದಗೊಳಿಸುತ್ತವೆ.

ಒಂದು ಕಡೆ ಮಾಸ್ತಿಯವರು, ಗೊರೂರರ ಬಗ್ಗೆ ಬರೆಯುತ್ತ–'ಗ್ರಂಥಕರ್ತರು ಸುತ್ತಣ ಪ್ರಪಂಚವನ್ನು ಚೆನ್ನಾಗಿ ನೋಡಿ ಅದರ ಅಂದ ಚಂದಕ್ಕೆ ಮನಸ್ಸಿನಲ್ಲಿ ಎಡೆಕೊಟ್ಟು ಅದರ ಬದುಕಿನಲ್ಲಿ ತಮ್ಮ ಬದುಕನ್ನು ಬೆರೆಸಿ, ತಾವೇ ಅದು ಎಂಬಂತೆ ಅದರೊಳಕ್ಕೆ ಸೇರಿ ಹೋಗಿದ್ದಾರೆ. ಹೀಗಾದಮೇಲೆ ತಮ್ಮ ಜೀವನವನ್ನು ಮರುಳುಗೊಳಿಸುವ ಆ ಪ್ರಪಂಚದ ಅಂದ ಚಂದಗಳನ್ನು ಇತರರಿಗೆ ತಿಳಿಸೋಣವೆಂದು ತಮಗಾದ ಅನುಭವಗಳನ್ನು ವ್ಯಕ್ತಪಡಿಸಲು ಈ ಚಿತ್ರಗಳನ್ನು ರಚಿಸಿದ್ದಾರೆ' ಎಂದಿದ್ದಾರೆ (ಆಧಾರ ೨).

ಗೊರೂರರ ಪ್ರಕೃತಿ ವರ್ಣನೆ, ಅವರ ಲೇಖನಗಳಲ್ಲಿ ಬರುವ ಪಾತ್ರಗಳು, ಮತ್ತೆ ಕೆಲವು ಬರಹಗಳಲ್ಲಿ ಕಂಡುಬರುವ, ಪುಟ್ಟವೆನಿಸಿದರೂ ತಮ್ಮದೇ ಆದ ಪ್ರಭಾವದಿಂದ ಪ್ರಧಾನವಾದ ಸ್ಥಾನಗಳಿಸಿರುವ 'ತಿಗಣೆ', 'ಎಮ್ಮೆ', ಪುಂಗಿ' ಇತ್ಯಾದಿಗಳು ಸಾಹಿತ್ಯಪ್ರೇಮಿಗಳಿಗೆ ಪ್ರಿಯವಾಗಿರುವುದರಲ್ಲಿ ಅನುಮಾನವಿಲ್ಲ. ಗೊರೂರರು ತಮ್ಮ ನಾಡಿನ, ನಾಡಿನ ಜನರ, ಪ್ರೇಮವನ್ನು ಹರಡಲು, ಹಾಸ್ಯವನ್ನು ಸಾಧನವಾಗಿ ಬಳಸಿಕೊಂಡಿರುವುದು ವಿಶೇಷದ ಸಂಗತಿ. ಅವರ ಮಾತಲ್ಲೇ ಹೇಳುವುದಾದರೆ, 'ನಗೆಯ ಹೆಣ್ಣು ಔಚಿತ್ಯವನ್ನೇ ಅರಿಯಳು.'

ಹೀಗೆ ಹೇಮಾವತಿಯಿಂದ ಕನ್ಯಾಕುಮಾರಿಯವರೆಗೆ, ಹಳ್ಳಿಯ ಚಿತ್ರದಿಂದ, ಬೆಸ್ತರ ಕರಿಯನವರೆಗೆ, ಬೈಲುಹಳ್ಳಿಯ ಸರ್ವೆಯಿಂದ, ಶಿವರಾತ್ರಿಯವರೆಗೆ ನಮ್ಮನ್ನು ಕರೆದೊಯ್ದು ಗೋರೂರರು ಜೀವನದ ಎಲ್ಲ ತರಹದ ನೋಟಗಳನ್ನು ತೋರಿಸಿ ಸಾರ್ಥಕರಾಗಿದ್ದಾರೆ. ಇಂತಹ ಮಹಾನುಭಾವರ ಬರಹಗಳಿಂದ ಕನ್ನಡ ಸಾಹಿತ್ಯ ಪಾವನವಾಗಿದೆ.

ಗ್ರಂಥಋಣ

೧. ಗೊರೂರು ರಾಮಸ್ವಾಮಿ ಅಯ್ಯಂಗಾರ್: ಕನ್ಯಾಕುಮಾರಿ ಮತ್ತು ಇತರ ಕಥೆಗಳು, ಮುನ್ನುಡಿ

೨. ಮಾಸ್ತಿ ವೆಂಕಟೇಶ ಅಯ್ಯಂಗಾರ್: 'ಹಳ್ಳಿಯ ಚಿತ್ರಗಳು' ಮುನ್ನುಡಿ, ಐ.ಬಿ.ಎಚ್. ಪ್ರಕಾಶನ, ೧೯೮೧



# ವಿನೋದ ಸಾಹಿತಿ ಎಚ್.ಕೆ. ರಂಗನಾಥ್

ಹರವು ಲೋಕೇಶ್

ಎಚ್.ಕೆ.ಆರ್. ಎಂದರೆ ಹಾಸನ ಕೃಷ್ಣಸ್ವಾಮಿ ರಂಗನಾಥ್ (೧೯೨೪-೨೦೦೩) ಜನಿಸಿದ್ದು ಹಣದ ಶ್ರೀಮಂತಿಕೆಯೊಂದನ್ನುಳಿದು ಮಿಕ್ಕಿದ್ದೆಲ್ಲದರಲ್ಲಿಯೂ ಶ್ರೀಮಂತವಾಗಿದ್ದ ತುಂಬು ಕುಟುಂಬದಲ್ಲಿ, ತೀರ್ಥಹಳ್ಳಿಯಲ್ಲಿ. ತಂದೆ ಹಾಸನದ ಕೃಷ್ಣಸ್ವಾಮಿ, ತಾಯಿ ಚಿನ್ನಮ್ಮ, ಎಂಟು ಜನ ಸಹೋದರ ಸಹೋದರಿಯರು.

ಎಚ್.ಕೆ.ಆರ್. ಓದಿದ್ದು ಬೆಳೆದದ್ದು ಅತಿಯಾಗಿ ಪ್ರೀತಿಸಿದ್ದು ಮೈಸೂರಾದರೂ, ವೃತ್ತಿ ಕೈಂಕರ್ಯ ಅವರನ್ನು ಭಾರತದ ವಿವಿಧೆಡೆಗೆ-ಧಾರವಾಡ, ಬೆಂಗಳೂರು, ದೆಹಲಿಗೆ -ಕರೆದೊಯ್ದಿತು. ಯುನೆಸ್ಕೋದಿಂದ ಭಾರತದ ಪ್ರತಿನಿಧಿಯಾಗಿ ಪ್ರಪಂಚದ ಹಲವಾರು ದೇಶ ವಿದೇಶಗಳಲ್ಲಿ ಪ್ರಯಾಣಿಸಿ ವೃತ್ತಿಯಲ್ಲಿ ಅನುಭವ, ಪರಿಣತೆ, ಪಕ್ವತೆ ಪಡೆದರು ಎಚ್.ಕೆ.ಆರ್.

ರಂಗನಾಥರು ಕನ್ನಡ ಸಾಹಿತ್ಯಕ್ಕೆ, ಅದರಲ್ಲೂ ವಿನೋದ ಸಾಹಿತ್ಯಕ್ಕೆ ತಮ್ಮ ಹೆಚ್ಚಿನ ಛಾಪು ಹಾಕಿದವರು. ಆಯನೋಡಿ ಉತ್ಪ್ರೇಕ್ಷೆಯ ಮೆರುಗು ಬಳಿದು ರೆಕ್ಕೆ ಪುಕ್ಕ ಹಚ್ಚಿದರೂ, ಆದಷ್ಟೂ ನೈಜತೆಯ ಎಲ್ಲೆ ಮೀರದಂತೆ ನೋಡಿಕೊಂಡು ಓದುಗರಿಂದ, ಕೇಳುಗರಿಂದ ಒಂದು ನಗು, ಮಂದಹಾಸವನ್ನು ಹೊರಬರಿಸುವುದೇ ಮುಖ್ಯ ಉದ್ದೇಶವಿದ್ದಂತಿರುವ ರಂಗನಾಥರ ವಿನೋದದ ಬರಹಗಳು ಅತೀ ಸುಂದರ, ಸರಳ ಹಾಗೂ ಆತ್ಮೀಯತೆಯ ಸೊಂಕಿನವು.

ರಂಗನಾಥರ ಹಾಸ್ಯ, ಗುರಿಯಾದವರಿಗೂ ಸಹ ನೋವುಂಟುಮಾಡದ, ಮೊನಚಿಲ್ಲದ, ಕೊಂಕಿಲ್ಲದ, ಕುಚೋದ್ಯವಲ್ಲದ ತಿಳಿಹಾಸ್ಯ. ಹಾಸ್ಯಕ್ಕೊಳಗಾದವರೂ ಓದಿದಾಗ ಜೊತೆ ಸೇರಿ ಅನುಭವಿಸಬಹುದಾದ ಆತ್ಮೀಯತೆ ಅವರ ಹಾಸ್ಯವಿನೋದ ಲಹರಿಯ ವೈಶಿಷ್ಟ್ಯ.

ರಂಗನಾಥ್‌ರವರ ಬಾಲ್ಯ, ಹರೆಯದಲ್ಲಿ ಅವರ ಒಡನಾಡಿ, ಮಾರ್ಗದರ್ಶಿ-ಗಳಾಗಿದ್ದವರ list ನೋಡಿದಾಗ ಆ ದೇವದೇವ ಇವರನ್ನು ಸ್ವಲ್ಪ ಹೆಚ್ಚು favour ಮಾಡಿದನೇನೋ ಎನ್ನುವ ಸಂದೇಹವು ಬಾರದಿರದು.

ಪ್ರೀತಿ ಹೆಪ್ಪುಗಟ್ಟಿ, ಸಂಸ್ಕೃತಿಯೇ ಮೈದಳೆದಂತಿದ್ದ ತುಂಬು ಕುಟುಂಬದಲ್ಲಿ ಜನನ, ಸುಸಂಸ್ಕೃತ ಸಹೃದಯಿ ಶಿಕ್ಷಕರಿಂದ ಆರಂಭವಾದ ಪಾಠ, ಎಳೆಯದರಲ್ಲೇ ಎಸ್.ವಿ. ಶ್ರೀನಿವಾಸರಾಯರಿಂದ ನಾಟಕರಂಗಕ್ಕೆ ಉತ್ತೇಜನ, ನಾ. ಕಸ್ತೂರಿಯವರಂತಹ ದಿಗ್ಗಜರ ಮೆಚ್ಚುಗೆಯ ಶಿಷ್ಯ ಸ್ಥಾನ. (ರಂಗನಾಥರವರ ನಸೀಬು ಅದೆಷ್ಟು ಒಳ್ಳೆಯದಿತ್ತು ಎಂಬುದನ್ನು ಅವರ ಮಾತುಗಳಲ್ಲೇ ಅವರ 'ನೆನಪಿನ ನಂದನ' ದಲ್ಲಿ ವಿಹರಿಸಿದರೆ ನಮಗೆಲ್ಲಾ ಅರಿವಾದೀತು). ವಿಶೇಷವಾಗಿ ಇದೆಲ್ಲಾ ನಡೆದಿದ್ದು ಆಗಿನ ಮೈಸೂರಿನಲ್ಲಿ.

ಇಂತಹ ಭಾವನಾತ್ಮಕ ಜೀವಿಯ ಲಾಸ್ಯ ಲಹರಿಯಲ್ಲಿ ಹುಟ್ಟುಹಾಕತೊಡಗಿದಾಗ ನನಗೆ ಅರಿವಾಯಿತು... ನಾನು ತೇಲುತ್ತಿರುವುದು ಮಿತಿಯಿಲ್ಲದ ವಿನೋದದ ಹಾಸ್ಯ ಸಾಗರದಲ್ಲಿ, ಅದೂ ಒಂದು ಪುಟ್ಟ ಹಾಯಿದೋಣಿಯಲಿ ಎಂದು. ನಾ ಆ ಸಂಪತ್ತನ್ನು ಮೊಗೆಮೊಗೆದು ನಿಮಗೆ ಕೊಡಲಾದೀತೆ? ಹಾಗೆ ರುಚಿ ನೋಡಿದರೂ ಒಂದೆರೆಡು ಗುಟುಕಲ್ಲಿ ರಂಗನಾಥರ ವಿನೋದ ಸಾಗರದ ಸ್ವಾದವನ್ನು ಪೂರ್ಣವಾಗಿ ಆಸ್ವಾದಿಸಲಾದೀತೆ?

ರಂಗನಾಥರದು ಬಹುಮುಖ ಪ್ರತಿಭೆ. ಪ್ರಬುದ್ಧ ನಾಟಕಕಾರ, ಸುಶ್ರಾವ್ಯ ಸಂಗೀತಗಾರ, ಪ್ರಸಾರಾಂಗ ತಜ್ಞ, ಪ್ರಬಂಧಕಾರ, ಮತ್ತೆ (ತುದಿ ಮೊದಲಿಲ್ಲದ) ಉತ್ಪ್ರೇಕ್ಷೆಯ ಎಲ್ಲೆಯನ್ನೇ ಸದಾತಟ್ಟುವಂತಿರುತ್ತಿದ್ದ ಪುನಃ ಪುನಃ ಓದಬೇಕೆನಿಸುವಂತಹ ವಿನೋದ/ಹಾಸ್ಯದ ಕರ್ತೃ. ಇವೆಲ್ಲದರೊಡನೆ ಸುಖಸಂಸಾರಿಯೂ ಆಗಿ... ಎಲ್ಲೆಲ್ಲೂ ಎಲ್ಲರೊಡನೆಯೂ ಬೆರೆತು ಜೀವಿಸಿ ಆಡುಮುಟ್ಟದ ಸೊಪ್ಪಿಲ್ಲ ಗಾದೆಗೇ.. ಸವಾಲು ಹಾಕುವಂತಹ ಜೀವನ ನಡೆಸಿದಂತವರು!

ರಂಗನಾಥರ ಬರಹಗಳಲ್ಲಿ ಕೆಲವು ಓದುಗರನ್ನು ಹೇಗಾದರೂ ಮಾಡಿ ನಗೆ ಮಜಲಿಗೇರಿಸಲೇಬೇಕೆಂದು ಪಣತೊಟ್ಟಿರುವಂಥವವು. ನನಗೆ ದೊರಕಿದ/ಲಭ್ಯವಾದ ಹಾಸ್ಯಪ್ರಧಾನ ಕೃತಿಗಳ ಅಂದ ಚೆಂದವ ಬಹುಕಾಲ ಸವಿದೆ.

ವೈದ್ಯನಲ್ಲದ ಡಾಕ್ಟರು......(ರಂಗನಾಥರವರೇ ಹೇಳಿಕೊಂಡಿದ್ದಾರೆ ನಾ. ಕಸ್ತೂರಿಯವರ ವಿನೋದಗಳಿಂದ ಪ್ರೇರಿತವಾಗಿರುವ ಲೇಖನಗಳಿಂದ ತುಂಬಿದ ಪುಸ್ತಕವಿದೆಂದು.)

ಇದರ ಒಂದೊಂದು ಲೇಖನಕ್ಕೂ ಇವರು ರಿಸರ್ಚ್ ಮಾಡಿ ಬರೆದಿದ್ದಾರೋ ಅಥವಾ ಇವರು ಬರೆದದ್ದನ್ನೆಲ್ಲ ಮತ್ತೆ ಮತ್ತೆ ಸ್ವತಃ ಅನುಭವಿಸಬೇಕೆಂದು ಓದುಗರೇ ರಿಸರ್ಚ್ ಮಾಡಲು ಹೊರಡಬೇಕೋ ಎನ್ನುವಷ್ಟು ತನ್ಮತನ ಹೊಂದಿದೆ. ಅದರಲ್ಲೊಂದು.. ಹಲ್ಲಿನ ಪುರಾಣ.....

ಹಲ್ಲಿಲ್ಲದವನೇಂ ಗಡಮಲ್ಲನೇ? ಸುಡುಸುಡು
ಸೊಲ್ಲಿಲ್ಲದಾತಂಗೆ, ಅಹ, ಕಲ್ಲು ಬೀರೆಂದನಾ ವಿದುರ

'....ಮಾನವನ ಮುಖದಲ್ಲಿ ಹಲ್ಲಿಗೆ ಖಚಿತವಾದ, ನಿಖರವಾದ ಹೆಚ್ಚಳಿಕೆಯ ಸ್ಥಾನವಿದೆ. ಸ್ತ್ರೀಯರ ಮಹಾಸ್ತ್ರವೆಂದರೆ ಹಲ್ಲೆಂದು ಸ್ವತಃ ಸಿದ್ಧವಾಗಿದೆ. ಅನೇಕ ಗಂಡಸರ ಹಲ್ಲುಗಳನ್ನು ಕಂಡರೂ ಗಾಬರಿಯಾಗುತ್ತದೆ. ಕೈ ಕುಸಿದಾಗ, ದೇಹ ಜಡವಾದಾಗ, ಹೆಗಲು ಮುರಿದಾಗ ಎಲ್ಲೆಲ್ಲಿ ಎಷ್ಟೆಷ್ಟು ನಿಸ್ತೇಜ ನಿತ್ರಾಣವಾದರೂ ಹಲ್ಲು ಸರಿಯಾಗಿದ್ದರೆ ಸಾಕು–ಶತ್ರುವನ್ನು ಹಿಂಸಿಸಿ ಕಾಡಬಹುದು. ಈ ಕಾರಣದಿಂದಲೂ ಹಲ್ಲು ಯೌವನದ ಕುರುಹಾದುದರಿಂದಲೂ ಅನೇಕಾನೇಕ ಮಂದಿ ಮುದುಕರೂ ಹಲ್ಲು ಕಟ್ಟಿಸಿಕೊಂಡು ದವಡೆ ಬೀಸುತ್ತಾ ಹೋಗುತ್ತಿರುತ್ತಾರೆ. ಹಲ್ಲು–ಚೇತನದ ಕುರುಹು: ಶೌರ್ಯದ ಗುರುತು...'

–ಎಂದು ಆರಂಭಿಸಿದವರು ಹಲ್ಲಿನ (ಅವ)ಗುಣಗಾನವನ್ನು ಸೂಕ್ಷ್ಮ ಅತಿಸೂಕ್ಷ್ಮವಾಗಿ ವಿವರಿಸುತ್ತ ರಂಗನಾಥ್ ಬ್ರಾಂಡ್ ಉಪ್ಪು, ಹುಳಿ, ಖಾರ ಹಾಕಿ ಮುಂದುವರೆಯುತ್ತಾರೆ.....

'ಮನೆಯ ಯೋಗಕ್ಷೇಮವನ್ನು ಮೂಲೆಗೊತ್ತರಿಸಿ ಬೀದಿಸುತ್ತುವ ಗಂಡುಬೀರಿಯಂತೆ ಉಬ್ಬು ಹಲ್ಲುಬಾಯಿಂದ ಹೊರಕ್ಕೆ ಹೊರಬಂದು ಮೂಗನ್ನೂ ಅಣಕಿಸುತ್ತಿರುತ್ತದೆ'.

'ಮೇಲೂ ಕೆಳಗೂ ಹಲ್ಲು ಸಾಲಿದ್ದರಂತೂ ಎರಡೂ ತುಟಿಗಳು (ಒಬ್ಬನೇ ವ್ಯಕ್ತಿಯ) ಸೇರುವ ಸಂಭವವೇ ಇಲ್ಲ.'

ಹೀಗೆ ಉಬ್ಬುಹಲ್ಲು , ಬಾಚಿಹಲ್ಲು, ಹುಳುಕು ಹಲ್ಲು, ಹೆಚ್ಚು ಹಲ್ಲು.. ಮುಂತಾಗಿ ಬಗೆಬಗೆಯ ಹಲ್ಲಿನ ಸವಿಸ್ತಾರ ವಿವರಣೆಯನ್ನು ನುಣ್ಣನೆ ಜಗಿದು ಮುಗಿಸುವಷ್ಟರಲ್ಲಿ ಓದುಗರ ನಾಲಿಗೆ ತಮ್ಮ ತಮ್ಮ ಬೇಲಿಯಲ್ಲಿನ ಮಿತ್ರ/ಶತ್ರುಹಲ್ಲುಗಳ ತಪಾಸಣೆ ನಡೆಸಲಾರಂಭಿಸಿರಲೂ ಸಾಧ್ಯ.

ಮತ್ತೆ 'ನಿದ್ರೆಯಲ್ಲಿನ ಎಚ್ಚರ'ದ ಗೊರಕೆಯ ವಿವಿಧ ಸ್ತರಗಳನ್ನು ನಿಮಗೆ ಕೇಳಿಸದಿದ್ದಲ್ಲಿ ನನಗೆ ನಿದ್ದೆಬಾರದು....

'ಭೀಮಭದ್ರಪ್ಪನವರ ವಿಧವಿಧವಾದ ಗೊರಕೆಯ ಶಬ್ದವೈಶಿಷ್ಟ್ಯ..... ಓಡುವ ರೈಲು ಮಾಡುವ ಶಬ್ದವನ್ನೂ ತೀಡಿ ಮೆಟ್ಟಿ ತುಳಿದು, ತನ್ನದೇ ಬಾವುಟವನ್ನು ಹಾರಿಸಿದ್ದ ಆ ಗೊರಕೆ ಅದ್ಭುತ ರಮ್ಯ ವಿವಿಧ ವಿನೋದಾವಳಿಯಾಯಿತು....'

ಒಂದು ಬಗೆ......'ನಾಭಿಯಿಂದ ಹೊರಟು ಸೀಳುನಾಯಿಯ ರೋಧನವಾಗಿ ಪ್ರಾರಂಭವಾದ ಆ ಉಸಿರು, ಒಂದು ಚಕ್ರ ಸುತ್ತಿಬರುವುದರೊಳಗೆ ಗಂಟಲಿನಲ್ಲಿಯೇ ಗುಡುಗಿ, ಏರಿಹತ್ತುವ ಲಾರಿಯಾಗಿ, ಪ್ರಪಾತಕ್ಕೆ ಧುಮ್ಮಿಕ್ಕುವ ದಭದಭೆಯಾಗಿ ಭೋರ್ಗರೆದು ಮುಂದೆ ರೋಗದ ಕುದುರೆಯಾಗಿ ಕೆನೆಯುತ್ತ ಥಟಕ್ಕನೆ burst ಆದ ಬಲೂನಿನಂತೆ ಬಯಲಾಗುತ್ತಿತ್ತು'.

ಇನ್ನೊಂದು ಬಗೆಯದು..... 'ಮೇಲುಶ್ರುತಿಯ ಪಿಟೀಲಿನ ಸಾರಣೆ ತಂತಿಯ ಷಡ್ಜದ ಎಳೆತದಿಂದ ಪ್ರಾರಂಭ. ಮುಂದೆ ಚೆಲೋ ತಂತಿಯ ಎಳೆತವಾಗಿ, ಕ್ಲಾರಿಯೋನೆಟ್ಟಿನಲ್ಲಿ ಒಂದು ಧೃತಗತಿಯ ಬರಕಾ ಹೊಡೆದು, ನೀರಿನಲ್ಲಿ ನೆನೆಸಿದ ಮೃದಂಗ ತಾಡನದಂತೆ ಮುಂದುವರೆದು, ತಮಟೆಯ ನಾಲ್ಕು ಬಡಿತದಲ್ಲಿ ತಟಕ್ಕನೆ ಮುಗಿಯಿತು....'

ಹೀಗೆ ಹಲವಾರು..... ಸುಂದರ ಲೇಖನಗಳ, ಊಹಾತೀತ ಪ್ರಸಂಗಗಳ ಭಂಡಾರ ವೈದ್ಯನಲ್ಲದ ಡಾಕ್ಟರು.

ಕನ್ನಡ ಸಾಹಿತ್ಯದಲ್ಲಿ ಹಾಸ್ಯದ ವಿವಿಧ ಪ್ರಾಕಾರಗಳ ಬಗ್ಗೆ ಚಿಂತಿಸಹೊರಟಾಗ ಹೊಸರೀತಿಯಲ್ಲಿ, ತಮ್ಮದೇ ಶೈಲಿಯಲ್ಲಿ ಹಾಸ್ಯದ ಹೊನಲನ್ನ ಹರಿಸಿದವರಲ್ಲಿ, ಮತ್ತೆ ಇತರರಿಗೂ ಸ್ಫೂರ್ತಿಯಿತ್ತು ಅದು ಮುಂದುವರೆಯುವಂತೆ ನೋಡಿಕೊಂಡವರಲ್ಲಿ, ಅತೀ ಎನ್ನಬಹುದಾದ ರಂಜನೆಯ ಬಣ್ಣ ಹಚ್ಚಿದವರ ಪಟ್ಟಿಯಲ್ಲಿ ರಂಗನಾಥರವರ ಹೆಸರು ಅಗ್ರಪಂಕ್ತಿಯಲ್ಲಿದೆ.

ತಮ್ಮ ಸ್ವಾನುಭವ ಕಥನ 'ಕ್ಯಾಪಿಟಲ್ ಪನಿಷ್‌ಮೆಂಟ್'ನಲ್ಲಿ ರಂಗನಾಥರವರು ಕಥಾನಾಯಕ ರಂಘಣ್ಣ ಮತ್ತವನ ಸಂಸಾರದ ಮೂಲಕ, ತಾವು ಕಂಡುಂಡ ನಮ್ಮ ರಾಷ್ಟ್ರದ ಕ್ಯಾಪಿಟಲ್ಲಿನ ವಿವಿಧ ಅನುಭವ, ಅನುಭಾವ, ಅಲ್ಲಿಯ ಜನರ ನಗೆ–ಹೊಗೆ, ನಲಿವು–ಗೆಲುವು, ಒಲವು, ರೀತಿ–ರಿವಾಜುಗಳನ್ನೆಲ್ಲಾ ಬೂದುಗಾಜಿನಲ್ಲಿ ನೋಡಿ, ಸಿಕ್ಕಾಪಟ್ಟೆ ಉಪ್ಪುಖಾರ ಹಚ್ಚಿ (ಅವರದೇ ಪದಗಳಿವು....) ಓದುಗರಿಗೆಲ್ಲಾ ಸೊಗಸಾದ ಔತಣವನ್ನೇ ಉಣಬಡಿಸಿದ್ದಾರೆ.

ಕ್ಯಾಪಿಟಲ್ ಪನಿಷ್‌ಮೆಂಟ್ ಅನುಭವಿಸಲು ಹೊರಟವನಿಗೆ ಅದನ್ನೋದಿದಾಗ ಆಗುವುದು ಶುದ್ಧ ಅತಿಹಾಸ್ಯದ ಮನೋರಂಜನೆಯ ಅನುಭವ ಜೊತೆಗೆ ದಿಲ್ಲಿಯ ಮೈಯ ಕಣಕಣವನ್ನೂ ಹೆಪ್ಪುಗಟ್ಟಿಸುವ ಚಳಿ, ಮೈಮನವ ಸುಟ್ಟು ಕರಕಲಾಗಿಸುವ ಘೋರ ಬಿಸಿಲ ತಾಪಮಾನದ ರುಚಿ.

ದಿಲ್ಲಿಯ ದಿನನಿತ್ಯದ ವಿವಿಧ ವಿನೂತನ ಜಂಜಾಟದ ದಾಖಲೆ ಮತ್ತೆ ತನ್ನಿಷ್ಟದಂತೆ ತಾನೇ ನಿಧಾನಸ್ತವಾಗಿ, ಉರುಳಾಡುತ್ತಾ ಸಾಗುವ ಜಡ್ಡುಹಿಡಿದ ಸರಕಾರೀ (ಅ)ವ್ಯವಸ್ಥೆಯ (ರೈಲುಪ್ರಯಾಣದಿಂದ ಹಿಡಿದು ಮಂತ್ರಾಲಯವರೆಗಿನ) ಸಂಪೂರ್ಣ ನಿರೂಪಣೆಯನ್ನು ನಿಧಾನವಾಗಿ ಸವಿದಷ್ಟೂ ರುಚಿ ಹೆಚ್ಚು.

ರಂಗನಾಥರು ಕ್ಯಾಪಿಟಲ್ಲಿನ ರಾಜಪಥ, ಜನಪಥ, ತೀನ್‌ಮೂರ್ತಿ ಭವನ, ಕನ್ನಾಟ್ ಪ್ಲೇಸ್, Red Fort, ನಾಟಕ ಶಾಲೆಗಳು, ಸಂಘಗಳು, ನ್ಯಾಷನಲ್ ಪಾರ್ಕ್‌ಗಳು, Children's World, ನೆಹರೂ ಭವನ, ರವೀಂದ್ರ ಭವನ, ಶಾಸ್ತ್ರಿಗಳ ಭವನ, ಹಿರಿಯರ ಘಾಟ್‌ಗಳು ಮತ್ತು ಎಲ್ಲೆಲ್ಲಿಯ ವ್ಯಾಪಾರಿಗಳ ಕಾಟಗಳು-ಮುಂತಾಗಿ ಕಣ್ಣಿಗೆ ಕಟ್ಟುವಂತೆ ತೆರೆದಿಟ್ಟು...... ಇವನ್ನೆಲ್ಲಾ ಹುಟ್ಟು ಭಾರತೀಯನಾಗಿಯೂ ನೋಡದೆ, ಅನುಭವಿಸದೆ ಪರದೇಶಿಯಾಗಿರುವ ನನ್ನಂಥವರಿಗೆ ಮುಟ್ಟಿಸಿ ಎಚ್ಚರ ಮಾಡಲು ಬರೆದಂತಿದೆ.

ರಂಘಣ್ಣನ 'ಮರಿ-ರಿಪಬ್ಲಿಕ್ ಡೇ'(ಜನವರಿ ಇಪ್ಪತ್ತಾರನೆಯ ದಿನಕ್ಕೆ ಎರಡು ದಿನ ಮುಂಚಿತವಾಗಿ) ಅನುಭವವನ್ನು, ಅದರ ಸಂಪೂರ್ಣ ವಿವರಣೆಯನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಲಾಗಿದೆ. pre-Republic Day ದಿನ ರಂಘಣ್ಣನ ಕುತೂಹಲ, ಚೈತನ್ಯ, ಕ್ರಮಕ್ರಮೇಣ ಹೆಚ್ಚುತ್ತಾ ಹೋಗಿ, ಸುತ್ತಮುತ್ತಲ ಸಂಭ್ರಮ ಸಡಗರಗಳಿಂದ ಮತ್ತೂ ತಾರಕಕ್ಕೇರಿ ಕಡೆಗೆ ತನ್ನ ಎಬಡಾತನದಿಂದ ಅಚಾತುರ್ಯ ಮಾಡಿಯೂ ಒಂದು ಕಾಂಪ್ಲಿಮೆಂಟರಿ ಪಾಸ್ ಗಿಟ್ಟಿಸಿದ.

ಹತ್ತಿರದಿಂದ ಗಣರಾಜ್ಯೋತ್ಸವ ನೋಡಿ ಹಿರಿಹಿರಿ ಹಿಗ್ಗಿದ ರಂಘಣ್ಣನಿಗೆ ಅನ್ನಿಸಿದ್ದು.......

'ಜನತೆಯ ಮಹೋತ್ಸವದ ಈ ದಿನವನ್ನು ಜನತೆ ಹೀಗೆತಾನೇ ಕಳೆಯಬೇಕು? 'ಡೆಲ್ಲಿ ಗೋಸ್ ಆನ್ ಎ ಪಿಕ್ನಿಕ್' ಅದಕ್ಕೇ ತಾನೇ ರಜಾ ಕೊಡೋದು? ಇದನ್ನ ನೋಡಿದ ಮೇಲೆ ಬೆಂಗಳೂರು ಸಪ್ಪೆ! ಏನೋ ಕೋಟು ಏರಿಸಿಕೊಂಡು ಬಲವಂತಕ್ಕೆ ಪೆರೇಡು ಗ್ರೌಂಡಿಗೆ ಹೋಗಿ ಸಪ್ಪೆ ಮುಖ ಮಾಡಿಕೊಂಡು ಕೂತು, ಮುಗಿದ ಕೂಡಲೇ ಸೋತ ಎತ್ತಿನಂತೆ ಕಾಲಾಡಿಸಿಕೊಂಡು ಮನೆಗೆ ಬಂದು ಎಂದಿನದೇ ಪುಳಿಚಾರನ್ನ ಮತ್ತೆ ತಿಂದು, ಮಲಗಿ ಗೊರಕೆ ಹೊಡೆಯೋದು. ಹೆ! ರಿಪಬ್ಲಿಕ್ ಡೇ ಅಂದರೆ

ಡೆಲ್ಲಿಯವರಂತೆ ಆಚರಿಸಬೇಕು. ದಿನವೆಲ್ಲಾ ಹೀಗೆ ರಿಲಾಕ್ಸ್ ಮಾಡಬೇಕು! ಅಲ್ಲಾ ರಾಷ್ಟ್ರಪತಿಗಳಿಗೆ ಒಂದು ಬೇಡಿಕೆ ಕೊಟ್ಟು, ಮುಂದಿನ ಕಾಲಕ್ಕೆ ಕಡೆಯ ಪಕ್ಷ ಬೆಂಗಳೂರನ್ನೆಲ್ಲಾ ಯಾಕೆ ಎರಡು ದಿನಗಳ ಮಟ್ಟಿಗೆ ದಿಲ್ಲಿಗೆ ಎತ್ತಿ ತರಸಬಾರದು? ಎಂಬ ಯೋಚನೆ ಬುರುಡೆಯಲ್ಲಿ ಹೊಳೆದು ರಂಘಣ್ಣನ ನಾಲಿಗೆ ಏನನ್ನೋ ಚಪ್ಪರಿಸತೊಡಗಿತು'.

ರಂಘಣ್ಣನಿಗೆ ದಿಲ್ಲಿಯ ಕನ್ನಾಟ್ ಪ್ಲೇಸಿನಲ್ಲಾದ ಚೌಕಾಸಿವ್ಯಾಪಾರದ ಮತ್ತು ಅಲ್ಲಿನ ವ್ಯಾಪಾರಿಗಳ 'ಇವನಿಗೆ ಏನನ್ನಾದರೂ ಮಾರಲೇಬೇಕೆನ್ನುವ' ಕೆಟ್ಟ ಛಲದ ರುಚಿ-ಅನುಭವವನ್ನು ರಂಗನಾಥರ ಮಾತುಗಳಲ್ಲೇ ಕೇಳಿ......

'ರಸ್ತೆಯ ಎಡಗಡೆಯ ವಿಶಾಲವಾದ ಫುಟ್‌ಪಾತಿನ ಗುಂಟ ಅಂಗಡಿಗಳ ಸಾಲು! ನೆಲದ ಮೇಲೆ ಸಾಮಾನುಗಳನ್ನು ಹರವಿಕೊಂಡಿದ್ದರೂ, ಮೇಲೆ ಗುಡಾರ ಎಳೆದು ಕಟ್ಟಿ, ಒಳಗೆ ಒಳ್ಳೆಯ ಅಂತಃಪುರದಂತೆ ಮಾಡಿಕೊಂಡಿದ್ದಾರೆ. 'ಬನ್ನಿ-ಇಲ್ಲಿ ಪ್ರತಿಯೊಂದೂ ಕ್ಯೂರಿಯೋ ಅಂಗಡಿಗಳು-ಕೊಳ್ಳದಿದ್ದರೆ ಚಿಂತೆ ಇಲ್ಲ ನೋಡಿಯಾದರೂ ಹೋಗೋಣ' ಎಂದಳು ರಮಾ. ಅಂಗಡಿಯೊಂದರ ಗುಡಾರದೊಳಗೆ ತಲೆ ಇಟ್ಟ ತಕ್ಷಣ ಅಂಗಡಿಯ ನಾಲ್ಕು ಜನ ಎಲ್ಲರನ್ನೂ ಕೈಹಿಡಿದು ಒಳಕ್ಕೆ ಎಳೆದುಕೊಂಡರು! ಭಾರೀ ಬೆಲೆಯ ಬಲ್ಬುಗಳನ್ನು ಹಚ್ಚಿದರು. ಒಳಗೆ ನೋಡಿದರೇ ವಿಚಿತ್ರ ಪ್ರಪಂಚ! ಕುಸುರಿ ಕೆಲಸ ಮಾಡಿದ ಲೋಹದ ಸಾಮಾನು! ಹಿತ್ತಾಳೆ, ಕಂಚು, ತಾಮ್ರದ ಲೈಫ್ ಸೈಜಿನ ಪ್ರಾಣಿಗಳಿಂದ ಹಿಡಿದು ಪುಟ್ಟಪುಟ್ಟ ನೀಲಾಂಜನದವರೆಗೆ! ಅದೋ ನೇಪಾಳದ ಕೆತ್ತನೆ ಕೆಲಸ! ಇದೋ ಕಾಶ್ಮೀರದ ಕುಸುರಿ, ಅಲ್ಲಿ ನೋಡಿ ಜಯಪುರದ ಸಾಮಾನು! ಈ ಬದಿಗೆ ಮಣಿಪುರದಿಂದ ಬಂದ ಲೋಹದ ಸಾಮಾನುಗಳ ಗೋಪುರ! ಮೂರು ಮೂರು ಜನ ಕೈಹಿಡಿದು ಅರ್ಧರ್ಧ ಗಂಟೆ ವಿವರಿಸಿ ತೋರಿದಾಗ, ಏನಾದರೂ ಕೊಳ್ಳದಿದ್ದರೆ ಹೇಗೆ? ಅಳೆದೂ ಸುರಿದೂ ಕಡೆಗೆ ಸಾವಿತ್ರಿ, ಒಂದು ಜೊತೆ, ಒಂದು ಇಂಚು ಎತ್ತರದ, ಸಾದಾ ಸಿಂಪಲ್ ಹಿತ್ತಾಳೆ ನೀಲಾಂಜನಗಳನ್ನು ಆರಿಸಿ ಬೆಲೆ ಕೇಳಿದಾಗ ಅವನು ಅತ್ಯಂತ ಜುಗುಪ್ಸೆಯಿಂದ, ಅವರ ಕಡೆಗೆ ತೀಕ್ಷ್ಣವಾಗಿ ನೋಡಿ, 'ಅದು ನೇಪಾಳದ ಒಂದು ಪ್ರಸಿದ್ಧವಾದ ಬುದ್ಧವಿಹಾರದ ಬಳಿ ನೆಲ ಅಗೆದಾಗ ಸಿಕ್ಕಿದ ಪವಿತ್ರವಾದ ಹಿತ್ತಾಳೆಯಲ್ಲಿ ಮಾಡಿದ ಸಾಮಾನು. ದಿಲ್ಲಿಯಲ್ಲಿ ಇನ್ನಾರ ಬಳಿಯೂ ಸಿಕ್ಕುವುದಿಲ್ಲ ಅವರಪ್ಪರಾಣೆ! ನಿಮ್ಮದು ಪುಣ್ಯ-ಅರ್ಧಗಂಟೆ ಹುಡುಕಿ ಅದನ್ನೇ ಆರಿಸಿ ತೆಗೆದಿರಿ. ನ್ಯಾಯವಾಗಿ ಅದನ್ನು ನಾನು ಮಾರುವುದೇ ಇಲ್ಲ! ಅದು ಹೊಕ್ಕ ಮನೆಯಲ್ಲಿ ಅದೃಷ್ಟದ ಹೊಳೆಯೇ ಹರಿಯಬೇಕು! ಏನೋ ನಿಮ್ಮ ಮುಖ ನೋಡಿ ಕೊಡಬೇಕಾಗಿದೆ! ಹೋಗಲಿ ತೆಗೆದುಕೊಳ್ಳಿ! ನಿಮ್ಮ ಪುಣ್ಯ ಇಂದು ಉದಯಿಸಿತು! ನಮಗೆ

ನಷ್ಟವಾದರೇನಂತೆ? ತೆಗೆದುಕೊಳ್ಳಿ. ಕೇವಲ ಟೋಕನ್ ಅಂತ ಮೂವತ್ತೊಂದು ರೂಪಾಯಿ. ಹದಿನಾಲ್ಕು ಪೈಸೆ ಕೊಡಿ' ಎಂದಾಗ ರಂಘಣ್ಣನಿಗೆ ಕಿತ್ತುಕೊಂಡು ಓಡುವಂತಾಯಿತು.

'ನಿಮ್ಮ ದಮ್ಮಯ್ಯ ಬೇಡ' ಎಂದು ಎಲ್ಲರೂ ಕಿರಿಚಿಕೊಂಡು ಹೊರಹೊರಟಾಗ, ಅಂಗಡಿಯವನು ಅಡ್ಡಗಟ್ಟಿ ನಿಲ್ಲಿಸಿ ಮತ್ತೊಂದು ಲೆಕ್ಚರ್ ಬಿಗಿದು, 'ಹೋಗಲಿ, ಹದಿನಾಲ್ಕು ಪೈಸೆಬಿಡಿ. ಕೇವಲ ಮೂವತ್ತೊಂದು ರೂಪಾಯಿಗಳನ್ನೇ ಕೊಡಿ' ಎಂದು ಕೈ ನೀಡಿದಾಗ 'ಸಾಧ್ಯವಿಲ್ಲ' ಎಂದು ಸಂಸಾರ ಹಿಂದಿರುಗಿತು! 'ಹೋಗಲಿ, ಇಪ್ಪತ್ತು ಕೊಡಿ! ಅದರ ಮಹಿಮೆ ನಿಮಗೆ ಗೊತ್ತಿಲ್ಲ'. 'ಸಾಧ್ಯವಿಲ್ಲ ದಮ್ಮಯ್ಯ'. 'ಹದಿನೈದು ಕೊಡುತ್ತೀರ?' 'ಇಲ್ಲ ಸಾಧ್ಯವೇ ಇಲ್ಲ–ಪ್ಲೀಸ್! ಬಿಡಿ ನಮಗೆ ಬೇಡ' ಎಂದು ಅಂಗಡಿಯಿಂದ ಹಾರಿ ಹೊರಗೆ ಬಂದರು! ಆದರೆ ಅವನು ಬಿಡಬೇಕಲ್ಲಾ! ಅಡ್ಡಗಟ್ಟಿ ನಿಂದು,'ನಿಮ್ಮ ಪುಣ್ಯ! ಹಂ! ತೊಗೊಂಡು ಹೋಗಿ! ಹತ್ತೇ ರೂಪಾಯಿ ಕೊಡಿ!' 'ಇಲ್ಲ–ಆಗೋಲ್ಲ!' 'ಎಂಟು?' 'ನಿಮ್ಮಪ್ಪರಾಣೆ ಕೊಡೋಲ್ಲ! ನಮಗೆ ಬೇಡವೇ ಬೇಡ'. 'ನಿಮ್ಮಂತಹ ಜುಜುಬಿಗಳನ್ನೇ ನೋಡಲಿಲ್ಲ ನಾನು ಈ ಇಪ್ಪತ್ತು ವರ್ಷದಲ್ಲಿ! ಆದರೆ ನಿಮ್ಮದೇ ಬೋಣಿ! ಹೋಗಲಿ ಐದುಕೊಟ್ಟು ತೊಗೊಂಡು ಹೋಗಿ' ಎಂದಾಗ ಸಾವಿತ್ರಿಗೆ ಕೊಳ್ಳೋಣವೇ ಎನ್ನಿಸಿತು. ಆದರೆ ರಂಘಣ್ಣ ಒಪ್ಪಲಿಲ್ಲ! 'ಹಾಳಾಗಿ ಹೋಗಲಿ! ಮೂರೇ ರೂಪಾಯಿ ಕೊಟ್ಟು ಈ ಸಂಪತ್ತನ್ನು ಕೊಂಡು ಹೋಗಿ' ಎಂದ ಅಂಗಡಿಯವ. ಅಷ್ಟು ಹೊತ್ತಿಗೆ ಹತ್ತು ಹೆಜ್ಜೆ ನಡೆದಿದ್ದರು! 'ಸಾಧ್ಯವಿಲ್ಲ' ಎಂದಾಗ, 'ನಿಮ್ಮ ಮೂತಿಗೆ ಬೆಂಕಿ ಹಾಕ! ಎರಡು ರೂಪಾಯಿ ಕೊಡುತ್ತೀರೋ ಅದೂ ಇಲ್ಲವೋ?' ಎಂದು ರಂಘಣ್ಣನ ಕೈ ಹಿಡಿದು ಕೇಳಿದ, 'ಇಲ್ಲ' ಎಂದಾಗ 'ಕಡೆಗೆ ಒಂದು ರೂಪಾಯಿ?' 'ಇಲ್ಲವೇ ಇಲ್ಲ'. 'ಹಯ್ಯೋ ಬಿಕನಾಸಿ! ಬೋಣೀ ಮಾಡೋ! ಜೇಬಲ್ಲಿ ದುಡ್ಡಿಲ್ಲದೆ, ದೊಡ್ಡದಾಗಿ ವ್ಯಾಪಾರ ಕೇಳುತ್ತೀಯಲ್ಲ! ಹೋಗಲಿ ಎಷ್ಟಾದರೂ ಕೊಟ್ಟು ತೊಗೋಂಡು ಹೋಗು' ಎಂದು ಕೈ ಹಿಡಿದು ನಿಂತಾಗ, ಕಿತ್ತುಕೊಂಡ ರಂಘಣ್ಣ, ಜೇಬಿನಿಂದ ಆರಾಣೆ ತೆಗೆದು ಅಂಗಡಿಯವನ ಕೈಲಿ ಬಡಿದು, ಕಣ್ಣುಮುಚ್ಚಿ ಮುಂದೆ ಹತ್ತು ಹೆಜ್ಜೆ ನಡೆದು ಹಿಂದಿರುಗಿ ನೋಡಿದಾಗ, ಆತ ಇನ್ನೂ ಅಲ್ಲಿಯೇ ನಿಂತು ಎಲ್ಲರಿಗೂ ಕೇಳುವಂತೆ ಕಟಕಟ ಹಲ್ಲು ಕಡಿಯುತ್ತಿದ್ದ!

ಶ್ರೀ ರಂಗನಾಥರವರ 'ಇವರೆಲ್ಲಾ ನಮ್ಮವರೇ....' ನಮ್ಮ ಸುತ್ತಮುತ್ತಲಿನಲ್ಲಿ ಬದುಕಿ ಬಾಳುತ್ತಿರುವ, ಬಂದು ಹೋಗಿರುವ, ಬರುವ ಹೋಗಬಹುದಾದ ವ್ಯಕ್ತಿಗಳ ವ್ಯಕ್ತಿತ್ವದ ಚಿತ್ರಣ. ಕೆಲವೆಡೆ ಇದು ಉತ್ಪ್ರೇಕ್ಷೆ ಖಂಡಿತ ಅಲ್ಲವೆನ್ನುವಷ್ಟು ನೈಜ ಚಿತ್ರಣ.

ಒಂದೊಂದು ಲೇಖನವೂ ಅದರದೇ ಶೈಲಿ, ಸ್ಪೆಷಲ್ ಶೀರ್ಷಿಕೆ, ಗಾದೆಗಳಿಂದ ಮೈದುಂಬಿ ನೀ ನನ್ನನ್ನ ನೋಡಿಲ್ವೆ..... ಸ್ವಲ್ಪ ಸರಿಯಾಗಿ ದಿಟ್ಟಿಸಿ ನೋಡು..... ನಾನೇ ಪಕ್ಕದೂರಿನ ಬೋರಣ್ಣ.... ಇಲ್ಲಾ ಮುಂದಿನ ಮನೆಯ ಭಾಗಜ್ಜಿ ಎಂದು ತಿವಿದು ಎಚ್ಚರಿಸಿ, ನಗಿಸಿ... ತಾಗಿಸುವಂತಹ ಲೇಖನಗಳು. ಈ ಕಥಾ ಸಂಕಲನದ ಶೀರ್ಷಿಕೆಗಳನ್ನೋದುವುದೇ ಒಂದು ಖುಷಿ....'ಮಾಸ್ತರ್ ಮೂಗುದ್ದಯ್ಯ, ಅಚ್ಚುಮೆಚ್ಚಿನ ಅಚ್ಚ್ಯುತರಾಯ, ವೆ.ಬ್ರ. ಬೂದಿ ಬಡಕಟ್ಟಬಟ್ಟರು, ದಪ್ಪನಾಮದ ಸಣ್ಣಾಚಾರ್ಯರು, ಅನಾವರಣದ ಅಪ್ಪಾಜಮ್ಮ, ಅಪರೂಪದ ಆಪ್ತ, ಶೀಕಲು ಕಡ್ಡಿ ಶೀನಪ್ಪಯ್ಯ, ಒಂಟಿ ಶೀನಿನ ವೆಂಕಣ್ಣಾಚಾರ್ಯ, ಹುಚ್ಚಾಚಾರ್ಯ ಹಪಾಹಪಿ, ಕರಾಟೆ ಕೀಚಕ...' ಮುಂತಾದವು.

ಸತ್ಯಕ್ಕೆ ತಮ್ಮದೇ ಶೈಲಿಯಲ್ಲಿ ಚೋದ್ಯದ ಹಾಸು ಹೊದಿಸಿ ಮಠದ ಗುರು ಮಹಾಶಯರುಗಳು-ಹಿಂಬಾಲಕರು, ಸಂಸಾರಿಗಳಿಗೆಲ್ಲ ತಮ್ಮದೇ ರೂಪು ಕೊಟ್ಟು ಅವರುಗಳ ಒಳಗನ್ನ ಹೊರಕಾಣಿಸಿಯೂ.. ಅವರೆಲ್ಲರ ಪಾತ್ರವ ಗೆಲುವಾಗಿ ನಮ್ಮ ಮುಂದೆ ಮೆರವಣಿಗೆ ಹೊರಡಿಸಿ ಯಶಸ್ವಿಯಾಗಿದ್ದಾರೆ. ಊರೂರ ಸಭ್ಯ ದಗಾಕೋರರು, ವಿಭೂತಿ-ಆಷಾಢಭೂತಿಗಳ ಕೈಲಿ ಬ್ರೇಕ್ ಡಾನ್ಸ್ ಮಾಡಿಸಿ ನಮಗೆಲ್ಲಾ ನಗೆಯ ಜಾಪಾಳ ಮಾತ್ರೆ ಕೊಟ್ಟಿದ್ದಾರೆ.

ಮಾಧವರಾಯರ ದೊಡ್ಡಮ್ಮನವರನ್ನು ಗಂಟಲಿನಲ್ಲಿ ಬಿಸಿ ತುಪ್ಪದ ರೀತಿಯಲ್ಲಿ accompany ಮಾಡಿರುವ ಪ್ರಸಂಗವನ್ನು ಪುನಃ ಪುನಃ ಓದಿ ಸಂಕಟವಾಗುವಷ್ಟು ನಗುತ್ತಲೇ ಇರಬಹುದು.

'....ದಾಕ್ಷಿಣ್ಯಕ್ಕೆ ಒಳಗಾಗಿ ಮಾಧವರಾಯರ ದೊಡ್ಡಮ್ಮನನ್ನು ದಿಲ್ಲಿಯಿಂದ ರೈಲಿನಲ್ಲಿ ಜೊತೆಯಲ್ಲಿ ಕರೆತರುವಾಗ..... ರೈಲಿನಲ್ಲಿ ಮುದುಕಿಗೆ ಹುಷಾರು ತಪ್ಪಿತು. ಗಾಬರಿಯಿಂದ ಅವರಿಗೆ ಉಪಚಾರ ಮಾಡಿದೆ.....'

'ಸ್ವಲ್ಪ ಔಷಧ ತೆಗೆದುಕೊಳ್ಳಿ! ಹಾಲೂ ತಂದಿದ್ದೇನೆ! ಎಲ್ಲ ಸರಿಹೋಗುತ್ತೆ'. ಕಣ್ಣುಬಿಟ್ಟು, ಒಮ್ಮೆ ಸುತ್ತ ನೋಡಿ, ಬಿದ್ದು ಹೋಗುವಂತೆ ತಲೆ ಆಡಿಸಿತು. ಮತ್ತೆ ಔಷಧದ ವಿಷಯ ಅರಚಿಕೊಂಡೆ.

'ಇಲ್ಲ! ಸ್ನಾನ ಮಾಡೋವರೆಗೆ ಏನೇನೂ ಮುಟ್ಟೋದಿಲ್ಲ. ಹೊಲೆಮೈಲಿಗೆ! ಮನೆ ಸೇರಿ, ಮಡಿ ಉಟ್ಟುಕೊಂಡು ತುಳಸೀ ತೀರ್ಥ ತೊಗೊಂಡ ಮೇಲೇ ಉಳಿದಿದ್ದೆಲ್ಲ' ಎಂಬ ಅರ್ಥದ ಮಾತನ್ನು ಹೇಳಬೇಕಾದರೆ ಇಪ್ಪತ್ತು ನಿಮಿಷ ತೆಗೆದುಕೊಂಡಿತು. ಯಾರೆಲ್ಲ ಎಷ್ಟು ವಿಧವಾಗಿ ಹೇಳಿದರೂ, ಬೇಡಿಕೊಂಡರೂ, ಬೈದರೂ ಜಪ್ಪಯ್ಯ

ಎನ್ನಲಿಲ್ಲ. ತನ್ನ ಬೊಚ್ಚುಬಾಯನ್ನು ಮುಚ್ಚಿ, ವಸಡು ಕಚ್ಚಿಕೊಂಡು ಮೂಗಿನಿಂದ ಉಸಿರಾಡತೊಡಗಿತು ಮುದುಕಿ. ಸುತ್ತುವರಿದ ಜನವೆಲ್ಲ ಇಂಥ ಮುದುಕಿಯನ್ನು ಹೊತ್ತು ತಂದು ಅವರ ನಿದ್ದೆ ಹಾಳು ಮಾಡಿ ಊಟ ಕೆಡಿಸಿದ್ದಕಾಗಿ ಬೇರೆ ಬೇರೆ ಭಾಷೆಗಳಲ್ಲಿ ನನ್ನನ್ನು ಬಯ್ದರು. ನಾನೇನು ಮಾಡಲಿ? ಮನಸ್ಸಿನಲ್ಲಿಯೇ ಮಾಧವರಾಯನನ್ನು ಒದ್ದು ಒದ್ದು ಕೆಡವಿದೆ. ನಾನು ಅದೇ ಕೋಪದಲ್ಲಿದ್ದಾಗ, ಮುದುಕಿ ಒಂದು ಸಲ ಮೂಗರಳಿಸಿ ದೊಡ್ಡದಾಗಿ ಆಕಳಿಸಿತು. ಪುಟ್ಟ ಮುದುಕಿಯಾದರೂ ದೊಡ್ಡ ಖಾಲಿ ಬಾಯಿ; ತಕ್ಷಣ ಪುಡಿಕೆಯಲ್ಲಿನ ಔಷಧಿಯನ್ನು ಆ ಬಾಯೊಳಗೆ ಎರಚಿ, ಹಾಲು ಸುರಿದೆ. ಚಹಾವನ್ನೂ ಸುರಿದು ಎರಡೂ ಕೈಯಿಂದ ಬಾಯಿ ಮುಚ್ಚಿದೆ. ಸಾವಿನ ದವಡೆಗೆ ಸಿಕ್ಕಿದಂತೆ ಚಡಪಡಿಸಿ ಹಾಹಾಕಾರ ಮಾಡಿದರೂ, ಮುದುಕಿ ಅದನ್ನು ನುಂಗಿತು. ಕೆಟ್ಟ ಕೋಪದಿಂದ, ತಿಂದು ಹಾಕುವಂತೆ ನನ್ನನ್ನು ನೋಡಿತು. ಕಣ್ಣಿನಿಂದ, ಮೂಗಿನಿಂದ ನೀರು ಸುರಿಸಿತು. ನಾನು ಈ ಕಡೆಗೆ ಮುಖ ಮಾಡಿ ಕುಳಿತೆ. ರೈಲು ಓಡುತ್ತಲೇ ಇತ್ತು. ಆಗಲೇ ಮುಂಜಾನೆ ಒಂಬತ್ತು ಗಂಟೆ!

ಹದ್ದಿನಂತೆ ದಿನವೆಲ್ಲ ಕಾದು ಕುಳಿತು, ಮುದುಕಿ ಕಣ್ಣು ಮುಚ್ಚಿ ಆಕಳಿಸಿದಾಗಲೆಲ್ಲ ಔಷಧಿ ಸುರಿದೆ, ಹಾಲು, ನೀರು, ಚಹಾ, ಕಾಫಿ ಹೀಗೆ ಸಿಕ್ಕಿದ್ದನ್ನೆಲ್ಲ ಅದರ ಬಾಯಲ್ಲಿ ಸುರಿದೆ. ಸಂಕಟದಿಂದ ಅದು ವಿಲಿವಿಲಿ ಒದ್ದಾಡಿದಾಗ 'ನಾನೆಂತಹ ಕಟುಕನಾದೆ' ಎನ್ನಿಸಿದರೂ, ಹೇಗಾದರೂ ಮಾಡಿ ಜೀವಸಹಿತ ಅದನ್ನು ಆ ಅಳಿಯನ ಕೊರಳಿಗೆ ಕಟ್ಟಿ, ಮುಂದಿನ ರೈಲಿನಲ್ಲಿಯೇ ದಿಲ್ಲಿಗೆ ಹಿಂದಿರುಗಿ ಮಾಧವರಾಯನನ್ನು ಒದ್ದೊದ್ದು ಕೆಡವಬೇಕೆಂಬ ಕೆಟ್ಟ ಆತುರ....'

ತಿಪ್ಪೇಹಳ್ಳಿಯ ತಿಪ್ಪ–ನಮ್ಮೆಲ್ಲರ ಜೀವನದಲ್ಲಿ ಖಂಡಿತವಾಗಿ ವಿವಿಧ ಬಣ್ಣಗಳಲ್ಲಿ, ವಿವಿಧ ಪಾತ್ರಗಳಲ್ಲಿ ಬಂದು ಹೋಗಿರಬಹುದಾದ ವ್ಯಕ್ತಿ. ಸ್ಕೂಲಿನ ಕಲಿಕೆಯಲ್ಲಿ ಹಿಂದಾದರೂ ನಿಜಜೀವನದಲ್ಲಿ ಛಲಹಿಡಿದು ತನ್ನ ವೈವಿಧ್ಯಮಯ ನ್ಯಾಯಬಾಹಿರ ಚಟುವಟಿಕೆಗಳಿಂದ ಮೇಲೇರಿದ. ಇಂತಹ ಖದೀಮ ದೊಡ್ಡವ್ಯಕ್ತಿಯ ಚಿತ್ರಣವನ್ನು ಸ್ಪಷ್ಟವಾಗಿ ಓದುಗರ ಮನೋಪರದೆಯ ಮೇಲೆ ಬಿಂಬಿಸುವಲ್ಲಿ ರಂಗನಾಥರವರು ಯಶಸ್ವಿಯಾಗಿದ್ದಾರೆ.

ಕಾಡುಹರಟೆಯಲ್ಲಿ ಜೀವನ ಸಾರವ ಹೃದಯಮುಟ್ಟುವ ಗಾದೆಗಳಲ್ಲಿ ಹರಿಯಿಸುತ್ತಾ ನಮ್ಮ ಮನದ ಪರದೆಯ ಮುಂದೆ ಎಳೆದುಕೊಂಡು ಬಂದುನಿಲ್ಲಿಸುವ ರುದ್ರೈಯ್ಯಂಗಾರಿಯ ಅರ್ಧಾಂಗಿ...

'ಗುಂಡಣ್ಣ: ಓಹೋ ಹಾಗೇನು ನಿಮ್ಮ ಗೃಹಕೃತ್ಯ? ನಮ್ಮದು ಹಾಗಿಲ್ಲ. ಈಚೀಚೆಗೆ ಒಂದೊಂದು ಮಾತು ಆಕೆ ಆಡತಾಳೆ. ಅದೇ ಡೇಂಜರು. ಅದಕ್ಕೇ ಮೆಲ್ಲಗೆ

ಮಾತಾಡೋಣ. ಅಲ್ಲಾ, ನಾನು ಹೇಳ್ತಾ ಇದ್ದದ್ದು, ಆ ಹಳೇಸಾಮತಿ ಗಂಡಿನ ಐಶ್ವರ್ಯ ಹೆಣ್ಣಿನ ಸೌಂದರ್ಯ ಸ್ಥಿರ ಅಲ್ಲ ಅಂತ. ರುದ್ರಯ್ಯಂಗಾರಿಗೆ ಅದೂ ಇಲ್ಲ, ಅವನ ಹೆಂಡತಿಗೆ ಇದೂ ಇಲ್ಲ. ಆದರೆ ಮೂವತ್ತು ನಾಲ್ವತ್ತು ವರ್ಷದ ಹಿಂದೆ ಆಕೆ ನೋಡೋಕೆ ಚೆನ್ನಾಗೇ ಇದ್ದಳಂತೆ. ಆಗ ನೋಡಿದ, ಬಿದ್ದ ಬಾವಿ ಒಳಕ್ಕೆ. ಸಾಲದ್ದಕ್ಕೆ ಸರ್ವಜ್ಞ ಅಂದರೆ ಇವನ ಗುರು ತಾನೇ, ಅವನೆಲ್ಲೋ ಬರೆದಿದ್ದಾನಂತೆ,

ಹೆಣ್ಣಿನಿಂದಲೇ ಇಹವು,
ಹೆಣ್ಣಿನಿಂದಲೇ ಪರವು,
ಹೆಣ್ಣಿನಿಂದಲೇ ಸಕಲಸಂಪದವು,
ಹೆಣ್ಣಿಲ್ಲದಣ್ಣಗಳು ಯಾರಣ್ಣ? ಅಂತ.

ಕೇಳಿದ್ದನಂತೆ, ಅದೂ ಅಲ್ಲದೆ, ಹೆಣ್ಣಿಗಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆ ಹೊಯ್ದಂತೆ ಅಂತ ಓದಿದ ತಕ್ಷಣ ದಡಬಡಿಸಿ ಬಿದ್ದ ಇವನು. ಹೇಳ್ತಾರಲ್ಲ! 'ದೇಹಕ್ಕೊಂದು ರುಂಡ, ಹೆಣ್ಣಿಗೊಂದು ಗಂಡ' ಅಂತ ಹಾಗಾಯಿತು ಪರಿಸ್ಥಿತಿ ಪದ್ದಣ್ಣ.

ಪ:ಅದೆಲ್ಲ ಸರಿ, ಗುಂಡಣ್ಣ, ಮದುವೆ ಅಂತ ಕತ್ತಿಗೆ ತಾಳಿ ಬಿಗಿಸಿಕೊಂಡ ಮೇಲೆ ಇಬ್ಬರೂ ಅನುಸರಿಸಿಕೊಂಡು ಹೋಗಬೇಡವೇ! ಸಂಸಾರ ಎಡವಬೇಕಾದರೆ ಗಂಡಸೇ ಮೊದಲು ತಪ್ಪು ಮಾಡ್ತಾನೆ ಅಂತ ನಮ್ಮ ಅತ್ತೆ ಮತ್ತೆ ಮತ್ತೆ ಹೇಳ್ತಾ ಇದ್ರು. 'ಹೆಣ್ಣು ಲೋಕದ ಕಣ್ಣು' ಅಂತ ಒಂದು ಗಾದೆ ಬೇರೆ ಸೇರಿಸ್ತಾ ಇದ್ರು. 'ಹೆಣ್ಣು ಜನ್ಮಕ್ಕೆ ಹೆಜ್ಜೆಗೊಂದು ಮುಳ್ಳು' ಅಂತ ಮೂತಿ ತಿವಿದೂ ತಿವಿದೂ ತಿವಿದ ಮೇಲೇ ಮಾವ ಮೆತ್ತಗಾದದ್ದು. ಅಂತೂ ರುದ್ರಯ್ಯಂಗಾರಿದೂ ಎಲ್ಲೋ ತಪ್ಪಿದೆ ಅಂತ ಅನಿಸುತ್ತೆ ನನಗೆ.

ಗುಂ: 'ಇಲ್ಲ ಅಂದೆನೇ ನಾನು, ಪದ್ದಣ್ಣ? ನೋಡಿ, ದಾಂಪತ್ಯ ಅಂದರೆ ಮುತ್ತಿಗೆ ಹಾಕಿದ ಕೋಟೆ, ಹೊರಗಿದ್ದವರಿಗೆ ಒಳಕ್ಕೆ ಹೋಗೋ ತವಕ: ಒಳಗಿದ್ದವರಿಗೆ ಹೊರಕ್ಕೆ ಓಡಬೇಕೆನಿಸುವ ಆತುರ. ಮತ್ತೆ ಒಂದು ಕಿವಿಯಿಂದ ಕೇಳಿ ಇನ್ನೊಂದು ಕಿವಿಯಿಂದ ಬಿಟ್ಟು ಬಿಡೋದು, ಗಂಡಿನ ಜಾಯಮಾನ. ಎರಡೂ ಕಿವಿಯಿಂದ ಕೇಳಿ ಬಾಯಿಂದ ಬಿಡೋದು ಹೆಣ್ಣಿನ ಜಾಯಮಾನ. ಹಾಗೆ ಆಯಿತು ಇವನ ಕಥೆ. ಅವಳ ಆಯುಧ ಅಂತ ಅಂದ್ರೆ ನಾಲಗೆ. ಅದನ್ನು ತುಕ್ಕು ಹಿಡಿಯೋದಕ್ಕೆ ಬಿಡಲೇ ಇಲ್ಲ ಅವಳು. 'ಗಂಡಿನ ಕೈಯಲ್ಲಿ ಕೂಸು ನಿಲ್ಲೋದಿಲ್ಲ. ಹೆಣ್ಣಿನ ಬಾಯಲ್ಲಿ ಮಾತು ನಿಲ್ಲೋದಿಲ್ಲ' ಅಂತ ಗಾದೇನೆ ಇಲ್ವೇ....'

ಹೀಗೇ ಸುಲಲಿತ ಗಾದೆಗಳ ಹಿಂಡು ಹಿಂಡೇ ಆ ಲೇಖನದ ಸೊಬಗನ್ನು ಹೆಚ್ಚಿಸಿವೆ.

ಏನಾದರೂ ರಂಗನಾಥರವರ ವಿನೋದ ಬರಹಗಳನ್ನು ಮನಸಾರೆ ಸವಿದು, ಅದೇ ಗುಂಗಿನಲ್ಲಿ ಕನಸಿಗಿಳಿದಿರೋ.... ನೀವೇ 'ಗೋಪಯ್ಯ ಪಂಡಿತರಾಗಿ ಅರ್ಥಪೂರ್ಣ, ಅನರ್ಥಪೂರ್ಣ ಪ್ರಶಸ್ತಿ ಸ್ವೀಕಾರ ಸಮಾರಂಭಕ್ಕೆ ಹೋಗಿ ಬರಿಯ ಮಾಲೆಗಳನ್ನಷ್ಟೆ ಅಲ್ಲ... ರಂಗನಾಥರು ದಯಪಾಲಿಸುವ ಬಿರುದುಬಾವಲಿಗಳನ್ನು...... 'ವೈದ್ಯವಿದ್ಯಾಭಾಸ್ಕರ, ಬೇನೆಗಳ ಬೆನ್ನುಫಣಿ, ಸರ್ವರೋಗ ಸಾರ್ವಭೌಮ, ಅಶ್ವಿನೀ ಧನ್ವಂತ್ರೀ ಲಠಘಟಿ, ರೋಗ ಬ್ರಹ್ಮಾಂಡ ಮಾರ್ತಾಂಡ, ರೋಗೇಶ, ರೋಗಯಮ, ರೋಗಾಚಾರ್ಯ, ರೋಗ ರಾವಣ ಮರ್ದನ....' ಹೊತ್ತುತರಬೇಕಾದೀತು ಮನೆಗೆ.

'ಪರದೇಶಿಯಾದಾಗ'.... ಪ್ರವಾಸಕಥನ ರಂಗನಾಥರವರ ವಿವಿಧ ಸ್ವಭಾವ, ಮನೋಭಾವ, ಹೆಂಗರುಳು(ಹೆಂಗಸರನ್ನು ಕಂಡಾಗ ಸ್ವಲ್ಪ ಹೆಚ್ಚೇ ಕರಗುತ್ತಿದ್ದ ಕರುಳು!!!), ಸಾತ್ವಿಕ ರೋಷ, ಸಂಯಮ, ಕುತೂಹಲಕಾರಿ ವ್ಯಕ್ತಿತ್ವ, ಸಂಶೋಧನಾ ಮನೋಭಾವ, ಸದಾ ಜಾಗೃತ ಹಾಸ್ಯ ಪ್ರವೃತ್ತಿ, ಕಂಡವರೆಲ್ಲರಲ್ಲೂ ಒಳ್ಳೆಯದನ್ನೇ ಕಂಡೆನೆನ್ನುವ ಸ್ನೇಹ ಮನೋಭಾವ..... ಇವೆಲ್ಲಾ ಹದವಾಗಿ ಬೆರೆತು ಭಟ್ಟಿ ಇಳಿಸಿದ ಮತ್ತು ಹಿಡಿಸುವ cocktailನಂತಿದೆ.

ಈ ಸಂಕಲವನ್ನೋದಿದಾಗ ಪರ್ಮನೆಂಟ್ ಪರದೇಶಿಯಾಗಿರುವ ನನ್ನೊಳಗುದಿಸಿದ ಭಾವನೆಗಳನ್ನೆಲ್ಲಾ ಹೆಸರಿಸುವುದು ಕಷ್ಟಸಾಧ್ಯ. ರಂಗನಾಥರವರು ತಮ್ಮ ಪರಿಧಿಯೊಳಗೆ ಬಂದ ಪ್ರತಿಯೊಬ್ಬನಲ್ಲಿಯೂ ಒಳ್ಳೆಯದನ್ನೇ ಕಾಣಬಯಸಿ (ಬಹುಪಾಲು ಕಂಡು)..... ಅದರ ಸವಿಯುಂಡು ಮುಂದೆ ಸಾಗಿದವರು.

ಅಮೆರಿಕದಲ್ಲಿ ವೀಸಾ ದೊರಕದಿದ್ದಾಗ ಮಾಡಿದ ಗಲಾಟೆ, ಲಂಡನಿನಲ್ಲಿ art schoolನ ಅಧಿಕಾರಿಗೆ ಮುಟ್ಟಿ ನೋಡಿಕೊಳ್ಳುವಂತೆ ಮಾಡಿದ್ದು ನೋಡಿದಾಗ ಸಾತ್ವಿಕರಿಗೆ ಸಿಟ್ಟು ಬರಿಸಿದವರ ಮೇಲೆ ಕರುಣೆಬಾರದು.

ತಾವು ಹೋದೆಡೆಯಲ್ಲೆಲ್ಲಾ ಸೌಹಾರ್ದತೆ ಹರಡಿ, ನಗುವ ಚೆಲ್ಲಿ ತಮ್ಮ ಪ್ರೀತಿಯನ್ನು ಉದಾರವಾಗಿ ನೀಡಿ, ಅಷ್ಟೇ ನಮ್ರತೆಯಿಂದ ಆದರ-ಪ್ರೀತಿಗಳ ಸ್ವೀಕರಿಸಿ, ಎಲ್ಲರಿಗೆ ಋಣಿಯಾಗಿ ಬಂದ ಘಟನೆಗಳ ಸರಮಾಲೆಯೇ ಈ ಪುಸ್ತಕ.

ಪುಟಪುಟದಲ್ಲೂ ಹಾಸ್ಯಲೇಪವಿದ್ದರೂ, ಆಬ್ರೆ, ಗ್ರೇಸ್, ಚೀನಿ ಸಿಂಪಿಗನಿರಲಿ, ice cream ಹೆಂಗಳೆ vendorನಿಂದ ಹಿಡಿದು ನ್ಯೂಯಾರ್ಕಿನ ನಡುರಾತ್ರಿಯಲ್ಲಿ ಮಾರ್ಗದರ್ಶಿಯಾದ ಕರಿಯ ದೈತ್ಯನಾಗಿರಲಿ ಎಲ್ಲಿ ದೊಡ್ಡ ಹೃದಯವಿರುವುದೋ ಅವರಿಗೆಲ್ಲಾ ನಮಿಸಿ ಬಂದವರು..... ಪರದೇಶದಲ್ಲೂ ಶ್ರೀಗಂಧದ ಸುಗಂಧವ ಹೇಗೆ ಹರಡಬಹುದು ಎಂಬುದು ನಮಗೆ ಅರಿವು ಮಾಡಿಕೊಡಲೆಂದೇ ಬರೆದಂತಿದೆ.

ಏನೆಲ್ಲ ಇದ್ದರೇನು? ಉಪ್ಪು ಖಾರ ಇಲ್ಲದ ಊಟವಿಲ್ಲದ್ದಲ್ಲಿ, ಜೀವನವೇ ಬೇಸರ ಎನಿಸುವ ರಂಗನಾಥರಿಗೆ, ಅವರು ಪರದೇಶದಲ್ಲಿದ್ದಾಗ, ಒಮ್ಮೆ ಸರಿಯಾಗಿ ಊಟ ಸಿಕ್ಕಲಿಲ್ಲದಾಗ 'ಅವರ ನಿದ್ದೆಯಲ್ಲಿ ಮೊರದಗಲದ ನಿಂಬೇಹುಳಿ ಉಪ್ಪಿನಕಾಯಿ, ಒರಳು ಕಲ್ಲಿನ ಗಾತ್ರದ ಮಾವಿನ ಮಿಡಿ, ಹದವಾಗಿ ಬೆರೆಸಿದ ಕೊಬ್ಬರಿಯ ಹುರಿಗಾಳು, ಉಪ್ಪೇರಿ, ಹಪ್ಪಳಗಳು ಗಾಡಿ ಗಾಡಿಗಳಲ್ಲಿ ಮೆರವಣಿಗೆ ಹೋದವಂತೆ'.

ಹೊರದೇಶಕ್ಕೆ ಸಿದ್ಧನಾಗುವ ಪ್ರಸಂಗದಿಂದ (ಉಪ್ಪಿನಕಾಯಿ ಸಮೇತ) ಹಿಡಿದು ಹತ್ತು ಹಲವಾರು ಪರದೇಶದ(ವರ)ಮಹಾತ್ಮೆಯ ತಮ್ಮದೇ ವಿನೋದದ ಕನ್ನಡಕದೊಳಗಿನಿಂದ ನೋಡಿ ಕಾಣುವ ಎಲ್ಲವನ್ನೂ ನಮ್ಮ ಮುಂದೆ ರುಚಿರುಚಿಯಾದ seven course dinner ತರಹ ಬಡಿಸಿ ಮತ್ತೆ ಮತ್ತೆ ಕೇಳಿ ಬಡಿಸಿಕೊಳ್ಳುವಂತಹ ಔತಣ ಮಾಡಿಟ್ಟಿರುವರು. ಓದಿದಾಗ ಇವರೆಷ್ಟು ಪುಣ್ಯವಂತರು, ಅದೆಷ್ಟು ಜನರ ಮನ, ಹೃದಯ–ಭಾವನೆಗಳ ಮೀಟಿ ಬಂದವರಿವರು ಪುಣ್ಯಾತ್ಮ ಎನ್ನಿಸದಿರದು.

'ಬ್ರಹ್ಮಲಿಪಿ' ಹಾಗೂ 'ಸುಮಹೂರ್ತ ಸಾವಧಾನ' ನಾಟಕಗಳು ರಂಗನಾಥರವರು ರೇಡಿಯೋಗೋಸ್ಕರವೇ ಬರೆದ ಪ್ರಸಾರವಾದ, ಹಾಸ್ಯ ಪ್ರಧಾನವಾದ ನಾಟಕಗಳು.

ಈ ಹಲವಾರು ವಿನೋದ ಸಾಹಿತ್ಯ ಓದಿದ ಮೇಲೆ ಅನ್ನಿಸಿದ್ದು:ಪೇಚಿಗೆ ಸಿಲುಕಿದಾಗ....ತಮ್ಮ ಅಥವಾ ಇನ್ನೊಬ್ಬರ ಕಣ್ಣುಬೇಳೆ ಮೇಲಕ್ಕೆ ಸಿಕ್ಕಿಸುವುದೆಂದರೆ ಅವರಿಗೆ ಮಹಾ ಪ್ರೀತಿ ಹಾಗೆಯೇ book-post ಪಂಚೆ ಇವರ trade markಉ (ಆಗಿನ ರೆಗ್ಯುಲರ್ ಪಂಚೆಯನ್ನು ಈಗಿನ ಲುಂಗಿ ಕಟ್ಟುವಂತೆ ಕಟ್ಟಿ, ಒಂದು ತುದಿಯನ್ನು ಮೊಣಕಾಲಿಂದ ಮೇಲಕ್ಕೆತ್ತಿ ಸೊಂಟಕ್ಕೆ ಸಿಕ್ಕಿಸುವುದು. ನಡುವೆ ಇರುವ ಜಾಗ ಸಾಮಾನುಗಳನ್ನು ಸಾಗಿಸಲು ಟೆಂಪೊರೆರಿಯಾಗಿ ಉಪಯೋಗವಾಗುತಿತ್ತು!!!)

ಆ ದೇವದೇವನಿತ್ತ ಚೈತನ್ಯದ ವರವನ್ನ ಸದ್ವಿನಿಯೋಗಿಸಿ ಧಾರಾಳವಾಗಿ ತನ್ನ ಸುತ್ತಮುತ್ತಲಿನವರಿಗೆಲ್ಲ ಧಾರೆಯೆರೆದು, ಉತ್ಪ್ರೇಕ್ಷೆಯ ವಿನೋದದ ಕರ್ತೃವಾಗಿ, ತಾನು ನಕ್ಕು, ಎಲ್ಲರನ್ನೂ ನಗಿಸಿ ಸಂತೃಪ್ತಿಯ ಬಾಳನ್ನು ಬಾಳಿದ ಸಹೃದಯಿ ಶ್ರೀ ರಂಗನಾಥರನ್ನು ವಿದ್ವಾನ್ ಎನ್.ರಂಗನಾಥಶರ್ಮರವರು ಉದಾಹರಿಸಿದ ಭರ್ತೃಹರಿಯ ಶ್ಲೋಕದೊಂದಿಗೆ ಸ್ಮರಿಸುವೆ..........

'ಸಜ್ಜನರ ಸಂಗದಲ್ಲಿ ಆಸಕ್ತಿ, ಅವರಲ್ಲಿರುವ ಸದ್ಗುಣಗಳಲ್ಲಿ ಮೆಚ್ಚುಗೆ, ಹಿರಿಯರಲ್ಲಿ ವಿಧೇಯತೆ, ವಿದ್ಯೆಯಲ್ಲಿ ನಿರಂತರವಾಗಿ ಪ್ರೀತಿ, ತನ್ನ ಪತ್ನಿಯಲ್ಲಿ ಮಾತ್ರ ಪ್ರಣಯ, ಲೋಕಾಪವಾದಕ್ಕೆ ಹೆದರಿಕೆ, ಭಗವಂತನಲ್ಲಿ ಭಕ್ತಿ, ಮನೋನಿಗ್ರಹ ಮಾಡುವ ಸಾಮರ್ಥ್ಯ, ಕೆಟ್ಟಜನರ ಸಂಗವನ್ನು ದೂರವಿಡುವುದು ಇಂತಹ ಪರಿಶುದ್ಧ ಗುಣಗಳು ಯಾರಲ್ಲಿ ನೆಲೆಸಿವೆಯೋ ಆ ಮಹಾತ್ಮರಿಗೆ ನಮಸ್ಕಾರ'.

ಅ. ರಾ. ಮಿತ್ರ ಅವರು ಹೇಳಿದ್ದು....

ಡಾ. ರಂಗನಾಥ್ ಅವರೇ ಹೇಳಿಕೊಳ್ಳುವಂತೆ 'ವೈದ್ಯನಲ್ಲದ ಡಾಕ್ಟರು'–ಸಮಾಜದ ನಾಡಿಯನ್ನು ಮಿಡಿದು ರೋಗ ಮೂಲಗಳನ್ನು ತಿಳಿದು 'ಚುಚ್ಚುಮದ್ದಿನ' ವಿಧಾನವನ್ನು ಅನುಸರಿಸಿದವರು.

ಸ್ವತಃ ರಂಗಪ್ರೇಮಿಗಳಾದುದರಿಂದ ಅವರ ಬರವಣಿಗೆಯಲ್ಲಿ ಭಾಷೆಗೆ ಹಲ್ಲುಜ್ಜಿ, ಮುಖ ತೊಳೆದು ವೈಭವೋಪೇತವಾದ ಉತ್ಪ್ರೇಕ್ಷಾಲಂಕಾರಗಳ ಆಭರಣ ತೊಡಿಸಿ ಮುಕ್ತ ನಟರಂತೆ ಕಾಣುವ ಜಾಯಮಾನವನ್ನು ಕಾಣಬಹುದು.

ಒಂದು ಎಚ್ಚರಿಕೆ! ಒಬ್ಬರೇ ಇದ್ದಾಗ ಇದನ್ನು ಓದಲು ಹೋಗಬೇಡಿ. ಅಕ್ಕ ಪಕ್ಕದ ಮನೆಯವರು ಹುಚ್ಚು ಹುಚ್ಚಾಗಿ ಒಬ್ಬನೇ ನಗುತ್ತಿರುತ್ತಾನೆಂದು ದೂರು ಕೊಟ್ಟಾರು!!

ಗ್ರಂಥಋಣ

೧.'ವೈದ್ಯನಲ್ಲದ ಡಾಕ್ಟರು', ಪ್ರಿಸಮ್ ಬುಕ್ಸ್, ೨೦೦೦

೨.'ಇವರೆಲ್ಲಾ ನಮ್ಮವರೇ', ತಾ.ರಾ. ನಾಗರಾಜ್, ೧೯೯೯

೩.'ಕ್ಯಾಪಿಟಲ್ ಪನಿಷ್‌ಮೆಂಟ್', IBH ಪ್ರಕಾಶನ, ೧೯೮೧

೪.'ಪರದೇಶಿಯಾದಾಗ', IBH ಪ್ರಕಾಶನ, ೧೯೮೩

೫.'ನೆನಪಿನ ನಂದನ', ಸಾಹಿತ್ಯ ಮಂದಿರ, ೨೦೦೦

೬.'ನೆನಪಿಗೆ ಸಾವಿಲ್ಲ', (ಸಂಪಾದಕರು) ಎಂ.ವಿ.ವಿ.ಮೂರ್ತಿ, ವಿ.ಸೀ. ಸಂಪದ, ೨೦೦೩

೭.'ರಂಗನಾಥ ಸಾರಸ್ವತ', (ಸಂಪಾದಕರು) ಎಂ.ವಿ.ವಿ.ಮೂರ್ತಿ, ಡಾ. ಬಿ.ವಿ. ರಾಜಾರಾಮ್, ಕಲಾ ಗಂಗೋತ್ರಿ, ೨೦೦೩



# 'ಬೀChi' ಇಸಂ

## ಅಶ್ವತ್ಥ ನಾ. ರಾವ್

೧೯೬೦ರಲ್ಲಿ ಹುಬ್ಬಳ್ಳಿಯಿಂದ ಬೆಂಗಳೂರಿಗೆ ಹೊರಟಿದ್ದೆ. ಅದು ಇಡೀ ರಾತ್ರಿಯ ಪ್ರಯಾಣ. ಕಾಲಕಳೆಯಲು ಪುಸ್ತಕ ಕೊಳ್ಳೋಣವೆಂದು ಆ ರೈಲ್ವೇ ನಿಲ್ದಾಣದ ಪುಸ್ತಕದ ಅಂಗಡಿಗೆ ಹೋಗಿ 'ಪ್ರಯಾಣದಲ್ಲಿ ಕಾಲಕಳೆಯಲು ಸಹಾಯವಾಗುವಂತಹ ಒಂದು ಬಹು ಸ್ವಾರಸ್ಯವಾಗಿರುವ ಪುಸ್ತಕ ಕೊಡಿ' ಎಂದೆ. ಮಾಳಿಗೆಯ ಮೇಲಿಂದ ಒಂದು ಪುಸ್ತಕವನ್ನು ತೆಗೆದು, ಆಗತಾನೇ ಹುಟ್ಟಿದ ಕೂಸಿಗೆ ಉಸಿರಾಡುವಂತೆ ಪ್ರೇರೇಪಿಸಲು ಅದರ ಕುಂಡಿಯ ಮೇಲೆ ಏಟು ಕೊಡುವಂತೆ, ಆ ಪುಸ್ತಕದ ಧೂಳನ್ನು ಝಾಡಿಸಿ ಕೊಟ್ಟ. ಪುಸ್ತಕ ತೆಗೆದು ನೋಡಿದರೆ ಅದೊಂದು ಕನ್ನಡ ಪದಗಳ ಸಚಿತ್ರ-ವಿಚಿತ್ರ ಅರ್ಥಕೋಶ.

'ಇದೇನ್ರೀ, ಕಥೇನೋ, ಕಾದಂಬರೀನೋ ಕೊಡಿ ಅಂದ್ರೆ ಡಿಕ್ಷನರಿ ಕೊಟ್ಟಿದ್ದೀರಾ?'

'ನನ್ಮಾತ್ ಕೇಳ್ರೀ ಸರಾ. ಈ ಪುಸ್ತಕ ಅಗದಿ ಭಯಂಕರ ಅದೆ. ನಿಂಗೆ ಬೋಳಾ ಪಸಂದ್ ಆಗ್ತೈತಿ. ಗ್ಯಾರಂಟಿ.' ಎಂದ. ಮೂರು ರೂಪಾಯಿ ತೆತ್ತು ತೆಗೆದುಕೊಂಡೆ, ವಿಧಿ ಇಲ್ಲದೆ. ಆ ಪುಸ್ತಕದ ಶೀರ್ಷಿಕೆ 'ತಿಂಮರಸಾಯನ-ತಿಮ್ಮಿಕ್ಷನರಿ'. ಆ ಪುಸ್ತಕದ ಕರ್ತೃ ಬೀಚಿ.

ಆ ರಾತ್ರಿ ರೈಲುಗಾಡಿಯಲ್ಲಿ ಜನಜಂಗುಳಿ. ನೂಕುನುಗ್ಗಲು. ಹಲವರು ಆಗಲೇ ಮಲಗಲು ಜಾಗ ಸಿದ್ಧ ಮಾಡಿಕೊಳ್ಳುತ್ತಿದ್ದರು. ರೋಷ, ಕೋಪ, ಕಿರುಚಾಟ. ಇಂತಹ

ಸನ್ನಿವೇಶದಲ್ಲಿ ನಾನು ಒಂದು ಮೂಲೆಯಲ್ಲಿ ಮುದುರಿ ಕುಳಿತು, ಕೊಂಡ ಪುಸ್ತಕವನ್ನು ಓದಲು ಪ್ರಾರಂಭಿಸಿದೆ. ಆ ತಿಮ್ಮ ರಸಾಯನ aka ತಿಮ್ಮಿಕ್ಷನರಿಯನ್ನು ಓದುತ್ತಾ ಕಂಡಿತು: ಅದರಲ್ಲಿ ಒಗಟುಗಳಿವೆ–ಒರಟು ಮಾತುಗಳೂ ಇವೆ. ತತ್ವವಿದೆ, ತಥ್ಯವಿದೆ. ಹುಡುಗತನವಿದೆ, ಹಿರಿತನದ ಅನುಭವೋಕ್ತಿ ಇದೆ. ಇದು ಒಂದು ರಸಾಯನವೇ ಸರಿ ಎಂದು. ಈ ರಸಾಯನದ ಸ್ಯಾಂಪಲ್ ರುಚಿ ನೋಡಿ:

ಅರ್ಜುನ:ಅರ್ಜಿಯನ್ನು ಹಾಕಿ ಕುಳಿತವನು.

ಅಡಿಯಾಳು: ೧೨ ಅಂಗುಲ ಎತ್ತರದ ಆಳು.

ಅತಿಥಿ: ವಾರದ, ವೇಳೆಯ ನಿಯಮವಿಲ್ಲದೆ ಊಟಕ್ಕೆ ಹಾಜರ್ ಆಗುವವನು.

ಅರ್ಥಗರ್ಭಿತ: 'ಅರ್ಥ' ಅಂದರೆ ಹಣಕ್ಕೆ ಗರ್ಭಿಣಿಯಾದವಳು.

ಅನುಭವ: ಹಳೆಯರ ತಪ್ಪಿಗೆ ಜಾಣರು ಕೊಡುವ ಹೆಸರು.

ಅಮರ ಕೃತಿ: ಮಾರಾಟವಾಗಲಾರದ ಗ್ರಂಥ.

ಅರಮನೆ: ಅರ್ಧಕಟ್ಟಿದ ಮನೆ.

ಏ : ಅನೇಕ ಹೆಂಡತಿಯರ ಹೆಸರು.

ಏನ್ರೀ: ಅನೇಕ ಗಂಡಸರ ಹೆಸರು.

ಕ.ಪಿ: ಕನ್ಯಾ ಪಿತೃ.

ಕಾಯೀಚಾ: ಖಾಲೀ ಕಾಯಿಸಿದ ಚಹಾ.

ಅರ್ಥೀಚ: ಹಣಕೊಟ್ಟು ಕೊಂಡ ಚಹಾ.

ಧರ್ಮೀಚ : ನಿನ್ನ ಸ್ನೇಹಿತ ಹಣಕೊಟ್ಟ ನಿನಗೆ ಪುಗಸಟ್ಟೆ ಸಿಕ್ಕ ಚಹಾ.

ಕುಚ : ಅತಿಕೆಟ್ಟ ಚಹಾ.

ಕೋಳಿ : ತಾನು ಕೂಗಿದುದಕ್ಕಾಗಿಯೇ ಸೂರ್ಯ ಹುಟ್ಟಿದನು ಎಂದು ತಿಳಿಯುವ ಪ್ರಾಣಿ.

ಗೀತೆ : ಯುದ್ಧ ಪ್ರೇರೇಪಿಸುವಂಥ ಪ್ರಚೋದಕ ಮಹಾಗ್ರಂಥ.

ಗೃಹಸ್ಥ : ಅನುಗಾಲವೂ ಮನೆಯಲ್ಲೇ ಇರುವವನು.

ಚಪಲ ಚಿತ್ತ : ದೇವರ ಮುಂದೆ ಕೈಮುಗಿದು ನಿಂತು, ಹೊರಗೆ ಬಿಟ್ಟ ಚಪ್ಪಲಿಯ ಮೇಲೇ ಚಿತ್ತವಿಟ್ಟಿರುವವ.

ಜ್ಞಾನಿ : ತಾನೆಷ್ಟು ಅಜ್ಞಾನಿ ಎಂದು ತಿಳಿದಿರುವವ.

ಬೀರಬಲ್ಲ: ಬೀರಿನ ರುಚಿ ಬಲ್ಲವನು.

ಭಾವಜೀವಿ: ಅಕ್ಕನ ಗಂಡನ ಆಶ್ರಯದಲ್ಲಿ ಜೀವಿಸುವವನು.

ರಾಮಾಯಣ: ಬೇಗನೆಮುಗಿಸದೆ ಬೇಸರಬರುವಂತೆ ಹೇಳುವವನ ಹಾಳು ಮಾತು.

ಶಾಖಾಹಾರಿ: ಬಿಸಿ ಬಿಸಿ ಊಟಮಾಡುವವನು.

ಸ್ವಾಸ್ತಿಕ: ದೇವರಿದ್ದಾನೆ ಎನ್ನುವವನು ಆಸ್ತಿಕ. ದೇವರಿಲ್ಲ ಎನ್ನುವವನು ನಾಸ್ತಿಕ. ನಾನೇ ದೇವರು ಎನ್ನುವವನು ಸ್ವಾಸ್ತಿಕ. ಉದಾ: ಹಿಟ್ಲರ್.

ಸಿದ್ಧಾಂತಿ: ಸಿದ್ಧವಾದ ಹಲ್ಲು(ಡೆಂಚರ್) ಉಳ್ಳವನು.

ಹೆಚ್ಚು ಪತಿವ್ರತೆ: ದ್ರೌಪತಿ. ಹೆಚ್ಚು ಪತಿಗಳನ್ನು ವ್ರತಿಸುವವಳು.

ಹಾಸ್ಯಗಾರ: ಹಾಸ್ಯಗಾರನಿಗೆ ನಗುವ ಹಕ್ಕಿಲ್ಲಾ. ನಶ್ಯದ ಡಬ್ಬಿಗೆ ಶೀನುವ ಅಧಿಕಾರವಿಲ್ಲಾ.

ಆ ಪುಸ್ತಕವನ್ನು ಓದುತ್ತಾ ಕ್ರಮೇಣ, ಆ ಲೇಖಕರ ವ್ಯಂಗ್ಯದೃಷ್ಟಿ, ಹಾಸ್ಯ ಪ್ರವೃತ್ತಿ, ಹಾಸ್ಯ ಪ್ರಜ್ಞೆ ನನ್ನ ತಲೆಗೆ ಹೋಗಿ ಗಂಭೀರತೆಯನ್ನು ಸಡಿಲ ಮಾಡಿತು. ಜೋರಾಗಿ ನಗಬಾರದೆಂದು ಎಷ್ಟೇ ಪ್ರಯತ್ನಿಸಿದರೂ ತಡೆಯಲಾಗಲಿಲ್ಲ. ಓದುತ್ತ ಜೋರಾಗಿ ನಗಲು ಪ್ರಾರಂಭಿಸಿದೆ. ಸುತ್ತ ಮುತ್ತ ಕುಳಿತ ಜನ 'ಏನ್ರೀ ಸರ. ಇಷ್ಟು ಭರ್ಜರೀ ನಗ್ತಿದ್ದೀರಿ. ಅದೇನು ನಮಗೂ ತಿಳೀವಂತೆ ಓದ್ರಲಾ' ಎಂದರು. ಎಲ್ಲರಿಗೂ ಕೇಳಿಸುವಂತೆ ಓದಿದೆ. ಅಕ್ಕ ಪಕ್ಕದವರೆಲ್ಲಾ ಕಿವಿಗೊಟ್ಟು ಕೇಳಲು ಪ್ರಾರಂಭಿಸಿದರು. ಮಲಗಿದ್ದವರು ಎದ್ದರು. ನನಗೂ ಸ್ಫೂರ್ತಿಬಂದು ಜೋರಾಗಿ ಓದಲು ಶುರುಮಾಡಿದೆ. ನನ್ನ ಗಾಡಿಯಲ್ಲಿದ್ದ ಜನ ನನ್ನ ಸುತ್ತಾ ಕೂತು, ನಿಂತು, ನನ್ನೊಂದಿಗೆ ನಗಲು ಪ್ರಾರಂಭಿಸಿದರು. ಕೋಪದಿಂದ ಸೆಟೆದಿದ್ದ ಜನಗಳ ನಡಾವಳಿಕೆ ಸಡಿಲವಾಯ್ತು. ಬರಬರುತ್ತಾ ಎಲ್ಲರಲ್ಲೂ ಬಂಧು ಬಾಂಧವರಂತೆ ಅನುಕಂಪ, ಆತ್ಮೀಯತೆ. ದೂರದಲ್ಲಿದ್ದವರಿಗೆ ಹತ್ತಿರದಲ್ಲಿ ಜಾಗ ಮಾಡಿದರು. ತಿಂಡಿ ಫಲಹಾರಗಳನ್ನು ಇತರರೊಂದಿಗೆ ಹೊಂಚಿಕೊಂಡರು. ಕೆಲವೇ ನಿಮಿಷಗಳ ಹಿಂದೆ ಕಾಡುಪ್ರಾಣಿಗಳಂತೆ ಕಿರಿಚಾಡಿ ಜಗಳವಾಡುತ್ತಿದ್ದ ಜನರ ನಡಾವಳಿಕೆ ಸಂಪೂರ್ಣವಾಗಿ ಬದಲಾವಣೆಯಾಗಿತ್ತು. ಕಾಲ ಹೋಗಿದ್ದೇ ಗೊತ್ತಾಗಲಿಲ್ಲ. ಇಡೀ ರಾತ್ರಿ ಪ್ರಯಾಣ ಸುಗಮವಾಗಿ ನಡೆಯಿತು.

ಈ ಪುಸ್ತಕ ರಾಮಾಯಣವೂ ಅಲ್ಲಾ, ಮಹಾಭಾರತವೂ ಅಲ್ಲಾ. ಜನಜಂಗುಳಿಯ ಮೇಲೆ ಇಂತಹ ಪರಿಣಾಮವನ್ನುಂಟುಮಾಡುವ ಶಕ್ತಿ ಈ ಲೇಖಕನಲ್ಲಿ ಇದೆಯೇ? ಎಂದು ಆಶ್ಚರ್ಯವಾಯಿತು. ಈ ಕರ್ತೃವಿನ ಇತರ ಪುಸ್ತಕಗಳನ್ನೂ ಓದಬೇಕೆಂದು

ಸಂಶೋಧನೆ ನಡೆಸಿದೆ. ಕೆಲವು ವರ್ಷಗಳ ನಂತರ, ನನ್ನಂತೆಯೇ 'ಬೀಚಿ ಭಕ್ತ'ರಾದ, ಕಿ.ಮೂ.ಗಂ. ವೈಶಿಷ್ಟ್ಯ ವೈದ್ಯರಾದ ಕಾಸರಗೋಡು ಗೋವಿಂದ ಭಟ್ಟರ ಪರಿಚಯವಾಯ್ತು. ಅವರಿಗೂ, ಮಾತೆತ್ತಿದರೆ 'ಬೀಚಿ ಹೇಳಿದಂತೆ....' ಎಂದು ಬೀಚಿಯವರ ಲೇಖನದಲ್ಲಿ ಬರುವ ಘಟನೆಯನ್ನು ತಿಳಿಸುವುದು, ಇಲ್ಲ, 'ಬೀಚಿ ಉವಾಚ' ಎಂದು ಅವರ ಹೇಳಿಕೆಗಳನ್ನು ಸಂಭಾಷಣೆಯಲ್ಲಿ ತರುವುದು, ಒಂದು ಚಟ. ಅವರು ನನ್ನ ಹುಟ್ಟಿದ ಹಬ್ಬದ ಉಡುಗೊರೆಯಾಗಿ ಬೀಚಿಯವರ ಪುಸ್ತಕಗಳ ದೊಡ್ಡ ಕಂತೆಯನ್ನೇ ಕೊಟ್ಟರು. ನಂತರ ನಮ್ಮಂತೆ ಬೀಚಿಯವರ ಬರಹಗಳನ್ನು ಉಲ್ಲೇಖಿಸುವ ಮತ್ತೆ ಕೆಲವು ಬೀಚಿ ಭಕ್ತರು ಸಿಕ್ಕರು. 'ಹೀಗೆ ಬೀಚಿ–ಇಸಂ' ಸಮೂಹದ ಉದ್ಭವ, ಪ್ರಾರಂಭ. 'ಬೀಚಿ–ಇಸಂ'ನ ಗುಣ ಲಕ್ಷಣ ನಿರೂಪಣೆ, ಹಿಂದೂ–ಇಸಂ, ಜೂಡೇ–ಇಸಂ, ಅಥವಾ ಬುದ್ಧ–ಇಸಂ ಮಾದರಿಯ ಮತಧರ್ಮವೋ, ಇಲ್ಲ, ಕ್ಯಾಪಿಟಲಿಸಂ, ಸೋಷಿಯಲಿಸಂ ರೀತಿಯ ರಾಜಕೀಯ ತತ್ವವೋ ಎಂದು ನಿಮ್ಮ ಮನಸ್ಸಿನಲ್ಲಿ ಕೌತುಕವಿರಬಹುದು.

ಅದು ರಾಜಕೀಯ ತತ್ವವಂತೂ ಅಲ್ಲ. ರಾಜಕೀಯಕ್ಕೂ ಬೀಚಿಯವರಿಗೂ ಎಣ್ಣೆ–ಸೀಗೇಕಾಯಿ. ಅದು ಬೀಚಿ ಭಕ್ತರ, ಅನುಯಾಯಿಗಳ ವರ್ಗ ಎನ್ನೋಣ. ಮತ ಧರ್ಮಗಳ ಮುಖ್ಯ ಉದ್ದಿಶ್ಯ–ಮಾನವನ ಲೋಪದೋಷಗಳನ್ನು ತಿದ್ದಿ, ನೀತಿಮಾರ್ಗದಲ್ಲಿ ನಡೆಯುವಂತೆ ನಿರ್ದೇಶಿಸುವುದೇ ಆದರ್ಶ ಸೂತ್ರವೆಂದರೆ, ಬೀಚಿ–ಇಸಂ ಕೂಡ ಅಂತಹ ಒಂದು ನಂಬಿಕೆ ಎನ್ನಬಹುದು. ಇತರ ಮತದ ಗ್ರಂಥಗಳು ಸಂಸ್ಕೃತ, ಲ್ಯಾಟಿನ್, ಹೀಬ್ರೂನಲ್ಲಿದ್ದು ಅವುಗಳನ್ನು ಅರ್ಥಮಾಡಿಕೊಳ್ಳಬೇಕಾದರೆ, ಆ ಭಾಷೆಗಳಲ್ಲಿ ಪಾಂಡಿತ್ಯವಿರುವ ಅತಿವಿರಳ ವ್ಯಕ್ತಿಗಳ ಟೀಕೆ, ವಿಮರ್ಶೆಗಳಿಗೆ ಅವಲಂಬಿಸಿ ದಾಸರಾಗಬೇಕು. ಆದರೆ ಬೀಚಿಯವರ ಭಾಷೆ ನಾವು ನಿತ್ಯಜೀವನದಲ್ಲಿ ಬಳಸುವ ಸರಳ ಕನ್ನಡ. ಮನೋರಂಜಕ ಹಾಸ್ಯ, ಮಾಧ್ಯಮ. ಬೀಚಿ–ಇಸಂ ಗ್ರಂಥಗಳು ಕೇವಲ ಒಂದಲ್ಲ, ಎರಡಲ್ಲ, ಒಟ್ಟು ಅರವತ್ತ ಮೂರು.

*

ಬೀಚಿಯವರು ಹುಟ್ಟಿದ್ದು ಬಳ್ಳಾರಿ ಡಿಸ್ಟ್ರಿಕ್ಟ್ ಹರಪನಹಳ್ಳಿಯಲ್ಲಿ, ೧೯೧೩ರಲ್ಲಿ. ಪೊರಕೆ ಕಡ್ಡಿ ಪೈಲ್ವಾನ್‌ನಂತಿದ್ದ ಮಗುವಿಗೆ ತಾಯಿ ಇಟ್ಟ ಹೆಸರು 'ಭೀಮಸೇನ'. 'ಅಲ್ಲಿಯೇ ಮೂಡಿತು ಹಾಸ್ಯದ ಹೊನಲು' ಎನ್ನುತ್ತಾರೆ ಬೀಚಿ. 'ನಾರಾಯಣ– ನಾಣಿ' ಆಗುವಹಾಗೆ, 'ಕೃಷ್ಣ–ಕಿಟ್ಟಿ' ಆಗುವಹಾಗೆ 'ಭೀಮಸೇನ ಬೀಚಿ' ಆದ. ಆತ ಹುಟ್ಟಿದ ಕೆಲವೇ ದಿನಗಳಲ್ಲಿ ತಂದೆ ತೀರಿಕೊಂಡರು. ಭಾರತಮ್ಮನವರಿಗೆ ವೈಧವ್ಯದ ಜೊತೆಗೆ ಬಡತನ, ದಾರಿದ್ರ್ಯವೂ ಬಂತು.

ಅವರಿವರ ಹಣ, ಸಹಾಯದಿಂದ ಬೀಚಿಯವರ ವಿದ್ಯಾಭ್ಯಾಸ. ೧೯೩೦ರಲ್ಲಿ ಎಸ್ಸೆಸ್ಸೆಲ್ಸಿ ಮುಗಿಸಿ ಉದ್ಯೋಗ ಅರಿಸಿ ಬಳ್ಳಾರಿಗೆ ಹೋದರು. ಪೊಲೀಸ್ ಸೂಪರಿಂಡೆಂಟ್ ಇಲಾಖೆಯಲ್ಲಿ ಕ್ಯಾಂಪ್ ಕಾರಕೂನನಾಗಿ ಕೆಲಸಕ್ಕೆ ಸೇರಿದರು. ೩೭ ವರ್ಷ ವಯಸ್ಸಿನವರೆಗೂ 'ಕನ್ನಡ ಸಾಹಿತ್ಯ, ಒರಟು ಸಾಹಿತ್ಯ' ಎಂಬ ತಿರಸ್ಕಾರ ಕನ್ನಡದ ವಿಚಾರದಲ್ಲಿ. ಅವರಿಗೆ ಪ್ರಿಯವಾದ ಪಿ.ಜಿ. ವುಡ್‌ಹೌಸ್‌ರ ಧಾರಾವಾಹಿ ಕಾದಂಬರಿಯ ವಿಚಿತ್ರಪ್ರಾಣಿ 'ಜೀವ್ಸ್'ನ್ನು ಕನ್ನಡದಲ್ಲೇಕೆ ಕಾಣಿಸಬಾರದು? ಎಂಬ ಆಸೆ. ಪಾಟೀಲ ಪುಟ್ಟಪ್ಪನವರ ಪ್ರೇರೇಪಣೆಯಂತೆ ಅವರ ದಿನಪತ್ರಿಕೆ 'ವಿಶಾಲ ಕರ್ನಾಟಕ'ದಲ್ಲಿ, ಈ ಆಧಾರಿತ ಲೇಖನ 'ತಿಂಮ'ನ ರೂಪದಲ್ಲಿ, ಜನ್ಮ ತಾಳಿತು. ತಿಂಮ ಕೋತಿಯನ್ನು ನಾನಾಡಿಸಿದೆ. ಪಾ.ಪು.ರವರು ಡೋಲು ಬಾರಿಸಿದರು. ಹೀಗೆ ತಿಂಮ ಸಾಕ್ಷಾತ್ಕಾರವಾಯ್ತು, ೧೯೫೦ ರಲ್ಲಿ' ಎನ್ನುತ್ತಾರೆ ಬೀಚಿ. ಅವರು ಸೃಷ್ಟಿಸಿದ 'ತಿಂಮ' ಆದ್ಯಂತವಾಗಿ ಅವರನ್ನೇ ಪ್ರತಿಬಿಂಬಿಸುವ ಪಾತ್ರವಾಯಿತು.

ಬೀಚಿಯವರು ಮೊಟ್ಟಮೊದಲು ಓದಿದ ಕನ್ನಡ ಕಾದಂಬರಿ 'ಸಂಧ್ಯಾರಾಗ'. ಅದನ್ನು ಅವರು ಎಷ್ಟು ಮೆಚ್ಚಿದರೆಂದರೆ, ಅನಕೃ ಅವರನ್ನು ತಮ್ಮ ಗುರುಗಳಾಗಿ ಸ್ವೀಕರಿಸುವಮಟ್ಟಿಗೆ. ಕನ್ನಡವೆಂದರೆ ಕೆಂಡ ಕಾರುತ್ತಿದ್ದ ಬೀಚಿ, ಕನ್ನಡ ಲೇಖಕರಾಗಿ ಪರಿವರ್ತಿತರಾದರು.

ಬೀಚಿಯವರು ತಮ್ಮ ಲೇಖನ ವೃತ್ತಿಯ ಕೆಲವು ಮೊದಲ ಹೆಜ್ಜೆಗಳನ್ನು ಕಲ್ಲು ಮುಳ್ಳುಗಳ ಮೇಲಿಟ್ಟು ನಡೆಯಬೇಕಾಗಿ ಬಂತು. ಅವರ ಚೊಚ್ಚಲು ಕಾದಂಬರಿ 'ದಾಸಕೂಟ' ಹೊರಬಂದದ್ದು ೧೯೫೦ರಲ್ಲಿ. ಮಡಿವಂತಿಕೆ, ಜನರ ಗೊಡ್ಡು ಸಂಪ್ರದಾಯ, ಆಚಾರ ವಿಚಾರಗಳನ್ನು ಟೀಕಿಸಿರುವುದೇ ಈ ಕಾದಂಬರಿಯ ಕಥಾವಸ್ತು. ಆ ಕಾದಂಬರಿಯುನ್ನು, ಹಸ್ತಪ್ರತಿಯ ರೂಪದಲ್ಲೇ ಓದಿ, ವಿಮರ್ಶಿಸಿ, ಅದಕ್ಕೆ ಮುನ್ನುಡಿಯನ್ನೂ ಬರೆದುಕೊಟ್ಟರು ಅನಕೃ. ಈ ಕಾದಂಬರಿ ಕ್ರಾಂತಿಕಾರಕವಾಗಿ, ವಾದ ವಿವಾದಕ್ಕೊಳಗಾಗುತ್ತದೆಂದು ಅನಕೃ ಅವರು ಆಗಲೇ ಭಾವಿಸಿದ್ದರು. ಆದರೆ ಸಮಾಜದ ಪ್ರತಿಕ್ರಿಯೆ ಇಷ್ಟು ತೀಕ್ಷ್ಣವಾಗುವುದೆಂದು ಬೀಚಿಯವರು ಊಹಿಸಿರಲಿಲ್ಲ. ಆಗಿನ ಕಾಲದ 'ಸೆಟಾನಿಕ್ ವರ್ಸಸ್'ನ ಸಾಲ್ಮನ್ ರಷ್ದಿಯಾದರು. 'ದಾಸಕೂಟ' ಪ್ರಕಟವಾದದ್ದು ಸಾರಸ್ವತ ಲೋಕಕ್ಕೆ ಆಟಂ ಬಾಂಬ್ ಅಪ್ಪಳಿಸಿದಂತಾಯ್ತು' ಎನ್ನುತ್ತಾರೆ ಬೀಚಿಯವರ ಸ್ನೇಹಿತ ಬಿ.ಎಸ್. ಕೇಶವರಾವ್. ಬಹುತೇಕ ಮಡಿವಂತರು ಛೀಕಾರವಮಾಡಿ ಮೂದಲಿಸಿದರು. ಬೀಚಿ, ಬಳ್ಳಾರಿಯ ರಸ್ತೆಗಳಲ್ಲಿ ತಿರುಗಾಡಲೂ ಸಾಧ್ಯವಿರಲಿಲ್ಲ. ಮನಸಾರ ಬೈಗಳ ಸುರಿಮಳೆ. ಬೀಚಿಯವರ ತಂದೆ ತಾಯಿಯಿಂದ ಹಿಡಿದು ಅವರ ಕುಲವನ್ನೆಲ್ಲಾ ಸೋಪು ಹಾಕಿ ತೊಳೆದು ಹಿಂಡಿಬಿಟ್ಟರು. ಅದಕ್ಕೆ ಬೀಚಿಯವರ

ಪ್ರತಿಕ್ರಿಯೆಯೇನು? ಮತ್ತಷ್ಟು ಬಿಸಿಯಾಗಿ ಅದೇ ಧಾಟಿಯಲ್ಲಿ 'ದೇವರ ಆತ್ಮಹತ್ಯೆ' ಎಂಬ ನಾಟಕ ಮತ್ತು 'ಸರಸ್ವತಿ ಸಂಹಾರ' ಎಂಬ ಕಾದಂಬರಿ ಪ್ರಕಟಣೆ. ಬರಬರುತ್ತ ಅಪಾರ ಜನಪ್ರಿಯತೆಯ ಜೊತೆಗೆ ಸ್ವಧರ್ಮ ಶತ್ರುಗಳನ್ನೂ ಪಡೆದರು. ಆದರೂ ಸಮಾಜದ ಕಪಟಾಚಾರಣೆ, ಬೂಟಾಟಿಕೆ, ಮಿಥ್ಯಾಚರಣೆಗಳನ್ನು ಛೇಡಿಸುವ ಕಾರ್ಯವನ್ನು ಬಿಡದೆ ಮುಂದುವರೆಸಿದರು. ಉದಾಹರಣೆ:'ಸತಿಸೂಳೆ'ಯಲ್ಲಿ, ಕುಸುಮ, ಮುದಿಗಂಡನೊಡನೆ ಬಾಳಿ ತನ್ನ ದೈಹಿಕ ಸುಖಕ್ಕೆ ತಿಲಾಂಜಲಿಯನ್ನು ಕೊಟ್ಟಳು. ಈ ತ್ಯಾಗದಲ್ಲಿ ಭೋಗವನ್ನು ಕಂಡಳು. ವೇಶ್ಯಾಜೀವನವನ್ನು ಖಂಡಿಸಿ, ಘಂಟೆಗಟ್ಟಳೆ ಭಾಷಣಮಾಡುವ ಸಮಾಜ ಸೇವಕರು, ರಾಜಕಾರಣಿಗಳು, ಸದಾ ರಾಮಧ್ಯಾನವನ್ನು ಮಾಡುತ್ತ, ಕುಂಕುಮ, ರುದ್ರಾಕ್ಷಿಮಾಲೆ, ವಿಭೂತಿಧಾರಣೆ ಮಾಡುವ ದೈವಿಕ ಪುರುಷರೇ ಆಕೆಯ ವೇಶ್ಯಾವೃತ್ತಿಗೆ ಕಾರಣರಾದರು. ಈ ರೀತಿಯ ದ್ವಂದ್ವ ಜೀವನನಡೆಸುವವರನ್ನು ಬಹಿರಂಗಪಡೆಸುತ್ತಾರೆ.

ಸಮಾಜದ ಗೋಮುಖವ್ಯಾಘ್ರರನ್ನು ಬಹಿರಂಗಪಡೆಸುವ(ನನಗೆ ಬಹು ಪ್ರಿಯವಾದ) ಬೀಚಿಯವರ ಚುಟಕ 'ಬಂಗಾರದ ಗೂಬೆ'.

ಗೂಬೆಯಂತಹ ತಿಂಮ, ಸಮಾಜ ಮತ್ತು ಲೌಕಿಕ ಜ್ಞಾನಾರ್ಜನೆಗೋಸ್ಕರ, ಆ ಊರಿನ ಸುಜ್ಞಾನಿಗಳಾದ ಯಂಕ, ಶೀನ, ಮತ್ತು ನೊಣರವರ ಸಂಜೆಯ ಸಭೆಗೆ ಹೋಗಿ ಅಂತಹವರೊಂದಿಗೆ ಬೆರೆತು, ಉತ್ತಮಮಟ್ಟದ ಪ್ರಜೆ ಆಗಬೇಕೆಂದು ಆಶಿಸಿದ. ಆ ಮೂವರು ಬಾಯಿತೆರೆದರೆ ಭಗವದ್ಗೀತೆ, ಉಪನಿಷತ್ತು, ಪುಣ್ಯ-ಪುರುಷಾರ್ಥ, ವಿದ್ಯಾರಣ್ಯ, ಬಸವಂಣ. ಆ ಸಜ್ಜನರ ಸಂಗದಿಂದ ಪಾಮರನಾದ ತಿಂಮ 'ನಾನು ಧನ್ಯನಾದೆ' ಎಂದ.

'ನಾಳೆ ಮತ್ತೆ ಬರಲು ಇಚ್ಛಿಸುತ್ತೇನೆ, ಆಕ್ಷೇಪಣೆ ಇಲ್ಲವಷ್ಟೆ?' ಎಂದು ತಿಂಮ ಕೇಳಿದ.'ಅರೇ ಹುಚ್ಚಪ್ಪಾ, ಆಕ್ಷೇಪಣೆ ಎಲ್ಲಿ?ನಮ್ಮ ಮಾತಿನಿಂದ ನಿಮಗೆ ಜ್ಞಾನೋದಯವಾದರೆ ಸಾಕು' ಎಂದ ಸೀನ.

ಮರುದಿನ ಲೋಕಾಭಿರಾಮವಾಗಿ ಮಾತು ಕಥೆ ಶುರುವಾಯ್ತು. ಶೀನನ ಆಸನ ಖಾಲಿ ಇದ್ದುದನ್ನು ಕಂಡು, ತಿಂಮ ಕೇಳಿದ:

'ಏಕೆ ಯಜಮಾನ್ರು ಈ ದಿನ ಇಲ್ಲಾ?'

ಯಂಕ, ನೊಣ ಅರ್ಥಗರ್ಭಿತವಾಗಿ ನಕ್ಕರು.

'ಆತನ ಮಗಳಿಗೆ....'

'ಕಾಯಿಲೇನಾ ಸ್ವಾಮೀ?' ಕೇಳಿದ, ತಿಂಮ.

ಗೊಳ್ಳನೆ ನಕ್ಕರು ಯಂಕ, ನೊಣ.

'ಕಾಯಿಲೆ? ಕಾಯಿಲೆ ಇಲ್ಲಾ. ಆ ಮಗುವಿಗೆ ಮಗು. ಆ ಮೂರ್ಖ ಅವಳಿಗೆ ಮದುವೆ ಮಾಡಬಾರದೇ?' ಯಂಕನ ತೀರ್ಮಾನ.

ನೊಣ, 'ಯಾವನು ಮಾಡ್ಕೋತಾನೆ, ನೀವೇ ಹೇಳಿ'.

ಸಭೆ ವಿಸರ್ಜನೆಯಾಯ್ತು.

ಮರುದಿನ ನೊಣ ಆಬ್ಸೆಂಟು.

'ಅದೇಕೆ ಸ್ವಾಮಿಗಳು ಇವತ್ತು ಬರಲಿಲ್ಲಾ?' ತಿಂಮ ಕೇಳಿದ.

ಯಂಕನ ಕಣ್ಣಲ್ಲಿ ಜ್ಯೋತಿ ಮಿಣುಕಿತು.

'ಅವನ ಹೆಂಡತಿಯ ಚಾಳಿ ಇಡೀ ಊರಿಗೇ ಗೊತ್ತು' ಯಂಕ, ಶೀನ ಸೇರಿ, ನೊಣನ ಹೆಂಡತಿಯ ಮಾನವನ್ನು ಸೋಪುಹಾಕಿ ತೊಳೆದುಬಿಟ್ಟರು. ಈ ದೊಡ್ಡವರ ಮಾತು ಕೇಳಿ ತಿಂಮ ಬೇಸತ್ತ.

'ಅಲ್ಲಾ ಸ್ವಾಮಿ, ನೀವು ಪ್ರತ್ಯಕ್ಷವಾಗಿ ನೋಡಿದಿರಾ?'

'ಬಾಯಿ ಮುಚ್ಕೋ, ಭಢವಾ' ಎಂದರು.

ಬಾಯಿ ಮುಚ್ಚಿ ಮನೆಕಡೆ ಕಾಲು ಹಾಕಿದ.

ಹೋಗಲೋ ಬೇಡವೋ ಎಂದು ತಿಂಮ, 'ಇನ್ನೊಂದು ಸಾರಿ' ಮೂರನೆಯದಿನ ಸಭೆಗೆ ಹಾಜರ್. ನೊಣ ಸೀನ ಹಾಜರ್ ಆದರೆ ಯಂಕ ಇಲ್ಲ.

'ಯಜಮಾನರು ತಡವೇ ಸ್ವಾಮಿ?' ಕೇಳಿದ ತಿಂಮ.

'ಯಜಮಾನರ ಅಮ್ಮನ ತಿಥಿಯಾಯ್ತು'

'ಅಂದರೆ...ಅವರು ತೀರಿಕೊಂಡರೇ?'

'ಆ ಮುದಿಶನಿ ತೀರಿಕೊಂಡಿದ್ದರೇ ಚೆನ್ನಾಗಿತ್ತು. ಯಂಕನಿಗೇ ಕೇಳು, ಅವನ ತಂದೆಯ ಹೆಸರು ಹೇಳಿಬಿಡ್ಲಿ, ನೋಡೋಣ'.

ತಿಂಮನಿಗೆ ತಡೆಯಲಾಗಲಿಲ್ಲ. ಎದ್ದು,

'ನಾನು ಬರ್ತೀನಿ ಒಡೆಯಾ. ನನಗೆ ಮಗಳಿಲ್ಲಾ, ಹೆಂಡತಿಯಿಲ್ಲಾ, ತಾಯಿಯೂ ಇಲ್ಲವೇ ಇಲ್ಲ ನಾನು ಈ ಸಭೆಗೆ ಬರಲು ನಾಲಾಯಕ್ಕು'. ಎಂದು ಎದ್ದು ಹೊರಟ. ಮನಸ್ಸಿನಲ್ಲೇ ಗೊಣಗಿದ.

'ನಾನು ಎಂದಿನಂತೆ ಗೂಬೆಯೇ. ಆದರೆ ಭಂಗಾರದ ಗೂಬೆ''.

*

'ಸರ್ಕಾರದ ರೆಡ್‌ಟೇಪ್'ನ್ನು ಉಲ್ಲೇಖಿಸಿ ತೋರಿಸುವ ಇನ್ನೊಂದು ಚುಟಕ.

ತಿಂಮನ ಹೆಂಡತಿ ಸ್ವರ್ಗಸ್ಥಳಾದಳು. ನೆರೆಹೊರೆಯವರು, ನೆಂಟರು ಹೇಳಿದರು,

'ಮುನಿಸಿಪಲ್ ಆಫೀಸಿಗೆ ಹೋಗಿ ದಾಖಲೆ ಮಾಡಿಸಿ ಮರಣ ಖಾತೆ (Death Certificate) ಪಡೆದರೆ, ಇನ್ಸೂರೆನ್ಸ್ ಹಣ ಪಡೆಯಲು ಸಾಧ್ಯ' ಎಂದು.

ಮುನಿಸಿಪಲ್ ಆಫೀಸಿನ ಕಾರಕೂನ ಧೂಳು ಝಾಡಿಸಿ ಕರೀ ಅಟ್ಟೆಯ ದೊಡ್ಡ ಪುಸ್ತಕವನ್ನು ತಂದ. ಬಂತು ಪ್ರಶ್ನಾವಳಿ: 'ನಿನ್ನ ಹೆಂಡತಿಯ ಹೆಸರೇನು? ಹುಟ್ಟಿದ ದಿನಾಂಕ? ಹುಟ್ಟಿದ ಊರು? ಸತ್ತ ದಿನಾಂಕ? ಗಳಿಗೆ? ನಕ್ಷತ್ರ? ಕಾರಣ?'. ಕ್ರಮವಾಗಿ ಉತ್ತರಿಸಿದ, ತಿಂಮ. ಬಹಳ ವೇಳೆ ದೊಡ್ಡ ಪುಸ್ತಕಗಳ ಹಾಳೆಗಳನ್ನು ತಿರುವಿಹಾಕಿದ ನಂತರ, ತಲೆ ಕೆರೆದುಕೊಳ್ಳುತ್ತ, ಆ ಮುನಿಸಿಪಾಲಿಟಿಯ ಚಿತ್ರಗುಪ್ತ ಹೇಳಿದ:

'ನಿನ್ನ ಹೆಂಡತಿ ಹುಟ್ಟಿದ ದಾಖಲೆಯೇ ಇಲ್ಲಾ. ನಿನ್ನ ಹೆಂಡತಿ ಹುಟ್ಟೇ ಇಲ್ಲ, ಇನ್ನು ಸಾಯುವುದು ಹೇಗೆ?'

'ಸ್ವಾಮಿ, ನಾನು ನಿಜ ಹೇಳ್ತೀನಿ. ನೋಡಿ, ನನ್ನ ಜೊತೆಯಲ್ಲೇ ನನ್ನ ಮಕ್ಕಳಿವೆ' ಎಂದು ತನ್ನ ಐದು ಮಕ್ಕಳನ್ನು ತೋರಿಸಿದ.

'ನಮ್ಮ ರೆಜಿಸ್ಟ್ರಿ ಸುಳ್ಳು ಹೇಳುತ್ತದೆಯೇ? ದೇವರಾಣೆಗೂ ನಿನ್ನ ಹೆಂಡತಿ ಹುಟ್ಟಿಲ್ಲಾಪ್ಪ, ತಿಂಮ'.

'ಹಾಗಾದರೆ ಈ ಮಕ್ಕಳು ಹೇಗೆ?...... ನನಗೆ ಮದುವೆಯಾದುದೂ ಸುಳ್ಳು ಎನ್ನುತ್ತೀರಾ?'

'ಮದುವೆ ಆಗದೇ ಹುಟ್ಟಿದ ಈ ಮಕ್ಕಳು, ಛೇ! ದನ, ಕತ್ತೆ, ನಾಯಿಗಳಂತೆ. ಅವನ್ನು ಕರೆದುಕೊಂಡು ಆಚೆ ನಡೀ'.

ಕಾಲ್ತೆಗೆದ, ತಿಂಮ. ಕೋಪದಿಂದಲ್ಲ, ತಾಪದಿಂದ.

*

ಮತ್ತೊಂದು ನನಗೆ ಅತಿಪ್ರಿಯವಾದ ಚುಟುಕ:

ತಿಂಮ ಸ್ನೇಹಿತರೊಂದಿಗೆ ಇಸ್ಪೀಟ್ ಆಡ್ತಿದ್ದ. ಸಿಗರೇಟ್ ತುಂಡುಗಳ ರಾಸಿ. ರೂಮಿನ ತುಂಬಾ ಸಿಗರೇಟು ಹೊಗೆ. ತಿಂಮನ ಅಪ್ಪ ಬಂದ. ಎಲ್ಲರೂ ಸಿಗರೇಟನ್ನು ಬಚ್ಚಿಟ್ಟರು. ತಿಂಮನು ಮಾತ್ರ ರಾಜಾರೋಷವಾಗಿ, ದೀರ್ಘವಾಗಿ

ಉಸಿರು ಎಳೆದು ರೈಲ್ವೇ ಎಂಜಿನ್ನಿನಂತೆ ಹೊಗೆ ಊದಿದ. ಸ್ವಲ್ಪ ಹೊತ್ತಿನ ನಂತರ, ಕೇವಲ ಒಂದು ವರ್ಷದ ಬೀಚಿಯ ಮಗ ತೆವಳಿಕೊಂಡು ಬಂದ. ತಿಮ್ಮ ಚಟಕ್ಕನೆ ಸಿಗರೇಟನ್ನು ಬಚ್ಚಿಟ್ಟ. ಬಾಯಲ್ಲಿದ್ದ ಹೊಗೆಯನ್ನು ನುಂಗಿ ಹೊಗೆ ಹೊರಗೆ ಬರದಂತೆ ಬಾಯಿ ಮುಚ್ಚಿದ.

'ತಿಂಮ, ಅಲ್ಲಾ ನಿಮ್ಮಪ್ಪ ಬಂದಾಗ ಮುಚ್ಚುಮರೆಯಿಲ್ಲದೆ ಸಿಗರೇಟು ಸೇದಿದೆ. ಆದರೆ ನಿನ್ನ ಮಗ ಬಂದಾಗ ಏಕೆ ಇಷ್ಟು ಸಂಕೋಚ, ನಾಚಿಕೆ, ಹೆದರಿಕೆ?' ಎಂದು ಕೇಳಿದರು.

'ನೋಡ್ರಯ್ಯಾ, ನನ್ನಿಂದ ನಮ್ಮಪ್ಪ ಕಲಿಯದಂತಹ ಕೆಟ್ಟ ಚಾಳಿ ಏನೂ ಇಲ್ಲ. ಅವನ್ನ ಆಗಲೇ ಕಲ್ತಿದ್ದಾನೆ. ಆದರೆ ನನ್ನ ಮಗ ಈ ಕೆಟ್ಟ ಚಾಳಿ ಸುತ್ರಾಂ ಕಲಿಯೋದು ನನಗೆ ಇಷ್ಟ ಇಲ್ಲಾ' ಎಂದ ತಿಂಮ.

*

ಅವರ 'ಕಾಮಲೋಕ' ಒಂದು ಸಣ್ಣಕಥೆಗಳ ಸಂಗ್ರಹ. ಈ ಪುಸ್ತಕದ ಬಗ್ಗೆ 'ಅಶ್ಲೀಲ ಸಾಹಿತ್ಯ' ಎಂದು ಖಂಡಿಸಿದ ಮಡಿವಂತರು, ವೃದ್ಧರು, ದೊಡ್ಡ ಅಕ್ಷರದಲ್ಲಿ 'ಭಗವದ್ಗೀತೆ' ಎಂದು ಬರೆದ ದಪ್ಪನೆಯ ಹೊದಿಕೆ ಹೊದಿಸಿ, ಎಲ್ಲರೆದುರು ಧೈರ್ಯವಾಗಿ ಓದಿದ್ದಾರೆ' ಎಂದು ಹಾಸ್ಯ ಮಾಡಿದ್ದಾರೆ ಬೀಚಿ.

*

ಬ್ರಾಹ್ಮಣರ ವಂಶದಲ್ಲಿ ಹುಟ್ಟಿದರೂ ಬೀಚಿ ಎಂದೂ ಜಾತಿ, ಆಚಾರ ವಿಚಾರಗಳಿಗೆ ಅಂಟಿಕೊಂಡಿರಲಿಲ್ಲ. ಪಂಥ, ಮತ, ಜಾತಿ, ಕುಲ, ಸಂಪ್ರದಾಯ, ಶಾಸ್ತ್ರ, ನಿಯಮಗಳಲ್ಲಿ ಆಸಕ್ತಿ ಇಲ್ಲ, ನಂಬಿಕೆ ಇಲ್ಲ. ಸಮಾಜದಲ್ಲಿ ಬಹುಮಂದಿ ಆಷಾಢಭೂತಿಗಳು, ಕಪಟವಂಚಕರು ಇರುವರೆಂದು ಅವರ ನಂಬಿಕೆ.

'ಹುಟ್ಟಿನಿಂದ ಯಾರೂ ಬ್ರಾಹ್ಮಣನಲ್ಲ' ಎಂದು ಒಪ್ಪಿಕೊಳ್ಳುವ ಸಂಪನ್ನತೆ, ಬ್ರಾಹ್ಮಣಿಕೆ ತೋರಿದೆ ಎನ್ನುತ್ತಾರೆ ಬೀಚಿ. 'ಉಪನಯನ ಮಾಡಿ ಮೂರು ಎಳೆ ದಾರವನ್ನು ಹೆಗಲ ಮೇಲೆ ಹಾಕಿದರೆ ಬ್ರಾಹ್ಮಣನಾಗುವುದಾದರೆ, ಶೂದ್ರನೆಂಬ ಮಗನಿಗೆ ಅದೇ ಮೂರು ಎಳೆ ದಾರ ಏಕೆ ಹಾಕಬಾರದು?' ಎನ್ನುವುದು ಬೀಚಿಯವರ ಕೊಂಕು ಪ್ರಶ್ನೆ. ರೆವೆನ್ಯೂ ಇಲಾಖೆಯಲ್ಲಿದ್ದ ಚಿಕ್ಕಪ್ಪ ತಮ್ಮ ಹಿರಿಯ ಮಗನಿಗೆ ಮುಂಜಿ ಮಾಡಲು ನಿರ್ಧರಿಸಿದರು. ಅದೇ ಖರ್ಚಿನಲ್ಲಿ, ಪಾಪ, ತಬ್ಬಲಿಹುಡುಗ, ದಿಕ್ಕಿಲ್ಲದ ಪರದೇಶಿಯಾದ ತನ್ನ ಅಣ್ಣನ ಮಗನಿಗೂ ಉಪನಯನ ಮಾಡಿದರೆ ಪುಣ್ಯ ಬರುತ್ತದೆ ಎಂದು ಬೀಚಿಯನ್ನೂ ಹಸೆ ಮಣೆಯ ಮೇಲೆ ಕೂರಿಸಿ ಮೂರು ಎಳೆ ದಾರ ಹೆಗಲಮೇಲೆ

ಹಾಕಿ ಅವನನ್ನೂ ಬ್ರಾಹ್ಮಣವಟುವನ್ನಾಗಿ ಮಾಡಿದರು. ಜನಿವಾರದ ಜೊತೆ ತ್ರಿಕಾಲ ಸಂಧ್ಯಾವಂದನೆಯನ್ನು ಮಾಡುವ ಜವಾಬ್ದಾರಿ ಬಂತು. 'ಪಕ್ಕದಮನೆ ಆಚಾರ್ಯರಿಂದ ಸಂಧ್ಯಾವಂದನೆ ಕಲಿತು ಬಾ' ಎಂದರು ಅವನ ಸೋದರತ್ತೆ. ತಿಂಮ ಆಚಾರ್ಯರ ಮನೆಗೆ ಹೋದ. ಸಂಧ್ಯಾವಂದನೆಯ ಮಂತ್ರಗಳೆಲ್ಲಾ ಸಂಸ್ಕೃತದಲ್ಲೇ. ಆ ಕಿರಿಯ ಬೀಚಿಗೆ ಸಂಸ್ಕೃತ ಸುತರಾಂ ಅರ್ಥವಾಗಲಿಲ್ಲ.

'ಕರತಲ ಪುಷ್ಪಭ್ಯೋನಮಃ' ಅಂದರು ಆಚಾರ್ಯರು.

'ಹಾಗಂದ್ರೇನು, ಆಚಾರ್ಯರೇ?' ತಿಂಮನ ಪ್ರಶ್ನೆ.

'ಕತ್ತೆ ಭಢವಾ. ನಾನು ಬೊಗಳಿದಷ್ಟನ್ನು ಸುಮ್ಮನೆ ಬೊಗಳು. ಅರ್ಥವಂತೆ ಅರ್ಥ. ಅರ್ಥ ತಿಳ್ಕೊಂಡು ಎಲ್ಲಿ ಸುಡ್ತೀ' ಎಂದರು ಆಚಾರ್ಯರು. ಶಿಕ್ಷಣ ಮುಂದುವರೆಯಿತು. ಆಚಾರ್ಯರು ಹೇಳಿದ್ದನ್ನೇ ಗಿಣಿಯಂತೆ ಬೀಚಿ ಹೇಳಿದ. ಮಧ್ಯದಲ್ಲಿ ಆಚಾರ್ಯರಿಗೆ ಏನೋ ನೆನಪಾಯಿತು. ಹೆಂಡತಿಯನ್ನು ಕರೆದರು.

'ಏನೇ, ಬಾರೇ, ಇಲ್ಲಿ'.

'ಏನೇ, ಬಾರೇ ಇಲ್ಲಿ' ಪ್ರತಿಧ್ವನಿಸಿದ ಬೀಚಿ.

'ಏನೋ ಮೂರ್ಖ, ನನ್ನ ಹೆಂಡತೀನ ಏನೇ, ಬಾರೇ ಅಂತೀಯಾ?' ಎಂದರು ಆಚಾರ್ಯರು.

ಬೀಚಿ: 'ಏನೋ ಮೂರ್ಖ. ನನ್ನ ಹೆಂಡ್ತೀನ ಏನೇ, ಬಾರೇ ಅಂತೀಯಾ?'

ಆಚಾರ್ಯ: 'ನೀನು ಮನುಷ್ಯಾನೋ, ದನಾನೋ?'

ಬೀಚಿ:'ನೀನು ಮನುಷ್ಯಾನೋ ದನಾನೋ?'

ಈ ಮುಠ್ಠಾಳನಜೊತೆ ಈ ಸಂಗ್ರಾಮದಲ್ಲಿ ಗೆಲ್ಲಲು ಅಸಾಧ್ಯವೆಂದು 'ಕೃಷ್ಣಾರ್ಪಣಮಸ್ತು' ಎಂದರು. ನಂತರ,

'ಎಲೋ ಭೀಮಸೇನ, ಇಲ್ಲಿಗೆ ಸಂಧ್ಯಾವಂದನೆ ಮುಗಿಯಿತು. ನಾಳೆಯಿಂದ ನೀನೇ ಮಾಡ್ಕೋ. ಇಲ್ಲಿಗೆ ಬರಬೇಡ'. ಎಂದರು.

'ಹಾಗೇ ಆಗಲಿ. ಆಚಾರ್ರೇ' ಎಂದ ಬೀಚಿ.

*

ಬೀಚಿಯವರು ಹುಟ್ಟಿದ್ದು ಆಸ್ತಿಕರ ಮನೆಯಲ್ಲಿ. ಬೆಳೆದದ್ದು ಅರ್ಚಕರ ಮನೆಯಲ್ಲಿ. ದೇವರಿಗಿಂತ ದೇವಾಲಯವೇ ಹೆಚ್ಚು ಎಂಬ ಭ್ರಮೆ. ಮಡಿ-ಮೈಲಿಗೆ, ಪುಣ್ಯ-ಪಾಪ,

ಬ್ರಾಹ್ಮಣ–ಶೂದ್ರ ಮುಂತಾದ ಕಲ್ಪನೆಗಳು ತಲೆತುಂಬ. 'ನಾಯಿ ಕತ್ತೆಗಳನ್ನು ಮುಟ್ಟುತ್ತಿದ್ದೆ ಆದರೆ ಹರಿಜನರನ್ನು ನಾನು ಮುಟ್ಟಲು ಬಿಡುತ್ತಿರಲಿಲ್ಲ' ಎನ್ನುತ್ತಾರೆ ಬೀಚಿ. ಹೀಗೆ ಶಿಸ್ತು, ಮಡಿ, ದೇವರ ಪೂಜೆ, ಸಂಧ್ಯಾವಂದನೆಯ ವಾತಾವರಣದಲ್ಲಿ ಬೆಳೆದು ಬಂದ ನಂಬಿಕೆ ಒಂದು ಕಡೆ. ಮತ್ತೊಂದು ಕಡೆ, ಈ ನಡಾವಳಿಕೆಯ, ಪೂಜೆ ಪುನಸ್ಕಾರಗಳ ಅರ್ಥವೇನು? ಪ್ರತಿಫಲವೇನು? ಎಂಬ ಪ್ರಶ್ನೆ ಕಾಡುತ್ತಿತ್ತು. ಪ್ರಶ್ನಿಸಿದ ಮಾತ್ರಕ್ಕೆ ಅವರಿಗೆ ಹಿಂದೂ ಧರ್ಮದಲ್ಲಿ ಅಸಡ್ಡೆ ಎಂದಲ್ಲ. ನಮ್ಮ ವೇದ, ಉಪನಿಷತ್ತುಗಳು ಮತ್ತು ಧರ್ಮ ಗ್ರಂಥಗಳಲ್ಲಿ ಆಸಕ್ತಿ ಇತ್ತು. ಹಿಂದೂ ಧರ್ಮದ ಬಗ್ಗೆ ಬೀಚಿಯವರ ವಿಚಾರಣೆ: 'ಜಗತ್ತಿನ ಎಲ್ಲಾ ಧರ್ಮಗಳಲ್ಲಿ ಅತಿ ಪ್ರಾಚೀನವಾದದ್ದು ನಮ್ಮ ಹಿಂದೂಧರ್ಮ. ಸುವ್ಯವಸ್ಥಿತವಾದದ್ದು, ಸುಸಂಘಟಿತವಾದದ್ದು. ಇದು ಒಂದು ಜೀವಂತ ಧರ್ಮ. ಇಂತಹ ಸರ್ವ ಶ್ರೇಷ್ಠವಾದ ಧರ್ಮದ ಗತಿ ಏನಾಗಿದೇ? ಹೊಲೆ ಹದಿನೆಂಟು ಜಾತಿಗಳ ಕಿಚಡಿಯಾಗಿದೆ. ನೂರೆಂಟು ಗೊಡ್ಡು ನಂಬಿಕೆಗಳಿಗೆ ನೆಲೆವೀಡಾಗಿದೆ. ಓಣಿಗೊಬ್ಬ ದೇವರು, ಗೇಣೀಗೊಬ್ಬ ಜಗದ್ಗುರು' ಎಂದು ಮರುಗುತ್ತಾರೆ. ಈ ವಿರುದ್ಧ ಅಭಿಪ್ರಾಯಗಳು ಅವರ ತಲೆಯಲ್ಲಿ ಹೋರಾಟ, ಝುಂಜಾಟವನ್ನು ಉಂಟುಮಾಡಿತ್ತು. 'ದೇವರು' ಎಂಬ ಅದ್ಭುತ ಶಕ್ತಿ ಇದೆ ಎಂದು ಒಪ್ಪಿದರೂ, ದೇವರಪೂಜೆ ಸಂಪ್ರದಾಯದಲ್ಲಿ ಅವರಿಗೆ ನಂಬಿಕೆ ಇರಲಿಲ್ಲ. 'ಕುರುಡು ನಂಬಿಕೆ ವೈಚಾರಿಕ ನಪುಂಸಕತೆಯೇ ನರಕ. ಸತ್ಯದ ಅರಿವೇ ಸ್ವರ್ಗ' ಎಂದು ಅವರ ಘೋಷಣೆ. ಬೀಚಿಯವರು ತಮ್ಮ ಇಡೀ ಜೀವನದಲ್ಲಿ ಈ ದ್ವಂದ್ವದಲ್ಲಿ ಹೋರಾಡಿ, ತಮ್ಮ ಜೀವದ ಸಂಧ್ಯಾಕಾಲದಲ್ಲಿ, ದೇವರಿದ್ದಾನೆಂದು ಭ್ರಮಿಸಲು ಸಾಧ್ಯವಿಲ್ಲ. ಇದು ನಮ್ಮ ಪಾಲಿಗೆ ಆತ್ಮ ವಂಚನೆ. ನಾಸ್ತಿಕತೆಯ ನಿರ್ಧಾರ ನನಗೆ ತೃಪ್ತಿಯನ್ನು ಕೊಟ್ಟಿದೆ. ನನ್ನ ಈ ಜೀವನ ಪಥದಲ್ಲಿ ನನಗೆ ಶಾಂತಿಯನ್ನು ಕೊಟ್ಟಿದೆ ಎನ್ನುತ್ತಾರೆ ತಮ್ಮ 'ಭಯಾಗ್ರಫಿ'ಯಲ್ಲಿ.

*

ಬೀಚಿಯವರು ಹೇಳುತ್ತಾರೆ:

'ನಾನು ಬರೆದ ಕಥೆಗಳು, ಕಾದಂಬರಿಗಳು, ಲೇಖನಗಳು, ಜನಗಳನ್ನು ಪರಿವರ್ತಿಸಲು ಅಥವಾ ಬೋಧಿಸಲು ಅಲ್ಲ. ನನ್ನ ಸ್ವಂತ ಡೊಂಕುಗಳೇ ನೂರೆಂಟಿರುವಾಗ ಲೋಕದ ಡೊಂಕುಗಳನ್ನು ತಿದ್ದುತ್ತೇನೆಂಬ ಹುಚ್ಚ ನಾನಲ್ಲ'.

'ಕನ್ನಡಿ ಹಿಡಿಯುವುದಷ್ಟೇ ನನ್ನ ಕರ್ತವ್ಯ. ಹನುಮಂತರಾಯ ಕನ್ನಡಿಯ ಮೇಲೆ ಕೋಪಿಸಿಕೊಂಡರೆ ಅದು ಕನ್ನಡಿಯ ತಪ್ಪೇ?'

'ನನ್ನ ಕೃತಿಯನ್ನು ಓದುವಾಗ ತಮ್ಮನ್ನು ತಾವೇ ಗುರುತಿಸಿಕೊಂಡು ನಗುವವರಿಗೆ, ನಕ್ಕುಬಿಡುವ ರಸಜ್ಞ ಓದುಗರಿಗೆ ನಮೋ ನಮಃ. ಅವರು ನನ್ನ ಅಜ್ಞಾತಮಿತ್ರರು'

'ಜೀವನದಲ್ಲಿ ವೈವಿಧ್ಯತೆಗೆ ಕೊರತೆಯಿಲ್ಲ. ದೊಡ್ಡವರ ಸಣ್ಣತನ, ಜಾಣರ ದಡ್ಡತನ, ಪದವೀಧರರ ಮೌಢ್ಯ, ಪರಿಶುದ್ಧರೆನ್ನುವವರ ಕೊಳಕು ಇವನ್ನು ಹಾಸ್ಯ ಸಾಹಿತಿ ಗುರುತಿಸುತ್ತಾನೆ. ಆತ ಸಮಾಜ ವಿಮರ್ಶಕನೂ ಆಗಬೇಕು'.

ಬೀಚಿಯವರ ವಿಡಂಬನ ಸಾಹಿತ್ಯ, ಜಗನ್ಮೋಹನ ಅರಮನೆಯ ವಸ್ತುಪ್ರದರ್ಶನಾಲಯದಲ್ಲಿನ ವಿಕಟ ದರ್ಪಣದಂತೆ. ನಾವು ಎತ್ತರವಾಗಿ, ಕುಳ್ಳನಾಗಿ, ನೀಳ-ಧಡೂತಿಯಾಗಿ, ಅಂಕು-ಡೊಂಕಾಗಿ ಕಾಣಬಹುದು. ಆದರೆ ಅದು ನಮ್ಮದೇ ಪ್ರತಿರೂಪ. ಬೀಚಿಯವರ ಬರವಣಿಗೆಯಲ್ಲಿ ನಿರೂಪಿಸಿರುವ ಪಾತ್ರಗಳು ನಾವೇ. ಹಾಸ್ಯದ ಮಾತುಗಳಿಂದ ನಗಿಸುವುದಷ್ಟೆ ಅಲ್ಲಾ, ನಗಿಸುವುದರೊಂದಿಗೆ ಸಮಾಜದ ಲೋಪ ದೋಷಗಳನ್ನೂ ಬಹಿರಂಗಕ್ಕೆ ತಂದು, ಸಮಾಜವನ್ನು ಕೆರಳಿಸಿ, ಎಚ್ಚರಿಸುವಂಥ ಶಕ್ತಿ ಅವರ ಬರಹದಲ್ಲಿದೆ. ಬೀಚಿ ವಿನೋದ ಸಾಹಿತಿಯಷ್ಟೇ ಅಲ್ಲ, ಚಿಂತನಾಶೀಲ, ತತ್ವಜ್ಞಾನಿ ಮತ್ತು ಮಾನವತಾವಾದಿ. ನಮ್ಮ ಪ್ರಾಚೀನ ಸಂಸ್ಕೃತಿ, ಉಪನಿಷತ್ತಿನ ಬಗ್ಗೆ ವಿಶೇಷ ಆದ್ಯತೆ, ಅಪಾರ ಗೌರವವಿದ್ದರೂ, ವಿಗ್ರಹಾರಾಧನೆ, ಗೊಡ್ಡು ಮಡಿವಂತಿಗೆ, ಅರ್ಥವಿಲ್ಲದ ಆಚಾರ ಸಂಪ್ರದಾಯಗಳ ವಿರುದ್ಧ ಧೋರಣೆ ತಾಳಿ, ಯಾವ ದಾಕ್ಷಿಣ್ಯಕ್ಕೂ ಹೆದರದೆ ತಮ್ಮ ಅಭಿಪ್ರಾಯಗಳನ್ನು ತಮ್ಮ ಬರವಣಿಗೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಬೀಚಿಯವರ ಹಾಸ್ಯಕ್ಕೆ ಅವಹೇಳನಕ್ಕೆ ನಮ್ಮ ಸಮಾಜ ಮತ್ತು ನಾವೇ ಯಜ್ಞಪಶುಗಳೆಂದು, ಅವರ ಅಗೌರವ ಮತ್ತು ಅಸಡ್ಡೆಗಳಿಗೆ ಕೆರಳುವಂಥಹವರೂ, ಅಂತರಂಗದಲ್ಲಿ ಅವರ ಭಾವನೆಗಳನ್ನು ಒಪ್ಪಿಕೊಂಡು ಓದಬೇಕೆಂಬ ಆಕರ್ಷಣೆ ಇದೆ ಅವರ ಬರಹದಲ್ಲಿ.

ಅವರು ತಮ್ಮ ಕೃತಿಗಳಲ್ಲಿ ಎಷ್ಟೇ ಕೆಣಕಲಿ, ಗೇಲಿಮಾಡಲಿ, ಸಮ್ಮಾಜದ ಮೇಲೆ ತಿರಸ್ಕಾರ ತೋರಿಸಲಿ, ಅವರ ವಿಚಾರ ಸರಣಿಯನ್ನು ಓದಿ, ನಕ್ಕು ನಗದಿರುವವರೇ ಇಲ್ಲ.

*

ಅ.ನ.ಕೃ. ಅವರ ನಿಧನದ ಸುದ್ದಿ ಕೇಳಿ, ತನ್ನ ಸಾಹಿತ್ಯಗುರು, ಹಿರಿಯ ಸಂಗಾತಿ ಕಣ್ಮರೆಯಾದ ದುಃಖವನ್ನು ಶಮನಮಾಡಲು 'ಪಾನಕಪೂಜೆ'ಗೆ Blue Barಗೆ ಹೋದರು. ಅಲ್ಲಿ ಒಬ್ಬ ಬಿಕ್ಕಿ ಅಳುತ್ತಿದ್ದ.

'ಏನಪ್ಪಾ, ಏಕೆ ಅಳುತ್ತಿದ್ದೀ?'ಎಂದು ಕೇಳಿದರು ಬೀಚಿ.

'ಕೃಷ್ಣರಾಯರು ಸತ್ತಿದ್ದಾರೆ' ಎಂದ.

'ಇಲ್ಲಾ ಸತ್ತರು' ಎನ್ನು, ಅಥವಾ 'ಇದ್ದಾರೆ' ಎನ್ನು. 'ಸತ್ತಿದ್ದಾರೆ' ಎಂದರೆ ಏನಯ್ಯಾ ಅರ್ಥ?'

ಅಂಥಹ ದುಃಖದ ಸಮಯದಲ್ಲೂ ಅವರ ಹಾಸ್ಯ ಪ್ರವೃತ್ತಿ! ಎಂಥದು

ರಾಯರು ತಮ್ಮಕೊನೆಯ ಪುಸ್ತಕದ ಕೊನೆಯ ಅಧ್ಯಾಯವನ್ನು ಬರೆದು ಪೂರೈಸಿರಬಹುದು. ಆದರೆ ಅವರು ಸಾಯಲು ಸಾಧ್ಯವೇ ಇಲ್ಲಾ ಎಂದು ಆತನ ಕಣ್ಣೊರೆಸಿ ಸಮಾಧಾನ ಮಾಡಿದರು.

ಸೆಪ್ಟೆಂಬರ್ ೧೭, ೧೯೮೦ರಂದು ಬೀಚಿಯವರ ಹಾಸ್ಯ ಸಾಹಿತ್ಯದ ಕೊನೆಯ ಅಧ್ಯಾಯ ಮುಕ್ತಾಯವಾಯಿತು.

ಅವರ ಚುರುಕಿನ ಮಾತಿನಿಂದ ಹಾಸ್ಯಸಾಹಿತ್ಯದಲ್ಲಿ ಅಗ್ರಸ್ಥಾನ ಪಡೆದು ಬರೆದ ಅರವತ್ತ ಮೂರು ಕೃತಿಗಳಿಂದ ನಮ್ಮೆಲ್ಲರ ಮನಸ್ಸಿನಲ್ಲಿ ಬೀಚಿ ಶಾಶ್ವತವಾಗಿ ನೆಲೆಸಿದ್ದಾರೆ.



# ಪಾ.ವೆಂ.ಆಚಾರ್ಯರ ಪಾಂಡಿತ್ಯಪೂರ್ಣ ಹರಟೆಗಳು

## ನಳಿನಿ ಮೈಯ

ನಮ್ಮಲ್ಲಿ ಅನೇಕರಿಗೆ ಪಾ.ವೆಂ.ಆಚಾರ್ಯ(ಪಾಡಿಗಾರು ವೆಂಕಟರಮಣ ಆಚಾರ್ಯ) ಎಂಬ ಹೆಸರಿಗಿಂತಲೂ 'ಲಾಂಗೂಲಾಚಾರ್ಯ' ಎಂಬ ಹೆಸರೇ ಹೆಚ್ಚು ಪರಿಚಿತ, ಹೆಚ್ಚು ಆಪ್ಯಾಯಮಾನ! ಆ ಹೆಸರಿನಿಂದಲೇ ನಾವು ಕನ್ನಡದ ಒಬ್ಬ ಸಮರ್ಥ ಹಾಸ್ಯ ಲೇಖಕರನ್ನು ಗುರುತಿಸಿದ್ದು, ಅವರ ಜೋಕುಗಳಿಗೆ ಹೊಟ್ಟೆ ಹುಣ್ಣಾಗುವಂತೆ ನಕ್ಕಿದ್ದು, ಆಮೇಲೆ ಅದು ಹೇಗೆ ಇವರು ಇಷ್ಟು ಚೆನ್ನಾಗಿ, ತಮಾಷೆಯಾಗಿ ಬರೀತಾರೆ! ಅಂತ ಆಶ್ಚರ್ಯಪಟ್ಟಿದ್ದು.

'ಲಾಂಗೂಲಾಚಾರ್ಯ' ಎಂಬ ಪಾ.ವೆಂ.ಆಚಾರ್ಯರ ಕಾವ್ಯನಾಮವನ್ನೇ ನೋಡಿ. ಎಷ್ಟು ಹಾಸ್ಯ ತುಂಬಿದೆ ಅದರಲ್ಲಿ! ಲಾಂಗೂಲ ಎಂದರೆ ಬಾಲ. ಕನ್ನಡದಲ್ಲಿ ಬಾಲಕ್ಕೆ ಒಂದು ನಿಕೃಷ್ಟ ಸ್ಥಾನವನ್ನು ಕೊಡಲಾಗಿದೆ. ಕತ್ತೆ ಬಾಲ (ನೀನು ಬರದಿದ್ದರೆ ಕತ್ತೆ ಬಾಲ ಹೋಯ್ತು), ನಾಯಿ ಬಾಲ (ಡೊಂಕು ಬಾಲದ ನಾಯಕರು), ಇಲಿ ಬಾಲ (ಇಲಿ ಬಾಲದಂತಹ ಜಡೆ) ಹೀಗೆ ಬಾಲದ ಸ್ಥಾನವನ್ನು ಅಥವಾ ಬಾಲಕ್ಕೆ ಸ್ಥಾನ, ಮಾನವಿಲ್ಲದ್ದನ್ನು ವರ್ಣಿಸುವ ಅನೇಕ ಉದಾಹರಣೆಗಳಿವೆ. ಆದರೆ 'ಆಚಾರ್ಯ' ಎಂಬ ಪದ ನಮ್ಮಲ್ಲಿ ಒಬ್ಬ ಪೂಜನೀಯ ವ್ಯಕ್ತಿಯ ಚಿತ್ರವನ್ನು ಮೂಡಿಸುತ್ತದೆ. ಆಚಾರವಂತನಾದ, ವಿಚಾರಶೀಲನಾದ ಗೌರವಾನ್ವಿತ ಮನುಷ್ಯ ಎಂಬ ಭಾವ ಮನಸ್ಸಿನಲ್ಲಿ ಬರುತ್ತದೆ. ಈಗ ಆ 'ಬಾಲ'ಕ್ಕೆ ಈ 'ಆಚಾರ್ಯ'ವನ್ನು ತಳುಕು ಹಾಕಿ! ಅಲ್ಲಿದೆ

ತಮಾಷೆ! ಲಾಂಗೂಲ ಮತ್ತು ಆಚಾರ್ಯ ಎಂಬ ಎರಡು ವಿರುದ್ಧ ಪದಗಳು ಒಂದಾಗುತ್ತಲೇ ನಗೆಯ ಅಲೆಗಳು ನಮಗರಿವಿಲ್ಲದಂತೆ ಹೃದಯಾಂತರಾಳದಿಂದ ಹೊಮ್ಮುತ್ತವೆ!

ಹಾಸ್ಯ ಎಂದರೆ ಏನು? ತಾನೇತಾನಾಗಿ ಹೊರಹೊಮ್ಮುವ ಈ ಭಾವಕ್ಕೆ ಒಂದು ಲಕ್ಷಣ ವಾಕ್ಯದ (ಡೆಫಿನಿಶನ್) ಅಗತ್ಯವಿದೆಯೆ! ಈ ಬಗ್ಗೆ ಹೆಚ್ಚಿನ ಪರಿಶೀಲನೆಗೆ ಹೋಗಬಾರದು ಎನ್ನುತ್ತಾ ನಮ್ಮ ಲಾಂಗೂಲಾಚಾರ್ಯರು ಹೀಗೆ ಹೇಳುತ್ತಾರೆ: '...ಸ್ವಾಮಿ, ಲಕ್ಷಣ ವಾಕ್ಯಗಳು ಲಕ್ಷ್ಯಗಳನ್ನು ನಾಶ ಮಾಡುತ್ತವೆ. ಆದರೂ ನಿಮಗೆ ಲಕ್ಷಣ ವಾಕ್ಯದ ಹಟವೇ ಇದ್ದರೆ ಪ್ರಯತ್ನ ಮಾಡುವಾ' ಹೀಗೆನ್ನುತ್ತಾ ಲಾಂಗೂಲಾಚಾರ್ಯರು ಹಾಸ್ಯಕ್ಕೆ ಈ ಡೆಫಿನಿಶನ್ ಕೊಡುತ್ತಾರೆ. 'ಹಾಸ್ಯ ಎಂದರೆ, ಬಹುತರವಾಗಿ, ಮನುಷ್ಯ ಎಂಬ ಪಶುವಿನ ಮುಖವೆಂಬ ಅವಯವವನ್ನು ನಿಯಂತ್ರಿಸುವ ಸುಮಾರು ೨೦೦ ಸ್ನಾಯುಗಳ ಆಕುಂಚನ-ಪ್ರಸರಣಗಳಿಂದ ಉಂಟಾಗಬಲ್ಲ ವಿಶಿಷ್ಟ ಮುಖ ವಿಕಾರವನ್ನೂ, ಕೆಲ ವೇಳೆ ಅದರ ಸಂಗಡವೇ ಅದೇ ಪಶುವಿನ ಶ್ವಾಸಕೋಶಗಳೆಂಬ ಗಾಳಿ ಚೀಲಗಳ ಜಾಲದಿಂದ, ಗಂಟಲೆಂಬ ಸುರಂಗದೊಳಗಿನ ಧ್ವನಿ ಪೆಟ್ಟಿಗೆಯ ಮೂಲಕ ಬಾಯಿ ಎಂಬ ಬಿಲದ್ವಾರದಿಂದ ಸಶಬ್ದವಾದ ವಾಯು ವಿಸ್ಫೋಟವನ್ನೂ ಉತ್ಪಾದಿಸಲು ಕಾರಣವಾಗುವಂಥ ಮಾತು ಅಥವಾ ಸನ್ನಿವೇಶ'. ವೈಜ್ಞಾನಿಕವಾಗಿ ಹೀಗೆ ಹಾಸ್ಯ ಎಂಬ ವಸ್ತುವನ್ನು ವಿವರಿಸುವಲ್ಲಿ ಎಷ್ಟು ಸ್ವಂತಿಕೆ! ಎಂತಹ ಹಾಸ್ಯ ಪ್ರಜ್ಞೆ!

ಇದೇ ಲಾಂಗೂಲಾಚಾರ್ಯರು ಇನ್ನೊಂದು ಕಡೆ ಹಾಸ್ಯ ಏಕೆ ಬೇಕು? ಎಂದು ಗಂಭೀರವಾಗಿ ಹೀಗೆ ಹೇಳುತ್ತಾರೆ: 'ಅದು(ಹಾಸ್ಯ) ನಮಗೊಂದು ಬಾಂಧವ್ಯ ಭಾವವನ್ನು ಕೊಡುತ್ತದೆ. ನೀವು ಫೂಲುಗಳ ಸಮಾಜದಲ್ಲಿ ಒಬ್ಬ ಫೂಲಾದರೆ ನಿಮ್ಮೊಡನೆ ನೀವು ರಾಜಿಯಾಗುವುದು ಸಾಧ್ಯವಾಗುತ್ತದೆ. ನಿಮ್ಮನ್ನು ನೀವು ಕ್ಷಮಿಸಿಕೊಳ್ಳಬಹುದಾಗುತ್ತದೆ. ತನ್ನನ್ನು ಕ್ಷಮಿಸಲಾರದವ ಪ್ರಪಂಚವನ್ನು ಕ್ಷಮಿಸಲಾರ.....ಸಮಾಜದಲ್ಲಿ ನಾವು ಹೆಜ್ಜೆಹೆಜ್ಜೆಗೆ ಸೋಲನುಭವಿಸುತ್ತೇವೆ; ಹೆಜ್ಜೆ ಹೆಜ್ಜೆಗೆ ನಮ್ಮ ಮೇಲೆ ನಮಗೆ ಕೋಪ ಬರುತ್ತದೆ. ಸಮಾಜದ ಮೇಲೂ ಸಿಟ್ಟು ಬರುತ್ತದೆ. ಹಾಸ್ಯವೆಂಬುದು ಈ ಗಾಯದ ಮೇಲಿನ ಮುಲಾಮು'.

ಜೀವನದಲ್ಲಿ ಹಾಸ್ಯ ಎಂಬುದು ಒಂದು ಲಗ್ಝುರಿಯೆ? ಉಳ್ಳವರು, ತಿಂದುಂಡು ಸುಖವಾಗಿರುವವರು ಮಾತ್ರ ಅನುಭವಿಸುವ ಒಂದು ವಿಶೇಷ ಸುಖವೆ? ಖಂಡಿತಾ ಇಲ್ಲ ಎಂದು ಘಂಟಾಘೋಷವಾಗಿ ಸಾರುತ್ತದೆ ಪಾ.ವೆಂ.ಆಚಾರ್ಯರ ನಿಜ ಜೀವನ. ಇಷ್ಟು ಒಳ್ಳೆಯ ಹಾಸ್ಯ ಲೇಖನಗಳನ್ನು ಬರೆದು ತಾವೂ ನಕ್ಕು ಇತರರನ್ನೂ ನಗಿಸಿ

ಕೃತಾರ್ಥರಾದ ಇವರು ಜೀವನದಲ್ಲಿ ನೊಂದವರು. ಉಡುಪಿ ಬ್ರಾಹ್ಮಣ ಪರಂಪರೆಯ ಕಡುಬಡತನದ ಮನೆಯೊಂದರಲ್ಲಿ ಹುಟ್ಟಿದವರು (ಜನನ:ಫೆಬ್ರವರಿ, ೧೯೧೫). ಎಸ್.ಎಸ್.ಎಲ್.ಸಿಯಲ್ಲಿ ಶಾಲೆಗೇ ಪ್ರಥಮ ಸ್ಥಾನ ಪಡೆದು ಪಾಸಾಗಿದ್ದರೂ ದಾರಿದ್ರ್ಯದ ಕಾರಣದಿಂದ ಕಾಲೇಜು ಮೆಟ್ಟಿಲು ತುಳಿಯಲಾಗದವರು. ಹೊಟ್ಟೆಪಾಡಿಗಾಗಿ ಶಾಲಾ ಮಾಸ್ತರಿಕೆ, ಅಂಗಡಿ ಲೆಕ್ಕ, ಮುದ್ರಣ ಕೆಲಸ ಎಲ್ಲ ಮಾಡಿದವರು. ಆದರೆ ದಹದಹಿಸುವ ಜ್ವಾಲಾಮುಖಿಯಂತಹ ಪ್ರತಿಭೆಯನ್ನು ಯಾವ ಬಡತನ ತಾನೆ ಮುಚ್ಚಿಡಲಾದೀತು! ಸಾಹಿತ್ಯ ಕ್ಷೇತ್ರದಲ್ಲಿ ಇವರ ಸಾಧನೆಗಳನ್ನು ನೋಡಿದಾಗ ಯಾರಿಗಾದರೂ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತಾಗುತ್ತದೆ. (ನೆಗಡಿಯಿಂದಲ್ಲ! ಆಶ್ಚರ್ಯದಿಂದ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವ ಬಗ್ಗೆ ಇದೊಂದು ಜೋಕು ಲಾಂಗೂಲಾಚಾರ್ಯರದ್ದು!)

ಆಚಾರ್ಯರು ಕನ್ನಡದ ಪ್ರಖ್ಯಾತ ಮಾಸ ಪತ್ರಿಕೆ 'ಕಸ್ತೂರಿ'ಗೆ ಹದಿನೆಂಟು ವರ್ಷಗಳ ಕಾಲ ಸಂಪಾದಕರಾಗಿದ್ದರು. ಈ ಅವಧಿಯಲ್ಲಿ ಇವರು ಕಸ್ತೂರಿಯಲ್ಲಿ ಬರೆಯುತ್ತಿದ್ದ 'ಪದಾರ್ಥ ಚಿಂತಾಮಣಿ' ಅಂಕಣವನ್ನು ನೆನೆಸಿಕೊಳ್ಳಬೇಕು. ಇವರ 'ಓದುಗರೊಡನೆ ಹರಟೆ' ಲೇಖನಗಳು ಕರ್ಮವೀರ ಹಾಗೂ ಸಂಯುಕ್ತ ಕರ್ನಾಟಕದಲ್ಲಿ 'ಲಾಂಗೂಲಾಚಾರ್ಯ' ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿದ್ದವು. ಇವರ ಹರಟೆಗಳನ್ನು ಓದುವಾಗಲೇ ಇವರು ಪ್ರಥಮ ದರ್ಜೆಯ ಚಿಂತಕರು ಎಂಬುದು ಗೊತ್ತಾಗುತ್ತದೆ. ತಿಳಿ ಹಾಸ್ಯದ ಹೊದಿಕೆಯ ಮರೆಯನ್ನೂ ಸೀಳಿ ಅವರ ಪ್ರಖರ ಚಿಂತನೆಯ ಹೊಳಪು ತನ್ನ ಇರವನ್ನು ತಿಳಿಯಪಡಿಸುತ್ತದೆ. ಇವರ ವಿಸ್ತಾರವಾದ ಜ್ಞಾನ ಸಂಪತ್ತು ಇವರಿಗೆ 'ಸರ್ವ ಕುತೂಹಲಿ-ಸರ್ವಜ್ಞಾಚಾರ್ಯ' ಎಂಬ ಬಿರುದನ್ನು ಅನಧಿಕೃತವಾಗಿ ತಂದುಕೊಟ್ಟಿದೆ. ಇದಲ್ಲದೆ ಜಯ ಕರ್ನಾಟಕ, ತುಷಾರ, ತರಂಗ, ಸುಗುಣಮಾಲಾ ಮುಂತಾದ ಪತ್ರಿಕೆಗಳಲ್ಲಿ ಇವರ ಹಲವು ವಿಧದ ಬರಹಗಳು ಪ್ರಕಟವಾಗಿವೆ. ಇವರ ಒಟ್ಟು ಬರವಣಿಗೆ ಹತ್ತು ಸಾವಿರ ಪುಟಗಳನ್ನು ಮೀರುವಷ್ಟಿದೆ ಎಂದರೆ ಇವರ ಅದಮ್ಯ ಉತ್ಸಾಹ, ಕಾರ್ಯಪರತೆ ಹೇಗಿದ್ದಿರಬಹುದು! ಪತ್ರಿಕೋದ್ಯಮದಲ್ಲಿ ತಮ್ಮ ಸಾಧನೆಗಳಿಗಾಗಿ ಪಿ.ಆರ್.ರಾಮಯ್ಯ ಪ್ರಶಸ್ತಿ ಮತ್ತು ಅಖಿಲ ಭಾರತ ಮಟ್ಟದಲ್ಲಿ ಗೊಯೆಂಕಾ ಪ್ರಶಸ್ತಿಗೆ ಪಾತ್ರರಾಗಿದ್ದಾರೆ. (ಗೊಯೆಂಕಾ ಪ್ರಶಸ್ತಿಪ್ರದಾನ ಸಮಾರಂಭಕ್ಕೆ ಕೆಲವೇ ದಿನಗಳ ಮುಂಚೆ ಪಾವೆಂ ಅವರು ಸ್ವರ್ಗಸ್ಥರಾದದ್ದು ನಿಜಕ್ಕೂ ವಿಷಾದನೀಯ) ಶ್ರೀಯುತರು ಹಾಸ್ಯಮಯ ಹರಟೆಗಳಲ್ಲದೆ ಸಾಹಿತ್ಯದ ಇತರ ಪ್ರಕಾರಗಳಲ್ಲೂ ಕೈಯಾಡಿಸಿದ್ದಾರೆ. 'ಕಸ್ತೂರಿ'ಗೆ ಇವರು ಬರೆದ ಲೇಖನಗಳೇ ೬೦೦ಕ್ಕೂ ಮೀರಿವೆ. ಜಗದ್ವಿಖ್ಯಾತ ವ್ಯಕ್ತಿಗಳ ಚರಿತ್ರೆ, ದೇಶ-ವಿದೇಶಗಳ ಪರಿಚಯ, ಜಗತ್ತಿನಲ್ಲಿ ನಡೆದ ವೈಚಿತ್ರ್ಯಗಳು, ಭಾರತದ ಆಗು-ಹೋಗುಗಳು ಮತ್ತು ವೈಜ್ಞಾನಿಕ ವಿಷಯಗಳು ಎಂದು ಅವುಗಳನ್ನು ವರ್ಗೀಕರಿಸಿದ್ದಾರೆ ಡಾ. ಶ್ರೀನಿವಾಸ ಹಾವನೂರ ಮತ್ತು ಎಂ.ವಿ.ಪಾಡಿಗಾರ ಅವರು.

ಪಾ.ವೆಂ. ಅವರು ಬರೆದ ಹರಟೆಗಳೇ ಸುಮಾರು ೫೦೦ ಇವೆ! ಈ ಹರಟೆಗಳನ್ನು ಓದುವಾಗ ನಮಗೆ ಒಮ್ಮೆಲೆ ಮನದಟ್ಟಾಗುವ ವಿಷಯವೆಂದರೆ ಇವರಿಗಿರುವ ಅಪಾರ ಜ್ಞಾನ ಸಂಪತ್ತು! ಸಂಸ್ಕೃತ, ಕನ್ನಡ, ಇಂಗ್ಲಿಷ್ ಕವಿಗಳ ಕವನದ ಸಾಲುಗಳು, ವೈಜ್ಞಾನಿಕ ಸಂಶೋಧನೆಗಳ ವಿಷಯ, ಸಮಕಾಲೀನ ವಿಚಾರಗಳು ಎಲ್ಲವೂ ಇವರ ಹರಟೆಗಳಲ್ಲಿ ಲೀಲಾಜಾಲವಾಗಿ ಹಾದು ಹೋಗುತ್ತವೆ! ನಾನು ಓದಿದ ಇತರ ಹಾಸ್ಯ ಲೇಖನಗಳು ಸಾಮಾನ್ಯವಾಗಿ ಘಟನಾ ಪ್ರಧಾನವಾಗಿರುತ್ತವೆ. (ಯಾವುದಾದರೂ ಒಂದು ಘಟನೆಯನ್ನು ತೆಗೆದುಕೊಂಡು ಅದನ್ನು ವರ್ಣಿಸುವಲ್ಲಿ ಹಾಸ್ಯವನ್ನು ಹೊರತರುವುದು) ಆದರೆ ಲಾಂಗೂಲಾಚಾರ್ಯರು ಹಾಗಲ್ಲ. ಇವರಿಗೆ ಘಟನೆಗಳೇ ಬೇಕೆಂದಿಲ್ಲ; ಹರಟೆಯ ವಸ್ತು ಬೀದಿ ಕಾಮಣ್ಣ ಆಗಿರಬಹುದು; ಮಂಗಗಳನ್ನು ಹೊರ ದೇಶಗಳಿಗೆ ರಫ್ತು ಮಾಡುವ ಸುದ್ದಿ ಆಗಿರಬಹುದು ಅಥವಾ ರಾತ್ರಿ ಕಚ್ಚುವ ಸೊಳ್ಳೆ ಇರಬಹುದು! ಪುರಾಣದ ದೇವತೆಗಳೂ ಇವರ ಹಾಸ್ಯದ ಮೊನಚಾದ ಬಾಣವನ್ನು ತಪ್ಪಿಸಿಕೊಳ್ಳಲಾಗಲಿಲ್ಲ! ಹರಟೆಗಳಲ್ಲಿನ ವಿಷಯ ವೈವಿಧ್ಯತೆ ನಮ್ಮನ್ನು ದಂಗು ಬಡಿಸುತ್ತದೆ.

ಈಗ ತಾನೆ ಲಾಂಗೂಲಾಚಾರ್ಯರ ಪ್ರಖರ ಚಿಂತನೆಯ ಬಗ್ಗೆ ಹೇಳಿದೆನಲ್ಲ. ಅದರ ಒಂದೆರಡು ಉದಾಹರಣೆಗಳನ್ನು ನೋಡಿ: 'ಬೀದಿ ಕಾಮಣ್ಣ' ಎಂಬ ಹರಟೆಯಲ್ಲಿ ಅವರು ಹೇಳುತ್ತಾರೆ: 'ತರುಣಿಯರು ಫ್ಯಾಶನ್ ಮಾಡಿಕೊಂಡು ಒಯ್ಯಾರದಿಂದ ಬೀದಿಗಳಲ್ಲಿ ಮೆರೆಯುವುದರಿಂದಲೇ ತರುಣರ ಕಿಡುಗಣ್ಣುಗಳಿಗೆ ಅವರು ಪಾತ್ರರಾಗುತ್ತಾರೆ. ಅವರು ಗರತಿಯರಂತಿದ್ದರೆ ಹುಡುಗರಾದರೂ ಪಾಪ, ಎಲ್ಲಿ ಅವರ ಗೋಜಿಗೆ ಹೋದಾರು ಎಂದು ಕೆಲವರ ಅಂಬೋಣ......ಗರತಿತನದ ಅಗತ್ಯದ ವಾದವನ್ನೇ ಸ್ವಲ್ಪ ಬೆಳಗಿ ಶ್ರೀಮಂತರು ದೊಡ್ಡ ಸುಂದರ ಮನೆಗಳಲ್ಲಿ ವಾಸವಾಗುತ್ತಿರುವುದರಿಂದಲೇ ಪಾಪ, ಕಳ್ಳರಿಗೆ ಪ್ರಲೋಭನ ಉಂಟಾಗಿ ದರೋಡೆ ಮಾಡುತ್ತಾರೆ ಎಂದು ಫ್ಯಾಶನ್ ವಿರೋಧಿಗಳು ತರ್ಕ ಹೂಡುವುದಿಲ್ಲ'.

ವಸ್ತುಸ್ಥಿತಿಯೆಂದರೆ ನಮ್ಮ ನಾಗರಿಕತೆಯ ಪ್ರಗತಿಗೆ ಸರಿಯಾಗಿ ನಾವು ನಮ್ಮ ಸಾಮಾಜಿಕ ನಿಲುವುಗಳನ್ನು ತಿದ್ದಿಕೊಂಡಿಲ್ಲ. ನಮ್ಮಲ್ಲಿ ನೂರಕ್ಕೆ ತೊಂಬತ್ತು ಜನರ ಮನಸ್ಸಿನಲ್ಲಿ ಸ್ತ್ರೀಯರು ಕೇವಲ ಉಪಭೋಗದ ಸಾಮಗ್ರಿಗಳು. ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಕೂಡಾ ನಮ್ಮಲ್ಲಿ ಗಂಡು, ಹೆಣ್ಣುಗಳ ಒಡನಾಟ ಕೇವಲ ಸಂತಾನೋತ್ಪಾದನೆಗೆ ಸೀಮಿತವಾಗಿದೆ. ಎಂತಹ ಪ್ರಗತಿಪರ ಚಿಂತನೆ– ಒಬ್ಬ ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬದಲ್ಲಿ ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಹುಟ್ಟಿದ ಒಬ್ಬ ವ್ಯಕ್ತಿಯಿಂದ!

'ಯಾರಿಗಾಗಿ ಬದುಕುತ್ತೇವೆ' ಎಂಬ ಪ್ರಬಂಧದಲ್ಲಿ ನಾವು ಮಾಡುವುದೆಲ್ಲ ಇನ್ನೊಬ್ಬರನ್ನು ಮೆಚ್ಚಿಸಲಿಕ್ಕಾಗಿ ಎಂಬ ವಾದವನ್ನು ಮಂಡಿಸುತ್ತಾ ಅವರು ನಲವತ್ತು ಐವತ್ತು ವರ್ಷಗಳ ಹಿಂದೆ ಹೇಳಿದ ಮಾತು ಇಂದಿನ 'ಕೊಳ್ಳುಬಾಕ ಯುಗ'ದಲ್ಲಿ ಎಷ್ಟು ನಿಜವಾಗಿದೆ ಎಂದು ನೋಡುವಾಗ ಅವರೊಬ್ಬ ದ್ರಷ್ಟಾರರುಎನಿಸಿಬಿಡುತ್ತದೆ! 'ಇನ್ನೊಬ್ಬರಿಗೆ ಇದೆ ಎಂಬೊಂದೇ ಕಾರಣಕ್ಕೆ ನಮಗೂ ಬೇಕು ಎನ್ನುವ ಭಾವನೆಯಲ್ಲಿ ವಿಪತ್ತು ಅಡಕವಾಗಿದೆ. ಆಧುನಿಕ ಜಗತ್ತಿನಲ್ಲಿ ಬೇಕಾಗಿ ಬೇಡಾಗಿ ಪ್ರಚುರಪಡುತ್ತಿರುವ ಅನೇಕ ಪದಾರ್ಥಗಳನ್ನು ಸುತ್ತಲಿನವರು ಪಡೆದಿರುವುದರಿಂದ ನಮಗೂ ಅದು ಬೇಕು ಎಂದು ನಮಗಾಗಲಿ ನಮ್ಮ ಕುಟುಂಬದವರಿಗಾಗಲಿ ಅನಿಸಿದಾಗ ಅದು ತೀವ್ರವಾದ ಮನೋವೇದನೆಯನ್ನುಂಟುಮಾಡುತ್ತದೆ. ಹೇಗಾದರೂ ಮಾಡಿ ಅದನ್ನು ಪಡೆದಹೊರತು ನಾವು ಮನುಷ್ಯರೇ ಅಲ್ಲ ಅನಿಸಿಬಿಡುತ್ತದೆ. ಇವೆಲ್ಲಕ್ಕೂ ಹಣ ಬೇಕು. ಹಣ ಇದ್ದರೆ ಕೊಳ್ಳುವುದರಲ್ಲಿ ಅನಾಹುತವಿಲ್ಲ. ಆದರೆ ಒಂದು ವಸ್ತು ನಮಗಿಲ್ಲವೆಂಬುದಕ್ಕಾಗಿ ತೀವ್ರವಾದ ಅಸಂತೋಷವನ್ನು ಅನುಭವಿಸುವುದಾದರೆ ಅದರಿಂದ ನಿವೃತ್ತಿ ಪಡೆಯುವುದಕ್ಕಾಗಿ ಅದಕ್ಕೆ ಬೇಕಾದ ಹಣವನ್ನು ಹೇಗಾದರೂ ಸಂಪಾದಿಸುವುದು ಅನಿವಾರ್ಯವಾಗುತ್ತದೆ. ನನ್ನ ಅಭಿಪ್ರಾಯದಲ್ಲಿ ದೇಶದಲ್ಲಿ ಇಂದು ಕಾಣಬರುವ ಅನೇಕ ದುರ್ವ್ಯಾಪಾರಗಳಿಗೆ (ಲಂಚ. ಕಳ್ಳಪೇಟೆ ಇತ್ಯಾದಿ) ಈ ಬಗೆಯ ತುಟ್ಟಿಯಾದ ಪರಾನುಕರಣೆಯೇ ಕಾರಣ'.

ಆ ಮಾತಂತಿರಲಿ. ಈ ಲೇಖನದ ಮುಖ್ಯ ಉದ್ದೇಶ ಪಾವೆಂ ಅವರ ಹಾಸ್ಯ ಪ್ರವೃತ್ತಿಯನ್ನು ಕುರಿತಾದ್ದರಿಂದ ಅದರ ಕಡೆ ಗಮನ ಹರಿಸೋಣ. ಅವರ ಹಾಸ್ಯದ ಮೂಲ ಸೆಲೆ ಎಲ್ಲಿ? ಎಂದು ಯೋಚಿಸುವಾಗ ಅದಕ್ಕೆ ಯಾವುದೇ ಒಂದು ನಿರ್ದಿಷ್ಟ ಮೂಲ ಇಲ್ಲ ಎಂಬುದು ನಮಗೆ ಸ್ಪಷ್ಟವಾಗುತ್ತದೆ. ಇವರ ಹಾಸ್ಯ ಹಲವು ಹತ್ತು ದಿಕ್ಕುಗಳಿಂದ ಹಾಯ್ದು ಬರುತ್ತದೆ. ಅವರ 'ಮಂಗಾಯಣ' ಪ್ರಬಂಧದಿಂದ ಆಯ್ದ ಈ ಕೆಳಗಿನ ಪ್ಯಾರಾ ಇದಕ್ಕೆ ನಿದರ್ಶನ. (ಮಂಗಗಳನ್ನು ಹೊರ ದೇಶಗಳಿಗೆ ನಿರ್ಯಾತ ಮಾಡುತ್ತಿದ್ದಾರೆಂಬ ಸುದ್ದಿ ಬಂದಾಗ ಬರೆದ ಪ್ರಬಂಧವಿದು)

'ನಾವಿಂದು ವನಮಹೋತ್ಸವದಿಂದ ಪ್ರತಿ ವರ್ಷ ಲಕ್ಷಗಟ್ಟಲೆ ವೃಕ್ಷಗಳನ್ನು ನೆಡುತ್ತಿದ್ದೇವೆ.....ಇವುಗಳಿಗಾಗಿ ಸಾಕಷ್ಟು ಮಂಗಗಳಿವೆಯೋ ಎಂದು ನಾವು ಎಂದಾದರೂ ಯೋಚಿಸಿದ್ದೇವೆಯೆ? ಪತಿಗಂ ಪತ್ನಿಯೆ ಭೂಷಣಂ, ರಜಕಗಂ ಸುಖ್ಯಾತ ಗಾರ್ಧಭ ಸಂತತಿ ತಾಂ ಭೂಷಣಂ, ರಾಜಕಾರಣಿ ಕುಲಕ್ಕಂ ಸುಳ್ಳೆ ಸಂಭೂಷಣಂ, ಮತಿಹೀನಗಧಿಕ ಪ್ರಸಂಗಮೆ ಗಡಾ ಸೌಭೂಷಣಂ, ಮಂಗ ಸಂಗತಿಯೇ ವೃಕ್ಷಕ್ಕೆ ಭೂಷಣಂ ಹರಹರಾ ಆಗುಂಬೆ ಸೋಮೇಶ್ವರಾ' ಎಂದು ಕವಿ ಹೇಳಿದ್ದು ಸುಮ್ಮನೆ

ಅಲ್ಲ. ಮರಗಳನ್ನು ಬೆಳೆಸಿ ಮಂಗಗಳು ಸಾಕಷ್ಟಿಲ್ಲದಾಗುವ ಪರಿಸ್ಥಿತಿಯು ಮನೆಗಳನ್ನು ಕಟ್ಟಿಸಿ ಅದರಲ್ಲಿರಲು ಮನುಷ್ಯರಿಲ್ಲದ ಪರಿಸ್ಥಿತಿಯಷ್ಟೇ ವಿಕಟವೂ ಹಾಸ್ಯಾಸ್ಪದವೂ ಆಗುವುದು. ಅಥವಾ ದೇವರಿಲ್ಲದ ಗುಡಿಯೂ, ಸತಿಯಿಲ್ಲದ ಪತಿಯೂ, ಮಂಗವಿಲ್ಲದ ಮರವೂ ಒಂದೇ ವರ್ಗಕ್ಕೆ ಸೇರುವುವೆನ್ನಲು ಹಿಂಜರಿಯಬೇಕಾಗಿಲ್ಲ. ನಮ್ಮ ಅರಣ್ಯಗಳು ನಿರ್ಮರ್ಕಟವಾಗುವಂಥ ಪರಿಸ್ಥಿತಿಯನ್ನು ನಾವೆಂದೂ ಸ್ವಾಗತಿಸಲಾರೆವು'.

ಮೇಲಿನ ಪ್ಯಾರಾದಲ್ಲಿ ಹಾಸ್ಯ ವಿವಿಧ ದಿಕ್ಕುಗಳಿಂದ ಹರಿದು ಬಂದಿರುವುದನ್ನು ಗಮನಿಸಿ. ಮರಗಳಿಗೆ ಸಾಕಷ್ಟು ಮಂಗಗಳಿಲ್ಲವಾಗುತ್ತವೆ ಎಂಬ ವಕ್ರ ತುಂಡೋಕ್ತಿ ಒಂದು, ತಮ್ಮದೇ ಆದ ಸೋಮೇಶ್ವರ ಶತಕವನ್ನು ರಚಿಸಿ ಅದರಲ್ಲಿ ಅಗಸ-ಕತ್ತೆ, ರಾಜಕಾರಣಿ-ಸುಳ್ಳು, ಮತಿಹೀನ-ಅಧಿಕಪ್ರಸಂಗ, ಮಂಗ ಸಂತತಿ-ವೃಕ್ಷ ಹೀಗೆ ಹಾಸ್ಯಮಯವಾಗಿ ಎರಡೆರಡು ಪದಗಳಿಗೆ ಸಂಬಂಧ ಕಲ್ಪಿಸಿರುವುದು ಮತ್ತೊಂದು, ಮಂಗಗಳಿಲ್ಲದ ವೃಕ್ಷ ಹಾಗೂ ಮನುಷ್ಯರಿಲ್ಲದ ಮನೆಗಳಿಗೆ ಮಾಡಿರುವ ವಿಲಕ್ಷಣ ಹೋಲಿಕೆ, 'ನಿರ್ಮರ್ಕಟ' ಎಂಬ ಹೊಸ ಪದವನ್ನೇ ಹುಟ್ಟು ಹಾಕಿದ್ದು- ಹೀಗೆ ಹಾಸ್ಯಕ್ಕೆ ಹಲವು ಸೆಲೆಗಳು ಕಂಡುಬರುತ್ತವೆ; ಕೇವಲ ಒಂದು ತುಣುಕಿನಲ್ಲಿ! ಎಲ್ಲಕ್ಕಿಂತ ತಮಾಷೆ ಎಂದರೆ ವಿಷಯವನ್ನು ತಮ್ಮದೇ ಆದ ಅಣಕು ಗಾಂಭೀರ್ಯದ ಶೈಲಿಯಲ್ಲಿ 'ಆಳ'ವಾಗಿ ಪರಿಶೀಲನೆ ಮಾಡುವ ಸೋಗು! ಇವೆಲ್ಲದರ ಮೂಲಕ ಅವರು ಒಂದು ವಿಶೇಷ 'ಲಾಂಗೂಲಾಚಾರ್ಯ ಟಚ್' ಕೊಡುತ್ತಾರೆ ತಮ್ಮ ಪ್ರಬಂಧಗಳಿಗೆ. ಪ್ರೊ. ಅ.ರಾ. ಮಿತ್ರ ಅವರ ಹೇಳಿಕೆ: ವಿಷಯವನ್ನು ಹರಡುವುದರಲ್ಲಿ, ಭಾಷೆಯ ಬಳಕೆಯಲ್ಲಿ, ಪ್ರಸಂಗೋದ್ಧರಣದಲ್ಲಿ, ಉಪಮಾವಿಧಾನದಲ್ಲಿ ಈ ಎಲ್ಲದರಲ್ಲೂ ಅವರ ಚೇಷ್ಟೆಯ ಬೇರುಗಳು ಕಾಣಿಸುತ್ತವೆ. ಆದ್ದರಿಂದಲೇ ಅವರು ಕನ್ನಡದಲ್ಲಿ ವಿಶಿಷ್ಟ ಬಗೆಯ ಹರಟೆಗಾರರಾಗಿ ಉಳಿದಿದ್ದಾರೆ'. (ಆಧಾರ ೧)

ಮುಂಚೆ ಹೇಳಿದಂತೆ ಲಾಂಗೂಲಾಚಾರ್ಯರು ಅನೇಕ ವೈವಿಧ್ಯಮಯವಾದ ವಿಷಯಗಳ ಬಗ್ಗೆ ಪ್ರಬಂಧಗಳನ್ನು ಬರೆದಿದ್ದಾರಾದರೂ ಕೆಲವು ವಿಷಯಗಳು ಅವರ ಆಸಕ್ತಿಯನ್ನು ಕೆಣಕುತ್ತವೆ. ಅವರ ಅಭಿರುಚಿಗೆ ಹತ್ತಿರವಾದ ಕೆಲವು ವಸ್ತುಗಳ ಮೇಲೆ ಲಾಂಗೂಲರು ಮತ್ತೆ ಮತ್ತೆ ಹಲವಾರು ಹರಟೆಗಳನ್ನು ಬರೆದಿದ್ದಾರೆ. 'ಹೆಂಗಸರು' ಎಂಬ ವಿಷಯ ಅವರ ಹರಟೆಗಳಿಗೆ ಪ್ರಿಯವಾದ ವಸ್ತು. ಹೆಂಗಸರ ಸ್ವಭಾವ ದುರೂಹ್ಯವಾಗಿರುವುದೇ ಇದಕ್ಕೆ ಕಾರಣವಿರಬಹುದು. ಹೆಂಗಸರು ಹೇಗೆ ದುರೂಹ್ಯರಾದವರು ಎಂಬುದನ್ನೂ ಅವರೇ ಹಲವು ಬಗೆಯಲ್ಲಿ ಪ್ರತಿಪಾದಿಸುತ್ತಾರೆ. ಹೆಂಗಸರನ್ನು ಮತ್ತು ಅವರ ಸ್ವಭಾವವನ್ನು ವರ್ಣಿಸಲು ಅವರು ತಮ್ಮ ಅಸಾಧಾರಣವಾದ ನೆನಪಿನ ಶಕ್ತಿಯಿಂದ ಅನೇಕ ಇಂಗ್ಲಿಷ್, ಕನ್ನಡ ಮತ್ತು ಸಂಸ್ಕೃತ

ಕವಿಗಳ ಸಾಲುಗಳನ್ನು ಅಲ್ಲಲ್ಲಿ ಉದ್ಧರಿಸುತ್ತಾರೆ. ಕೆಲವೊಮ್ಮೆ ಇಂಗ್ಲಿಷ್ ಕವನಗಳ ಸಾಲುಗಳನ್ನು ಕನ್ನಡಕ್ಕೆ ಅನುವಾದಿಸಿಯೂ ಇದ್ದಾರೆ. 'ಅಮ್ಮಾವ್ರ ಗಂಡಾಯಣ' ಪ್ರಬಂಧದ ಈ ಕೆಳಗಿನ ತುಣುಕನ್ನು ಗಮನಿಸಿ:

'ಆ ಕಿಡಿಗೇಡಿ ಕವಿ, ಹಲವು ಹೆಣ್ಣುಗಳನ್ನು ಬೇಟೆಯಾಡಿ ಬಲ್ಲ ಲಾರ್ಡ್ ಬೈರನ್ ಇದ್ದನಲ್ಲ. ಅವನ ಅಭಿಪ್ರಾಯ ಕೇಳಿ ನಮ್ಮ ಕಲಿತ ಅಮ್ಮಣ್ಣಿಯರು ಉಬ್ಬಬಹುದು

But-Oh! ye lords of ladies intellectual,
inform us truly, have they not
hen-pecked you all?
ಕಲಿತ ಮಡ್ಡಮ್ಮಗಳ ಪುರುಷರೇ, ಹೇಳಿ ನೀವು ಸತ್ಯ-
ಅವರೆಲ್ಲ ನಿಮ್ಮನ್ನು ಕುಕ್ಕುತ್ತಿರುವರೋ ಇಲ್ಲವೋ ನಿತ್ಯ?
ಅಮ್ಮಾವ್ರು ಆಗುವವರು ಇಂಟೆಲೆಕ್ಚುವಲ್ಲು-ಅಥವಾ ಕಲಿತವರು'.

ಇಷ್ಟು ಹೇಳಿ ಮರು ವಾಕ್ಯದಲ್ಲೇ ಪ್ರಸಿದ್ಧ ಇಂಗ್ಲಿಷ್ ವಿದ್ವಾಂಸ ಡಾಕ್ಟರ್ ಜಾನ್‌ಸನ್ ಬಗ್ಗೆ ಪ್ರಸ್ತಾಪಿಸುತ್ತಾರೆ.

ಡಾಕ್ಟರ್ ಜಾನ್‌ಸನ್ ಪ್ರಕಾರ ಗ್ರೀಕ್ ಮಾತಾಡಬಲ್ಲ ಹೆಂಡಂದಿರಿಗಿಂತ ರುಚಿಯಾದ ಅಡುಗೆ ಮಾಡಬಲ್ಲ ಹೆಂಗಸರು ಗಂಡಸರಿಗೆ-ಅಂದರೆ ಅವನಿಗೆ- ಇಷ್ಟ! ಆದ್ದರಿಂದ ಜಾನ್‌ಸನ್ ತನ್ನ ತಾಯಿಯ ವಯಸ್ಸಿನವಳೊಬ್ಬಳನ್ನು ಮದುವೆಯಾದ.

ತಕ್ಷಣವೇ ಸಂಸ್ಕೃತಕ್ಕೆ ಜಿಗಿಯುತ್ತಾರೆ!

'ಅಮ್ಮಾವ್ರುಗಳೆಲ್ಲ ಓದಿದವರಾಗಬೇಕಿಲ್ಲ. ಒಂದಕ್ಷರ ಓದಲಾರದ ಅಮ್ಮಣ್ಣಿಯರು ತರ್ಕತೀರ್ಥ ಗಂಡಂದಿರ ಎದೆಗಳನ್ನು ಆರು-ಪಾರಾಗುವಂತೆ ಕುಕ್ಕುವಷ್ಟು ಉದ್ದ ಕೊಕ್ಕುಳ್ಳವರಾಗಿದ್ದುದನ್ನು ನಾನು ನೋಡಿದ್ದೇನೆ. ಅದಕ್ಕೇ ಹೆಂಗಸರನ್ನು ಬಲ್ಲ ಸಂಸ್ಕೃತ ಕವಿಗಳು 'ಸ್ತ್ರೀಣಾಂ ಅಶಿಕ್ಷಿತ ಪಟುತ್ವಂ' ಎಂದಿದ್ದಾರೆ. ಈ ವಿಷಯದಲ್ಲಿ ಅಶಿಕ್ಷಿತರಾದಷ್ಟೂ ಪಟುತ್ವ ಹೆಚ್ಚಾಗಿರುವುದುಂಟು'.

ನಿಜವಾಗಿಯೂ ಅವರ ತಲೆಯಲ್ಲಿ ಎಷ್ಟೆಲ್ಲ ಸಂಗತಿಗಳು ತುಂಬಿರಬಹುದು! ಮತ್ತು ಆ ಸಂಗತಿಗಳನ್ನು ತಮ್ಮ ವಿತಂಡ ವಾದವನ್ನು ಮಂಡಿಸಲು ಹೇಗೆ ಉಪಯೋಗಿಸುತ್ತಾರೆ! ಎಂದು ಆಶ್ಚರ್ಯವಾಗುತ್ತದೆ.

'ಹೆಂಗಸರನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕು' ಎಂಬ ಪ್ರಬಂಧದಲ್ಲಿ ಅವರು

'ಒಬ್ಬ ಸ್ತ್ರೀ ಇನ್ನೊಬ್ಬ ಸ್ತ್ರೀಯನ್ನು ಮೆಚ್ಚುವುದಿಲ್ಲ' ಎಂಬ ತಮ್ಮ ವಿತಂಡ ವಾದವನ್ನು ಈ ರೀತಿಯಾಗಿ ಪ್ರತಿಪಾದಿಸುತ್ತಾರೆ.

'ಒಬ್ಬ ಹೆಂಗಸು ಇನ್ನೊಬ್ಬಳನ್ನು ಮೆಚ್ಚುವುದಿಲ್ಲ ಎಂಬ ಮಾತಿನಲ್ಲಿ ತಥ್ಯವಿದೆ. ಒಬ್ಬ ಹೆಂಗಸಿಗೆ ಇನ್ನೊಬ್ಬ ಹೆಂಗಸು ಒಬ್ಬ ನವ್ಯ ಕವಿಗೆ ಇನ್ನೊಬ್ಬ ನವ್ಯ ಕವಿಯ ಕವಿತೆ ಅರ್ಥವಾಗುವಷ್ಟೇ ಅರ್ಥವಾಗುವುದು (ಹೀಗೆನ್ನುತ್ತಾ ಅವರು ನವ್ಯ ಕವಿ ಹಾಗೂ ಹೆಂಗಸು ಇಬ್ಬರನ್ನೂ ಒಟ್ಟಿಗೆ ಗೇಲಿ ಮಾಡುತ್ತಾರೆ!). ಇಬ್ಬರು ಹೆಂಗಸರು ಮಾತಾಡುವುದನ್ನು ನೀವು ಕೇಳಿದರೆ ಅವರಲ್ಲಿ ಒಬ್ಬರ ಭಾಷೆ ಇನ್ನೊಬ್ಬರಿಗೆ ಅರ್ಥವಾಗುವುದೇ ಎಂಬ ಸಂಶಯ ಬಂದೇ ಬರುತ್ತದೆ. ಆದರೆ ನನ್ನ ಎಣಿಕೆ ಪೂರ್ತಿ ತಪ್ಪಾಗಿದ್ದರೂ ಇರಬಹುದು. ಹೆಂಗಸರು ಹೆಂಗಸರನ್ನು ಮೆಚ್ಚದಿರಲು ಹೆಂಗಸು ಹೆಂಗಸಿಗೆ ಪೂರ್ತಿ ಅರ್ಥವಾಗುತ್ತಿರುವುದೇ ಕಾರಣವಾಗಿದ್ದರೂ ಇರಬಹುದು'.

'ಅಥವಾ ಈ ಅಪ್ರೀತಿಗೆ ಹೆಂಗಸರ ವಾಚಾಳಿತನ ಕಾರಣವಾಗಿರುವ ಸಂಭವವೂ ಇಲ್ಲದಿಲ್ಲ. ಒಬ್ಬ ಗಂಡಸು ಮತ್ತು ಒಬ್ಬ ಹೆಂಗಸು ಮಾತಾಡುತ್ತಿದ್ದರೆ ಕೇಳುವುದನ್ನೆಲ್ಲ ಅವನೂ ಹೇಳುವುದನ್ನೆಲ್ಲ ಅವಳೂ ಮಾಡುತ್ತಿರುತ್ತಾರೆ. ಆದರೆ ಇಬ್ಬರು ಹೆಂಗಸರು ಮಾತಾಡುತ್ತಿದ್ದರೆ ಹೇಳುವುದರ ಗುತ್ತಿಗೆಗಾಗಿ ಇಬ್ಬರಲ್ಲೂ ಸ್ಪರ್ಧೆಯೇಳುತ್ತದೆ. ಇದು ಪರಸ್ಪರ ಮೆಚ್ಚಿಕೆಗೆ ಅಷ್ಟು ಹಿತಾವಹವಲ್ಲ ತಾನೇ?'

ಇಷ್ಟೆಲ್ಲ ಗೇಲಿ ಮಾಡಿ ಕೊನೆಗೂ ಒಬ್ಬ ಹೆಂಗಸನ್ನು ಪ್ರೇಮಿಸುತ್ತಿರುವ ರಸಿಕನಾಗಿ ಪ್ರಬಂಧವನ್ನು ಹೀಗೆ ಮುಕ್ತಾಯಗೊಳಿಸುತ್ತಾರೆ:

'ಸುದೈವದಿಂದ ಹೆಂಗಸು ನಿಮಗೆ ಅರ್ಥವಾಗದೇನೇ ನಿಮ್ಮನ್ನು ಸಂತೋಷಗೊಳಿಸಬಲ್ಲಳು. ಅಜ್ಞಾತದ ಮೋಹಕತೆಯನ್ನೆಲ್ಲ ಅವಳು ತನ್ನಲ್ಲಿ ಅಳವಡಿಸಿಕೊಂಡಿದ್ದಾಳೆ. ಅದಕ್ಕೇ ನಿಮಗೆ ಉಪದೇಶಿಸಿದ್ದು, ಹೆಂಗಸನ್ನು ಅರಿಯಬೇಕಾದರೆ ಅಥವಾ ಅರಿಯದಿರಬೇಕಾದರೆ ಒಬ್ಬಳನ್ನು ಮದುವೆಯಾಗಿ ಅಂತ!'

'ಭಾವೀ ಜಗತ್ತಿನಲ್ಲಿ ಮಹಿಳೆಯರ ಸ್ಥಾನ' ಎಂಬ ಲೇಖನ ಸಂದರ್ಶನ ರೂಪದಲ್ಲಿದೆ. ಇದೊಂದು ಲೇಖನದಲ್ಲೇ ಪಾ.ವೆಂ ಅವರು ಶಬ್ದಗಳ ದ್ವಂದ್ವಾರ್ಥವನ್ನು ಹಾಸ್ಯಕ್ಕಾಗಿ ಬಳಸುವುದು, ತಮ್ಮ ವೈಜ್ಞಾನಿಕ ಜ್ಞಾನವನ್ನು ಲೇಖನಗಳಲ್ಲಿ ಹಾಸ್ಯಮಯವಾಗಿ ತರುವುದು ಎಲ್ಲವನ್ನೂ ಕಾಣಬಹುದು. ಈ ಕೆಳಗಿನ ಪ್ರಶ್ನೋತ್ತರ ನೋಡಿ:

ಪ್ರಶ್ನೆ(ಸಂದರ್ಶಕನಿಂದ: ದೇಶೋದ್ಧಾರದಲ್ಲಿ ಹೆಂಗಸರಿಗೆ ಪಾತ್ರ ದೊರೆಯಬೇಕೆಂಬ ಬಗ್ಗೆ ನಿಮ್ಮ ಅಭಿಪ್ರಾಯವೇನು, ಲಾಂಗೂಲಾಚಾರ್ಯರೆ?'

ಲಾಂಗೂಲ: ದೇಶೋದ್ಧಾರ ಮಾತ್ರವಲ್ಲ, ಮನೆ ಉದ್ಧಾರ, ಊರಿನ ಉದ್ಧಾರ, ಲೋಕೋದ್ಧಾರ ಎಲ್ಲದರಲ್ಲಿಯೂ ಹೆಂಗಸರಿಗೆ ಪ್ರಧಾನಪಾತ್ರ ಇರಬೇಕೆಂದು ನಾನು ಹೇಳುತ್ತೇನೆ. ಮನೆಯಲ್ಲಿ ನಾನಾ ತರದ ಪಾತ್ರೆಗಳನ್ನು ತೊಳೆದು ಜಳಜಳ ಇಡುವ ಸಾವಿರಾರು ವರ್ಷಗಳ ಅನುಭವ ಹೆಂಗಸರಿಗೆ ಇರುವುದರಿಂದ ಉದ್ಧಾರದ ಪಾತ್ರಗಳೂ ಅವರಿಗೆ ಸಿಗಬೇಕಾದ್ದು ಸ್ವಾಭಾವಿಕ.

'ಪಾತ್ರ' ಎಂಬ ಪದವನ್ನು ಅದರ ಎರಡೂ ಅರ್ಥಗಳಲ್ಲಿ ಬಳಸಿ ಎಷ್ಟು ಚೆನ್ನಾಗಿ ಹಾಸ್ಯವನ್ನು ಹೊಮ್ಮಿಸುತ್ತಾರೆ!

ಮುಂದೆ ಇದೇ ಲೇಖನದಲ್ಲಿ ಅವರು ಹೇಳುವುದು: 'ಹೆಣ್ಣು ಅಬಲೆಯಲ್ಲವಂತೆ; ಜೀವಶಾಸ್ತ್ರ, ಶರೀರ ಶಾಸ್ತ್ರ, ಭ್ರೂಣ ಶಾಸ್ತ್ರ ಎಲ್ಲವೂ ಹೆಣ್ಣು ಗಂಡಿಗಿಂತ ಸಬಲೆ ಅಂತ ಹೇಳುತ್ತದಂತೆ. (ಈ ಭ್ರೂಣ ಶಾಸ್ತ್ರ ಎಂಬ ಪದ ಲಾಂಗೂಲಾಚಾರ್ಯರೇ ಹುಟ್ಟು ಹಾಕಿದ್ದಿರಬಹುದೆ!) ಹುಟ್ಟುವ ಮೊದಲು ಗರ್ಭದಲ್ಲಿ ಸಾಯೋ ಗಂಡು ಪಿಂಡಗಳ ಸಂಖ್ಯೆ ಜಾಸ್ತಿ. ಹೆಣ್ಣು ಭ್ರೂಣ ಸಾಯೋದು ಕಮ್ಮಿಯಂತೆ. ಹುಟ್ಟಿದ ಮೇಲೂ ಗಂಡಿಗೆ ಬರೋ ರೋಗಗಳು ಜಾಸ್ತಿ, ಹೆಣ್ಣಿಗೆ ಕಡಿಮೆಯಂತೆ. ಹಾಗಾಗಿ ಸಬಲೆಯಾದ ಹೆಣ್ಣಿಗೆ ದೇಶೋದ್ಧಾರದ ಕೆಲಸ ಕೊಡಬೇಕಂತೆ. ಯಾಕಂದರೆ ಅವಳ ಕೋಮಲ ಮೃದು ಹೃದಯದ ಪ್ರೇಮಲ ಭಾವನೆಗಳು ರಾಷ್ಟ್ರಕ್ಕೆ ಹಿತಕಾರಿ ಅಂತಲ್ಲ! ಇಷ್ಟು ದಿನ ಗಂಡು ಕೊಲೆ. ಸುಲಿಗೆ, ಶೋಷಣೆ ಮುಂತಾದ ಥ್ರಿಲ್ ಅನುಭವಿಸಿದ್ದಾನೆ. ಈಗ ಹೆಂಗಸರ ಸರದಿಯಂತೆ!

ಅಂತೂ ತಮ್ಮ ವಿಚಿತ್ರ ತರ್ಕ ಸರಣಿಯನ್ನು ವಿಜ್ಞಾನದ ಎಲ್ಲ ಪುರಾವೆಗಳನ್ನೂ ಒದಗಿಸಿ ಮುಂದುವರಿಸಿಕೊಂಡು ಹೋಗಿ ಕೊನೆಗೂ ತಾವು ಕಂಡಂತೆ 'ಕುದುರೆಗೆ ಮೂರೇ ಕಾಲು' ಅಂತ ಸಾಧಿಸಿಯೇ ಬಿಡುತ್ತಾರೆ! ಹೆಂಗಸರಲ್ಲದೆ ಪುರಾಣದ ದೇವತೆಗಳು, ರಾಜಕೀಯ ಧುರೀಣರು, ಪ್ರಾಣಿ, ಕ್ರಿಮಿ ಕೀಟಗಳು ಕೂಡಾ ಅವರು ಹಾಸ್ಯಕ್ಕೆ, ಹರಟೆಗೆ ಮತ್ತೆ ಮತ್ತೆ ಬಳಸುವ ವಸ್ತುಗಳಾಗಿವೆ. ಯಾವ ವಸ್ತುವೇ ಆದರೂ ತಮ್ಮ ಅಸಾಮಾನ್ಯ ಸ್ಮರಣ ಶಕ್ತಿಯಿಂದ ಅದಕ್ಕೆ ಸಂಬಂಧಪಟ್ಟ ಅಂಕಿ ಅಂಶ, ಪುರಾವೆಗಳನ್ನು ಎಲ್ಲೆಲ್ಲಿಂದಲೋ ತಂದು ತಮ್ಮ ವಾದವನ್ನು ಸಮರ್ಥಿಸಿಕೊಳ್ಳುವುದರಲ್ಲಿ ಅವರು ನಿಸ್ಸೀಮರು. ಅದಕ್ಕೇ ಅ.ರಾ.ಮಿತ್ರ ಅವರು ಹೇಳಿರುವುದು: 'ಲಾಂಗೂಲಾಚಾರ್ಯರು ತಮ್ಮ ನೆನಪಿನ ಪ್ರಭೆಯಿಂದ ಯಾವ ವಿಷಯದ ಕತ್ತಲಿಗಾದರೂ ಧಾಳಿಯಿಡಬಲ್ಲವರಾಗಿದ್ದಾರೆ. ಕನ್ನಡದ ಎಲ್ಲ ಭಾಷಾ ಪ್ರಭೇದಗಳ ಅನುಭವಜನ್ಯ ತಿಳುವಳಿಕೆ, ಹಳಗನ್ನಡದ ಅಧ್ಯಯನ, ಸಂಸ್ಕೃತ, ಕನ್ನಡ, ಇಂಗ್ಲಿಷ್ ಕಾವ್ಯಗಳ ಸಾರೋಕ್ತಿಗಳ ತಲಸ್ಪರ್ಶಿಯಾದ ಜ್ಞಾನ, ಭಾಷೆಯನ್ನು, ವಿಚಾರವನ್ನು

ಹೇಗೆಂದರೆ ಹಾಗೆ ತಿರುಚಬಲ್ಲ ಸವ್ಯಸತ್ವ–ಇವುಗಳಿಂದ ಅವರ ಪ್ರಬಂಧ–ಹರಟೆಗಳು ಕಂಪು ಪಡೆದಿವೆ'. (ಆಧಾರ ೨)

ಸಮಕಾಲೀನ ಜೀವನದ ಆಗುಹೋಗುಗಳನ್ನು, ವಿಶಿಷ್ಟ ಸಮಸ್ಯೆಗಳನ್ನು, ಕಟುಸತ್ಯಗಳನ್ನು ಹಾಸ್ಯದ ಲೇಪ ಕೊಟ್ಟು ತಮ್ಮ ಲೇಖನಗಳಲ್ಲಿ ಹೊಮ್ಮಿಸುವುದು ಲಾಂಗೂಲಾಚಾರ್ಯರ ಇನ್ನೊಂದು ಹೆಗ್ಗಳಿಕೆ. ಸಾಮಾನ್ಯ ಜನರ ಭಾವನೆಗಳನ್ನು, ಚಿಂತನೆಗಳನ್ನು ಈ ಲೇಖನಗಳು ಸಮರ್ಥವಾಗಿ ಸೆರೆ ಹಿಡಿಯುತ್ತವೆ. ಉದಾಹರಣೆಗೆ ವಿಧಾನಸೌಧದಲ್ಲಿ ಅಧಿಕಾರಿಗಳ ಕೈ ಬೆಚ್ಚಗಾಗಿಸದೇ ಯಾವ ಕೆಲಸವೂ ನಡೆಯದು ಎಂಬುದು ಎಲ್ಲರಿಗೂ ಗೊತ್ತಿರುವ ಸಾರ್ವತ್ರಿಕ ಸತ್ಯ. ಅದನ್ನು ಹಾಸ್ಯಮಯವಾಗಿ ವರ್ಣಿಸುವ ಲೇಖನ 'ದೇವರ ಕೆಲಸ'. ಕೆಂಗಲ್ ಹನುಮಂತಯ್ಯನವರು ವಿಧಾನಸೌಧದ ಒಂದು ಸಿಂಹ ದ್ವಾರದ ಮೇಲೆ 'ಸರಕಾರದ ಕೆಲಸ ದೇವರ ಕೆಲಸ' ಎಂದು ಕೆತ್ತಿಸಿದ್ದರಂತೆ. ಅದೇ ಲಾಂಗೂಲರ ಹಾಸ್ಯಕ್ಕೆ ಗ್ರಾಸವಾಗುತ್ತದೆ. ಸರಿಯಾಗಿ ದಕ್ಷಿಣೆ ಕೊಡುವ ಭಕ್ತರು ಇಲ್ಲದಿದ್ದರೆ ಪೂಜಾರಿಗಳು ದೇವರಿಗೆ ಒಂದು ತಂಬಿಗೆ ನೀರು ಹೊಯ್ದು, ನೈವೇದ್ಯ 'ತೋರಿಸಿ' ಆರತಿ ದರ್ಶನ ಮಾಡಿಸಿ ಪೂಜೆ ಮುಗಿಸಿಬಿಡುತ್ತಾರಂತೆ. ಅದೇ ಭರ್ಜರಿ ದಕ್ಷಿಣೆ ಕೊಡುವ ಭಕ್ತಾದಿಗಳಿದ್ದರೆ ಸಾಂಗವಾಗಿ ಪೂಜೆ ನಡೆಯುತ್ತಂತೆ. ಅದಕ್ಕೂ 'ದಕ್ಷಿಣೆ' ಬೇಕಾಗಿರುವ ವಿಧಾನಸೌಧದ ಕೆಲಸಕ್ಕೂ ಸಾಮ್ಯ ಇರುವುದು ಮನಸ್ಸಿಗೆ ಖಚಿತವಾಗಿಯೇ ಕೆಂಗಲ್ ಹನುಮಂತಯ್ಯ 'ಸರಕಾರದ ಕೆಲಸ ದೇವರ ಕೆಲಸ' ಅಂತ ಶಾಸನ ಕೆತ್ತಿಸಿದರು ಅಂತ ಲಾಂಗೂಲರು ಹೇಳುವುದು! ಮುಂದೆ ನಿಜಲಿಂಗಪ್ಪನವರ ಕಾಲದಲ್ಲಿ ಆ ಶಾಸನವನ್ನು ಅಳಿಸಿ 'ಸತ್ಯಮೇವ ಜಯತೇ' ಎಂದು ಕೆತ್ತಿಸಿದರಂತೆ. 'ಬಾಗಿಲಿನ ಶಾಸನವನ್ನೋದಿ ಸತ್ಯಕ್ಕೇ ಜಯವಾಗುತ್ತದೆ ಎಂಬ ಭ್ರಮೆಯಿಂದ ಪ್ರಜೆಗಳು ಒಳಹೊಕ್ಕರೆ ಗತಿಯೇನು? ಅಥವಾ ಇಲ್ಲಿ ಜಯ ಹೊಂದಿದ್ದೇ ಸತ್ಯ ಎಂದು ನಾವು ಭಾವಿಸಬೇಕೆ?' ಎಂದು ಪ್ರಶ್ನೆ ಹಾಕುತ್ತಾರೆ ಲಾಂಗೂಲಾಚಾರ್ಯರು.

ಕಬ್ಬಿನಿಂದ ರಸ ಹೊಮ್ಮಿಸಿದಂತೆ ಭಾಷೆಯನ್ನು ಹೇಗೆಂದರೆ ಹಾಗೆ ತಿರುಚಿ ಹಾಸ್ಯವನ್ನು ಹೊಮ್ಮಿಸುವ ಲಾಂಗೂಲಾಚಾರ್ಯರ ಸವ್ಯಸಾಚಿತ್ವಕ್ಕೊಂದು ಉದಾಹರಣೆ ಇಲ್ಲಿದೆ.

'ಅನನುಕರಣೀಯ ಎಚ್.ವಿ.ಕಾಮತರು ಕಳೆದ ವಾರ ಸಂಸತ್ತಿನಲ್ಲಿ ಇಂಗ್ಲಿಷ್ ಭಾಷೆಗೆ 'ಚೋರ್ ಪೊರೇಶನ್' ಎಂಬ ಹೊಸ ಶಬ್ದವನ್ನು ಕೊಡಮಾಡಿದರು. ಭಾರತದ ಹಣಕಾಸಿನ ಕಾರ್ಪೊರೇಶನನ್ನು 'ಚೋರ್ ಪೊರೇಶನ್' ಎನ್ನುವುದೇ ನ್ಯಾಯವೆಂದು ಅವರ ಮತ. ಹಣಕಾಸಿನ ಕಾರ್ಪೊರೇಶನ್ ಮಾತ್ರ ಯಾಕೆ, ಮುನಿಸಿಪಲ್ ಕಾರ್ಪೊರೇಶನ್ನುಗಳೂ ಚೋರ್ ಪೋರೇಶನುಗಳೇ. ಅವುಗಳಲ್ಲಿ ಕೆಲವುಗಳ ಸಭೆಗಳನ್ನು

ನೋಡಿದರೆ ಅವುಗಳನ್ನು ಶೋರ್ (ಗೊಂದಲ) ಪೊರೇಶನುಗಳೆಂದೂ ಕರೆಯಬಹುದು. ಹುಬ್ಬಳ್ಳಿ ಮುನಿಸಿಪಾಲಿಟಿಯು ಒಂದು ಬಗೆಯ ಗೊರ್ (ಗೊರಕೆ ಹೊಡೆಯುವ) ಪೊರೇಶನ್. ಆದರೆ ಧಾರವಾಡದ್ದು ಹೋರ್ (ಹೋರಾಟದ) ಪೋರೇಶನ್ ಎಂದು ಧಾರಾಳವಾಗಿ ಹೇಳಬಹುದು. ಆ ಮುನಿಸಿಪಾಲಿಟಿಯ ಮೇಲೆ ಸರಕಾರವು ನೋಟೀಸು ಹೊರಡಿಸಿದ್ದನ್ನು ನೋಡಿದರೆ ಅದು 'ಮುನಿಸಿ'(ಸರಕಾರವನ್ನು ಸಿಟ್ಟಿಗೆಬ್ಬಿಸಿ) 'ಪಲ್ಟಿ'ಯಾಗಬಹುದೆಂದು ತೋರುತ್ತದೆ'. ಅಂತೂ ಇಂತೂ ರಾಜಕಾರಣಿಯೊಬ್ಬನ ಬಾಯಿಯಿಂದ ಹೊರಬಿದ್ದ ತಪ್ಪು ಉಚ್ಚಾರದಿಂದ ಕಾರ್ಪೊರೇಶನ್ ಎಂಬ ಪದ ಚೋರ್ ಪೋರೇಶನ್ ಆಗಿ ಲಾಂಗೂಲಾಚಾರ್ಯರ ಚೇಷ್ಟೆಯ ಮುಷ್ಟಿಗೆ ಸಿಕ್ಕಿ ಇಷ್ಟೆಲ್ಲ ಹಾಸ್ಯವನ್ನು ಹೊಮ್ಮಿಸಿಬಿಟ್ಟಿತು!

ಎಷ್ಟೊ ಬಾರಿ ಅವರು ಬಹಳ ಗಂಭೀರವಾದ ವಿಚಾರಗಳನ್ನು, ತಮ್ಮ ತಾತ್ವಿಕ ನಿಲುವುಗಳನ್ನು ಹಾಸ್ಯದ ಮೂಲಕ ಹಗುರಾಗಿ ತೇಲಿಸಿ ತಂದು ನಮಗೆ ತಲುಪಿಸುತ್ತಾರೆ. ಕುರೂಪದ ಬಗ್ಗೆ ತಮ್ಮ ಧೋರಣೆ ಏನೆಂಬುದನ್ನು ಅವರು ನಮಗೆ ತಿಳಿಯಪಡಿಸುವುದನ್ನು 'ಶ್ರೀ ಗಣೇಶಾಯ ನಮಃ' ಪ್ರಬಂಧದಲ್ಲಿ ಕಾಣಬಹುದು.

'ದೇಹಸೌಂದರ್ಯದ ವಿಚಾರದಲ್ಲಿ ಗಣಪತಿ ಅಷ್ಟೇನೂ ಆದರ್ಶಪ್ರಾಯನಲ್ಲ. ಇದರ ಅರ್ಥವೆಂದರೆ ನಿಮ್ಮ ಜನಪ್ರಿಯತೆಗೆ ನಿಮ್ಮ ಕುರೂಪ ಅಡ್ಡಬರುವುದಿಲ್ಲ ಎಂದು. ಒಂದು ಮಿತಿಯುವರೆಗೆ ವಿಕರಾಳ ರೂಪ ನಿಮ್ಮ ಜನಪ್ರಿಯತೆಗೆ ಪೋಷಕವಾಗುತ್ತದೆ. ವಿಶೇಷವಾಗಿ ಕೊಬ್ಬಿದ ಮೈಯಲ್ಲಿ ಉಬ್ಬಿದ ಹೊಟ್ಟೆ ಯಾವಾಗಲೂ ಜನಪ್ರಿಯತೆಯನ್ನು ಆಕರ್ಷಿಸುತ್ತದೆ. ಗಣಪತಿ ತನ್ನ ರೂಪದ ಬಗ್ಗೆ ಕಿಂಚಿತ್ತಾದರೂ ಅತೃಪ್ತನಾಗಿಲ್ಲ. ಅಲ್ಲೇ ಇದೆ ಅವನ ಜನಪ್ರಿಯತೆಯ ಗುಟ್ಟು. ಕುರೂಪಿಯಾಗಿರುವುದು ಪಾಪವಲ್ಲ. ಕುರೂಪಿಯಾಗಿದ್ದೇನಲ್ಲಾ ಎಂದು ಹಳಹಳಿಸುವುದು ಪಾಪ'.

ಲಾಂಗೂಲಾಚಾರ್ಯರ ಬರಹಗಳಲ್ಲಿ ನನ್ನನ್ನು ಮುಖ್ಯವಾಗಿ ಆಕರ್ಷಿಸುವುದೆಂದರೆ ಹಾಸ್ಯದ ನೈಜ ಅಭಿವ್ಯಕ್ತಿ. ಇಂಗ್ಲಿಷ್‌ನಲ್ಲಿ ಸ್ಪಾಂಟೇನಿಟಿ ಅಂತಾರಲ್ಲ, ಅದು. ಇವರ ಬರಹಗಳಲ್ಲಿ ಎಲ್ಲೂ ಪ್ರಯತ್ನಪೂರ್ವಕವಾಗಿ ಹಾಸ್ಯವನ್ನು ಸೃಷ್ಟಿಸಿದ ಹಾಗೆ ಕಾಣುವುದಿಲ್ಲ. ಒಮ್ಮೆಲೆ ತಾನೇತಾನಾಗಿ, ನಿರಾಯಾಸವಾಗಿ ಹೊಮ್ಮುತ್ತದೆ ಹಾಸ್ಯ! ಎಷ್ಟೋ ಸಾರಿ ಹಾಸ್ಯ ಲೇಖನಗಳನ್ನು ಓದುತ್ತಿರುವಾಗಲೇ ಅದರಲ್ಲಿ ಹಿನ್ನೆಲೆಯಲ್ಲಿ ಹಾಸ್ಯಕ್ಕಾಗಿ ಪ್ರಯತ್ನ ಮಾಡಿದ್ದು ಓದುಗರಿಗೆ ಭಾಸವಾಗುತ್ತದೆ. ಆ ಗಳಿಗೆಯಲ್ಲೇ ಅದು ತನ್ನ 'ಹಾಸ್ಯ'ವನ್ನು ಕಳೆದುಕೊಳ್ಳುತ್ತದೆ! ಇನ್ನು ಏನಿದ್ದರೂ ಬರಹಗಾರನಿಗೆ

ನಮ್ಮ ಸಹಾನುಭೂತಿಯ ಮಾರ್ಕ್ಸ್ ಸಿಕ್ಕುತ್ತದೆ ಅಷ್ಟೇ ಹೊರತು ಮೆರಿಟ್ಟಿನ ಮಾರ್ಕ್ಸ್ ಅಲ್ಲ. ಯಾಕೆಂದರೆ ಎಲ್ಲ ಭಾವನೆಗಳೂ ನೈಜವಾಗಿ ಹೊಮ್ಮುವಂಥವೇ ಆದರೂ 'ನಗು'ವಿನಷ್ಟು ನೈಜವಾಗಿ ಬೇರೆ ಯಾವ ಭಾವನೆಯೂ-ಕಣ್ಣೀರು, ಕ್ರೋಧ ಮುಂತಾದವು-ಹೊಮ್ಮಲಾರದು. ಒಂದು ಮಗು ಕಿಲಕಿಲ ನಕ್ಕಾಗ ಅದಕ್ಕೆ ಯಾವ ಪೂರ್ವಭಾವಿ ಸಿದ್ಧತೆಯೂ ಬೇಕಿಲ್ಲ, ಅಲ್ಲವೆ? ದೊಡ್ಡವರ ನಗೆಯೂ ಹಾಗೇ! ಅಂತಹ ನೈಸರ್ಗಿಕವಾದ ನಗೆಯನ್ನು ಸಾವಿರಾರು ಜನರ ಮೊಗದಲ್ಲಿ, ಮನದಲ್ಲಿ ಅರಳಿಸಿದ ಲಾಂಗೂಲಾಚಾರ್ಯರಿಗೆ ಕನ್ನಡಿಗರೆಲ್ಲರ ಪರವಾಗಿ ಹೃತ್ಪೂರ್ವಕ ಧನ್ಯವಾದಗಳು-ಒಂದು ದೊಡ್ಡ ನಗೆಯೊಡನೆ.

## ಅನುಬಂಧ

ಪಾ. ವೆಂ. ಆಚಾರ್ಯರ ಬರಹಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದರೂ ಅವರ ಜೀವಿತದ ಅವಧಿಯಲ್ಲಿ ಪುಸ್ತಕ ರೂಪದಲ್ಲಿ ಬಂದದ್ದು ಕಡಿಮೆ. ಇತ್ತೀಚೆಗೆ ಅವರ ಸಮಸ್ತ ಬರಹಗಳನ್ನು ಹೊರತರುವ ಒಂದು ಯೋಜನೆಯನ್ನು ಹಮ್ಮಿಕೊಂಡು ಪಾ.ವೆಂ. ವಿಶ್ವಸ್ತ ಸಮಿತಿಯನ್ನು ರಚಿಸಲಾಯಿತು. (ಸದಸ್ಯರು: ಶ್ರೀ ಎಂ.ವಿ.ಪಾಡಿಗಾರ, ಪ್ರೊ. ರಾಧಾಕೃಷ್ಣ ಆಚಾರ್ಯ, ಡಾ. ಶ್ರೀನಿವಾಸ ಹಾವನೂರ) ಈ ಯೋಜನೆಯ ಪ್ರಕಾರ ಇದುವರೆಗೆ ಪ್ರಕಟವಾದ ಕೃತಿಗಳು

೧. ಆಯ್ದ ಲಲಿತ ಪ್ರಬಂಧಗಳು, ಸಂ. ಅ.ರಾ.ಮಿತ್ರ ಮತ್ತು ಶ್ರೀನಿವಾಸ ಹಾವನೂರ, ಪ್ರ. ಪ್ರಿಸಂ ಬುಕ್ಸ್, ಬೆಂಗಳೂರು, ೨೦೦೦

೨. ಆಯ್ದ ನಗೆಬರಹಗಳು, ಸಂ.ಶ್ರೀನಿವಾಸ ಹಾವನೂರ ಮತ್ತು ಅ.ರಾ.ಮಿತ್ರ, ಪ್ರ. ಪ್ರಿಸಂ ಬುಕ್ಸ್, ಬೆಂಗಳೂರು, ೨೦೦೦

೩. ಉಡುಪಿಯ ಪರಿಸರದಲ್ಲಿ ಪಾವೆಂ.ಆಚಾರ್ಯರು, ಸಂ.ಶ್ರೀನಿವಾಸ ಹಾವನೂರ, ಪ್ರ. ಪ್ರಸಾಧನ ಪ್ರಕಾಶನ, ಬೆಂಗಳೂರು, ೨೦೦೧

೪. ಬಯ್ಯ ಮಲ್ಲಿಗೆ (ತುಳು ಕವನ ಸಂಗ್ರಹ), ಪ್ರ. ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ೨೦೦೧

೫. ಚಿತ್ರ ವಿಚಿತ್ರ ಈ ಜಗತ್ತು, ಸಂ. ಎ.ಎಲ್.ಶ್ರೀನಿವಾಸ ಮೂರ್ತಿ, ಪ್ರ. ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೧

೬. ಇವರೇ ಲಾಂಗೂಲಾಚಾರ್ಯರು (ಆಯ್ದ ಹರಟೆಗಳು), ಸಂ. ಶ್ರೀನಿವಾಸ ಹಾವನೂರ ಮತ್ತು ಎಸ್.ಎಲ್.ಶ್ರೀನಿವಾಸ ಮೂರ್ತಿ, ಪ್ರ. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೨೦೦೨

೭. ಹಿಂದೂ-ಮುಸ್ಲಿಂ ಮತ್ತಿತರ ಸಣ್ಣ ಕತೆಗಳು,ಸಂ.ಶ್ರೀನಿವಾಸ ಹಾವನೂರ, ಪ್ರ.ಸುಮಂತ ಪ್ರಕಾಶನ, ಉಪ್ಪಿನಕೋಟೆ, ಬ್ರಹ್ಮಾವರ, ೨೦೦೨

೮. ಬ್ರಾಹ್ಮಣರೇನು ಮಾಡಬೇಕು? ಹಾಗೂ ಇತರ ಪ್ರಬಂಧಗಳು,ಸಂ.ಶ್ರೀನಿವಾಸ ಹಾವನೂರ, ಪ್ರ. ಅಂಕಿತ ಪ್ರಕಾಶನ, ಬೆಂಗಳೂರು, ೨೦೦೨

೯. ವಿಜ್ಞಾನ ವಿಸ್ಮಯ, ಸಂ. ಎಸ್.ಎಲ್.ಶ್ರೀನಿವಾಸ ಮೂರ್ತಿ, ಪ್ರ. ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨

೧೦. ವಿಶ್ವ ವಿಖ್ಯಾತರು,ಸಂ. ಶ್ರೀನಿವಾಸ ಹಾವನೂರ, ಪ್ರ. ಪಾ.ವೆಂ ವಿಶ್ವಸ್ತ ಸಮಿತಿ, ಹುಬ್ಬಳ್ಳಿ, ೨೦೦೩

೧೧. ಖ್ಯಾತಿವೆತ್ತ ಭಾರತೀಯರು, ಸಂ.ಶ್ರೀನಿವಾಸ ಹಾವನೂರ, ಪ್ರ. ಪಾ.ವೆಂ. ವಿಶ್ವಸ್ತ ಸಮಿತಿ,ಹುಬ್ಬಳ್ಳಿ, ೨೦೦೩

೧೨. ಓದುಗರೊಡನೆಯ ಹರಟೆಗಳು, ಸಂ.ಶ್ರೀನಿವಾಸ ಹಾವನೂರ, ಪ್ರ. ಲೋಕಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ, ೨೦೦೩

೧೩. ಸುಭಾಷಿತ ಚಮತ್ಕಾರ, ಪ್ರ. ಸಾಹಿತ್ಯ ಭಂಡಾರ, ಬೆಂಗಳೂರು, ೨೦೦೩

೧೪. ಹೊಸಗನ್ನಡದ ಹಿರಿಯರು, ಸಂ. ಶ್ರೀನಿವಾಸ ಹಾವನೂರ, ಪ್ರ.ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೩

೧೫. ಹೌಸಿಂಗ್ ಕಾಲನಿ, ಸಮಸ್ತ ಪಾ.ವೆಂ. ಪದ್ಯಗಳು, ಸಂ.ಎಸ್.ಎಲ್.ಶ್ರೀನಿವಾಸ ಮೂರ್ತಿ, ಪ್ರ. ಪಾ.ವೆಂ ವಿಶ್ವಸ್ತ ಸಮಿತಿ, ಹುಬ್ಬಳ್ಳಿ, ೨೦೦೪

ಆಧಾರಗಳು:

೧. ಪಾ.ವೆಂ.ಆಚಾರ್ಯ, ಆಯ್ದ ಹರಟೆಗಳು, ಸಂ. ಪ್ರೊ.ಅ.ರಾ. ಮಿತ್ರ ಮತ್ತು ಡಾ. ಶ್ರೀನಿವಾಸ ಹಾವನೂರ, ಪ್ರಿಸಂ ಬುಕ್ಸ್ ಪ್ರೈ. ಲಿ. ಬೆಂಗಳೂರು, ೨೦೦೦, ಪುಟ೬

೨. ಪಾ.ವೆಂಆಚಾರ್ಯರ ಆಯ್ದ ಹರಟೆಗಳು (ವಿವರಗಳಿಗೆ ಆಧಾರ ೧ ನೋಡಿ) ಪುಟ ೭

೩.ಪಾ.ವೆಂ.ಆಚಾರ್ಯರ ಆಯ್ದ ನಗೆ ಬರಹಗಳು, ಸಂ. ಡಾ. ಶ್ರೀನಿವಾಸ ಹಾವನೂರ ಮತ್ತು ಪ್ರೊ. ಅ.ರಾ.ಮಿತ್ರ, ಪ್ರಿಸಂ ಬುಕ್ಸ್ ಪ್ರೈ.ಲಿ.ಬೆಂಗಳೂರು, ೨೦೦೦

೪. ಇವರೇ ಲಾಂಗೂಲಾಚಾರ್ಯರು, ಸಂ. ಡಾ. ಶ್ರೀನಿವಾಸ ಹಾವನೂರ ಮತ್ತು ಶ್ರೀ ಎಸ್.ಎಲ್.ಶ್ರೀನಿವಾಸ ಮೂರ್ತಿ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೨೦೦೨



# ಪರ್ವತವಾಣಿ ನಾಟಕಗಳಲ್ಲಿ ಹಾಸ್ಯ-ಒಂದು ಸಮೀಕ್ಷೆ

**ಮಧು ಕೃಷ್ಣಮೂರ್ತಿ**

**ಪ್ರಸ್ತಾವನೆ:** ಇಪ್ಪತ್ತನೆಯ ಶತಮಾನದ ಕನ್ನಡ ಹಾಸ್ಯ ನಾಟಕಕಾರರಲ್ಲಿ ಪರ್ವತವಾಣಿ ಅಗ್ರಗಣ್ಯರು. ಈ ಲೇಖನದ ಉದ್ದೇಶ ಪರ್ವತವಾಣಿ ನಾಟಕಗಳಲ್ಲಿ ಹಾಸ್ಯ ಹೇಗೆ ಹುಟ್ಟಿದೆ ಎಂಬುದನ್ನು ಉದಾಹರಣೆಗಳ ಮೂಲಕ ಪರಿಚಯ ಮಾಡಿಸುವುದು. ಕನ್ನಡದ ಹಿರಿಯ ಸಾಹಿತಿಗಳು ಹಾಗು ವಿಮರ್ಶಕರು ಪರ್ವತವಾಣಿ ಬಗ್ಗೆ ಈ ಹಿಂದೆ ಬರೆದ್ದಿದ್ದಾರೆ. ಈ ಕೃತಿಗಳಿಂದ ಆಯ್ದ ಅಭಿಪ್ರಾಯಗಳನ್ನು ನೇರವಾಗಿ ಇಲ್ಲವೆ ಸಂಕ್ಷಿಪ್ತ ರೂಪದಲ್ಲಿ ಈ ಲೇಖನದಲ್ಲಿ ಬಳಸಿಕೊಳ್ಳಲಾಗಿದೆ. ಈ ಮೂಲ ಕೃತಿಗಳನ್ನು ಲೇಖನದ ಕೊನೆಯಲ್ಲಿ ಹೆಸರಿಸಲಾಗಿದೆ.

## ಸಾಹಿತ್ಯಲೋಕದಲ್ಲಿ ಪರ್ವತವಾಣಿಯವರ ಸ್ಥಾನ:

ಡಾ. ಸಾ. ಶಿ. ಮರುಳಯ್ಯ ತಮ್ಮ 'ಪರ್ವತವಾಣಿಯವರ ನಾಟಕಗಳು- ಒಂದು ಸಮೀಕ್ಷೆ'ಯಲ್ಲಿ ಈ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. 'ಕನ್ನಡ ಶಿಷ್ಟ ರಂಗಭೂಮಿಯ ಇತಿಹಾಸದಲ್ಲಿ ಬಹು ಮುಖ್ಯವಾದ ಕೈಲಾಸಂ ಯುಗದ ಪ್ರಭಾವಶಾಲಿ ನಾಟಕಕಾರ ಪರ್ವತವಾಣಿ. ಕೈಲಾಸಂ ಮತ್ತು ಶ್ರೀರಂಗರ ನಡುವೆ ಒಂದು ಸುವರ್ಣ ಮಾಧ್ಯಮದ ಅಗತ್ಯ ಇತ್ತು. ಅದನ್ನು ಪೂರೈಸಿದವರು ಪರ್ವತವಾಣಿ'

ಸ. ಸ. ಮಾಳವಾಡ ಈ ರೀತಿ ಹೇಳುತ್ತಾರೆ: 'ಅವರ ನಾಟಕರಚನೆಯಲ್ಲಿಯ

ವಾಣಿ, ಕ್ರಿಯೆಗಳು ಪರ್ವತದಂತೆ ಪರಿಣಾಮಕಾರಿ. ಅವರ ಹಾಸ್ಯದಲ್ಲಿ ವಿಚಾರಪರತೆಯೂ, ತೀವ್ರ ಭಾವನಾಮಯತೆಯೂ ಕಂಡುಬರುತ್ತದೆ'.

ವಿ. ಕೃ. ಗೋಕಾಕ್ ಪ್ರಕಾರ 'ಪರ್ವತವಾಣಿ ಅಂದಿನ ಕನ್ನಡ ನಾಟಕಕಾರರ ಅಗ್ರ ಪಂಕ್ತಿಯಲ್ಲಿ ಸ್ಥಾನವನ್ನು ದೊರಕಿಸಿಕೊಂಡಿದ್ದಾರೆ'. ವರಕವಿ ದ. ರಾ. ಬೇಂದ್ರೆಯವರ ಮಾತಿನಲ್ಲಿ ಪರ್ವತವಾಣಿ ಬರೆದ ೭೦ ನಾಟಕಗಳು ಘಾಟಿ ನಾಟಕಗಳು. 'ನಾಟಕ ಮಾಡಿ, ಆಡಿ, ನೋಡಿ ಅವರು ರಸದುಂಬಿ ರಸಿಕರಾಗಿದ್ದಾರೆ. ಕೈಲಾಸಂ ಅವರನ್ನು ನೆನಪಿಗೆ ತರುವ ಆನಂದವಲ್ಲಿಯಾಗಿದ್ದಾರೆ' ಎನ್ನುತ್ತಾರೆ ಬೇಂದ್ರೆ.

**ಪರ್ವತವಾಣಿ ಪರಿಚಯ:**

ಪರ್ವತವಾಡಿ ನರಸಿಂಗರಾಯರು ತಮ್ಮ ವಿದ್ಯಾಭ್ಯಾಸವನ್ನು ತುಮಕೂರಿನಲ್ಲಿ ಪ್ರಾರಂಭಿಸಿದರು. ಪರ್ವತವಾಡಿ ಇವರ ಪೂರ್ವಜರು ಬಿಟ್ಟುಬಂದ ತಮಿಳುನಾಡಿನ ಹಳ್ಳಿ. ಕನ್ನಡ ನಾಡೆ ಇವರ ಮನೆ. ಕನ್ನಡ ಬಲ್ಲವರೆಲ್ಲ ಇವರ ನೆಂಟರು. ಭದ್ರಾವತಿಯ ಕಾನನ ಶಾಖೆಯಲ್ಲಿ ಕೆಲಸ. ವೃತ್ತಿಯ ಜೊತೆಗೆ ನಾಟಕ ಪ್ರವೃತ್ತಿ ಬೆಳೆಸಿಕೊಂಡರು. ಕೈಲಾಸಂ ಅವರ ಬಂಡ್ವಾಳವಿಲ್ಲದ ಬಡಾಯಿ, ಎ. ಎನ್. ಮೂರ್ತಿರಾಯರ ಆಷಾಡಭೂತಿ, ಕಾಳಿದಾಸನ ಶಾಕುಂತಲ ಮುಂತಾದ ನಾಟಕಗಳಲ್ಲಿ ನಟಿಸಿದರು. ತಮ್ಮ ಕಂಚಿನ ಕಂಠದಿಂದ ಮತ್ತು ಸುಶ್ರಾವ್ಯವಾಗಿ ಕಂದ ಪದ್ಯ ಹಾಡುವ ಪ್ರತಿಭೆಯಿಂದ ನಾಟಕ ಕಲೆಯನ್ನು ಚೆನ್ನಾಗಿ ಅರಿತರು.

೨೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಭದ್ರಾವತಿಯಲ್ಲಿ ನಡೆದಾಗ ವಿ. ಕೃ. ಗೊಕಾಕ್ ಇವರ ನಾಟಕ 'ಬಹದ್ದೂರ್ ಗಂಡ' ಪ್ರದರ್ಶನವನ್ನು ಮೆಚ್ಚಿ ನಾಟಕಕಾರರ ಕಾವ್ಯನಾಮವು ಪರ್ವತವಾಡಿ ಎನ್ನುವುದಕ್ಕಿಂತ 'ಪರ್ವತವಾಣಿ' ಎಂಬುದು ಹೆಚ್ಚು ಯುಕ್ತವಾಗಿರುತ್ತದೆ ಎಂದು ಸಲಹೆ ಮಾಡಿದರು. ಇದು ನರಸಿಂಗರಾಯರು ಪರ್ವತವಾಣಿ ಆದ ಕಥೆ.

ಸ್ವತಃ ನಟರಾಗಿದ್ದ ಪರ್ವತವಾಣಿ ತಮ್ಮ ಮೊದಲ ನಾಟಕ ಬರೆಯುವ ಮುನ್ನವೇ ಅನೇಕ ನಾಟಕಗಳನ್ನು ಆಡುವುದರ ಮೂಲಕ ನಾಟಕದ ನುರಿತ ವಿಮರ್ಶಕರಾಗಿ ಬೆಳೆದಿದ್ದರು. ನಾಟಕಗಳಿಗೆ ಯಾವ ರೀತಿಯ ಸನ್ನಿವೇಶಗಳು ಹೊಂದುತ್ತವೆ, ಪಾತ್ರಗಳು ಹೇಗೆ ಬೆಳೆಯಬೇಕು ಎಂಬುದನ್ನು ರಂಗದ ಪ್ರಯೋಗದಿಂದಲೆ ಅರಗಿಸಿಕೊಂಡಿದ್ದರು. ಈ ಆಳವಾದ ಅನುಭವ ಉತ್ತಮ ನಾಟಕ ರಚಿಸಲು ಅವರಿಗೆ ಅನುಕೂಲವಾದವು.

ಪರ್ವತವಾಣಿ ಎಪ್ಪತ್ತಕ್ಕೂ ಮೀರಿ ಕನ್ನಡ ನಾಟಕಗಳನ್ನು ರಚಿಸಿದ್ದಾರೆ. ಕೆಲವು ಅನುವಾದಿತ. ಹಲವು ಸ್ವಂತದ್ದು. ಆಂಗ್ಲ ಮತ್ತು ಇತರ ಪಾಶ್ಚಾತ್ಯ ಮೂಲದ

ನಾಟಕಗಳನ್ನು ಕನ್ನಡದ ಮೂಲನಾಟಕಗಳೇನೊ ಎನ್ನುವಷ್ಟು ಸಫಲಕಾರಿಯಾಗಿ ನಾಟಕ ರಚನೆ ಮಾಡಿದ್ದಾರೆ.

ನಮ್ಮ ಸುತ್ತಮುತ್ತ ನಡೆಯುವ ಪ್ರಸಂಗಗಳಿಗೆ ತೀಕ್ಷ್ಣವಾದ ಹಾಸ್ಯದ ಅಲುಗು ನೀಡಿ ಸಮಾಜದ ವಿಡಂಬನೆಯ ಜೊತೆಗೆ ಮನರಂಜನೆಯನ್ನೂ ಒದಗಿಸುವುದು ಅವರ ನಾಟಕಗಳ ವೈಶಿಷ್ಟ್ಯ. ಮೊನಚಾದ ಮತ್ತು ನವಿರಾದ ಹಾಸ್ಯವನ್ನು ಸೂಸುವ ಸಂಭಾಷಣೆಗಳು, ರಂಗಭೂಮಿಗೆ ಚೆನ್ನಾಗಿ ಹೊಂದಿಕೊಳ್ಳುವ ನಾಟಕ ತಂತ್ರಗಳು ಅವರ ನಾಟಕಗಳಲ್ಲಿ ಎದ್ದು ಕಾಣುವ ಅಂಶಗಳು.

ಇನ್ನು ಮುಂದೆ ಪರ್ವತವಾಣಿಯವರ ಕೆಲವು ನಾಟಕಗಳನ್ನು ವಿಶ್ಲೇಷಿಸಿ, ನಾಟಕದ ಸಂಭಾಷಣೆ ಮತ್ತು ಸನ್ನಿವೇಶಗಳಲ್ಲಿ ಹಾಸ್ಯ ಹೇಗೆ ಅಡಕವಾಗಿದೆ ನೋಡೋಣ.

ನಾಟಕ: **‘ತಪ್ಪು ಹೆಜ್ಜೆ’**(೧೯೭೬)

ಬಡತನಕ್ಕಿಂತಲೂ ಸಂಕಟಕಾರಿಯಾದ ಬಂಜೆತನದ ಬಗೆಗಿನ ನಾಟಕ ‘ತಪ್ಪು ಹೆಜ್ಜೆ’. ಪರ್ವತವಾಣಿಯವರೇ ಹೇಳಿಕೊಂಡಿರುವಂತೆ ಇದಕ್ಕೆ ವಿಜಯ ತೆಂಡೂಲ್ಕರ್ ನಾಟಕ ‘ಸಖಾರಾಂ ಬೈಂಡರ್’ ಪ್ರೇರಣೆ. ನಾಟಕದ ನಾಯಕಿ ರೂಪಳಿಗೆ ಮಗುವಾಗದಿದ್ದಾಗ ಸಮಾಜದ ಕ್ರೌರ್ಯ ಅವಳನ್ನು ಹೇಗೆ ‘ತಪ್ಪು ಹೆಜ್ಜೆ’ ಇಡುವಂತೆ ಮಾಡುತ್ತದೆ ಎಂದು ನಿರೂಪಿಸುವ ನಾಟಕ. ಈ ನಾಟಕದ ವಿಷಯ ಗಂಭೀರವಾಗಿದ್ದರೂ ಪಾತ್ರಧಾರಿಗಳು ಆಡುವ ಮಾತುಗಳು ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಹರಿತವಾದ ವಿಡಂಬನೆ ಒದಗಿಸುತ್ತವೆ.

ಸೊಸೆ ರೂಪ ಎಲ್ಲಿ ಹೋದಳು ಎಂದು ತಾರಾ ಬಾಯಿ (ತಾ. ಬಾ.) ಕೇಳಿದಾಗ ಪತಿ ತಾರಾನಾಥ ರಾಯರ (ತಾ. ರಾ.) ಮಾತು ಈ ರೀತಿ ಸಾಗುತ್ತದೆ.

ತಾ. ರಾ.: ‘ಲೇ ಲೇ, ನನ್ನ ಕಿವಿಯ ಮೇಲೆ ಯಾಕೆ ನಿನ್ನ ಕಂಸಧ್ವನಿ ಧಾಳಿ? ಅಲ್ಲವೇ, ನೀನು ಗುಡಿಗೆ ಹೋಗುತ್ತ, ಅವಳನ್ನು ದಾಟೋಕ್ಕೆ ಬಿಡಬೇಡಿ, ಹುಷಾರಾಗಿ ನೋಡಿಕೊಳ್ಳಿ ನಾನು ಬರುವವರೆಗೂ  ಅಂತ ಒಂದು ಆರ್ಡರ್, ಒಂದು ಮಾತು, ಒಂದು ಸನ್ನೆ ಮಾಡಿ ಹೋಗಿದ್ದರೆ, ಅಲ್ಲಿ ಹೊಸಿಲ ಮೇಲೆ ಒನಕೆ ಹಿಡಿದು ವೀರಭದ್ರ ಅಂತ ಕೂತು, ಅವಳಲ್ಲ, ಅವಳ ನೆರಳು, ನೆರಳು, ಹೊರಗೆ ಹಾಯೊಕ್ಕೆ ಬಿಡುತ್ತಿದ್ದೆನೇನೇ’.

ಈ ಸಂಭಾಷಣೆ ಕನ್ನಡ ನಾಡಿನ ಸಂಸಾರವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಮುಂದೆ ತನ್ನ ಸೊಸೆಗೆ ಮಗುವಾಗಿಲ್ಲದಿರುವುದರಿಂದ ಸೊಪ್ಪು ಮಾರುವವಳು, ರೇಷನ್

ಅಂಗಡಿಯವನು, ಪುರಾಣಕ್ಕೆ ಬರುವವರು ಎಲ್ಲರೂ ಅದರ ಬಗ್ಗೆ ಕೇಳುತ್ತಾರೆ ಎಂದು ತಾರಾಬಾಯಿ ಸಿಡುಕಿದಾಗ, ಪತಿ ತಾರಾನಾಥ ರಾಯರ ಉತ್ತರ ಹೀಗಿರುತ್ತದೆ:

ತಾ. ರಾ: 'ಇವೆಲ್ಲ ಹಳೇ ಪುರಾಣವೇ... ಇವತ್ತು ಹೊಸದಾಗಿ ಗುಡಿಯಲ್ಲಿ ಏನಾಯಿತು ಹೇಳು. ಆ ದೇವರೇ ಏನಾದರೂ..?' [ಅಂದರೆ ದೇವರೆ ನಿನ್ನ ಸೊಸೆಗೆ ಮಕ್ಕಳು ಏಕಿಲ್ಲ ಎಂದು ಕೇಳಿದನೆ?]

ತಾ. ಭಾ: 'ದೇವರು! ದೇವರಂತೆ ದೇವರು!. ಅದೊಂದು ಕಲ್ಲು ದೆವ್ವ! ಬಾಯೆಲ್ಲಿದೆ ಬಡಕೊಳ್ಳೊಕೆ'.

ತನ್ನ ಸೊಸೆ ಅನುಭವಿಸಬೇಕಾದ ಸಂಕಟಗಳ ಬಗ್ಗೆ ಕನಿಕರಿಸುತ್ತ ತಾರಾನಾಥ ರಾಯರ ಈ ವಿಡಂಬನಾತ್ಮಕ ಮಾತು ಗಮನ ಸೆಳೆಯುತ್ತದೆ. 'ಒಟ್ಟಿನಲ್ಲಿ ಹೆಂಗಸಾಗಿ ಹುಟ್ಟಬಾರದು... ಆದರೆ.... ಅದೂ ತಾಪತ್ರಯವೇ.. ಈ ಹೆಂಗಸರು ಹುಟ್ಟದಿದ್ದರೆ ನಾವು ಗಂಡಸರು ಯಾರ ಹೊಟ್ಟೆಯಲ್ಲಿ ಹುಟ್ಟುವುದು? ನಾವು ನಾಶವೇ ಆಗಿ ಹೋಗುತ್ತೇವೆ. ಉಹೂಂ. ಅವರಿಗೇನೆ ಕಷ್ಟ ಬಂದರೂ ಬರಲಿ. ಹುಟ್ಟಬೇಕು. ನಾವು ಹುಟ್ಟೋಕ್ಕಾದರೂ ಅವರು ಹುಟ್ಟಬೇಕು'.

ನಾಟಕದಲ್ಲಿ ಕನ್ನಡದ ರುಚಿ ಇರುವ ಮಾತಿದ್ದರೆ ಚೆನ್ನ. ಮೈಸೂರು ನಾಟಿ ಎಲೆ ಹೇಗೆ ಅಂಬಾಡಿ ಎಲೆಗಿಂತಲೂ ರುಚಿಯೊ, ಹಾಗೆ. ಅಂತಹ ಒಂದು ಮಾತು ಇದು 'ನಾನು ಅಪಾರ ಬುದ್ಧಿವಂತೆ ಅಂತ ತೋರಿಸಿಕೊಳ್ಳುವ ಕೊಬ್ಬಿನಲ್ಲಿ ತೆಪರ ದಡ್ಡಿ ಆದೆ'.

ಸೊಸೆ ಗರ್ಭಿಣಿ ಆಗಿರಬಹುದು ಎಂದು ಊಹಿಸುತ್ತ ತಾ.ಬಾ. 'ಕೇಳುತ್ತಿದ್ದೀರ. ... ನೀರುಮನೆಯಲ್ಲಿ ವಾಕರಿಕೆ .... ದೇವರಿದ್ದಾನೆ. ದೇವರಿದ್ದಾನೆ' ಎಂದಾಗ ಪತಿ ನೀರುಮನೆಯಲ್ಲಿ ದೇವರಿದ್ದಾನೆ ಮತ್ತು ವಾಕರಿಸುತ್ತಿದ್ದಾನೆ ಎಂದು ಅರ್ಥಮಾಡಿಕೊಳ್ಳುತ್ತಾನೆ. ಈ ರೀತಿ ಸಹಜ ಸಂಭಾಷಣೆಯಲ್ಲೆ ತಿಳಿ ಹಾಸ್ಯವನ್ನು ಹೊರತರುತ್ತಾರೆ ಪರ್ವತವಾಣಿ.

ಸೊಸೆ ಗರ್ಭಿಣಿ ಆದುದು ದೇವರ ಕೃಪೆಯಿಂದ ಎನ್ನುವ ಅತ್ತೆ ಮಾವರ ಸಂಭಾಷಣೆಯಲ್ಲಿ ಇದೇ ರೀತಿಯ ಹಾಸ್ಯವಿದೆ.

ತಾ. ರಾ.: 'ಭಲೇ ಭಲೆ.. ಏನ್ ದೇವರೇ ? ನಿನ್ನ ಕೈಲಿ ದೆವ್ವ ಪವ್ವ ಅಂತ ಬೈಸಿಕೊಂಡಿದ್ದಕ್ಕೆ .... '(ಕರುಣೆ ತೋರಿದ).

ತಾ. ಬಾ: (ಕೆನ್ನೆಗೆ ಹೊಡೆದುಕೊಳ್ಳುತ್ತ) 'ತಪ್ಪಾಯಿತು. ತಪ್ಪಾಯಿತು. ತಪ್ಪಾಯಿತು'.

ತಾ. ರಾ: 'ಲೇ ಲೇ. ..ಸದ್ದು ಮಾಡದೆ ಹೊಡೆದುಕೊಳ್ಳೇ. ಕಾಣದೆ, ಯಾರಾದ್ರು ಕೇಳಿದರೆ, ನನ್ನ ಕಪಾಳ ಮೋಕ್ಷ ಮಾಡುತ್ತಿದ್ದಿ ಅಂತ...... ಗ್ರಹಚಾರ.... ತಲೆ ಎತ್ತಿಕೊಂಡು'(ತಿರುಗೋಕ್ಕಾಗೊಲ್ಲ)

ದಿನವೂ ಕೆದಕಿ ಕೇಳುತ್ತಿದ್ದ ಸೊಪ್ಪಿನವಳು, ರೇಷನ್ನಿನವನು ಇವರಿಗೆಲ್ಲ ಈಗ 'ಎರಡು ತಿಂಗಳು' ಎಂದು ತಿಳಿಸಿ ಬಾ ಎನ್ನುವ ಮಾವ, 'ಸೊಸೆಗೆ ಅಂತ ಸರಿಯಾಗಿ ಹೇಳು' ಎಂದು ಹೇಳುವುದನ್ನು ಮರೆಯುವುದಿಲ್ಲ.

ಇದೇ ನಾಟಕದಲ್ಲಿ ಬರುವ 'ಗಂಡ ಅನ್ನಿಸಿಕೊಂಡು ಹೆಂಡತಿಯ ಮಾತು ಕೇಳದೆ ಹೋದರೆ, ಮದುವೆ ಎನ್ನುವ ಮೂರು ಅಕ್ಷರದ ಮಾತಿಗೇ ಅವಮರ್ಯಾದೆ, ಅಪಚಾರ' ಈ ಮಾತು ಕೈಲಾಸಂ ನೆನಪಿಗೆ ತರುತ್ತದೆ.

ನಾಟಕ: **ಸಪ್ತಪದಿ**(೧೯೭೬)

ಬೆಳೆದ ಹೆಣ್ಣು, ಇನ್ನೂ ಬೆಳೆದ ಗಂಡು. ಇಬ್ಬರೂ ಲೋಕ ಕಂಡವರು. ಇವರ ನಡುವಿನ ಮದುವೆ ಎಂದರೇನು? ಯಾರ ಹೊಣೆ ಏನೇನು? ಸಾಂಪ್ರದಾಯಿಕವಾಗಿ ಬಂದ ಹೊರೆಗಳನ್ನು ಮದುವೆಯ ನೆಪದಲ್ಲಿ ಹೊರುವುದು ನ್ಯಾಯವೆ? ವಿರೋಧಿಸಬಹುದೆ? ಸಮಾಜ ಹೇರುವ ಕಟ್ಟು ಪಾಡುಗಳನ್ನು ಬದಿಗೊತ್ತಿ ಗಂಡು ಹೆಣ್ಣು ತಮ್ಮ ದಾರಿ ತಾವೇ ಕಂಡುಕೊಳ್ಳಬಹುದೆ? ಈ ಸವಾಲುಗಳನ್ನು ವಿಶ್ಲೇಷಿಸುವ ನಾಟಕ 'ಸಪ್ತಪದಿ'.

ಕನ್ನಡಿಗರ ಸಹಜ ಸಂಭಾಷಣೆಯಲ್ಲೂ ಹಾಸ್ಯ ಹೇಗೆ ಹೊರತರುತ್ತಾರೆ ನಾಟಕಕಾರರು ಎನ್ನುವುದಕ್ಕೆ ಈ ಸಾಲುಗಳನ್ನು ನೋಡಿ:

ಒಬ್ಬ: 'ಗಂಡ ಸುಮ್ಮನೆ ಕೂತು, ಹೆಣ್ಣಿನ ಕೈಲಿ ನಡೆಸುವುದಲ್ಲವೆ ಪದ್ಧತಿ?'

ಪುರೋಹಿತ: 'ಹ ಹ ಹ .... ಕೈಯಲ್ಲಿ ನಡೆಸುವುದು ಹ ಹ ಹ .ಅದು ಯಾವ ಹೊಸ ಪದ್ಧತಿ ಸ್ವಾಮಿ? ಕಾಲಿನಲ್ಲಲ್ಲವೇ ನಡೆಸುವುದು?... ನೀವು ಜೋಕು ಜೋಕು ಅಂತೀರಲ್ಲ ಅದನ್ನ ಮಾಡಿದೆ'.

ಇನ್ನೊಂದು ಉದಾಹರಣೆ: ವರೋಪಚಾರ ಕೇಳುವ ವರನ ತಂದೆಯ ಪಟ್ಟು ನೋಡಿ 'ವರನಿಗೆ... ಗಂಟೆ ನಮ್ಮದೇ ಆದರೂ, ಗಡಿಯಾರ ಫಾರಿನ್ನದೇ ಆಗಬೇಕು...'

ದಿನ ಬೆಳಗಾದರೆ ಆಫೀಸಿಗೆ ಹೊರಡಲು ಸಿದ್ಧವಾಗುವಾಗ ಆಗುವ ಅವಾಂತರಗಳು ನಮಗೆಲ್ಲ ಚಿರಪರಿಚಿತ. ಪರ್ವತವಾಣಿ ಇದರ ನಡುವೆ ಸಿಡುಕಾಡುವ ಹೆಂಡತಿಯನ್ನು

ಸೇರಿಸಿಬಿಡುತ್ತಾರೆ. ಈ ಮಾತುಗಳು ಸಹಜವಾಗಿಯೂ ಹಾಸ್ಯಮಯವಾಗಿಯೂ ಇದೆ 'ರೀ ರೀ.. ಏಳು ಗಂಟೆ ಹೊಡೆದು ಮೂರು ನಿಮಿಷ .... ಅದೇನು ಇನ್ನು ಹಲ್ಲು ಉಜ್ಜಿಕೊಂಡದ್ದು ಮುಗಿಯಲೇ ಇಲ್ಲವ? ... ಇವರಿಗೆ ಅರವತ್ನಾಲ್ಕು ಹಲ್ಲುಗಳನ್ನೆನಾದ್ರು ತುಂಬಿದಾನೋ ಏನೊ ಬಾಯಲ್ಲಿ ಆ ನಾಲ್ಕು ಮುಖದವನು!' ಈ ರೀತಿ ವರ್ಣಮಯವಾಗಿ ಸಿಡುಕುವುದು ಕನ್ನಡದಲ್ಲಿ ಮಾತ್ರ ಸಾಧ್ಯವೇನೊ ಎನ್ನುವಂತೆ ಪರ್ವತವಾಣಿ ಬರೆಯುತ್ತಾರೆ.

ಇದೇ ಪಾತ್ರ ಇಂತಹ ನಾಲಾಯಕ್ (ಚುರುಕಾಗಿ ಸಿದ್ಧವಾಗದ) ಗಂಡನನ್ನ ಪಡೆದ ತನ್ನ ಪಾಪ ಕರ್ಮಗಳನ್ನ ಹೀಗೆ ಹಳಿಯುತ್ತಾಳೆ 'ನಾನು ಹೋದ ಜನ್ಮದಲ್ಲಿ ಯಾವ ಅಮಂಗಳ ಗೌರಿಯ ಪೂಜೆ ಮಾಡಿ, ಅಪ್ರದಕ್ಷಿಣೆ ಹಾಕಿ, ಆರತಿ ಆರಿಸಿ, ಪ್ರಸಾದ ಉಗುಳಿದ್ದೆನೊ.... ಅನುಭವಿಸುತ್ತಿದ್ದೇನೆ ಈಗ.. ರಾಮ ರಾಮ. ದರಿದ್ರ ಹೆಣ್ಣು ಜನ್ಮ. ಆ? ನಮ್ಮ ಜನ್ಮ ಯಾಕೆ ದರಿದ್ರ? ದರಿದ್ರ ಗಂಡು ಜನ್ಮಕ್ಕೆ ಗಂಟು ಹಾಕಿಕೊಳ್ಳುವುದು'.

ನಾಟಕ **ಫ್ಲೊರೆನ್ ಮಾಲ್**(೧೯೭೬)

ಪರದೇಶಿ ವಸ್ತುಗಳನ್ನು ಬಯಸುವ ತೀವ್ರ ಹುಚ್ಚನ್ನು ಖಂಡಿಸುವ, ಲೇವಡಿ ಮಾಡುವ ವಿಡಂಬನಾತ್ಮಕ ನಾಟಕ 'ಫ್ಲೊರೆನ್ ಮಾಲ್'. ಈ ನಾಟಕದಲ್ಲಿ ಬರುವ ಒಬ್ಬ ಮುದುಕನ ಪಾತ್ರ ತನ್ನ ಬಗ್ಗೆ ಹೇಳಿಕೊಳ್ಳುವ ಮಾತು ಕಟು ಸತ್ಯ ಮತ್ತು ಹಾಸ್ಯದಿಂದ ಕೂಡಿದೆ. ಹುಚ್ಚು ಮುದುಕ ಎಲ್ಲಿ ತಪ್ಪಿಸಿಕೊಂಡನೊ ಎಂದು ಮನೆಯವರು ಪರಿತಪಿಸೊಕ್ಕೆ ಮುಂಚೆ, ಗೂಡಿಗೆ ಹೋಗಿ ಸೇರಿಕೊಂಡು, ಸದ್ದಿಲ್ಲದೆ ತಟ್ಟೆಗೆ ಬಡಿಸಿದ್ದನ್ನು ಹೊಟ್ಟೆಗೆ ಸೇರಿಸಿ, ಮೊಮ್ಮಕ್ಕಳು ಹಾಸಿಕೊಟ್ಟ ಹಾಸಿಗೆಯ ಮೇಲೆ ಕಾಲು ಚಾಚಿ, ಮುಖದ ಮೇಲೆ ಮುಸುಕೆಳೆದುಕೊಂಡು ಗೊರಕೆ ಹೊಡೆಯುವ ಬಡ ಪ್ರಾಣಿ ನಾನು.

ಇಂಗ್ಲೀಷ್ ವ್ಯಾಮೋಹದ ಬಗ್ಗೆ ಈ ನಾಟಕದಲ್ಲಿ ಬಿಸಿ ಮುಟ್ಟಿಸುವ ವಿಡಂಬನೆ ಇದೆ. ಉದಾಹರಣೆಗೆ 'ಅಪ್ಪ ಇದ್ದಾರ? ಅಮ್ಮ ಇದ್ದಾರ?' ಎಂದಾಗ 'ನೋಪ್ ನೋಪ್' ಎನ್ನುವ ಮಗು 'ಬೇರೆ ಯಾರಿದ್ದಾರೆ?' ಎಂದಾಗ 'ಮಮ್ಮಿ ಡ್ಯಾಡಿ ಇದ್ದಾರೆ, ಅಷ್ಟೆ'.

ಫ್ಯಾಷನ್ ಪ್ರಿಯೆ ಮಗಳು ತನ್ನ ಸ್ನೇಹಿತೆ ಶೋಲ್ಡರ್ ಕಟ್ ಮಾಡಿಸಿಕೊಂಡಳು ಎಂದಾಗ 'ತಕ್ಷಣ ಡಾಕ್ಟರ್ ಶಾಪಿಗೆ ಕರಕೊಂಡು ಹೊಗಬೇಕು' ಎನ್ನುವ ತಂದೆ ಮಗಳ ಸಂಭಾಷಣೆ ಹಾಸ್ಯವನ್ನು ಹೊರತರುತ್ತದೆ.

ಫಾರಿನ್ನಲ್ಲಿ 'ವಾಸ ಮಾಡುವ ಕೋಳಿ ಕಿಂಗ್' ವರನಿಗೆ ಹೆಣ್ಣಿನ ಅಪ್ಪ ವರದಕ್ಷಿಣೆಗೆ 'ಕ್ಯಾಶಿಗೆ ಬದಲು ಒಂದು ಹತ್ತು ಸಾವಿರ ಸೀಮೆ ಕೋಳಿಗಳನ್ನು ರವಾನೆ ಮಾಡಿದೆ' ಎಂದಾಗ ಹಾಸ್ಯ ಸನ್ನಿವೇಶದ ಜೊತೆಗೆ ಫಾರಿನ್ ಪ್ರೀತಿಯ ಬಗ್ಗೆ ಟೀಕೆಯಾಗುತ್ತದೆ.

ಕೋಳಿ ಕಿಂಗ್ ಅಳಿಯ ಮಗಳಿಗೆ ಮೋಸ ಮಾಡಿದ ಎಂದು ತಿಳಿದಾಗ 'ಬಿದ್ದರೂ ಮೀಸೆ ಮಣ್ಣಾಗಲಿಲ್ಲ' ಎನ್ನುವಂತೆ ಗಂಡ ಹೆಂಡತಿಯ ಮೇಲೇ ತಪ್ಪು ಹೋರಿಸುತ್ತಾನೆ.

ಹೆಣ್ಣಿನ ತಂದೆ: 'ಹಾಳು ಹೆಂಗಸರೇ ನೀವು. ಗಂಡ ಹೇಳಿದ ಮಾತು ಕೇಳಿಬಿಡುವುದು. ಮನೆಯಲ್ಲಿ ಮಣ್ಣು ತಿನ್ನು ಅಂದರೆ ತಿಂದು ಬಿಡುವುದು. ಆ ಕೋಳೀ ಅಳಿಯ ಬೇಕ ಅಂತ ಹಟ ಹಿಡಿಯೊಕ್ಕೆ ಏನಾಗಿತ್ತೆ ನಿನಗೆ?'

ಸಪ್ತಪದಿ ನಾಟಕಕ್ಕೆ ಭರತವಾಕ್ಯ ಬರೆದಿರುವ ಬೇಂದ್ರೆ ಸಹ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ನಾಟಕದಲ್ಲಿ ಬರುವ ಅಸಹ್ಯ ಬುದ್ದಿಯ ವರನ ಅಪ್ಪನ ಬಗ್ಗೆ ಈ ರೀತಿ ಬರೆದ್ದಿದ್ದಾರೆ 'ಈ ನಾಟಕದ ನಾಯಕ ವರನಲ್ಲ. ವರನ ಅಪ್ಪ! ಅಬ್ಬಬ್ಬ! ಅವನೆ ಸುವರ! ಸೂಪರ್–ಸುವರ... ಈ ನಾಟಕದ ಬಿರುಕು ಬಿರುಕುಗಳಲ್ಲಿ ಹೆಗ್ಗಣದ ಹೋರು, ಹಾವಿನ ಗುದ್ದು ಜೀವನಕ್ಕೆ ಸುರಂಗ ಹಾಕುತ್ತವೆ'.

ನಾಟಕ **ಕೀಚಕ** (೧೯೫೨)

ಪರ್ವತವಾಣಿ ಈ ನಾಟಕದ ಮುನ್ನುಡಿಯಲ್ಲೇ ಹಾಸ್ಯದ ಹೊಳೆಯನ್ನು ಹರಿ ಬಿಡಲು ಪ್ರಾರಂಭಿಸುತ್ತಾರೆ. 'ನಾಟಕಗಳನ್ನು ಪುಸ್ತಕ ರೂಪದಲ್ಲಿ ತಂದಾಗ ಖರ್ಚು ಹುಟ್ಟಿಸಿಕೊಳ್ಳಬೇಕಾದರೆ ಚತುರ್ಮುಖ ಅವನಪ್ಪನ ಹೊಕ್ಕಳಲ್ಲಿ ಮತ್ತೆ ಹುಟ್ಟಿ ಬರಬೇಕು. ಅವನಿಗೇನು ತೆವಲು ?.... ಕಾಸಿಲ್ಲದೆ ಕೈಲಾಸವಿರಲಿ ಕಲಗಚ್ಚು ಹುಟ್ಟೊಲ್ಲ' ಎಂದು ಹೇಳುತ್ತಾರೆ. ಕೀಚಕನ ಪಾತ್ರ ತನಗೆ ಅಚ್ಚು ಮೆಚ್ಚು ಎಂದು ಒಪ್ಪಿಕೊಂಡ ಪರ್ವತವಾಣಿ ಕೂಡಲೆ 'ಏಕೆ ಎಂದು ಹುಚ್ಚು ಊಹಾಪೋಹ ಮಾಡಲು ಹೋಗಬೇಡಿ'ಎಂದು ತಡೆಯುತ್ತಾರೆ.

ಯಾರ ಬಾಯಲ್ಲಿ ಯಾವ ಮಾತಾಡಿಸಬೇಕು ಅನ್ನೋದು ಪರ್ವತವಾಣಿಯವರಿಗೆ ಚೆನ್ನಾಗಿ ಗೊತ್ತು. ಸಾಷ್ಟಾಂಗ ನಮಸ್ಕಾರ ಮಾಡಲು ಬಂದಾಗ 'ಇದು ಪಂಚಾಂಗ – ಸಾಷ್ಟಾಂಗಕ್ಕೆ ಮೂರು ಕಡಿಮೆ' ಎನ್ನುವ ವಿರಾಟನ ಆಸ್ಥಾನ ಪುರೋಹಿತರ ಬಾಯಿಂದ ಬರುವ ಮಾತು ನೋಡಿ. ಅವರಿಗೆ ಕಂಕಭಟ್ಟನ ವೇಷದಲ್ಲಿರುವ ಧರ್ಮರಾಯನ ಬಗ್ಗೆ ಸಿಟ್ಟು. 'ಆ ಕಂಕಭಟ್ಟ ಎಲ್ಲಿಂದ ಬಂದನೊ ಯಾರಿಗೆ ಗೊತ್ತು. ಬ್ರಹ್ಮನಿಗೆ ಶೀತವಾಗಿತ್ತೇನೊ. ಸೀನಿದ್ದಾನು. ಅವನ ಮೂಗಿನ ಹೊಳ್ಳೆಯಲ್ಲಿ ಹುಟ್ಟಿ ಭೂಮಿಗೆ ಬಿದ್ದಿದ್ದಾನು. ಅವನು ಎಲ್ಲಿಂದ ಬಂದನೊ ಗೊತ್ತಿಲ್ಲ. ಆದರೆ ಅವನ ದೆಸೆಯಿಂದ ಈಗ ನಾನು ಮನೆಗೆ ಹೋಗುತ್ತಿದ್ದೇನೆ'. ಅವರ ಸಿಟ್ಟಿಗೆ ಕಾರಣ ಗೊತ್ತಾಯಿತಲ್ಲ.

'ನೀವು ಎಲ್ಲರನ್ನು ನೋಡೇ ಇರುತೀರಿ' ಎಂದಾಗ ಆಸ್ಥಾನ ಪುರೋಹಿತರು 'ರನ್ನು' ಏಕೆ, 'ವನ್ನು' ಸಹ ನೋಡಿದ್ದೇನೆ. ಅರಮನೆಯಲ್ಲಿ ಎಲ್ಲವನ್ನೂ ನೋಡಿದ್ದೇನೆ. ಉಗ್ರಾಣದ ಹೆಗ್ಗಣ ಕೂಡ ಬಲ್ಲೆ'. ಎನ್ನುತ್ತ ರಂಜಿಸುತ್ತಾರೆ.

ಅಣ್ಣ ತಂಗಿಯರ ಜಗಳದ ಚಿತ್ರಣ ಚೆನ್ನಾಗಿ ಮೂಡಿಬಂದಿದೆ. ಉತ್ತರ ಉತ್ತರೆಯರ ಈ ಸಂಭಾಷಣೆ ನವಿರಾದ ಹಾಸ್ಯಕ್ಕೆ ಒಂದು ಒಳ್ಳೆಯ ಉದಾಹರಣೆ.

ಉತ್ತರ: 'ನನ್ನ ಏನೆಂದೆ'

ಉತ್ತರೆ: 'ಹೇಡಿ ಅಂದೆ. 'ಹ ಕೆ ಏತ್ವ ಹೆ; ದೀರ್ಘ ಹೇ; ಡ ಗುಡಿಸು ಡಿ; ಹೇಡಿ'

ಉತ್ತರ: 'ಅಮ್ಮ ನನಗೆ ಕೋಪ ಅಲ್ಲ, ಆಗ್ರಹ ಬರುವುದು. ಅರಿಷಡ್ವರ್ಗಗಳಲ್ಲಿ ಒಂದಾದ ಅದು ಬಂದರೆ ಏನಮ್ಮ ಮಾಡುವುದು'.

ಉತ್ತರೆ: 'ಹೆಬ್ಬೆಟು ಕಡಿ'.

ಅಮ್ಮನ ಹಿಂದೆ ಅವಿತಿಟ್ಟುಕೊಂಡ ಉತ್ತರನಿಗೆ ಅವನ ಅಪ್ಪ ವಿರಾಟ 'ನಾಚಿಕೆ ಆಗಲ್ಲಿಲ್ಲವೆ?' ಎಂದು ಗದರಿದಾಗ ಪರ್ವತವಾಣಿ ಉತ್ತರನ ಪಾತ್ರದ ಮೂಲಕ ಮಹಾಭಾರತದಲ್ಲಿ ಯಾರ್ಯಾರಿಗೆ ನಾಚಿಕೆ ಆಗಬೇಕಿತ್ತು ಆದರೆ ಆಗಲಿಲ್ಲ ಎನ್ನುವುದನ್ನು ಹೇಳಿಸುತ್ತಾರೆ. ಹೆಂಡತಿಯನ್ನು ಪಣವಾಗಿಟ್ಟ ಧರ್ಮರಾಯ, ದ್ರೌಪದಿಯ ವಸ್ತ್ರಾಪಹರಣಕ್ಕೆ ಕಾರಣರಾದ ದುರ್ಯೋಧನ ಮತ್ತು ದುಶ್ಯಾಸನ, ಅಪಚಾರವನ್ನು ಮೌನದಿಂದ ಸಹಿಸಿದ ಭೀಷ್ಮ, ದ್ರೋಣ, ಕೃಪಾಚಾರ್ಯ ಇವರನ್ನೆಲ್ಲ 'ಹೇಡಿ' ಉತ್ತರನ ಮೂಲಕ ತರಾಟೆಗೆ ತೆಗೆದುಕೊಳ್ಳುತ್ತಾರೆ.

ಕತ್ತಿವರಸೆ ಹೇಳಿಕೊಡಲು ಬಂದ ಗುರುಗಳಿಂದ ತಪ್ಪಿಸಿಕೊಂಡು ಹೆದರಿ ಅಮ್ಮನ ಹಿಂದೆ ಬಚ್ಚಿಟ್ಟುಕೊಂಡ ಉತ್ತರನನ್ನು ಕಂಡ ವಿರಾಟ ಈ ರೀತಿ ಹೇಳುತ್ತಾನೆ 'ಸುದೇಷ್ಣೆ! ರಾಜಪುತ್ರನಿಗೆ ಬದಲು ವಿದೂಷಕನನ್ನು ಹೆತ್ತೆಯಲ್ಲ?'

ಅದಕ್ಕೆ ಉತ್ತರ ಈ ರೀತಿ ಹೇಳುತ್ತಾನೆ: 'ಅಮ್ಮ ನಿನ್ನಿಂದ ಲೋಕಕ್ಕೆ ಇದಕ್ಕಿಂತ ಇನ್ನೇನು ಉಪಕಾರ? ನನಗೇನೊ ರಾಜರೆಲ್ಲ ವಿದೂಷಕರೇ ಆಗಿಹೋದರೆ ಪ್ರಪಂಚ ಯಾವಾಗಲು ನಗು ನಗುತ್ತ ಸಂತೋಷವಾಗಿರುತ್ತೆ ಎಂದು ಭಾವನೆ'. ಉತ್ತರನ ಮಾತು ಕೇಳಿದರೆ ಅವನು ಕೇವಲ ಒಬ್ಬ ಹೆದರುಪುಕ್ಕಲ ಎಂದು ಅನಿಸುವುದಿಲ್ಲ.

'ಶತ್ರುಗಳು ಬೇರೆ ಬೇರೆ ಆಯುಧಗಳನ್ನು ಹಿಡಿದು ಬರುವ ಸಾಧ್ಯತೆ ಇರುವುದರಿಂದ ತಾನು ಎಲ್ಲ ವಿದ್ಯೆಗಳನ್ನೂ ಕಲಿಯಬೇಕಾಗುವುದು. ಹಾಗೆ ಕಲಿಯುತ್ತ ಕೂತಾಗ ಪ್ರಜೆಗಳ ಯೋಗಕ್ಷೇಮ ನೋಡಿಕೊಳ್ಳಲು ಸಮಯವೇ ಇರುವುದಿಲ್ಲ' ಎನ್ನುವ ಉತ್ತರನ ಪೌರುಷ ಬಹಳ ಹಾಸ್ಯಮಯವಾಗಿದೆ.

ಯುದ್ಧದಿಂದ ಸಿಗುವ ವೀರಸ್ವರ್ಗದಲ್ಲೂ ಉತ್ತರನಿಗೆ ಆಸಕ್ತಿ ಇಲ್ಲ. ವೀರಸ್ವರ್ಗಕ್ಕೆ ಅದೊಂದೇ ದಾರಿಯಾದರೆ ನನಗೆ ಈ ಹೇಡಿ ಭೂಮಿಯೆ ಸಾಕು ಎನ್ನುವುದು ಉತ್ತರನ

ವಾದ. ಇಂದ್ರ ಪದವಿ ಸಿಕ್ಕಬಹುದು ಎಂದು ಸೂಚಿಸಿದಾಗ ಉತ್ತರ ಹೇಳುವ 'ಆ ಭಯಕ್ಕಾದರೂ ನಾವು ಸಾಯಲೇ ಬಾರದು' ಎಂಬ ಮಾತು ಇಂದ್ರನ ವ್ಯಕ್ತಿತ್ವದ ಬಗೆಗಿನ ಕೀಟಳೆಯ ಜೊತೆಗೆ ನವಿರಾದ ಹಾಸ್ಯದಿಂದ ಕೂಡಿದೆ.

ವಿರಾಟನ ಆಸ್ಥಾನಕ್ಕೆ ದುರ್ಯೋಧನನ ಗೂಢಚಾರರು ಜಟ್ಟಿಗಳ ವೇಷದಲ್ಲಿ ಪಾಂಡವರನ್ನು ಹುಡುಕಿಕೊಂಡು ಬರುತ್ತಾರೆ. ಆಗ ಅವರೊಡನೆ ಉತ್ತರನ ಸಂಭಾಷಣೆ ಒಳ್ಳೆಯ ಹಾಸ್ಯಕ್ಕೆ ಉದಾಹರಣೆಯಾಗಿದೆ.

ವಜ್ರ: 'ನಾವು ಎಲ್ಲ ದೇಶಗಳನ್ನು ಸುತ್ತುತ್ತ ಬರುತ್ತಿದ್ದೇವೆ'.

ಉತ್ತರ: (ತಾಯಿಗೆ ಹೇಳುವಂತೆ)'ಯಾರ ಶಾಪವೊ!'

ಗಜ: 'ಶಾಪವಲ್ಲ ಪ್ರಭು. ಹೋದಕಡೆಯೆಲ್ಲ ಕಾಳಗ ಮಾಡಿ, ಗೆದ್ದು ಸೋಲೊಪ್ಪಿಗೆ ಪತ್ರ ಪಡೆದು ಬರುತ್ತಿದ್ದೇವೆ'.

ಉತ್ತರ: 'ನಿಮಗೆ ಬರೆಯಲೂ ಬರುವುದೊ.... ಸೋತರೆ ಅದೇ ಪತ್ರವನ್ನು ಬರೆದುಕೊಡಬೇಕಲ್ಲ'.

ಗಜ: 'ನಮಗೆ ಸೋಲು ಅಪರಿಚಿತ'.

ಉತ್ತರ: 'ಸಾವು ಅಷ್ಟೆ. ಅದು ಬರುವವರೆಗು ನಾವೆಲ್ಲ ಚಿರಂಜೀವಿಗಳೇ'.

ನಾಟಕ: **ತಿರುಮಂತ್ರ** (೧೯೫೩)

ಇದೊಂದು ಶುದ್ಧ ಹರ್ಷನಾಟಕ. ಕನ್ನಡ ಭಾಷೆಯನ್ನು ಬಳಸುವಾಗ ಅದರ ಮಣ್ಣಿನ ಕಂಪು ಇದ್ದರೆ ಮಾತಿನ ರುಚಿ ಹೆಚ್ಚು. ಅಂತಹ ಅನೇಕ ಉದಾಹರಣೆಗಳನ್ನು ಈ ನಾಟಕದಲ್ಲಿ ಕಾಣಬಹುದು. ನಾಟಕದ ನಾಯಕ ಮನು, ನಾಯಕಿ ಮಂಜು. ಇವರು ಪ್ರೀತಿಸಿ ಮದುವೆ ಆದಾಗ ಮಂಜುವಿನ ಅಪ್ಪ ಮದ್ದೂರಾಯನ ಸಮ್ಮತಿ ಇರುವುದಿಲ್ಲ. ಬದಲಾಗಿ ಈ ರೀತಿ ಮಾತಾಡಿರುತ್ತಾರೆ 'ಅವನು ಎಂ ಏ ಪ್ಯಾಸು ಮಾಡಿದ್ದರೇನು? ಏನು ಸಂಪಾದಿಸಿ ತಂದಾನು? ನಮ್ಮ ಮನೆಯ ಕೊಟ್ಟಿಗೆಯ ಎಮ್ಮೆ, ಹೊತ್ತಿಗೆ ಆರು ಲೀಟರ್ ಹಾಲಾದರು ಕರೆಯುತ್ತೆ!'

ಪರ್ವತವಾಣಿ ಪನ್ನುಗಳನ್ನು ಸಹ ಬಳಸಿದ್ದಾರೆ. ನಾಯಕ ಮನು ತನ್ನ ಹೆಂಡತಿ ಮಂಜುಗೆ ಈ ರೀತಿ ಹೇಳುತ್ತಾನೆ:

ಮನು: 'ನಿನ್ನಂತಹ ಹೆಂಡತಿಗೆ ಅಡಿಗೆಯುವನಾಗುವ ಪುಣ್ಯ ಎಷ್ಟು ಗಂಡಂದಿರಿಗೆ ಲಭಿಸೀತೇ'.

ಮಂಜು: 'ಹು.. ಸೀತೇ (ಲಭಿಸೀತೇ). ಈಗ ಸೀತೆ .. ಆಮೇಲೆ ರಾಮಾಯಣ!'

ಮನು: 'ದೇವರಾಣೆಗೂ ಇಲ್ಲ. ಆ ಅಳುಮುಂಜಿ ಅಯೋಧ್ಯೆಯ ಅರಸನ ಆಣೆಗೂ ಇಲ್ಲ!'

ತನ್ನ ಸ್ನೇಹಿತೆ ಮಾಯಾಳ ಪರಿಚಯ ಮಾಡಿಕೊಡುತ್ತ ಮಂಜು ಈ ರೀತಿ ಹೇಳುತ್ತಾಳೆ: 'ಇವಳು ಅಂತಿಂತಹ ಸ್ನೇಹಿತೆ ಅಲ್ಲ. ಅವಳಿಗೆ ತಲೆ ನೋವು ಬಂದರೆ ನಾನು ಮಾತ್ರೆ ನುಂಗುತ್ತೇನೆ. ಅವಳಿಗೆ ವಾಸಿ ಆಗುತ್ತದೆ'. ಈ ರೀತಿಯ ಮಾತುಗಳು ನಾಟಕದ ಪಾತ್ರಗಳ ಸಂಬಂಧಗಳನ್ನು ಹೊರ ತರುವುದಲ್ಲದೆ ನಮ್ಮ ಸವಿಯಾದ ಕನ್ನಡ ಭಾಷೆ ಬಳಸಿ ಹೇಗೆ ರಸವತ್ತಾಗಿ ಮಾತಾಡಬಹುದು ಎಂಬುದನ್ನು ತೋರಿಸುತ್ತದೆ. ಈ ನಾಟಕ ಬರೆದ ಕಾಲಕ್ಕೆ ಇದು ಒಂದು ರೀತಿಯ Trend Setter ಆಗಿದೆ. ಕನ್ನಡ ಭಾಷೆಯನ್ನು ಬಳಸಿದರೆ ನಾವು ಈ ರೀತಿ ವಾಕ್‌ಚಾತುರ್ಯ ಪ್ರದರ್ಶಿಸಬಹುದು ಎನ್ನುವಂತೆ ಮಾಡುತ್ತದೆ.

ಗೋವು ಪಾತ್ರ ತನ್ನ ಮಗಳ ಬಗ್ಗೆ ಹೇಳುವ ಈ ಮಾತು ಇನ್ನೊಂದು ಉದಾಹರಣೆ.

ಗೋವು: 'ನಮ್ಮದು ಉತ್ತರಾದಿ ಮಠ. ಅವಳು ... ರಾಯರ ಮಠದವನ ಕೈಗೆ ಕುತ್ತಿಗೆ ಒಪ್ಪಿಸಿ ಕರಿಮಣಿ ಸುತ್ತಿಸಿಕೊಂಡು ಬಿಟ್ಟಳಮ್ಮ. ಅವಳು ರೊಮ್ಯಾಂಟಿಕ್ಕು .. ಅದರೆ ನಾನು ಹಿಸ್ಟೆರಿಕ್ ಅಲ್ಲ. ಅವಳು ಓಡಿಹೋದ ಬಾಗಿಲ ಕಡೆ ಒಂದು ಹಿಡಿ ಮಂತ್ರಾಕ್ಷತೆ ಎರಚಿ 'ಎಲ್ಲಾದರು ಚೆನ್ನಾಗಿರು' ಅಂತ ಸುಮ್ನಾಗಿ ಬಿಟ್ಟೆ.

ನಾಟಕ: **ತಿನ್ನಬೇಕೆ ತಿಂದು ಕುಡಿಯಬೇಕೆ**

ಭ್ರಷ್ಟಾಚಾರ ಕುರಿತಾದ ಈ ನಾಟಕದ ನಾಯಕನ ಹೆಸರೇ ಭ್ರಷ್ಟಾಚಾರ್ಯ. ಭ್ರಷ್ಟಾಚಾರ್ಯರು ತಮ್ಮ ಪತ್ನಿ ಕಪಿಲಾಬಾಯಿಯೊಡನೆ ನಡೆಸುವ ಈ ಸಾಂಭಾಷಣೆ ನೋಡಿ:

ಭ್ರ: 'ಮತ್ತೆ ನೀನು? ಕಪ್ಪೂ, ಮುಖ ಸಪ್ಪಗೆ?'

ಕಪ್ಪು: 'ಸಪ್ಪಗಲ್ಲದೆ ಇನ್ನೇನು? ನೀವು ಉಪ್ಪು ಹುಳಿ ಖಾರವಾಗಿ ಇಟ್ಟುಕೊಂಡಿದ್ದೀರಲ್ಲ, ಲಕ್ಷಣವಾಗಿ'.

ಭ್ರ: 'ಅಲ್ಲವೆ ನಾನೇನು ನಿನ್ನ ಯಾವ ಸಮ್ಮುದ್ರದಲ್ಲಿ ಅದ್ದಬೇಕಿತ್ತೆ?'

ಕಪ್ಪು: 'ಆಂ'

ಭ್ರ: 'ಉಪ್ಪಿಗೇ! ಮತ್ತೆ ಯಾವ ಹುಣಸೇಮರ ಹತ್ತಿಸಬೇಕಿತ್ತೇ?'

ಕಪ್ಪು: 'ಹುಳಿಗೆ?'

ಭ್ರ: 'ಹೂಂ'

ಕಪ್ಪು: 'ಯಾವ ಮೆಣಸಿನಕಾಯಿ ಮೂಟೆಯಲ್ಲಿ ಮುಚ್ಚಿಡಬೇಕಿತ್ತೆ?'

ಭ್ರ: 'ಕಾರಕ್ಕೆ? ಲೇ ....'

ಈ ರೀತಿ ಗಂಡ ಹೆಂಡಿರ ನಡುವೆ ಚೆಂಡಿನಂತೆ ಪುಟಿದಾಡುವ ಚುರುಕಾದ ಸಂಭಾಷಣೆ ಹಾಸ್ಯವನ್ನು ಹೊರ ತರುತ್ತದೆ.

ನಾಟಕ: **ಪದ್ಮಾವತಿ ಪರಿಣಯ**

ಈ ನಾಟಕದಲ್ಲಿ ಮದ್ದೂರಾಯರು ತಮ್ಮ ಮಗಳು ಪದ್ದುವಿಗೆ ವರ ಹುಡುಕುತ್ತಿದ್ದಾರೆ. ಈ ಸಂದರ್ಭದಲ್ಲಿ ಉಂಟಾಗುವ ಹಾಸ್ಯಮಯ ಸನ್ನಿವೇಶಗಳು ಅನೇಕ. ಅಂತಹ ಒಂದು ಉದಾಹರಣೆ ಇಲ್ಲಿ.

ಮದ್ದು: '... ಹಯ್ಯೊ ಪೆಂಗುಧಾಮ. ಒಂದೂ ತಿಳಿಯದೆ ಹೀಗೆ ಮಾತಾಡಬೇಡವೊ!.... ಬಾಯಿಮುಚ್ಚಿಕೊಂಡು ಈಗ ಪಾನಕ ಕುಡಿ'.

ಪದ್ದು: 'ಬಾಯಿಮುಚ್ಚಿಕೊಂಡು ಕುಡಿಯುವುದಕ್ಕೆ ಹೋಗಿ ಮುಖ ಮೈಯೆಲ್ಲ ಚೆಲ್ಲಿಕೊಂಡಾರು....'

ವರದಕ್ಷಿಣೆ ಕೇಳಿದ ಅಳಿಯನನ್ನು ಗದರಿಸುವ ಮಾವನುಂಟೆ? ಈ ನಾಟಕದಲ್ಲಿ ಅದೂ ಉಂಟು. ಶುದ್ದ ಕನ್ನಡದ ಕಂಪು ತುಂಬಿದ ಹಾಸ್ಯಕ್ಕೆ ಈ ಸಂಭಾಷಣೆ ಒಂದು ಒಳ್ಳೆಯ ಉದಾಹರಣೆ.

ಮಾವ: 'ಲೋ ಅಳಿಯ, ಇಗೊ ನೀನು ಕೇಳಿದ ಬೈಸಿಕಲ್ಲು. ಜೊತೆಗೆ ಇದಕ್ಕೆ ನೀನೂ ಬದುಕಿರುವವರೆಗೂ 'ರಬ್ಬರ್ ಟೈರೂ....' ಇನ್ನು ಬೈಸಿಕಲ್ಲು ಕೆಟ್ಟಿತು ಹೆಂಡತಿಯನ್ನು ಬಿಟ್ಟುಬಿಡುತ್ತೇನೆ ಅಂತ ಹೆದರಿಸಿದೆಯೊ, ಹಲ್ಲು ಉದುರಿಸಿ ಹಲ್ಲು ಕಟ್ಟುವವನ ಅಂಗಡಿಗೆ ಮಾರಿ ಬಿಡುತ್ತೇನೆ. ಹುಷಾರ್! ಕಟ್ಟು ತಾಳಿ. ಹೂಂ' (ಗರ್ಜನೆ).

ಅದಕ್ಕೆ ಆ ನಾಚಿಕೆ ಕೆಟ್ಟ ಭಂಡ ಅಳಿಯ 'ಮಾವ, ನಿಮ್ಮ ಮುಂದಾಲೋಚನೆಗೆ ಅನಂತ ವಂದನೆ. ಆದರೆ ಗಾಳಿ ಹೊಡೆಯುವುದಕ್ಕೆ ಪಂಪು ತಾವು ಮರೆತ ಹಾಗಿದೆ. ಪ್ರಮಾದವಿಲ್ಲ...ನಾಗೋಲಿ ಹೊತ್ತಿಗೆ ತರಿಸಿ ಬಿಡೋಣವಾಗಲಿ'ಎಂದನಂತೆ.

## ಕೊನೆಯ ಮಾತು

ಈ ರೀತಿ ತಮ್ಮ ನಾಟಕಗಳಲ್ಲಿ ಪರ್ವತವಾಣಿ ಸಾಮಾಜಿಕ ಲೋಪಗಳ ಬಗ್ಗೆ ಹರಿತವಾದ ಟೀಕೆಯನ್ನು ಹರಿಯಲು ಬಿಡುತ್ತಾರೆ. ನಾವು ಸಾಧಾರಣವಾಗಿ ಆಡುವ ಮಾತಿನಿಂದಲೂ ಪರ್ವತವಾಣಿಯವರು ಹೇಗೆ ಹಾಸ್ಯ ಹೊಮ್ಮಿಸುತ್ತಾರೆ ಎಂಬುದಕ್ಕೆ ಈ ಮುಂಚೆ ಉಲ್ಲೇಖಿಸಿದ ಸನ್ನಿವೇಶಗಳು ಸಾಕ್ಷಿಯಾಗಿವೆ.

ಈ ಪರಿಚಯ ಓದುಗರನ್ನು ಪರ್ವತವಾಣಿಯವರ ನಾಟಕಗಳನ್ನು ಓದಲು, ಓದಿ ಆನಂದಿಸಿ ರಂಗದ ಮೇಲೆ ಪ್ರಯೋಗಿಸಲು ಪ್ರೇರೇಪಿಸಿದರೆ ಈ ಲೇಖನ ಸಾರ್ಥಕವೆನಿಸುತ್ತದೆ.

ಆಧಾರ

೧. ಪರ್ವತವಾಣಿ ನಾಟಕ ಲೋಕ ೧

೨ 'ಭರತವಾಕ್ಯ' ದ. ರಾ. ಬೇಂದ್ರೆ. ಪುಟ ೧೫೧ – ೧೫೪

೩. ಪರ್ವತವಾಣಿ ನಾಟಕ ಲೋಕ ೨

೪ 'ಭರತವಾಕ್ಯ' ಸ. ಸ. ಮಾಳವಾಡ. ಪುಟ ೩೦೯ – ೩೧೭

೫. ೧೯೬೮ರ ಪ್ರಕಟಣೆಗೆ ಶ್ರೀ. ಜಿ. ವೆಂಕಟಸುಬ್ಬಯ್ಯನವರ ಹಿನ್ನುಡಿ. ಪುಟ ೩೨೦ – ೩೨೫

೬. ಕನ್ನಡ ರಂಗಭೂಮಿ ನಡೆದು ಬಂದ ಹಾದಿ – ಸಂಪಾದಕ ಶ್ರೀರಂಗ

೭ ಪರ್ವತವಾಣಿ ನಾಟಕಗಳು : ಒಂದು ಸಮೀಕ್ಷೆ ಡಾ. ಸಾ. ಶಿ. ಮರುಳಯ್ಯ. ಪುಟ ೩೫೮–೩೭೯

೮. ಪರ್ವತವಾಣಿಯವರ ಕೆಲವು ಜನಪ್ರಿಯ ನಾಟಕಗಳು.

ಕೀಚಕ, ಕವಿಭಿಕ್ಷೆ, ತಿರುಮಂತ್ರ, ತಪ್ಪು ಹೆಜ್ಜೆ, ಸಪ್ತಪದಿ, ಫೊರೆನ್‌ಮಾಲ್, ಪದ್ಮಾವತಿ ಪರಿಣಯ, ತಿನ್ನಬೇಕೆ ತಿಂದು ಕುಡಿಯಬೇಕೆ, ಮೀನ ಮದುವೆ, ವಾರ್ಷಿಕೋತ್ಸವ, ಕಾಡ್ಮನ್ಸ್, ಆಶೀರ್ವಾದ, ಔತಣ, ಪ್ರತ್ಯಕ್ಷ ಪ್ರಮಾಣ, ಹಣ ಹದ್ದು, ಸುಂದ್ರೋಪ ಸುಂದ್ರು, ಬಹದ್ದೂರ್ ಗಂಡ, ಉಂಡಾಡಿ ಗುಂಡ ಇತ್ಯಾದಿ



# ಹಾಸ್ಯ ಸಾಹಿತಿ ಶ್ರೀಮತಿ ಟಿ. ಸುನಂದಮ್ಮ

ಸರೋಜ ನಾರಾಯಣರಾವ್

ಕನ್ನಡ ಹಾಸ್ಯ ಸಾಹಿತ್ಯವನ್ನು ಕುರಿತು ಅಥವಾ ಒಟ್ಟು ಕನ್ನಡ ಸಾಹಿತ್ಯವನ್ನು ಕುರಿತು ಹೇಳುವವರು ಶ್ರೀಮತಿ ಟಿ. ಸುನಂದಮ್ಮನವರ ಹೆಸರನ್ನು ಹೇಳಲೇ ಬೇಕು. ಮಹಿಳೆಯರಲ್ಲಿ ಸಾಕ್ಷರತೆಯೇ ಕಡಿಮೆಯಾಗಿದ್ದ ಕಾಲದಲ್ಲಿ ಇವರು ಬರೆಯಲು ಪ್ರಾರಂಭಿಸಿದರು. ಅವರ ಮೊದಲ ಪದ್ಯ 'ಹೂವು' ಪ್ರಕಟವಾದಾಗ ಅವರಿಗೆ ಒಂಬತ್ತು ವರ್ಷ. ಅಷ್ಟು ಚಿಕ್ಕ ವಯಸ್ಸಿನಲ್ಲೇ ಕವನವನ್ನು ಬರೆದ ಅವರ ಆಸಕ್ತಿ ಮುಂದೆ ಗಂಭೀರ ಗದ್ಯಸಾಹಿತ್ಯದ ಕಡೆಗೆ ಹರಿಯಿತು. ಸಣ್ಣ ಕತೆಗಳನ್ನೂ, ಪ್ರಬಂಧಗಳನ್ನೂ ಬರೆದರು. ಅವರ ಬರಹದ ಬದುಕಿಗೆ ಒಂದು ಅನಿರೀಕ್ಷಿತ ತಿರುವನ್ನು ನೀಡಿದ್ದು, ಡಾ. ಶಿವರಾಂ ಅವರು ಪ್ರಾರಂಭಿಸಿದ ಹಾಸ್ಯ ಪತ್ರಿಕೆ 'ಕೊರವಂಜಿ'. ಅವರ ಲೇಖನ 'ನಾಸ್ಕಾರಿಟ್ಟಿದ್ದು', ಕೊರವಂಜಿಯಲ್ಲಿ ಪ್ರಕಟವಾಗಿ ಓದುಗರ ಮೆಚ್ಚುಗೆ ಪಡೆಯಿತಷ್ಟೇ ಅಲ್ಲದೆ, ಮುಂದೆ ಇಪ್ಪತ್ತೈದು ವರ್ಷಗಳಕಾಲ ಒಂದೇ ಸಮನೆ ಅವರ ಲೇಖನಗಳು ಕೊರವಂಜಿಯಲ್ಲಿ ಪ್ರಕಟವಾದವು. ಅವರು 'ಹಾಸ್ಯಸಾಹಿತಿ' ಎಂದು ಪ್ರಸಿದ್ಧರಾದರು.

ಚಿಕ್ಕ ವಯಸ್ಸಿನಿಂದಲೂ ಸುನಂದಮ್ಮನವರು ಓದಿನಲ್ಲಿ ಚುರುಕು. ವ್ಯಾಕರಣ, ಗಣಿತ, ಆಂಗ್ಲಭಾಷೆಯ ಪದ್ಯ ಪಾಠಗಳು–ಪ್ರತಿಯೊಂದರಲ್ಲೂ ಜಾಣೆ. ಇವರು ತರೀಕೆರೆಯಲ್ಲಿ ಶಾಲೆಗೆ ಸೇರಿದಾಗ ಅದೇ ತೊಂದರೆಯಾಗಿ ಪರಿಣಮಿಸಿತು. ಇವರು ಇಷ್ಟು ಚುರುಕಾಗಿದ್ದು ಉಪಾಧ್ಯಾಯರೆಲ್ಲರ ಮೆಚ್ಚುಗೆಯನ್ನು ಪಡೆದರೂ, ತರಗತಿಯ ಇತರ ವಿದ್ಯಾರ್ಥಿಗಳೆಲ್ಲ ಹುಡುಗರೇ ಆಗಿದ್ದು, ಆ ಹುಡುಗರ ಮನೆಯವರಿಗೆಲ್ಲ

ಇದೊಂದು ಅವಮಾನದ ಸಂಗತಿಯಾಗಿಬಿಟ್ಟಿತು! ಆ ಎಲ್ಲ ವಿದ್ಯಾರ್ಥಿಗಳ ತಂದೆಯರೂ ಒಟ್ಟಿಗೆ ಮುಖ್ಯೋಪಾಧ್ಯಾಯರ ಬಳಿಗೆ ಹೋಗಿ, ತರಗತಿಯ ಈ ಏಕೈಕ ವಿದ್ಯಾರ್ಥಿನಿಯನ್ನು ಮನೆಗೆ ಕಳಿಸಬೇಕೆಂದೂ, ಇಲ್ಲದಿದ್ದರೆ ಮುಖ್ಯೋಪಾಧ್ಯಾಯರೇ ಮನೆಗೆ ಹೋಗಬೇಕಾಗುವುದೆಂದೂ ಬೆದರಿಸಿದರು! ಆ ಕೂಡಲೆ ಬೇರೆ ಮಾರ್ಗವೇ ಇಲ್ಲದೆ ಸುನಂದಮ್ಮನವರನ್ನು ಮನೆಗೆ ಕಳಿಸಲಾಯಿತು. ಆದರೆ, ಅವರ ವಿದ್ಯಾಭ್ಯಾಸವೇನೂ ಅಲ್ಲಿಗೇ ನಿಲ್ಲಲಿಲ್ಲ. ಅವರ ತಾಯಿ, ಅದೇ ಗುರುಗಳಿಂದ ಮನೆಪಾಠವನ್ನು ಏರ್ಪಡಿಸಿ, ಅವರ ವಿದ್ಯಾಭ್ಯಾಸ ಮುಂದುವರೆಯುವಂತೆ ನೋಡಿಕೊಂಡರು. ನಿರೀಕ್ಷಿಸಿದಂತೆ ಸುನಂದಮ್ಮನವರು ಲೋಯರ್–ಸೆಕೆಂಡರಿಯಲ್ಲಿ ಮೊದಲ ದರ್ಜೆಯಲ್ಲಿ ಉತ್ತೀರ್ಣರಾದರು. ಅಷ್ಟೇ ಅಲ್ಲ, ಮುಂದೆ ಎಸ್.ಎಸ್.ಎಲ್.ಸಿಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಅಲ್ಲಿಂದ ಮುಂದೆ, ಇಂಟರ್ಮೀಡಿಯೇಟ್ ಪರೀಕ್ಷೆಯಲ್ಲಿಯೂ ಕಾಲೇಜಿಗೆ ಮೊದಲ ಸ್ಥಾನ ಪಡೆದರು. ಮುಂದೆ ಹಿಂದಿ ಕಲಿತಾಗ ಮೂರೂ ಪರೀಕ್ಷೆಗಳಲ್ಲಿ ಪ್ರಥಮ ದರ್ಜೆ! ತೀಕ್ಷ್ಣ ಬುದ್ಧಿಯ ಜೊತೆಗೇ ಉತ್ತಮ ಅಧ್ಯಯನಶೀಲತೆಯನ್ನೂ ಮೈಗೂಡಿಸಿಕೊಂಡಿದ್ದರೂ, ಅನಿವಾರ್ಯ ಕಾರಣಗಳಿಂದ ಕಾಲೇಜು ವಿದ್ಯಾಭ್ಯಾಸವನ್ನು ಮುಂದುವರೆಸಲಾಗಲಿಲ್ಲ. ಆದರೆ ಅವರ ಗ್ರಹಣಶಕ್ತಿ ಅಭಿವ್ಯಕ್ತಿಯಲ್ಲಿನ ಜಾಣ್ಮೆ ಮುಂದೆ ಅವರ ಸಾಹಿತ್ಯದಲ್ಲಿ ಪ್ರತಿಬಿಂಬಿಸಿತು. ಇವರ ಲೇಖನಗಳಲ್ಲಿ ಸಾಂಸಾರಿಕ ವಿಷಯಗಳಲ್ಲದೆ 'ಬಂಗಾರದ ನಿಯಂತ್ರಣ', 'ಸಂಪತ್ ತೆರಿಗೆ', 'ಮಿತ ಸಂತಾನ ಚಳುವಳಿ' ಮುಂತಾದ ವಸ್ತುಗಳಿರುವುದು ಗಮನಾರ್ಹ. ಅವರ ಭಾಷಣಗಳು ಸಹ ಚುರುಕಾಗಿದ್ದು ವಸ್ತುವೈವಿಧ್ಯದಿಂದ ಕೂಡಿರುತ್ತಿದ್ದವು. ಆಗಿಂದಾಗ ತಲೆದೋರುವ ಬದಲಾವಣೆಗಳು, ಅದಕ್ಕೆ ಜನರು ಸ್ಪಂದಿಸುವ ರೀತಿ ಮುಂತಾದವನ್ನು ಸದಾ ಗಮನದಲ್ಲಿಟ್ಟುಕೊಂಡಿರುತ್ತಿದ್ದರು.

ಸುನಂದಮ್ಮನವರು ಬೆಳೆದ ವಾತಾವರಣದಲ್ಲಿ ಸಾಹಿತ್ಯಕ ಎನಿಸಿಕೊಳ್ಳುವಂತ–ಹುದೇನೂ ಇರಲಿಲ್ಲ. ಆದರೆ ವಿದ್ಯಾಭ್ಯಾಸಕ್ಕೆ ಉತ್ತೇಜನವಿತ್ತು. 'ಆಧುನಿಕ' ವಾತಾವರಣವಿತ್ತು. ಇವರ ತಾಯಿಯವರು ಸಂಪ್ರದಾಯದ ಪೂಜೆ, ವ್ರತ ಮುಂತಾದವುಗಳನ್ನು ಆಚರಿಸುತ್ತಲೇ ಆಧುನಿಕ ರೀತಿನೀತಿಗಳನ್ನು ತಾವು ಅನುಸರಿಸುತ್ತಿದ್ದುದಲ್ಲದೆ, ಮಗಳು ಸುನಂದಮ್ಮನವರಿಗೂ ಅಭ್ಯಾಸ ಮಾಡಿಸಿದ್ದರು. ಅವರು ಒಳ್ಳೆಯ ಕನ್ನಡ ಪುಸ್ತಕಗಳನ್ನಲ್ಲದೆ ಶೇಕ್ಸ್‌ಪಿಯರನ ನಾಟಕಗಳನ್ನೂ ಓದುತ್ತಿದರು. ಸುನಂದಮ್ಮ ಹಿಂದಿ ತರಗತಿಗೆ ಸೇರಿದಾಗ ಅವರ ಜೊತೆಗೆ ತಾವೂ ಸೇರಿದರು ಮತ್ತು ಟೆನ್ನಿಸ್ ಆಟ ಕಲಿಯಲು ಪ್ರಾರಂಭಿಸಿದಾಗ ಅವರೊಂದಿಗೆ ತಾವೂ ಕಲಿತರು. ತಾಯಿಯ ಮನೆಯಲ್ಲಿದ್ದ ಆಧುನಿಕ ವಾತಾವರಣ ಮುಂದೆ ಅತ್ತೆಯ ಮನೆಯಲ್ಲಿರಲಿಲ್ಲ. ಹೀಗಾಗಿ,

ಬಾಲ್ಯದ ದಿನಗಳಲ್ಲೇ ಕುದುರೆ ಸವಾರಿ, ಸೈಕಲ್ ಸವಾರಿ ಮಾಡುತ್ತಿದ್ದ ಸುನಂದಮ್ಮನವರು ಅತ್ತೆಯ ಮನೆಯಲ್ಲಿ ಕಟ್ಟುನಿಟ್ಟಿನ ಸಂಪ್ರದಾಯಗಳ ಕೋಟೆಯೊಳಗೆ ಸಿಲುಕಿದರು. ಆದರೆ ಇದು ಹೆಚ್ಚು ಕಾಲ ನಡೆಯಲಿಲ್ಲ. ಅವರ ಪತಿಯವರಿಗೆ ನ್ಯಾಯಾಂಗ ವಿಭಾಗದಲ್ಲಿ ಕೆಲಸವಾದ ಮೇಲೆ ಇವರ ಸ್ವಂತ ಸಂಸಾರ ಪ್ರಾರಂಭವಾಯಿತು.

ಆ ಹೊತ್ತಿಗೆ ಅವರಿಗೆ ಬರವಣಿಗೆಯಲ್ಲಿ ಹೆಚ್ಚು ಉತ್ಸಾಹ ಮೂಡಿತ್ತು. ಅವರ ಲೇಖನ ಹಾಗೂ ನಾಟಕಗಳಿಗೆ ಒಳ್ಳೆಯ ಬೇಡಿಕೆ ಮತ್ತು ಪ್ರೋತ್ಸಾಹ ದೊರೆಯತೊಡಗಿತ್ತು. ಕೊರವಂಜಿಗೆ ಸತತವಾಗಿ ಬರೆದ ಏಕೈಕ ಮಹಿಳಾಸಾಹಿತಿ ಎನಿಸಿಕೊಂಡರು. ಕೊರವಂಜಿಗಾಗಿ ಇವರು ಬರೆದ ಮೊದಲ ಲೇಖನ ಮೇಲೆ ಹೇಳಿದಂತೆ 'ನಾನ್ಕಾರಿಟ್ಟಿದ್ದು'. ಅ ಲೇಖನ ಹೀಗೆ ಮುಕ್ತಾಯವಾಗುತ್ತದೆ: 'ಆವತ್ತಿನಿಂದ ಈವತ್ತಿನವರೆಗೂ ಕಾರನ್ನ ಹೊರಗೆ ತೆಗೆದಿಲ್ಲ. ಹದಿನೈದು ರೂಪಾಯಿಗೆ ಡ್ರೈವರ್ ಸಿಕ್ಕೋ ಕಾಲ ಬರೋತನಕ ಅದಲ್ಲೇ, ನಾನಿಲ್ಲೇ! ಸಾಕಪ್ಪ ಸಾಕು, ನಾನ್ಕಾರಿಟ್ಟ ಸುಖ!' ಅ ಕಾರು ನಿಂತಿತು. ಆದರೆ ಅವರ ಲೇಖನ ಕೊನೆಯುವರೆಗೂ ನಿಲ್ಲಲಿಲ್ಲ. ಚುರುಕಾಗಿಯೇ ಓಡಿತು. ಓಡಿಯೇ ಓಡಿತು.

ಬಹುಮಟ್ಟಿಗೆ ಮಧ್ಯಮವರ್ಗದ ಕುಟುಂಬಗಳಲ್ಲಿ ನಡೆಯುವಂತಹ ವಿಷಯಗಳನ್ನೇ ಆಯ್ದು, ಅದಕ್ಕೆ ಹಾಸ್ಯದ ಮೆರುಗನ್ನು ಕೊಟ್ಟು ಬರೆಯುತ್ತಿದ್ದರು. 'ಕೆನೆ ರುಚಿ' ಲೇಖನವನ್ನು 'ಅಜ್ಜಿಗೆ ಮಕ್ಕಳಿಗಿಂತ ಮೊಮ್ಮಕ್ಕಳ ಮೇಲೆ ಅಕ್ಕರೆ ಹೆಚ್ಚು' ಎಂಬ ಮಾತಿನ ಮೇಲೆ ಹೆಣೆದಿದ್ದಾರೆ.

ಮೊಮ್ಮಕ್ಕಳು ಇಬ್ಬರು ಅಮೆರಿಕದಿಂದ ಮತ್ತು ಇಬ್ಬರು ದಿಲ್ಲಿಯಿಂದ ಬಂದಿಳಿಯುತ್ತಾರೆ. ಈ ಮೊಮ್ಮಕ್ಕಳ ಚೇಷ್ಟೆಯಿಂದಾಗಿ ತಾತನ ಕಾಲದ ಕುರ್ಚಿಗಳು, ಈಸೀಛೇರು, ಮೂಲೆ ಮೇಜು ಹುಡುಗರು ಧೊಪಧೊಪನೆ ಕೂತಾಗ ಎಗರಿದಾಗ ಕಿರಲಿ ನರಳಿ ಅಂಗಾಂಗಳನ್ನು ಕಳೆದುಕೊಂಡವು. ಅವರ ಚೆಂಡಾಟದಲ್ಲಿ ಪೂರ್ವಜರು, ದೇವಾಧಿದೇವತೆಗಳು ಕಟ್ಟುಗಾಜು ಒಡೆಸಿಕೊಂಡರು. ಪ್ರತಿವರ್ಷ ನಿಯಮಿತವಾಗಿ ಶ್ರಾದ್ಧಮಾಡಿಸಿಕೊಂಡಿದ್ದ ಪೂರ್ವಜರು ತ್ರಿಶಂಕುವಿನಂತೆ ನೇತಾಡುತ್ತಿರುವುದನ್ನು ಕಂಡ ಮೈಲಾರಯ್ಯ 'ಶಾಂತಂ ಪಾಪಂ ಶಾಂತಂ ಪಾಪಂ' ಎಂದು ಕೆನ್ನೆ ಕೆನ್ನೆ ಬಡಿದುಕೊಂಡ. ಎಷ್ಟೋ ಮನೆಗಳಲ್ಲಿ ಇಂತಹ ವಿಪರೀತ ಚೇಷ್ಟೆಯ ಮಕ್ಕಳಿರುತ್ತಾರೆ. ತಾಯ್ತಂದೆಯರ ಅಂಕೆಯೂ ಇಲ್ಲದಂತೆ ಅಜ್ಜ–ತಾತಂದಿರ ಮನೆಗೆ ಬಂದಾಗ ಅವರಿಗೆ ಇನ್ನೂ ಹುಮ್ಮಸ್ಸು ಜಾಸ್ತಿಯಾಗಿಬಿಡುತ್ತದೆ. ಅಂತಹ ಪರಿಸ್ಥಿತಿಯನ್ನೇ ಹಾಸ್ಯಪೂರ್ಣವಾಗಿ ಚಿತ್ರಿಸಿದ್ದಾರೆ.

ಅತ್ತೆ–ಸೊಸೆಯರ ಸಂಬಂಧ, ಬಹುಶಃ ಎಲ್ಲ ಕಾಲಕ್ಕೂ ಸ್ವಾರಸ್ಯಕರವಾಗಿಯೇ ಇರುತ್ತದೆ! 'ನನ್ನ ಅತ್ತೆಗಿರಿ' ಲೇಖನದಲ್ಲಿ, ಇವರ ಅಜ್ಜಿ ಹೇಳುತ್ತಿದ್ದ ಪ್ರಸಂಗವೊಂದು

ಹೀಗಿದೆ: 'ಬಾಗಿಲಿಗೆ ಭಿಕ್ಷುಕ ಬಂದು ನಿಂತ. ಸೊಸೆ 'ಮುಂದಕ್ಕೆ ಹೋಗಿಬಾಪ್ಪಾ' ಎಂದಳು. ಮೆಲ್ಲನೆ ಒಳಗಿನಿಂದ ಘರ್ಜನೆ ಮೊಳಗಿತು-'ನಿನಗ್ಯಾರೇ ಯಜಮಾನಿಕೆ ಕೊಟ್ಟೋರು? 'ಇರಪ್ಪ ಬಂದೆ'. ಅಡುಗೆಮನೆ ಅಂತಃಪುರದಿಂದ ನಿಧಾನವಾಗಿ ನಡೆದುಬಂದ ಅತ್ತೆ, ಆಸೆಗಣ್ಣಾಗಿ ಕಾದಿದ್ದ ಭಿಕ್ಷುಕನಿಗೆ ದರ್ಪದಿಂದ ಹೇಳಿದಳು: 'ಮುಂದಕ್ಕೆ ಹೋಗಿಬಿಟ್ಟು ಬಾ'. ಒಂದು ಸಾಧಾರಣ ಸನ್ನಿವೇಶವನ್ನೇ ಹಾಸ್ಯ ತುಂಬಿ ಚಿತ್ರಿಸುವ ಚಾತುರ್ಯವನ್ನು ಇವರು ತೋರಿದ್ದಾರೆ!

ಲೇಖನಕ್ಕಾಗಿ ಆಯ್ದುಕೊಂಡ ವಸ್ತುವಿಗೆ ತಕ್ಕಂತೆ ಉಪಮಾನಗಳನ್ನು ಸೃಷ್ಟಿಸಿಕೊಳ್ಳುವುದರಲ್ಲಿ ಇವರ ಜಾಣ್ಮೆಯನ್ನು ನೋಡಿ: 'ಮುನ್ನುಡಿಗೊಂದು ಕನ್ನಡಿ' ಲೇಖನ ಹೀಗೆ ಪ್ರಾರಂಭವಾಗುತ್ತದೆ: 'ಮದುಮಗಳಿಗೆ ಮಾಂಗಲ್ಯದಂತೆ, ಪಂಜಾಬಿ ಉಡುಗೆಗೆ 'ದುಪ್ಪಟ'ದಂತೆ, ಸಾರಿಗೆ ಒಗ್ಗರಣೆಯಂತೆ, ಪ್ರಕಟವಾಗುವ ಪುಸ್ತಕಕ್ಕೆ ಮುನ್ನುಡಿ ಅವಶ್ಯಕ... ಬರೆಯುವ ಮಂದಿಯಂತೂ ಹಾಗೆ ಭಾವಿಸುತ್ತಾರೆ! ಮುನ್ನುಡಿ ಬರೆದುಕೊಡಿ ಎಂದು ಕೇಳುವವರ ಮನಸ್ಸಿನಲ್ಲಿ, ಆ ಪುಸ್ತಕವನ್ನೂ, ಬರೆದಿರುವ ತಮ್ಮನ್ನೂ ಹೊಗಳಿ ನಾಲ್ಕು ಮಾತು ಬರೆದುಕೊಡಲಿ ಎಂಬ ಆಶಯವಿರುತ್ತದೆ. ಆದರೆ ಒಮ್ಮೆ ಹೀಗಾಯಿತಂತೆ ...ಇಂಥ ಶ್ರೇಷ್ಠ ಕೃತಿಯೊಂದನ್ನು ಪೂರ್ತಿ ಓದಲಾರದ ಮುನ್ನುಡಿ ಕರ್ತನೊಬ್ಬ ಅರ್ಧದಷ್ಟು ಓದಿ ಮಿಕ್ಕ ಭಾಗಕ್ಕೆ ಊಹಾಲೋಕದಲ್ಲಿ ಓಡಾಡಿ, ಮುನ್ನುಡಿ ಬರೆದುಕೊಟ್ಟ. ಸೊಗಸಾದ ಮುನ್ನುಡಿ-ಒಂದು ನ್ಯೂನತೆ ಹೊರತಾಗಿ; ವಿಷಾದಾಂತ ಕಾದಂಬರಿ ಮುನ್ನುಡಿಯ ಪ್ರಕಾರ ಸುಖಾಂತವಾಗಿತ್ತು'. (ಈ ಲೇಖನವನ್ನು ಅವರು ನಾವು 'ಸಾಹಿತ್ಯಕೂಟ'ವನ್ನು ನಡೆಸುತ್ತಿದ್ದಾಗ ಒಂದು ಸಭೆಗಾಗಿ ಬರೆದಿದ್ದರು.)

ಅವರ ಕೆಲವು ಲೇಖನಗಳಿಗೆ 'ಹಿನ್ನೆಲೆ' ಒದಗಿಸಿದ ಸಂದರ್ಭ ಯಾವುದೆಂದು, ಅವರಿಗೆ ಹತ್ತಿರದವರಾಗಿದ್ದವರು ಸುಲಭವಾಗಿ ಊಹಿಸಬಹುದು. ನಾವೆಲ್ಲ ಒಮ್ಮೆ ಪರಿಷತ್ತಿನ ಮೂಲಕ ಪಾದಯಾತ್ರೆ ಮಾಡಿ ಪುಸ್ತಕಗಳನ್ನು ಮಾರಿದ್ದೆವು. ಒಬ್ಬೊಬ್ಬರಿಗೂ ಇಂತಹುದೇ ಬಡಾವಣೆ, ಇಷ್ಟೇ ರಸ್ತೆಗಳು ಎಂದು ನಿಗದಿ ಮಾಡಿದ್ದರು. ಲೇಖಕಿಯರು ಮನೆಬಾಗಿಲಿಗೆ ಬಂದರೆಂಬ ಸಂಭ್ರಮದಲ್ಲಿ ಅನೇಕರು ಪುಸ್ತಕಗಳನ್ನು ಕೊಂಡರು. ಅದನ್ನೇ ಹಿನ್ನೆಲೆಯಾಗಿಟ್ಟುಕೊಂಡು 'ಸರಸುವಿನ ಸಾಹಿತ್ಯ ಪ್ರಚಾರ' ಎಂಬ ಲೇಖನದಲ್ಲಿ ಅವಳ ಅನುಭವವನ್ನು ಚಿತ್ರಿಸಿದ್ದಾರೆ.

ಸುನಂದಮ್ಮನವರು ಬರೆಯಲು ಪ್ರಾರಂಭಿಸಿದ ಕಾಲದಲ್ಲಿ ಮಹಿಳೆಯರಿರಲಿ, ಪುರುಷರಲ್ಲೂ ಹಾಸ್ಯಸಾಹಿತ್ಯವನ್ನು ರಚಿಸುವವರು ಹೆಚ್ಚು ಮಂದಿ ಇರಲಿಲ್ಲ. ಹರಿಕತೆ, ಪುರಾಣಗಳಲ್ಲಿ ಮಧ್ಯೆ ಮಧ್ಯೆ ವಿನೋದ ಕತೆಗಳನ್ನು ಹೇಳುತ್ತಿದ್ದರು. ನಾಟಕ, ಚಲನಚಿತ್ರಗಳಲ್ಲಿ ಹಾಸ್ಯ ಸನ್ನಿವೇಶಗಳಿರುತ್ತಿದ್ದವು. ರಾಜಮಹಾರಾಜರ ಆಸ್ಥಾನಗಳಲ್ಲಿ

ವಿದೂಷಕರಿದ್ದು ಅವರ ಕತೆಗಳು ಪ್ರಚಾರದಲ್ಲಿರುತ್ತಿದ್ದವು. ಆದರೆ 'ಹಾಸ್ಯಸಾಹಿತ್ಯ' ಈಗಿನಷ್ಟು ಸಮೃದ್ಧವಾಗಿ ಬೆಳೆದಿರಲಿಲ್ಲ. ಸುನಂದಮ್ಮನವರು ಕರ್ನಾಟಕದ ಆಚೆಯೂ, ಮುಂಬೈ, ಚೆನ್ನೈ, ನೈನಿಟಾಲ್ ಮುಂತಾದ ಕಡೆ ಸಾಹಿತ್ಯ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು. ಆಗ ಸಭೆಯಲ್ಲಿ ಅವರನ್ನು ಪರಿಚಯ ಮಾಡಿಕೊಡುವಾಗ 'ಕನ್ನಡದ ಹಾಸ್ಯಸಾಹಿತಿ' ಎಂದು ಹೇಳಿದರೆ ಜನ ಆಶ್ಚರ್ಯಪಡುತ್ತಿದ್ದರು.

ತಮ್ಮನ್ನು ಹಾಸ್ಯಸಾಹಿತಿಯಾಗಿ ರೂಪಿಸಿದ್ದು 'ಕೊರವಂಜಿ' ಎಂದು ಅವರೇ ಹೇಳಿಕೊಂಡಿದ್ದರೂ, ಅವರಲ್ಲಿ ಹಾಸ್ಯಮನೋಭಾವ ಮೊದಲಿನಿಂದಲೂ ಇದ್ದು, ಅದು ಹೊರಬರಲು ಕೊರವಂಜಿ ಕಾರಣವಾಯಿತು ಎಂದು ಹೇಳಬಹುದು. ಇಲ್ಲದಿದ್ದರೆ ಅಷ್ಟು ದೀರ್ಘಕಾಲ ಜೀವನದ ಪ್ರತಿ ಘಟನೆಯಲ್ಲಿ ಹಾಸ್ಯವನ್ನು ಗುರುತಿಸುತ್ತ ಅದನ್ನು ಬರವಣಿಗೆಯಲ್ಲಿ ರೂಪಿಸುವುದು ಸಾಧ್ಯವಾಗುತ್ತಿರಲಿಲ್ಲ. ಎಲ್ಲರಂತೆ ಅವರೂ ಜೀವನದಲ್ಲಿ ಕಷ್ಟಸುಖಗಳೆರಡನ್ನೂ ಅನುಭವಿಸಿದವರೇ. ಅದರೆ ಎಂತಹ ಸಂದರ್ಭದಲ್ಲೂ ಅವರ ಹಾಸ್ಯ ಮನೋಭಾವ, ಜೀವನಾಸಕ್ತಿ ಬತ್ತಲಿಲ್ಲ. ಇದಕ್ಕೆ ಅವರು ತಮ್ಮ ಓದುಗರು, ಆಕಾಶವಾಣಿ ಹಾಗೂ ಪತ್ರಿಕಾ ಸಂಪಾದಕರು ಕಾರಣರೆಂದು ಹೇಳುತ್ತಾರೆ.

ನನ್ನ ಪ್ರೌಢಶಾಲೆಯ ದಿನಗಳಲ್ಲೇ ನನಗೆ ಸುನಂದಮ್ಮನವರ ಪರಿಚಯವಾಯಿತು. ಅದು, ನನ್ನ ತರಗತಿಯಲ್ಲೇ ಇದ್ದ, ಅವರ ಬಂಧು ಒಬ್ಬರ ಮೂಲಕ. ಎಲ್ಲಾದರೂ ಸಭೆ ಸಮಾರಂಭಗಳಲ್ಲಿ ಕಂಡಾಗ 'ನಮಸ್ಕಾರ' ಹೇಳುತ್ತಿದ್ದೆವಷ್ಟೆ! ಮುಂದೆ ಒಂದು ದಿನ ನಾನು, ಕೆಲವರು ಬರಹಗಾರ್ತಿ ಗೆಳತಿಯರನ್ನು ನಮ್ಮ ಮನೆಗೆ ಕರೆದು, ನಾವು ಆಗಾಗ ಹಾಗೆ ಸೇರಿ, ಸಾಹಿತ್ಯ ವಿಚಾರಗಳನ್ನು ಕುರಿತು ಚರ್ಚಿಸುವ ಬಗ್ಗೆ ಪ್ರಸ್ತಾಪಿಸಿ ನೆರೆದಿದ್ದವರೆಲ್ಲ ಸಂತೋಷದಿಂದ ಒಪ್ಪಿದಮೇಲೆ ಪ್ರತಿತಿಂಗಳೂ ಒಬ್ಬರ ಮನೆಯಲ್ಲಿ ಸೇರಲು ಪ್ರಾರಂಭಿಸಿದೆವು. ಮುಂದೆ ಸುನಂದಮ್ಮನವರು ನನಗೆ ತುಂಬ ಹತ್ತಿರದವರಾದರು, ಆತ್ಮೀಯರಾದರು.

ಆ ಸಭೆಗಳಲ್ಲಿ ಸುನಂದಮ್ಮನವರು ಹಾಸ್ಯಲೇಖನಗಳನ್ನು ಪ್ರಸ್ತುತ-ಪಡಿಸುತ್ತಿದ್ದುದಲ್ಲದೆ ಅನೇಕ ಗಂಭೀರ ವಿಚಾರಗಳನ್ನು ಕುರಿತು ಚರ್ಚಿಸುತ್ತಿದ್ದರು. ಶ್ರೀರಂಗರ ನಾಟಕಗಳನ್ನು ಕುರಿತು ಅವರು ಬರೆದು ಪ್ರಸ್ತುತಪಡಿಸಿದ ಪ್ರಬಂಧವು ಈಗಲೂ ನೆನಪಿಗೆ ಬರುತ್ತದೆ. ಅಲ್ಲದೆ, ಆಗಿಂದಾಗ ಅವರು ಬರೆದ ನಾಟಕಗಳನ್ನು ಅವರೇ ನಿರ್ದೇಶಿಸುತ್ತಿದ್ದರು.

ಅವರ ಅರುವತ್ತು ವರ್ಷದ ಹುಟ್ಟಿದ ಹಬ್ಬವನ್ನು ನಾವು ಸಂಭ್ರಮದಿಂದ ಆಚರಿಸಿದೆವು. ಸುನಂದಮ್ಮನವರು ಹಾಸ್ಯಸಾಹಿತ್ಯಕ್ಷೇತ್ರಕ್ಕೆ ಕಾಲಿಡಲು ಕಾರಣರಾಗಿದ್ದ ಶ್ರೀಮಾನ್ ರಾ.ಶಿ. ಅವರು ಅಂದು ಅಧ್ಯಕ್ಷತೆ ವಹಿಸಿದ್ದರು.

ನಾನು ಬೆಂಗಳೂರಿಗೆ ಹೋದಾಗ, ಆಗಾಗ ಅವರ ಮನೆಗೆ ಹೋಗುತ್ತಿದ್ದೆ. ಮೊದಲೇ ದೂರವಾಣಿಯ ಮೂಲಕ ಅವರಿಗೆ ತಿಳಿಸಿರುತ್ತಿದ್ದೆ. ಅವರು ನನಗೆ ಓದಲು ಕೊಡಲೆಂದು ಕೆಲವು ಪುಸ್ತಕಗಳನ್ನು ತೆಗೆದಿಟ್ಟುಕೊಂಡಿರುತ್ತಿದ್ದರು. ಅಲ್ಲದೆ ನಾವು ಮಾತಾಡಬೇಕಾದ ಕೆಲವು ವಿಚಾರಗಳ ಒಂದು ಪಟ್ಟಿಯನ್ನೇ ಮಾಡಿ ಇಟ್ಟಿರುತ್ತಿದ್ದರು. ಏನಾದರೂ ಮರೆತಿದ್ದರೆ ಮಾತಿನ ಮಧ್ಯೆ ಎದ್ದು 'ತಾಳಿ, ಬರೆದಿಟ್ಟುಕೊಂಡಿದೇನೆ, ಚೀಟಿ ತರ್ತೀನಿ' ಎಂದು ಹೇಳಿ ಎದ್ದು ಹೋಗಿ ಚೀಟಿಯನ್ನು ತರುತ್ತಿದ್ದರು. ಅವರ ಇನ್ನೊಂದು ಸ್ವಭಾವವನ್ನು ಕುರಿತು ಇಲ್ಲಿ ಹೇಳಲೇಬೇಕು. ಅವರಿಗೆ ಅನೇಕ ಸಾಹಿತಿಗಳು ತಮ್ಮ ಪುಸ್ತಕಗಳನ್ನು 'ವಿಶ್ವಾಸದಿಂದ ತಂದುಕೊಡುತ್ತಿದ್ದರು. ಸುನಂದಮ್ಮನವರು ಅವನ್ನೆಲ್ಲ ತಪ್ಪದೆ ಓದಿ, ಪುಸ್ತಕ ಒಳ್ಳೆಯದಿರಲಿ, ಬೇಸರ ತರಿಸುವಂತಹುದಿರಲಿ, ಇದ್ದುದರಲ್ಲಿ ಒಳ್ಳೆಯ ಅಂಶಗಳನ್ನು ಗುರುತಿಸಿ ನಾಲ್ಕು ಸಾಲು ಬರೆದು ಕಳಿಸುತ್ತಿದ್ದರು. ಇದರಿಂದ, ಬರೆದವರಿಗೆ ಖಂಡಿತ ಸಂತೋಷವಾಗುತ್ತಿತ್ತು.

ಸುನಂದಮ್ಮನವರು ಈಗ ನಮ್ಮೊಡನೆ ಇಲ್ಲ. ಆದರೆ ಅವರ ಸಾಹಿತ್ಯ, ಅವರ ಹಾಸ್ಯ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಾಶ್ವತ ಸ್ಥಾನವನ್ನು ಪಡೆದಿದೆ.

(ಮೇಲೆ ಹೆಸರಿಸಿರುವ ಹಾಸ್ಯಲೇಖನಗಳನ್ನು ಈ ಆಕರಗ್ರಂಥದಲ್ಲಿ ನೋಡಬಹುದು: ವೈ.ಎನ್. ಗುಂಡೂರಾವ್, ಸಂ., 'ಬೆಸ್ಟ್ ಆಫ಼್ ಸುನಂದಮ್ಮ', ಅಂಕಿತ ಪುಸ್ತಕ, ಬೆಂಗಳೂರು, ೨೦೦೪)



ವಿ.ಸೂ. ಮುಂದಿನ ಲೇಖನ **ವೈ.ಎನ್.ಕೆ–ನಮ್ಮ ನಡುವಿನ ಒಬ್ಬ ಸಮರ್ಥ Punಗಾರ**ದ ಬಗ್ಗೆ ಶ್ರೀ ಬೇಲೂರು ರಾಮಮೂರ್ತಿಯವರು ಹೀಗೆ ಹೇಳುತ್ತಾರೆ: 'ಈ ಲೇಖನದಲ್ಲಿ ಅಡಕವಾಗಿರುವ ಬಹಳಷ್ಟು ಮಾಹಿತಿಗಳನ್ನು, ಶ್ರೀ ವಿಶ್ವೇಶ್ವರ ಭಟ್ ಅವರ 'ನನ್ನ ಪ್ರೀತಿಯ ವೈ.ಎನ್.ಕೆ.' ಪುಸ್ತಕದಿಂದ ಪಡೆದಿದ್ದೇನೆ. ಅನೇಕ ಮಿತ್ರರು ವೈ.ಎನ್.ಕೆ. ಅವರೊಂದಿಗಿನ ಅನುಭವಗಳನ್ನು ನನ್ನೊಂದಿಗೆ ಹಂಚಿಕೊಂಡಿದ್ದಾರೆ. ಇದಕ್ಕಾಗಿ ಅವರೆಲ್ಲರಿಗೂ ನನ್ನ ಧನ್ಯವಾದಗಳು.

# ವೈ.ಎನ್.ಕೆ.-ನಮ್ಮ ನಡುವಿನ ಒಬ್ಬ ಸಮರ್ಥ Punಗಾರ

ಬೇಲೂರು ರಾಮಮೂರ್ತಿ

ಯಳಂದೂರು ನರಸಿಂಹಮೂರ್ತಿ ಕೃಷ್ಣಮೂರ್ತಿ ಆಲಿಯಾಸ್ ವೈ. ಎನ್. ಕೃಷ್ಣಮೂರ್ತಿ ಆಲಿಯಾಸ್ ವೈ. ಎನ್. ಕೆ. ಜನಿಸಿದ್ದು ೧೯೨೬ರ ಮೇ ೨೬ ರಂದು (ನಿಧನ : ೧೯೯೯ರ ಅಕ್ಟೋಬರ್ ೧೬ರಂದು) ಅವರ ವಿದ್ಯಾಭ್ಯಾಸ ಬೆಂಗಳೂರಿನ ಸೆಂಟ್ರಲ್ ಕಾಲೇಜು. ಪಡೆದ ಪದವಿ ಬಿ.ಎಸ್.ಸಿ. ೧೯೪೬ರಲ್ಲಿ. ವೈಎನ್‌ಕೆಗೆ ಚಿಕ್ಕಂದಿನಲ್ಲೇ ಓದಿನ ಹುಚ್ಚು ಹಿಡಿದಿತ್ತು. ಜೊತೆ ಜೊತೆಗೆ ಬರವಣಿಗೆಯ ಗೀಳು ಬೇರೆ. ತಾವು ಆರನೆಯ ತರಗತಿಯಲ್ಲಿದ್ದಾಗಲೇ ಕಥೆ ಬರೆದು ಬಹುಮಾನ ಗಿಟ್ಟಿಸಿಕೊಂಡವರು. ಬಾಲಚಂದ್ರ ಎನ್ನುವ ಕೈ ಬರಹದ ಪತ್ರಿಕೆಯನ್ನು ನಡೆಸುತ್ತಿದ್ದರು. ಅವರು ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ ನಿಯಮಿತವಾಗಿ ಸಾಹಿತ್ಯ ಹಾಗೂ ಸಮಕಾಲೀನ ವಿಚಾರಗಳ ಬಗೆಗೆ ದೇಶಬಂಧು ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದರು. ಕಾಲೇಜು ಮುಗಿಸಿದ ಬಳಿಕ ಅವರು ಸೇರಿದ್ದು ದೇಶಬಂಧು ಕಾರ್ಯಾಲಯಕ್ಕೇ. ವೈ ಎನ್ ಕೆ ಅವರದು ಇಬ್ಬರು ತಮ್ಮಂದಿರು ಹಾಗೂ ಒಬ್ಬಳು ತಂಗಿಯಿಂದೊಡಗೂಡಿದ ತುಂಬಿದ ಸಂಸಾರ. ತಂದೆಗೆ, ಮಗ ವೈಎನ್‌ಕೆ ತುಂಬಾ ಓದಿ ದೊಡ್ಡ ಕೆಲಸಕ್ಕೆ ಸೇರಲಿ ಎನ್ನುವ ಆಸೆಯಿತ್ತು. ಆದರೆ ವೈಎನ್‌ಕೆ ಆರಿಸಿಕೊಂಡಿದ್ದು ಪತ್ರಿಕೋದ್ಯಮ. ಆ ಸಂದರ್ಭದಲ್ಲಿ ವೈಎನ್‌ಕೆ ಸಾಕಷ್ಟು ಓದಿದರು. ತಮ್ಮ ನೆನಪಿನ ಶಕ್ತಿಯನ್ನು ಹೆಚ್ಚಿಸಿಕೊಂಡರು. ಅವರು ಹೆಚ್ಚಾಗಿ ಓದಿದ್ದು, ಕಾರ್ಲ್‌ಮಾರ್ಕ್ಸ್, ಲಿಯೋ

ಟಾಲ್‌ಸ್ಟಾಯ್, ಸ್ಟೀಫನ್ ಲೀಕಾಕ್, ಅಲೆಗ್ಸಾಂಡರ್ ಡ್ಯೂಮಾಸ್, ಮ್ಯಾಕ್ಸಿಂ ಗಾರ್ಕಿ ಮುಂತಾದವರನ್ನು. ಅವರು ಷೇಕ್ಸ್‌ಪಿಯರ್‌ನ ಮರ್ಚೆಂಟ್ ಆಫ್ ವೆನಿಸ್ ನಾಟಕವನ್ನು ಕನ್ನಡಕ್ಕೆ ಭಾಷಾಂತರಿಸಲು ತೊಡಗಿದ್ದರು.

ವೈಎಸ್‌ಕೆ ಅವರ ಓದಿಗೆ, ಮತ್ತು ನೆನಪಿನ ಶಕ್ತಿಗೆ ಒಂದು ಉದಾಹರಣೆ: ಸುಮಾರು ವರ್ಷಗಳ ಹಿಂದಿನ ಮಾತು. ಆಗ ವೈಎಸ್‌ಕೆ ಗೆ ಸುಮಾರು ೧೬–೧೭ ವಯಸ್ಸಿರಬಹುದು. ಟಿ ಪಿ ಕೈಲಾಸಂ ಅವರಿಗೆ ವೈಎಸ್‌ಕೆ ಅವರ ನೆನಪಿನ ಶಕ್ತಿಯ ಬಗೆಗೆ ಅಪಾರವಾದ ಮೆಚ್ಚುಗೆ ಇತ್ತು. ಒಂದು ಸಾರಿ ಕೈಲಾಸಂ ಹೇಳಿದ್ದರಂತೆ: 'ಒಂದು ವೇಳೆ ನನ್ನ ಕೃತಿಗಳೆಲ್ಲಾ ಸುಟ್ಟು ಹೋದರೆ ಆ ವೈಎಸ್‌ಕೆ ಎಂಬ ಹುಡುಗನಿದ್ದಾನಲ್ಲ, ಆತ ತನ್ನ ನೆನಪಿನ ಗಣಿಯಿಂದ ಎಲ್ಲವನ್ನೂ ಯಥಾವತ್ತಾಗಿ ಬರೆಯಬಲ್ಲ' ಎಂದು. ಈ ರೀತಿಯ ನೆನಪಿನ ಶಕ್ತಿ ವೈಎಸ್‌ಕೆ ಅವರದು. ಈ ಶಕ್ತಿ ಅವರೊಂದಿಗೆ ಕೊನೆಯವರೆವಿಗೂ ಇತ್ತು.

ವೈಎಸ್‌ಕೆ ೧೯೪೮ರಲ್ಲಿ ಪ್ರಜಾವಾಣಿ ಬಳಗಕ್ಕೆ ಸೇರಿದರು. ಹಂತ ಹಂತವಾಗಿ ಮೇಲೇರಿ ಅದರ ಸಂಪಾದಕರೂ ಆದರು. ಅವರು ಸಂಪಾದಕರಾಗಿದ್ದಾಗ ಪ್ರಾರಂಭ ಮಾಡಿದ ಮೂರನೆಯ ಸಂಪಾದಕೀಯ ಲೇಖನ ಬಹಳ ಜನಪ್ರಿಯವಾಯಿತು. ಸಂಪಾದಕೀಯ ಪುಟದಲ್ಲಿ ಮೊದಲೆರಡು ಲೇಖನಗಳು ಪ್ರಸ್ತುತ ಸಾಮಾಜಿಕ, ರಾಜಕೀಯ ಸ್ಥಿತಿಗತಿ ಕುರಿತದ್ದಾದರೆ, ಮೂರನೆಯ ಲೇಖನ ಲಘು ಸಂಪಾದಕೀಯ. ಮೊನಚು ಭಾಷೆ, ವಿಡಂಬನಾತ್ಮಕ ನೋಟ, ನವಿರಾದ ಶೈಲಿಯ ಬರವಣಿಗೆ ಇವುಗಳಿಂದ ಆ ಲೇಖನಗಳು ಬಹು ಬೇಗ ಜನಪ್ರಿಯವಾದವು. ಆಗ ಪ್ರಜಾವಾಣಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲ. ವೈಎಸ್‌ಕೆ ಅನೇಕ ಲೇಖಕರನ್ನು ಬೆಳೆಸಿದರು. ಅವರ ಮನೆಗೆ ಸಂಜೆಯಾಯಿತೆಂದರೆ, ಅಡಿಗ, ಅನಂತಮೂರ್ತಿ, ಲಂಕೇಶ, ನಿಸಾರ್ ಅಹಮದ್, ಕಂಬಾರ, ಗಿರೀಶ್ ಕಾರ್ನಾಡ್, ಗಿರಡ್ಡಿ ಮುಂತಾದವರು ಬಂದು ಸೇರುತ್ತಿದ್ದರು. ಓದುಗರು ಬಯಸಿದ್ದೆಲ್ಲವನ್ನೂ ಪತ್ರಿಕೆ ನೀಡಬಾರದು ಆದರೆ ಓದುಗರಲ್ಲಿ ಆಸಕ್ತಿ ಕೆರಳಿಸಬೇಕು ಎಂದು ವೈಎಸ್‌ಕೆ ಹೇಳುತ್ತಿದ್ದರು. ಹೀಗಾಗಿ ಅವರು ಹೊಸ ಅಲೆಯ ಲೇಖಕರಿಂದ ಸಾಕಷ್ಟು ಬರೆಸಿದರು.

ಇದರ ಜೊತೆಗೆ ಆಗ ಹೊಸ ಅಲೆಯ ಸಿನಿಮಾಗಳ ಕುರಿತೂ ವೈಎಸ್‌ಕೆ ತುಂಬಾ ಆಸಕ್ತಿ ವಹಿಸಿದರು. ಪ್ರಪಂಚದ ಅನೇಕ ಭಾಷೆಗಳಲ್ಲಿ ಬರುತ್ತಿದ್ದ ಉತ್ತಮ ಚಿತ್ರಗಳನ್ನು ನೋಡಿ ನಮ್ಮ ಕನ್ನಡದಲ್ಲೂ ಯಾಕೆ ಇಂಥಾ ಉತ್ತಮ ಚಿತ್ರಗಳು ಬರಬಾರದು ಎಂದು ಕಾಳಜಿ ವಹಿಸಿದರು. ಇದರ ಪರಿಣಾಮವೇ, ಮುಂದೆ ಅವರ ಮನೆಯಲ್ಲಿ ಹೊಸ ಅಲೆಯ ಚಿತ್ರಗಳ ಕುರಿತು ಗಂಭೀರ ಚರ್ಚೆ ನಡೆಯಿತು. ಇದರಲ್ಲಿ, ಅನಂತನಾಗ್,

ಶಂಕರನಾಗ್, ಜಿ.ವಿ.ಅಯ್ಯರ್, ಗಿರೀಶ್ ಕಾರ್ನಾಡ್, ಗಿರೀಶ್ ಕಾಸರವಳ್ಳಿ, ಮುಂತಾದವರು ಭಾಗವಹಿಸುತ್ತಿದ್ದರು. ಅದರ ಪರಿಣಾಮವಾಗಿ ಕನ್ನಡದಲ್ಲಿ ಕೆಲವು ಅತ್ಯುತ್ತಮ ಚಿತ್ರಗಳಾದ–ಕನ್ನೇಶ್ವರ ರಾಮ, ಸಂಸ್ಕಾರ, ಕಾಡು, ಒಂದಾನೊಂದು ಕಾಲದಲ್ಲಿ, ಹಂಸಗೀತೆ ಮುಂತಾದ ಚಿತ್ರಗಳು ತೆರೆಕಂಡು ಯಶಸ್ವಿಯಾದವು. ಯಾವ ಚಿತ್ರಕ್ಕೆ ಯಾರನ್ನು ಹಾಕಬೇಕು ಎನ್ನುವುದನ್ನೂ ಕೂಡಾ ವೈಎನ್‌ಕೆ ಸಲಹೆ ಮಾಡುತ್ತಿದ್ದರು. ಹೀಗಾಗಿ ಎಲ್. ವಿ. ಶಾರದ, ವಿಷ್ಣುವರ್ಧನ್, ಮುಂತಾದವರು ಬೆಳಕಿಗೆ ಬಂದರು.

ವೈಎನ್‌ಕೆ ಅವರು ನಾಟಕರಂಗದ ಚಟುವಟಿಕೆಗಳಲ್ಲೂ ಆಸಕ್ತಿ ತೋರಿದರು. ಹೊಸ ಹೊಸ ನಾಟಕಗಳನ್ನು ಬರೆಸಿದರು. ಆಡಿಸಿದರು. ಹೀಗೆ ಬಂದದ್ದೇ, ಸಂಕ್ರಾಂತಿ, ತುಘಲಕ್, ಜೋಕುಮಾರಸ್ವಾಮಿ, ಈಡಿಪಸ್ ಮತ್ತು ಅಂತಿಗೊನೆ ಮುಂತಾದುವು.

ಪ್ರಜಾವಾಣಿಯ ಸಂಪಾದಕರಾಗಿ ನಿವೃತ್ತರಾದ ವೈಎನ್‌ಕೆ ಮುಂದೆ ಅದರ ಸಂಪಾದಕೀಯ ಸಲಹೆಗಾರರಾಗಿ ಕೆಲವು ವರ್ಷ ಮುಂದುವರಿದರು. ಆನಂತರ ಅವರು ಬರವಣಿಗೆ ಆರಂಭಿಸಿದರು. ಮೊದಲಿಗೆ ಅವರು ಉದಯವಾಣಿಯಲ್ಲಿ ತೀರ್ಥರೂಪ, ಮತ್ತು ವಂಡರ್ ಕಣ್ಣು ಅಂಕಣಗಳನ್ನು ಬರೆಯಲಾರಂಭಿಸಿದರು. ಕೆಲವೇ ದಿನಗಳಲ್ಲಿ ಈ ಎರಡೂ ಅಂಕಣಗಳು ಬಹಳ ಜನಪ್ರಿಯವಾದವು. ನಂತರ ಬಂದದ್ದೇ ಅವರ ಮೊದಲ ಕವನ ಸಂಕಲನ 'ಪದ್ಯ ಇಷ್ಟು ಲೈಟ್ ಆದರೆ ಹೇಗೆ ಸ್ವಾಮಿ'. ಕೆಲವೇ ದಿನಗಳಲ್ಲಿ ಅವರು ಕನ್ನಡಪ್ರಭಕ್ಕೆ ಸೇರಿಕೊಂಡರು. ಅದಕ್ಕೆ ಒಂದು ಸಮರ್ಥ ರೂಪ ಕೊಡುವುದರಲ್ಲಿ ಅವರು ಯಶಸ್ವಿಯಾದರು. ಅವರ 'ವಂಡರ್ ಕಣ್ಣು' ಅಂಕಣ ಕನ್ನಡಪ್ರಭದಲ್ಲಿ ಪ್ರತಿ ಗುರುವಾರ ಪ್ರಕಟವಾಗುತ್ತಿತ್ತು. ಅದಕ್ಕೆ ಪರ್ಮನೆಂಟ್ ಓದುಗರಿದ್ದರು.

ವೈಎನ್‌ಕೆ ಅಂದರೆ ಥಟ್ಟನೆ ನೆನಪಾಗೋದು ಅವರ ಪನ್‌ಗಾರಿಕೆ ಮತ್ತು ಗುಂಡುಗಾರಿಕೆ. ಅವರು ಯಾವಾಗಲೂ ಮಾತಿನಲ್ಲಿ ಪನ್ ತಪ್ಪಿಸುತ್ತಿರಲಿಲ್ಲ. ಹಾಗೇ ಪ್ರತಿ ದಿನ ಸಂಜೆ ಏಳು ಗಂಟೆಯಾಯಿತೆಂದರೆ ಗುಂಡು ತಪ್ಪಿಸುತ್ತಿರಲಿಲ್ಲ. ಅವರು ಪನ್ ಪ್ರಿಯರು ಹೇಗೋ ಹಾಗೇ ಗುಂಡುಗಲಿ. ಒಂದು ದಿನವೂ ಬಿಡದೇ ಸತತವಾಗಿ ೫೦ ವರ್ಷ ಅವರು ಗುಂಡು ಹಾಕಿದರು. ಆದರೆ ಒಂದು ದಿನವೂ ಗುಂಡಿನಿಂದಾಗಿ ಅವರು ಅಸಭ್ಯವಾಗಿ ವರ್ತಿಸಲಿಲ್ಲ, ಎಲ್ಲೆಂದರಲ್ಲಿ ಬೀಳಲಿಲ್ಲ, ಬೇರೆಯವರ ಕೊಂಕು ನೋಟಕ್ಕೆ ಆಹಾರವಾಗಲಿಲ್ಲ. ಕುಡಿಯುವುದರಲ್ಲೂ ಒಂದು ಸಂಯಮ ಕಾಯ್ದುಕೊಂಡು ಬಂದರು. ಅದಕ್ಕೆ ಅವರು ಹೇಳುತ್ತಿದ್ದರು:

ಬೆಳಗ್ಗೆ ಸಂಜೆ ಮಧ್ಯಾಹ್ನ
ಕುಡೀತೀನ್ ನಾನು ಮದ್ಯಾನ
ಪೆಗ್‌ನಲ್ಲಿ ಅಳೀತೀನಿ ಜೀವನಾನ

ಯಾರಾದರೂ 'ಯಾಕೋ ಮೈ ಹುಷಾರಿಲ್ಲ' ಎಂದರೆ ವೈಎನ್‌ಕೆ 'ಗುಂಡು ಹಾಕಿ ಎಲ್ಲ ಸರಿಹೋಗುತ್ತೆ, ಎಲ್ಲಕ್ಕೂ ಕೀ ವಿಸ್ಕಿ' ಎನ್ನುತ್ತಿದ್ದರು. ಆದರೆ ಅವರು ಮಾತ್ರ ಯಾರನ್ನೂ ನೀವೂ ಕುಡಿಯಿರಿ ಎಂದು ಉತ್ತೇಜನ ನೀಡುತ್ತಿರಲಿಲ್ಲ, ಪ್ರಚೋದನೆ ಮಾಡುತ್ತಿರಲಿಲ್ಲ. ಅವರ ಗುಂಡಿನ ವಿಚಾರವಾಗಿ ಯಾರಾದರೂ ಹಗುರವಾಗಿ ಮಾತಾಡಿದರೆ 'ಬಾಯಿ ಬಿಡದವರಾರು ಗುಂಡಿಗೆ, ಕೈ ಕೊಡದವರಾರು ಫ್ರೆಂಡಿಗೆ' ಎನ್ನುತ್ತಿದ್ದರು. ಗುಂಡು ಆದ ಮೇಲೆ ಹೊಟ್ಟೆ ತುಂಬಾ ಊಟ, ನಿದ್ದೆ ಮಾಡುತ್ತಿದ್ದರು. ಅವರ ಸಂಜೆಯ ಈ ಕಾರ್ಯಕ್ರಮ ಎಂದೂ ಬದಲಾಗುತ್ತಿರಲಿಲ್ಲ.

ಒಳ್ಳೆಯದನ್ನು ಎಲ್ಲಿಂದಲಾದರೂ ಸರಿ ಅವರು ಗ್ರಹಿಸುತ್ತಿದ್ದರು. ಹಾಗೇ ಒಳ್ಳೆಯ ಲೇಖಕರನ್ನು ಗುರುತಿಸಿ ಅವರಿಗೆ ಉತ್ತೇಜನ ನೀಡುತ್ತಿದ್ದರು. ಅವರ ಗರಡಿಯಲ್ಲಿ ಅನೇಕ ಲೇಖಕರು ಪಳಗಿದರು. ಇವೆಲ್ಲವುಗಳ ಜೊತೆಗೆ ವೈಎನ್‌ಕೆ ಅವರಲ್ಲಿ ಅತೀವ ಮಾನವೀಯ ಗುಣಗಳಿದ್ದವು. ಯಾರನ್ನೂ ಅವರು ಸುಮ್ಮನೆ ಎದುರು ಹಾಕಿಕೊಂಡವರಲ್ಲ. ಯಾರಿಂದಲೂ ಹೊಗಳಿಸಿಕೊಂಡವರಲ್ಲ. ಹೊಗಳಿಕೆಯಿಂದ ಅವರು ಎಂದೂ ದೂರವೇ. ಯಾರಾದರೂ ಹೊಗಳಿಕೆ ಮಾತಾಡಲು ಪ್ರಾರಂಭ ಮಾಡಿದರು ಅಂದರೆ ಅವರ ಮಾತನ್ನು ತುಂಡರಿಸಿ 'ಈಗ ನೀವು ಹೊರಡಿ ನನಗೆ ಬೇರೆ ಕೆಲಸ ಇದೆ' ಎನ್ನುತ್ತಿದ್ದರು. ಹಾಗೇ ಅವರು ಆಹಾರ ವಿಚಾರದಲ್ಲೂ ಬಹಳ ಕಟ್ಟುನಿಟ್ಟು. ಅವರಿಗೆ ಹೊಟ್ಟೆಬಾಕತನ ಇರಲಿಲ್ಲ. ಎಷ್ಟು ಬೇಕೋ ಅಷ್ಟೇ ತಿನ್ನುತ್ತಿದ್ದರು. ಆರೋಗ್ಯ ಚೆನ್ನಾಗಿ ಕಾಪಾಡಿಕೊಂಡಿದ್ದರು. ಯಾರಾದರೂ 'ವೈಎನ್‌ಕೆ ಆರೋಗ್ಯವೇ?' ಎಂದು ಕೇಳಿದರೆ 'ನಿಮ್ಮ ಆರೋಗ್ಯ ನೋಡಿಕೊಳ್ಳಿ, ನನ್ನ ಆರೋಗ್ಯಕ್ಕೆ ಏನಾಗಿದೆ' ಎಂದು ರೇಗುತ್ತಿದ್ದರು. ಅವರಿಗೆ ೭೪ ವರ್ಷವಾಗಿದ್ದಾಗಲೂ ಅವರು ನಾನು ಇನ್ನೂ ೧೫ ವರ್ಷ ಬದುಕಿರುತ್ತೇನೆಂದು ಹೇಳುತ್ತಿದ್ದರು. ನಾನು ಮೆಂಟಲಿ, ಗಂಟಲಿ, ಡೆಂಟಲಿ, ಸೊಂಟಲಿ, ಸ್ಟ್ರಾಂಗಾಗಿದೀನಿ. ಅದಕ್ಕೇ ಅವರು 'ಲಿಸನ್ ಟು ಯುವರ್ ಬಾಡಿ, ವಿಥೌಟ್ ಬಾಡಿ ಯೂ ಆರ್ ನೊಬಾಡಿ' ಎನ್ನುತ್ತಿದ್ದರು.

ವೈಎನ್‌ಕೆ ಅವರ ತುಂಟತನ, ಲೇವಡಿ, ಹಾಸ್ಯ, ವಿಡಂಬನೆ, ಮೊನಚು, ವ್ಯಂಗ್ಯ ಇವೆಲ್ಲವೂ ಅವರ ಮಾತಿನಲ್ಲಿ ವ್ಯಕ್ತವಾಗುತ್ತಿತ್ತು, ಅದೂ ಪನ್ ಮಿಶ್ರಿತ ಭಾಷೆಯಲ್ಲಿ. ಅವರ ಮಾತಿನ ಕೆಲವು ಸ್ಯಾಂಪಲ್‌ಗಳನ್ನು ಮೆಲಕು ಹಾಕದೇ ಹೋದರೆ ಅವರ ಬಗೆಗಿನ ಲೇಖನ ಅಪೂರ್ಣ. ಅದಕ್ಕೆ ಕೆಲವು ಉದಾಹರಣೆಗಳನ್ನು ನೋಡೋಣ: ಆಗ ಇರಾನ್ ಇರಾಕ್ ಯುದ್ದದ ಸಮಯ. ಅದನ್ನು ವೈಎನ್‌ಕೆ ಹೇಗೆ ಅರ್ಥಪೂರ್ಣವಾಗಿ ಹೇಳಿದರೆಂದರೆ: 'ಸುಮ್ನೆ ಇರಾನ್ ಅಂದ್ರೆ ಇರಾಕ್ ಬಿಡಕ್ಕಿಲ್ಲ' ಅಂತ.

ಒಮ್ಮೆ ವೈಎನ್‌ಕೆ ಹೊಟೇಲಿಗೆ ಹೋಗಿದ್ದಾಗ, ಅಲ್ಲಿನ ಮಾಲೀಕರು: 'ಇಲ್ಲಿ ಎಲ್ಲಾ ಪದಾರ್ಥಗಳು ವಿದ್ಯುತ್‌ನಿಂದ ತಯಾರಾಗುತ್ತದೆ: ಎಂದರಂತೆ. ಅದಕ್ಕೆ ವೈಎನ್‌ಕೆ ಹೇಳಿದ್ದು: 'even the bill gives you a shock' ಎಂದು. ಅದೇ ಹೊಟೇಲ್ ಮಾಲೀಕ ತನ್ನ ಹೋಟೆಲಿನ ವಿಶೇಷ ಗುಣಮಟ್ಟದ ಬಗೆಗೆ ಹೇಳುತ್ತಾ: 'ನೋಡಿ, ನಮ್ಮಲ್ಲಿ ಎಷ್ಟೊಂದು ಜನ ಕಾಯುತ್ತಿದ್ದಾರೆ. ಅವರಿಗೆ ಸ್ವಲ್ಪವೂ ಬೇಜಾರಿಲ್ಲ. ಎಷ್ಟೊತ್ತಾದರೂ ಕಾದು ತಿಂಡಿ ತಿಂದು ಹೋಗುತ್ತಾರೆ' ಎಂದಿದ್ದಕ್ಕೆ, ವೈಎನ್‌ಕೆ, customers are the best waiters here ಎಂದರಂತೆ. ಭಾರತೀಯ ವಿದ್ಯಾಭವನದಲ್ಲಿ ಒಂದು ಕಾರ್ಯಕ್ರಮ. ಅಲ್ಲಿಗೆ ಅಂದಿನ ಮಾಜಿ ಮುಖ್ಯಮಂತ್ರಿ ವೀರಪ್ಪ ಮೊಯಿಲಿ ಬಂದಿದ್ದರು. ಅವರು ವೈಎನ್‌ಕೆ ಅವರತ್ತ ಬಂದು, 'ಏನ್ ವೈಎನ್‌ಕೆ ನಾನು ಬರೆದ ಕೊಟ್ಟ ಕಾದಂಬರಿಯನ್ನು ನಿಮಗೆ ಕಳುಹಿಸಿಕೊಟ್ಟಿದ್ದೆ ಓದಿದಿರಾ' ಎಂದು ಕೇಳಿದ್ದಕ್ಕೆ ವೈಎನ್‌ಕೆ, 'ಮೊಯಿಲಿಯವರೇ, ನಿಮ್ಮ **ಕೊಟ್ಟ** ಕಾದಂಬರಿ(ಕಾದಂಬರಿ ಹೆಸರೂ ಕೊಟ್ಟ) ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಒಂದು ಮೊಯಿಲಿ(ಮೈಲಿ)ಗಲ್ಲು' ಅಂದರಂತೆ.

ಯಾರೋ ಒಬ್ಬರು ಕವಿ ಮಿತ್ರರು, ಇನ್ನೊಬ್ಬ ಕವಿ ಬಗೆಗೆ ಹೇಳುತ್ತಾ 'he is not a good poet' ಎಂದರು ಅದಕ್ಕೆ ವೈಎನ್‌ಕೆ 'good is not necessary' ಎಂದರು.

ಯಾವುದೋ ಒಂದು ನಾಟಕ ತುಂಬಾ ಚೆನ್ನಾಗಿತ್ತು. ಆದರೂ ಜನರೇ ಬರುತ್ತಿರಲಿಲ್ಲ. ಏನು ಮಾಡುವುದೆಂದು ತೋಚದೇ ಅವರು ವೈಎನ್‌ಕೆ ಅವರ ಬಳಿ ಹೇಳಿಕೊಂಡರೆ, ವೈಎನ್‌ಕೆ 'entry free ಮಾಡಿ exitಗೆ charge ಮಾಡಿ, ಸಖತ್ ಕಾಸು ಮಾಡಬಹುದು' ಎಂದು ಸಲಹೆ ಕೊಟ್ಟರಂತೆ.

ವೈಎನ್‌ಕೆ ಅವರ ಸ್ನೇಹಿತರೊಬ್ಬರು ತುಂಬಾ ದಢೂತಿ ಮನುಷ್ಯ. ಅವರು ಯಾವಾಗಲೂ ಮಾತಿನ ಮಧ್ಯೆ ಅನಗತ್ಯವಾಗಿ ಮೂಗು ತೂರಿಸುತ್ತಿದ್ದರು. ಅವರನ್ನು ಹೇಗೆ ಕಂಟ್ರೋಲ್ ಮಾಡುವುದೆಂದೇ ತಿಳಿಯುತ್ತಿರಲಿಲ್ಲ. ಅಂಥಾ ಒಂದು ಸಂದರ್ಭದಲ್ಲಿ, ಇನ್ನೊಬ್ಬರು ಆ ದಢೂತಿ ಆಸಾಮಿಯನ್ನು ನೋಡಿ 'ಏನ್ಸಾರ್ ಬಹಳ ಮೈ ಬಂದುಬಿಟ್ಟಿದೆಯಲ್ಲ, ನೀವು ವ್ಯಾಯಾಮ ಮಾಡುವುದಿಲ್ಲವೇ?' ಎಂದು ಕೇಳಿದರೆ, ವೈಎನ್‌ಕೆ 'the only exercise he does is to jump into conclusion' ಎಂದರಂತೆ ಆಮೇಲೆ ಆ ಆಸಾಮಿ ಮೂಗು ತೂರಿಸುವುದನ್ನು ಕಡಿಮೆ ಮಾಡಿದರಂತೆ.

ಬೆಂಗಳೂರಿನಲ್ಲಿ ಒಮ್ಮೆ ಮಕ್ಕಳ ಚಲನಚಿತ್ರೋತ್ಸವ ನಡೆದ ಸಂದರ್ಭ. ಆ ಸಂಜೆ ಅಶೋಕ ಹೊಟೇಲಿನಲ್ಲಿ ಭರ್ಜರಿ ಭೋಜನ ಕೂಟ. ಗಣ್ಯ ವ್ಯಕ್ತಿಗಳೆಲ್ಲ ಬಂದಿದ್ದರು. ಆಗ ಒಬ್ಬರು ವೈಎನ್‌ಕೆ ಹತ್ತಿರ ಬಂದು 'ಏನ್ ವೈಎನ್‌ಕೆ, ಮಕ್ಕಳ

ಚಲನಚಿತ್ರೋತ್ಸವದ ಪಾರ್ಟಿಯಲ್ಲಿ ಮಕ್ಕಳೇ ಇಲ್ಲವಲ್ಲ' ಎಂದು ಕೇಳಿದರೆ, ವೈಎನ್‌ಕೆ 'ಯಾಕೆ ಇಲ್ಲ, ಇದಾರಲ್ಲ ಎಲ್ಲಾ ಕಳ್ಳನನ್ಮಕ್ಕಳು' ಎಂದುಬಿಟ್ಟರು.

ಒಮ್ಮೆ ಅವರ ಜೊತೆ ಎಲ್ಲೋ ಹೋಗುತ್ತಿದ್ದಾಗ ಕಾರು ನಿಂತೇಬಿಟ್ಟಿತು. ನೋಡಿದರೆ ಎದುರಿಗೆ ಆಡುಗಳ ಸಾಲು. ಅಲ್ಲಿ ಮಾತಿಗೆ ಏನೂ ಅವಕಾಶವೇ ಇರಲಿಲ್ಲ. ಆದರೂ ವೈಎನ್‌ಕೆ so many odds against us ಎಂದುಬಿಟ್ಟರು. (ಜೂಜಿನಲ್ಲಿ bets ಕಟ್ಟುವಾಗ odds, even ಎಂತ ಹೇಳುತ್ತಿರುತ್ತಾರೆ. oddಎದುರಾದರೆ ಗೆಲ್ಲೋದು ಕಷ್ಟ ಎಂದು) ಆದರೆ ಇಲ್ಲಿ odds ಎಂದರೆ ಆಡುಗಳು.

ಸಾಮಾನ್ಯವಾಗಿ ವೈಎನ್‌ಕೆ ತಮ್ಮ ಜೋಕ್‌ಗೆ ತಾವೇ ನಗುವುದಿಲ್ಲ. ಬೇರೆಯವರು ಹೇಳಿದ ಜೋಕ್‌ಗಳಿಗೂ ಅಷ್ಟೆ. ಆದರೆ ಒಮ್ಮೆ ಯಾರೋ ಅವರ ಸ್ನೇಹಿತರು ಹೇಳಿದ ಹಳೇ ಜೋಕ್‌ಗೆ ವೈಎನ್‌ಕೆ ಜೋರಾಗಿ ನಗತೊಡಗಿದರು. ಇದನ್ನು ಕಂಡ ಅವರ ಸ್ನೇಹಿತರು 'ಏನ್ ವೈಎನ್‌ಕೆ ಈ ಜೋಕ್ ನಿಮಗೆ ಗೊತ್ತಿದ್ದರೂ ಇಷ್ಟು ಜೋರಾಗಿ ನಗುತ್ತಿದ್ದೀರಲ್ಲ' ಎಂದು ಕೇಳಿದರೆ, 'ಅಲ್ರೀ ಹೀಗೆ ನಗದಿದ್ದರೆ, ಅವರು ಪುನಃ ಅದನ್ನೇ ರಿಪೀಟ್ ಮಾಡ್ತಾರೆ. ಅದು Painful, ನಕ್ಕರೇ Safe ಅದಕ್ಕೇ ನಗುತ್ತಿದ್ದೀನಿ ಒಂದು ರೀತಿಯಲ್ಲಿ ಇದು ಆತ್ಮರಕ್ಷಣಾ ವಿಧಾನ' ಎಂದರಂತೆ.

ವೈಎನ್‌ಕೆಗೆ ಯಾವುದಾದರೂ ಒಂದು ವಿಷಯವನ್ನು ಹೇಳಿದರೆ ಅದಕ್ಕೆ ಹೋಲುವ ಅಂಥಾದ್ದೇ ಇನ್ನೊಂದು ನಿದರ್ಶನವನ್ನು ತಕ್ಷಣ ಕೊಡುತ್ತಿದ್ದರು. ಒಮ್ಮೆ ಯಾರೋ ಮಾತಾಡ್ತಾ 'ಟಿ.ಪಿ.ಕೈಲಾಸಂ ಅವರನ್ನು ಒಂದು ಕೋನದಿಂದ ನೋಡಿದರೆ ಅಮೆರಿಕ ಅಧ್ಯಕ್ಷ ಕೆನಡಿ ಥರಾನೇ ಕಾಣ್ತಾರಲ್ಲ' ಎಂದರಂತೆ. ಅದಕ್ಕೆ ವೈಎನ್‌ಕೆ ತಕ್ಷಣ ಹೇಳಿದ್ದು: ಕೆನಡಿಗೆ ಕೈಲಾಸಂಗೆ ಅದೊಂದೇ ಹೋಲಿಕೆ ಅಲ್ಲ. ಇನ್ನೂ ಅನೇಕ ಹೋಲಿಕೆಗಳಿವೆ, ಇಬ್ಬರ ಹೆಸರೂ ಕೆ, ಒಬ್ಬರು ಜೆ.ಎಫ್.ಕೆ, ಇನ್ನೊಬ್ಬರು, ಟಿ.ಪಿ.ಕೆ. ಒಬ್ಬರು, ಐರಿಷ್, ಇನ್ನೊಬ್ಬರು ಐಯರಿಷ್, ಇಬ್ಬರ ನಿಧನದ ತಾರೀಖೂ ನವಂಬರ್ ೨೩, ಇಬ್ಬರ ಸಾವಿಗೂ ಗುಂಡೇ ಕಾರಣ, ಕೆನಡಿ ಸಾವಿಗೆ ಆಸ್ವಾಲ್ಡ್ ಬಂದೂಕಿನ ಗುಂಡು ಕಾರಣವಾದರೆ, ಕೈಲಾಸಂ ಅವರ ಸಾವಿಗೆ ಕಾರಣ ಅವರು ಹಿಂದಿನ ದಿನ ಹಾಕಿದ್ದ ಗುಂಡು' ಎಂದರು.

ಒಮ್ಮೆ ಸುದ್ದಿಯೊಂದಕ್ಕೆ ಯಾವ ಶೀರ್ಷಿಕೆ ಕೊಡಬೇಕೆನ್ನುವುದರ ಬಗೆಗೆ ಉಪಸಂಪಾದಕರುಗಳಲ್ಲಿ ಚರ್ಚೆ ನಡೆದಿತ್ತು. ಆಗ ವೈಎನ್‌ಕೆ ಅಲ್ಲಿಗೆ ಬಂದರು, ಸುದ್ದಿ ಏನೆಂದು ಕೇಳಿದರು. ಸುದ್ದಿ ಏನೆಂದರೆ–ಗಂಡನೊಬ್ಬ ತಾನೂ ಇರಿದುಕೊಂಡು ಹೆಂಡತಿಯನ್ನೂ ಇರಿದುಕೊಂದಿದ್ದ. ಅದಕ್ಕೆ ವೈಎನ್‌ಕೆ ಕೊಟ್ಟ ಶೀರ್ಷಿಕೆ ಏನು ಗೊತ್ತೆ? 'ತನ್ನಂತೆ ಪರರ ಬಗೆದೊಡೆ'.

ಒಮ್ಮೆ ವೈಎನ್‌ಕೆ ಬಾರೊಂದಕ್ಕೆ ಹೋಗಿದ್ದಾಗ, ಅಲ್ಲಿದ್ದ ವೈಟರ್ ಅವರನ್ನು ಮಾತಾಡಿಸಿ 'ನಾನು ಯಾರು ಗೊತ್ತಾ ಸಾರ್, ನನ್ನನ್ನು ನೀವು ಯಾವಾಗ ನೋಡಿದ್ದಿರಿ ಹೇಳಿ' ಎಂದು ಕೇಳಿದ್ದಕ್ಕೆ, ವೈಎನ್‌ಕೆ ಅವನನ್ನು ಮೊದಲ ದಿನ ನೋಡಿದ್ದು ಯಾವಾಗ, ಅವತ್ತು ಅವನು ಯಾವ ಬಟ್ಟೆ ಹಾಕಿದ್ದ, ಏನೇನು ಮಾತಾಡಿದ ಅಂತ ಎಲ್ಲ ಸರಸರನೆ ಹೇಳಿದಾಗ ಆ ವೈಟರ್ ಸುಸ್ತು. ಬಾರ್‌ನಲ್ಲಿ ಸರ್ವ್ ಮಾಡುವ ಹುಡುಗರನ್ನು ಕುರಿತು ಅವರು they are behind the bar ಎಂದು ಹೇಳುತ್ತಿದ್ದರು.

ಒಮ್ಮೆ ಅವರು ಹೊಟೇಲೊಂದಕ್ಕೆ ಹೋಗಿ ತಿಂಡಿ ತಿಂದರು. ಮಾಣಿ ಬಂದು 'ಇನ್ನೇನು ಕೊಡಲಿ?' ಎಂದು ಕೇಳಿದ. ಆಗ ವೈಎನ್‌ಕೆ 'ಕಾಫಿ ತಗೊಂಡ್ ಬಾ, ಆದರೆ ಕಾಫಿ ಚೆನ್ನಾಗಿರಬೇಕು' ಎಂದರು. ಅದಕ್ಕೆ ಮಾಣಿ 'ನಮ್ಮ ಹೊಟೇಲಿನಲ್ಲಿ ಕಾಫೀ ಎ ಒನ್ ಸಾರ್' ಎಂದ. ಆಗ ವೈಎನ್‌ಕೆ ತಕ್ಷಣ 'ಕಾಫಿ ಎ ಒನ್ ಆಗಿಲ್ಲದಿದ್ದರೆ ಏಟು' ಅಂದರು.

ಒಮ್ಮೆ ವೈಎನ್‌ಕೆ ಮೈಸೂರಿನ ಮೃಗಾಲಯಕ್ಕೆ ಹೋಗಿದ್ದರು. ಅಲ್ಲಿದ್ದ ಭಾರೀ ಗಾತ್ರದ ನೀರಾನೆಯನ್ನು ಕಂಡು ಒಬ್ಬ ದಪ್ಪ ಹೆಂಗಸು 'ಆ ನೀರಾನೆ ಗಂಡೋ ಹೆಣ್ಣೋ ತಿಳಿಯುತ್ತಿಲ್ಲ' ಎಂದಳು. ಈ ಮಾತು ವೈಎನ್‌ಕೆ ಅವರನ್ನು ಸ್ವಲ್ಪ ಮುಜುಗರಕ್ಕೆ ಈಡು ಮಾಡಿತು. ಅವರು ಆ ಹೆಂಗಸಿಗೆ 'ಆ ಉಸಾಬರಿ ನಿಮಗೇಕ್ರೀ, ನೀವೇನೂ ನೀರಾನೆ ಅಲ್ಲವಲ್ಲ' ಅಂದಿದ್ದಕ್ಕೆ ಆ ಹೆಂಗಸು ನಾಚಿ ದೂರ ಹೋದಳಂತೆ.

ಇವೆಲ್ಲವೂ ವೈಎನ್‌ಕೆ ಮಾತಿನಲ್ಲಿ ಮೂಡಿಸುತ್ತಿದ್ದ ಪನ್ ಹಾಗೂ ಲೇವಡಿ. ಆದರೆ ಅವರು ತಾವು ಬರೆಯುತ್ತಿದ್ದ ವಂಡರ್ ಕಣ್ಣು ಲೇಖನಗಳಲ್ಲಿ ಪದಗಳೊಂದಿಗೆ ಚೆನ್ನಾಗಿ ಆಟವಾಡುತ್ತಿದ್ದರು. ಪದಗಳನ್ನು ಬಿಡಿಸಿ ಅವುಗಳಿಗೆ ಹೊಸ ಅರ್ಥ ಹಚ್ಚುವುದರಲ್ಲಿ ವೈಎನ್‌ಕೆ ಎತ್ತಿದ ಕೈ. ಒಂದು ಉದಾಹರಣೆ ನೋಡಿ.

ಕವಿತೆ

ನೀನೇಕೆ

ಪದಗಳಲ್ಲಿ

ಅವಿತೆ

ನಿಮಗೆಲ್ಲಾ ದುಷ್ಯಂತ ಶಕುಂತಲೆ ಅವರ ಕಥೆ ಗೊತ್ತು. ಅದನ್ನು ತುಂಬಾ ಮಾರ್ಮಿಕವಾಗಿ, ಹಾಗೂ ಲಘುವಾಗಿ, ಹಾಸ್ಯಮಯವಾಗಿ ವೈಎನ್‌ಕೆ ಹೇಗೆ ಹೇಳುತ್ತಾರೆ ನೋಡಿ:

ದುಷ್ಯಂತನ ಬರವಿಗೆ
ಆ ಮೇಲಿನ ಮರವಿಗೆ
ಕಾದು ನಿಂತಳೆ,
ಚಡಪಡಿಸುತ ಕುಂತಳೆ
ಶಕುಂತಳೆ

ಇಲ್ಲಿ ಆಮೇಲಿನ ಅಂದರೆ ಆನಂತರದ್ದೂ ಅಂತಲೂ ಆಯಿತು ಆ 'ಮೇಲಿ' ನದು ಅಂತಲೂ ಆಯಿತು (ಆ ಮೇಲು ಅಂದರೆ ದುಷ್ಯಂತ) ಹೀಗೆ ಪದಗಳನ್ನು ಬಿಡಿಸಿ, ಒಡೆದು ಅವುಗಳಿಗೆ ಹೊಸ ಅರ್ಥ ಹಚ್ಚುವುದರಲ್ಲಿ ವೈಎನ್‌ಕೆ ತುಂಬಾ ಹೆಸರುವಾಸಿ. ಬೇರೆಯವರಿಗೆ ಕಷ್ಟ ಎನಿಸಿದ್ದು ವೈಎನ್‌ಕೆಯವರಿಗೆ ನೀರು ಕುಡಿದಷ್ಟು ಸುಲಭವಾಗಿಬಿಡುತ್ತಿತ್ತು.

ವೈಎನ್‌ಕೆ ಪದಗಳಿಗೆ ಹೊಸಾ ಹೊಸಾ ಅರ್ಥ ಹಚ್ಚುತ್ತಿದ್ದ ರೀತಿ ನೋಡಿದರೆ ಯಾರಿಗಾದರೂ ಹುಬ್ಬು ಮೇಲೇರುತ್ತದೆ. ಹಿಂದೆ ಮುಂದೆ ನೋಡದೆ ಥಟ್ಟನೆ ಒಂದು ಮಾತಿಗೆ ಇನ್ನೊಂದು ಮಾತು ಪೋಣಿಸುವುದು ಅವರ ಕಲೆ. ಅಂದರೆ ನಾವುಗಳು ಯೋಚಿಸದೇ ಇರುವಂಥ ದಿಕ್ಕಿನಲ್ಲಿ ಅವರು ಯೋಚಿಸಿ ಪನ್ ಮಾಡಿಬಿಟ್ಟಿರುತ್ತಿದ್ದರು. ಅವರು ಹೇಳುತ್ತಿದ್ದರು: 'ಬಾನುಲಿಗೆ ರೇಡಿಯೋ' ಎನ್ನುವುದಾದರೆ ಟೆಲಿವಿಷನ್‌ಗೆ 'ನೋಡಿಯೋ ಅಂತ ಯಾಕೆ ಅನ್ನಬಾರದು' ಎಂದು ಕೇಳುತ್ತಿದ್ದರು. ರೇಡಿಯೋ ಹಾಗೆ ನೋಡಿಯೋ ಕೂಡಾ ಪ್ರಾಸಬದ್ಧವಾಗಿರುತ್ತದೆ ಎನ್ನುವುದು ಅವರ ಸಮರ್ಥನೆ. ಇಂಗ್ಲಿಷಿನ value based (ಮೌಲ್ಯಾಧಾರಿತ) ಹಾಗೂ issue based politics (ವ್ಯಕ್ತಿಗಿಂತ ವಿಚಾರ ಮುಖ್ಯ) ಎನ್ನುವ ಪದಗಳಿಗೆ value ಎಂದರೆ ಮೌಲ್ಯ ಅಂದರೆ ಹಣ ಆಧಾರಿತ ರಾಜಕೀಯ. ಹಾಗೇ 'issue based politics ಅಂದರೆ, issue ಅಂದರೆ ಮಗ ಎಂದೂ ಆಗುವುದರಿಂದ ಅಧಿಕಾರಸ್ಥರ ಮಕ್ಕಳ ಏಳಿಗೆಗೆ ಸಂಬಂಧಿಸಿದ ರಾಜಕೀಯ' ಎನ್ನುತ್ತಾರೆ. Therapist ಹಾಗೂ Carpenter ಪದಗಳನ್ನು ಒಡೆದು ಅವರು 'Therapist ಅಂದರೆ ಚಿಕಿತ್ಸಕ ಅಂತ ಆದರೆ ಆ ಪದವನ್ನು ಮುರಿದಾಗ The rapist ಅಂದರೆ ಅತ್ಯಾಚಾರಿ ಅಂತ ಆಗುತ್ತದೆ ಅಲ್ಲವೇ' ಎಂದು ಕೇಳುತ್ತಿದ್ದರು. 'ಕಾರ್ಪೆಂಟರ್ ಎಂದರೆ ಕಾರಿಗೆ ಪೈಂಟ್ ಬಳಿಯುವವನು ಎನ್ನಬಹುದಲ್ಲವೇ ?'ಎಂದು ಕೇಳುತ್ತಿದ್ದರು.

ಮಾತು ಮಾತಿಗೂ 'ನಾನು ನಾನು' ಎಂದು ಹೇಳುತ್ತಿದ್ದ ವ್ಯಕ್ತಿಗಳಿಗೆ ಅವರು 'I' trouble ಎನ್ನುತ್ತಿದ್ದರು. Optimist ಪದಕ್ಕೆ ವೈಎನ್‌ಕೆ ಹೀಗೆ ಅರ್ಥ ಚಿಮ್ಮಿಸುತ್ತಾರೆ:

Optimist ಎಂದರೆ ಇಂಗ್ಲಿಷಿನಲ್ಲಿ ಆಶಾವಾದಿ ಎಂದು. Opti ಎಂದರೆ ಕಣ್ಣಿಗೆ ಸಂಬಂಧಿಸಿದ್ದು. mist ಎಂದರೆ ಇಬ್ಬನಿ. ಮಬ್ಬು ಎಂದರ್ಥ. ಒಟ್ಟಾಗಿ 'Optimist ಎಂದರೆ ಸರಿಯಾಗಿ ಕಣ್ಣು ಕಾಣದವನು ಎಂದರ್ಥ ಅಲ್ಲವೇ' ಎನ್ನುತ್ತಿದ್ದರು. ಹಾಗೇ ಸಂಪಾದಿಸುವವನನ್ನು ಸಂಪಾದಕ ಅಂತ ಕರೆಯಬಹುದಾದರೆ, ಕನ್ನಡಿಸುವವನನ್ನು 'ಕನ್ನಡಕ' ಎಂದು ಏಕೆ ಕರೆಯಬಾರದು? ಪ್ರಶ್ನಿಸುತ್ತಿದ್ದರು. ಕಣ್ಣು ಕಾಣುವಂತೆ ಹಾಕಿಕೊಳ್ಳುವ ಉಪಕರಣಕ್ಕೆ 'ಕನ್ನಡಕ' ಎನ್ನಬಹುದಾದರೆ, ಕಿವಿ ಕೇಳುವಂತೆ ಹಾಕಿಕೊಳ್ಳುವ ಉಪಕರಣಕ್ಕೆ 'ಕಿವುಡಕ' ಎಂದು ಕರೆಯಬಹುದಲ್ಲವೇ ಅವರ ಪ್ರಶ್ನೆ.

ವೈಎನ್‌ಕೆ ತಮ್ಮ ಪನ್ ಪಾಂಡಿತ್ಯವನ್ನು ಬೇರೆಯವರ ಹೆಸರಿಗೂ ಅನ್ವಯಮಾಡಿ ಮಾತಾಡುತ್ತಿದ್ದರು. ನೃತ್ಯಗಾತಿ ಪ್ರೊತಿಮಾ ಬೇಡಿಗೆ ನೃತ್ಯ ಮಾಡಬೇಡಿ ಎನ್ನುತ್ತಿದ್ದರು, ಸದಾ ಹಣ್ಣು ಹಣ್ಣು ಕೂದಲಿನಲ್ಲಿಯೇ ಮಿಂಚುತ್ತಿದ್ದ ಚಿ.ನಾ ಮಂಗಳ ಅವರಿಗೆ 'ಪ್ರಾಚೀನಾ ಮಂಗಳ' ಎಂದೂ, ಇವರ ಎಲ್ಲ ಸಲಹೆಗಳಿಗೆ 'ನೊ ನೊ' ಎನ್ನುತ್ತಿದ ಕಛೇರಿಯ ಸಹಾಯಕ ನಾಯರ್‌ಗೆ 'ನೋಯರ್' ಎಂದೂ ಕರೆಯುತ್ತಿದ್ದರು. ಒಮ್ಮೆ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ವರದಿಗಾರರೊಬ್ಬಳು ಅದೇ ಪತ್ರಿಕೆಯ ವರದಿಗಾರನೊಬ್ಬನನ್ನು ಮದುವೆಯಾಗುತ್ತಿರುವುದಾಗಿ ವೈಎನ್‌ಕೆ ಬಳಿ ಹೇಳಿದಳು. ಹುಡುಗ ಯಾರು ಎಂದು ವೈಎನ್‌ಕೆ ಕೇಳಿದರು. ಅದಕ್ಕೆ ಅವಳು 'ಶ್ರೀಧರ್ ಕೃಷ್ಣಪ್ರಸಾದ್' ಎಂದಳು. ಅದಕ್ಕೆ ತಕ್ಷಣ ವೈಎನ್‌ಕೆ 'ನೋಡಮ್ಮ ಎಲ್ಲರೂ ನನ್ನನ್ನು ನನ್ನ ಇನಿಷಿಯಲ್ಸ್ ನಿಂದ ಕರೆಯುತ್ತಾರೆ. ನೀನು ಮಾತ್ರ ನಿನ್ನ ಗಂಡನನ್ನು ಹಾಗೆ ಕರೆಯಬೇಡ' ಎಂದರು. ಅವಳಿಗೆ ಏನೂ ಅರ್ಥವಾಗಲಿಲ್ಲ. ಆಗ ವೈಎನ್‌ಕೆ ವಿವರಿಸುತ್ತಾ 'ನೋಡು ಇನಿಷಿಯಲ್ಸ್‌ನಿಂದ ಕರೆದರೆ ಅವನು S.K.P.ಅಂದರೆ Escapee ಆಗುತ್ತಾನೆ' ಎಂದಾಗ ಆ ಹುಡುಗಿ ಬಿದ್ದು ಬಿದ್ದು ನಕ್ಕಳು.

ವೈಎನ್‌ಕೆ ಅವರಿಗೆ ತಾರೀಖುಗಳ ಬಗೆಗೆ ಏನೋ ಮೋಹ ಹಾಗೂ ಅವರ ನೆನಪಿನ ಶಕ್ತಿಯನ್ನು ತಾರೀಖುಗಳ ಮಹತ್ವವನ್ನು ವಿಚಾರಿಸುವುದರ ಮೂಲಕ ಪತ್ತೆ ಮಾಡಬಹುದಾಗಿತ್ತು. ಒಂದು ಸಾರಿ ಯಾರೋ ಮಾತಾಡುತ್ತಾ 'ವೈಎನ್‌ಕೆ ಇವತ್ತು ಜೂನ್ ಆರು, ಇವತ್ತಿನ ಮಹತ್ವ ಗೊತ್ತಾ? ಎಂದು ಕೇಳಿದ್ದೇ ಸಾಕಾಯಿತು. ತಕ್ಷಣ, 'ಇವತ್ತು ಕನ್ನಡಿಗರ ಆಸ್ತಿ ಮಾಸ್ತಿ ಹುಟ್ಟಿದ ದಿನ, ಅವರು ಸತ್ತ ದಿನವೂ ಹೌದು. ರಾಬರ್ಟ್ ಕೆನಡಿ ಹತ್ಯೆ ನಡೆದಿದ್ದು ಅಂದೇ. ಅಮೃತಸರದ ಸ್ವರ್ಣಮಂದಿರದ ಮೇಲೆ ಗುಂಡಿನ ಧಾಳಿ ನಡೆದಿದ್ದು ಅಂದೇ, ದೇವರಾಜ ಅರಸು ನಿಧನರಾದ ದಿನ, ಸಿದ್ದಾರ್ಥ ಬುದ್ದನಾದ ದಿನ' ಎಂದು ಒಂದೇ ಉಸಿರಿನಲ್ಲಿ ಅವರು ಹೇಳಿದಾಗ ಪ್ರಶ್ನೆ ಕೇಳಿದವರು ಸುಸ್ತು.

ಅಧೇ ರೀತಿ ಒಮ್ಮೆ ಆಗಸ್ಟ್ ೨೯ನೆಯ ತಾರೀಖಿನ ವಿಶೇಷವೇನು? ಎಂದು ಕೇಳಿದಾಗ 'ಇವತ್ತು ರಾಮಕೃಷ್ಣ ಹೆಗಡೆ ಹುಟ್ಟಿದ ದಿನ, ಹಾಗೇ ಮೈಕಲ್ ಜಾಕ್‌ಸನ್ ಹುಟ್ಟಿದ ದಿನ' ಎಂದರು, ತಕ್ಷಣ 'ಜೂನ್ ೨೨ರ ವೈಶಿಷ್ಟ್ಯವೇನು?' ಕೇಳಿದರೆ, 'ಜೂನ್ ೨೨ರಷ್ಯಾ ಮೇಲೆ ಹಿಟ್ಲರ್ ದಂಡಯಾತ್ರೆಗೈದ ದಿನ. ೨೩ ಸಂಜಯ್ ಗಾಂಧಿ ವಿಮಾನ ಅಪಘಾತದಲ್ಲಿ ಸತ್ತ ದಿನ' ಎಂದು ಪಟಪಟನೆ ಹೇಳಿದರು. ಪ್ರಶ್ನೆ ಕೇಳಿದವರು ಸುಸ್ತೋ ಸುಸ್ತು. ಆಗ ವೈಎನ್‌ಕೆ 'ಅಲ್ಲಯ್ಯ ನಾನು ನಿನಗೆ ಒಂದು ಸಿಂಪಲ್ ಪ್ರಶ್ನೆ ಕೇಳ್ತೀನಿ ಉತ್ತರ ಹೇಳು ಇವತ್ತು ನವಂಬರ್ ೪ ಇದರ ಮಹತ್ವ ಏನು' ಕೇಳಿದರು. ಆದರೆ ಅವರಿಗೆ ಎಷ್ಟು ಯೋಚಿಸಿದರೂ ಉತ್ತರ ಹೊಳೆಯಲಿಲ್ಲ. ಕಡೆಗೆ ವೈಎನ್‌ಕೆ 'ನೀನು ನನ್ನನ್ನು ಪರೀಕ್ಷಿಸಲು ಪ್ರಶ್ನೆ ಕೇಳಿದ ದಿನ ಅಂದರೆ ಇದು' ಎಂದರು. ಹೀಗೆ ವೈಎನ್‌ಕೆ ಅವರ ನೆನಪಿನ ಶಕ್ತಿ ಅಗಾಧವಾದದ್ದು.

ವೈಎನ್‌ಕೆ ಅವರಿಗೆ ಭಾಷೆಯ ಮೇಲೆ ಅತಿಯಾದ ಪ್ರೇಮ. ಅಂದರೆ ನಮ್ಮ ಭಾಷೆಯನ್ನು ನಾವು ಸರಿಯಾಗಿ ಉಪಯೋಗ ಮಾಡಿಕೊಳ್ಳಬೇಕು ಎಂದು ಆಗಾಗ ಹೇಳುತ್ತಿದ್ದರು. ಭಾಷೆಯ ಸದ್ಬಳಕೆ ಆಗಬೇಕು. ಒಂದು ಪದ ಕತ್ತರಿಸಿದರೆ ಬರೆದವನಿಗೆ ರಕ್ತಸ್ರಾವ ಆಗಬೇಕು ಹಾಗೆ ಕಾಳಜಿ ಇಟ್ಟುಕೊಂಡು ಬರೆಯಬೇಕು, ಬಳಸಬೇಕು ಎನ್ನುತ್ತಿದ್ದರು. ಪದಗಳು ಸಾಹಿತ್ಯದ ಜೀವಾಳ ಅಂದಮೇಲೆ ಪದ್ಯವಾಗಬಹುದು, ಗದ್ಯವಾಗಬಹುದು ಅದರಲ್ಲಿರುವ ಕಾವ್ಯಾಂಶವನ್ನು ಭಾಷೆ ಬೆಳಕಿಗೆ ತರಬೇಕು ಎಂದು ಹೇಳುತ್ತಿದ್ದರು.

ಇನ್ನು ಅವರ ವೈಯಕ್ತಿಕ ಬದುಕಿನ ನೆಲೆಗಳನ್ನು ತೆಗೆದುಕೊಂಡರೆ, ಅವರು ಒಂಟಿ(ಮದುವೆಯಾಗಲಿಲ್ಲ) ಆದರೆ ಆ ವಿಚಾರವನ್ನು ಯಾರೂ ಅವರೊಂದಿಗೆ ಧೈರ್ಯವಾಗಿ ಕೇಳುತ್ತಿರಲಿಲ್ಲ. ಮದುವೆಯೆಂದರೆ ಅದೊಂದು ಕಮಿಟ್‌ಮೆಂಟ್ ಬಿಡಿಸಿಕೊಳ್ಳಲಾಗದ, ಇರಲೂ ಆಗದ ಬಂಧನ ಎಂದು ಹೇಳುತ್ತಿದ್ದರು. ಮದುವೆಯಾಗಿ ಜೀವನ ಹಾಳು ಮಾಡಿಕೊಳ್ಳಬೇಡಿ ಎಂದು ಸುಮ್ಮನೆ ಉಪದೇಶ ಕೊಡುತ್ತಿದ್ದರೇ ಹೊರತು, ಮದುವೆಯಾದವರ ಬಗೆಗೆ, ಮದುವೆಯಾಗುವವರ ಬಗೆಗೆ ಅವರು ಯಾವತ್ತೂ ಕೇವಲವಾಗಿ ಮಾತಾಡಿದವರಲ್ಲ. ಮದುವೆಯ ಬಗೆಗೆ ವೈಎನ್‌ಕೆ ಕೆಲವು ಮಾತುಗಳನ್ನು ಹೇಳುತ್ತಿದ್ದರು. ಅವುಗಳನ್ನು ಇಲ್ಲಿ ಉದಾಹರಿಸುವುದು ಸೂಕ್ತ.

ಪಶ್ಚಿಮ ಜರ್ಮನಿಯ ಹ್ಯಾಂಬರ್ಗ್ ರೇವು ಮೈಲ್ ಆಫ್ ಸಿನ್ (ಪಾಪದ ಮೈಲಿ) ಎಂದು ಹೆಸರಾಗಿರುವ ರೇಪರ್ ಬಾನ್‌ನಿಂದ ಪ್ರಸಿದ್ಧಿ. ಜನರ ತನು ಮನ ರಂಜನೆಗೆ ಮೀಸಲಾದ ಈ ನಗರದ ವ್ಯಕ್ತಿಯೊಬ್ಬನ ಪತ್ನಿ ನಾಪತ್ತೆಯಾಗಿದ್ದಾಳಂತೆ. ಆದರೆ ಕಾನೂನು ಪ್ರಕಾರ ನಾಪತ್ತೆಯಾಗಿರುವವರ ಬಗ್ಗೆ ದೂರು ಕೊಟ್ಟಿರುವ ಆತ

'ಹಲವಾರು ವಾರಗಳಿಂದ ನನ್ನ ಹೆಂಡತಿ ಕಾಣೆಯಾಗಿದ್ದಾಳೆ ಆದರೇನು ಪರವಾಗಿಲ್ಲ. ನಾನು ಆರಾಮವಾಗಿದ್ದೇನೆ ಸಾವಕಾಶವಾಗಿ ಅವಳನ್ನು ಹುಡುಕಿಕೊಡಿ ಪರವಾಗಿಲ್ಲ' ಎಂದಿದ್ದನಂತೆ. ಮುಂದುವರೆದು ಅವನು 'ಎಲ್ಲಾದರೂ ಇರು ಎಂತಾದರು ಇರು ಹಿಂತಿರುಗಿ ಬರಬೇಡ, ಎಲ್ಲವನ್ನೂ ಕ್ಷಮಿಸಿದ್ದೇನೆ' ಎಂಬ ಜಾಹೀರಾತನ್ನೂ ಪ್ರಕಟಿಸಿದ್ದ ಎನ್ನುವುದನ್ನೂ ಗಮನಿಸಬೇಕು.

ಇದನ್ನು ಕೇಳಿದ ಜಗತ್ತಿನ, ತಮ್ಮ ಪಾರ್ಟ್ನರ್ ನಾಪತ್ತೆಯಾಗದಿರುವ ಅಸಂಖ್ಯಾತ ಗಂಡ-ಹೆಂಡಿರ ಪ್ರತಿಕ್ರಿಯೆ ಏನಿದ್ದೀತೆಂಬುದು ಕುತೂಹಲಕರ. ಹೆಂಡತಿಯೊಬ್ಬಳು ಮನೆಯೊಳಗಿದ್ದರೆ ನಾನೂ ಒಬ್ಬ ಸಿಪಾಯಿ, ಅದೇ ಕೋಟಿ ರೂಪಾಯಿ ಎಂದು ಹಾಡಿರುವ ಕನ್ನಡದ ಮಲ್ಲಿಗೆಯ ಕವಿಯ ಕವನವನ್ನು ಅವರುಗಳು ಕೇಳಿದ್ದಾರೋ ಇಲ್ಲವೋ ಗೊತ್ತಿಲ್ಲ.

ಹಿಂದೆ ಒಂದು ಸಾರಿ ಅತ್ತೆಯನ್ನು ಅಪಹರಿಸಿದ ಕಳ್ಳರು ಅಳಿಯನಿಗೆ ಫೋನ್ ಮಾಡಿದರಂತೆ. ೨೦,೦೦೦ ಸಾವಿರ ರೂಪಾಯಿ ಕೊಡು ಇಲ್ಲದಿದ್ದರೆ ಅತ್ತೆಯನ್ನು ತಂದು ಮನೆಗೆ ಬಿಡುತ್ತೇವೆ ಎಂದು. ಅಳಿಯ ಆ ಹಣ ಕೊಟ್ಟನೋ ಇಲ್ಲವೋ ತಿಳಿದಿಲ್ಲ.

ಮದುವೆಯೆಂಬ ಬಂಧನ stalemate ಆಗುವುದಕ್ಕೆ ಸಂಗಾತಿ stale (ಹಳಸಲು) ಆಗಿರುವುದೇ ಕಾರಣವೇ. ಆಕೆಗೆ ಇದು stale ಅನಿಸಿ ಬಂಧನದಿಂದ ಪರಾರಿಯಾಗಿರಬಹುದೇ. ಸಾಕ್ರೆಟಿಸ್ ಹೇಳುತ್ತಿದ್ದ: 'ಖಂಡಿತ ಮದುವೆಯಾಗಿ. ಅಕಸ್ಮಾತ್ ಸುಖಿಯಾದಿರೋ ಒಳ್ಳೆಯದು. ಇಲ್ಲದಿದ್ದರೆ ನೀವು ವೇದಾಂತಿಯಾದರೂ ಆಗಬಹುದು' ಎಂದು. ಮದುವೆ, ಬಂಧನ ಮುಂತಾದುವುಗಳ ಬಗೆಗೆ ಪುಂಖಾನುಪುಂಖವಾಗಿ ಮಾತಾಡುತ್ತಿದ್ದ ವೈಎನ್‌ಕೆ ಕೊನೆಗೆ ಒಂದು ಮಾತು ಹೇಳುತ್ತಿದ್ದರು. 'ಮದುವೆಯೊಂದು ಕೋಟೆ, ಒಳಗಿದ್ದವರು ಹೊರಗೆ ಬರಲು ಹೊರಗಿದ್ದವರು ಒಳಗೆ ಹೋಗಲು ಆಶಿಸುತ್ತಿರುವ ಕೋಟೆ, ಇದರಲ್ಲಿ ಸಂದೇಹವೇ ಇಲ್ಲ' ಎಂದು.

ತಮ್ಮ ಪತ್ರಿಕಾ ವ್ಯವಸಾಯದಲ್ಲಿದ್ದಾಗ ವೈಎನ್‌ಕೆ ಹತ್ತು ಹಲವಾರು ದೇಶಗಳನ್ನು ಸುತ್ತಿದರು. ಮೊದಲಿನಿಂದಲೂ ಅವರಿಗೆ ವಿದೇಶ ಎಂದರೆ ಅದೇನೋ ವ್ಯಾಮೋಹ. ನೀವು ಅವರೊಂದಿಗೆ ಕಲಾಸಿಪಾಳ್ಯದ ಬಗೆಗೆ ಮಾತಾಡುತ್ತಿದ್ದರೆ ಅವರು ಕ್ಯಾಲಿಫೋರ್ನಿಯಾ ಬಗೆಗೆ ಹೇಳುತ್ತಿದ್ದರು. ನೀವು ಶೃಂಗೇರಿ ಕುರಿತು ಹೇಳುತ್ತಿದ್ದರೆ ಅವರು ಹಂಗೇರಿ ಕುರಿತು ಹೇಳುತ್ತಿದ್ದರು. ನೀವು ನಿಮ್ಮೂರಿನ ಯಾವುದೋ ಮಹತ್ವದ ವಿಷಯವನ್ನು ಕುರಿತು ಹೇಳುತ್ತಿದ್ದರೆ ಅವರು ವಿದೇಶದ ಯಾವುದೋ ಊರಿನ ಇನ್ನೊಂದು ವಿಶೇಷದ ಕುರಿತು ಹೇಳುತ್ತಿದ್ದರು.

೧೯೭೯ರಲ್ಲಿ ಅವರು ಥಾಮ್ಸನ್ ಫೌನ್‌ಡೇಷನ್ ಸ್ಕಾಲರ್‌ಶಿಪ್ ಪಡೆದು ವೇಲ್ಸ್‌ನ ಕಾರ್ಡಿಫ್‌ನಲ್ಲಿ ಮೂರು ತಿಂಗಳು ಪತ್ರಿಕೋದ್ಯಮಕ್ಕೆ ಸಂಬಂಧಿಸಿದ ಉನ್ನತ ವ್ಯಾಸಂಗ ಮುಗಿಸಿ ಬಂದರು. ಪ್ರಧಾನಿಯಾಗಿದ್ದ ಮೊರಾರ್ಜಿ ದೇಸಾಯಿ ಜೊತೆ ೧೯೭೭ರಲ್ಲಿ ರಷ್ಯಾಕ್ಕೆ ಹೋಗಿ ಬಂದರು. ಹಾಗೇ ಮುಂದಿನ ಅನೇಕ ವರ್ಷಗಳಲ್ಲಿ ಅವರು ಪ್ರತಿ ವರ್ಷ ಒಂದಿಲ್ಲೊಂದು ದೇಶಕ್ಕೆ ಹೋಗಿ ಬಂದರು. ೧೯೭೯ರಲ್ಲಿ ಪೋಲೆಂಡ್, ಜೆಕೋಸ್ಲೋವಾಕಿಯಾ ಹಾಗೂ ಹಂಗರಿ ದೇಶಗಳಿಗೆ ಆಮಂತ್ರಣದ ಮೇರೆಗೆ ಭೇಟಿ ಕೊಟ್ಟರು. ಆಮೇಲೆ ಅವರು ಅಮೆರಿಕಾಕ್ಕೆ, ಇಂಗ್ಲೆಂಡ್ ಜರ್ಮನಿ ಕೆನಡಾ ಪ್ರವಾಸ ಮಾಡಿದರು. ಅವರು ಪ್ರವಾಸ ಪ್ರಿಯರು. ಹೀಗಾಗಿ ಹೋದ ಕಡೆಗಳಿಂದೆಲ್ಲಾ ಅಪಾರವಾದ ಅನುಭವವನ್ನು ಹೊತ್ತು ತಂದು ಅವುಗಳನ್ನು ವಂಡರ್ ಕಣ್ಣು ಮೂಲಕ ಕನ್ನಡ ಓದುಗರಿಗೆ ಒದಗಿಸುತ್ತಿದ್ದರು.

ಅವರ ವಂಡರ್ ಕಣ್ಣಿಂದ ಒಂದೆರಡು ಪ್ರಸಂಗಗಳನ್ನಾದರೂ ಉದಾಹರಿಸದಿದ್ದರೆ ಈ ಲೇಖನ ಪೂರ್ಣವಾಯಿತು ಎಂದೆನಿಸುವುದಿಲ್ಲ.

ವಂಡರ್ ಕಣ್ಣು: ಮಡದಿಯರ ಸ್ಥಾನ ಮನೆಯಲ್ಲಿ ಎಂಬುದು ೪೦ರ ದಶಕದಲ್ಲಿ ಮೈಸೂರು ಮಹರಾಜಾ ಕಾಲೇಜಿನಲ್ಲಿ ಚರ್ಚಾ ವಿಷಯವಾಗಿತ್ತು. ಕಾಲೇಜಿನ ಕನ್ನಡ ಪ್ರಾಧ್ಯಾಪಕ ವೆಂಕಟರಾಮಪ್ಪನವರು ಚರ್ಚೆಯಲ್ಲಿ ಭಾಗವಹಿಸಿ ಅಡುಗೆ ಮನೇಲಿ ಇರಬೇಕಾದವರು ಗಂಡಸರೇ, ಹೆಂಗಸರಲ್ಲ. ಅವರೇ ಮಹಾ ಪಾಕ ಪ್ರವೀಣರು. ನಳಪಾಕ, ಭೀಮಪಾಕ ಎನ್ನುವುದು ಪ್ರಸಿದ್ಧವೇ ಹೊರತು ಹಿಡಿಂಬೀ ಪಾಕ, ದಮಯಂತಿ ಪಾಕ ಅಂತ ಯಾರಾದರೂ ಕೇಳಿದೀರಾ ಅಂತ ಪ್ರಶ್ನೆ ಮಾಡಿದಾರೆ. ವಿರಾಟಪರ್ವದಲ್ಲಿ ವಲಲನಾಗಿ ಭೀಮ ವಿಜೃಂಭಿಸಿದ ಮೇಲೂ ಯಾರು ಪಾಕಶಾಸ್ತ್ರ ಕೋವಿದರು–ಗಂಡಸರೋ–ಹೆಂಗಸರೋ ಎಂದು ಕೇಳುವುದರಲ್ಲಿ ಅರ್ಥವಿದೆಯೋ ಎಂದು ಸ್ವಯಂಪಾಕ ಪ್ರವೀಣರಾದ ಶ್ರೀಮಾನ್ ಘಾ ಪ್ರಶ್ನಿಸುತ್ತಾರೆ.

ಆದರೆ ಶ್ರೀಮಾನ್ ಘಾ ಅವರ ಮನೆಯಲ್ಲಿ ಎಲ್ಲವೂ ಪ್ಯೂರ್ ಘೀ ಪ್ರಿಪರೇಷನ್ನೇ ಎಂದರೆ ಶ್ರೀಮಾನ್ ಘಾ ಅವರ ಧರ್ಮಪತ್ನಿ ಶ್ರೀಮಾನ್ ಘೀ ಏನು ಮಾಡಿದರೂ ಅದು ಘೀ ಪ್ರಿಪರೇಷನ್ನೇ – ಘೀ ಅರ್ಥಾತ್ ತುಪ್ಪ ಇಲ್ಲದೇ ಎಣ್ಣೆಯಲ್ಲಿ ಮಾಡಿದರೂ ಅದು ಘೀ ಪ್ರಿಪರೇಷನ್ನೇ ಎಂಬುದನ್ನು ಸ್ಪಷ್ಟಪಡಿಸಬೇಕಾದುದು ಅಗತ್ಯ. ಈಚೆಗೆ ರಾಜ್ಯ ವಿಧಾನಸಭೆಯಲ್ಲಿ ಉಪಮುಖ್ಯಮಂತ್ರಿ ಅಡುಗೆ ಮಾಡುವ ಗಂಡಸರ ಸಂಖ್ಯೆಯೇ ಹೆಚ್ಚೆಂಬುದನ್ನು ವಿವರಿಸಿದ್ದು ಈ ಹಳೆಯ ಪ್ರಸಂಗದ ನೆನಪು ಬರಲು ಕಾರಣವಾಯಿತು. ಎಲ್ಲಾ ಪಂಚ ತಾರಾ ಹೊಟೇಲ್‌ಗಳಲ್ಲಿ ಮಾತ್ರವಲ್ಲ; ಇತರ ಎಲ್ಲಾ ಹೊಟೇಲ್‌ಗಳಲ್ಲೂ 'ಕುಕ್ಕು'ಗಳು (ಅರ್ಥಾತ್ ಅಡುಗೆ ಪಾತ್ರೆಗಳನ್ನು ಕುಕ್ಕುವವರು)–ಚೆಫ್–ಪುರುಷರೇ ಎಂಬುದು ಯಾರಿಗಾದರೂ ಗೊತ್ತು.

ಮೌನ ಚಿನ್ನ ಎನ್ನುವುದರ ಬಗೆಗೆ ವೈಎನ್‌ಕೆ ಹೀಗೆ ವಂಡರ್ ಕಣ್ಣು ಬಿಡುತ್ತಾರೆ."

ಬಾಯಿ ಮುಚ್ಚಿಕೊಂಡಿರಲು ಹಣ ಕೊಡುವುದಕ್ಕೆ 'ಹಷ್ ಮನಿ' ಎನ್ನುತ್ತಾರೆ. ಒಂದೆ ಕವಿಯೊಬ್ಬರು ರೇಡಿಯೋದಲ್ಲಿ ಪದ್ಯ ಓದುವವರಿದ್ದರು. ಆದರೆ ಒಬ್ಬರು ಕವಿತಾ ಪಕ್ಷಪಾತಿಗಳೂ ಕವಿ ರಕ್ಷಕರೂ ಆದ ಕೆಲವರು ಆ ಕವಿಯನ್ನು ಸಂಪರ್ಕಿಸಿ ರೇಡಿಯೋ ಕೊಡುವಷ್ಟು ಸಂಭಾವನೆಯನ್ನು ತಾವೂ ಕೊಡುವುದಾಗಿ ಮುಂದೆ ಬಂದರಂತೆ. ಷರತ್ತು ಏನೆಂದರೆ ಆ ಕವಿ ಕವನ ಓದಕೂಡದು. 'ಹಷ್ ಮನಿ' ಎಂದರೆ ಇದೇ, ಆದರೆ ಈ ಸಂಗತಿ ನಡೆಯಿತೋ ಅಥವಾ ಹಷ್ ಮನಿ ನಿದರ್ಶನಕ್ಕೆಂದು ಕಟ್ಟಿದ ಕಥೆಯೋ ಗೊತ್ತಿಲ್ಲ. ಆದರೆ ಇಂಥಾ ಪ್ರಸಂಗಗಳಲ್ಲಿ ಮೌನ ಚಿನ್ನ ಎಂಬ ಮಾತು ನಿಜವೆನಿಸುತ್ತದೆ.

ಇದು ವೈಎನ್‌ಕೆ ಅವರ ವಂಡರ್‌ಗಳ ಕೆಲವು ಸ್ಯಾಂಪಲ್ ಗಳು. ಈ ವಂಡರ್ ಕಣ್ಣಿನ ಅನುಭವವಾಗಬೇಕೆಂದರೆ ಅವರ ಸಿರೀಸ್ ಪುಸ್ತಕಗಳನ್ನು ಓದಲೇಬೇಕು.

ವೈಎನ್‌ಕೆ ಮತ್ತೊಂದು ಬಾರಿ ಅಮೆರಿಕಾ ಪ್ರವಾಸಕ್ಕೆ ಸಿದ್ಧವಾಗಿದ್ದರು. ಒಂದೊಂದು ಬಾರಿ ವಿದೇಶ ಪ್ರವಾಸ ಅಂದಾಗಲೂ ಅದೇ ಮೊದಲನೇ ಸಲ ಹೋಗುತ್ತಿರುವುದು ಎನ್ನುವ ಉತ್ಸಾಹ ಇರುತ್ತಿತ್ತು. ಒಂದು ತಿಂಗಳ ಪ್ರವಾಸ ಮುಗಿಸಿ ಭಾರತಕ್ಕೆ ಬಂದ ಮೇಲೆ ಮಾಡಬೇಕಾದ ಅನೇಕ ಕೆಲಸಗಳ ಬಗೆಗೆ, ಬರೆಯಬೇಕಾದ ವಂಡರ್‌ಗಳ ಬಗೆಗೆ ಅವರು ಬಹಳ ಆಸೆ ಇಟ್ಟುಕೊಂಡಿದ್ದರು. ಆದರೆ ಮುಂಬಯಿ ಮೂಲಕ ಬೆಂಗಳೂರಿಗೆ ಬರಬೇಕಾಗಿದ್ದ ವಿಮಾನದಲ್ಲಿದ್ದ ವೈಎನ್‌ಕೆ ಮುಂಬಯಿ ಮುಟ್ಟುವ ಮೊದಲೇ ಹೃದಯಾಘಾತಕ್ಕೆ ತುತ್ತಾಗಿ ನೆಲಕ್ಕೆ ಇಳಿಯುವ ಮೊದಲೇ ಹಾಗೇ ಮೇಲಕ್ಕೆ ಹೊರಟುಹೋದರು, ಇಲ್ಲಿ ಎಲ್ಲರಿಗೂ ಷಾಕ್ ಕೊಟ್ಟು. ಅವರ ಪಾರ್ಥಿವ ಶರೀರ ಮುಂಬೈನಿಂದ ಬೆಂಗಳೂರಿಗೆ ಬಂತು.

ವೈಎನ್‌ಕೆ ಅವರ ಹೃದಯವಂತಿಕೆಗೆ, ಜನಪ್ರಿಯತೆಗೆ, ಅಜಾತಶತ್ರುತನಕ್ಕೆ ಸಾಕ್ಷಿ ಎಂದರೆ, ಅವತ್ತು ಶ್ರೀ ಎಸ್.ಎಂ.ಕೃಷ್ಣ ಅವರು ರಾಜ್ಯದ ಮುಖ್ಯಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಬೇಕು. ಆದರೆ ಅವರು ನೇರ ಬಂದದ್ದು ವೈಎನ್‌ಕೆ ಅವರ ಮನೆಗೆ. ಅವರ ಪಾರ್ಥಿವ ಶರೀರಕ್ಕೆ ಅಂತಿಮ ನಮನ ಸಲ್ಲಿಸಿ ನಂತರ ವಿಧಾನಸೌಧಕ್ಕೆ ನಡೆದರು.

ವೈಎನ್‌ಕೆ ಬೆಳೆಸಿದ ಸ್ನೇಹ ಸಮೂಹ ದೊಡ್ಡದು, ಕಲಾವಿದರ ದಂಡು ದೊಡ್ಡದು, ನಾಟಕಕಾರರ ಗುಂಪು ದೊಡ್ಡದು, ಪತ್ರಕರ್ತರ ಬಳಗ ದೊಡ್ಡದು. ವೈಎನ್‌ಕೆಗೆ ವೈಎನ್‌ಕೆ ಮಾತ್ರ ಸಾಟಿ. ಕನ್ನಡ ಪತ್ರಿಕಾ ರಂಗ ಕಂಡ ಅಪರೂಪದ ವ್ಯಕ್ತಿ ವೈಎನ್ ಕೆ. ಇನ್ನೊಬ್ಬ ವೈಎನ್‌ಕೆ ಹುಟ್ಟಿ ಬರಲು ಕನ್ನಡ ತಾಯಿ ಇನ್ನೆಷ್ಟು ಕಾಲ ಕಾಯಬೇಕೋ. ಅಲ್ಲಿವರೆಗೂ ವೈಎನ್‌ಕೆ ನೆನಪು ಅಜರಾಮರ.



## ನಾಡಿಗೇರ ಕೃಷ್ಣರಾಯ

### ವೈ. ಎನ್. ಗುಂಡೂರಾವ್

೧೯೦೮ರ ಕೀಲಕನಾಮ ಸಂವತ್ಸರ ಚೈತ್ರ ಶುದ್ಧ ಪಾಡ್ಯದ ದಿನ (೨೫.೦೩.೧೯೦೮) ನಾಡಿಗೇರ ಕೃಷ್ಣರಾಯರು ಜನಿಸಿದ್ದು. ಇದು ಯುಗಾದಿಯ ದಿನ. ಬೇವು ಬೆಲ್ಲ ಅನ್ವರ್ಥ ದಿನ. ನಾವು ಬೆಲ್ಲವನ್ನು ಜಾಸ್ತಿ ತಿಂದಂತೆ ನಾಡಿಗೇರರೂ ಕನ್ನಡಿಗರಿಗೆ ಉಣಿಸಿದ್ದು ಬೇವಿಗಿಂತ ಸಿಹಿ ಸಿಹಿಯಾದ ಹಾಸ್ಯ ರಸಾಯನವನ್ನೇ.

ಓದಿದ್ದು ಫೋರ್ತ್ ಮತ್ತು ಫಿಫ್ತ್ ಫಾರಂ. ಅಂದರೆ ೮ನೆಯ ಮತ್ತು ೯ನೆಯ ತರಗತಿಗಳು. ಅದೂ ಎರಡೆರಡು ವರ್ಷ. ನಂತರ ಶಾಲೆಗೆ ಶರಣು ಹೊಡೆದು ಅಂದಿನ ಪರಿಸ್ಥಿತಿಗೆ ತಕ್ಕಂತೆ ಉದ್ಯೋಗದ ಬೇಟೆ. ಜೀವನೋಪಾಯಕ್ಕೆ ಮಾಡದ ಕೆಲಸವಿಲ್ಲ. ಶಾನುಭೋಗಿಕೆ, ಜವಳಿ ಅಂಗಡಿ, ಹೊಟೇಲು, ಭದ್ರಾವತಿ ಕಬ್ಬಿಣದ ಕಾರ್ಖಾನೆ. ಕಡೆಗೆ ಪತ್ರಿಕೋದ್ಯಮ.

ಪತ್ರಿಕೋದ್ಯಮದಲ್ಲಿ ನೆಲೆನಿಂತ ನಾಡಿಗೇರರು ಸಂಯುಕ್ತ ಕರ್ನಾಟಕ, ಕಥಾಂಜಲಿ, ಪ್ರಜಾಮತ, ದೇಶಬಂಧು, ಜನವಾಣಿ, ತಾಯಿ ನಾಡು, ಮೈಸೂರು ಪ್ರಭ, ಉಷಾ, ಮಲ್ಲಿಗೆ ಮುಂತಾದ ಪತ್ರಿಕೆಗಳಲ್ಲಿ ಸಹ ಸಂಪಾದಕರಾಗಿ, ಸಂಪಾದಕರಾಗಿ ದುಡಿದರು. ಇಲ್ಲಿ ದುಡಿದುದಷ್ಟೇ ಅಲ್ಲ, ಅವರು ರಚಿಸಿದ ಹಾಸ್ಯ ಲೇಖನಗಳಿಗೂ ಲೆಕ್ಕವಿಲ್ಲ. ಈ ಪತ್ರಿಕೆಗಳಿಗಲ್ಲದೆ ಹಲವಾರು ಇತರ ಪತ್ರಿಕೆಗಳಿಗೂ ಹಾಸ್ಯ ಲೇಖನಗಳನ್ನು ಬರೆದರು.

ಇವರು ಬರೆದುದಷ್ಟೇ ಅಲ್ಲದೆ ಬರೆಯುವ ಹೊಸ ಪೀಳಿಗೆಯನ್ನೇ ಸೃಷ್ಟಿಸಿದರು. ಹಲವಾರು ಮಂದಿ ಯುವ ಬರಹಗಾರರಿಗೆ ಉತ್ತೇಜನ ನೀಡಿದರು. ಹೊಸ ಹೊಸ ಪ್ರಯೋಗಗಳನ್ನು ನಡೆಸಿದರು. ವಿವಿಧ ಬರಹಗಾರರಿಂದ ಕಾದಂಬರಿಯನ್ನು ಬರೆಸುವ ಸಾಹಸಕ್ಕೆ ಕೈ ಹಾಕಿ ಬೆಂಗಳೂರಿನ ಬರಹಗಾರರಲ್ಲಿ ಕೆಲವರನ್ನು ಸೇರಿಸಿ 'ಸಂದಿಗ್ಧದ ಸುಳಿಯಲ್ಲಿ' ಎಂಬ ಕಾದಂಬರಿ ಬರೆಸಿ ಪ್ರಕಟಿಸಿದ ಕೀರ್ತಿ ಇವರದು. ಖೊಕ್ ಕಾದಂಬರಿ ಪ್ರಯೋಗ ಸಾವಿರದ ಒಂಬೈನೂರು ಅರವತ್ತರ ಸುಮಾರಿನಲ್ಲೇ ನಡೆಸಿದ್ದರೆಂದರೆ ಯಾರಿಗಾದರೂ ಆಶ್ಚರ್ಯವಾದೀತು.

ಇದೇ ಸಂದರ್ಭದಲ್ಲಿ ವಾಣಿಯವರ ನೇತೃತ್ವದಲ್ಲಿ ಆರ್ಯಾಂಬ ಪಟ್ಟಾಭಿ, ಜನಾರ್ಧನ ಗುರ್ಕಾರ್, ರಘುಸುತ, ಪುಷ್ಪಾ ಎನ್.ರಾವ್, ರಾಮದಾಸ್, ಬಿ. ಎನ್. ನಾಗರಾಜ ಭಟ್, ನಾರಾಯಣ ಬಲ್ಲಾಳ, ರಾವ್ ದಂಡಿನ, ಎಸ್. ಮಂಗಳಾ ಸತ್ಯನ್, ಮುಂತಾದವರನ್ನೊಳಗೊಂಡ 'ತವರಿನ ಕುಡಿ' ಪ್ರಕಟವಾದದ್ದೂ ಖೊಕ್ ಕಾದಂಬರಿ ರೀತಿಯಲ್ಲೇ.

ಹೊಸಬರು ಹಳಬರೆನ್ನದೇ ಹಲವಾರು ಲೇಖಕರನ್ನು ಸಂಪರ್ಕಿಸಿ, ಬರೆಸಿ, ಪ್ರಕಟಿಸಿ, ಸಾಹಿತ್ಯ ಕ್ಷೇತ್ರದಲ್ಲಿ ಅವರು ಭದ್ರವಾಗಿ ನೆಲೆಯೂರಲು ನಾಡಿಗೇರರು ಕಾರಣರಾದರೆಂದರೆ ತಪ್ಪಾಗಲಾರದು.

ನಾಡಿಗೇರರ ಹಾಸ್ಯ ಲೇಖನಗಳು, ಹಾಸ್ಯ ಭಾಷಣಗಳಂತೂ ಓದುಗರಿಗೆ, ಕೇಳುಗರಿಗೆ ಮುದ ನೀಡುತ್ತಿದ್ದವು. ಅವರು ಸೃಷ್ಟಿಸುತ್ತಿದ್ದ ಸಂದರ್ಭ, ಪಾತ್ರಗಳಂತೂ ಚಿತ್ರ ವಿಚಿತ್ರವಾಗಿರುತ್ತಿದ್ದವು. ಇವರ ಭಾಷಣಗಳನ್ನು ಕೇಳಿದವರು, ಹಾಸ್ಯ ಲೇಖನವನ್ನು ಓದಿದವರು ಇವರ ವ್ಯಕ್ತಿತ್ವವನ್ನು ಕಲ್ಪಿಸಿಕೊಂಡು ಬೇಸ್ತು ಬಿದ್ದವರೆಷ್ಟೋ ಮಂದಿ. ಪತ್ರಿಕೆಗಳಲ್ಲಿ ಅವರ ಲೇಖನಗಳನ್ನು ಓದಿದ ಓದುಗರು ನಾಡಿಗೇರರು ಕಷ್ಟ ಕಾರ್ಪಣ್ಯಗಳ ಸಾಕಾರಮೂರ್ತಿ, ಲೋಕದ ತೊಂದರೆಗಳನ್ನು ಹೊತ್ತು ನಿಂತ ಪ್ರಾಣಿ, ಎಲ್ಲರ ಕಷ್ಟಗಳನ್ನು ತಾವೇ ಆವಾಹಿಸಿಕೊಳ್ಳ ಬಲ್ಲಂತಹ ವ್ಯಕ್ತಿ, ಮನೆತುಂಬ ಮಕ್ಕಳಿರುವ (ಡಜನ್ + ಒಂದು ಹೆಣ್ಣು) ನಂದ ಗೋಕುಲದ ಗೋಪಾಲಯ್ಯ, ಹೆಂಡತಿ ದಢೂತಿ,.... ಹೀಗೆ ಅವರ ವರ್ಣನೆಗಳು ಸಾಗುತ್ತವೆ. ಆದರೆ ಅವರ ವ್ಯಕ್ತಿತ್ವವನ್ನು ಕಂಡವರು, ತಿಳಿದವರು ಕಡಿಮೆ. ಅವರಿಗೆ ಡಜನ್ ಮಕ್ಕಳೂ ಇರಲಿಲ್ಲ, ಹೆಂಡತಿ ದಢೂತಿಯೂ ಇರಲಿಲ್ಲ. ಇವೆಲ್ಲ ಅವರು ಹಾಸ್ಯ ನಿರೂಪಣೆಗೆ ತಂದ ಸಮಯೋಚಿತ ಸಂದರ್ಭಗಳು, ಪಾತ್ರಗಳು. ಮಕ್ಕಳಿಗೆ ಮುದ್ದು ಗುಂಡು, ಪದ್ದಿ ಎಂದು ನಾಮಕರಣ ಮಾಡಿ ಓದುಗರನ್ನು ಬೇಸ್ತು ಬೀಳಿಸುವುದರಲ್ಲಿ ಗಟ್ಟಿಗರು.

ನಾಡಿಗೇರರು ಇತರರನ್ನು ನೋಡಿ ನಗುವುದಕ್ಕಿಂತ ತಮ್ಮನು ತಾವು ನೋಡಿಕೊಂಡು ನಗುತ್ತಾರೆ, ನಗಿಸುತ್ತಾರೆ. ಅವರ ಹಾಸ್ಯ ಸಾಹಿತ್ಯದಲ್ಲಿ ನಾಡಿಗೇರರೇ ನಾಯಕರು, ಅವರ ಪತ್ನಿಯೇ ನಾಯಕಿ, ಮಕ್ಕಳೇ ಪೋಷಕ ಪಾತ್ರಗಳು.

ನಾಡಿಗೇರರು ಚಿತ್ರರಂಗದ ಜಗತ್ತಿನೊಂದಿಗೂ ಕೆಲ ಕಾಲ ನಂಟು ಬೆಳಸಿದ್ದರೆಂಬುದು ಹಲವಾರು ಮಂದಿಗೆ ತಿಳಿದಿರದು.

೧೯೫೪ರಲ್ಲಿ ಸಿ. ವಿ. ರಾಜು ಅವರು ಕನ್ನಡದಲ್ಲಿ ವಿಭಿನ್ನರೀತಿಯ ಚಿತ್ರ ತಯಾರಿಸಬೇಕೆಂಬ ಹಂಬಲದಿಂದ ನಾಡಿಗೇರರಿಂದ ಹಾಡುಗಳು ಮತ್ತು ಸಂಭಾಷಣೆಯನ್ನು ಬರೆಸಿದರು. ಈ ಚಿತ್ರದ ಮೂಲಕ ಚೊಕ್ಕಣ್ಣ ಎಂಬ ಪ್ರತಿಭಾವಂತ ನಟನನ್ನು ಬೆಳ್ಳಿ ತೆರೆಗೆ ಪರಿಚಯಿಸಿ, ಆ ಯುವಕನಿಗೆ ಕಲ್ಯಾಣ್ ಕುಮಾರ್ ಎಂಬ ನಾಮಕರಣವನ್ನು ಮಾಡಿದ್ದೂ ಈ ನಾಡಿಗೇರರೇ! ಈ ಚಿತ್ರಕ್ಕಾಗಿ ಬರೆದ ಹಾಡುಗಳು ಸುಮಾರು ೧೫. ಅವುಗಳಲ್ಲಿ ಕಾಳಿಂಗರಾವ್ ಹಾಡಿದ 'ಇದೇನಿದು ಈ ಮಾಯೆ' ಬಹು ಜನಪ್ರಿಯವಾದ ಚಿತ್ರ ಗೀತೆ.

ಮುಂದಿನ ವರ್ಷ ಭಕ್ತಮಲ್ಲಿಕಾರ್ಜುನ ನಿರ್ಮಿಸಿದರು. ಅದಕ್ಕೂ ಆ ಗೀತೆಗಳನ್ನು ನಾಡಿಗೇರರು ರಚಿಸಿದರು. ನಂತರ ನಿರ್ಮಿಸಿದ್ದು ಲವ ಕುಶ. ಅದು ಕಾರಣಾಂತರದಿಂದ ಸೆಟ್ಟೇರಲೇ ಇಲ್ಲ.

ನಾಡಿಗೇರರು ಮುಂದಿನ ದಾರಿ ಹಿಡಿದಿದ್ದು ಸಾಹಿತ್ಯದ ಕಡೆಗೆ. ಅದರಲ್ಲೂ ನಗೆ ಸಾಹಿತ್ಯವನ್ನು ವಿಪುಲವಾಗಿ ಬೆಳೆಸಿದರು.

ನಾಡಿಗೇರರ ನಗೆ ಬರಹಗಳು ನಾಡಿನ ಬಹಳಷ್ಟು ಜನರನ್ನು ರಂಜಿಸಿವೆ. ಇವರು ಮಾಡುತ್ತಿದ್ದ ಅಂದರೆ ಬರೆಯುತ್ತಿದ್ದ 'ತಲೆ ಹರಟೆಯಿಂದ' 'ಹರಕು–ಮುರುಕು' ಆಗಿ ಬರೆದು ಹಾಸ್ಯ ಚಿಮ್ಮಿಸಲೆತ್ನಿಸುತ್ತಿದ್ದವರಿಗೆ, ಎಚ್ಚರಿಕೆ ನೀಡುವಂತೆ ಬರೆದು ನಗೆ ಉಕ್ಕಿಸಲು ಅಸಮರ್ಥವಾದುವನ್ನು ನಿರ್ಯೋಚನೆಯಿಂದ 'ಕಸದ ಬುಟ್ಟಿಗೆ' ಎಸೆಯುತ್ತಿದುದೂ ದಿಟ. ಇದಕ್ಕಾಗಿ ಅವರು ಎಂದೂ 'ಅಡ್ಡಾದಿಡ್ಡಿ ಹಾದಿ' ಹಿಡಿದವರಲ್ಲ. ಅಥವಾ 'ಹಾಳೂ ಮೂಳೂ' ಬರೆದು (ಹೊಟೇಲಿನವ ಕೊಟ್ಟ ಹಾಳೂ ಮೂಳೂ ತಿಂದು ದೇಹಾರೋಗ್ಯ ಕೆಡೆಸಿಕೊಂಡಂತೆ) ಓದುಗರ ಮನ ಸ್ವಾಸ್ಥ್ಯವನ್ನು ಕೆಡಿಸಿದವರಲ್ಲ. ಈ ಮಾತನ್ನು ಅವರನ್ನು ಒಪ್ಪದ 'ಕಿಡಿಗೇಡಿಗಳೂ' ಸಹ ಒಪ್ಪಲೇಬೇಕು. ಅದಕ್ಕೆ ಅವರು ಉಣಿಸಿದ್ದು ಮಜುಬೂತಾದ 'ನಾಡಿಗೇರರ ಬರಹಗಳು' ಎಂಬ ರಸಾಯನವನ್ನು. ಇದನ್ನು ತಿಂದವರು 'ಮೆಲ್ಲೋಗರ'ದಂತೆ ಆಗಾಗ್ಗೆ ಚಪ್ಪರಿಸಿದ್ದಿದೆ. ಆದರೆ ಅವರಿಡುತ್ತಿದ್ದ 'ಹಾಸ್ಯ ಬರೆಗಳು' ಚುರುಕು ಮುಟ್ಟಿಸಿದರೂ ನಗೆಯಲ್ಲಿ ಪರಿಸಮಾಪ್ತಿಯಾಗಿಬಿಡುತ್ತಿದ್ದವು.

ನಾಡಿಗೇರರ ನಗೆ ಬರಹಗಳು ಬುದ್ಧಿಯನ್ನು ಕೆರಳಿಸುವ ಹಾಸ್ಯವಲ್ಲ. ಮನಸ್ಸನ್ನು ಅರಳಿಸುವ ಹಾಸ್ಯ. ಇತರರನ್ನು ನೋಯಿಸಿ ಅವರೆಂದೂ ನಗಿಸುವ ಗೋಜಿಗೆ ಹೋದವರಲ್ಲ. ನಗಿಸಿ, ನಲಿಸುವ ದಾರಿಯನ್ನು ಸದಾ ಹಿಡಿಯುತ್ತಿದ್ದರು. ಇವರು ಬರೆದ ಮದುವೆಯ ವರ್ಣನೆಯನ್ನು ಓದಿಯೇ ಸವಿಯಬೇಕು.

'ಗಾಯದ ಮೇಲೆ ಬರೆ ಎಳದಂತೆ ನಮ್ಮ ಸೋದರ ಮಾವ (ಶಕುನಿ ಮಾವನೇ ಎಷ್ಟೋ ವಾಸಿ) ಎಲ್ಲಿಯೂ ಖರ್ಚಾಗದ, ಯಾರೂ ಲಗ್ನವಾಗದ ಒಂದು 'ವಾರ್ ಕ್ವಾಲಿಟಿ' ಪೋಷಕ ಕಲಾ ಪೂರಿತಳಾದ (ಅವನ ಹೇಳಿಕೆಯಂತೆ) ಅವನ ಮಗಳೂ ಶಾಮಲೆ (ಹೆಸರಿಗೆ ಮಾತ್ರವಲ್ಲ, ಬಣ್ಣದಲ್ಲಿಯೂ ಸಹ)ಯನ್ನು ಅಗ್ಗವಾಗಿ ನನಗೆ ಗಂಟುಹಾಕಲು ನಮ್ಮಜ್ಜಿಯೊಂದಿಗೆ ಪಿತೂರಿ ನಡೆಸಲಾರಭಿಸಿದ. ಅಜ್ಜಿ ಒಳ್ಳೆಯ ಮನೆತನ, ಅಂತ:ಕರಣ, ಕಟ್ಟೆಯ ಕಲ್ಲು, ಕಟ್ಟಿಗೆ ಹಾಕಿದ ಹಾಗೆ ಗೃಹಸ್ಥಾಶ್ರಮ ಮುಂತಾದ ಮಾತಿನ ಮಂಡಿಗೆಗಳಿಂದ ಮಾಲೆಗಳನ್ನು ಹೆಣೆದು ನನ್ನ ಕೊರಳಿಗೆ ಹಾಕಿ, ನನ್ನನ್ನು ಒಪ್ಪಿಸಿದಳು. ವಯೋವೃದ್ಧಳೂ, ಜ್ಞಾನ ವೃದ್ಧಳೂ ಆದ ಅಜ್ಜಿಯು ಹೇಳುವುದೆಲ್ಲಾ ಸಾಧುವಾದದ್ದೆಂದು ಭ್ರಮಿಸಿ ಶಾಮಲೆಯನ್ನು ನಾನು ಅಗ್ನಿ ಸಾಕ್ಷಿಯಾಗಿ ಕೈ ಹಿಡಿದೆ.

ಶಾಮಲೆ ವರ್ಷ ವರ್ಷಕ್ಕೆ ತಪ್ಪದೆ ಅವಳಿ ಮಕ್ಕಳನ್ನು, ಒಂದು ಸಾರಿ ಮೂರು ಮಕ್ಕಳನ್ನು ಹೆತ್ತು ತನ್ನ ಸ್ತ್ರೀತ್ವವನ್ನು ಚೆನ್ನಾಗಿ ಪ್ರದರ್ಶಿಸಿದ್ದಾಳೆ. 'ನಿಮ್ಮದೇ ಒಂದು ಸ್ವಂತ ನಾಟಕ ಕಂಪೆನಿ ಮಾಡಿಬಿಡಿ, ಅದಕ್ಕೆ ನಾಡಿಗೇರ್ ಓನ್ ಡ್ರಾಮಾಟಿಕ್ ಕ್ಲಬ್' ಅಂತಾ ಹೆಸರಿಟ್ಟುಬಿಡಿ. ಸಂಪೂರ್ಣ ರಾಮಾಯಣ ನಾಟಕವನ್ನು ಸಹ ಆಡಬಹುದು ಎಂಬುದಾಗಿಯೂ ಒಂದಿಬ್ಬರು ಸಲಹೆ ಕೊಟ್ಟಿದ್ದಾರೆ. ಅಬ್ಬಾ, ಅವರ ಧಾರ್ಷ್ಟ್ಯತನವನ್ನು ಮೆಚ್ಚಲೇ ಬೇಕು!

ಹೌದು ನಮ್ಮ ಮನೆಯಲ್ಲಿ ಒಂದರಂತೆ, ಅವಳಿ ಜವಳಿ, ಮೂರರಂತೆ ಎಲ್ಲಾ ಸೇರಿ ಹದಿಮೂರು ಜನರಿದ್ದಾರೆ. ತೊಟ್ಟಿಲಲ್ಲಿರುವುದು, ಅಂಬೆಗಾಲಿಡುವುದು, ಮೂರು ಗಾಲಿ ಗಾಡಿಯನ್ನು ಹಿಡಿದುಕೊಂಡು ತಪ್ಪು ತಪ್ಪು ಹೆಜ್ಜೆ ಇಡುವುದು ಮತ್ತು ಇವುಗಳ ಮೇಲೆ ನಾವೇನಾದರೂ ಸಿಟ್ಟು ಮಾಡಿಕೊಂಡರೆ ಒಂದು ಕೈ ನೋಡಿಬಿಡ್ತೇನೆ ಎಂದು ತೋಳೇರಿಸುವ ದೊಡ್ಡಮಗ ಎಲ್ಲಾ ಶೋ ಕೇಸಿನಲಿಟ್ಟಂತೆ ಪಾಂಗಿತವಾಗಿವೆ.

ಒಂದೊಂದು ಸಾರೆ ನನ್ನ ಹೆಂಡತಿ ಮಾರ್ಕೆಟ್ಟಿಗೆ ಹೊರಟರೆ ಅವಳನ್ನು ನೋಡಿದರೆ ಗೂಡ್ಸ್ ಗಾಡಿಯ ನೆನಪು ಬರುತ್ತದೆ. ಏಕೆ ಗೊತ್ತೆ? ಅವಳ ಹಿಂದೆ ಆಕೆಯ ಸೆರಗು ಹಿಡಿದುಕೊಂಡು ಬರುವ ಈ ಮಕ್ಕಳ ಸಾಲು!'

ಇದು ನಾಡಿಗೇರರು ತಮ್ಮ ಸಂಸಾರದ ವಿಷಯವನ್ನು ಒರೆಗೆ ಹಚ್ಚುತ್ತಿದ್ದ ರೀತಿ.

ನಾಡಿಗೇರರು ತಮ್ಮನ್ನು ತಾವು ಹಾಸ್ಯ ವಸ್ತುವಾಗಿಸಿಕೊಳ್ಳುವುದರಲ್ಲಿಯೂ ನಿಸ್ಸೀಮರು. ಒಮ್ಮೆ ನಾಡಿಗೇರರು 'ದೇಶ ಬಂಧು' ಪತ್ರಿಕೆಯಲ್ಲಿದ್ದಾಗ ದೇವುಡು ನರಸಿಂಹ ಶಾಸ್ತ್ರಿಗಳ ಬಗ್ಗೆ ಕೀಟಲೆಯ ಕೆಲವು ಮಾತುಗಳನ್ನು ಬರೆದರು. ಇದನ್ನು ಓದಿದ ದೇವುಡು ಅವರು ಕೆಂಡಾಮಂಡಲ ಕೋಪತಾಳಿದರು. 'ಅವನ್ಯಾವನು ನಾಡಿಗೇರ ಕೃಷ್ಣರಾಯ, ಸಿಕ್ಕಲಿ ಅವನ ಮೂಳೆ ಮುರಿದು ಬಿಡುತ್ತೇನೆ' ಎಂದು ಹೂಂಕರಿಸಿದರಂತೆ. ನಾಡಿಗೇರರು ಅವರ ಸ್ನೇಹಿತರೊಡನೆ ಸಂಜೆ ವಿಹಾರ ಹೋಗಿ ಬರುತ್ತಿದ್ದಾಗ ಎದುರಿಗೆ ದೇವುಡು ಬಂದುಬಿಡಬೇಕೆ? ಹಿಂದೆ ನಡೆದದ್ದು, ದೇವುಡು ಆಡಿದ್ದು ಒಂದೂ ತಿಳಿಯದ ನಾಡಿಗೇರರ ಸ್ನೇಹಿತರಾದ ಮಾ.ನ. ಚೌಡಪ್ಪನವರು, ದೇವುಡು ಅವರಿಗೆ ಕೈಮುಗಿದು 'ಇವರು ನನ್ನ ಸ್ನೇಹಿತರು, ನಾಡಿಗೇರ ಕೃಷ್ಣರಾಯರು' ಎಂದರಂತೆ. ದೇವುಡುರವರು ನಖಶಿಖಾಂತ ನಾಡಿಗೇರರನು ನೋಡಿ, 'ಛೇ, ಈ ನರಪೇತಲ ನಾರಾಯಣನಿಗೆ ಹೇಗೆ ಏಟು ಹಾಕಲಿ? ಹಾಕಿದರೂ ತಡೆದೀತೆ? ಹೋಗಲಿ ಬದುಕ್ಕೋ' ಎಂದರಂತೆ. ಇದು ನಾಡಿಗೇರರು ತಮ್ಮನ್ನು ತಾವು ರಂಜಿತ ವಸ್ತು ಮಾಡಿಕೊಳ್ಳುತ್ತಿದ್ದ ರೀತಿ.

ಇದೇ ನಾಡಿಗೇರರೇ ದೇವುಡು ಅವರ ಮನೆಗೆ ಒಮ್ಮೆ ಹೋದರು. ಅವರು ಆಗ ದೇವರ ಪೂಜೆಯಲ್ಲಿದ್ದವರು 'ಯಾರದು?' ಎಂದರು ಗಡಸು ಧ್ವನಿಯಿಂದ,

'ನಾನು ನಾಡಿಗೇರ' ಎಂದರು

'ಏನು ಬಂದದ್ದು?' ಮತ್ತದೇ ಗಡಸು ಧ್ವನಿ.

'ನನ್ನದೊಂದು ಕಥಾ ಸಂಕಲನ ಅಚ್ಚಾಗಿದೆ. ಅದಕ್ಕೊಂದು ಮುನ್ನುಡಿ ಬರೆದು ಕೊಡಬೇಕು'.

'ನಾನು ಬರೆದು ಕೊಡೋಲ್ಲ'.

'ನೀವು ಬರೆದು ಕೊಡಲೇಬೇಕು, ನೀವು ಬರೆದು ಕೊಡ್ತೀರಾ ಅಂತಾನೆ ನಿಮ್ಮ ಹತ್ತಿರ ಬಂದಿರೋದು. ಹಿರಿಯರು ಅಂತ ಬಂದರೆ ಹೀಗೇನಾ ನೀವು ಹೇಳೋದು?'

'ನೀನು ಏನೇ ಹೇಳಿದರೂ ನಾನು ಬರೆದುಕೊಡೋಲ್ಲ.'

'ಹಾಗಾದರೆ ನಿಮ್ಮದು ಇದೇ ಹಠಾನಾ? ಹಾಗಾದ್ರೆ ಕೇಳಿ, ನೀವು ಬರೆದು ಕೊಡುವವರೆವಿಗೂ ಈ ಜಾಗ ಬಿಟ್ಟು ಏಳೋಲ್ಲ, ಒಂದು ಹನಿ ನೀರೂ ಕೂಡಾ ಕುಡಿಯೋಲ್ಲ. ಅದು ಹೇಗೆ ನನ್ನಂಥ ಬ್ರಾಹ್ಮಣನನ್ನ ಹೊರಗೆ ಒಣಗಿಸುತ್ತಾ, ನೀವು ಊಟಾ ಮಾಡ್ತೀರೋ ನಾನು ನೋಡ್ತೇನೆ' ಎಂದು ಸವಾಲೆಸೆದರಂತೆ.

ಆಗ ದೇವುಡುರವರಿಗೆ ಬೇರೆ ದಾರಿಯಿಲ್ಲದೆ ಬರೆದು ಕೊಟ್ಟರಂತೆ. (ಅಂದು

ಪ್ರತಿಷ್ಠಿತರಿಂದ ಮುನ್ನುಡಿ ಬರೆಸುವುದು ವಾಡಿಕೆಯಾಗಿತ್ತು. ಆದರೆ ಈ ಸಾಹಿತ್ಯ ದಿಗ್ಗಜರು ಕೇಳಿ ಕೇಳಿದವರಿಗೆಲ್ಲಾ ಮುನ್ನುಡಿ ಬರೆದು, ಎಂದೂ ತಮ್ಮ ಬೆಲೆ ಕಡಿಮೆ ಮಾಡಿಕೊಳ್ಳಲಿಚ್ಛಿಸುತ್ತಿರಲಿಲ್ಲ. ಆದರೆ ಇಂದು....ಕೇಳಿಯಾರೆ ಎಂದು ಕಾದಿರುವ ಲೇಖಕರಿಗೇನೂ ಕಡಿಮೆಯಿಲ್ಲ)

ನೋವನ್ನು ನಗುತ್ತಾ ನುಂಗಬೇಕು. ನುಂಗಿದ ನೋವನ್ನು ಸ್ಮರಿಸಿ ನಗಬೇಕು. ನೋವನ್ನು ನಗೆಯಾಗಿ ಪರಿವರ್ತಿಸಬೇಕು. ನೋವಿನ ಖಾಯಿಲೆಗೆ ನಗೆಯ ಇಂಜೆಕ್ಷನ್ ಕೊಟ್ಟು ರೋಗ ಪರಿಹರಿಸಬೇಕು. ಇದು ನಾಡಿಗೇರರ ಸಿದ್ಧಾಂತ. ಇದನ್ನೇ ಅವರ ಕೃತಿಗಳಲ್ಲಿಯೂ ಪ್ರತಿಪಾದಿಸಿದ್ದಾರೆ. ಜೀವನಕ್ಕೆ ಅನ್ವಯಿಸಿಕೊಂಡಿದ್ದಾರೆ.

ನಾಡಿಗೇರರು ಹುಟ್ಟಿದ್ದು ಹರಿಹರದಲ್ಲಿ. ಊರ ತುಂಬಾ ನಾಡಿಗೇರ್ ಕಿಟ್ಟಿ ಎಂದೇ ಪ್ರಸಿದ್ಧಿ. ಯಾವಾಗಲೂ ದಂಡನ್ನು ಕಟ್ಟಿಕೊಂಡು ಜೋಕುಗಳ ಭಯಂಕರ ನಗೆಯನ್ನು ತರಿಸುತ್ತಿದ್ದರಿಂದ ಹುಡುಗರ ಗುಂಪು ಸದಾ ಇವರ ಸುತ್ತ ಇರುತ್ತಿತ್ತು.

ಊರಿನ ರಸಿಕ ಮಹಾಶಯರೊಬ್ಬರಿಗೆ ಹೆಂಗಸರ ಖಯಾಲಿ. ಈತನಿಗೆ ಸರಿಯಾಗಿ ಬುದ್ಧಿ ಕಲಿಸಬೇಕೆಂದು ಯೋಚಿಸಿದ ನಾಡಿಗೇರರು ಊರ ಮುಂದಿನ ಹರಿಹರೇಶ್ವರ ದೇವಸ್ಥಾನದ ಮುಂದೆ ರಸಿಕ ಮಹಾಶಯ ಒಂದು ಬೆಳದಿಂಗಳ ರಾತ್ರಿ ಕುಳಿತಿದ್ದು ಕಂಡು ಅಂದೇ ಅವನಿಗೆ ಸರಿಯಾಗಿ ಗೋಳು ಹೊಯ್ದುಕೊಳ್ಳಬೇಕೆಂದು ನಿರ್ಧರಿಸಿದರು.

ಈ ರಸಿಕ ಮಹಾಶಯ ಗರುಡಗಂಭದ ಹತ್ತಿರ ಕಟ್ಟೆ ಹತ್ತಿ ಕುಳಿತಿದ್ದಾನೆ. ಬಾಯಲ್ಲಿ ಏನೋ ಕುರುಕುತ್ತಾ ಯೋಚಿಸುತಿದ್ದಾನೆ. ಅಷ್ಟರಲ್ಲಿ ಹತ್ತಿರದ ಮಹಾದ್ವಾರದ ಬಳಿ ಹೆಂಗಸೊಬ್ಬಳು ಬಂದು ನಿಂತಂತಾಯಿತು. ಸರಿ, ಈತನ ಮಿದುಳು ಓಡಿತು. ಹೆಂಗಸರ ಸೆರಗಿನ ಗಾಳಿ ಬೀಸಿದರೆ ಉದ್ರೇಕಗೊಳ್ಳುವ ಈತನಿಗೆ ಹೆಂಗಸ ನೆರಳು ನೋಡಿದಾಗ ಹೇಗಾಗಿರಬೇಡ?

'ಯಾರದು?' ಎಂದ ಈತ.

'ನನ್ನ ಕಥಿ ಏನ್ ಹೇಳ್ಲಿ....ನಿಮ್ಮನ್ನ ನೋಡಿದರೆ ಒಮ್ಮೆಲೆ ದುಃಖ ಉಕ್ಕಿ ಬತ್ತದರೀ...ಗಳಗಳ ಅಳಬೇಕನ್ನಿಸ್ತದರಿ.....'

ಈ ರಸಿಕ ಮಹಾಶಯನಿಗೆ ಹೃದಯ ಕರಗಿ ನೀರಾಯಿತು.

'ಯಾರದು?....ನೀನ್ಯಾರು ಅನ್ನೊದಾದ್ರೂ ಹೇಳಬಾರ್ದಾ.....?'

'ನಾನು ಯಾರೂ ಅಲ್ಲಪ್ಪಾ....ನಿಮ್ಮನ್ನ ನೋಡಿದ್ರೆ ನನ್ನಯಜಮಾನ್ರು ನೆನಪಿಗೆ ಬರ್ತಾರ್ರಿ. ಅವರೂ ಹಂಗೆ ಇದ್ರು... ಎಂಥ ಚೆಂದ ಇದ್ರು.... ನಿಮ್ಮನ್ನ ನೋಡಿದ

ತಕ್ಷಣ ಅವರ್ನ ಕಂಡಂಗಾತು.... ಎಲ್ಲೋ ಹೋದವರು ತಿರುಗಿ ಬಂದು ಗರುಡ ಗಂಭದ ಹತ್ರ ಕುಂತಾರೇನೋ ಅನ್ನಿಸ್ಲಿಕ್ಕೆ ಹತ್ತಿತು' ಎಂದು ಪರಿಪರಿಯಾಗಿ ಗೋಳಾಡ ತೊಡಗಿದಾಗ ಅಂಥ ಬೆಳದಿಂಗಳನಲ್ಲಿ ರಸಿಕ ಮಹಾಶಯನಿಗೆ ಆ ಹೆಣ್ಣು ಎಷ್ಟು ಚೆಂದಾಗಿರಬೇಕು ಎಂದು ರಂಭೆ ಊರ್ವಶಿಯರನ್ನೆಲ್ಲ ಮನಸ್ಸಿನ ಮುಂದೆ ಕರೆದು ನಿಲ್ಲಿಸಿಕೊಂಡ.

ಕುಡುಕನಿಗೆ ಯಾವ ಪಾನೀಯವೂ ಕೆಟ್ಟದ್ದಲ್ಲ, ಧನಿಕನಿಗೆ ಯಾವ ಹಣವೂ ಕಳಂಕಿತವಲ್ಲ, ಕಾಮುಕನಿಗೆ ಯಾವ ಹೆಂಗಸೂ ಕುರೂಪಿಯಲ್ಲ....ಎನ್ನುವಂತೆ ಈ ರಸಿಕನಿಗೆ ಯಾವ ಹೆಣ್ಣಾದ್ರೂ ಚೆಂದಾಗೇ ಕಾಣಿಸ್ತಿದೆ ಎನ್ನುವ ಮಾತು ಕೋಟೆಯಲ್ಲೆಲ್ಲಾ ಪ್ರಚಲಿತವಾಗಿತ್ತು. ತಡೆಯಲಾಗದೆ ಈತ ಧಿಗ್ಗನೆದ್ದು ತಲೆಮೇಲೆ ಕೈ ಆಡಿಸಿದ, ಬೈತಲೆ ಸವರಿದ....ತೋಳು ಸವರಲು ಹೋದಾಗ ಕಿಲ ಕಿಲ ಹುಚ್ಚ ನಗು,

'ಅರೆ, ಯಾರು ನೀನು ಹುಚ್ಚು ಖೋಡಿ.....?'

ಪಂಚೆಯನ್ನು ಸೀರೆಯಂತೆ ಸುತ್ತಿಕೊಂಡ ಆ ನಾಡಿಗೇರರನ್ನು ನೋಡಿದ ರಸಿಕ ಮಹಾಶಯನಿಗೆ ದಂಗು ಬಡಿದಂತಾಯ್ತು. ಆದ ಅವಮಾನವನ್ನು ತಡೆಯಲಾರದೆ ಓಡಿಹೋಗಲು ಹವಣಿಸಿದಾಗ, ಮೊದಲೇ ಯೋಚಿಸಿದಂತೆ ನಾಡಿಗೇರರ ಸ್ನೇಹಿತರೆಲ್ಲರೂ ರಸಿಕ ಮಹಾಶಯನಿಗೆ ಅಮರಿಕೊಂಡರಂತೆ.

ಇದು ದಾಶರಥಿ ದೀಕ್ಷಿತರು ನಾಡಿಗೇರರ ಒಡನಾಟದಲ್ಲಿ ಅನುಭವಿಸಿದ್ದನ್ನು ವರ್ಣಿಸಿರುವ ರೀತಿ.

ಇಂಥ ಪ್ರಸಂಗಾವಧಾನಪೂರಿತ ನಾಡಿಗೇರರು ಜೀವನದ ಪ್ರತಿಯೊಂದು ವಿಷಯಗಳಮೇಲೂ ಲೇಖನಿ ಹರಿಸಿದ್ದಾರೆ. ಉಪಾಧ್ಯಾಯರುಗಳ ಬಗ್ಗೆ ಅವರಿಗೆ ಬಹಳ ಗೌರವ ಒಂದಡೆಯಾದರೆ ಅನುಕಂಪ ಮತ್ತೊಂದೆಡೆ. ದೇಶದ ಪ್ರಜೆಯನ್ನು ರೂಪಿಸುವ ಹೊಣೆ ಹೊತ್ತ ಈ ಮಹಾತ್ಮರುಗಳ ಬಗ್ಗೆ ಅನಾದರ ಸಲ್ಲದು ಎಂಬುದೇ ನಾಡಿಗೇರರ ವಾದ.

ಅವರೇ ಕಂಡ ಒಂದು ಸ್ವಾರಸ್ಯ ಪ್ರಸಂಗದ ವರ್ಣನೆ ನಾಡಿಗೇರರ ಲೇಖನಿಯಿಂದ ಹೀಗೆ ಮೂಡಿಬಂದಿದೆ.

'ಸ್ಕೂಲುಗಳ ಇನ್‌ಸ್ಪೆಕ್ಟರಿಗೆ ಬೇರೆ ರೇಂಜಿಗೆ ವರ್ಗವಾಯಿತು. ಒಂದು ಹಳ್ಳಿ ಸ್ಕೂಲಿಗೆ ಭೇಟಿ ಕೊಡಬೇಕೆಂದು ಬೈಸಿಕಲ್ಲಿನ ಮೇಲೆ ಕುಳಿತು ಹೊರಟರು. ನಿಯಮದಂತೆ ಶಾಲೆಯ ಬಾಗಿಲು ತೆರದೇ ಇರಲಿಲ್ಲ. ಶಾಲೆಯ ಉಪಾಧ್ಯಾಯರು ಎಲ್ಲಿಗೆ ಹೋಗಿದ್ದಾರೆಂದು ಹಳ್ಳಿಯವರಿಗೂ ಗೊತ್ತಿರಲಿಲ್ಲ. ಬೈಸಿಕಲ್ ಪ್ರಯಾಸದಿಂದ

ಆಯಾಸಗೊಂಡಿದ್ದ ರೇಂಜ್ ಇನ್‌ಸ್ಪೆಕ್ಟರು ಊರ ಮುಂದಿದ್ದ ಅರಳೀಕಟ್ಟೆಯ ಮೇಲೆ ಬಂದು ಕುಳಿತರು. ಇಜಾರ, ಕೋಟು, ಟೈ ಧರಿಸಿದ ಇವರು ಹಳ್ಳಿಗರ ದೃಷ್ಟಿಯಲ್ಲಿ ಅಧಿಕಾರಿಗಳಲ್ಲವೇ?

ಸರಿ, ಊರಿನವರು ಒಬ್ಬೊಬ್ಬರೇ ಬಂದು ಅಪರಿಚಿತರೊಬ್ಬರು ಅರಳೀಕಟ್ಟೆಯ ಮೇಲೆ ಕುಳಿತಿದ್ದರಿಂದ ಮಾತನಾಡಿಸತೊಡಗಿದರು. ಬಂದವರಲ್ಲಿ ಮುಖ್ಯಸ್ಥರೊಬ್ಬರು, 'ಸ್ವಾಮಿಗಳು ಯಾರೋ?' ಅಂತ ಕೇಳಿದರು. ರೇಂಜ್ ಇನಸ್ಪೆಕ್ಟರ್ ನಗೆ ಸೂಸುತ್ತಾ 'ಇನ್‌ಸ್ಪೆಕ್ಟರು' ಅಂದರು. ಐದುಗಜ ದೂರದಲ್ಲಿ ನಿಂತಿದ್ದ ಜನ ಹತ್ತು ಗಜ ದೂರಕ್ಕೆ ಹಾರಿದರು. ಅಷ್ಟರಲ್ಲಿ ಕುತೂಹಲಿಯಾದ ಹಳ್ಳಿಗನೊಬ್ಬ 'ಯಾವ ಇನ್ಸಸ್ಪೆಕ್ಟರೋ? ಪೊಲೀಸ್ ಇನ್‌ಸ್ಪೆಕ್ಟರೋ?' ಎಂದ. 'ಅಲ್ಲ' ಎಂಬ ಅರ್ಥ ಬರುವಂತೆ ಇವರು ತಲೆಯಲ್ಲಾಡಿಸಿದರು. 'ಫಾರೆಸ್ಟ ಇನಸ್ಪೆಕ್ಟರೋ?' ಅಂತ ಇನ್ನೊಬ್ಬ ಪ್ರಶ್ನೆ ಒಗೆದ. 'ಇಲ್ಲ ಸ್ಕೂಲ್ ಇನ್‌ಸ್ಪೆಕ್ಟರ್' ಎಂದು ನಿಜ ಸಂಗತಿಯನ್ನು ಹೇಳಿದ್ದರಿಂದ ಹತ್ತು ಗಜ ದೂರದಲ್ಲಿ ನಿಂತಿದ್ದ ಜನರೆಲ್ಲ ಐದು ಗಜದೂರಕ್ಕೆ ಹಾರಿ ಬಂದು 'ಅಯ್ಯೋ' ಎಂಬ ಉದ್ಗಾರ ಎಲ್ಲರ ಬಾಯಿಂದ ಕೋರಸ್ ರೀತಿ ಬರಬೇಕೆ?

ಈ ಪ್ರಕರಣ ಇಲ್ಲಿಗೇ ಮುಗಿಯಲಿಲ್ಲ. ಒಬ್ಬ ಧೈರ್ಯಸ್ಥ ಹಳ್ಳಿಗ ಮುಂದೆ ಬಂದು ನೆನ್ನೆಯಿಂದ ಮೂಗು ಕಡಿತೈತೆ, ಒಂಚಿಟಿಕಿ ನಸ್ಯ ಇದ್ರೆ ದಯಪಾಲಿಸಿ ದೇವ್ರೂ....'

ಹೀಗೆ ನಾಡಿಗೇರರ ಹಾಸ್ಯದ ವಸ್ತುಗಳಿಗೆ ಪರಿಧಿಗಳೇ ಇರುತ್ತಿರಲಿಲ್ಲ.

ಈ ಹಿಂದೆಯೂ ನಾನು ತಿಳಿಸಿದಂತೆ ಅವರು ಮನೆ ತುಂಬಾ ಮಕ್ಕಳು ಎಂದೇ ಹಾಸ್ಯ ಲೇಖನಗಳಲ್ಲಿ ಬರೆಯುತ್ತಿದ್ದರು. ೧೨ ಗಂಡು ಕೊನೆಗೊಂದು ಹೆಣ್ಣು, ೧೩ರ ಸಂಖ್ಯೆ ಕೆಟ್ಟದ್ದೆಂದು ನೀವು ಮುಖ ಸೊಟ್ಟಗೆ ಮಾಡಬಹುದು. ಆದರೆ ದೇವರು ಕೊಟ್ಟಿರುವಾಗ ಅದು ಕೆಟ್ಟದ್ದು ಹೇಗಾದೀತು? ಕೊಡುವುದೆಲ್ಲಾ ಒಳ್ಳೆಯದಕ್ಕೆ ತಾನೆ ಎಂಬುದು ಅವರ ವಾದ.

ಮಕ್ಕಳಿಲ್ಲದ ಮನೆ ಮಸಣಕ್ಕೆ ಸಮನಾದುದೆಂಬುದನ್ನು ಒಪ್ಪುತ್ತೇನೆ. ಆದರೆ ಮಕ್ಕಳು ಕೊಡುವ ಉಪದ್ರವವನ್ನು ನೆನೆಸಿಕೊಂಡರೆ ಆ ಶಾಂತಿಯುತವಾದ ಮಸಣವೇ ಲೇಸೆನಿಸದಿರದು.

'ನನ್ನ ಹುಡುಗರ ಹೆಸರು ಹೇಳುತ್ತಾ ಹೋದರೆ ನಿಮಗೆ ಸಂದಿಗ್ಧವಾಗಬಹುದು. ಅವರಿಗೆ ಸಂಖ್ಯೆ ಹಚ್ಚಿದ್ದೇನೆ. ಪೊಲೀಸಿನವರಿಗೆ, ಕೈದಿಗಳಿಗೆ ಕೊಡುವಂತೆ. ೧೧ ಮತ್ತು ೯ನೆಯದು ಎಂದೂ ಇಲ್ಲದೆ ಸೈಕಲ್ ಸವಾರಿ ಮಾಡಲು

ಹೋಗಿ ಗಾಯ ಮಾಡಿಕೊಂಡರು. ಕೂಡಲೇ ಅವರಿಬ್ಬರನ್ನು ಆಸ್ಪತ್ರೆಗೆ ಕರೆದೊಯ್ಯಬೇಕಾಯಿತು. ಮನೆಗೆ ಬರುವ ಹೊತ್ತಿಗೆ ದೊಡ್ಡವನ ಗಲಾಟೆ ತಡೆಯದಾಯಿತು. ಅವನಿಗೆ ಚಂದ್ರನನ್ನು ತಂದುಕೊಡುತ್ತೇನೆ, ನಕ್ಷತ್ರವನ್ನು ತಂದುಕೊಡುತ್ತೇನೆ ಎಂದು ಹೇಗೋ ಸಮಾಧಾನಪಡಿಸಲು ಪ್ರಯತ್ನಿಸಿದರೆ ಕೇಳಿದರೆ ತಾನೆ! ದೊಡ್ಡವನ ಹೊಟ್ಟೆಯುರಿ ಏನೆಂದರೆ ಚಿಕ್ಕವನಿಗೆ ದೊಡ್ಡ ಬ್ಯಾಂಡೇಜ್ ಹಾಕಿದ್ದರೆ ದೊಡ್ಡವನಾದ ನನಗೆ ಚಿಕ್ಕ ಬ್ಯಾಂಡೇಜ್ ಯಾಕೆ ಹಾಕಿದೆ? ಎಂಬುದು ಅವನ ವಯೋಧಿಕಾರದ ಪ್ರಶ್ನೆ. ಅವನಿಗೆ ಗಾಯ ದೊಡ್ಡದಾಗಿದೆ ಎಂದು ಹೇಗೆ ವಿವರಿಸಿದರೂ ಅವನಿಗೆ ಅರ್ಥವಾಗಲೊಲ್ಲದು. ಆ ವಯಸ್ಸಿನವರಿಗೆ ಅರ್ಥಮಾಡಿ ಕೊಡಿಸುವುದಾದರೂ ಹೇಗೇ?'

ಇದು ನಾಡಿಗೇರರು ಮಕ್ಕಳನ್ನು ಹಾಸ್ಯ ಪ್ರಸಂಗಕ್ಕೆ ಎಳೆದು ತರುತ್ತಿದ್ದ ರೀತಿ.

'ಅವತ್ತು ಮನೆಯಲ್ಲಿ ಅಕ್ಕಿ ಇರಲಿಲ್ಲ.ಯಾವತ್ತೂ ಇರೊಲ್ಲ ಅನ್ನಿ. ಅನಾಯಾಸವಾಗಿ ಬಂದದ್ದು ಶ್ರಾವಣ ಶನಿವಾರ. ನನ್ನ ಹೆಂಡತಿ ಒಂದು ಉಪಾಯ ಹುಡುಕಿದಳು. ಇಂಥಾದ್ದರಲ್ಲಿ ಅವಳದ್ದು ಅಸಾಧ್ಯ ಬುದ್ಧಿವಂತಿಕೆ. ನಮ್ಮಿಬ್ಬರು ಹುಡುಗರಿಗೆ ಮೂರು ನಾಮಹಾಕಿ ಕೈಯಲ್ಲಿ ಒಂದೊಂದು ಕೊಳಗ ಕೊಟ್ಟು, 'ವೆಂಕಟೇಶಾಯ ಮಂಗಳಂ'ಗೆ ಕಳುಹಿಸಿದಳು. ಹುಡುಗರು ಒಂದಿಪ್ಪತ್ತು ಮನೆಗಳಿಗೆ ಹೋಗಿದ್ದಿರಬಹುದು. ಅವರು ಮನಗೆ ಬರಬೇಕು ಎನ್ನುವಷ್ಟರಲ್ಲಿ ಭಿಕ್ಷುಕರ ಪರಿಹಾರ ಸಮಿತಿಯವರು ಅವರಿಬ್ಬರನ್ನು ಹಸಿರು ಮೋಟಾರಿನಲ್ಲಿ ಕೂಡಿಸಿಕೊಂಡು ಹೊರಟುಹೋದರು.

ಮಧ್ಯಾಹ್ನ ಹನ್ನೆರಡರ ಹೊತ್ತಿಗೆ ಮನೆಗೆ ಬಂದೆ. ನನ್ನ ಹೆಂಡತಿ ಗೊಳೋ ಅಂತ ಅಳುತ್ತಾ ಕುಳಿತಿದ್ದಳು. ವಿಷಯ ತಿಳಿಸಿದಳು. ಬಿಡೇ ಯಾಕೆ ಯೋಚನೆ ಮಾಡ್ತೀಯಾ? ಅವು ಚೂಟಿ ಹುಡುಗರು, ಎಂಥ ಬೇಲಿ ಹಾಕಿರಲಿ ಕಾಂಪೌಂಡು ಕಟ್ಟಿರಲಿ ತಪ್ಪಿಸಿಕೊಂಡು ಬಂದೇ ಬರ್ತಾರೆ ಅಂತ ಸಮಾಧಾನ ಹೇಳಿದೆ'.

'ಅದು ನನಗೆ ಗೊತ್ತಿದೆ, ಅವು ನಿಮ್ಮ ಮಕ್ಕಳಲ್ವೇ.....ಅದಕ್ಕಲ್ಲ ಅತ್ತಿದ್ದು, ಕಲ್ಲಿನಂಥ ಹಿತ್ತಾಳೆ ಕೊಳಗ ತೊಗೊಂಡು ಹೋಗಿದ್ರು. ಅವು ವಾಪಸ್ಸು ಬರತ್ತೋ ಇಲ್ವೋ ಅಂತ.....'ಬಿಕ್ಕಿ ಬಿಕ್ಕಿ ಅಳುತ್ತಾ ಹೇಳಿದಳು.

ಆಕೆ ಹೇಳಿದಂತೆಯೇ ಆಯಿತು. ಹುಡುಗರೇನೋ ವಾಪಸ್ಸು ಬಂದರು, ಆದರೆ ಕೊಳಗಗಳು ಬರಲಿಲ್ಲ'.

ಅವಸರ ಪ್ರಕೃತಿಯವರನ್ನು ಕಂಡರೆ ನಾಡಿಗೇರರಿಗೆ ಸೋಜಿಗ. ಏಕೆ ಹೀಗೆ ಅನಾಹುತ ಮಾಡಿಕೊಳ್ಳುತಾರೋ ಎಂದು ಒಂದೆಡೆ ಮರುಗಿದರೂ ವರ್ಣನೆ ಕೇಳಿ–

'ನಮ್ಮ ತಾತ ಬಹಳ ಅವಸರದ ಪ್ರಕೃತಿಯ ಮನುಷ್ಯ. ಯಾವುದಕ್ಕೂ ಆತುರ. ಪ್ರೈಮರಿ ಸ್ಕೂಲು ಹೆಡ್ಮಾಸ್ಟ್ರು ಬೇರೆ! ಎಂದೋ ಆಗಬೇಕಾದ ಕೆಲಸವನ್ನು ಇಂದೇ ಮುಗಿಸಬೇಕೆಂಬ ಹುಮ್ಮಸ್ಸಿನಿಂದ ತನ್ನ ಕೈಕೆಳಗಿದ್ದ ಉಪಾಧ್ಯಾಯರುಗಳಿಗೆ ವಿಪರೀತ ಕಿರುಕುಳ ಕೊಡುತ್ತಿದ್ದ. ಒಮ್ಮೆ ಇನ್‌ಸ್ಪೆಕ್ಟರು ಬರುವುದಾಗಿ ತಿಳಿಸಿದರು. ತಾತನ ತಯಾರಿ ರಾತ್ರಿಯಿಂದಲೇ ಪ್ರಾರಂಭವಾಯಿತು. ಬೆಳಗ್ಗೆ ಎದಿರುಗೊಳ್ಳಲು ರುಮಾಲು, ಕೋಟು, ಚಪ್ಪಲಿ ಎಲ್ಲವನ್ನೂ ತಲೆದಿಂಬಿನ ಕೆಳಗಿಟ್ಟು ಮಲಗಿದರು. ಇನ್‌ಸ್ಪೆಕ್ಟರು ಬರುತ್ತಾರೆಂಬ ಕಾತುರದಲ್ಲಿ ನಿದ್ದೆಬಾರದೆ ಬೆಳಗಿನ ಜಾವಕ್ಕೆ ಎದ್ದು ಬೆಳಗಿನ ಕಾರ್ಯ ಮುಗಿಸಿ ಬಸ್‌ಸ್ಟ್ಯಾಂಡಿಗೆ ಓಡಿದರು. ಇನ್ನೂ ಯಾವ ಸುಳಿವೂ ಇಲ್ಲದಿದ್ದುದರಿಂದ ಹಾಗೇ ಕಲ್ಲುಬೆಂಚಿಗೊರಗಿದರು. ನಿದ್ರೆ ಬಂದೇಬಿಡಬೇಕೆ!

ಚುಮುಚುಮು ಬಿಸಿಲಿಗೆ ಎಚ್ಚರವಾಗಿ ನೋಡಿದರೆ ಉಪಾಧ್ಯಾಯರುಗಳೆಲ್ಲಾ ಬಂದು ನಿಂತಿದ್ದಾರೆ, ಇನ್‌ಸ್ಪೆಕ್ಟರೊಡನೆ ಮಾತನಾಡುತ್ತಿದ್ದಾರೆ, ಇವರೂ ಆತುರವಾಗಿ ಹೋಗಿ, ಇನ್‌ಸ್ಪೆಕ್ಟರಿಗೆ ನಮಸ್ಕಾರ ಹೊಡೆದು, ತಡವಾದುದಕ್ಕೆ ಕ್ಷಮೆ ಕೇಳಿದರು. ಉಳಿದ ಉಪಾಧ್ಯಾಯರು ತಾತನ ಕಡೆ ನೋಡುತ್ತಿದ್ದರು. ಇದನ್ನು ನೋಡಿದ ತಾತ, 'ನೋಡಿ ಸಾರ್, ನಾನು ಹೆಡ್ಮಾಸ್ಟ್ರಾದರೂ ಇವರು ಗೌರವವನ್ನೇ ಕೊಡುವುದಿಲ್ಲ. ಹೇಗೆ ನೋಡ್ತಾರೆ ನನ್ನ' ಎಂದು ಇನ್‌ಸ್ಪೆಕ್ಟರಿಗೆ ದೂರಿದರು.

ಇನ್‌ಸ್ಪೆಕ್ಟರು ನಕ್ಕರು. 'ಹೌದಾ! ನಾನು ವಿಚಾರಿಸಿಕೊಳ್ಳುತ್ತೇನೆ. ನೀವೇನು ಯೋಚ್ನೆ ಮಾಡಬೇಡಿ. ಆದ್ರೆ ಸ್ವಲ್ಪ ಕನ್ನಡಿ ಬೇಕಾಗಿತ್ತು' ಎಂದರು.

ಇನ್‌ಸ್ಪೆಕ್ಟರು ಕನ್ನಡಿ ಕೇಳ್ತಾಯಿದ್ದಾರೆ, ಬಹುಶ: ತಲೆ ಬಾಚಿಕೊಳ್ಳಲಿರಬೇಕೆಂದುಕೊಂಡು 'ಏಯ್, ಯಾರೋ ಅದು, ಆ ಮನೇಲಿ ಸ್ವಲ್ಪ ಕನ್ನಡಿ ಇಸ್ಕೊಂಡ್ ಬನ್ರೋ.....ನಾನ್ಹೇಳ್ದೆ ಅಂತಾ ಹೇಳಿ' ಎಂದರು.

ಕನ್ನಡಿ ಬಂತು. ತಗೊಳ್ಳಿಸಾರ್ ಎಂದು ಇನ್‌ಸ್ಪೆಕ್ಟರಿಗೆ ತಾತ ಕೊಟ್ಟರು. ಇನ್‌ಸ್ಪೆಕ್ಟರು ತಾತನ ಮುಂದೆ ನಿಧಾನವಾಗಿ ಕನ್ನಡಿ ಹಿಡಿದರು. ತಾತನಿಗೆ ಆಗಲೇ ಅರ್ಥವಾದದ್ದು.ಅವಸರದಲ್ಲಿ ತಲೆಗೆ ರುಮಾಲು ಸುತ್ತುವುದರ ಬದಲು ಸುತ್ತಿದ್ದು ಅವರ ಹೆಂಡತಿಯ ಸೀರೆಯನ್ನೇ!'

ಇದು ನಾಡಿಗೇರರ ಹಾಸ್ಯ ಲೇಖನಗಳಲ್ಲಿ ಹಾಸ್ಯವನ್ನು ಮಿಂಚಿಸುತ್ತಿದ್ದ ಬಗೆ. ಮತ್ತೊಂದು ಪ್ರಸಂಗವೆಂದರೆ,

'ಒಬ್ಬರು ಶಿವಮೊಗ್ಗೆಗೆ ಹೋಗಬೇಕಾಗಿತ್ತು. ಥ್ರೂ ಕ್ಯಾರಿಯೇಜ್ (ತಾಳಗುಪ್ಪ)ನಲ್ಲಿ ತುಂಬಾ ಗಲಾಟೆಯಿದ್ದುದರಿಂದ ಬೀರೂರಿನಲ್ಲಿ ಬದಲಾಯಿಸಿದರಾಯಿತೆಂದು ಪೂನಾಕ್ಕೆ ಹೋಗುವ ಕ್ಯಾರಿಯರ್‌ನಲ್ಲಿ ಕುಳಿತರು. ಬೆಳಗಿನ

ಜಾವ ನಿದ್ದೆ ಬಂದೀತೆಂದು ಗಾರ್ಡ್‌ಗೆ ಹೇಳಿದರು. 'ನಾನು ಶಿವಮೊಗ್ಗೆಗೆ ಹೋಗಬೇಕು, ದಯವಿಟ್ಟು ಬೀರೂರಿನಲ್ಲಿ ಎಬ್ಬಿಸಿಬಿಡಿ' ಅಂತ. ಗಾರ್ಡ್ ಆಗಲೆಂದು ಒಪ್ಪಿದ.

ರೈಲು ಹರಿಹರಕ್ಕೆ ಬಂದಾಗ ಏಳುಗಂಟೆ. ಶಿವಮೊಗ್ಗೆಯಲ್ಲಿರಬೇಕಾದ ಪ್ರಯಾಣಿಕ ಹರಿಹರದಲ್ಲಿದ್ದ. ಗಾರ್ಡ್‌ನನ್ನು ಸಿಕಾಬಟ್ಟೆ ಬಯ್ಯತೊಡಗಿದ. 'ನೋಡಿ, ನೀವು ಎಬ್ಬಿಸ್ತೀನಿ ಅಂತಾ ಹೇಳಿದ್ದಕ್ಕೆ ತಾನೆ ನಾನು ಮಲಗಿದ್ದು, ಈಗ ನಾನು ಶಿವಮೊಗ್ಗೆ ಕಾಣೋದು ಯಾವಾಗ? ಯಾರು ಚಾರ್ಜ್ ಕೊಡ್ತಾರೆ, ದುಡ್ಡು ದಂಡ ಆಯ್ತಲ್ಲ' ಎಂದು ಒಂದೇ ಸಮ ಗುಡುಗಾಡತೊಡಗಿದ.

ಗಾರ್ಡ್ ಬೈಗುಳವನ್ನೆಲ್ಲಾ ಸಮಾಧಾನದಿಂದ ಸ್ವೀಕರಿಸಿ 'ನೋಡಿ ಈಗ್ಲೂ ಬಸ್ಸಿದೆ. ಕುಳಿತರೆ ಹನ್ನೊಂದಕ್ಕೆಲ್ಲಾ ಶಿವಮೊಗ್ಗೆಯಲ್ಲಿರುತ್ತೀರಾ, ಹೊರಡಿ' ಎಂದೆನ್ನುತ್ತಾ 'ಆದ್ರೆ .....'ಎಂದಾಗ,

'ಮತ್ತೇನ್ರೀ ನಿಮ್ದು ಪುರಾಣ' ಎಂದ ಪ್ರಯಾಣಿಕ.

'ಹಾಗಾದ್ರೆ....ನಾನು ಎಬ್ಬಿಸಿ ಶಿವಮೊಗ್ಗೆ ಗಾಡಿಗೆ ಕೂರಿಸಿದ್ದು ಯಾರನ್ನ.....ಪಾಪ ಅವರ ಗತಿ ಏನಾಗಿದೆಯೋ?' ಎಂದಾಗ ಸುತ್ತಲಿನವರಿಗೆಲ್ಲಾ ನಗೆ ತಡೆಯಲಾಗಲಿಲ್ಲವಂತೆ.

ಒಮ್ಮೆ ಯಾವುದೋ ಒಂದು ಸಂಸ್ಥೆಯವರು ಇವರನ್ನು ಓಪನಿಂಗ್ ಸೆರೆಮನಿಗೆ ಬನ್ನಿ ಎಂದು ಕರೆದರಂತೆ. 'ಸರಿ' ಎಂದು ಹೋಗಿ ಉದ್ಘಾಟನೆಯೂ ಮಾಡಿ ಬಂದರು. ಪುನಃ ಅದೇ ಊರಿಗೆ ಹದಿನೈದು ದಿನ ಬಿಟ್ಟು ಹೋಗಬೇಕಾದ ಪ್ರಸಂಗ ಬಂತು. ಹೋಗಿ ತಮ್ಮ ಕೆಲಸ ಮುಗಿಸಿ, ಹಳೇ ಸ್ನೇಹಿತರನ್ನು ಕಂಡು ನಗಿಸಿ, ಹೌದು ಈಗ್ಗೆ ಹದಿನೈದು ದಿವಸದ ಹಿಂದೆ ಒಂದು ಸಂಸ್ಥೆಯ ಓಪನಿಂಗ್ ಸೆರೆಮನಿಗೆ ಬಂದಿದ್ದೆ, ಈಗ ಸಂಸ್ಥೆ ಹೇಗಿದೆ ? ಎಂದರು.

ಅದಕ್ಕೆ ಅವರ ಸ್ನೇಹಿತರು 'ಓ! ಅದಾ.... ! ಮುಚ್ಕೊಂಡು ಹೋಯ್ತು' ಎಂದರು.

ಅದಕ್ಕೆ ನಾಡಿಗೇರರು ಬಿಡಿ, ಅವರು ಪ್ರಾರಂಭದಲ್ಲಿ 'ಓಪನಿಂಗ್ ಸೆರೆಮನಿ'ಎಂದು ಕರೆದದ್ದು. 'ಓಪನ್ ಮಾಡಿದ ದಿನವೇ, ಸೆರೆಮನಿಯನ್ನೂ ಮಾಡಿಬಿಟ್ಟರಾ?' ಎಂದು ನಗೆ ಚಟಾಕಿ ಹಾರಿಸಿದರಂತೆ.

ಹೀಗೆ ನಾಡಿಗೇರರು ತತ್‌ಕ್ಷಣದ ಪ್ರತಿಕ್ರಿಯೆ ನೀಡುತ್ತಿದ್ದರು. ಅವರೆಂದೂ ಹಾಸ್ಯ ಲೇಖನಗಳಿಗಾಗಿಯಾಗಲೀ, ಭಾಷಣಕ್ಕಾಗಿಯಾಗಲಿ ಸಿದ್ಧತೆ ಮಾಡಿಕೊಂಡಿರದಿದ್ದರೂ ಆ ಕ್ಷಣಕ್ಕೆ, ಸಮಯ, ಸಂದರ್ಭಗಳನ್ನುಪಯೋಗಿಸಿಕೊಂಡು ಅವರು ರಚಿಸುತ್ತಿದ್ದ ಹಾಸ್ಯ ಸರ್ವರಂಜನೀಯವಾಗಿರುತ್ತಿತ್ತು.

ಜೀವನಾನುಭವದಿಂದ ಪರಿಪಕ್ವಗೊಂಡ ಮನಸ್ಸು, ಮಿದುಳು ನಾಡಿಗೇರರದು. ಅವರು ಆಡುತ್ತಿದ್ದ ಭಾಷೆಯಷ್ಟೇ ಲೇಖನಿಯೂ ಹರಿತ. ಆದರೂ ತಮ್ಮ ಭಾಷಣದಿಂದ, ಬರಹದಿಂದ ಇತರರನ್ನು ನೋಯಿಸುವ ಮನಸ್ಸಲ್ಲ. ತಮ್ಮನ್ನು ತಾವು ಗೇಲಿಮಾಡಿಕೊಳ್ಳಲಿ, ಇತರರನ್ನು ಗೇಲಿಮಾಡಲಿ, ಇದರಿಂದ ಕೇಳುಗರು ನಕ್ಕು ನಲಿಯುತ್ತಿದ್ದರೆ ಹೊರತು ಮನಸ್ಸು ಎಂದೂ ಮುದುಡುವುದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಇದು ನಾಡಿಗೇರರ ಸಿದ್ಧಾಂತ-ನಗೆ ಸಿದ್ಧಾಂತದ ನಾಡಿಗೇರರು ತೀರಿಕೊಂಡಿದ್ದು ೦೩.೦೩.೧೯೭೨ರಲ್ಲಿ.



# ಬಹುಮುಖ ಪ್ರತಿಭೆಯ ಬಿ.ಜಿ.ಎಲ್ ಸ್ವಾಮಿ

## ಮುಳುಕುಂಟೆ ರಮೇಶ್

ಬಿ.ಜಿ.ಎಲ್. ಸ್ವಾಮಿಯುವರ ಪೂರ್ಣ ಹೆಸರು ಬೆಂಗಳೂರು ಗುಂಡಪ್ಪ ಲಕ್ಷ್ಮೀನಾರಾಯಣ ಸ್ವಾಮಿ. ಅವರು, ಬಿ.ಜಿ.ಎಲ್. ಸ್ವಾಮಿ ಎಂಬ ಸಂಕ್ಷಿಪ್ತ ನಾಮದಿಂದಲೇ ಸಾರಸ್ವತ ಲೋಕದಲ್ಲಿ ಹೆಸರಾದವರು. ಅವರು ಅಂತರರಾಷ್ಟ್ರೀಯ ಖ್ಯಾತಿಯ ಸಸ್ಯವಿಜ್ಞಾನಿಯಾಗಿದ್ದಂತೆಯೇ ಇತರ ಹತ್ತು ಹಲವು ವಿಷಯಗಳಲ್ಲಿ ಪರಿಣಿತಿ ಪಡೆದಿದ್ದರು. ಸಾಹಿತ್ಯ, ಸಂಗೀತ, ಲಲಿತಕಲೆ ಚಿತ್ರಕಲೆಗಳಲ್ಲಿ ಸಿದ್ಧಿಪಡೆದಿದ್ದರು. ಬಹು ಭಾಷಾ ವಿಶಾರದರಾಗಿದ್ದರು. ಕನ್ನಡದಲ್ಲಿ ಮೊದಲ ಬಾರಿಗೆ ತಂದೆ-ಮಕ್ಕಳಿಬ್ಬರೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಹಿರಿಮೆಗೆ ಪಾತ್ರರಾಗಿದ್ದರು.(ಶ್ರೀಯುತರು ಸುಪ್ರಸಿದ್ಧ ಸಾಹಿತಿ ಡಿ.ವಿ. ಗುಂಡಪ್ಪನವರ ಪುತ್ರರು. ಸಂ.)

ಬಿ.ಜಿ.ಎಲ್. ಸ್ವಾಮಿಯುವರು ಸಾಹಿತಿಯಾಗಿ ಕನ್ನಡ ನಾಡಿನ ಜನತೆಗೆ ಸುಪರಿಚಿತರು. ಇವರು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೃತಿರಚನೆ ಮಾಡಿದ್ದಾರೆ. ವಿಡಂಬನೆ, ಪ್ರವಾಸ ಕಥನ, ವಿಜ್ಞಾನ ಕೃತಿಗಳು, ವ್ಯಕ್ತಿಚಿತ್ರಗಳನ್ನು ರಚಿಸಿ, ಅವುಗಳಲ್ಲಿ ಜೀವಚೈತನ್ಯ ತುಂಬಿ ಅವು ಓದುಗರ ಮನದಲ್ಲಿ ನಿತ್ಯ ಹಸುರಾಗಿರುವಂತೆ ಮಾಡಿದ್ದಾರೆ. ತಮ್ಮ ವಿಸ್ತೃತ ಓದಿನಿಂದ ಅವುಗಳಲ್ಲಿ ವಿಡಂಬನೆ, ತಿಳಿಹಾಸ್ಯ, ವ್ಯಂಗ್ಯಗಳನ್ನು ಬೆರೆಸಿ ಓದುಗರಿಗೆ ಆಪ್ಯಾಯಮಾನವಾದ ಅನುಭವ ಒದಗಿಸಿದ್ದಾರೆ. ಅವರ ಕೃತಿಗಳ ಅಧ್ಯಯನವೆಂದರೆ ಹಾಸ್ಯದ ಸಿಹಿ ಲೇಪ ಹೊಂದಿದ ಜ್ಞಾನಫಲವನ್ನು ಸವಿದಂತೆಯೇ ಎಂಬುದು ವಿದ್ವಾಂಸರ ಅಭಿಮತ.

'ಅಮೆರಿಕದಲ್ಲಿ ನಾನು' ಸ್ವಾಮಿಯವರ ಪ್ರವಾಸ ಕಥನ. ಉನ್ನತ ಅಧ್ಯಯನಕ್ಕಾಗಿ ೧೯೪೫ರಲ್ಲಿ ಅವರು ಬಾಸ್ಟನ್ನಿನ ಹಾರ್ವರ್ಡ್ ವಿಶ್ವವಿದ್ಯಾಲಯ ಸೇರಿದರು. ಆ ಸಂದರ್ಭದಲ್ಲಿ ಅವರು ತಮ್ಮ ಅನುಭವಗಳನ್ನು ಬಹು ಸ್ವಾರಸ್ಯವಾಗಿ ಈ ಕೃತಿಯಲ್ಲಿ ನಿರೂಪಿಸಿದ್ದಾರೆ. ಇದು ಕನ್ನಡದಲ್ಲಿ ಬಂದ ಅಮೆರಿಕ ಪ್ರವಾಸಕಥನಗಳಲ್ಲೇ ಮೊದಲನೆಯದು.

ಹಿಂದೆ ಭಾರತೀಯ ಸಂಸ್ಕೃತಿಯಲ್ಲಿ ಗಂಡಸರ ತಲೆಯುಡಿಗೆ(ಟೋಪಿ, ಪೇಟ) ಬಹುಮುಖ್ಯ ಪಾತ್ರವಹಿಸಿತ್ತು. ಸ್ವಾಮಿಯವರು ಹೇಳುವಂತೆ, ಮೊದಲನೆಯ ವರ್ಷದ ಹುಟ್ಟುಹಬ್ಬಕ್ಕೆ ತಲೆಗೊಂದು ಸೂರು; ಚೌಲಕ್ಕೆ ತಲೆಗೊಂದು ಸೂರು; ಮುಂಜಿಯಲ್ಲಿ ತಲೆಗೊಂದು ಸೂರು; ಮದುವೆಯಾಗುವಾಗ ತಲೆಗೊಂದು ಸೂರು; ಚಿಕ್ಕವರು ದೊಡ್ಡವರನ್ನು ನೋಡಲು ಹೋಗುವಾಗ ತಲೆಗೊಂದು ಸೂರು; ದೊಡ್ಡವರು ಒಬ್ಬರನ್ನೊಬ್ಬರು ಕಾಣಲು ಹೋಗುವಾಗ ತಲೆಗೊಂದು ಸೂರು; ಶುಭ ಕಾರ್ಯಗಳಲ್ಲಿ ಭಾಗವಹಿಸುವಾಗ ತಲೆಗೊಂದು ಸೂರು. ಹೀಗಾಗಿ ಹುಟ್ಟಿದಾರಭ್ಯ ನಮ್ಮ ಪಾಲಿಗೆ ತಲೆಯುಡಿಗೆ ಅಂಟಿಕೊಂಡುಬಿಟ್ಟಿದೆ.

ಅಂಥ ಸಂದರ್ಭದಲ್ಲಿ ಸ್ವಾಮಿಯವರು ವಿದೇಶಕ್ಕೆ ಹೊರಟಾಗ ಗೆಳೆಯರೂ, ಹಿತೈಷಿಗಳೂ 'ಹ್ಯಾಟಿಲ್ಲದೆ ಪರದೇಶ ಪ್ರಯಾಣ ಮಾಡುವುದುಂಟೆ? ನಿನ್ನ ಸೂಟಿಗೊಂದು ಗಾಂಭೀರ್ಯ ಕೊಡುತ್ತದೆ. ಅದಿದ್ದೇ ಇರಬೇಕು' ಎಂದು ಉಪದೇಶ ಮಾಡಿದರು. ಸ್ವಾಮಿಯವರಿಗೆ ಹ್ಯಾಟು ತೊಟ್ಟುಕೊಳ್ಳಲು ಮನಸ್ಸಿಲ್ಲ. ಅದನ್ನು ಇಟ್ಟುಕೊಂಡು ನಿರ್ವಹಿಸುವುದು ಸುಲಭವಲ್ಲ. ರುಮಾಲು ತೊಟ್ಟುಕೊಳ್ಳುವ ತಲೆ ಅವರಿಗೆ ಸಿದ್ಧಿಸಲಿಲ್ಲ. ಹಾಗಾಗಿ ಟೋಪಿ ಇಟ್ಟುಕೊಳ್ಳುವ ನಿರ್ಧಾರಕ್ಕೆ ಬರುತ್ತಾರೆ. ಅದಕ್ಕಾಗಿ ಅವರು ಆಯ್ಕೆ ಮಾಡಿದ ಟೋಪಿ ಕಾಶ್ಮೀರದ ಕಲೆಗಾರಿಕೆಯ ಶೈಲಿಯದು. ಅದು ಶಾಲಿನ ಬಟ್ಟೆಯಿಂದ ಹೊಲಿದ ಕಸೂತಿಯಿಂದ ಕೂಡಿದ ಮಡಿಚುವ ಬಗೆಯದು.

ಅಮೆರಿಕದಲ್ಲಿ ಸ್ವಾಮಿಯವರು ಧರಿಸಿದ ಈ ಬಗೆಯ ಟೋಪಿ ಅಲ್ಲಿನ ಅನೇಕರನ್ನು ಆಕರ್ಷಿಸಿತು. ಈ ಟೋಪಿಯನ್ನು ಹತ್ತಿರದಿಂದ ನೋಡಲು ಹತ್ತಾರು ಜನರು ಒಂದೆರಡು ಸಂದರ್ಭಗಳಲ್ಲಿ ಇವರನ್ನು ಹಿಂಬಾಲಿಸಿದ್ದೂ ಉಂಟು. ಅಂಥ ಸಂದರ್ಭದಲ್ಲಿ ಅಲ್ಲಿದ್ದ ಪೊಲೀಸಿನವನೊಬ್ಬನು ಸ್ವಾಮಿಯವರ ಬಳಿ ಬಂದು 'ಇವರು ನಿಮಗೆ ತೊಂದರೆಕೊಡುತ್ತಾರೆಯೇ?' ಎಂದು ಕಳಕಳಿಯಿಂದ ಕೇಳುತ್ತಾನೆ.

ಇನ್ನೊಮ್ಮೆ ಸ್ವಾಮಿಯವರು ಬರ್ಕ್‌ಲೆ ವಿದ್ಯಾಪೀಠದಲ್ಲಿ ಟೀ ಪಾರ್ಟಿ ಮುಗಿಸಿಕೊಂಡು, ತಾವು ಇಳಿದುಕೊಂಡಿದ್ದ ಹೊಟೇಲಿನ ೨೨ನೆಯ ಮಹಡಿಯಲ್ಲಿರುವ ತಮ್ಮ ಕೊಠಡಿಗೆ ಲಿಫ್ಟ್‌ನಲ್ಲಿ ಹೋಗುತ್ತಿರುತ್ತಾರೆ. ಅವರೊಡನೆ ಅನೇಕ

ಪುರುಷರಿರುತ್ತಾರೆ. ಆಗ ಮಹಿಳೆಯೊಬ್ಬಳು ಲಿಫ್ಟ್‌ನ ಒಳಗೆ ಪ್ರವೇಶಿಸುತ್ತಾಳೆ. ಆಗ ಒಳಗಿದ್ದ ಪುರುಷರೆಲ್ಲಾ ಹ್ಯಾಟ್ ತೆಗೆದು ಗೌರವ ಸೂಚಿಸುತ್ತಾರೆ. ಸ್ವಾಮಿಯವರು ಅವರನ್ನು ಅನುಸರಿಸಿ ತಮ್ಮ ಟೋಪಿಯನ್ನು ತೆಗೆಯುತ್ತಾರೆ. ಅದು ಅಮೇರಿಕನ್ನರ ಶಿಷ್ಟಾಚಾರಗಳಲ್ಲಿ ಒಂದೆಂದು ತಿಳಿಯುತ್ತಾರೆ. ಅವರು ಮಾರನೆಯ ದಿನ ಒಂದು ಪುಸ್ತಕದ ಅಂಗಡಿಗೆ ಲಿಫ್ಟ್‌ನಲ್ಲಿ ಹೋಗುತ್ತಿರುವಾಗ, ಹಿಂದಿನಂತೆಯೇ ಮಹಿಳೆಯೊಬ್ಬಳು ಲಿಫ್ಟ್ ಒಳಗೆ ಪ್ರವೇಶಿಸುತ್ತಾಳೆ. ಸ್ವಾಮಿಯವರು ಸಂಪ್ರದಾಯದಲ್ಲಿ ಪಳಗಿ ಹಣ್ಣಾದ ಅಮೆರಿಕನ್ನರಂತೆ ತಮ್ಮ ತೋಪಿಯನ್ನು ತೆಗೆದು ಕೈಯಲ್ಲಿ ಹಿಡಿದುಕೊಳ್ಳುತ್ತಾರೆ. ಆದರೆ ಇದನ್ನು ಜೊತೆಯಲ್ಲಿದ್ದ ಅಮೇರಿಕನ್ ಪುರುಷರು ಅನುಸರಿಸುವುದಿಲ್ಲ! ಬದಲಾಗಿ ಆಶ್ಚರ್ಯ–ಕುತೂಹಲಗಳಿಂದ ದುರುಗುಟ್ಟಿ ನೋಡುತ್ತಾರೆ. ವ್ಯಾಪಾರ ವಾಣಿಜ್ಯಗಳಿಗೆ ಸಂಬಂಧಿಸಿದ ಕಟ್ಟಡಗಳಲ್ಲಿ ಹೆಂಗಸರೆದುರುಗೆ ಹ್ಯಾಟು ತೆಗೆಯುವುದು ಅನಾವಶ್ಯಕವೆಂದೂ ಖಾಸಗಿ ಗೃಹಗಳಲ್ಲಿಯೂ ಹೊಟೇಲುಗಳಲ್ಲಿಯೂ ತೆಗೆಯುವುದು ಅವಶ್ಯಕವೆಂದು ಆಮೇಲೆ ಸ್ವಾಮಿಯವರಿಗೆ ತಿಳಿಯುತ್ತದೆ. ಸ್ವಾಮಿಯವರ ಕಾಶ್ಮೀರಿ ಕಸೂತಿಯ ಟೋಪಿಯನ್ನು ಕಂಡು ಅಮೆರಿಕನ್ ಮಹಿಳೆಯರು ಮನಸೋತರು. ಅದಕ್ಕೆ ಮ್ಯೂಜಿಯಂನ ಪ್ರಾಚೀನ ವಸ್ತುವಿಗಿಂತ ಹೆಚ್ಚಿನ ಬೆಲೆ ನೀಡಿದರು. ಕೆಲವರಂತೂ ‘ಓ ಡಿಯರ್! ಹೆಂಗಸರ ಹ್ಯಾಟಿಗೆ ನಿನ್ನ ಟೋಪಿಯ ಮಾದರಿಯನ್ನು ಒಂದಿಷ್ಟೂ ಮಾರ್ಪಾಟೂ ಇಲ್ಲದೆ ಅಳವಡಿಸಿಕೊಳ್ಳಬಹುದು ’ ಎಂದು ತಮ್ಮ ಅಭಿಪ್ರಾಯವನ್ನು ಹೇಳಿದರು.

ಇನ್ನೊಮ್ಮೆ ಸ್ವಾಮಿಯವರು ತಾವು ಅಧ್ಯಯನ ಮಾಡುತ್ತಿದ್ದ ಹಾರ್ವರ್ಡ್ ವಿಶ್ವವಿದ್ಯಾಲಯದಿಂದ ಮನೆಗೆ ಹೋಗಲು ಬಸ್‌ಗಾಗಿ ಕಾಯುತ್ತಿದ್ದರು, ಆಗ ತಾಯಿ ಮಗಳಿಬ್ಬರೂ ಸ್ವಾಮಿಯವರಿಗೆ ತಮ್ಮನ್ನು ಪರಿಚಯಿಸಿಕೊಂಡರು. ನಂತರ ತಾಯಿಯು ತನ್ನ ಮಗಳು ಕಾಲೇಜಿನಲ್ಲಿ ನಡೆಯುವ ಒಂದು ಪಾಟಿ ಯಲ್ಲಿ ಭಾಗವಹಿಸಬೇಕಿದೆ ಎಂದು ಹೇಳುತ್ತಾಳೆ. ಅದಕ್ಕಾಗಿ ತಾವು ಅದೇ ತಾನೆ ಕೊಂಡು ತಂದ ಗೌನ್‌ನನ್ನು ತೋರಿಸುತ್ತಾರೆ. ಟೋಪಿಯ ಬಗ್ಗೆ ಕುತೂಹಲದಿಂದ ಪ್ರಶ್ನೆಗಳನ್ನು ಹಾಕಿ ವಿವರ ಪಡೆಯುತ್ತಾರೆ. ಕೊನೆಗೆ ಅಂದು ಸಂಜೆಯಮಟ್ಟಿಗೆ ಟೋಪಿಯನ್ನು ಎರವಲು ಕೊಡಲು ಸಾಧ್ಯವೇ? ಎಂದು ಅತ್ಯಂತ ವಿನಯಪೂರ್ವಕವಾಗಿ ಭಿನ್ನವಿಸಿಕೊಳ್ಳುತ್ತಾರೆ. ಸ್ವಾಮಿಯವರು ಇದು ಹೆಂಗಸರ ತಲೆಯುಡಿಗೆ ಅಲ್ಲವೆಂದು ಎಷ್ಟು ಹೇಳಿದರೂ ಅವರು ಒಪ್ಪುವುದಿಲ್ಲ. ಜನರು ನಿಮ್ಮನ್ನು ನೋಡಿ ನಗುತ್ತಾರೆಂದು ಹೇಳಿದರೆ ‘ನಕ್ಕರೆ ಅದು ಅವರ ಹುಚ್ಚುತನವನ್ನು ತೋರಿಸುತ್ತದೆ, ಅಷ್ಟೆ!’ ಎನ್ನುತ್ತಾರೆ. ಕೊನೆಗೆ ಸ್ವಾಮಿಯವರನ್ನು ಹೇಗೋ ಒಪ್ಪಿಸಿ, ಟೋಪಿಯನ್ನು ಪಡೆದು ಹುಡುಗಿ ಕಾಲೇಜಿನ ಪಾರ್ಟಿಯಲ್ಲಿ ಭಾಗವಹಿಸುತ್ತಾಳೆ. ಎಲ್ಲರ ಪ್ರಶಂಸೆಗೆ ಪಾತ್ರಳಾಗುತ್ತಾಳೆ. ಆ ವಿಚಾರ ನ್ಯೂಸ್

ಪೇಪರ್‌ನಲ್ಲೂ ಸುದ್ದಿಯಾಗಿ ಟೋಪಿಯ ಕಲೆಗಾರಿಕೆಯನ್ನು ಹೊಗಳಿರುತ್ತವೆ: ಲಿಬರಲ್ ಆರ್ಟ್ಸ್ ಯೂನಿಯನ್ನಿನ ಆಶ್ರಯದಲ್ಲಿ ನಡೆದ ಪಾರ್ಟಿಯಲ್ಲಿ ಡೋರಿ ತೊಟ್ಟುಕೊಂಡಿದ್ದ ಟೋಪಿ ಆಹ್ವಾನಿತರನ್ನೆಲ್ಲಾ ಬೆರಗುಗೊಳಿಸಿತು. ಅದರ ನವೀನತೆಯೂ, ಸೊಬಗೂ, ಚಾತುರ್ಯವೂ ಎಲ್ಲರನ್ನೂ ಮೆಚ್ಚಿಸಿತು. ನಮ್ಮಲ್ಲಿರುವ ಉಡುಪು ತಯಾರಿಕೆಯ ಕಲೆಗಾರರು ಈ ಟೋಪಿಯನ್ನು ಪರೀಕ್ಷಿಸುವುದು ಭವಿಷ್ಯದ ಫ್ಯಾಷನ್ ದೃಷ್ಟಿಯಿಂದ ಅವಶ್ಯಕವಾಗಿದೆ'.

ಸ್ವಾಮಿಯವರು ಬಾಸ್ಟನ್ನಿನಲ್ಲಿದ್ದಾಗ ೧೯೪೭ರಲ್ಲಿ ಅವರ ಗೆಳೆಯರೊಬ್ಬರು ಅಮೆರಿಕಾದಲ್ಲಿ ಪ್ರವಾಸಕ್ಕಾಗಿ ಬಂದರು. ಅವರನ್ನು ಅಲ್ಲೆಲ್ಲಾ ತಿರುಗಾಡಿಸುವ ಕೆಲಸ ಸ್ವಾಮಿಯವರ ಪಾಲಿಗೆ ಬಂತು. ಗೆಳೆಯನ ಹೆಂಡತಿ ಸಂಪ್ರದಾಯಸ್ಥೆ. ಆಕೆ ಸೀರೆ ಉಟ್ಟು ಬಂದಿದ್ದಳು. ಅವಳು ಹೋದಲ್ಲೆಲ್ಲ ಸೀರೆಯ ಜಾಹೀರಾತು ಆಯಿತು. ಆಕೆಯನ್ನು ನೋಡಿ ಅಮೆರಿಕನ್ ಮಹಿಳೆಯರು ಬೆಕ್ಕಸ ಬೆರಗಾದರು. ಸೀರೆಯ ನಕಾಶೆ, ಅಂಚು, ಒಡಲಿನ ಬಣ್ಣಕ್ಕೆ ಬೆರಗಾದರು. ಸೀರೆಯ ಚಿಮ್ಮುವಿಕೆಗೆ ಕಣ್ಣು, ಬಾಯಿ ಬಿಟ್ಟರು. ಸೀರೆಯಲ್ಲಿ ಕೊನೆಯ ಪಕ್ಷ ಹತ್ತು ಹನ್ನೆರಡು ತುಂಡುಗಳಿರುವುವೆಂದು ನಿರ್ಣಯಿಸಿಕೊಂಡರು. ಸೀರೆಯ ಉದ್ದವನ್ನು ಅರಿತ ಮೇಲಂತೂ ಮತ್ತಷ್ಟು ಗಾಬರಿಗೊಂಡರು. ನಡುಪಟ್ಟಿ ಬೆಲ್ಟು ಯಾವುದರ ಸಹಾಯವಿಲ್ಲದೆಯೇ ಅದು ಮೈಮೇಲೆ ನಿಂತಿರುವ ಠೀವಿಯನ್ನು ಅರಿತು ಆಶ್ಚರ್ಯಪಟ್ಟರು. ಗಂಡಸರು ಉಡುವ ಪಂಚೆಯನ್ನೂ ಒಂದು ಬಗೆಯ ಸೀರೆಯೆಂದೇ ನಂಬಿಕೊಂಡರು. ಗಂಡಸರ ಜುಬ್ಬ ಪೈಜಾಮಗಳನ್ನೂ ಸೀರೆಯಿಂದ ಕತ್ತರಿಸಿ ಹೊಲಿದ ಉಡುಪುಗಳೆಂದೇ ಭಾವಿಸಿಕೊಡವರು ಒಬ್ಬರಲ್ಲ, ಇಬ್ಬರಲ್ಲ, ನೂರಾರು ಮಂದಿ.

ಅಮೆರಿಕನ್ ಮಹಿಳೆಯರಿಗೆ ಸಾಧಾರಣವಾಗಿ ತಮ್ಮ ನೈಜ ಸೌಂದರ್ಯವನ್ನು ಪ್ರದರ್ಶಿಸುವ ಹಂಬಲ. ಅಂಥವರೂ ಸೀರೆಗೆ ಸಂಪೂರ್ಣವಾಗಿ ಮನಸೋತರು. ಪಾರ್ಟಿಗಳಲ್ಲಿ ಉಟ್ಟುಕೊಳ್ಳಬೇಕೆಂಬ ಆಸೆಗೂ ಬಲಿಯಾದರು. ಆದರೆ ಅವರಿಗಿದ್ದುದು ಒಂದೇ ಕೊರತೆ–ಉಡುಪು ಮೈಯನ್ನು ಪೂರ್ತಿ ಮುಚ್ಚಿಬಿಟ್ಟು, ದೇಹದ ಸ್ವಾಭಾವಿಕವಾದ ಸೌಂದರ್ಯವನ್ನು ಮರೆಯಾಗಿಸುವುದೆಂಬುದು, ಹೇಗಾದರೂ ಮಾಡಿ ಸೀರೆಯನ್ನಂತೂ ಉಟ್ಟುಕೊಳ್ಳಬೇಕು; ಆದರೆ ಅದು ಮೊಣಕಾಲಿಂದ ಮೇಲಕ್ಕಿರಬೇಕು ಎಂಬ ಹಠ.

ಅಂಥ ಸೀರೆಯ ಆಸೆಗೆ ಸಿಲುಕಿದವರಲ್ಲಿ ಸ್ವಾಮಿಯವರ ಲ್ಯಾಬೋರೇಟರಿಯಲ್ಲಿ ಓದುತ್ತಿದ್ದ 'ಪೆಗ್ಗಿ' ಎಂಬ ಯುವತಿ ಒಬ್ಬಳು. ಆಕೆಯ ಗಂಡನೂ ಅಲ್ಲೇ ಓದುತ್ತಿದ್ದ. ಆಕೆ ಸ್ವಾಮಿಯವರ ಗೆಳೆಯನ ಹೆಂಡತಿಯಿಂದ ಸೀರೆಯನ್ನು ಎರವಲಾಗಿ ಪಡೆದು ತನ್ನ ಮನೆಯ ಕಾಕ್‌ಟೈಲ್ ಪಾರ್ಟಿಯಲ್ಲಿ ಅದನ್ನು ಉಟ್ಟು ಎಲ್ಲರ ಪ್ರಶಂಸೆಗೆ

ಒಳಗಾಗುತ್ತಾಳೆ. ಆ ಪ್ರಸಂಗ ಹೀಗಿದೆ: 'ಅವಳ ಅವತಾರವನ್ನು ನೋಡಿ ನಮಗೆ (ನಾನು, ಭಾರತದಿಂದ ಬಂದಿದ್ದ ಗೆಳೆಯ ದಂಪತಿಗಳು) ಹಿಡಿಸಲಾರದಷ್ಟು ನಗು. ಅಂಚುಗಳೆರಡೂ ಸೇರುವಂತೆ ಸೀರೆಯನ್ನು ಮಡಿಸಿ ಅದರ ಎತ್ತರವನ್ನು ಅರ್ಧಮಾಡಿಕೊಂಡಿದ್ದಾಳೆ. ನಮ್ಮ ಹೆಂಗಸರು ಉಡುವಂತೆಯೇ ನಿರಿಗೆ ಹಿಡಿದು ಉಟ್ಟು, ಸೆರಗನ್ನು ಹೆಜ್ಜೆಯವರೆಗೂ ಇಳಿ ಬಿಟ್ಟಿದ್ದಾಳೆ. ನಾವು ಹೋಗುವಷ್ಟರ ಹೊತ್ತಿಗೆ ಸರಿಯಾಗಿ ಮನೆಯ ಮೆಟ್ಟಿಲುಗಳ ಮೇಲೆ ನಮ್ಮನ್ನು ನಿರೀಕ್ಷಿಸುತ್ತಾ ನಿಂತಿದ್ದಳು. ಮನೆಯೊಳಗೆ ಹೋದಾಗ ಆಗಲೆ ಹತ್ತಾರು ಜನ ಸೇರಿದ್ದರು. ಪೆಗ್ಗಿಯ ಗಂಡನಿಗಂತೂ ಆ ದಿನ ವಿಪರೀತ ಅಸಮಾಧಾನ-ತನ್ನ ಹೆಂಡತಿಯ ವೇಷಕಂಡು; ನಾವು ಮೂವರು ಭಾರತೀಯರಿಗೆ ಅಪಹಾಸ್ಯ; ಆಗಮಿಸಿದ್ದ ಅಮೆರಿಕನ್ನರಿಗೆ ಮೆಚ್ಚಿಗೆಯೋ ಮೆಚ್ಚಿಗೆ.

ಕೊನೆಗೆ ಸ್ವಾಮಿಯವರ ಗೆಳೆಯನ ಹೆಂಡತಿ ಭಾರತಕ್ಕೆ ಹಿಂದಿರುಗುವಾಗ ಅಲ್ಲಿನ ಹೆಂಗಸರಿಗೆ ಒಂದು ಸೀರೆಯನ್ನು ಉಡುಗೊರೆಯಾಗಿ ಕೊಟ್ಟು ಬರುತ್ತಾರೆ. ಅದನ್ನು ನಾಲ್ಕು ಜನ ಅಮೆರಿಕನ್ ಗೆಳತಿಯರು ಕತ್ತರಿಸಿ ತಮ್ಮ ಉಡುಗೆಯಾಗಿ ಬಳಸುತ್ತಾರೆ! ಹೀಗೆ ಸ್ವಾಮಿಯವರ ಪ್ರವಾಸ ಕಥನದಲ್ಲಿ ಉಡುಪಿನದೇ ಒಂದು ಹಾಸ್ಯದ ಅಧ್ಯಾಯವಾಗಿ ಹೊಮ್ಮಿದೆ.

ಸ್ವಾಮಿಯವರು ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಸಸ್ಯಶಾಸ್ತ್ರದ ಪ್ರಾಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ ಕಾರ್ಯ ನಿರ್ವಹಿಸಿದರು. ಅವರು ಸಸ್ಯಶಾಸ್ತ್ರದ ಪ್ರಾಧ್ಯಾಪಕರಾಗಿದ್ದುದರಿಂದ ಪ್ರಯೋಗಾಲಯದಲ್ಲಿ ಕೆಲಸ ಮಾಡುವಾಗ ಅನುಕೂಲವಾಗಲಿ ಎಂದು, ಒಂದು ಅರೆ ತೋಳಿನ ಅಂಗಿ ಮತ್ತು ಖಾಕಿ ನಿಕ್ಕರ್ ಧರಿಸುತ್ತಿದ್ದರು.

ಅವರು ಪ್ರಿನ್ಸಿಪಾಲರಾದಾಗಲೂ ತಮ್ಮ ಉಡುಗೆಯಲ್ಲಿ ಬದಲಾವಣೆ ಮಾಡಿಕೊಳ್ಳಲಿಲ್ಲ. ಕಾಲೇಜು ಆಡಳಿತದ ಜೊತೆಗೆ ಅವರು ಸಂಶೋಧನೆಯನ್ನು ಮುಂದುವರೆಸಿದ್ದು ಅದಕ್ಕೆ ಕಾರಣವಾಗಿತ್ತು. ಆ ಸಂದರ್ಭದಲ್ಲಿ ಅವರ ವಿದ್ಯಾರ್ಥಿಯಾಗಿದ್ದವರೊಬ್ಬರು ತಾವು ಕಾಲೇಜಿಗೆ ಸೇರಿಕೊಳ್ಳಲು ಹೋದಾಗಿನ ಅನುಭವವನ್ನು ಹೀಗೆ ಹೇಳಿದ್ದಾರೆ:

'ನಾನು ಆಗ ತಾನೆ ಬಿ.ಎಸ್ಸಿ. ಪಾಸು ಮಾಡಿದ್ದೆ. ಎಂ.ಸ್ಸಿ. ವರ್ಗಕ್ಕೆ ಸೀಟಿಗಾಗಿ ಅರ್ಜಿ ಹಾಕಿಕೊಂಡಿದ್ದೆ. ಆಗ ಪ್ರಿನ್ಸಿಪಾಲರಾಗಿದ್ದವರು ಡಾ॥ ಬಿ.ಜಿ.ಎಲ್. ಸ್ವಾಮಿ. ಅವರನ್ನು ಕಂಡು ಸೀಟು ದೊರಕುವುದೊ ಇಲ್ಲವೊ ತಿಳಿಯೋಣವೆಂದು ಸುಮಾರು ೯ಗಂಟೆ ಸಮಯಕ್ಕೆ ಕಾಲೇಜಿಗೆ ಹೋದೆ. ಖಾಕಿ ಚಡ್ಡಿ, ಚಡ್ಡಿಯೊಳಗೆ ತೂರಿಸಿರುವ ಜುಬ್ಬ ಹಾಕಿಕೊಂಡಿರುವ ಒಬ್ಬಾತ ಪ್ರಿನ್ಸಿಪಾಲರ ರೂಮಿನ ಮುಂದಿನ ಮೆಟ್ಟಿಲುಗಳ

ಮೇಲೆ ಏನನ್ನೋ ಓದುತ್ತಾ ಕುಳಿತಿರುವುದನ್ನು ಕಂಡೆ. ಸ್ವಾಮಿಯವರು ಯಾವಾಗ ಬರುತ್ತಾರೆ? ಅವರನ್ನು ಯಾವಾಗ ನೋಡಬಹುದು?' ಎಂದು ಆತನನ್ನು ಕೇಳಿದೆ. ಅದಕ್ಕೆ 'ಆತ, ಅವರು ಆಗಲೇ ಬಂದಿದ್ದಾರೆ. ನೀನು ಮಾತನಾಡುತಿರುವುದು ಅವರೊಂದಿಗೇನೆ, ನಿನಗೇನಾಗಬೇಕು?' ಎಂದು ಕೇಳಿದರು. ಪ್ರಿನ್ಸಿಪಾಲ್ ಆದವರು ಬೆಳಗಿನ ಜಾವದಲ್ಲಿಯೇ ಕಾಲೇಜಿಗೆ ಬರುತ್ತಾರೆಯೇ? ಅವರು ಇಷ್ಟು ಸಾಧಾರಣ ಉಡುಪಿನಲ್ಲಿ ಇರುತ್ತಾರೆಯೆ? ಅವರನ್ನು ಇಷ್ಟು ಸುಲಭವಾಗಿ ನೋಡಬಹುದೆ? ಹೀಗೆಲ್ಲಾ ಮನಸ್ಸು ತೊಳಲಾಡಿ ನನಗೆ ಏನೊಂದು ಹೇಳಲೂ ಎರಡು ನಿಮಿಷ ತೋರಲಿಲ್ಲ. ಆಮೇಲೆ ನನ್ನ ಕೋರಿಕೆ ಏನೆನ್ನುವುದನ್ನು ತಿಳಿಸಿದೆ. ನಾನು ಕೊಟ್ಟ ವಿವರಗಳನ್ನು ತಿಳಿದುಕೊಂಡು 'ಆಗಲಿ ಸೀಟು ಕೊಡುತ್ತೇನೆ' ಎಂದು ಹೇಳಿದರು. ಅಂದರೆ ಸ್ವಾಮಿಯವರ ಅಂತರಂಗ ಹಾಗು ಬಹಿರಂಗ ಎಷ್ಟು ಸರಳವಾಗಿದ್ದವೆಂದು ಮೇಲಿನ ಘಟನೆಯಿಂದ ತಿಳಿಯಬಹುದು.

ಸ್ವಾಮಿಯವರು ನಿವೃತ್ತರಾದನಂತರ ಮೈಸೂರು ವಿಶ್ವವಿದ್ಯಾಲಯವು ಅವರನ್ನು ಸಂದರ್ಶನ ಪ್ರಾಧ್ಯಾಪಕರನ್ನಾಗಿ ನೇಮಿಸಿಕೊಂಡಿತು. ಅಲ್ಲಿಯೂ ಅವರು, ಮೂವತ್ತು ವರ್ಷಗಳಿಂದ ರೂಢಿಸಿಕೊಂಡು ಬಂದಿದ್ದ ಖಾಕಿ ಚಡ್ಡಿ, ಅರೆ ತೋಳಿನ ಶರ್ಟು ಧರಿಸುತ್ತಿದ್ದರು. ಅದು ಅವರ 'ವರ್ಕ್ ಡ್ರೆಸ್' ಆಗಿತ್ತು. ಸ್ವಾಮಿಯವರು ತಮ್ಮ ವೇಷಭೂಷಣದಿಂದಾಗಿ ಹತ್ತಾರು ಹೆಸರುಗಳನ್ನು ಪಡೆಯಬೇಕಾಯಿತು.

ಮೊದಲು ಸ್ವಾಮಿಯವರು ಮೂರು ತಿಂಗಳ ಅವಧಿಗೆ ನೇಮಕವಾದರು. ಕೇವಲ ಮೂರು ತಿಂಗಳ ಅವಧಿಯಾದುದರಿಂದ ಜುಬ್ಬ ಪೈಜಾಮ ತೊಟ್ಟುಕೊಳ್ಳುತ್ತಿದ್ದರು. ನಂತರ ಸರ್ಕಾರವು ಇವರ ಹುದ್ದೆಯ ಅವಧಿಯನ್ನು ವಿಸ್ತರಿಸಿದ ಮೇಲೆ ಪುನಃ ವರ್ಕ್ ಡ್ರೆಸ್ ಬಳಸುವುದನ್ನು ಆರಂಭಿಸಿದರು. ಇದ್ದಕ್ಕಿದ್ದಂತೆ ಈ ಬದಲಾವಣೆಯಿಂದ ಕೆಲವರು ಅಚ್ಚರಿಗೊಂಡರು. ಮತ್ತೆ ಕೆಲವರು ಈ ಬಗ್ಗೆ ಅವರಲ್ಲಿ ಕೇಳಿಯೂ ಬಿಟ್ಟರು. ಸ್ವಾಮಿಯವರ ಬೆನ್ನ ಹಿಂದೆ 'ಚಡ್ಡಿ ಸ್ವಾಮಿ' ಎಂಬ ಹೆಸರು ವ್ಯವಹಾರದಲ್ಲಿ ಬಂದಿತು! ಸ್ವಾಮಿಯವರನ್ನು ದಿನವೂ ನೋಡುತ್ತಿದ್ದ ಎಳೆಯರು ಅವರನ್ನು 'ಸ್ಕೌಟ್ ಮಾಸ್ಟರ್' ಎಂದು ಕರೆಯುತ್ತಿದ್ದರು. ವಿಶ್ವವಿದ್ಯಾಲಯದ ಕೆಳನೌಕರ ವರ್ಗದವರಿಗೆ 'ಎಡ್ ಮೇಸ್ತ್ರಿ'ಯಾಗಿದ್ದರು. ಬ್ಯಾಂಕ್ ಮ್ಯಾನೇಜರರು ಬಹಳ ದಿನ ಸ್ವಾಮಿಯವರನ್ನು ಬಿ.ಜಿ.ಎಲ್. ಸ್ವಾಮಿಯವರ 'ಪರ್ಸನಲ್ ಕ್ಲರ್ಕ್' ಎಂದು ಭಾವಿಸಿದ್ದರು. ಸ್ವಾಮಿಯವರ ಹೆಸರು ಹಾಗು 'ಕಾಲೇಜು ತರಂಗ' ಕೃತಿಗಳಲ್ಲಿ ಅಚ್ಚಾಗಿದ್ದ ಬಿ.ಜಿ.ಎಲ್. ಸ್ವಾಮಿಯವರ ಹೆಸರು ಬೇರೆ ಬೇರೆಯವು ಎಂದು ನಂಬಿಕೊಂಡಿದ್ದ ಕ್ಯಾಂಟೀನ್ ಮ್ಯಾನೇಜರರು ಅವರನ್ನು 'ಇಮ್ಮಡಿ ಬಿ.ಜಿ.ಎಲ್. ಸ್ವಾಮಿ' ಎಂದು ಹೆಸರು ಬರೆದು ಲೆಕ್ಕ ಇಡುತ್ತಿದ್ದ.

ಇವರು ಮಾನಸ ಗಂಗೋತ್ರಿಯಿಂದ ನಗರಕ್ಕೆ ಹೋಗಲು ೧೪ನೆಯ ನಂಬರಿನ ಬಸ್‌ಗಾಗಿ ಕಾಯುತ್ತಿದ್ದಾಗ, ಅಲ್ಲಿಯೇ ಇದ್ದ ತುಂಟ ಮಗುವಿನ ತಾಯಿಯೊಬ್ಬಳು ಮಗುವಿನ ಚೇಷ್ಟೆಯನ್ನು ನಿಯಂತ್ರಿಸಲು ಸ್ವಾಮಿಯವರನ್ನು ಮಗುವಿಗೆ ತೋರಿಸುತ್ತಾ 'ಹೀಗೆ ತುಂಟತನ ಮಾಡಿದರೆ ನಿನ್ನನ್ನು ಪೊಲೀಸಿಗೆ ಕೊಟ್ಟು ಬಿಡುತ್ತೇನೆ! ಅಲ್ಲಿ ನೋಡು ಪೊಲೀಸಪ್ಪ ನಿಂತಿದ್ದಾನೆ!' ಎಂದಳು. ಆ ಮಾತುಗಳನ್ನು ಕೇಳಿದೊಡನೆ ಮಗು ಚೇಷ್ಟೆಯನ್ನು ನಿಲ್ಲಿಸಿ ಸ್ವಾಮಿಯವರನ್ನೇ ಪಿಳಪಿಳನೆ ನೋಡುತ್ತಾ ಸುಮ್ಮನಾಗಿಬಿಟ್ಟಿತು.

ಇನ್ನೊಮ್ಮೆ ಸ್ವಾಮಿಯವರು ಕರ್ನಾಟಕ ವಿಶ್ವವಿದ್ಯಾಲಯದ ಶಿವಶರಣರ ಬಗೆಗಿನ ವಿಚಾರ ಸಂಕಿರಣವೊಂದರಲ್ಲಿ ಪಾಲ್ಗೊಂಡು ಹಿಂದಿರುಗಿದರು. ಕೆಲವು ದಿನಗಳ ನಂತರ ಧಾರವಾಡಕ್ಕೆ ಭೇಟಿ ನೀಡಿದ ಸ್ವಾಮಿಯವರ ಗೆಳೆಯರೊಂದಿಗೆ ಕೆಲವರು, ಸಂಕಿರಣದಲ್ಲಿ ಲಿಂಗಸ್ವಾಮಿಯವರ ಭಾಷಣದ ಬಗ್ಗೆ ಮೆಚ್ಚಿಗೆ ಮಾತುಗಳನ್ನಾಡಿದರಂತೆ. ಗೆಳೆಯ ತಬ್ಬಿಬ್ಬಾಗಿ 'ಯಾರವರು?' ಎಂದದ್ದಕ್ಕೆ 'ಅದೇ ಸಾರ್, ಬಿ.ಜಿ. ಲಿಂಗಸ್ವಾಮಿ!' ಎಂದರಂತೆ.

ಸ್ವಾಮಿಯವರ ಸಂಶೋಧನೆಗೆ ಕಾಲ, ಸ್ಥಳಗಳ ಎಲ್ಲೆ ಇರಲಿಲ್ಲ. ಅವರು ಮೈಸೂರಿನಲ್ಲಿ ಸಂದರ್ಶನ ಪ್ರಾಧ್ಯಾಪಕರಾಗಿದ್ದಾಗ ಲೈಬ್ರರಿಯ ಎದುರಿನ ವಿಶಾಲ ಬಯಲಿನಲ್ಲಿ ಸಂಶೋಧನೆಗೆ ಅಗತ್ಯವಿದ್ದ ನೆಲಮಟ್ಟದಲ್ಲಿ ಬೆಳೆದ ಸಣ್ಣ ಗಿಡವೊಂದನ್ನು ಕಂಡರು. ವರ್ಕ್ ಡ್ರೆಸ್‌ನಲ್ಲೇ ಕುಕ್ಕರುಗಾಲಿನಲ್ಲಿ ಕುಳಿತು ಲೆನ್ಸ್‌ನಿಂದ ಗಿಡದ ಬಾಹ್ಯ ಲಕ್ಷಣಗಳನ್ನು ವೀಕ್ಷಿಸುವುದರಲ್ಲಿ ಮಗ್ನರಾಗಿದ್ದರು. ಅದೇ ಸಮಯದಲ್ಲಿ ದಾರಿಯಲ್ಲಿ ನಡೆದು ಹೋಗುತ್ತಿದ್ದ ವಿದ್ಯಾರ್ಥಿಗಳ ಗುಂಪಿನಲ್ಲಿ ಒಬ್ಬ ಇವರನ್ನು ಕಂಡು ತನ್ನ ಗೆಳೆಯರಿಗೆ ಏನೋ ಹೇಳಿದ. ಸ್ವಾಮಿಯವರ ಗಮನವೆಲ್ಲಾ ಗಿಡದ ಕಡೆಗಿದ್ದರೂ ತನ್ನನ್ನು 'ಅದು' ಎಂದು ಅವನು ಸಂಬೋಧಿಸಿದ್ದರಿಂದ ಅವರು ಕುತೂಹಲಗೊಂಡು ಮುಂದಿನ ಮಾತುಗಳನ್ನು ಕೇಳಿಸಿಕೊಂಡರು. 'ಏನು ಬಂತೋ ಅದಕ್ಕೆ! ಇಲ್ಲೇ ಉಚ್ಚೆ ಬಿಡುವುದಕ್ಕೆ ಕುಳಿತುಕೊಳ್ಳುವುದು?....ನಡು ಹಗಲು! ಇಷ್ಟೊಂದು ಮಂದಿ ಓಡಾಡುವ ಜಾಗದಲ್ಲಿ....!'

ಸ್ವಾಮಿಯವರು ಮೈಸೂರಿನಲ್ಲಿ ಸಂದರ್ಶನ ಪ್ರಾಧ್ಯಾಪಕರಾಗಿದ್ದಾಗ ಅಖಿಲ ಭಾರತ ವ್ಯಾಪ್ತಿಯ ವಿಜ್ಞಾನಿಗಳ ಸೆಮಿನಾರೊಂದು ಏರ್ಪಾಟಾಗಿತ್ತು. ಸ್ವಾಮಿಯವರು ಆ ಸೆಮಿನಾರಿಗೆ ಅಧಿಕೃತವಾಗಿ ಹಾಜರಾಗಿದ್ದರು. ಆ ಕಡೆ ಹೋಗಿದ್ದವರು ಮಳೆ ಬಂದ ಕಾರಣ, ಆ ಸೆಮಿನಾರಿನಲ್ಲಿ ತಮ್ಮ ಮಾಮೂಲಿನ ಉಡುಗೆಯಾದ ಅರ್ಧತೋಳಿನ ಅಂಗಿ ಹಾಗು ದೊಗಲೆ ನಿಕ್ಕರ್‌ನಲ್ಲಿ ಹಾಜರಾಗಿ ಹಿಂದಿನ ಬೆಂಚಿನಲ್ಲಿ ಅವರ ಚರ್ಚೆಗಳನ್ನು ಕೇಳುತ್ತಾ ಕುಳಿತಿದ್ದರಂತೆ. ಆ ಸೆಮಿನಾರಿನಲ್ಲಿ ಯಜಮಾನರಾಗಿದ್ದವರು ಸ್ವಾಮಿಯವರ ಉಡುಗೆಯನ್ನು ಕಂಡು ಅವರನ್ನು 'ಚಪ್ರಾಸಿ' ಎಂದೇ ಭಾವಿಸಿದರಂತೆ.

ಕಾಳಿನಿಂದ ಧೂಳನ್ನು ಬೇರ್ಪಡಿಸುವ ವಿಧಾನವೊಂದನ್ನು ಕುರಿತು ಸೆಮಿನಾರಿನಲ್ಲಿ ಚರ್ಚೆ ನಡೆಯುತ್ತಿತ್ತು. ಸ್ವಾಮಿಯವರು ಚರ್ಚೆಯಲ್ಲಿ ಮಧ್ಯೆ ಭಾಗವಹಿಸಿ 'ನಮ್ಮ ಅಜ್ಜ ಮುತ್ತಜ್ಜ........' ಎಂದು ಹೇಳಲು ಪ್ರಾರಂಭಿಸುತ್ತಿದ್ದಂತೆಯೇ ವ್ಯವಸ್ಥಾಪಕ ವರ್ಗದೊಬ್ಬರು 'ನಿಮ್ಮ ಅಜ್ಜ ಮುತ್ತಜ್ಜರ ವಿಷಯ ಮಾತನಾಡುವ ಸ್ಥಳ ಇದಲ್ಲ; ಸೈಂಟಿಸ್ಟ್‌ಗಳಲ್ಲದವರು ಮಾತನಾಡುವುದಕ್ಕೆ ಸ್ಥಳ ಇದಲ್ಲ' ಎಂದರು! ಸ್ವಾಮಿ ನಗು ತಡೆಯಲಾರದೆ ಹೊರಗೆ ಹೋಗಿಬಿಟ್ಟರು.

ಅದೇ ದಿನ ನಾಲ್ಕು ಗಂಟೆಗೆ ಅಲ್ಲಿನ ಅಟೆಂಡರ್, ಸಂಕಿರಣದ ಸಂಚಾಲಕರಿಂದ ಒಂದು ಪತ್ರ ತಂದ. ಮೀರತ್ ನಿಂದ ವಿಚಾರ ಸಂಕಿರಣಕ್ಕೆ ಪ್ರತಿನಿಧಿಯಾಗಿ ಬಂದಿರುವ ವಿಜ್ಞಾನಿ, ನೀವು ಅಲ್ಲಿ ಒಮ್ಮೆ ಕೊಟ್ಟ ಭಾಷಣವನ್ನು ಕೇಳಿದ್ದಾರಂತೆ. ನಿಮ್ಮ ಸಂಶೋಧನಾಧ್ಯಯನಗಳ ಪರಿಚಯ ಅವರಿಗಿದೆ. ನಿಮ್ಮಲ್ಲಿ ವಿಶೇಷ ಗೌರವವನ್ನಿಟ್ಟುಕೊಂಡಿದ್ದಾರೆ..........ನೀವು ಬಿಡುವಿದ್ದರೆ, ಕರೆದುಕೊಂಡು ಬರಲೇ? ಎಂಬ ಪತ್ರವನ್ನು ಓದಿ, ಆ ಪತ್ರದ ಮೇಲೆಯೇ ಸ್ವಾಮಿಯವರು 'ದಯಮಾಡಿ ಬರಬೇಕು' ಎಂದು ಬರೆದು ಕಳಿಸಿದರು.

ಸ್ವಲ್ಪ ಸಮಯದ ನಂತರ, ದೂರದಲ್ಲಿ ಸಂಕಿರಣದ ಸಂಚಾಲಕರೂ, ಆ ಗದರುಸ್ವಾಮಿಯೂ ಬರುತ್ತಿರುವುದನ್ನು ನೋಡಿ ಸ್ವಾಮಿಯವರ ನಗು ಮರುಕಳಿಸುತ್ತದೆ. ಆ ಗದರಿದ ವ್ಯಕ್ತಿ ಇವರನ್ನು ದೂರದಿಂದಲೇ ಗಮನಿಸಿ, ನಡಿಗೆಯ ವೇಗವನ್ನು ಕಡಿಮೆಗೊಳಿಸಿದರಂತೆ. ಅವರ ಮುಖದ ಮೇಲಿನ ಕೆಂಪು ಅಳಿಸಿಹೋಯಿತಂತೆ. ಹಣೆಯಲ್ಲಿ ಬೆವರು ಹನಿ ಕಾಣಿಸಿಕೊಂಡಿತು. ಷೇಕ್ ಹ್ಯಾಂಡ್ ಗೆ ಕೈ ಚಾಚಿ 'ಗ್ಲಾಡ್ ಟು ಮೀಟ್ ಯು' ಎಂದಾಗ ಇಳಿಬಿಟ್ಟಿದ್ದ ಕೈ ಶಿಲ್ಪವಾಯಿತು. ಕೊನೆಗೆ 'ಯು ಮಸ್ಟ್ ಪಾರ್ಡ್‌ನ್ ಮಿ ಸಾರ್' ಎನ್ನುತ್ತಾ ದೌಡಾಯಿಸಿದರಂತೆ. ಹೀಗೆ ಮೈಸೂರಿನಲ್ಲಿ ಇರುವಷ್ಟು ಕಾಲವೂ ತಮ್ಮ ಉಡುಪಿನಿಂದಾಗಿ ಹಲವು ಹೆಸರುಗಳನ್ನು ಹೊಂದಿದ್ದರು.

ಸ್ವಾಮಿಯವರು ಪ್ರಿನ್ಸಿಪಾಲರಾಗಿದ್ದಾಗ ಅನರ್ಹನೂ, ಅದಕ್ಷನೂ, ಆದವನೊಬ್ಬ ಯಾವುದೋ ಪ್ರಭಾವ ಬಳಸಿ ಕಾಲೇಜು ಶಿಕ್ಷಣ ಇಲಾಖೆಯ ನಿರ್ದೇಶಕನಾಗುತ್ತಾನೆ. ಅವನು ದೃಢ ಮನಸ್ಸಿಲ್ಲದ ವ್ಯಕ್ತಿ. ಆತ ಹೇಳಿದ ಮಾತು ಇನ್ನೊಂದು ಘಳಿಗೆಗೆ ಅವನಿಗೆ ಹಿಡಿಸದು. ಅಂಥ ದುರ್ಬಲ ಮನಸ್ಸಿನ ಡೈರಕ್ಟರನು ಒಂದು ದಿನ ಇದ್ದಕ್ಕಿದ್ದಂತೆ ಸುತ್ತೋಲೆಯೊಂದನ್ನು ಹೊರಡಿಸಿ 'ಪಿಎಚ್.ಡಿ., ಡಿಗ್ರಿ ಇಲ್ಲದವರು ಅದನ್ನು ಬೇಗ ಗಳಿಸಿಕೊಳ್ಳಬೇಕು. ಇಲ್ಲದ್ದಿದ್ದರೆ ಅಂಥವರನ್ನು ಬೇರೆ ಕಾಲೇಜಿಗೆ ವರ್ಗ ಮಾಡಲಾಗುತ್ತದೆ' ಎಂದು ಆದೇಶಿಸುತ್ತಾನೆ. ಇದರಿಂದ ಗಾಬರಿಯಾದ ಅಧ್ಯಾಪಕರು ಒಡನೆಯೇ ಪಿಎಚ್.ಡಿ.ಗಾಗಿ ಅರ್ಜಿ ಹಾಕಿಕೊಳ್ಳುತ್ತಾರೆ. ಒಂದೇ ಕಾಲೇಜಿನಲ್ಲಿ

ನೂರೈವತ್ತು ಜನ ಅಧ್ಯಾಪಕರು ಪಿಎಚ್.ಡಿ.ಗಾಗಿ ಅರ್ಜಿ ಹಾಕಿಕೊಂಡಿರುತ್ತಾರೆ. ಈ ವಿಚಾರ ಡೈರಕ್ಟರನಿಗೆ ತಲುಪುತ್ತದೆ. ಆತನು ಪ್ರಿನ್ಸಿಪಾಲರಿಗೆ ಫೋನ್ ಮಾಡಿ ಆ ಬಗ್ಗೆ ವಿಚಾರಿಸುವ ಸಂದರ್ಭ ಅವನ ವರ್ತನೆಗೆ ಹಿಡಿದ ಕನ್ನಡಿಯಾಗಿದೆ.

ಡೈರೆಕ್ಟರು: 'ಎಷ್ಟು ದಿನವಾಗುತ್ತದೆ ಪಿಎಚ್.ಡಿ. ಡಿಗ್ರಿ ತೆಗೆದುಕೊಳ್ಳುವುದಕ್ಕೆ?'

ಪ್ರಿನ್ಸಿಪಾಲ್: 'ಬುದ್ದಿವಂತನಿಗೆ ಮೂರು ವರ್ಷ; ಸಾಮಾನ್ಯ ಬುದ್ದಿವಂತನಿಗೆ ನಾಲ್ಕು ವರ್ಷ; ಇನ್ನೂ ಕೆಳಮಟ್ಟದವನಿಗೆ ಐದಾರು ವರ್ಷ; ಮೂರು ಸಲ ಫೇಲ್ ಆಗಿ ಮೂರನೆಯ ತರಗತಿಯಲ್ಲಿ ತೇರ್ಗಡೆಯಾದವನಿಗೆ ಈ ಜನ್ಮದಲ್ಲಿಲ್ಲ'.

'ಕೊನೆಯ ವಿಷಯವಾಗಿ ನಾನು ಕೇಳಲಿಲ್ಲ ಕಾಣ್ರೀ ತಿಳಿಯಿತೆ?'

'ತಿಳಿಯಿತು ಸಾರ್, ನೋಟೆಡ್'.

'ಎಂದರೆ ಒಬ್ಬಬ್ಬರಿಗೂ ಮೂರರಿಂದ ನಾಲ್ಕೈದು ವರ್ಷಗಳು ರಜೆ ಬೇಕಾಗುತ್ತದೆಯಲ್ಲವೇನ್ರಿ?'

'ಹೌದು ಎಂದು ಕಾಣುತ್ತದೆ ಸಾರ್!'

'ರಜೆಯೊಂದಿಗೆ ಅವರಿಗೆ ಸಂಬಳನ್ನೂ ಕೊಡಬೇಕಲ್ಲವೇನ್ರಿ?'

'ಕೊಡದಿದ್ದರೆ ಅವರು ಹೇಗೆ ಸಾರ್ ಬದುಕಬೇಕು?'

'ಪ್ರಶ್ನೆಗೆ ಪ್ರಶ್ನೆ ಕೇಳಬೇಡ್ರಿ'.

'ಸರಿ ಸಾರ್, ನೋಟೆಡ್'.

'ಅವರಿಗೆ ರಜೆ ಕೊಟ್ಟರೆ ಅವರ ಜಾಗಕ್ಕೆ ಮತ್ತೊಬ್ಬರನ್ನು ನೇಮಿಸಬೇಕಲ್ಲವೇನ್ರಿ?'

'ಹೌದು. ಹೌದು, ಸಾರ್'.

'ದ್ವಿರುಕ್ತಿ ಬೇಡ್ರಿ. ಒಂದು ಸಲ ಹೇಳಿದರೆ ಸಾಕು ನನಗೆ ತಿಳಿಯುತ್ತದೆ. ನಾನೇನು ದಡ್ಡನೇನ್ರಿ?'

'ಅಯ್ಯಯ್ಯೋ, ಖಂಡಿತವಾಗಿಯೂ ಅಲ್ಲ'.

'ಹೊಸದಾಗಿ ನಿಯಮಿತವಾದವರಿಗೆ ಸಂಬಳ ಕೊಡಬೇಕಲ್ಲವೇನ್ರಿ?'

'ಹೌದು ಸಾರ್'

'ಹಾಗಾದ್ರೆ ಯಾಕ್ರೀ ಈ ಯೋಜನೆಯನ್ನು ಜಾರಿಗೆ ತರಬೇಕು?'

'ಸ್ವಾಮಿಯವರು (ಪ್ರಿನ್ಸಿಪಾಲ್) ಮೌನ'.

'ಬದಲು ಹೇಳ್ರಿ!'

'ಈ ಕಾಲೇಜಿನಲ್ಲಿ ಸ್ನಾತಕೋತ್ತರ ತರಗತಿಗಳು ನಡೆಯುತ್ತವೆ. ಆದಕ್ಕೆ ಪಾಠ ಹೇಳಬೇಕಾದರೆ ಸಮರ್ಥರಾದ ಉಪಾಧ್ಯಾಯರು ಬೇಕು. ಸಾಮರ್ಥ್ಯ ಪಡೆಯುವುದಕ್ಕೆ ಸಂಶೋಧನೆ ನಡೆಸಬೇಕು. ಪಿಎಚ್.ಡಿ.ಯನ್ನು ಕನಿಷ್ಠ ಕ್ವಾಲಿಫಿಕೇಷನ್ ಆಗಿ ಪಡೆದವರು ಸ್ನಾತಕೋತ್ತರ ತರಗತಿಗೆ ಪಾಠ ಹೇಳುವ ಅರ್ಹತೆಯನ್ನು ಪಡೆದಿರುತ್ತಾರೆ'.

'ಏನ್ರೀ ಪುರಾಣ ನೇಯುತ್ತೀರಿ. ಪಿಎಚ್.ಡಿ. ತೆಗೆದುಕೊಳ್ಳದೆ ಸ್ನಾತಕೋತ್ತರ ತರಗತಿಗೆ ಪಾಠ ಹೇಳುವುದಕ್ಕಾಗುವುದಿಲ್ಲವೇನ್ರೀ?'

'ಆಗುತ್ತದೆ ಸಾರ್'

'ಬುದ್ಧಿವಂತರೆನಿಸಿಕೊಳ್ಳುವುದಕ್ಕೆ ಪಿಎಚ್.ಡಿ. ತೆಗೆದುಕೊಂಡಿರಬೇಕೇನ್ರೀ?'

'ಖಂಡಿತ ಇಲ್ಲ ಸಾರ್'.

'ಪ್ಲೇಟೋವಿಗೆ ಪಿಎಚ್.ಡಿ. ಇತ್ತೇನ್ರಿ?'

'ಇಲ್ಲವೆಂದು ಕಾಣುತ್ತದೆ ಸಾರ್'.

'ಅವರೆಲ್ಲಾ ಬುದ್ಧಿವಂತರಲ್ಲವೇನ್ರಿ?'

'ಹೌದು ಸಾರ್, ಮಹಾ ಬುದ್ಧಿವಂತರು.'

'ಹಾಗಾದ್ರೆ, ನಾವೇಕ್ರಿ ಪಿಎಚ್.ಡಿ.ಗಳು ಮಾತ್ರ ಸ್ನಾತಕೋತ್ತರ ತರಗತಿಗಳಿಗೆ ಪಾಠಹೇಳಬೇಕೆಂದು ವಿಧಾಯಿಸಬೇಕು?'

'ಬೇಡ ಸಾರ್'.

'ಖಂಡಿತ ಹೇಳ್ರಿ'.

'ಖಂಡಿತ ಬೇಡ ಸಾರ್'.

'ಹಾಗಾದರೆ ಕಾರಣಕೊಟ್ಟು ಈ ಯೋಜನೆ ಅನಾವಶ್ಯಕ ಎಂದು ನನಗೆ ಕಾಗದ ಬರೆಯಿರಿ'.

ಸ್ವಾಮಿಯವರು ಬಾಟನಿ ವಿಭಾಗದ ಮುಖ್ಯಸ್ಥರಾಗಿದ್ದಾಗ ಅವರಿಗೆ ಕೊಟ್ಟಿದ್ದ ಕೊಠಡಿ, ಲೆಕ್ಚರ್ ಹಾಲ್‌ಗಳು ಜಾಗವಿಲ್ಲದೆ ಸಾಮಾನುಗಳಿಂದ ತುಂಬಿಹೋಗಿದ್ದವು. ಉಪಾಧ್ಯಾಯರು, ವಿದ್ಯಾರ್ಥಿಗಳು, ಅಲ್ಲಿ ನಿಲ್ಲುವುದೂ ಕೂರುವುದೂ ಕಷ್ಟವೇ ಆಗಿತ್ತು. ಲೈಬ್ರರಿ, ಸ್ಟೋರ್ಸ್, ಮ್ಯೂಜಿಯಂ, ಹರ್ಬೇರಿಯಮ್ ಯಾವುದರ ಒಳಗನ್ನು ಹೊಕ್ಕರೂ

ಮೈಕೈಗಳನ್ನು ತಾಕಿಸಿಕೊಳ್ಳದೆ ಹೊರಗೆ ಬರುವುದು ಸಾಧ್ಯವೇ ಇರಲಿಲ್ಲ. ಅಂಥ ಪರಿಸ್ಥಿತಿಯಲ್ಲಿ ಸರ್ಕಾರವು ವಿದ್ಯಾರ್ಥಿ ಸೀಟುಗಳ ಸಂಖ್ಯೆಯನ್ನು ಇದ್ದಕ್ಕಿದ್ದಂತೆ ಏರಿಸುತ್ತದೆ. ನಮ್ಮ ಕಾಲೇಜಿನಲ್ಲಿ ಸ್ಥಳಾಭಾವವಿದೆಯೆಂದು ಸ್ವಾಮಿಯವರು ಡೈರೆಕ್ಟರರಲ್ಲಿ ಮನವಿ ಮಾಡುತ್ತಾರೆ. ಆಗ ಪರಿಸ್ಥಿತಿಯನ್ನು ತಿಳಿಯಲು ಡೈರೆಕ್ಟರನೇ ಆಗಮಿಸುತ್ತಾನೆ.

ನಿಗದಿತ ದಿನದಂದು ಡೈರೆಕ್ಟರನು ಪ್ರಿನ್ಸಿಪಾಲರೊಂದಿಗೆ ಬಾಟನಿ ಡಿಪಾರ್ಟ್‌ಮೆಂಟಿಗೆ ಭೇಟಿ ನೀಡುತ್ತಾನೆ. ಸ್ಟೋರ್ಸ್‌ಗೆ ಹೋಗುವಾಗ ಜಾಗ ಚಿಕ್ಕದೆಂದು ಹೇಳಿದರೂ ಕೇಳದೆ ಒಳಗೆ ನುಗ್ಗಿದ್ದರಿಂದ ಬೀರುವಿನ ಗಾಜು ಒಡೆದು ಡೈರೆಕ್ಟರನ ಪ್ಯಾಂಟು ಹರಿಯುತ್ತದೆ. ಆಗ ಸ್ಟೋರ್ಸ್‌ನ ಜವಾಬ್ದಾರಿ ಹೊತ್ತಿದ್ದ ಪ್ರಾಧ್ಯಾಪಕ ತನ್ನ ಮಿತಿಮೀರಿದ ಸಮಯ ಪ್ರಜ್ಞೆಯಿಂದ, ಬ್ರೇಕೇಜ್ ರಿಜಿಸ್ಟರ್‌ನಲ್ಲಿ ತಾರೀಖನ್ನು ಬರೆದು ಬೀರುವಿನ ಗಾಜು ಒಡೆಯಿತು, ಬೆಲೆ ಹತ್ತು ರೂಪಾಯಿ, ಒಡೆದವರು ಡೈರೆಕ್ಟರರು ಎಂದು ಬರೆದು ತರುತ್ತಾನೆ. ಡೈರೆಕ್ಟರರು ಅದನ್ನು ಓದಿಕೊಂಡು 'ಡೈರೆಕ್ಟರರು' ಎಂದಿದ್ದ ಜಾಗದಲ್ಲಿ 'ಪ್ರಿನ್ಸಿಪಾಲ್' ಎಂದು ತಿದ್ದಿ ಪ್ರಿನ್ಸಿಪಾಲನ ಕೈಗೆ ಕೊಡುತ್ತಾನೆ. ಪ್ರಿನ್ಸಿಪಾಲ್ ತನ್ನ ಹೆಸರನ್ನು ಹೊಡೆದು ಹಾಕಿ ಒಡೆದವರು 'ಚೀಫ್ ಪ್ರೊಫೆಸರ್' ಎಂದು ತಿದ್ದಿ ಸ್ವಾಮಿಯವರ ಕೈಗೆ ಕೊಡುತ್ತಾನೆ. ಅದನ್ನು ಅವರು 'ಅಸಿಸ್ಟೆಂಟ್ ಪ್ರೊಫೆಸರ್'ಎಂದು ತಿದ್ದದೇ ಅಧ್ಯಾಪಕರ ಕೈಗೆ ರಿಜಿಸ್ಟರ್ ಕೊಡುತ್ತಾರೆ. ಕೊನೆಗೆ ಇನ್ಸ್‌ಪೆಕ್ಷನ್ ಮಾಡಿದ ಡೈರೆಕ್ಟರನು 'no more accommodation you manage somehow' ಎಂದು ಹೊರಟು ಹೋಗುತ್ತಾನೆ!

ಸ್ವಾಮಿಯವರ 'ಕಾಲೇಜು ತರಂಗ' ಕೃತಿಯು, ವಿದ್ಯಾ ಇಲಾಖೆಯು ಅನರ್ಹರೂ, ಅದಕ್ಷರೂ ಆದ ವ್ಯಕ್ತಿಗಳ ಕೈಗೆ ಸಿಕ್ಕು ನರಳುವುದರೊಂದಿಗೆ ಆರಂಭವಾಗುತ್ತದೆ. ಕೈಕೆಳಗಿನ ಸಿಬ್ಬಂದಿಯನ್ನು ಕಿರುಕುಳಗುಟ್ಟಿಸುತ್ತಿದ್ದ ಡೆಪ್ಯೂಟಿ ಡೈರೆಕ್ಟರನು ವಿದ್ಯಾ ಇಲಾಖೆಯ ಡೈರೆಕ್ಟರನಾದನು. ಅಂಥಹ ಚಾರಿತ್ರ್ಯವನ್ನೇ ಹೊಂದಿದ್ದ ಡೈರೆಕ್ಟರನು ವೈಸ್-ಛಾನ್ಸಲರನಾದನು. ಪ್ರಿನ್ಸಿಪಾಲರಾಗಿದ್ದ ಸ್ವಾಮಿಯವರು ಇವರನ್ನು ಗೌರವಿಸುವುದು ತಮ್ಮ ಕರ್ತವ್ಯವೆಂದು ಅದಕ್ಕೆ ಸಿದ್ಧರಾದರು. ಮಲ್ಲಿಗೆ ಹಾರ, ನಿಂಬೆಹಣ್ಣು, ಸೇಬು ಇತ್ಯಾದಿಗಳನ್ನು ತೆಗೆದುಕೊಂಡು, ಮೊದಲು ಡೈರೆಕ್ಟರರ ಮನೆಗೆ ಹೋದರು. ಅಲ್ಲಿ ಆಗಲೇ ನೂರಾರು ಮಂದಿ ಸೇರಿದ್ದರು. ಆ ವೇಳೆಗೆ ಡೈರೆಕ್ಟರನ ಮನೆಯಾಕೆ ಹೊರಗೆ ಬಂದು ಜನರನ್ನು ಮಾತನಾಡಿಸುವ ರೀತಿ, ಸ್ವಾರ್ಥಪರ, ದೃಷ್ಟಿಕೋನ, ಮನೆಗೆ ಬಂದವರನ್ನು ನಡೆಸಿಕೊಳ್ಳುವ ಬಗೆಯನ್ನು ತಿಳಿಸುತ್ತವೆ:

'ಅವರು ಇನ್ನೂ ಎದ್ದಿಲ್ಲ. ರಾತ್ರಿ ಮಲ್ಗೋ ವೇಳ್ಗೆ ಮೂರು ಗಂಟೆಯಾಗಿತ್ತು. ನೀವು ತಂದಿರೋ ಆರಾ–ಹಣ್‌ಗೊಳನ್ನ ನಿಮ್ ನಿಮ್ ಎಸ್ರು ಬರ್ದು ಈ ಮೇಜಿನ್ ಮ್ಯಾಗೆ ಇಟ್ಟು ಓಗ್ರಿ. ಎದ್ದೇಟ್ಗೇ ನಾನು ಅವರ್ಗೆ ಏಳ್ತೀನಿ...... ನೀವೆಲ್ಲ ಒಂಟೋಗಿ' ಎಂದು ಅಪ್ಪಣೆ ಕೊಡಿಸುತ್ತಾರೆ.

ಅನಂತರ ಸ್ವಾಮಿಯವರು ವೈಸ್–ಛಾನ್ಸಲರ್‌ಅನ್ನು ಮರ್ಯಾದೆ ಮಾಡಲು ಹಣ್ಣು ಹಾರಗಳೊಂದಿಗೆ ಅವರ ಮನೆಗೆ ಹೋಗುತ್ತಾರೆ. ಅವರೂ ಡೈರೆಕ್ಟರರೇ ನಡವಳಿಕೆಯಲ್ಲಿ, ಅವರ ಮನೆಯೊಡತಿ ತಟ್ಟೆಯಲ್ಲಿದ್ದ ಹಣ್ಣುಗಳನ್ನು ಎದುರಿನಲ್ಲಿಯೇ ಎಣಿಸುತ್ತಾಳೆ. ಆ ವಿಷಯದಲ್ಲಿ ಆ ದಂಪತಿಗಳು ಸಮಾನರು. ವೈಸ್–ಛಾನ್ಸಲರನು ಮಹಡಿಯಿಂದ ಇಳಿದು ಬಂದೊಡನೆಯೇ:

'ಏನ್ರಿ ಹಾರಾ–ತುರಾಯಿ ತಂದು ಬುಟ್ರಿ'

ಅಮ್ಮಾವ್ರು: 'ತುರಾಯಿ ತಂದಿಲ್ಲ; ಸುಮ್ನೆ ಬಡ್ಕೊ ಬ್ಯಾಡಿ. ಆರಾ ಮಾತ್ರ ತಂದೆವ್ರು ಅದೂ ಒಂದೇ ಒಂದು'.

'ಅಣ್ಣೂ ತಂದವರಲ್ಲೆ ಅದೂ ಪೋವ್ ಅಣ್ಣು.... ಲೇ, ಒಳಗೆ ತಗೊಂಡೋಗಿ ಮಡಗು. ಆರಾನ ಬೇರೆಯಾಗಿ ಒದ್ದೆ ಬಟ್ಟೆ ಸುತ್ತಿಡು. ಎರಡು ಪೋವ್ ಅಣ್ಣನ್ನೂ ಅದರೊಂದಿಗಿಡು'.

ವೈಸ್ ಛಾನ್ಸಲರನ ದೃಷ್ಟಿ, ನಂತರ ಸ್ವಾಮಿಯವರ ಕಡೆ ಹರಿಯುತ್ತದೆ. 'ನೋಡಿ, ಸ್ವಾಮಿ ಈಗಿನ ಜನ ಇದ್ದಾರಲ್ಲ, ಅವರು ದನ; ಮರ್ಯಾದೆ ಮಾಡುವಾಗ ಎಂಥ ಸರಕನ್ನು ತರಬೇಕು ಅಂಬೋದನ್ನ ತಿಳಿದುಕೊಂಡಿಲ್ಲ..... ನೋಡಿ ನಿನ್ನೆಯೆಲ್ಲ ಒಂದು ನೂರಿನ್ನೂರು ಜನ ಬಂದವ್ರೆ. ಯಾವುದೋ ಸೊಪ್ಪಿನದೋ, ಬಣ್ಣದ ಹೂವಿನ ಹಾರ, ನಮ್ಮ ಎಮ್ಮೆ ಕೂಡ ಮೂಶಿನೋಡದ ಸೇಬು ತಂದವ್ರೆ;..... ಹಿ ಹಿ ಹಿ ಹಿ..... ನಮ್ಮ ಜನಕ್ಕೆ ನಯ ಇಲ್ಲ ನಾಜೋಕ್ ಇಲ್ಲ; ನೀವು ತಂದಿದ್ದೀರಲ್ಲ ಈ ಹಾರಕ್ಕೆ ಏನು ಬೆಲೆ ಕೊಟ್ರಿ?!'

ಒಮ್ಮೆ ಸ್ವಾಮಿಯವರು ಹೆಸರಾಂತ ವಿಶ್ವವಿದ್ಯಾಲಯದ ಪರೀಕ್ಷಾ ಮಂಡಲಿಯ ಸದಸ್ಯರಾದರು. ಒಟ್ಟು ನಾಲ್ವರು ಮೌಲ್ಯಮಾಪಕದಲ್ಲಿ ಒಬ್ಬೊಬ್ಬನೂ ಎಂಟು– ಹತ್ತು ವಿಶ್ವವಿದ್ಯಾನಿಲಯಗಳ ಪರೀಕ್ಷಾ ಮಂಡಳಿಯ ಮೌಲ್ಯ ಮಾಪನ ಕಾರ್ಯವನ್ನು ವಹಿಸಿಕೊಂಡಿದ್ದಂಥವರು. ಅವರು ಮೌಲ್ಯಮಾಪನ ಮಾಡಬೇಕಿದ್ದ ಉತ್ತರ ಪತ್ರಿಕೆಗಳ ಸಂಖ್ಯೆಯು ಸಾವಿರಗಟ್ಟಲೆಯಲ್ಲಿದ್ದುದ್ದರಿಂದ ಅವರು ಮೌಲ್ಯಮಾಪನ ಮಾಡುತ್ತಿದ್ದ ರೀತಿಯೂ ಅದಕ್ಕೆ ತಕ್ಕಂತೆ ಇರುತ್ತಿತ್ತು. ಅದನ್ನು ಸ್ವಾಮಿಯವರು ಹೇಳಿರುವಂತೆಯೇ

ತಿಳಿಸಿದರೆ ಹೆಚ್ಚು ಸ್ವಾರಸ್ಯವಾಗಿರುತ್ತದೆ; ಆದರೆ ವಾಸ್ತವ ಸಂಗತಿ ವಿಷಾದವನ್ನು ಉಂಟುಮಾಡುವಂಥದು.

ವಿದ್ಯಾರ್ಥಿಗಳ ಬರವಣಿಗೆಯನ್ನು ಎಷ್ಟರಮಟ್ಟಿಗೆ ಓದಿ ಅರ್ಥಮಾಡಿಕೊಂಡು ಮಾರ್ಕುಕೊಡುತ್ತಿದ್ದರೋ ದೇವರೇ ಬಲ್ಲ! ಏನಯ್ಯ, ಈ ಮುಟ್ಠಾಳ ಹೀಗೆ ಬರೆದಿದ್ದಾನೆ ಎಂದು ಒಬ್ಬ ಪ್ರಶ್ನೆ ಹಾಕುತ್ತಾನೆ, ಇನ್ನೊಬ್ಬ ಒಂದೋ ಎರಡೋ ಕೊಟ್ಟು ತಳ್ಳಯ್ಯ ಎಂದು ನಿರ್ಧಾರ್ ಮಾಡುತ್ತಾನೆ. ಅಂಥದೊಂದು ಸಂದರ್ಭದಲ್ಲಿ ನಾನು ಬಾಯಿ ಹಾಕಿ ಅವನನ್ನು ಪ್ರಶ್ನಿಸಿದೆ: ಅವನನ್ನೇಕೆ ಮುಟ್ಠಾಳ ಎನ್ನುತ್ತೀರಿ. ಅವನು ಬರೆದಿರುವುದೇ ಸರಿಯಾಗಿದೆ! ಎಂದೆ.

'ಟೆಕ್ಸ್ಟ್ ಬುಕ್ಕಿನಲ್ಲಿ ಹಾಗಿಲ್ಲವಲ್ಲ!'

'ಟೆಕ್ಸ್ಟ್ ಬುಕ್ಕಿನಲ್ಲಿರುವ ಪಾಠ ತಪ್ಪು ಎಂದು ಐದಾರು ವರ್ಷಗಳ ಹಿಂದೆಯೇ 'ಅನ್ನಲ್ಸ್ ಆಫ್ ಬಾಟನಿ' ಪತ್ರಿಕೆಯಲ್ಲಿ ಎರಡು ಲೇಖನಗಳು ಪ್ರಕಟವಾಗಿದೆಯಲ್ಲ!'

'ಹೌದಾ ಸಾರ್! ನಾವು ಅದನ್ನು ನೋಡಿಯೇ ಇಲ್ಲವಲ್ಲ!'

'ವಿದ್ಯಾರ್ಥಿ ಓದಿ ಸರಿಯಾಗಿ ಅರ್ಥಮಾಡಿಕೊಂಡಿರುವಂತಿದೆ'.

'ಅಯ್ಯಯ್ಯೋ! ಎಲ್ಲರಿಗೂ ಸೊನ್ನೆ ಸುತ್ತಿ ಬಿಟ್ಟೆವಲ್ಲ!' ಎನ್ನುತ್ತಾ ತಿದ್ದಿದ ಉತ್ತರ ಪತ್ರಿಕೆಗಳ ಕಂತೆಯನ್ನು ಬಿಚ್ಚಿದರು. ಈ ನಡುವೆ ಪೂನಾವಾಲನಿಗೆ ಬಾತ್ ರೂಂಗೆ ಅವಸರವಾಯಿತು. ಹೋಗುವಾಗ ಮೂವತ್ತು ಪತ್ರಿಕೆಗಳನ್ನು ತೆಗೆದುಕೊಂಡು ಹೋದ. ಅಲ್ಲಿದ್ದ ಐದೇ ಐದು ನಿಮಿಷದೊಳಗಾಗಿ ಹೊರಗೆ ಬಂದ. ತೆಗೆದುಕೊಂಡು ಹೋಗಿದ್ದ ಉತ್ತರ ಪತ್ರಿಕೆಗಳೆಲ್ಲ ಮೌಲ್ಯಮಾಪನವಾಗಿಬಿಟ್ಟಿದ್ದವು!

ಬಿ.ಜಿ.ಎಲ್. ಸ್ವಾಮಿಯವರು ಕೇವಲ ವಿಡಂಬನಾತ್ಮಕ ಕೃತಿಗಳನ್ನಲ್ಲದೆ, ವಿಜ್ಞಾನ ಕೃತಿಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ. ಅವು ಸಸ್ಯಶಾಸ್ತ್ರವನ್ನು ಕುರಿತಂತೆ ರಚಿತವಾಗಿವೆ. ಸಾಮಾನ್ಯರಿಗೂ ಅರ್ಥವಾಗುವ ಹಾಗೆ ಅವುಗಳ ಸ್ವಾಭಾವಿಕ ನೆಲೆ, ಉಪಯೋಗ, ಇತಿಹಾಸ-ಪುರಾಣಗಳಲ್ಲಿ ಅವುಗಳ ಸ್ಥಾನ ಇತ್ಯಾದಿಗಳನ್ನು ಹಾಸ್ಯದ ಹೂರಣದೊಂದಿಗೆ ಉಣಬಡಿಸುತ್ತಾರೆ. ಹೀಗಾಗಿ ಅವು ಶಾಸ್ತ್ರ ಸಾಹಿತ್ಯ ಎನಿಸದೆ; ಹಾಸ್ಯ ಸಾಹಿತ್ಯವೇ ಎಂಬ ಭ್ರಮೆಯನ್ನು ಮೂಡಿಸುತ್ತವೆ. ಇದಕ್ಕೆ ಸ್ವಾಮಿಯವರು ನೀಡುವ ಕಾರಣ ಹೀಗಿದೆ:

'ವಿಜ್ಞಾನವನ್ನು ವಿಜ್ಞಾನವಾಗಿಯೇ ಬರೆದ ರೀತಿಯಲ್ಲಿ ಜನ ಅಷ್ಟು ಓದುತ್ತಾರೆಯೇ ಅಂತ ಸಂದೇಹ ಬಂತು. ಆದ್ರಿಂದ ಹಾಸ್ಯನೂ ರವಷ್ಟು ಒಂದು ಮಾಧ್ಯಮವಾಗಿ ಉಪಯೋಗಿಸಿದರೆ, ಅದನ್ನು ಓದೋ ಭರದಲ್ಲಿ ಒಂದೆರಡು ವಿಜ್ಞಾನದ ವಿಚಾರಗಳು

ಅವರ ಮನಸ್ಸನ್ನು ಹೊಕ್ಕೀತು ಅಂತಂದ್ರೆ ನನ್ನ ಧನ್ಯತೆಗೆ ಅನುಕೂಲವಾಗುತ್ತೆ ಅಂತ' ಅಂದುಕೊಂಡಿದ್ದಾರೆ.

ಸ್ವಾಮಿಯವರು ಕಾಲೇಜು ವಿದ್ಯಾರ್ಥಿಯಾಗಿದ್ದಾಗಿನ ಅನುಭವಗಳ ಹಿನ್ನೆಲೆಯಲ್ಲಿ ಮೂಡಿಬಂದಿರುವ ಕೃತಿ ದೌರ್ಗಂಧಿಕಾಪಹರಣ. ಸಸ್ಯಶಾಸ್ತ್ರದ ವಿದ್ಯಾರ್ಥಿಗಳಾಗಿದ್ದ ಅವರನ್ನು ಗಿಡಮರಗಳು ಬೆಳೆಯುವ ಸ್ವಾಭಾವಿಕ ನೆಲೆಯಲ್ಲಿ ಅವುಗಳನ್ನು ಪರಿಚಯಿಸುವ ಉದ್ದೇಶದಿಂದ ಗುರುಗಳು ಕಾಡಿಗೆ ಕರೆದುಕೊಂಡು ಹೋಗುತ್ತಿದ್ದರು.

ಒಮ್ಮೆ ಗುರುಗಳು ವಿದ್ಯಾರ್ಥಿಗಳನ್ನು ಉದಕಮಂಡಲದ ಬರ್ಲಿಯಾರ್ ತೋಟಕ್ಕೆ ಕರೆದುಕೊಂಡು ಹೋದರು. ಅಲ್ಲಿ ಆಂಜನೇಯೋಪಾಧ್ಯಾಯರಿಗೆ ಹಳೆಯ ಶಿಷ್ಯನ ಪರಿಚಯವಾಯಿತು. ಇದರಿಂದ ಸಂತೋಷಗೊಂಡ ಗುರುಗಳು ತಮ್ಮ ಶಿಷ್ಯರಿಗೆ, ನಿಶ್ಚಿಂತೆಯಿಂದ ಹಣ್ಣುಗಳನ್ನು ಸೇವಿಸಿರಿ ಎಂದು ಹೇಳಿಬಿಡುತ್ತಾರೆ. ಇಂಥ ಅವಕಾಶಕ್ಕಾಗಿಯೇ ಕಾಯುತ್ತಿದ್ದ ವಿದ್ಯಾರ್ಥಿಗಳು ನಡೆದುಕೊಂಡ ರೀತಿಯನ್ನು ಸ್ವಾಮಿಯವರು ವಾಲ್ಮೀಕಿ ಕಂಡ ದೃಶ್ಯ ಎಂದು ಕರೆದಿದ್ದಾರೆ:

'ಹುಡುಗರು ನದೀ ವೇಗದಿಂದ ತೋಟದೊಳಗೆಲ್ಲಾ ನುಗ್ಗಿ ರಸವತ್ಫಲಗಳಿಗೆ ಕೈ ಹಾಕಿದರು. ವಾಲ್ಮೀಕಿ ಕಂಡ ದೃಶ್ಯವನ್ನೇ ಚಾಚೂ ತಪ್ಪದೆ ಅತ್ಯಂತ ಸ್ವಾಭಾವಿಕತೆಯಿಂದ ಮನೋಹರವಾಗಿ ಪ್ರದರ್ಶಿಸಿದರು. ತೋಟದ ಮಾಲಿಗಳನ್ನು, ಕೂಲಿಗಳನ್ನು, ಕಾವಲಿಗರನ್ನು ಹೆದರಿಸಿ ಹೊಡೆದೋಡಿಸಿ ಹಣ್ಣುಗಳನ್ನು ಯಥೇಷ್ಟವಾಗಿ ತಿಂದರು. ಕಾಯಿಗಳನ್ನು ಕಿತ್ತು ಫುಟ್ ಬಾಲ್, ವಾಲಿ ಬಾಲ್, ಕ್ರಿಕೆಟ್ ಮೊದಲಾದ ಚಂಡಾಟಗಳನ್ನಾಡಿದರು. ಹಣ್ಣೊಂದನ್ನು ಕಚ್ಚಿ ಬಿಸುಟು ಇನ್ನೂ ರುಚಿಯಾಗಿರಬಹುದೆಂಬ ನಿರೀಕ್ಷೆಯಿಂದ ಇನ್ನೊಂದು ಹಣ್ಣಿಗೆ ಕೈ ಹಾಕಿ, ಇದೇ ಮನೋವೃತ್ತಿಯಿಂದ ಮರಮರವನ್ನು ಮುಂಡನ ಮಾಡಿದರು. ನಾಲ್ಕು ವರ್ಷಗಳ ಹಿಂದೆ ಬೆಳೆಸಿದ್ದ ಬೆಣ್ಣೆ ಹಣ್ಣು ( AVOCADO)ಗಳನ್ನು ತಿಂದು, ಅದು ರುಚಿಯಲ್ಲೂ, ವಾಸನೆಯಲ್ಲೂ ಹೆಚ್ಚು ಕಡಿಮೆ ಬೆಣ್ಣೆಯಂತೆಯೇ ಇದ್ದುದರಿಂದ ತುಪ್ಪ ಕಾಯಿಸಬೇಕೆಂದು ಪ್ರಯತ್ನಪಟ್ಟು, ಆ ಮರದಡಿಯಲ್ಲಿಯೇ ಬೆಂಕಿ ಹೊತ್ತಿಸಿದರು. ಮರ ಸೀದು ಇದ್ದಲಾಯಿತು.

'ಫಲಶ್ರುತಿ'ಕೃತಿಯಲ್ಲಿ ಸ್ವಾಮಿಯವರು ಸೇಬಿನಹಣ್ಣಿನ ಬಗ್ಗೆ ವಿವರಿಸುತ್ತಾ, ಒಂದು ಹಾಸ್ಯ ಪ್ರಸಂಗವನ್ನು ಸೃಷ್ಟಿಸಿದ್ದಾರೆ. ಪಂಚ್ ಪತ್ರಿಕೆಯಲ್ಲಿ ಸೇಬಿನ ಜಾಹೀರಾತು (an apple  a day keeps the doctor away) ಓದಿ ನನ್ನ ತಾತ, ಆತನಿಗೆ ಯಾವ ಖಾಯಿಲೆಯೂ ಇರಲಿಲ್ಲ. ತಾನೂ ದಿನಕ್ಕೊಂದು ಸೇಬು ತಿನ್ನಬೇಕೆಂದು ಮನಸ್ಸು ಮಾಡಿದರು. ನಿಮಗೆ ಹಲ್ಲಿಲ್ಲವಲ್ಲಾ! ಎಂಬ ಆಕ್ಷೇಪ ಅಜ್ಜಿಯಿಂದ ಎದುರಾಯಿತು. 'ಬೇಯಿಸಿ ಹಾಕು' ಎಂಬ ಆಜ್ಞೆಯಾಯಿತು. ಮರುದಿನ ಬೇಯಿಸಿದ ಸೇಬು ತಿಂದ

ತಾತನಿಗೆ ಭೇದಿ ಕಿತ್ತುಕೊಂಡಿತು! ಮನೆಯ ಹೊರಗಿದ್ದ ವೈದ್ಯರನ್ನು ಒಳಕ್ಕೆ ಕರೆಸಿಕೊಂಡೆವು!

ಸ್ವಾಮಿಯವರು 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕಾ' ಕೃತಿಯಲ್ಲಿ ಟೊಮೇಟೊ ಹಣ್ಣಿನ ಚರಿತ್ರೆಯ ಬಗ್ಗೆ ಹೇಳುತ್ತಾ ಇಂಗ್ಲೆಂಡಿನಲ್ಲಿ ೧೬ನೆಯ ಶತಮಾನದಲ್ಲಿ ಅದು ಬಳಕಗೆ ಬಂದಿತೆಂದು ತಿಳಿಸಿದ್ದಾರೆ. ನಂತರ ಭಾರತಕ್ಕೆ ಅವರೊಂದಿಗೆ ಆಗಮಿಸಿತು.

'ಹೊರಗಿನದು' ಎಂಬ ಕಾರಣಕ್ಕೆ ಭಾರತೀಯರು ಮೊದಲು ಟೊಮೇಟೊವನ್ನು ಒಳಗೆ ಬರಮಾಡಿಕೊಳ್ಳಲಿಲ್ಲ. ಅದರ ಕೆಂಪು ಬಣ್ಣ; ಅಲ್ಲದೆ ಅದನ್ನು ಹಿಸುಕಿದರೆ ಒಳಗಿನದು ಅಸಹ್ಯರೀತಿಯಲ್ಲಿ ಅಸಹ್ಯ ರೂಪದಲ್ಲಿ ಪಿಚಕ್ಕೆಂದು ಹೊರಬರುತ್ತದೆಯಾದ್ದರಿಂದ ನಮ್ಮ ಕನ್ನಡಿಗರು ಟೊಮೇಟೋವನ್ನು 'ಅವಗೂದೆ ಹಣ್ಣು' ಎಂಬ ಅಸಹ್ಯದ ಹೆಸರಿನಿಂದ ಕರೆದರು!

ಕೆಲವು ಚಟಗಳು ಮನುಷ್ಯನಿಗೆ ಹತ್ತಿಬಿಟ್ಟರೆ ಬಿಡುವುದು ಬಲುಕಷ್ಟ. ಇಂಥ ಚಟಗಳಲ್ಲಿ ಒಂದಾದ ಎಲೆ-ಅಡಿಕೆಯ ಬಗ್ಗೆ ಸ್ವಾಮಿಯವರು ಹೀಗೆ ಹೇಳಿದ್ದಾರೆ:

'ತಾಂಬೂಲಕ್ಕೂ ಕರ್ನಾಟಕ ಸಂಗೀತಕ್ಕೂ ಬಲವಾದ ನಂಟು ಬೆಳೆದು ಬಂದಿದೆ. ಗಾಯಕನು ಸಭೆಯಲ್ಲಿ ಕಾಣಿಸಿಕೊಳ್ಳುವುದಕ್ಕೆ ಮುಂಚೆ ಎಲೆಯನ್ನು ಜಗಿಯಲೇ ಬೇಕು; ಇದರಿಂದ ಶಾರೀರಕ್ಕೆ ಶಕ್ತಿ ಬರುತ್ತದೆಯಂತೆ. ಅಲಂಗುಡಿಯ ಪರಿಮಳರಂಗ ಭಾಗವತರ ತಾಂಬೂಲದ ಡಬ್ಬಿಯನ್ನು ಹೊರುವುದಕ್ಕಾಗಿಯೇ ಒಬ್ಬ ಶಿಷ್ಯನಿದ್ದ. ಇವರ ಕರ್ಕಶ ಶಾರೀರವನ್ನು ಅಡಗಿಸುವಂತೆ ಹಿಮ್ಮೇಳಕ್ಕಿಬ್ಬರು ಶಿಷ್ಯರು. ನಡುನಡುವೆ ಕಾಫಿ ಕೊಡುವುದಕ್ಕೊಬ್ಬ ಶಿಷ್ಯ, ತಂಬೂರಿ ಮೀಟುವುದಕ್ಕೊಬ್ಬ ಶಿಷ್ಯ ಹೀಗೆ ಐವರು ಶಿಷ್ಯರು ಕಛೇರಿಗಳಲ್ಲಿ ಭಾಗವತರ ಹಿಂಬದಿಯಲ್ಲಿ ಸಾಲಾಗಿ ಕುಳಿತುಕೊಳ್ಳುತ್ತಿದ್ದರು. ಕಛೇರಿ ನಡೆಯುತ್ತಿರುವಾಗ ಪರಿಮಳರಂಗರು ಒಂದು ಗುಟುರು ಹಾಕಿದರೆ ಕಾಫಿ, ಎರಡು ಗುಟುರು ಹಾಕಿದರೆ ತಾಂಬೂಲ ಸಪ್ಲೈ ಆಗಬೇಕೆಂಬ ನಿಯಮವನ್ನಿಟ್ಟುಕೊಂಡಿದ್ದರು. ತಾಂಬೂಲವನ್ನು ಜಗಿಯುತ್ತಾ ಹಾಡಿದಾಗ ಅವರ ಬಾಯಿಂದ ನುಡಿಯುತ್ತಿದ್ದ ಭಾಷೆ ಯಾವುದಾಗಿರಬಹುದು ಎಂಬುದನ್ನು ಕುರಿತು ಸಭೆಯಲ್ಲಿ ಸರ್ವದಾ ಚರ್ಚೆಯೇ!'

ಸ್ವಾಮಿಯವರು ವಿದ್ಯಾರ್ಥಿಗಳನ್ನು ಕಾಡಿಗೆ ಕರೆದುಕೊಂಡು ಹೋದಾಗ ಅನುಭವಿಸುತ್ತಿದ್ದ ಕಷ್ಟಗಳು ಹಲವು ಬಗೆಯವು. ಅವುಗಳಲ್ಲಿ ಒಂದು ಘಟನೆ ಹೀಗಿದೆ: 'ವಿದ್ಯಾರ್ಥಿಗಳೊಡನೆ ಸಸ್ಯ ಸಂಗ್ರಹಕ್ಕಾಗಿ ಕಾಡಿಗೆ ಹೋಗಿದ್ದಾಗ ನಾಜೂಕಾದ ಕೆಲವು ಹುಡುಗಿಯರು, ಕೊಟ್ಟ ಸೂಚನೆಗಳನ್ನು ಮೀರಿ, ಕಣ್ಣುಕುಕ್ಕುವ ಕೆಂಪುಸೀರೆಗಳನ್ನುಟ್ಟು ಒಟ್ಟು ಕಾಡೆಗೇ ಪರಿಮಳ ಹಬ್ಬುವಂತೆ ಸೆಂಟ್ ಹಾಕಿ, ಸ್ನೊ-ಪೌಡರ್

ಬಳಿದುಕೊಂಡಿದ್ದರಂತೆ. ಇದರ ಪರಿಣಾಮವಾಗಿ ಸ್ವಾಮಿ ಮತ್ತು ನಾಲ್ಕಾರು ಹುಡುಗರು ಆನೆ ಹಿಂಡೊಂದರ ಕೋಪಕ್ಕೆ ಬಲಿಯಾಗಬೇಕಾಯಿತಂತೆ. ಹೇಗೇ ಓಡಿದರೂ, ಏನೇ ಮಾಡಿದರೂ ಬೆನ್ನಟ್ಟಿಬರುತ್ತಿರುವ ಆನೆಗಳ ಹಿಂಡಿನಿಂದ ತಪ್ಪಿಸಿಕೊಳ್ಳಲಾಗಲಿಲ್ಲವಂತೆ. ಕೊನೆಗೆ ಅವರೆಲ್ಲಾ ತಮ್ಮ ಬಟ್ಟೆಗಳನ್ನು ಎಸೆದು, ಆಗತಾನೆ ಬಿದ್ದಿದ್ದ ಆನೆ ಲದ್ದಿಯನ್ನು ಮೈಗೆಲ್ಲಾ ಬಳಿದುಕೊಂಡಿದ್ದರಿಂದ ಆನೆಗಳಿಗೆ ಮನುಷ್ಯರ ಗುರುತು ತಿಳಿಯಲಿಲ್ಲವಂತೆ. ಅವರು ಕುಳಿತ ಮರದ ಇಕ್ಕೆಲಗಳಲ್ಲಿ ೨೫ ಆನೆಗಳು ಓಡಾಡುವಾಗ ಕುಳಿತವರ ಎದೆಬಡಿತ ಅನುಭವಿಸಿದವರಿಗೇ ಗೊತ್ತು. ಆಮೇಲೆ ಹತ್ತಿರದ ನೀರಿನಲ್ಲಿ ಎಷ್ಟು ಮೈ ತೊಳೆದರೂ ವಾಸನೆ ಹೋಗಲಿಲ್ಲವಂತೆ. ನಾಲ್ಕು ದಿನಗಳ ನಂತರ ಕಾಲೇಜಿಗೆ ಹಿಂದಿರುಗಿದಾಗ ಪ್ರಿನ್ಸಿಪಾಲರ ಎದುರು ಹಣೆಬರಹ ಹೇಳಿಯೇಬಿಟ್ಟಿತಂತೆ. ಮೂಗಿಗೆ ಕರವಸ್ತ್ರ ಹಿಡಿದ ಪ್ರಿನ್ಸಿಪಾಲರು ಕಾಡಿನಿಂದ ಬರುವಾಗ ಕಾಡುಪ್ರಾಣಿಗಳ ಹಾಗೇ ಬರಬೇಕೇನ್ರೀ? ಚೆನ್ನಾಗಿ ಸೋಪು ಹಾಕಿ ಮೈ ತೊಳೆದುಕೊಳ್ಳಬಾರದೆ? ಎಂದು ಗದರಿಸಿದರಂತೆ. ಎಂಥಾ ಸೋಪಿಗೂ ಜಗ್ಗದ ಲದ್ದಿಯ ಕತೆ ಅವರಿಗೆ ಹೇಗೆ ತಿಳಿಯಬೇಕು?

ಸ್ವಾಮಿಯವರ ಕೃತಿಗಳಲ್ಲಿ ಹೀಗೆ ಹೆಜ್ಜೆ ಹೆಜ್ಜೆಗೂ ಲಘು ಹಾಸ್ಯ, ವಿಡಂಬನೆ, ವ್ಯಂಗ್ಯ ಕಂಡುಬರುತ್ತದೆ. ಹಾಸ್ಯ ಪ್ರಸಂಗಗಳು ಸಾಂದರ್ಭಿಕವಾಗಿ ಬರುವುದರಿಂದ ಆ ಸಂದರ್ಭ ಸನ್ನಿವೇಶದಲ್ಲಿ ಅವು ಅತ್ಯುತ್ತಮ ಎನಿಸುತ್ತದೆ. ಅವುಗಳನ್ನು 'ಒಂದು ಲೇಖನದ ಮಿತಿ'ಯಲ್ಲಿ ಹೇಳುವುದು ಕಠಿಣವಾದ ಕಾರ್ಯ. ಆದರೆ ಸ್ವಾಮಿಯವರ ಕೃತಿಗಳ ಓದು, ಓದುಗನಿಗೆ ಹಾಸ್ಯದ ರಸದೌತಣ ನೀಡುತ್ತವೆಯೆಂಬುದಂತೂ ನಿಜ.



# ಅ.ರಾ.ಸೇ. ಎಂಬ ಅದ್ಭುತ ಅಪರೂಪದ ವಿಡಂಬನ ವಿದ್ವಾಂಸ

ಭುವನೇಶ್ವರಿ ಹೆಗಡೆ

ಸಾಹಿತ್ಯದ ಯಾವುದೇ ಪ್ರಕಾರವಾಗಲಿ ಲೇಖಕನು ಆ ಭಾಷೆಯಲ್ಲಿನ ಸಾರ ಸತ್ವಗಳನ್ನು ಅಧ್ಯಯನದ ಮೂಲಕ ಅರಿತಿದ್ದರೆ ಅವನ ಬರಹಗಳಲ್ಲಿ ತಾನೇ ತಾನಾಗಿ ಒಂದು 'ಗುರುತ್ವ' ಪ್ರಕಟವಾಗುತ್ತದೆ. ಸಾಹಿತಿಯ ಪ್ರಜ್ಞೆಯ ಬೊಕ್ಕಸ ಅಧ್ಯಯನ ಶ್ರೀಮಂತಿಕೆಯಿಂದ ಕಂಡಿದ್ದರೆ ಪುರಾಣ ಕಾವ್ಯಗಳ ಸೆಳಕುಗಳು ಅಲ್ಲಿ ಮಿಂಚುತ್ತವೆ, ದೇವಾನುದೇವತೆಗಳು ವಿಹರಿಸುತ್ತಾರೆ. ದೇವದಾನವರ ಹುಡುಕಾಟ, ಮಾನವರ ಮೇಲಾಟಗಳೆಲ್ಲ ಮನರಂಜನೆಗೆ ಸಿಗುತ್ತವೆ. ಒಟ್ಟಾರೆ ಅಂಥದೊಂದು ಓದು ತುಂಬು ತೃಪ್ತಿಯನ್ನೊದಗಿಸುತ್ತದೆ.

ಇಂತಹ ವೈವಿಧ್ಯಮಯ ಅಧ್ಯಯನ ಸಮೃದ್ಧಿಯನ್ನು ತಮ್ಮ ಹಾಸ್ಯ ಬರವಣಿಗೆಗೆ ಬಳಸಿಕೊಂಡು ಕನ್ನಡಿಗರಿಗೆ 'ಉತ್ಕೃಷ್ಟ ಗುಣ ಮಟ್ಟದ' ಹಾಸ್ಯವನ್ನು ಉಣಬಡಿಸಿದ ಕೆಲವೇ ಕೆಲವು ಬುದ್ಧಿವಂತ ಹಾಸ್ಯ ಲೇಖಕರಲ್ಲಿ ಅ.ರಾ.ಸೆ ಪ್ರಮುಖರು ಎಂದು ನನ್ನ ಭಾವನೆ. ಲಾಂಗೂಲಾಚಾರ್ಯರನ್ನು ಹೊರತುಪಡಿಸಿದರೆ ಬುದ್ಧಿ-ಭಾವಗಳ ತಾಕಲಾಟವಿಲ್ಲದೇ (ಬುದ್ಧಿಗೇ ಪ್ರಾಶಸ್ತ್ಯ) ತಮ್ಮ ಅಪಾರ ಜ್ಞಾನದ ಹೊಳಪಿನಿಂದ ಹಾಸ್ಯವನ್ನು ಮಿಂಚಿಸಿದ ಇಂಥ ಲೇಖಕರು ವಿರಳವೆಂದೇ ಹೇಳಬಹುದು.

ಅ.ರಾ.ಸೆ ಯವರ ವಿಡಂಬನೆಯ ಶೈಲಿ ಅಂಥದೊಂದು ಗಂಭೀರ ಮೋಹಕತೆಯನ್ನು ಹೊಂದಿದೆ. ಪಂಪ, ರನ್ನ. ಕಾಳಿದಾಸ, ಕುಮಾರವ್ಯಾಸಾದಿಗಳನ್ನು ಉದ್ಧರಿಸಿ ತರುವಷ್ಟೇ

ಸಹಜವಾಗಿ ಕೀಟ್ಸ್, ಶೇಕ್ಸ್‌ಪಿಯರ್‌ರನ್ನು ಜತೆಗಿಟ್ಟುಕೊಳ್ಳುತ್ತಾರೆ. ಅವರ ವಾಗ್ಝರಿ ಸಾಹಿತ್ಯ ಕ್ಷೇತ್ರಕ್ಕಷ್ಟೇ ಸೀಮಿತವಾಗುವುದಿಲ್ಲ. ವಿಜ್ಞಾನ, ಕ್ರೀಡೆ, ಶಿಕ್ಷಣ, ರಾಜಕೀಯ, ಸಮಾಜಸೇವೆ, ಸೌಂದರ್ಯೋಪಾಸನೆ, ಢೋಂಗಿ ಅಧ್ಯಾತ್ಮ, ಕಪಟ ಕವಿತ್ವ.... ಹೀಗೆ ಬದುಕಿನಲ್ಲಿರಬಹುದಾದ ಎಲ್ಲ ಸಾಧ್ಯತೆಗಳಲ್ಲೂ ವಿನೋದದ ಸೆಲೆಗಳನ್ನು ಕಂಡರಿಸುತ್ತಾರೆ.

ನಲವತ್ತರ ದಶಕದಲ್ಲಿ ಕೊರವಂಜಿ ಗರಡಿಯಲ್ಲಿ ಮೂಡಿಬಂದ ಅ.ರಾ.ಸೆ ೧೯೫೧ ರಿಂದ ೧೯೬೭ರ ತನಕ ಕೊರವಂಜಿಗೆ ಸತತವಾಗಿ ಬರೆದು ನಂತರ೬೧ ರಿಂದ ೯೨ರವರೆಗೂ ಪ್ರಜಾವಾಣಿ ಸುಧಾ ಮಯೂರಗಳಲ್ಲಿ ಓದುಗರನ್ನು ತಣಿಸಿದರು. ತುಷಾರ, ಉದಯವಾಣಿಗಳಂಥ ಪತ್ರಿಕೆಗಳೂ ವಿಶೇಷಾಂಕಗಳು ಅ.ರಾ.ಸೆ ಬರಹಗಳಿಂದ ಅಲಂಕೃತಗೊಂಡಿವೆ.

ಚಿತ್ರದುರ್ಗ ಜಿಲ್ಲೆಯ ಭರಮಸಾಗರದ ಅ.ರಾ.ಸೇತೂರಾಮ ಅಧ್ಯಾಪನ ವೃತ್ತಿಯಲ್ಲಿದ್ದು ನಿವೃತ್ತರಾದವರು. ಆದರೆ ಅಧ್ಯಯನಕ್ಕೆ ನಿವೃತ್ತಿ ನೀಡದವರು. ಹಾಸ್ಯ ಲೇಖನಗಳನ್ನು ಸೃಜಿಸಿದಷ್ಟೇ ಸಹಜವಾಗಿ ರಾಮಾಯಣ ಮಹಾಭಾರತದಂಥ ಕೃತಿಗಳಿಗೆ ಭಾಷ್ಯವೂ ಸೇರಿದಂತೆ ಭಾರತೀಯ ವೇದವೇದಾಂತಗಳ ಬಗ್ಗೆಯೂ ನಿಖರವಾದ ಅಭಿಪ್ರಾಯ ಮಂಡಿಸುವಂಥ ಬೆರಗು ಹುಟ್ಟಿಸುವ ಜ್ಞಾನ ಭಂಡಾರ ಇವರದ್ದು.

ಅ.ರಾ.ಸೆ. ಅವರ ಕೃತಿಗಳ ವಿವರ (ಲಭ್ಯವಿದ್ದ ಮಟ್ಟಿಗೆ) ಹೀಗಿದೆ.

ಕಾದಂಬರಿ: ತದನಂತರ, ಯಥಾಗತ, ಸೊಗದಿರುಳು ನಲ್ಮಗವು

ಹಾಸ್ಯ ಲೇಖನ ಸಂಗ್ರಹ: ಸುಳಿನಗು, ಮುಗಿಲ ಹಳ್ಳಿಯ ಖಬ್ಬೈರು, ಚಿರತೆವೀರನ ಕೋಟೆ, ಸೀನಣ್ಣನ ರೊಮಾನ್ಸ್.

ಕವನ ಸಂಕಲನ: ನಗೆ ಮುಗಿಲು, ಸುಸ್ಮಿತ

ವೇದಾಂತ ಸಂಬಂಧಿತ:ಬ್ರಹ್ಮ ಸೂತ್ರಗಳು, ಅನುಭವಾಮೃತ, ದೇವಿಮಹಾತ್ಮೆ ಕುಮಾರವ್ಯಾಸ ಭಾರತದ ೮೬೦ ಪದ್ಯಗಳಿಗೆ ತಾತ್ಪರ್ಯ ಬರೆದುಎರಡು ಭಾಗಗಳಲ್ಲಿ ಪ್ರಕಟಿಸಿದ್ದಾರೆ.

ಪ್ರಾರಂಭದಲ್ಲಿ ಹೇಳಿದಂತೆ ಹಾಸ್ಯ ಲೇಖಕನೊಬ್ಬ ಉಳಿದ ಶಾಸ್ತ್ರೀಯ ಅಭ್ಯಾಸಗಳನ್ನೂ ಕೈಗೊಂಡಿದ್ದರೆ ಅವನ ಹಾಸ್ಯದ ಹೂರಣಕ್ಕೆ ಗಟ್ಟಿಪುಷ್ಟಿ ದೊರೆಯುತ್ತದೆ –ಎಂಬುದಕ್ಕೆ ಆಧಾರ ಅ.ರಾ.ಸೆ ಅವರ ಶಾಸ್ತ್ರೀಯ ಆಸಕ್ತಿಗಳ ಪಟ್ಟಿಯೇ ಆಗಿದೆ.

ಅ.ರಾ.ಸೆ ಅವರ ಬಹುಶ್ರುತತ್ವಕ್ಕೆ (ಮಹಾಭಾರತ ರಾಮಾಯಣವೇ ಮೊದಲಾದ ಕಾವ್ಯಗಳ ಯಾವ ಭಾಗವನ್ನು ಎಲ್ಲಿ ಬೇಕಾದರೂ ತಂದು ಅನ್ವಯಿಸಬಲ್ಲರು, ತಿಣುಕಾಟವಿಲ್ಲದ ಕಚಗುಳಿ ಇಡಬಲ್ಲರು) ಅವರ 'ಕೇಳು ಜನಮೇಜಯ' ಲೇಖನ ಸೊಗಸಾದ ಉದಾಹರಣೆ ಆಗಬಲ್ಲದು.

'ಕೇಳು ಜನಮೇಜಯ . . . ಧರಿತ್ರೀಪಾಲ, ರಾಯ್‌ಕೇಳ್, ಭೂಪಕೇಳ್, ಪರೀಕ್ಷಿತ ತನಯ ಕೇಳ್ . . . . ಎಂದು ಪರಿಪರಿಯಾಗಿ ಸಂಬೋಧನೆ ಮಾಡುವಾಗ ವೈಶಂಪಾಯನ ಮಹರ್ಷಿಯ ಮನಸ್ಥಿತಿ ಹೇಗಿತ್ತು ಅಂಥ ಪ್ರಸಂಗ ಏಕೊದಗಿಬಂದವು . . ಎಂಬುದು ಕುಮಾರವ್ಯಾಸ ಭಾರತವನ್ನೋದಿದ, ಕೇಳಿದ ಎಲ್ಲ ಸಜ್ಜನರ ಮನಸ್ಸಿನಲ್ಲೇಳುವ ಸಂಶಯಗಳು' ಎನ್ನುವ ಅರಾಸೆ ತಾನು ಆ ವಿಷಯವ ಕುರಿತು ಸ್ವಲ್ಪ ಸಂಶೋಧನೆ ನಡೆಸಿದ್ದೇನೆ. ಸಹೃದಯರು ಸಾವಧಾನದಿಂದ (ಜನಮೇಜಯನಂತೆ ಪ್ರಕಟಿಸದೆ) ಪರಿಶೀಲಿಸಬೇಕು . . . . ಎಂದು ಪ್ರಾರಂಭಿಸುತ್ತಾರೆ.

. . . . ಜನಮೇಜಯನು ಸಂಕಟಕ್ಕೆ ಸಿಕ್ಕಿ ಭಾರತವನ್ನು ಕೇಳುತ್ತಿದ್ದ ವ್ಯಕ್ತಿ. ಅವನದೇ ಕಥೆಯಾದ ಮೇಲೆ ಬೇರೆಯವರ ಕಥೆಯಲ್ಲಿ ಅವನಿಗೆ ಆಸಕ್ತಿ ಇರಲಿಲ್ಲ. ಅದು ವೈಶಂಪಾಯನನಿಗೂ ಗೊತ್ತು. ಆದರೂ ಗುರುಗಳಾದ ವ್ಯಾಸರ ಆಜ್ಞೆಯಂತೆ ಕಥೆಯನ್ನು ಹೇಳಬೇಕಾಗಿತ್ತು. ದಿನಕ್ಕೆ ಒಂದು ಸಂಧಿಯಷ್ಟೇ ಕಥೆ ಹೇಳಿದರು ಹತ್ತೆಂಟು ಬಾರಿ ಕೇಳು ಜನಮೇಜಯ ಎಂದು ಎಬ್ಬಿಸಿಕೊಳ್ಳದಿದ್ದರೆ ಕಥೆ ಸಾಗುತ್ತಿರಲಿಲ್ಲ. ಅಂಕಿ ಸಂಕಿಗಳಲ್ಲಿ ಆಸಕ್ತರ ತೃಪ್ತ್ಯರ್ಥವಾಗಿ ೮೯೪೩ ಭಾರಿ ವೈಶಂಪಾಯನನು ಜನಮೇಜಯನನ್ನು ಎಬ್ಬಿಸಿ ಕಥೆ ಮುಂದುವರಿಸಿದ್ದಾನೆಂಬ ಅಂಶವನ್ನು ನಾವು ಕಂಡುಹಿಡಿದಿದ್ದೇವೆ'.

. . . .ಹೀಗೆ ಸಾಗುವ ಅರಾಸೆ ಲಹರಿಯನ್ನು ಓದಿ ಮುಗಿಸಿದಾಗ ಕುಮಾರವ್ಯಾಸ ಭಾರತವನ್ನು ಒಮ್ಮೆ ಓದಿಯೇ ನೋಡಬೇಕೆಂಬ ರುಚಿಯನ್ನು ಆಸಕ್ತರಿಗೆ ಹತ್ತಿಸದೇ ಬಿಡದು. ಪ್ರತಿಯೊಂದು ಪರ್ವ, ಸಂಧಿ ಭಾಗಗಳು ನಮಗೆ ಪರಿಚಿತವಾಗಿ ಬರಿಯ ಹಾಸ್ಯ ಲೇಖನವನ್ನೋದಿದ ಖುಷಿಗಿಂತಲೂ ಮಿಗಿಲಾದ ಕಾವ್ಯಾಸ್ವಾದನೆಯ ತೃಪ್ತಿಯನ್ನೂ ಪಡೆಯಲು ಸಾಧ್ಯ. ಇದು ಅ.ರಾ.ಸೆ ಯವರಲ್ಲಿ ನಾನು ಗುರುತಿಸಿದ ಸ್ಪೆಷಾಲಿಟಿ.

ವಿಜ್ಞಾನ ಅರಾಸೆಯವರ ಇನ್ನೊಂದು ಆಸಕ್ತಿಯ ಕ್ಷೇತ್ರ. ಹಾಗೆ ನೋಡಿದರೆ ಅವರ ಆಸಕ್ತಿಗಳನ್ನನುಸರಿಸಿ ಅವರ ಒಟ್ಟು ಹಾಸ್ಯ ಪ್ರಬಂಧಗಳನ್ನು ಕರಾರುವಾಕ್ಕಾಗಿ– ಪುರಾಣ ಕಾವ್ಯಗಳ ಕುರಿತಾದವು, ವಿಜ್ಞಾನದ ಮೇಲಿನವು, ಕ್ರೀಡೆಯ, ಶಿಕ್ಷಣ ವ್ಯವಸ್ಥೆ, ಸಂಗೀತ, ಫಿಲಾಸಫಿ, ಭಗ್ನಪ್ರೇಮ . . . . . ಹೀಗೆ ವಿಭಾಗಿಸಿಕೊಳ್ಳಲೂ ಸಾಧ್ಯವಿದೆ.

ಅವರ 'ವಿಜ್ಞಾನ ವಿಚಾರ ವಿಹಾರ' ಲೇಖನದಲ್ಲಿ . . . ನಮ್ಮ ಐನ್‌ಸ್ಟೀನನನ್ನೇ ತೆಗೆದುಕೊಳ್ಳಿ ಅವನೇನೋ ಎಚ್ಚರದಪ್ಪಿ ಸಾಪೇಕ್ಷವಾದ ಏಕಕ್ಷೇತ್ರ ಪ್ರಮೇಯಗಳನ್ನು ಕಂಡು ಹಿಡಿದೆ ಎಂದು ಹೇಳಿದ. ನೆಹರೂ ತಂದ ಮಸೂದೆ ಕಾಂಗ್ರೆಸ್ ಸಭೆಯಲ್ಲಿ ಪಾಸಾದಂತೆ ಸಾಪೇಕ್ಷವಾದವೂ ಪಾಸಾಯಿತು . . . .

ಈ ರಿಲೇಟಿವಿಟಿಯ ಕಲಸು ಮೇಲೋಗರಗಳ ಫಸ್ಟ್ ಎಂಡ್ ಸೆಕೆಂಡ್ ಎಪ್ರಾಕ್ಸಿಮೇಶನ್ನುಗಳನ್ನು ಹಗುರಾಗಿ ಛೇಡಿಸುತ್ತ E=mc2 ಎಂಬ ಸಮೀಕರಣ ಹುಟ್ಟಿ ಅದರ ಮರೆಯಲ್ಲಿ ಹೇಗೆ ಸಾವಿರಾರು ಜನ ಹೊಟ್ಟೆಹೊರೆದುಕೊಳ್ಳುತ್ತಿದ್ದಾರೆ ಎಂಬುದನ್ನೂ, ಪಿಎಚ್‌ಡಿ, ಡಿಎಸ್‌ಸಿಗಳಿಗೂ ಅರಗಿಸಿಕೊಳ್ಳಲಾರದ ರಹಸ್ಯವನ್ನು ಬಿಡಿಸುತ್ತಾರೆ. E ಎಂದರೆ ಚೈತನ್ಯ ಇದು ಯಾವುದಕ್ಕೆ ಸಮ? Mc2ಗೆ. m ಎಂದರೆ ಮಸಾಲೆದೋಸೆ ಇಂಟು c ಎಂದರೆ ಕಾಫಿ ಇಂಟು c ಎಂದರೆ ಸಿಗರೇಟು.

ದೆಟ್‌ಈಸ್

ಚೈತನ್ಯ = ಮಸಾಲೆದೋಸೆ x ಕಾಫಿ x ಸಿಗರೇಟು.

ಇದನ್ನ ತಿಳಿಯಲು ಕಾಲೇಜು ಮೆಟ್ಟಿಲು ಹತ್ತಬೇಕಿಲ್ಲ. ಅದಕ್ಕೇ ಪಂಚತಂತ್ರದಲ್ಲಿ ಹೇಳಿದ್ದು:

Scholorship is less than Sense

Therefore seeks intelligence.

ಇದು ಅ.ರಾ.ಸೆ ಚಿಂತನೆಯ ದಿಕ್ಕು.

ಇವರ ಮುಗಿಲಹಳ್ಳಿ ಕರ್ನಾಟಕದ ವಾಣಿಜ್ಯ ಕೇಂದ್ರ. ದಾವಣಗೆರೆಯ ಸುತ್ತ ಮುತ್ತಲಿನ ಯಾವುದೋ ಹಳ್ಳಿ. ಮೆಣಸಿನಕಾಯಿ ವ್ಯಾಪಾರಿಗಳು, ಹೊಟೇಲ್ ಮಾಲೀಕರು, ಟ್ರಕ್ ಡ್ರೈವರ್‌ಗಳು, ಅಂಗಡಿಯೋರು ಮಡಿ ಮಾಲಕ್ಷ್ಮಕ್ಕಾಂದಿರು . . . . ಎಲ್ಲವೂ ಇವತ್ತಿಗೂ ಜೀವಂತವಾಗಿ ಲವಲವಿಕೆಯಿಂದ ಓಡಾಡಿಕೊಂಡಿರುವ ಪಾತ್ರಗಳು.

ಮುನಿರಾಬಾದ್ ಫಿಲಾಸಫಿ ಎಂಬ ಲೇಖನ ನೋಡಿ:

–ಪ್ಲೇಟೋ, ಕಾಂಟ್, ಸ್ಪಿನೋಜ, ಷೋಪನ್‌ಹಾರ್ . . . ಮೊದಲಾದವರ ಫಿಲಾಸಫಿಗೆ ಮಣ್ಣು ಹೊತ್ತು ಅವರ ಕಬ್ಬಿಣದ ಕಡಲೆಗಳನ್ನಗೆದು ಹೊಸ ಹಲ್ಲು ಕಟ್ಟಿಸಿಕೊಂಡು ನಾವೀಗ ಮತ್ತೇ ಭಾರತೀಯ ತತ್ವಶಾಸ್ತ್ರವನ್ನು ಅಭ್ಯಸಿಸುತ್ತಿದ್ದೇವೆ, ಎನ್ನುವ ಅ.ರಾ.ಸೆ., ಫಿಲಾಸಫಿ ಎಂದರೆ ಬಾಳೆಹಣ್ಣು ಎಂದು

ತಿಳಿದು ಕೊಂಡಿರಬಹುದಾದ ಮಹನೀಯರ ಭ್ರಮನಿರಸನಕ್ಕಾಗಿ ಒಂದು ಅತ್ಯಂತ ಸುಲಭವಾಕ್ಯವನ್ನು ಉದಾಹರಿಸುತ್ತಾರೆ.

'The value of Philosophic training lies as little in inducing a person to do what otherwise he would not have done, as in instructing him in what otherwise he would not have known; it consists essentially in making him what he was not before'

(ಈಗಲಾದರೂ ತಿಳಿಯಿತೇ ಫಿಲಾಸಫಿ ಎಲ್ಲರಿಗೂ ಅಲ್ಲ ಎಂಬುದು) ಇಂದ್ರಿಯಗೋಚರವಾದುದೆಲ್ಲಾ ಮಾಯೆ ಎಂದು ಶಂಕರಾಚಾರ್ಯರೂ 'ಸಬ್ಬಂ ದುಕ್ಖಂ' ಎಂದು ತಥಾಗತನೂ ಹೇಳಿದ್ದಾರೆ. ವೇದಾಂತಾಚಾರ್ಯರಾದ ನಮ್ಮೂರಿನ ಭಂಗೀ ಗುರುಗಳು ಹೀಗೆ ಹೇಳಿದ್ದಾರೆ–ಎನ್ನುತ್ತಾರೆ.

'ನೀ ಏನ್ ನೋಡ್ತಿದಿ ಏನ್ ಮಾಡ್ತಿದಿ, ಏನ್ ಅನುಭವಿಸ್ತಿದಿ ಅದೆಲ್ಲಾ ಅದೇ ಅದಾ. ನೀ ಯಾತ್ರದಸಿಂದ ಮಾಡ್ತಿದಿ, ಯಾತ್ರದಸಿಂದನುಭವಾಸ್ತಿದಿ, ಆ ವಾಸನಾರೂಪದ ಮನಸ್ನ ನೀ ನಾಶ ಮಾಡ್ತಿದಿ ಅಂದ್ರ ನೀ ಅದೇ ಆಗ್ತಿದೀ ಮತ್ತು ಅದು ಹ್ಯಾಂಗದಪಾ ಅಂತ ಕೇಳಿದ್ರ ಸಹಾಜ್ ಆನಂದ್ರೂಪಾಗ್ಯದ'

ತುಂಗಭದ್ರಾ ಆಣೆಕಟ್ಟಿನ ಮ್ಯಾಲೆಕೂತ ಕಾವಿಧಾರಿಯೊಬ್ಬ ಮಾತಾಡುವ ಭಾಷೆ ಇದೇ.

ಕ್ರಿಕೆಟ್ಟಿನ ಕುರಿತು ಅ.ರಾ.ಸೆ ಆಸಕ್ತಿ (ಕಾರಿಡಾರ್ ಕ್ರಿಕೆಟ್) ಆಶ್ಚರ್ಯ ಹುಟ್ಟಿಸುವಂತಿದೆ. ಅವರ ಪ್ರಕಾರ ಇಂಡಿಯಾದ ಕ್ರಿಕೆಟ್ಟಿನ ಇತಿಹಾಸ

It is a sad story of

dropped catches and missed chances

ಅ.ರಾ.ಸೆ ಯವರ ಲೇಖನಗಳಷ್ಟೇ ಅವರ ಅಣಕವಾಡುಗಳು ಅವರ ವಿಡಂಬನಾತ್ಮಕ ಶೈಲಿಯಲ್ಲಿ ಚಿತ್ರಿತವಾದ ಭಗ್ನ ಪ್ರೇಮ ಪ್ರಕರಣಗಳೂ ಯಥೇಚ್ಛವಾಗಿವೆ ಸೊಗಸಾಗಿವೆ (ಏನಂತತಲೇ ಮಂಗ್ಯಾ ಲೇಖನದಷ್ಟೇ ಸೊಗಸಾಗಿ ಚಿತ್ರಿತವಾದ ಚುಟುಕು ಕುಟುಕುವಾಡುಗಳು ಹೇರಳವಾಗಿವೆ) ಇವರ 'ಮದುವೆಯಾದರು ಹೋದರು' ಎಂಬ ವಿಡಂಬನಾ ಕವಿತೆ (ನಗೆಮುಗಿಲು) ಭಾರತೀಯ ಯುವತಿಯರೆಲ್ಲರೂ ಓದಬೇಕಾದ ಕವಿತೆ. ಅ.ರಾ.ಸೆ ಒಸಗೆಯಲ್ಲಿನ ಒಂದು ಕವಿತೆ 'ಕವಿಚರಮ' ಓದಿದಾಗ ಕುಕವಿಯೊಬ್ಬನಿಗೆ ಇದಕ್ಕಿಂತ ಸರಿಯಾದ ಶ್ರದ್ಧಾಂಜಲಿ ಸಲ್ಲಿಸಲು ಸಾಧ್ಯವಿದೆಯೆ? ಎನ್ನಿಸದು.

ಇವ ಸದ್ಯ ಸತ್ತನ್
ಸತ್ತ ಮೇಲಿನ್ನೊರ್ಮ್ಮೆ ಪುಟ್ಟನ್
ಇರುವನಕ ಕಾವ್ಯಧರ್ಮವನಿವನು ಸುಟ್ಟನ್
ಕಂಡವರ ಅಕ್ಕಿಯನು ಕದ್ದಡಿಗೆ ಅಟ್ಟನ್
ನೂರಾರು ಪುಸ್ತಕದಿ ಹೊಲಸ ತುಂಬಿಟ್ಟನ್
ಅದ ಕೊಂಡು ಓದಿದವನಕಟಕಟ ಕೆಟ್ಟನ್
ಅಂತೂ ಕೊನೆಗೊರ್ಮ್ಮೆ ಗೋತಾ ಹೊಡೆದು ಬಿಟ್ಟನ್
(ಧೈರ್ಯದಿಂದಿರು ಮನವೆ ಅವ ಮರಳಿ ಪುಟ್ಟನ್)
ಪೂರ ಸತ್ತನು ವರಮ  wor(a)m(a)
ಅವನಿಗಿದೆ ಚರಮ

ಗೋರಿ ಒಳಗಿರುವ ಕವಿಮಹಾಶಯನಿಗೆ ಹೇಗಾಗಬೇಡ!

ನಮ್ಮ ಸಮಾಜದಲ್ಲಿನ ವಿಸಂಗತಿ ಡಾಂಭಿಕತೆ ನರಮನುಷ್ಯರ ವಿವೇಕಶೂನ್ಯ ಬಡಾಯಿಗಳು, ಖಾಲಿಕೊಡದ ಸಪ್ಪಳಗಳು . . . ಇವನ್ನೆಲ್ಲ ಕಂಡ ಅ.ರಾ.ಸೆ ಒಳಗೊಳಗೆ ಕ್ರುದ್ಧರಾಗುತ್ತಾರೆ. ಆದರೆ ಅದನ್ನವರು ವ್ಯಕ್ತಪಡಿಸುವ ರೀತಿ ಮಾತ್ರ ಅ.ರಾ.ಸೆಯದೇ ಆದ ಶೈಲಿಯಲ್ಲಿ ಕೊರವಂಜಿಯ ಜನಕ ರಾ.ಶಿ. ಒಮ್ಮೆ ಅ.ರಾ.ಸೆ ಬಳಿ,

‘ಅ.ರಾ.ಸೆ. ನೀನು ಅಮೆರಿಕಾದಲ್ಲಿ ಹುಟ್ಟಿದ್ದರೆ ನ್ಯೂಯಾರ್ಕರ್ ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿರುತ್ತಿದ್ದೆ’  ಎಂದು ಪ್ರಶಂಸಿದ್ದರಂತೆ

ಈ ಮಾತನ್ನು ತಮ್ಮ ‘ಬೆಡಗನಾಡ ನಶೀಬು’ ಲೇಖನದಲ್ಲಿ ವಿಡಂಬಿಸಿಕೊಂಡಿದ್ದಾರೆ. ಭಾರತದ ಪ್ರತಿಭಾವಂತರ ಪಾಡನ್ನು ಉತ್ಪ್ರೇಕ್ಷೆಯಿಲ್ಲದೆ ವಿಡಂಬಿಸಿ ನಗು ತರಿಸುತ್ತಲೇ ವಿಷಾದವನ್ನು ಹುಟ್ಟಿಸುತ್ತದೆ, ಈ ಲೇಖನ.

ಭಾರತೀಯ ತತ್ವಶಾಸ್ತ್ರದ ಆಳಜ್ಞಾನ ಹೊಂದಿದ ಅಪ್ಪಟ ದೇಸೀಯ ನೆಲೆಯಲ್ಲಿ ಅರಳಿದ ಅ.ರಾ.ಸೆ. ಚಿಂತನಾಕ್ರಮ ಎಲ್ಲಿಯೂ ಉಪದೇಶದ ಹಾದಿ ಹಿಡಿಯುವುದಿಲ್ಲ. ನಗು ನಗುತ್ತ ಓದಿ ಮುಗಿಸಿ ಮೇಲಿಟ್ಟ ಬಳಿಕವೂ ನಮ್ಮನ್ನು ಗಾಢವಾಗಿ ಆವರಿಸಿಕೊಳ್ಳುವ ಒಂದು ವಿಷಾದ, ಚಿಂತನೆಗೆ ಹಚ್ಚುವ ಆರೋಗ್ಯಕರ ಸಂದೇಶ ಕೊನೆಯಲ್ಲಿ ನಮಗೆ ಸಿಕ್ಕಿರುತ್ತದೆ. ಹಾಸ್ಯಕ್ಕೆ–ವಿಡಂಬನೆಗೆ ಇದಕ್ಕಿಂತ ಮಹತ್ಸಾಧನೆ ಬೇಕೇ?



# ದಾಶರಥಿ ದೀಕ್ಷಿತ್

## ಹೇಮ ಶ್ರೀಕಂಠ

ತಾವೂ ನಕ್ಕು ಎಲ್ಲರನ್ನೂ ನಗಿಸುತ್ತಿರುವ ನಮ್ಮ ಕನ್ನಡ ಮಾತೆಯ ಹೆಮ್ಮೆಯ ಪುತ್ರ, ಶ್ರೀ ದಾಶರಥಿ ದೀಕ್ಷಿತರವರು. ದೀಕ್ಷಿತ್ ಅವರು ಜನವರಿ ತಿಂಗಳ ೧೮ನೆಯ ತಾರೀಖು ೧೯೨೧ರಲ್ಲಿ ಕರ್ನಾಟಕದ ಹಿರಿಯೂರಿನಲ್ಲಿ ಜನಿಸಿದರು. ಇವರಿಗೆ ನಾಲ್ಕು ಜನ ಸೋದರಿಯರು ಹಾಗೂ ಇಬ್ಬರು ಸೋದರರು. ದಾಶರಥಿಯವರನ್ನು ಮನೆಯವರು ಪ್ರೀತಿಯಿಂದ 'ದಾಸಿ' ಎಂದು ಕರೆಯುತ್ತಿದ್ದರು. ಅವರ ತಂದೆಯ ಹೆಸರು ಬಾಲಾಜಿ ದೀಕ್ಷಿತರು ಮತ್ತು ತಾಯಿಯ ಹೆಸರು ರಂಗೂಬಾಯಿ. ತಂದೆ ಶಿರಸ್ತೆದಾರರಾಗಿದ್ದರು. ಅವರಿಗೆ ಊರೂರು ಸುತ್ತುವ ಕೆಲಸ. ಹಾಗಾಗಿ ದಾಶರಥಿ ದೀಕ್ಷಿತರಿಗೆ ಪುಟ್ಟ ವಯಸ್ಸಿನಲ್ಲೇ ವಿವಿಧ ಊರಿನ ವಿವಿಧ ಜನಗಳ ಜೀವನದ ಹಲವು ಮುಖಗಳ ಪರಿಚಯ. ನಾಟಕ ಕಂಪನಿಯವರು ಊರುಗಳಿಗೆ ಬಂದಾಗ, ಪುಟ್ಟ ದಾಶರಥಿ ಹೆಚ್ಚು ಕಡಿಮೆ ಪ್ರತಿದಿನ ಎಲ್ಲಾ ನಾಟಕಗಳಿಗೂ ಹೋಗಿ ನೋಡುತ್ತಿದ್ದನಂತೆ. ಹೀಗಾಗಿ ಮಕ್ಮಲ್ ಟೊಪಿ, ದೇವದಾಸಿಯಂತಹ ನಾಟಕಗಳ ಮಟ್ಟುಗಳನ್ನು ಅದ್ಭುತವಾಗಿ ಹಾಡುತ್ತಿದ್ದನಂತೆ. ಹಾರ್ಮೋನಿಯಂ, ಬುಲ್ ಬುಲ್ ತರಂಗ್‌ಗಳನ್ನು ಸೊಗಸಾಗಿ ನುಡಿಸುವುದನ್ನು ಕಲಿತನಂತೆ.

ಎಸ್. ಎಸ್.ಎಲ್.ಸಿ. ಓದುವುದಕ್ಕೆ ಚಿತ್ರದುರ್ಗಕ್ಕೆ ಹೋದಾಗ ತ.ರಾ.ಸು. ಅವರ ಸ್ನೇಹವಾಯಿತು. ಮೆಟ್ರಿಕ್ ಮುಗಿಸಿದ ಕೂಡಲೆ ತಂದೆಯರ ಆಣತಿಯಂತೆ ನೌಕರಿ

ಓಡಿಯಲು ಬೆಂಗಳೂರಿಗೆ ಬಂದರು. ಅಣ್ಣ ಸೋಮಸುಂದರ ದೀಕ್ಷಿತರ ಶಿಫಾರಸ್ಸಿನಿಂದ ಜಿ.ಇ.ಎಫ್.ನಲ್ಲಿ ತಿಂಗಳಿಗೆ ಹದಿನೈದು ರೂಪಾಯಿ ಸಂಬಳದ ಕೆಲಸ ಹಿಡಿದರು. ಕೆಲವೇ ದಿನಗಳಲ್ಲಿ ಸಂಬಳ ಕಡಿಮೆ ಎಂದು ಮನವರಿಕೆಯಾಗಿ ಎಚ್.ಎ.ಎಲ್.ನಲ್ಲಿ ನಲವತ್ತೈದು ರೂಪಾಯಿ ಸಂಬಳದ ಕೆಲಸಗಿಟ್ಟಿಸಿದರು. ತಮ್ಮ ಅಕ್ಕನ ಮಗಳು ದಮಯಂತಿಯನ್ನು ಲಗ್ನವಾದರು.

ನಾಡಿಗೇರರು ಹಾಗೂ ದಾಶರಥಿ ದೀಕ್ಷಿತರು ಬಾಲ್ಯ ಸ್ನೇಹಿತರು. ನಾಡಿಗೇರರನ್ನು ದೀಕ್ಷಿತರು ಒಂದು ದಿನ ಬೆಂಗಳೂರಿನ ಬಳೇಪೇಟೆಯಲ್ಲಿ ಸಂಧಿಸಿದರು. ಆ ವೇಳೆಯಲ್ಲಿ ನಾಡಿಗೇರರು ಪ್ರಜಾಮತದ ಉಪಸಂಪಾದಕರಾಗಿದ್ದರು. ಇಬ್ಬರೂ ಹೊಟೇಲಿನಲ್ಲಿ ಕುಳಿತು ತಿಂಡಿ ತಿನ್ನುವಾಗ ತಾವು ಬರೆದಿರುವ ಮೊದಲ ಕಥೆ 'ತಿಂಮ' ವಿಚಾರವನ್ನು ಹೇಳಿದಾಗ, ನಾಡಿಗೇರರು ಅದನ್ನು ತೆಗೆದುಕೊಂಡು ಹೋಗಿ ಓದಿ, ಮೆಚ್ಚಿ ಪ್ರಕಟಿಸಿದರು. ನಂತರ ಹಲವಾರು ಕಥೆಗಳು ಪ್ರಕಟಿತವಾಯಿತು. ಈ ಕಥೆಗಳನ್ನು ಓದಿದ ತ.ರಾ.ಸು. ಅವರು ದೀಕ್ಷಿತರಿಗೆ ಗಂಭೀರ ಸಾಹಿತ್ಯ ಬೇಡ, ಲಘುಬರಹ ಮಾರ್ಗದಲ್ಲಿ ನಡೆ ಎಂದು ಹಿತವಚನ ಹೇಳಿದಾಗ, ದೀಕ್ಷಿತರು ತಮ್ಮ ಬರವಣಿಗೆ ದಿಕ್ಕನ್ನೇ ಬದಲಾಯಿಸಿದರು. ದೀಕ್ಷಿತರ ಮೊಟ್ಟ ಮೊದಲ ಲಘು ಬರಹ ಸಂಗ್ರಹ 'ಪ್ರೇತಸಂಹಾರ'. ಈ ಪುಸ್ತಕ ಓದಿದ ರಾಶಿಯವರು ದೀಕ್ಷಿತರಿಗೆ 'ಕೊರವಂಜಿ' ಪತ್ರಿಕೆಯಲ್ಲಿ ಖಾಯಂ ಸ್ಥಾನ ನೀಡಿದರು. ಅಂದಿನಿಂದ ಕೊರವಂಜಿ ಪತ್ರಿಕೆಯಿರುವ ತನಕವೂ ಬರೆದರು.

ಚಿಕ್ಕಂದಿನಲ್ಲಿ ನೋಡುತ್ತಿದ್ದ ನಾಟಕಗಳ ಪ್ರಭಾವದಿಂದ ಪ್ರೇರಿತರಾಗಿ ದೀಕ್ಷಿತರು, ಅಜ್ಜನ ಅವಾಂತರ, ಅಳಿಯ ದೇವರು, ಅಜ್ಜಿ ಆಸ್ತಿ, ಲಂಬೋದರ, ಸಿಡ್ಲುಮರಿ, ಗಾಂಪರ ಗುಂಪು ಮೊದಲಾದ ನಾಟಕಗಳನ್ನು ರಚಿಸಿದರು.

ರಾಶಿಯವರಿಂದ ಪ್ರಚೋದಿಸಲ್ಪಟ್ಟ ದೀಕ್ಷಿತರು, ಮಾವನ ಮನೆ, ಮರಳಿ ಮಠಕ್ಕೆ, ಪಂಕಜಿ ಪರಿಣಯ, ಗಂಡಾಗಿ ಕಾಡಿದ ಗುಂಡ, ಮಾವನ ಮಗಳು ಎಂಬ ಹಾಸ್ಯ ಕಾದಂಬರಿಗಳನ್ನು ಸಾಹಿತ್ಯ ಲೋಕಕ್ಕೆ ಕೊಡುಗೆಯನ್ನಾಗಿ ನೀಡಿದ್ದಾರೆ. ದೀಕ್ಷಿತರು ಹಾಸ್ಯಗಾರರು ಮಾತ್ರವಲ್ಲ, ಅವರು ಅತ್ಯಂತ ರಸಿಕರು ಎಂಬುವ ವಿಷಯ ಅವರ ಪಂಕಜಿ ಪರಿಣಯ, ಪಕೋಡ ಪ್ರಿಯ ಹಾಗೂ ಅವರ ಕಥೆಗಳಲ್ಲಿನ ಮೀನಾಕ್ಷಿ ವರ್ಣನೆ ಓದಿದಾಗ ಚೆನ್ನಾಗಿ ಅರಿವಿಗೆ ಬರುತ್ತೆ. ಅವರ ಹಾಸ್ಯ ಪ್ರಜ್ಞೆ ದಿನ ನಿತ್ಯದಲ್ಲಿ ನಡೆಯುವ ಸಾಮಾನ್ಯ ಘಟನೆಗಳು, ಕಾಷ್ಠ ವ್ಯಸನ, ಕೋದಂಡನ ಕೊಡೆ ರಿಪೇರಿ, ಕ್ವಿಜ್ ಕಾರ್ಯಕ್ರಮ, ಅನ್ನದಾತ, ಭಾನುವಾರದ ಬಿಡುವು ಮುಂತಾದ ಲೇಖನದಲ್ಲಿ ಅದ್ಭುತವಾಗಿ ಮೂಡಿ ಬಂದಿದೆ.

ದೀಕ್ಷಿತರು 'ಮೈಸೂರ್ ಪಪೆಟಿಯರ್ಸ್' ಎಂಬ ಗುಂಪು ಕಟ್ಟಿ ಭಾರತದಲ್ಲೆಲ್ಲಾ ಸಂಚರಿಸಿ ಸೂತ್ರದ ಗೊಂಬೆಯಾಟ ಆಡಿಸಿದರು. ಕನ್ನಡ ಚಲನಚಿತ್ರ, ಭಾಗ್ಯದ ಲಕ್ಷ್ಮೀಬಾರಮ್ಮ, ಸಂಸ್ಕಾರ, ಫಣಿಯಮ್ಮ, ಮುಯ್ಯಿ, ಅಬಚೂರಿನ ಪೋಸ್ಟಾಫೀಸ್‌ಗಳಲ್ಲಿ ಅಭಿನಯಿಸಿದ್ದಾರೆ.

ಕನ್ನಡಮ್ಮನ ಸೇವೆಯೊಂದಿಗೆ ದೀಕ್ಷಿತರು, ಅವರ ಕೆಲಸದಲ್ಲೂ ತುಂಬ ಮುಂದೆ ಬಂದು, ಎಚ್.ಎ.ಎಲ್.ನಲ್ಲಿದ್ದಾಗ ಇಂಗ್ಲೆಂಡ್‌ಗೆ ಆರು ತಿಂಗಳು ಹೋಗಿದ್ದಾಗ 'ಗಾಂಪರ ಗುಂಪು' ಎಂಬ ಪ್ರವಾಸ ಕಥನವನ್ನು ರಚಿಸಿದರು. ಅಲ್ಲಿಂದ ಬಂದಮೇಲೆ 'ಗಾಂಪರ ಗುಂಪು' 'ಮರಳಿ ಮಠಕ್ಕೆ' ಬಂದ ವಿಷಯವನ್ನು ಬರೆದಿದ್ದಾರೆ.

ಪಕೋಡಪ್ರಿಯ ಮೊದಲ ಮುದ್ರಣಕ್ಕೆ ಮುನ್ನುಡಿ ಬರೆದ ಡಿ.ವಿ.ಗುಂಡಪ್ಪನವರು ದೀಕ್ಷಿತರನ್ನು ಡಿಕನ್ಸ್, ತ್ಯಾಕರೆ ಅವರಿಗೆ ಹೋಲಿಸಿದ್ದಾರೆ. ಅದರಲ್ಲಿ ಅವರು ಸಾಹಿತ್ಯದಲ್ಲಿ ವ್ಯಕ್ತಿ ಸೃಷ್ಟಿ ಬಹಳ ದೊಡ್ಡದೆಂದೂ, ಪಕೋಡಪ್ರಿಯದ ದೇರಣ್ಣನವರು ಅಂತಹ ಸೃಷ್ಟಿಯೆಂದೂ ಹೊಗಳಿದ್ದಾರೆ.

ದೀಕ್ಷಿತರವರು ಓದುಗರ ಓಲೆಯಲ್ಲಿ, ಪಕೋಡಪ್ರಿಯದ ನಾಯಕ ದೇರಣ್ಣನವರನ್ನು ತಮ್ಮ ಪ್ರಿಯ ಹಾಗೂ ಆಪ್ತಮಿತ್ರರೆಂದು ಕರೆದಿದ್ದಾರೆ. ದೇರಣ್ಣನವರು ಮತ್ತು ಅವರ ಅರ್ಧಾಂಗಿ ಸಾವಂತ್ರಮ್ಮನವರ ರಸಿಕ ದಾಂಪತ್ಯವನ್ನು ಕೊಂಡಾಡಿದ್ದಾರೆ. ದಫೇದಾರ್ ಧೇರಣ್ಣೋರು ಪೊಲೀಸ್ ಬಳಗದಲ್ಲಿ ಪಕೋಡದಯ್ಯ ಎಂದೇ ಹೆಸರುವಾಸಿಯಾಗಿದ್ದರು. ದಫೇದಾರ್ ದೇರಣ್ಣೋರು ಅನ್ನೋಕ್ಕಿಂತ ಪಕೋಡದಯ್ಯ ಅಂತ ವಿಳಾಸ ಹಾಕಿದರೇನೆ ಅವರಿಗೆ ಅಂಚೆ ತಲುಪುತ್ತಿತ್ತು. ಇದರಿಂದ ದೇರಣ್ಣೋರಿಗೆ ಕೋಪವಿಲ್ಲ, ಪಕೋಡ ಅವರ ಪ್ರಿಯವಾದ ತಿಂಡಿ. ಇವರ ಪಕೋಡದ ದೌರ್ಬಲ್ಯ ಅರಿತ ಕುಪ್ರಸಿದ್ಧ ಕನ್ನೇಶ್ವರಿ ಭೀಮ ಸಿಕ್ಕಿ ಬಿದ್ದ ಹಾಗೆ ನಟಿಸಿ ತುಪ್ಪದಿಂದ ಕರೆದ ಪಕೋಡವನ್ನು ಇವರ ಮುಂದಿಟ್ಟಾಗ ಪುಂಗಿನಾದಕ್ಕೆ ತೂಗುವ ಹಾವಂತೆ ದೇರಣ್ಣೋರು ಘಮ ಘಮ ಪಕೋಡಕ್ಕೆ ಸೋತುಹೋದಾಗ ಕಳ್ಳ ಪರಾರಿಯಾದ. ದೇರಣ್ಣೋರ ಪ್ರಕಾರ ಇದೊಂದು ಕಟ್ಟುಕಥೆ, ಆದರೆ ಕಾನ್ಸ್ಟೇಬಲ್ ಫಕೀರಪ್ಪನ ಪ್ರಕಾರ ಇದು ನಿಜವಾಗಿ ನಡೆದ ಸಂಗತಿ. ಮದುವೆಗೆ ಮುಂಚೆ ಸುಂದರಿ ಸಾವಂತ್ರಿ ದೇರಣ್ಣೋರ ಶೌರ್ಯದ ಮಾತಿಗೆ ಮರುಳಾಗಿ ಮಾಲೆ ಹಾಕಿದ್ಲು. ಆದರೆ ಮದುವೆಯಾದ ಮೇಲೆ ಆ ಶೌರ್ಯ ಸಾಹಸ ಎಲ್ಲಾ ಬರೀ ಮಾತಲ್ಲೇ ಅಂತ ತೀಳಿಯಿತು. ಚೋರಿ ಚೋರಿ ಎಂಬ ಕೂಗು ಕೇಳಿ ಇಲ್ಲದ ಧೈರ್ಯ ತುಂಬಿಕೊಂಡು ಅಮಾವಸ್ಯೆ ರಾತ್ರೀಲಿ ಅಣ್ಣಮ್ಮನ ಗುಡಿ ಬೀದೀಲಿ ಕೂಗು ಕೇಳಿದ ಕೊಠಡಿಗೆ ಬಂದಾಗ ಇಸ್ಪೀಟ್ ಆಡುತಿದ್ದ ವ್ಯಕ್ತಿಗಳು ರಂಗ್ ಚೋರಿ ಎಂದು ಕೂಗಿದಾಗ ದೇರಣ್ಣೋರು ಮೂರ್ಛೆ ಹೋಗ್ತಾರೆ.

ದೇರಣ್ಣೋರಿಗೆ ಕಥೆ ಹೇಳೋದೂ ಅಂದ್ರೆ ಖುಶಿ. ಅವರ ಕೈಲಿ ಉಲಿ ಶಿಕಾರಿ, ಬಿಕ್ಕೋಜಿ ತುಕ್ಕೋಜಿ, ಅನಂತಯ್ಯನ ಅತಂತ್ರೋತ್ಸವ, ಅಳಿಯ ದೇವರು, ಸುಲಗ್ನಾ ಸಾವಧಾನ, ನರಭಕ್ಷಕ, ಶ್ವಾನ ಶಾಸ್ತ್ರ, ಒಂದೆ ಎರಡೆ, ಈ ಎಲ್ಲ ಕಥೆಗಳನ್ನು ರಸವತ್ತಾಗಿ ಬಣ್ಣಿಸ್ತಾ ಇದ್ರು. ದೇರಣ್ಣೋರ ವರಕುಮಾರ ಬೀರಣ್ಣ, ಹುಟ್ಟಿದ ಕಥೆ ಇನ್ನೂ ಚೆನ್ನ. ಆದರೂ ಪಕೋಡದ ಚಪಲತೆಯಿಂದ ಸಬ್ ಇನ್‌ಸ್ಪೆಕ್ಟರ್ ಆಗೋ ಅವಕಾಶಗಳನ್ನು ಕಳಕೊಂಡು ಅವರ ಪತ್ನಿ ಸಾವಂತ್ರಮ್ಮನವರ ಕೋಪಕ್ಕೆ ಗುರಿಯಾಗ್ತಾನೇ ಹೋಗ್ತಾರೆ.

ಗಾಂಪರ ಗುಂಪು ಪುಸ್ತಕದಲ್ಲಿ, ಗಾಂಪರೊಡೆಯರು ಹಾಗೂ ಅವರ ಶಿಷ್ಯರು ಲಂಡನ್‌ಗೆ ಬರುವ ಅವಕಾಶ, ಅದರಿಂದ ಅವರಿಗೆ ಆಗದವರ ಕುಹಕ ಮಾತುಗಳು, ವಿಮಾನ ಪ್ರಯಾಣ, ಲಂಡನ್‌ನಲ್ಲಿ ಸುತ್ತಾಟ, ಭಾರತದ ಜೀವನಕ್ಕೂ ಲಂಡನ್ ಜೀವನಕ್ಕೂ ಹೋಲಿಸುವುದು, ರಜೆಗಳು, ಜನರ ಉಡುಪು ಹಾಗೂ ಆಹಾರ ಈ ಎಲ್ಲವನ್ನೂ ತುಂಬಾ ಮನೋರಂಜಕವಾಗಿ ವರ್ಣಿಸಿದ್ದಾರೆ. ಬಚ್ಚಲ ಮನೆಯಲ್ಲಿ ಕೊಚ್ಚೆ ತುಂಬಾ ತಮಾಶಿಯಾಗಿದೆ. ಇದರಲ್ಲಿ ಗಾಂಪರೊಡೆಯರು ಮರುಳನಿಗೆ ಹೀಗೆ ಹೇಳ್ತಾರೆ, 'ರೋಮಿನಲ್ಲಿದ್ದಾಗ ರೋಮನೀಯನೇ ಆಗುವಂತೆ, ಲಂಡನ್‌ನಲ್ಲಿ ಇದ್ದಾಗ ನೀನು ಲಂಡನೇ ಆಗಬೇಕು. 'ಪ್ರಾಗ್' ವಿಮಾನ ನಿಲ್ದಾಣದಲ್ಲಿ ಇಳಿದು ಗಾಂಪರೊಡೆಯರ ಶಿಷ್ಯರೊಡನೆ ಠೀವಿಯಿಂದ ನಡೆದು ಹೋದಾಗ 'ಅಲ್ಬಿದಾಯ ಕ್ಯಾ ಹುಸೇನಿ' ಹಾಡು ಹೇಳ್ತಿದ್ದಾರೇನೋ ಎಂಬಂತೆ ಡೆಮಾಸ್ಕಸ್ ಜನ ಮಾತಾಡಿಕೊಂಡಾಗ ಮಡೆಯನಿಗೆ ಗಾಂಪರ ಮಠದ ಗುರುಪೀಠದ ಪರಾಕನ್ನು ಹೇಳೊ ಬಯಕೆ ಆಯ್ತು. ಮಡೆಯ, ಮುಠ್ಠಾಳ ಪರಾಕು ಹೇಳತೊಡಗಿದರು:

ಸಕಳಲೋಕ ಮಂಗೇಶರೊಡೆಯ!
ಕಲಸಂಭೂತ ಕೆಂಬೂತೇಶಾ!
ವೈರಾಗ್ಯ ವೈರ, ಸನ್ಯಾಸ–ವಿನ್ಯಾಸಪ್ರಿಯಾ!
ಪರಮಪದ ಸೋಪಾನಪಟ ಪ್ರಿಯಕರಾ!
ವಿರಾಟರಾಯ ಕಂಕೇಶ ಪಾದಪೂಜಿತಾ!
ವಿಮಾನ ಮ್ಯಾನಾ ಮೌನ ಯಾತ್ರಿಕಾ!
ಜಯ ಜಯ ಗಂಪರೊಡೆಯಾ–
ಜಯ ಜಯ ಮರುಳ–ಮಡೆಯ–ಮುಠ್ಠಾಳ–ಮಂಕ
ಇತ್ಯಾದಿ ಭಕ್ತವತ್ಸಲಾ! ಬಹು ಪರಾಕ್

ಲಂಡನ್ ವಿಮಾನ ನಿಲ್ದಾಣದಲ್ಲಿ ಇಳಿದಾಗ ಗಾಂಪರೋಡೆಯರು ತಮ್ಮ ಶಿಷ್ಯರಿಗೆ

ಹೀಗೆ ಉಪದೇಶ ನೀಡಿದರು: 'ಮರುಳಾ, ಮಂಕ, ಮಡೆಯ, ಮುಠ್ಠಾಳ, ಮಡ್ಡಿಗಳೇ, ನೀವೀಗ ಪ್ರಪಂಚದ ಅತಿದೊಡ್ಡ ಭವ್ಯನಗರದಲ್ಲಿ ಇಳಿಯುವವರಿದ್ದೀರಿ. ನಮ್ಮ ದೇಶದ ಮರ್ಯಾದೆ, ನಮ್ಮ ಊರಿನ ಘನತೆ, ನಮ್ಮ ಮಠದ ಗಾಂಭೀರ್ಯಗಳನ್ನು ಕಾಯುವುದು ನಿಮ್ಮ ಕರ್ತವ್ಯ. ಕೆಟ್ಟಕೆಟ್ಟದಾಗಿ ಹುಚ್ಚು ಹುಚ್ಚು ಬಡಿಬ್ಯಾಡ್ರಿ–ನೆನಪಿರಲಿ ಎಕ್ಸ್ ಕ್ಯೂಸ್ ಮಿ–ಥ್ಯಾಂಕ್ಯು–ಪ್ಲೀಸ್ ಅನ್ನೋದನ್ನು ಮರೀಬ್ಯಾಡ್ರಿ–ನಮ್ಮೂರೊಳಗಂತು ಗಾಂಪರೂಂತ ಪ್ರಸಿದ್ಧರಾಗೇವಿ. ಈ ಬ್ರಹ್ಮಾಂಡ ಲಂಡನ್ನಿನೊಳಗೂ ಹಂಗೆ ಅನ್ನಿಸ್ಕೋಬ್ಯಾಡ್ರೋ–ಬಾರಿ ಬಾರಿ ಹೇಳಿದ್ದೀನಿ, ಬರೀ ಬಾರಿನೊಳಗೇ ತೂರಾಡಬ್ಯಾಡ್ರೋ.

ನಮ್ಮೂರು ಚೆಂದವೊ ನಿಮ್ಮೂರೋ? ಕಥೆಯಲ್ಲಿ ಗಂಪರೋಡೆಯರು ಈ ಪ್ರಶ್ನೆಯನ್ನು ಕೇಳಿದಾಗ, ಮಂಕ ಎದ್ದು ನಿಂತು: 'ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ ಭಕ್ತ–ಗಂಡಭೇರುಂಡ ಧ್ವಜ ವಂದಿತ–ಉಂಡಾಡಿ ಶಿಷ್ಯವೃಂದ ಪೂಜಿತ–ಪರಿವ್ರಾಜಕಾಚಾರ್ಯ ಗಾಂಪರಿಂದ ಪೂಜಿತ–ಮಹಾ ಮಹಾ ಗಾಂಪಮಠಾಧೀಶರಿಗೆ, ಸಪ್ರೇಮ ಸವಿನಯ–ಸಾಷ್ಟಾಂಗಗಳು. ಗುರುಗಳು ಆಗ, ಎಲೈ ಮಂಕ ನನಮಗನೇ–ತಲೇ ಹರಟೆ ಬೇಡ, ನೇರವಾಗಿ ವಿಷಯಕ್ಕೆ ನುಗ್ಗು. ಮಾತಿನ ಜಾಲದಲ್ಲಿ ಮರುಳುಮಾಡಿ, ಅರ್ಥವಿಲ್ಲದ ಬಣ್ಣ ಬಣ್ಣದ ವರ್ಣನೆಯಿಂದ ಪುಟ ತುಂಬುವ ಕಾದಂಬರಿಕಾರ ಚೋರನಂತೆ ವರ್ತಿಸಬೇಡ. ವಿಷಯಕ್ಕೆ ಪ್ರಾಧಾನ್ಯತೆ ಇರಲಿ'. ಎಂದು ಶಿಷ್ಯನನ್ನು ತಿದ್ದಿದರು. ಮಂಕ ಮತ್ತೆ ಮಾತಿಗೆ ತೊಡಗಿದ 'ಇಲ್ಲಿನ ನಾರಿಯರು ಮಾರಿಯರು–ಎಂದೇ ನನ್ನ ಅಭಿಮತ. ನೆಲಕಾಣದ ವಯಸ್ಸಿನ ಹುಡುಗಿಯರು ಕೇವಲ ಗಂಡಿನ ಉಡುಗೆಗಳನ್ನೇ ಉಡುವುದನ್ನು ನೀವು ಕಂಡಿಲ್ಲವೇ? ಒಟ್ಟಿನಲ್ಲಿ ನಮ್ಮೂರಿನ ನಾರಿಮಣಿಯರ ಗಾಂಭೀರ್ಯ ಮಾನಮರ್ಯಾದೆ ಇಲ್ಲಿನವರಿಗೆ ಎಂದೂ ಬಾರದು. ನಮ್ಮ ದ್ರೌಪದಿ–ಅಹಲ್ಯ–ತಾರಾ–ತಾರಾ–ಮಂಡೋದರಿ ತಥಾ ಈ ಪಂಚಕನ್ಯೆಯರ ಆದರ್ಶದ ಮುಂದೆ ಈ ಅಂಗ್ರೇಜಿ ಹೆಣ್ಣುಮಕ್ಕಳನ್ನು ನೀವಾಳಿಸಬೇಕು. ನನ್ನ ವೆಂಕಟಲಕ್ಷ್ಮಿಯ ನ್ಯಾಚುರಲ್ ಟ್ಯಾನ್ ಬಣ್ಣ ಬರಿಸಿಕೊಳ್ಳಲು ಬಿಕಿನಿ ಸ್ವಿಮ್ಮಿಂಗ್ ಸೂಟಿನಲ್ಲಿ ವಣವಣ ಬಿಸಿಲಿನಲ್ಲಿ ಮರಳುದಂಡೆಯ ಮೇಲೆ ಹೊರಳುವರು'. ಮರುಳ ಮಾತ್ರ 'ಇಲ್ಲಿನ ಹೆಣ್ಣು ಗಂಡು ಸಮಸಮವಾಗಿ ಎಲ್ಲಾ ಮಾಡ್ತಾರೆ' ಅಂತ ಮೆಚ್ಚುಗೆ ಸೂಚಿಸಿದ. ಮುಠ್ಠಾಳ ಎದ್ದು ನಿಂತು 'ನಮ್ಮೂರು ನಮಗೇ ಚೆಂದ–ಇವರೂರು ಇವರಿಗೇ ಚೆಂದ. ನಮ್ಮೂರ ಉಪ್ಪಿನಕಾಯಿ, ಮಜ್ಜಿಗೆ, ಸಾರು, ಹುಳಿ, ಪಲ್ಯ ನೆನಸಿಕೊಂಡ್ರೆ ಬಾಯಲ್ಲಿ ನೀರೂರುತ್ತೆ, ನಡೀರಿ ಗುರುಗಳೇ ಈಗಲೇ ನಮ್ಮೂರಿಗೆ ವಾಪಸ್ ಹೊರೊಡೋಣ' ಎನ್ನುತ್ತಾನೆ.

ಬಚ್ಚಲಮನೆಯಲ್ಲಿ ಕೊಚ್ಚೆ ಕಥೆಯಲ್ಲಿ ಗಾಂಪರೊಡೆಯರು ಮೊದಲ ಬಾರಿ ಹೋಟೇಲ್‌ನಲ್ಲಿ ಸ್ನಾನಮಾಡಿದ ಅನುಭವ ಮನೋರಂಜಕವಾಗಿದೆ. ನಮ್ಮ ಗಂಗೇಚ ಯಮುನ್ಯೈಚೈವ...ಮಂತ್ರದಲ್ಲಿ ಬರೀ ಹೆಂಗಸರನ್ನು ನೆನೆಸಿಕೊಂಡು ನೆಗ್ಗಿದ ಚೊಂಬಿನಲ್ಲಿ ರಾಡಿ ನೀರನ್ನು ತಾಮ್ರದ ಹಂಡೆಯಿಂದ, ಹೊಗೆಯಿಂದ ಕಪ್ಪುಹಿಡಿದ ಗೋಡೆ ಮಧ್ಯೆ ಕೂತುಕೊಂಡು ಹುಯ್ದುಕೊಂಡ್ರೆ ಅದು ಸ್ನಾನ,(ಆ ಸುಖ) ಪಿಂಗಾಣಿ ತೊಟ್ಟೀಲಿ ಎರಡು ನಲ್ಲಿಯಿಂದ ಬರೋ ತಣ್ಣೀರು, ಬಿಸಿನೀರು ಹಾಕ್ಕೊಂಡ್ರೆ ಬರಲ್ಲಪ್ಪಾಂತ ಗುರುಗಳು ಪೇಚಾಡ್ತಾರೆ. ತೊಟ್ಟೀಲಿ ನೀರು ತುಂಬ್ಕೊಂಡು ಸದ್ಯ ಹೊರಗೆ ಬಂದ್ರೆ ಸಾಕೂ ಅಂತ ಗಾಂಪರೊಡೆಯರು ಅವಸರವಾಗಿ ಹೊರಗೆ ಬಂದು ಬಳಿಯಲ್ಲಿದ್ದ ಬಕೆಟ್ ಅನ್ನು ಎಡವಿ ಬಿದ್ದಾಗ, ಮರುಳ ಹೊರಗೆ ಓಡಿ, 'ಹೆಲ್ಪ್, ಹೆಲ್ಪ್ ಗುರೂಜಿ ಕಿಕ್ಡ್‌ದ ಬಕೆಟ್ ಇನ್ ದ ಬಾತ್'. ಅಂತ ಕೂಗಿಕೊಂಡಾಗ ಮ್ಯಾನೇಜೆರಸ್ಸಳು ವೈಟರ್ ಜೊತೆ ಬಂದು, 'ಓಹ್, ಐ ಯಾಂ ಸಾರಿ, ಮೆ ಹಿಸ್ ಸೋಲ್ ರೆಸ್ಟ್ ಇನ್ ಪೀಸ್' ಅನ್ನೋದೆ? ಆಮೇಲೆ ಗುರುಗಳು ಮೈ ಒರೆಸಿಕೊಂಡು ಹೊರಗೆ ಬಂದಾಗ ನಕ್ಕು, ಬಾತ್ ರೂಮ್ ಸ್ಥಿತಿ ನೋಡಿ, ನನ್ನ ಬಾತ್ ರೂಮ್ ಹಾಳಾಯ್ತು ಅಂತ ನಿಟ್ಟುಸಿರು ಬಿಟ್ಲು. ಆಮೇಲೆ ಗುರುಗಳು ಸೂಟ್ ಹಾಕ್ಕೊಂಡು ಶಿಷ್ಯರ ಕೈ ಹಿಡ್ಕೊಂಡು ಊಟಕ್ಕೆ ಹೊರಟಾಗ ಮ್ಯಾನೇಜೆರಸ್ ತನ್ನ ಕೊ ವರ್ಕರ್ ಗೆ ಹೇಳಿದ್ಲಂತೆ 'ದಿಸ್ ಇಸ್ ದಿ ಹೋಲಿ ಮ್ಯಾನ್ ಹು ಕಿಕ್ಡ್ ದಿ ಬಕೆಟ್ ಇನ್ ದಿ ಬಾತ್ ರೂಮ್'. ಇದರ ಜೊತೆ ಪಿಕಡೆಲ್ಲಿ ಸರ್ಕಸ್, ದಿ ಟವರ್ ಆಫ್ ಲಂಡನ್, ಮದಾಂ ತುಸಾಡ್ಸ್, ಷೇಕ್ಸ್‌ಪೀರನ ಊರಲ್ಲಿ, ವೀಕ್ ಎಂಡ್, ಹೈಡ್ ಪಾರ್ಕ್ ಹೈದರ್, ಇದೆಲ್ಲ ಕಥೆಗಳಲ್ಲಿ ದೀಕ್ಷಿತರ ಲಂಡನ್‌ನ ಪ್ರವಾಸದ ಪ್ರತಿ ಅನುಭವವದಲ್ಲೂ ಹಾಸ್ಯವನ್ನು ಕಂಡು ಎಲ್ಲರನ್ನೂ ನಗೆಗಡಲಲ್ಲಿ ಮುಳುಗಿಸಿದ್ದಾರೆ.

ಮರಳಿ ಮಠಕ್ಕೆ ಪುಸ್ತಕ ಗಾಂಪರ ಗುಂಪು ಮರಳಿ ಭಾರತಕ್ಕೆ ಬಂದ ನಂತರದ ವಿಷಯವನ್ನು ಹೊಂದಿದೆ. ಅಭಾವ ಮಂಟಪ ಕಥೆಯಲ್ಲಿ ಮಡ್ಡಿ ಮಹಾಶಯ ಗುರುಗಳಿಗೆ ಪ್ರಿಯವಾದ ಹಳೆ ಸಂಪ್ರದಾಯದ ಈ ಹಾಡನ್ನು ಹಾಡಿದ್ದಾನೆ:

ಆರತಿ ಎತ್ತಿರೆ ಮೂರುತಿಗೇ...
ಮೂರುತಿಗೇ ಗಾಂಪ ಮಾರುತಿಗೇ,
ರನ್ನದ ಆರತೀ..,
ಚಿನ್ನದ ಆರತೀ..
ಬೆಳ್ಳಿಯ ಆರತೀ..

ಎಳ್ಳಿನ ಆರತಿ ಬೆಳಗಿರೆ ನೀವ್..
ಅಲ್ಯುಮಿನಿಯಂ ಆರತೀ...
ಕಬ್ಬಿಣದಾರತೀ..
ಕಂಚಿನ ಆರತೀ,
ಹಂಚಿಕಡ್ಡಿ ಆರತಿ
ಬೆಳಗಿರೆ ನೀವ್-ಆರತಿ ಎತ್ತಿರೆ ಮೂರುತಿಗೇ..
ಮೂರುತಿಗೇ ಗಾಂಪ ಮಾರುತಿಗೇ.

ಹುಲಿವೇಷದ ಜಿಂಕೆ, ಮುಖಕ್ಕೆ ಮಂಗಳಾರತಿ, ಜಾನ ಜಾನಿ ಜೋಡಿ, ಭರತ ನಾಟ್ಯ ವಾಯು ಶೂಲೆ ಇವುಗಳನ್ನು ಓದಿ ನಕ್ಕು ನಕ್ಕು ಹೊಟ್ಟೆ ಹುಣ್ಣಾಗಿಸುವಂತಹ ಕಥೆಗಳಿಂದ ತುಂಬಿದೆ ಈ ಪುಸ್ತಕ.

'ಭಾಗ್ಯದ ಲಕ್ಷ್ಮೀ ಬಾರಮ್ಮ' ಚಿತ್ರದಲ್ಲಿನ ದೀಕ್ಷಿತರ ಅಭಿನಯ ಸೊಗಸಾಗಿತ್ತು.

ಶ್ರೀ ದೀಕ್ಷಿತರ ಒಂದೊಂದು ಪುಸ್ತಕಗಳೂ, ಕಥೆಗಳೂ ವಿವಿಧ ಸಿಹಿ ಮಿಠಾಯಿಗಳಂತೆ, ಒಂದಕ್ಕಿಂತಾ ಇನ್ನೊಂದು ಸವಿ.

ದೀಕ್ಷಿತರ ದೇಹ ಈ ಪ್ರಪಂಚದಿಂದ ದೂರವಾದರೂ ಅವರ ಚೈತನ್ಯ, ಅವರ ಹಾಸ್ಯದ ಹೊನಲು ನಿರಂತರವಾಗಿ ಹರಿದು ಸಾಹಿತ್ಯಾಭಿಮಾನಿಗಳ ಹೃದಯವನ್ನು ಉಲ್ಲಾಸಗೊಳಿಸುತ್ತಲೇ ಇದೆ. ಶ್ರೀ ದೀಕ್ಷಿತರು ಕನ್ನಡ ಸಾಹಿತ್ಯಕ್ಕೆ ನೀಡಿದ ಅಮೂಲ್ಯ ಕೊಡುಗೆಗೆ ಕನ್ನಡಾಭಿಮಾನಿಗಳೆಲ್ಲಾ ಋಣಿಗಳು.

(ಈ ನನ್ನ ಬರಹಕ್ಕೆ ಪಕೋಡ ಪ್ರಿಯ, ಗಾಂಪರ ಗುಂಪು, ಮರಳಿ ಮಠಕ್ಕೆ, ಕೊರವಂಜಿ ದಾಶರಥಿ ಮತ್ತು ದಾಶರಥಿ ದೀಕ್ಷಿತರ ಆಯ್ದ ನಗೆಬರಹಗಳು – ಈ ಪುಸ್ತಕಗಳನ್ನು ಬಳಸಿಕೊಂಡಿದ್ದೇನೆ.)



# ಕೇಫರ ಕ್ಲಾಸಿಕ್ ಕಾಮೆಡಿ

## ಎಸ್. ದಿವಾಕರ್

'ಸರ್...'

'ಏನು ಶೌರಿ?'

'ಈ ಹೊಸ ಬೈನಾಕ್ಯುಲರ್...!'

'ಹೌದು, ಹೊಸಾ ಬೈನಾಕ್ಯುಲರ್ರು... ಬಾಬು ಫ್ಯಾನ್ಸಿ ಸ್ಟೋರ್‌ನಿಂದ ತಂದೆ. ಹೇಗಿದೆ?'

'ತುಂಬಾ ಚೆನ್ನಾಗಿದೆ ಸರ್... ಬೆಂಗಳೂರು ರೇಸಸ್‌ಗ ಪ್ಯಾಕ್ ಮಾಡ್ಲಾ ಸರ್?'

'ನೋ ನೋ! ಅದೊಂದು ಸರ್‌ಪ್ರೈಸ್! ಅದ್ಯಾರೋ ಹ್ಯಾಲಿ ಅನ್ನೋ ಆಸಾಮೀದು ಕಾಮೆಟ್ ಬಂದಿದೆಯಂತಲ್ಲಾ, ಅದನ್ನ ನೋಡೋಕೆ ತಗೊಂಡು ಬಂದೆ'.

'ಸರಿ ಸಾರ್. ಆದ್ರೆ ಆ ಕಾಮೆಟ್ ನೋಡೋಕೆ ಬೈನಾಕ್ಯುಲರ್‌ಗಿಂತಲೂ ಟೆಲಿಸ್ಕೋಪು ಒಳ್ಳೇದು ಸಾರ್.

ವ್ಹಾಟ್? ನಿಜ್ವೆ? ಹಾಗಾದ್ರೆ ಮಾಧೂನ ಕೇಳಿ ಅವನ್ಹತ್ರ ಒಂದು ಎಕ್ಸ್‌ಟ್ರಾ ಇದ್ರೆ ನಂಗೇಂತ ಹೇಳಿ ಇಸ್ಕೊಂಡು ಬಾ'.

'ಡಾಕ್ಟರ್ ಮಾಧೂರಾಯರ ಹತ್ರ ಇರೋದು ಸ್ಟೆತಸ್ಕೋಪು ಸರ್, ಪೇಷಂಟನ್ನ ನೋಡೋದು, ಟೆಲಿಸ್ಕೋಪಲ್ಲ'.

'ಹಾಗಾದ್ರೆ ಇದನ್ನ ಬಾಬೂಗೆ ವಾಪಸ್ ಕೊಟ್ಟು ಅವನನ್ನೇ ಕೇಳಿ ಅದನ್ನ ತಗೊಂಡು ಬಾ'.

'ಆಗಲಿ ಸರ್. ಆದರೆ...'

'ಇನ್ನೇನು ಮತ್ತೆ ಆದರೆ?'

'ಹ್ಯಾಲಿ ಕಾಮೆಟ್ ಸೂರ್ಯಮಂಡಲಾನ ಬಿಟ್ಟು ಹೊರಟ್ಹೋಗಿದೆ ಸರ್ ಈಗ. ಅದು ಪುನಃ ಕಾಣಿಸಿಕೊಳ್ಳೋದು ಎಪ್ಪತ್ತೈದು ವರ್ಷಗಳ ಮೇಲೆ'.

'ಆಗ್ಲೇಳು, ಅಷ್ಟರಲ್ಲಿ ಊರು ಮುಳುಗ್ಹೋಗತ್ತೆ? ಇವತ್ತೇ ಹೋಗಿ ಒಂದು ಒಳ್ಳೆ..'

'ಟೆಲಿಸ್ಕೋಪು'.

'ಯಸ್, ಟೆಲಿಸ್ಕೋಪು ತಗೊಂಡು ಬಂದ್ಬಿಡು. ಸುಮ್ನೆ ಆರ್ಗ್ಯೂ ಮಾಡ್ತಾ ನಿಂತ್ಕೋ ಬೇಡ'........

ದಶಕಗಳ ಹಿಂದೆ ಪತ್ರಿಕೆಯೊಂದರಲ್ಲಿ ನಾನು ಓದಿದ ನಗೆಬರಹವೊಂದರ ಈ ಸಾಲುಗಳು ಈಗಲೂ ನನ್ನ ನೆನಪಿನಿಂದ ಮರೆಯಾಗಿಲ್ಲ. ಸಂಭಾಷಣೆಗೆ ತೊಡಗಿದಂತಿರುವ ಎರಡು ಪಾತ್ರಗಳು ತಾವು ಆಡುತ್ತಿರುವ ಮಾತುಗಳಿಂದಲೇ ತಮ್ಮ ವ್ಯಕ್ತಿತ್ವ, ಸ್ವಭಾವಗಳನ್ನು ಹೊಳೆಯಿಸುವ ವಿಶಿಷ್ಟ ಧಾಟಿ ಇಲ್ಲಿದೆ. ಕಳೆದ ಮೂವತ್ತು ನಲವತ್ತು ವರ್ಷಗಳಿಂದ ಕನ್ನಡ ನಗೆಬರಹಗಳನ್ನು ಓದುತ್ತಿರುವ ಯಾರಿಗೂ ತೀರ ಪರಿಚಿತವಾದ ಈ ಧಾಟಿ ನಿಸ್ಸಂದೇಹವಾಗಿ ಕೇಫ ಅವರದು. ಕೈಲಾಸಂ, ರಾ.ಶಿ., ನಾ. ಕಸ್ತೂರಿ ಮೊದಲಾದವರ ನಗೆಬರಹಗಳಲ್ಲಿ ಕಾಣದ ಈ ಧಾಟಿ ಸಾಂದರ್ಭಿಕ ಅಥವಾ ಭಾಷಿಕ ಹಾಸ್ಯಕ್ಕಿಂತ ಮಿಗಿಲಾಗಿ ವ್ಯಕ್ತಿವಿಶೇಷಕ್ಕೇ ಒತ್ತುಕೊಡುವಂಥದು.

ಕೇಫ ಅವರದು ಹೇಳಿಕೇಳಿ ಮಧ್ಯಮ ವರ್ಗದವರ ಹಾಸ್ಯಪ್ರಜ್ಞೆ. ಇಂಗ್ಲಿಷ್ ವಿದ್ಯಾಭ್ಯಾಸದಿಂದ ಗಳಿಸಿಕೊಂಡ ಹೊಸ ಜೀವನ ಶೈಲಿ, ಇರುವುದರಲ್ಲೇ ತೃಪ್ತಿಪಡುವ ಮನೋಧರ್ಮ, ಜಾತಿ, ಧರ್ಮಗಳನ್ನು ಮೀರಿದ ಉದಾರ ಮನಸ್ಸು, ಮಾನವೀಯತೆಯನ್ನು ಮರೆಯದ, ಕೆಡುಕಿನ ಲವಲೇಶವಿಲ್ಲದ, ಅಸೂಯೆ ಎಂದರೇನೆಂದು ಅರಿಯದ ಮುಗ್ಧತೆ, ಎಲ್ಲಕ್ಕಿಂತ ಮಿಗಿಲಾಗಿ ಧಾವಂತವಿಲ್ಲದ ಬದುಕು, ಕಾಲ ಸರಿದುಹೋಗುತ್ತಿದೆಯಲ್ಲ ಎಂಬ ಪರಿವೆಯಿಲ್ಲದ, ಆತಂಕರಹಿತ ನಿರಾಳತೆ– ಇವು ಆ ಹಾಸ್ಯಪ್ರಜ್ಞೆಯ ಹಿಂದಿರುವ ಮನೋಧರ್ಮ.

ಕೇಫರ ನಿಜವಾದ ಹೆಸರು ಎ.ವಿ. ಕೇಶವಮೂರ್ತಿ. ಸುಮಾರು ಅರವತ್ತು ವರ್ಷಗಳ ಹಿಂದೆ ಒಂದು ದಿನ 'ಕೊರವಂಜಿ'ಗಾಗಿ ಮೊದಲ ಲೇಖನ ಬರೆಯುತ್ತಿದ್ದಾಗ ಅವರ ಮೂರು ವರ್ಷದ ಕೊನೆಯ ತಮ್ಮ ಶ್ರೀನಿವಾಸ ತನ್ನ ತೊದಲ ಬಾಯಿಂದ 'ಕೇಫಣ್ಣ' ಎನ್ನುತ್ತ ಬಳಿಗೆ ಬಂದನಂತೆ. 'ಒಂದು ಕ್ಷಣ ಅವನ ಮುಖ ನೋಡಿ ಅವನು ಹೇಳ್ದಿದನ್ನೇ ನನ್ನ ಅಂಕಿತನಾಮವನ್ನಾಗಿ ಮಾಡಿಕೊಂಡೆ' ಎಂದು ಸ್ವತಃ ಅವರೇ ಒಂದೆಡೆ ಬರೆದದ್ದುಂಟು.

ಆ ಕಾಲದಲ್ಲಿ ಬೆಂಗಳೂರಿನಲ್ಲಿ ಹೆಸರಾಂತ ವೈದ್ಯರಾಗಿದ್ದವರು ಡಾಕ್ಟರ್ ಎಂ. ಶಿವರಾಂ (ರಾ.ಶಿ.). ಕೇಫರ ಡಾಕ್ಟರೂ ಆಗಿದ್ದ ಅವರು ೧೯೪೨ರಲ್ಲಿ 'ಕೊರವಂಜಿ' ಎಂಬ 'ತಿಳಿನಗೆಯ' ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಇಂಗ್ಲಿಷಿನ ಪ್ರಸಿದ್ಧ 'ಪಂಚ್' ಪತ್ರಿಕೆಯಿಂದ ಸ್ಫೂರ್ತಿ ಪಡೆದು ಹೊರಬಂದ, ಕೇವಲ ಎರಡಾಣೆಯ 'ಕೊರವಂಜಿ' ಕನ್ನಡ ಓದುಗರಿಗೆ ಮೊದಲ ಬಾರಿಗೆ ಸಾಮಾಜಿಕ, ರಾಜಕೀಯ ವಿಡಂಬನೆಯನ್ನು ಒದಗಿಸತೊಡಗಿತು. ಕನ್ನಡದಲ್ಲಿ ಆ ಮೊದಲು ಪ್ರಕಟವಾಗುತ್ತಿದ್ದ 'ವಿನೋದ', 'ವಿಕಟ ವಿನೋದಿನಿ' ಮುಂತಾದ ಪತ್ರಿಕೆಗಳು ಕೇವಲ ಕೌಟುಂಬಿಕ ಹಾಸ್ಯಕ್ಕಷ್ಟೆ ಮೀಸಲಾಗಿದ್ದುವು. ೧೯೩೬ರಲ್ಲಿ ವೈದ್ಯಕೀಯ ಪದವಿ ಪಡೆದ ಕೇಫ ಖಾಸಗಿ ದವಾಖಾನೆ ಶುರು ಮಾಡಿದ್ದರು. ಆಗ ಕೆಲವು ಕ್ಲಿಷ್ಟ ಕೇಸುಗಳ ಬಗ್ಗೆ ರಾ.ಶಿ.ಯವರ ಜೊತೆ ಚರ್ಚಿಸುತ್ತಿದ್ದುದಿತ್ತು. ಆ ಕೇಸುಗಳನ್ನು ವರ್ಣಿಸುವಾಗ ಅವರ ಮಾತಿನ ಧಾಟಿಗೆ ಹಾಸ್ಯ ಲೇಪನವಿರುತ್ತಿದ್ದುದನ್ನು ಗಮನಿಸಿದ ರಾ.ಶಿ. ಒಮ್ಮೆ 'ಕೇಶವಾ, ನೀನಿಷ್ಟು ಚೆನ್ನಾಗಿ ಮಾತಾಡತೀಯಲ್ಲ, ಅದನ್ನೇ 'ಕೊರವಂಜಿ'ಗೆ ಬರ್ಕೊಡು' ಎಂದರಂತೆ. 'ಬಾಳಿನ ಒಂದು ಕ್ಷಣವನ್ನು ವಕ್ರದೃಷ್ಟಿಯಿಂದ ನೋಡಿದರೆ ನಗು ಬರುತ್ತೆ. ಅಲ್ಲಿನ ವಿರೋಧಾಭಾಸಗಳನ್ನು ಗುರುತಿಸಿದರೆ ಹಾಸ್ಯದ ಬುಗ್ಗೆ ಉಕ್ಕುತ್ತೆ. ಬಾಳನ್ನೇ ವಕ್ರದೃಷ್ಟಿಯಿಂದ ನೋಡಿದರೆ ವೇದಾಂತದ ತಿರುಳು ಸಿಕ್ಕುತ್ತೆ' ಎನ್ನುತ್ತಿದ್ದವರು ರಾ.ಶಿ. ಕೇಫರಿಗೆ ಎಲ್ಲವನ್ನೂ ಎಲ್ಲರನ್ನೂ ವಕ್ರದೃಷ್ಟಿಯಿಂದ ನೋಡುವ ಪರಿಪಾಠವೇನೋ ಇತ್ತು. ಆದರೆ ಕನ್ನಡದಲ್ಲಿ ಬರೆಯುವ ಧೈರ್ಯವಿರಲಿಲ್ಲ. ಯಾಕೆಂದರೆ ಮಿಡ್ಲ್, ಹೈಸ್ಕೂಲುಗಳಲ್ಲಿ ಅವರು ಓದ್ದಿದ್ದು ಇಂಗ್ಲಿಷ್, ಸಂಸ್ಕೃತ ಭಾಷೆಗಳನ್ನು. ಕನ್ನಡ ಭಾಷೆ, ಸಾಹಿತ್ಯಗಳನ್ನು ಕ್ರಮವಾಗಿ ಅಭ್ಯಾಸಮಾಡಿರಲಿಲ್ಲ. ಹಾಗೆಂದು ರಾ.ಶಿ.ಯವರಿಗೆ ಹೇಳಿದಾಗ ಅವರು 'ನಿನ್ನ ವ್ಯಾಕರಣ ನನಗೆ ಬೇಡ. ನೀನು ಹೇಗೆ ಮಾತಾಡುತ್ತೀಯೋ ಹಾಗೆಯೇ ಬರಿ. 'ಕೊರವಂಜಿ'ಗೆ ಆ ಕನ್ನಡವೇ ಬೇಕು' ಎಂದರಂತೆ.

ಆಗ 'ಕೊರವಂಜಿ'ಯಲ್ಲಿ ಕಾಣಿಸಿಕೊಳ್ಳುತ್ತಿದ್ದ ಬರಹಗಳಾದರೂ ಎಂಥವು? ಸರಸು–ಮೈಲಾರಯ್ಯ, ದಫೇದಾರ ದೇರಣ್ಣ–ಸಾವಂತ್ರಮ್ಮ ಇವರ ದಾಂಪತ್ಯ ಜೀವನದ

ವಿನೋದಗಳು, ರಂಗಪ್ಪ ಮತ್ತು ರಾವಣಭಾತ್, ಪುಟ್ಟೂರಾಯನ ಪಥ್ಯ, ಕೂಶ್ಮಾಂಡ ಪುರಾಣ, ಪಶುಪತಿಯ ಮಹಿಮೆ. ಅಲ್ಲದೆ ರಾಜೀವಪುರ, ಪೆಪ್ಪಿಗುಬ್ಬಾಲೆಗಳಲ್ಲಿ ನಡೆಯುತ್ತಿದ್ದ ರಾಜಕೀಯ ಪ್ರಸಂಗಗಳು, ಮುಗಿಲಹಳ್ಳಿ ದಿಲ್‌ಬಹಾರ್ ಎಕ್ಸ್‌ಪ್ರೆಸ್, ಸಿನ್ ಸಿನಾಟಿ ಸರ್ಕಲ್, ವೀರಣ್ಣ ಅಲಿಯಾಸ್ ದುಬ್ಬೀರ್ಗ, ನವೋದಯದ ಜಾಜ್ವಲ್ಯಮಾನ ತಾರೆ ಹುರಿಗಡ್ಲೆ, ಶಿವಣ್ಣನ ಪ್ರಾಣಾಯಾಮ, ಕಾಕದೂತಾರ್ಪಣಂ, ಮಾಲಕ್ಷ್ಮಕ್ಕನ ಶಾವಿಗೆ ಅಡುಗೆ.... ಇವನ್ನೆಲ್ಲ ಸಹಜವಾಗಿಯೇ ಮೆಚ್ಚಿಕೊಂಡಿದ್ದ ಕೇಫ ಮೊದಲು ಬರೆದದ್ದು, ಬಹುಶಃ 'ಸ್ವಯಂಪಾಕ' ಎಂಬ ಲೇಖನ. ನಂತರ 'ಉಡುಗೊರೆ', 'ಗುಜರಿ' ಮುಂತಾದ ಲಘು ಬರಹಗಳು ಮೂಡಿಬಂದುವು. 'ಜೆರೋಮ್ ಕೆ ಜೆರೋಮ್‌ನ', 'ತ್ರೀ ಮೆನ್ ಇನ್ ಎ ಬೋಟ್' ಎಂಬ ಕೃತಿಯನ್ನು ಓದಿದ ಮೇಲಂತೂ ಅವರಿಗೆ ಹಾಸ್ಯವೆಂದರೆ ಹೀಗಿರಬೇಕು ಎನ್ನಿಸಿತಂತೆ. ಅದರ ಸ್ಫೂರ್ತಿಯಿಂದಲೇ ಅವರು 'ಕೊರವಂಜಿ'ಯಲ್ಲಿ ಬರೆಯತೊಡಗಿದ್ದು 'ಯಾತ್ರಿಕರ ಪತ್ರ'ಗಳನ್ನು.

ಸುಮಾರು ಅದೇ ಸಮಯದಲ್ಲಿ ಕೇಫರ ಚಿಕ್ಕಪ್ಪ ಎ. ನಾರಾಯಣಯ್ಯರ್ ಪಿ.ಜಿ. ವುಡ್‌ಹೌಸ್‌ನ 'ದಿ ಡ್ಯಾಮ್ಸೆಲ್ ಇನ್ ಡಿಸ್ಟ್ರೆಸ್' ಎಂಬ ಪುಸ್ತಕವನ್ನು ಕೊಟ್ಟು 'ಓದೋ ಇದನ್ನ, ಬ್ಲಾಗರ್ಡ್' ಎಂದು 'ಹರಸಿ'ದರಂತೆ. ಕನ್ನಡ ಹಾಸ್ಯ ಸಾಹಿತ್ಯಕ್ಕೆ ಅದೊಂದು ದಿವ್ಯಗಳಿಗೆ. ವುಡ್‌ಹೌಸ್‌ನ ಪ್ರಸಿದ್ಧ ಪಾತ್ರಗಳಾದ ಜೀವ್ಸ್, ಬರ್ಟಿ ವೂಸ್ಟರ್, ಮುಲ್ಲಿನರ್ ಕೇವಲ ವ್ಯಕ್ತಿಗಳಾಗಿರದೆ ಕೆಲವು ಗುಣವಿಶೇಷಗಳ ಪ್ರತಿನಿಧಿಗಳು ಕೂಡ. ಜೀವ್ಸ್ ಅತಿ ಬುದ್ಧಿಶಾಲಿಯಾದ ಸ್ವಾಮಿನಿಷ್ಠ ಸೇವಕ. ವೂಸ್ಟರ್ ನಿರುಪದ್ರವಿ, ನಿರಹಂಕಾರಿ, ವಿಶಾಲ ಹೃದಯಿ, ಶ್ರೀಸಾಮಾನ್ಯ. ಮುಲ್ಲಿನರ್ ಅಪಾರ ಬಂಧುಬಳಗವುಳ್ಳ ಸ್ವಪ್ರತಿಷ್ಠೆಯ ಗೃಹಸ್ಥ. ವುಡ್‌ಹೌಸ್ ತನ್ನ 'ಡ್ರೋನ್ಸ್ ಕ್ಲಬ್' ಹಾಗೂ 'ಆಂಗ್ಲರ್ಸ್ ಡೆನ್'ಗಳ ಸುತ್ತ ನೂರಾರು ಹಾಸ್ಯ ಪ್ರಸಂಗಗಳನ್ನು ರಚಿಸಿದನಷ್ಟೆ. ಆ ಪ್ರಸಂಗಗಳೇ ಕೇಫರ ಮೈಗಳ್ಳರ ಸಂಘದ ಹಾಗೂ ವಿರಾಟ ಭವನದ ಕತೆಗಳಿಗೆ ಪ್ರೇರಣೆ.

ಕೇಫರ ಬಹುಪಾಲು ಬರಹಗಳಲ್ಲಿ ತಪ್ಪದೆ ಕಾಣಿಸಿಕೊಳ್ಳುವ ವ್ಯಕ್ತಿ ಎಂದರೆ ಶೌರಿ. ಮೈಗಳ್ಳರ ಸಂಘದ ಮುತ್ಠಾಳರಿಗೆಲ್ಲಾ ಶೌರಿ ಅಂದರೆ ಸಿ.ವಿ.ರಾಮನ್, ರಾಧಾಕೃಷ್ಣನ್, ವಿಶ್ವೇಶ್ವರಯ್ಯ ಈ ಮೂವರು ಮಹನೀಯರ ಮೆದುಳುಗಳ ಭಟ್ಟೀನ ತನ್ನ ತಲೆಬುರುಡೇಲಿ ತುಂಬಿಕೊಂಡಿರೋನು ಅನ್ನೋ ನಂಬಿಕೆ. ಯಾವುದೇ ಸಮಸ್ಯೆ ಬಗೆಹರಿಯಬೇಕಾದರೆ ಅವನು ಬೇಕೇ ಬೇಕು. ಉದಾಹರಣೆಗೆ ಈ ಪ್ರಸಂಗ ನೋಡಿ:

ಶೌರಿಯ ಭಾವ ಅಖಿಲಾಂಡಯ್ಯನಿಗೂ ಅವರ ಮಗ ಅಕಿಲಾಂಡಿಗೂ 'ಖ' ವರ್ಗ, 'ಕ' ವರ್ಗಗಳೇ ಮುಖ್ಯ ವ್ಯತ್ಯಾಸ. ಈ ಅಕಿಲಾಂಡೀನ ನಿಮಗೆ ಹಿಂದೆ ನಾನು ಪರಿಚಯ ಮಾಡಿಸಿದ್ದೇನೆ. ಶೌರಿ ಗೈರುಹಾಜರಿಯಲ್ಲೆಲ್ಲ ಈ ಅಕಿಲಾಂಡಿ

ಅವನಿಗೆ ಡೆಪ್ಯುಟೈಸ್ ಮಾಡಿದ್ದಾನೆ. ಅಕಿಲಾಂಡಿಗೆ ರಾಗಮಾಲು ಊದೋ ಹುಚ್ಚು. ಅವನಜ್ಜಿ ಆ ರಾಗಮಾಲನ್ನೇ ಪವಿತ್ರ ಕೊಳಲು ಅಂತ ನಂಬಿ ಮೊಮ್ಮಗನಿಗೆ ಮುರಳಿ ಅಂತ ಹೆಸರಿಟ್ಟರು. ಅದೇ ಮುರಳಿ ಸ್ಕೂಲಿಗೆ ಸೇರಿದ ಮೇಲೆ ಅವನ ಗಿಣಿ ಮೂಗು ನೋಡಿ ಸಹಪಾಟಿಗಳೆಲ್ಲ ಅವನಿಗೆ ಟಿಪ್ಪು ಅಂತ ನಾಮಕರಣ ಮಾಡಿದರು. ಈಗ ಅಕಿಲಾಂಡಿ ಅಲಿಯಾಸ್ ಮುರಳಿ ಅಲಿಯಾಸ್ ಟಿಪ್ಪುಗೆ ತಲೆ ಕೆಟ್ಟಿರೋದು. ಅದನ್ನು ಸರಿಪಡಿಸೋಕೆ ಶೌರಿಗೆ ಕರೆ.

ಇನ್ನು ಮೈಗಳ್ಳರ ಸಂಘದ ಹೆಡ್‌ಕ್ವಾರ್ಟರ್ಸ್ ಎಂದರೆ ಹಿಂದಿನ ರಾಜಭೋಗದಲ್ಲಿ ಹೊರಳಾಡಿದ ನಗರ ಮೈಸೂರು. ಆ ನಗರವೇ ಯಾಕೆ ಹೆಡ್‌ಕ್ವಾರ್ಟರ್ಸ್ ಆಯಿತು? ಮಹಾರಾಜರು, ವೀಣೆ ಶೇಷಣ್ಣ, ಬಿಡಾರಂ ಕೃಷ್ಣಪ್ಪ, ಚಿಕ್ಕರಾಮರಾಯರು, ಚೌಡಯ್ಯ ಮೈಸೂರವರಿಗೆ ದೈವಾಂಶಸಂಭೂತರು. ಕೊಪ್ಪಲು ಬಸವನ ಹೆಸರು ಹೇಳಿಕೊಂಡು ಕುಳಿತಲ್ಲೇ ಮೀಸೆ ಹುರಿಮಾಡುವ ಭೂಪರವರು. ಚಾಮುಂಡಿ ಬೆಟ್ಟವೇ ಹಿಮಾಲಯ, ಮೈಸೂರು ಅರಮನೆಯೇ ವ್ಯಾಟಿಕನ್, ಮೈಸೂರು ಗಡಿಯಾರದ ಗೋಪುರವೇ ಈಫೆಲ್ ಟವರು ಎಂದು ನಂಬಿದ್ದ ಜನ. ಈರನಗೆರೆ ಬದನೇಕಾಯಿ ವಾಂಗೀಭಾತ್ ತಿಂದು ಮೈಸೂರು ಚಿಗುರು ವೀಳ್ಯ ಮೆಲ್ಲುತ್ತ, ಮೈಸೂರು ಮಲ್ಲಿಗೆ ಮೂಸುತ್ತ, ದರ್ಬಾರ್ ಡ್ರೆಸ್ ಧರಿಸಿ, ತಾವೇ ತಿಕ್ಕಿ ತೀಡಿ ಅತ್ತರು ಸೇರಿಸಿ ದಂತದ ಡಬ್ಬಿಯಲ್ಲಿ ತುಂಬಿಕೊಂಡ ಮೈಸೂರು ಉಂಡೆ ನಶ್ಯದ ಪುಡಿಯೊಡನೆ ಮೈಸೂರು ಟಾಂಗಾದಲ್ಲಿ ಕುಳಿತು ವೀಣೆ ಶೇಷಣ್ಣನವರ ಕಚೇರಿಗೆ ಹೊರಟರೆಂದರೆ ದೇವೇಂದ್ರನೇ ಐರಾವತವನ್ನೇರಿ ಜಂಬೂಸವಾರಿ ಹೊರಟಂತೆ. ಬಿಂಕದಿಂದ ಬೀಗುವ ರಸಿಕಶಿಖಾಮಣಿಗಳಿಂದ ತುಂಬಿದ ಊರು ಆಗಿನ ಮೈಸೂರು. ಅವರು ಎಂದೂ ಕಾಲದ ಹತೋಟಿಯಲ್ಲಿರಲಿಲ್ಲ. ತಾವೇ ಕಾಲವನ್ನು ನಿಯಂತ್ರಿಸುತ್ತಿದ್ದರು. ಪ್ರಳಯ ಬಂದು ಕೊಚ್ಚಿಹೋದರೂ ಮೈಸೂರು ಇದ್ದೇ ಇರುತ್ತದೆ ಎಂಬ ದೃಢನಂಬಿಕೆಯಿಂದ 'ಕಾಯೌ ಶ್ರೀಗೌರಿ' ಎಂದು ಹಾಡಿ ಚಿಂತೆ ಇಲ್ಲದೆ ಮಲಗುತ್ತಿದ್ದ ನಿಶ್ಚಿಂತ ಜೀವಿಗಳು. ಇಂಥ ಸಾಧು–ನಿರುಪದ್ರವಿ ಜೀವಿಗಳಿಂದ ತುಂಬಿದ ಮೈಸೂರಿಗಿಂತ ಪ್ರಶಸ್ತ ಸ್ಥಳ ಇನ್ನೊಂದಿರಲಾರದು.

ಹೀಗೆ ಕಾಲದ ಪರಿವೆಯಿಲ್ಲದ ಮೈಸೂರಿನವರು, ಅರ್ಥಾತ್ ಮೈಗಳ್ಳರ ಸಂಘದ ಸದಸ್ಯರು, ಕಾಲವನ್ನು ಗ್ರಹಿಸುತ್ತಿದ್ದುದಾದರೂ ಹೇಗೆ?

'ಎಷ್ಟು ಗಂಟೆ ಶೌರಿ?' ಅಂತ ಕೇಳಿದೆ ಮಂಚದಿಂದ ಕೆಳಗಿಳೀತಾ.

'ಈಗ ತಾನೆ ಸಿಲೋನ್ ರೇಡಿಯೋಲಿ ಸೈಗಲ್‌ನ ದಿಲ್ ಹೀ ಟೂಟಗಯಾ ಮುಗೀತು ಸರ್' ಅಂದ ಶೌರಿ. (ಬೆಳಗಿನ ಎಂಟು ಗಂಟೆ)

'ನಾಳೆ ಬೆಳಿಗ್ಗೆ ಸುಮಾರು ಮಾರ್ನಿಂಗ್ ಷೋ ಶುರು ಆಗೋ ಹೊತ್ತಿಗೆ ಡಾಕ್ಟರ್ ಭುಜಂಗರಾಯರು ಇಲ್ಲಿಗೆ ಬರಬಹುದು'.

'ನಾನು, ಶೌರಿ ಮಧ್ಯಾಹ್ನ ಊಟ ಮುಗಿಸಿ ಸುಮಾರು ಮ್ಯಾಟ್ನಿ ಷೋ ಎರಡು ರೀಲು ಮುಗಿಯೋ ಸಮಯಕ್ಕೆ ಮೆರೀನಾ ಕಡೆಗೆ ಹೊರಟೆವು'.

ರಾಮಾಯಣ ನಾಟಕದಲ್ಲಿ ಮಾರೀಚ ಬರೋ ಹೊತ್ತಿಗೆ ಬಂದ. (ಮಧ್ಯ ರಾತ್ರಿ ಮೇಲೆ)

ಮೈಗಳ್ಳರದು ಜಾತ್ಯತೀತ ಸಂಘ. ಅಲ್ಲಿ ಯಾವೊಬ್ಬ ಸದಸ್ಯನೂ ಕೋಮುವಾದಿಯಲ್ಲ. ಶೌರಿ, ಪಾಂಡು, ಪೀಟರ್, ಬಷೀರ್, ಜಗ್ಗ, ಷಬ್ಬೀರ್, ರಾಘಣ್ಣಿ, ಇವರೆಲ್ಲ ಇಟ್ಟಿಗೆಗೂಡು ಸ್ಕೂಲಿನ ಚಡ್ಡಿ ದೋಸ್ತಿಗಳು. ಇವರಲ್ಲದೆ ಟಿಪ್ಸಿ, ಶಿಂಗ್ರೈಯಂಗಾರಿ, ರೇಖಾಪೈತ್ಯಂ, ಬುಲ್‌ಬುಲ್ ತರಂಗ್ ಗುರು ತಿಪ್ಪಣ್ಣ (ಅವನ ವೈಫ್ ಗುಲಾಬಿಮಾಲಾ), ಕಿಟ್ಟಿ, ಬಾಬು, 'ಘಂಟಾಘೋಷ' ಪತ್ರಿಕೆಯ ಸಂಪಾದಕ ಉಜ್ಜನಪ್ಪ (ಪಾಂಡುವಿನ ಬುಲ್‌ಬುಲ್ ತರಂಗ್ ಗುರು ತಿಪ್ಪಣ್ಣನ ಅಂಟೀ ಮಗ), ಡೋಂಟ್ ಫಿಕರ್ ಖಾದರ್, ಅಕಿಲಾಂಡಿ, ವೆಂಕು, ಚಂದಿ, ರಾಜಿ, ಸೋಮು, ಪ್ರಭು, ಭಾನ್‌ಸಿಂಗ್. ಸಾಲದ್ದಕ್ಕೆ ಹುಚ್ಚರ ಸುಪ್ರಸಿದ್ಧ ಡಾಕ್ಟರಾದ ಮದರಾಸಿನ ಡಾ. ಭುಜಂಗರಾಯರು ಬೇರೆ.

ರಾಘಣ್ಣಿ ಚಿಕ್ಕಪ್ಪ ತಿರುಮಲರಾಯ ಕನ್ನಡ ಚಿತ್ರರಂಗಕ್ಕೆ ಹೀರೋಯಿನ್ನುಗಳಾಗಿ ಬರೋ ತಮಿಳು, ತೆಲುಗು, ಮಲಯಾಳ, ಹಿಂದಿ, ಮರಾಠಿ ಭಾಷೆಯ ನಾಲಾಯಕ್ಕು ನಟಿಯರಿಗೆಲ್ಲಾ ಅಂಕಲ್ಲು. ಆ ತಾರೆಯರ ಅಕಾರದಿಂದ ಕ್ಷಕಾರದವರೆಗಿನ ಎಲ್ಲಾ ಸಾಮಗ್ರಿಗಳನ್ನೂ ಅವರೇ ವದಗಿಸೋರು.

'ನಗರಕ್ಕೆ 'ತಲೆಕೆಟ್ಟಕಾರನ್' ತರಹ ತಮಿಳು ಚಿತ್ರಗಳು ಬರುತ್ವಲ್ಲಾ ಸರ್. ಒಂದು ವಾರ ಪ್ರತಿ ದಿನ ಅಕಿಲಾಂಡಿಗೆ ತಮಿಳು ಚಿತ್ರಗಳನ್ನ ತೋರಿಸಿಬಿಡೋಣ ಸರ್. ಸಿನಿಮಾದಲ್ಲಿ ಎಲ್ಲರ ಮುಖಗಳೂ ಒಂದೇ ಥರಾ ಇರುತ್ವೇಂತ ಅವನಿಗೇ ತಿಳಿಯುತ್ತೆ' ಎಂದು ಶೌರಿ ಸಲಹೆ ಕೊಟ್ಟಾಗ ಪಾಂಡುವಿಗೆ 'ಕನ್ನಡ ಚಿತ್ರ ಅಕಿಲಾಂಡಿಗೂ ಬೇಡ ಅಂದಾಯ್ತು' ಎನ್ನಿಸುತ್ತದೆ.

ಬಾಬೂಗೆ ಇಲೋಪ್‌ಮೆಂಟ್, ಅಬ್‌ಸ್ಕಾಂಡ್, ಕಿಡ್ನ್ಯಾಪ್ ಎಲ್ಲಾ ಒಂದೇ. ಅವನೂ ತನ್ನ ಒರಿಜಿನಲ್ ಜಪಾನ್ ಟಿವೀಲಿ ಆಗಾಗ ಸಾಗರ್ ರಾಮಾಯಣ ನೋಡಿದ್ದಾನೆ. ಈಗ್ಲೂ ರಾವಣ, ದೀಪಿಕಾ ಇಬ್ರೂ ಇಲೋಪ್ ಆದ್ರೂಂತ್ಲೇ ಅವನ ಮನಸ್ಸಿನಲ್ಲಿರೋದು.

ಎಣಿಸಿದ ಹಾಗೆ ನೂರು ಕಾಳು ರವೆಗೆ ಒಂದೊಂದು ಗೋಡಂಬಿ,

ಒಂದೊಂದು ದ್ರಾಕ್ಷಿ ಇರಬೇಕು. ತೊಂಬತ್ತೊಂಬತ್ತು ಅಥವಾ ನೂರೊಂದು ಕಾಳು ರವೆಗೆ ಗೋಡಂಬಿ, ದ್ರಾಕ್ಷಿ ಸಿಕ್ಕಿದರೆ ಅದನ್ನು ತೋರಿಸಿದವರಿಗೆ ನೂರು ರೂಪಾಯಿ ಕೊಡುವವರು ಶಾಮಣ್ಣ. ಇನ್ನು ಇವರ್ಲ್ಲೆಲರ ಕೇಂದ್ರದ್ಲಲಿರುವವರೆಂದರೆ ಪಾಂಡು ಉರುಫ್ ಪಾಂಡುರಂಗರಾಯರು.

'ವಿರಾಟ ಭವನ'ದ ಪ್ರಸಂಗಗಳೂ ಸ್ವಾರಸ್ಯಕರ. ಶೌರಿಯ ಪರಿವಾರದಂತೆ ಇಲ್ಲಿಯೂ ಮದ್ದೂರೊಡೆ, ಬಾಳೆಕಾಯಿ ಬಜ್ಜಿ, ಖಾರಾಬೂಂದಿ, ಓಂ ಪುಡಿ, ಚೌಚೌ, ಮೊದಲಾದ ಅಡ್ಡಹೆಸರುಗಳುಳ್ಳ ಸುಹಾಸ ಗ್ರಹಗಳಿದ್ದಾರೆ. ಈ ಗ್ರಹಗಳ ಮಧ್ಯೆ ವಿರಾಜಮಾನರಾಗಿರುವವರು ಮಲ್ಹಾರಿರಾಯರು. ಇವರು ಕೂಡ ಪಾಂಡುರಂಗರಾಯರಂತೆ ಮಿಕ್ಕವರನ್ನು ಮಾತಿಗೆಳೆದು ಸಿನಿಮಾ ನಾಯಕ ನಾಯಕಿಯರ ಪೂರ್ವೋತ್ತರಗಳನ್ನೆಲ್ಲ ಎಡೆಬಿಡದೆ ಚರ್ಚಿಸುವವರು. ಅವರ ಚರ್ಚೆಯ ಗಂಭೀರ ಧಾಟಿಯೇ ಸಾಕು, ಓದುಗರನ್ನು ನಗಿಸುವುದಕ್ಕೆ.

ಹಾಗೆ ನೋಡಿದರೆ ಕೇಫ ಸೃಷ್ಟಿಸಿರುವ ಬಹಳಷ್ಟು ಪಾತ್ರಗಳು ಸುಮಾರು ನಲವತ್ತು ಐವತ್ತು ವರ್ಷಗಳ ಹಿಂದೆ ಇದ್ದಿರಬಹುದಾದ ವಿಶಿಷ್ಟ ವ್ಯಕ್ತಿತ್ವಗಳ ಪ್ರತಿನಿಧಿಗಳಷ್ಟೆ. ಅವುಗಳ ಮಾತುಗಳಿಗೂ ಆ ಕಾಲದ ವಾಸನೆಯುಂಟು. ಉದಾಹರಣೆಗೆ ಬಹಳಷ್ಟು ಬರಹಗಳಲ್ಲಿ ಕಾಣಿಸಿಕೊಳ್ಳುವ ಪಾಂಡುರಂಗರಾಯರನ್ನೇ ತೆಗೆದುಕೊಳ್ಳಿ. ಅವರ ಮೆಚ್ಚಿನ ಗಾಯಕಿ ಗೋಹರ್ ಜಾನ್ (ಈಕೆ ೧೯೧೨ ರಿಂದ ೧೯೩೪ರವರೆಗೆ ತನ್ನ ಗ್ರಾಮಾಫೋನ್ ರೆಕಾರ್ಡುಗಳ ಮೂಲಕ ಪ್ರಸಿದ್ಧಳಾಗಿದ್ದವಳು). ಅವರು ನುಡಿಸುವ ವಾದ್ಯ ಬುಲ್‌ಬುಲ್‌ತರಂಗ್(ಸಾಮಾನ್ಯ ಹವ್ಯಾಸಿಗಳು ಕೂಡ ಸಿನಿಮಾ ಹಾಡುಗಳನ್ನು ಸುಲಭವಾಗಿ ನುಡಿಸಬಹುದಾಗಿದ್ದ ಈ ವಾದ್ಯ ಈಗ ಕೊಳ್ಳಬೇಕೆಂದರೂ ಸಿಕ್ಕುವುದಿಲ್ಲ).

'ಮೈಗಳ್ಳರ ಸಂಘ' ಮತ್ತು 'ವಿರಾಟ ಭವನ' ಕನ್ನಡದಲ್ಲಿ ಸಂಭವಿಸಿರುವ ಅತ್ಯುನ್ನತ 'ಕಾಮಿಕ್' ಸೃಷ್ಟಿಗಳು. ಇವುಗಳ ಹಿನ್ನೆಲೆಯಲ್ಲಿ ಕೆಲವು ಮರೆಯಲಾಗದ ಪಾತ್ರಗಳನ್ನು ಸೃಷ್ಟಿಸಿದ ಕೇಫ ಕುಟುಂಬವೊಂದರ ಸದಸ್ಯರು ಪರಸ್ಪರ ಮಾತಾಡಿಕೊಳ್ಳುವ ಹಾಗೆ ಸ್ವಾರಸ್ಯಕರ ಪ್ರಸಂಗಗಳನ್ನು ನಿರೂಪಿಸಿದರು; ಹಾಗೆ ನಿರೂಪಿಸುವ ಹೊತ್ತಿಗೇ ನಮ್ಮ ಭಾಷೆಯಲ್ಲಿ ಹಿಂದೆಂದೂ ಕಾಣದಿದ್ದ ರೀತಿಯಲ್ಲಿ ವ್ಯಂಗ್ಯಭಾವಚಿತ್ರಗಳನ್ನು ರಚಿಸಿದರು. ನನ್ನ ದೃಷ್ಟಿಯಲ್ಲಿ ಅವರು ವಿಡಂಬನಕಾರರಲ್ಲ. ಒಂದೇ ಉಸಿರಿನಲ್ಲಿ ದ್ವೇಷಿಸುವುದನ್ನೂ ಪ್ರೀತಿಸುವುದನ್ನೂ ಒಟ್ಟಾಗಿ ಹಿಡಿದು ಖಂಡಿಸಬಲ್ಲುದು ಅಥವಾ ಪೋಷಿಸಬಲ್ಲುದು ವಿಡಂಬನ ಪ್ರತಿಭೆಯಲ್ಲ, ವ್ಯಂಗ್ಯದ ಪ್ರತಿಭೆ. ವ್ಯಂಗ್ಯವೆನ್ನುವುದು ನವುರಾದ ಕಲೆ. ಅದರ ಬೆನ್ನ ಹಿಂದೆ ಆಳವಾದ ವಿವೇಕವಂತೂ ಇದ್ದೇ ಇರುತ್ತದೆ. ವಿಡಂಬನಕಾರನಾದರೋ ಸದಾ ತಾನು ಪ್ರೀತಿಸುವುದಕ್ಕಿಂತ ಮಿಗಿಲಾಗಿ ದ್ವೇಷಿಸಬೇಕು.

ವ್ಯಂಗ್ಯವನ್ನು ಅವಲಂಬಿಸುವವನಿಂದ ಅದು ಸಾಧ್ಯವಿಲ್ಲ. ಕೇಫರಿಗಂತೂ ಅದು ಸುತರಾಂ ಸಾಧ್ಯವಿರಲಿಲ್ಲ. ಆದ್ದರಿಂದಲೇ ಕೌಟುಂಬಿಕ ಕ್ಲೇಶ, ಸಾಮಾಜಿಕ ಅಸಮಾನತೆ, ರಾಜಕೀಯ ದೊಂಬರಾಟ ಮೊದಲಾದುವೂ ಅವರ ಬರಹಗಳಲ್ಲಿ ವ್ಯಂಗ್ಯಲೇಪವುಳ್ಳ ತಿಳಿ ಹಾಸ್ಯವಾಗಿ ಸಹನೀಯವಾಗುತ್ತಿದ್ದುವು.

ಎ.ವಿ. ಕೇಶವಮೂರ್ತಿ ಹುಟ್ಟಿದ್ದು ೧೯೧೫ರಲ್ಲಿ, ತುಮಕೂರಿನಲ್ಲಿ. ಚಿಕ್ಕಮಗಳೂರಿನಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ ಮೇಲೆ ಮುಂದೆ ಓದ್ದಿದ್ದೆಲ್ಲ ಬೆಂಗಳೂರಿನಲ್ಲೇ: ಕೋಟೆ ಮಿಡ್ಲ್ ಸ್ಕೂಲ್, ಲಂಡನ್ ಮಿಷನ್ ಹೈಸ್ಕೂಲ್, ಇಂಟರ್‌ಮೀಡಿಯಟ್ ಕಾಲೇಜು, ಯೂನಿವರ್ಸಿಟಿ ಮೆಡಿಕಲ್ ಸ್ಕೂಲ್. ಅನಂತರ ಮೈಸೂರು ಆರೋಗ್ಯ ಇಲಾಖೆಯನ್ನು ಸೇರಿ ಮಲೆನಾಡಿನ ತೀರ್ಥಹಳ್ಳಿ ತಾಲೂಕಿನಲ್ಲಿ ೧೪ ವರ್ಷ ಸರ್ಕಾರಿ ವೈದ್ಯರಾಗಿದ್ದರು; ೧೯೬೫ ರಿಂದ ೧೯೮೦ರವರೆಗೆ ಶಿವಮೊಗ್ಗದ ತುಂಗಭದ್ರ ಸಕ್ಕರೆ ಕಾರ್ಖಾನೆಯಲ್ಲಿ ವೈದ್ಯಾಧಿಕಾರಿಯಾಗಿದ್ದರು. ೧೯೮೧ರ ಸುಮಾರಿಗೆ ತಮ್ಮ ಮಗ, ಸೊಸೆಯ(ಇಬ್ಬರೂ ಕೇಫರಂತೆ ವೈದ್ಯರೇ) ಜೊತೆ ಮದರಾಸಿಗೆ ಹೋಗಿ ಅಲ್ಲಿಯೇ ನೆಲೆಸಿದರು.

ಕನ್ನಡ ಹಾಸ್ಯ ಬರಹಗಾರರಲ್ಲಿ 'ಕೊರವಂಜಿ'ಯ ಹಾಗೆ ಇದ್ದಕ್ಕಿದ್ದಂತೆ ಮರೆಗೆ ಸರಿದುಹೋದ ಏಕೈಕ ವ್ಯಕ್ತಿ ಎಂದರೆ ಕೇಫರೇ ಇರಬೇಕು. ಇದಕ್ಕೆ ಕಾರಣ ಬಹುಶಃ ಅವರು ತಮ್ಮ ಸಮಕಾಲೀನರಲ್ಲಿ ಯಾರೊಬ್ಬರಂತೆಯೂ ಬರೆಯದೆ ತಮಗೇ ವಿಶಿಷ್ಟವಾದ, ಕನ್ನಡದ ಮಟ್ಟಿಗಂತೂ ತೀರ ಸ್ವೋಪಜ್ಞವಾದ, ಹಾಸ್ಯಶೈಲಿಯನ್ನು ರೂಢಿಸಿಕೊಂಡದ್ದು. ತಮ್ಮ ಬಹುಪಾಲು ಜೀವನವನ್ನು ಸಾಹಿತ್ಯ ಕೇಂದ್ರಗಳಾದ ಬೆಂಗಳೂರು, ಮೈಸೂರುಗಳಲ್ಲಿ ಕಳೆಯದೆ ಮಲೆನಾಡಿನಲ್ಲೂ ಮದರಾಸಿನಲ್ಲೂ ಕಳೆದದ್ದು. ಪುಸ್ತಕರೂಪದಲ್ಲಿ ಪ್ರಕಟವಾಗಿರುವ ಅವರ ಕೃತಿಗಳಂತೂ ಕೆಲವೇ ಕೆಲವು: 'ಭಲೋ ಆಯ್ತು ಶೌರಿ', 'ಅದುಲು-ಬದುಲು' ಹಾಸ್ಯಪ್ರಧಾನ ಕೃತಿಗಳಾದರೆ 'ಸರ್‌ಸೋತಿ' ಬರ್ನಾರ್ಡ್ ಷಾನ ಪಿಗ್‌ಮೇಲಿಯನ್ ನಾಟಕದ ರೂಪಾಂತರ. 'ಅಮೃತ' ಇನ್ನೊಂದು ಕಿರು ನಾಟಕ. ತಿಳಿ ಹಾಸ್ಯದ ಲವಲೇಶವೂ ಇಲ್ಲದ 'ಪುರಾವೃತ' ಒಂದು ಅಪರೂಪದ ಕಾದಂಬರಿ. ಇನ್ನು ಪತ್ರಿಕೆಗಳಲ್ಲೇ ಉಳಿದುಬಿಟ್ಟಿರುವ ಅಸಂಖ್ಯಾತ ನಗೆಬರಹಗಳು ಪುಸ್ತಕ ರೂಪ ತಾಳುವ ಸುಮುಹೂರ್ತಕ್ಕಾಗಿ ಕಾದು ಕುಳಿತಿವೆ.

ಡಾ. ಎ.ವಿ. ಕೇಶವಮೂರ್ತಿ ನನ್ನ ಬಂಧುವಾದರೂ ನಾನವರನ್ನು ಮೊದಲು ನೋಡಿದ್ದು ೧೯೮೯ರಲ್ಲಿ, ಮದರಾಸಿನಲ್ಲಿ. ಆಗ ಅವರಿಗೆ ಹತ್ತಿರ ಹತ್ತಿರ ಎಂಬತ್ತು ವರ್ಷ. ಐದಡಿಗೂ ಮೀರದ ಎತ್ತರ, ಬೋಳು ತಲೆ, ಎದ್ದು ಕಾಣುವ ಮೂಗು, ಕನ್ನಡಕದ ಹಿಂದೆ ಕಂಡದ್ದನ್ನೆಲ್ಲ ಅಳೆದು ಸುರಿಯುವ ಕಣ್ಣು. ಒಟ್ಟಿನಲ್ಲಿ ಮೊದಲ

ನೋಟಕ್ಕೆ ಶ್ರೀಮದ್ಗಾಂಭೀರ್ಯವನ್ನು ಸೂಸುವ ವ್ಯಕ್ತಿತ್ವ. ಆದರೆ ಅವರು ಮಾತಾಡಿದರೆ ಸಾಕು, ಜೊತೆಗಿದ್ದವರು ಸಂತೋಷದಿಂದ ಕುಣಿಯುವಂತಾಗುತ್ತಿತ್ತು. ಆ ಮಾತಿನ ಧಾಟಿ ಥೇಟ್ ಅವರ ಬರಹಗಳ ಹಾಗೆಯೇ. ಮತ್ತೆ ಅವರೇ ಸೃಷ್ಟಿಸಿರುವ ಪಾತ್ರಗಳಂತೆ ಅವರು ಮಾತಾಡದ, ಆಸಕ್ತಿ ತೋರದ ವ್ಯಕ್ತಿ-ವಿಷಯಗಳೇ ಇರುತ್ತಿರಲಿಲ್ಲ. ಮದರಾಸಿನಲ್ಲಿ ಕನ್ನಡಕ್ಕೆ ಸಂಬಂಧಿಸಿದ ಯಾವುದೇ ಕಾರ್ಯಕ್ರಮ ಎಷ್ಟೇ ದೂರದಲ್ಲಿ ನಡೆಯಲಿ, ಅಲ್ಲಿ ಕೇಫ ಇದ್ದೇ ಇರಬೇಕು. ಅಂಥ ಜೀವನೋತ್ಸಾಹ, ಸಂಭ್ರಮ!

ನಾನೊಮ್ಮೆ ರಸ್ತೆ ದಾಟುವುದರಲ್ಲಿದ್ದಾಗ ಕಾರಿನವನೊಬ್ಬ ನನ್ನ ಮೇಲೆಯೇ ಏರಿಬಂದು ನನ್ನ ಕೈಕಾಲಿಗೆ ಜಖಂ ಮಾಡಿ ಆಸ್ಪತ್ರೆಯೊಂದಕ್ಕೆ ತಳ್ಳಿದ. ಆಗ ರಾತ್ರಿ ಸುಮಾರು ಹತ್ತು ಗಂಟೆ. ಸುದ್ದಿ ತಿಳಿದದ್ದೇ ಕೇಫ ಬಂದವರು ಸರಿ ರಾತ್ರಿಯವರೆಗೂ ಜೊತೆಗಿದ್ದು ನನ್ನ ಅಳುಕನ್ನು ನಿವಾರಿಸಿದರು. ಆಸ್ಪತ್ರೆಯಿಂದ ಮನೆಗೆ ಬಂದ ಮೇಲೆ ಕೂಡ ಎರಡು ಮೈಲಿಗೂ ಹೆಚ್ಚು ದೂರದಲ್ಲಿದ್ದ ತಮ್ಮ ಮನೆಯಿಂದ ಮಟಮಟ ಮಧ್ಯಾಹ್ನದ ಉರಿಬಿಸಿಲಿನಲ್ಲಿ ನಡೆದುಕೊಂಡು ಬಂದು ನನ್ನ ಪಕ್ಕದಲ್ಲೇ ಕುಳಿತು ನಾನು ಖಿನ್ನನಾಗದ ಹಾಗೆ ನನ್ನನ್ನು ನಗಿಸುತ್ತ ಹುರಿದುಂಬಿಸಿದ್ದುಂಟು. ಮದರಾಸಿನಲ್ಲಿ ನನ್ನಂತೆ ಅದೆಷ್ಟು ಮಂದಿ ಅವರಿಂದ ನೆರವು ಪಡೆದರೋ ಲೆಕ್ಕವಿಟ್ಟವರಾರು? ಪರಿಚಿತರು, ಸ್ನೇಹಿತರು ಯಾರೇ ಇರಲಿ, ಅವರ ಮನೆಗಳಿಗೇ ಹೋಗಿ ಯೋಗಕ್ಷೇಮ ವಿಚಾರಿಸುವಷ್ಟು ಹಚ್ಚಿಕೊಳ್ಳುತ್ತಿದ್ದರು ಅವರು.

ಹಾಗೆ ನೋಡಿದರೆ ಅವರಿಗೆ ಎಲ್ಲರೂ ಬಂಧುಗಳೇ. ಯಾವಳೋ ತಾರೆ, ಇನ್ನಾವನೋ ಅಧಿಕಾರಿ, ಮತ್ತಾವನೋ ಪೋಲೀಸು ನನಗೆ ಸಂಬಂಧ ಎಂದು ಹೆಮ್ಮೆಯಿಂದ ಹೇಳುತ್ತಿದ್ದರು. ಒಂದು ದಿನ ಹಾಗೆ ಯಾರನ್ನೋ 'ನಮ್ಮವರು' ಎಂದಾಗ ನಾನು ತಮಾಷೆಗಾಗಿ 'ಹೀಗೇ ಹೇಳುತ್ತಾ ಹೋದರೆ ಅಮೆರಿಕ ಅಧ್ಯಕ್ಷ ಕ್ಲಿಂಟನ್ ಕೂಡ ನಿಮಗೆ ಬಂಧುವಾಗಬೇಕು' ಎಂದುಬಿಟ್ಟೆ.. ಅದಕ್ಕೆ ಅವರು ಕೊಟ್ಟ ಉತ್ತರ: 'ಯಾಕಾಗಬಾರದು?'.

'ಇಂಥ ಕೇಫರನ್ನು ಕರ್ನಾಟಕ ಮರೆತುಬಿಟ್ಟಿದೆಯೆ? ಗೊತ್ತಿಲ್ಲ. ಆದರೆ ಅವರ ಕೊನೆಯ ದಿನಗಳಿಗೆ ಆಶ್ರಯ ನೀಡಿದ್ದ ಮದರಾಸು ಮಾತ್ರ ಅವರನ್ನು ಮರೆತಿಲ್ಲ. ಅಲ್ಲಿನ 'ಕನ್ನಡಿಗರ ಕೂಟ' ಪ್ರತಿ ವರ್ಷ 'ಅಖಿಲ ಕರ್ನಾಟಕ ಕೇಫ ಹಾಸ್ಯ ಲೇಖನ ಸ್ಪರ್ಧೆ' ಏರ್ಪಡಿಸುತ್ತಿದೆ; ಅವರ ಜನ್ಮದಿನದಂದು ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನು ನೀಡುತ್ತಿದೆ.

ನನ್ನ ಕಾಲದ ಬಹುಪಾಲು ಓದುಗರು ಕೇಫರನ್ನು ಇದೀಗ ಮೊಟ್ಟಮೊದಲ ಬಾರಿಗೆ ಓದುತ್ತಿದ್ದಾರೆಂದು ಹೇಗೆ ಭಾವಿಸಲಿ? ಕಳೆದ ಮೂವತ್ತು ನಲವತ್ತು ವರ್ಷಗಳಿಂದ

ಪತ್ರಿಕೆಗಳನ್ನು ಓದುತ್ತಿರುವ ಒಬ್ಬನಾದರೂ 'ಮೈಗಳ್ಳರ ಸಂಘ', 'ವಿರಾಟ ಭವನ', ಇಂಥ ಹೆಸರುಗಳನ್ನು ಕೇಳಿದೊಡನೆ ಅಚ್ಚರಿಯಿಂದ ಮುಗುಳುನಗದೇ ಇರಲಾರ. ಹೀಗಿರುವಾಗ ಕೇಫ಼ರ ಈ ಬರಹಗಳನ್ನು ಓದುಗರಿಗೆ ಪರಿಚಯಿಸಬಲ್ಲವರು ಯಾರು? ನಾನಂತೂ ಅಲ್ಲ. ಸಂಪಾದಕನಾಗಿ ನಾನು ಮಾಡಿರುವುದೆಂದರೆ ಇಲ್ಲಿನ ಬರಹಗಳನ್ನು ಸಂಕಲಿಸಿಕೊಟ್ಟಿರುವುದಷ್ಟೆ. ಪುಸ್ತಕ ಪ್ರಕಟನೆಗಿಂತ ಪತ್ರಿಕೆಗಳನ್ನೇ ನೆಚ್ಚಿಕೊಂಡಿದ್ದ ಕೇಫ಼ ನೂರಾರು ನಗೆಬರಹಗಳನ್ನು ಬರೆದದ್ದುಂಟು. ಇಳಿವಯಸ್ಸಿನಲ್ಲಿ ಕೂಡ ಅವರ ಹಾಸ್ಯಪ್ರಜ್ಞೆ ಪ್ರಖರವಾಗಿಯೇ ಇತ್ತು. ಪತ್ರಿಕೆಯೊಂದು 'ನೀವೇಕೆ ಕೊರೆಯುತ್ತೀರಿ?' ಎಂದು ಕೇಳಿದಾಗ ಅವರು ಬರೆದದ್ದನ್ನು ನೋಡಿ:

'ಎಷ್ಟು ಯೋಚ್ನೆ ಮಾಡಿದರೂ ನಾನು ಕೊರಿಯೋಕ್ಕಾರಣವೇನೂಂತ ಹೊಳೀಲೇ ಇಲ್ಲ' ಶೌರೀನ ಕೇಳ್ದೆ.

'ಕಾರಣಾನೇ ಸರ್? ಚೆಕ್ ಬರುತ್ತೇನ್ನೋ ಆಸೆಯಿಂದಾಂತ ಕೊರೀರಿ ಸರ್' ಅಂದ.

'ಛೆ! ಕನ್ನಡ ವಾಚಕರು ಏನ್ ತಿಳ್ಕೊಂಡಾರು ಶೌರಿ?'

'ಯಾರ್ಸರ್ ಕನ್ನಡ ವಾಚಕರು? ಕಲಿತ ಕನ್ನಡಿಗರಲ್ಲೂ ಒಂದ್ಪರ್ಸೆಂಟ್ ತಾನೆ ಸರ್?'

ನಲವತ್ತು ವರ್ಷಗಳ ಹಿಂದೆ ಒಂದು ದಿನ ಸ್ಥಿರಲಗ್ನದಲ್ಲಿ ರಾ.ಶಿ. ನಂಗೆ ಕೊರಿಯೋ ಹುಚ್ಚಿಡಿಯೋ ಇಂಜೆಕ್ಷನ್ ಚುಚ್ಚಿದ್ರು. ಬಡಿದ ಹುಚ್ಚಿಗೆ ವುಡ್‌ಹೌಸು, ಜಿರೋಮ್ ಕೆ. ಜಿರೋಮು, ಲೀಕಾಕು, ಥರ್ಬರ್ರು, ರಾಜ್ರತ್ನಮ್ಮು, ಡಿ.ವಿ.ಜಿ. ಇಂಗು ತಿನ್ಸಿದ್ರು. ಜೀವ್ಸ್, ಮ್ಲುಲಿನರ್, ವೂಸ್ಟರ್, ಡಾನ್ ಕ್ಯಾಮಿಲೊ, ನಾಗತ್ತೆ, ಮಂಕುತಿಮ್ಮ, ಇವ್ರೆಲ್ಲ ನನ್ ತಲೇಲಿ ನುಸುಳಿ ಧಾಂದ್ಲೆ ಮಾಡೋಕ್ಶುರುಮಾಡ್ಬಿಟ್ರು. ಧಾಂದ್ಲೆ ನಿಂತೇ ಇಲ್ಲ... ನಾನು ಮನೇಲಿದ್ರೆ ಶೌರೀ ಕಾಟ. ಮೈಗಳ್ಳರ ಸಂಘಕ್ಕೆ ಹೋದ್ರೆ ಅಥ್ವಾ ವಿರಾಟ ಭವನಕ್ಕೆ ನುಗ್ಗಿದ್ರೆ ಬಾಬು, ರಾಘಣ್ಣಿ, ಚಂದಿ, ಮಲ್ಹಾರಿರಾಯ್ರು, ಕಡೆಗೆ ತಿನ್ನೋ ತಿನಿಸುಗಳು ಕೂಡ ನನ್ ತಲೇಲಿ ಕರಾಟೆ ಆಡೋಕೆ ಶುರುಮಾಡ್ಬಿಡ್ತಾವೆ. ಅದರ ಹಬೇನ್ನೆಲ ನಾನ್ಯಾಕರ್ಲೇಬೇಕಲ್ಲ?



# ಪ್ರಭುಶಂಕರ ಮತ್ತು ಅವರ ಹಾಸ್ಯ

## ಎಚ್.ವಿ. ರಂಗಾಚಾರ್

ಶ್ರೀ ಪ್ರಭುಶಂಕರ ಮತ್ತು ಅವರ ಕುಟುಂಬದವರ ಪರಿಚಯ ಸುಮಾರು ವರ್ಷಗಳಿಂದ ನನಗೆ ಇದೆ. ಬಹುಶಃ ಮೂವತ್ತಕ್ಕಿಂತ ಹೆಚ್ಚು ವರ್ಷಗಳು ಎಂದು ನನ್ನ ಅಂದಾಜು. ಪ್ರಭು ನನ್ನ ಮಾವನವರು ಪುತಿನ ಮನೆಯವರಿಗೆ ಅತ್ಯಂತ ನಿಕಟವರ್ತಿಗಳು. ನನಗೆ ಅವರ ಪರಿಚಯವಾಗಿದ್ದು ಮಾವನವರ ಮನೆಯಲ್ಲೇ. ನಾನು ಮಾವನವರ ಸಪ್ತಕನ್ಯೆಯರಲ್ಲಿ ಒಬ್ಬಳನ್ನು (ಪದ್ಮ) ವರಿಸಿದ್ದಕ್ಕೆ ಅವರು ಕೊಟ್ಟ ದೊಡ್ಡ ಬಳುವಳಿಯೆಂದರೆ ಪ್ರಭುಶಂಕರರಂತಹ ಅತ್ಯುತ್ತಮ ಸಾಹಿತಿಗಳ ಪರಿಚಯಮಾಡಿಸಿಕೊಟ್ಟಿದ್ದು. ಪದ್ಮಳಿಗೆ ಪ್ರಭುಶಂಕರ, ಅವರ ಪತ್ನಿ ಶಾಂತಮ್ಮ, ಅವರ ಇಬ್ಬರು ಹೆಣ್ಣುಮಕ್ಕಳು–ನಿವೇದಿತಾ ಮತ್ತು ಅಸಿತಾ–ಎಲ್ಲಾ ಬಹಳ ಸಲಿಗೆಯವರಾಗಿದ್ದರು. ಪ್ರಭುಶಂಕರ ಮತ್ತು ಶಾಂತಮ್ಮ ಅವರನ್ನು ನಮ್ಮ ಅತ್ತೆ ಶೇಷಮ್ಮ ಮಗ ಸೊಸೆಯಂತೆಯೇ ಕಾಣುತ್ತಿದ್ದರು. ಅವರು ಮಾಡಿಕೊಡುತ್ತಿದ್ದ ಆಂಬೊಡೆಗಳೆಂದರೆ ಪ್ರಭುವಿಗೆ ಬಹಳ ಇಷ್ಟ. ಒಮ್ಮೆ ಅವರು ತಮ್ಮ ಆಹಾರದ ಬಗ್ಗೆ ಕಟ್ಟುನಿಟ್ಟಾಗಿರಲು ನಿಶ್ಚಯ ಮಾಡಿಕೊಂಡಿದ್ದಾಗ ಮಾವನವರ ಮನೆಗೆ ಬಂದರು. ಆಗ ಶೇಷಮ್ಮ ಮಧ್ಯಾಹ್ನದ ಕಾಫಿಗೆ ಆಂಬೊಡೆ ಮಾಡಿದ್ದರು. ಒಂದೇ ಆಂಬೊಡೆ ನಾನು ಈಗ ತಿನ್ನುವುದು ಎಂದು ಪ್ರಭುಶಂಕರ ಪ್ರಾರಂಭದಲ್ಲಿ ಜೋರಾಗಿ ಘೋಷಿಸಿದರು. ಆಮೇಲೆ ಒಂದೊಂದೇ ಚೂರನ್ನು ನಿಧಾನವಾಗಿ ಬಾಯಿಗೆ ಎಸೆದುಕೊಳ್ಳುತ್ತಾ ಸಂಯಮ ಸಡಿಲವಾಗುತ್ತಾ ಹೋಯಿತು. ಕಡೆಗೆ ಆರು ಆಂಬೊಡೆ ತಿಂದು ಮುಗಿಸಬೇಕಾದ ಈ

ಪ್ರಸಂಗವನ್ನು 'ನಾನೆಂಬ ಅಪರಿಚಿತ ಎಂಬ ಲಘು ಪ್ರಬಂಧದಲ್ಲಿ ಸ್ವಾರಸ್ಯವಾಗಿ ವರ್ಣಿಸಿದ್ದಾರೆ.

ನಮ್ಮ ಮದುವೆಯಾದ ಮೇಲೆ ನಾವು ಬೆಂಗಳೂರಿನಲ್ಲಿ ಸಂಸಾರ ಮಾಡಲೇ ಇಲ್ಲ. ಮೊದಲ ಐದು ವರ್ಷ ದೆಹಲಿಯಲ್ಲಿ ಮನೆ ಮಾಡಿಕೊಂಡು ಕರೋಲ್ ಬಾಗಿನಲ್ಲಿ ವಾಸಮಾಡಿದೆವು. ಆಮೇಲೆ ಅಮೆರಿಕಕ್ಕೆ ಬಂದುಬಿಟ್ಟೆವು. ವೃತ್ತಿಯಲ್ಲಿ ಇಂಜಿನಿಯರ್ ಆಗಿದ್ದರೂ, ಅಂದಿನಿಂದಲೂ ನನ್ನ ಅಂತರಂಗದಲ್ಲಿ ಕನ್ನಡದಲ್ಲಿ ಬರೆಹಗಾರನಾಗಬೇಕೆನ್ನುವ ಆಸೆಯು ಒತ್ತಡವಿತ್ತು. ಕವಿತೆ ಬರೆಯುವುದರಲ್ಲಿ ತುಂಬಾ ಆಸಕ್ತನಾಗಿದ್ದೆ. ನನ್ನ ಈ ಪ್ರಯತ್ನಗಳು ಪ್ರಭುಶಂಕರರಿಗೆ ಆಗ ತಿಳಿದಿರಲಿಲ್ಲ. ತಿಳಿದಿದ್ದರೆ ಆದರ ಮೇಲೆ ಒಂದು ಹಾಸ್ಯ ಲೇಖನ ಬರೆಯುತ್ತಿದ್ದರೇನೋ! ಬರೆಹಗಾರನಾಗಬೇಕೆಂಬ ಆಸೆಯಿದ್ದರೂ ಮಾವನವರು ನನಗೆ ಕೊಟ್ಟ ಬಳುವಳಿಯ ದೊಡ್ಡ ಬಂಡವಾಳವನ್ನು ಸರಿಯಾಗಿ ಉಪಯೋಗಿಸಿಕೊಂಡು ಬೆಳೆಸಿಕೊಳ್ಳಲು ಸಾಧ್ಯವಾಗಲಿಲ್ಲ. ಏನಿದ್ದರೂ ಆಗ ಈಗ ಎರಡು ಮೂರು ವಾರಗಳ ರಜೆಗೆ ಬಂದಾಗ ಅವರ ಮನೆಯಲ್ಲಿ ಸಾಹಿತಿಗಳ ಪರಿಚಯವಾಗುತ್ತಿತ್ತು. ನನ್ನ ಪಾಡಿಗೆ ಅಷ್ಟೇ ಲಭ್ಯವಾಗಿದ್ದು. ಈಗ ಹಿನ್ನೋಟದಲ್ಲಿ ನೋಡಿದರೆ ಎಂತಹ ಸದವಕಾಶ ಪೋಲಾಯಿತಲ್ಲಾ ಎನ್ನಿಸುತ್ತಿದೆ.

ಪ್ರಭುಶಂಕರರನ್ನು ನೋಡಿದ ಮೊದಲನೆಯ ಭೇಟಿಯಲ್ಲೇ ಅವರು ಬಹಳ ಹಾಸ್ಯ ಪ್ರಕೃತಿಯವರೆಂದು ಗುರುತುಹಾಕಿಕೊಂಡೆ. ಅವರ ಮಾತುಗಳ ಒಕ್ಕಣೆ, ಸದಾ ನಗುನಗುತ್ತಾ ಇರುವ ಅವರ ಮುಖದಿಂದ ಅವು ಹರಿಯುವ ರೀತಿ, ಎಲ್ಲರನ್ನೂ ನಗುವಿನ ಹೊಳೆಯಲ್ಲಿ ಮುಳುಗಿಸುವಂತಹುದು. ಗೊರೂರು ರಾಮಸ್ವಾಮಿ ಅಯ್ಯಂಗಾರರ ಹಾಗೆ ಎಂದು ಅಂದುಕೊಂಡ ನೆನಪು. ಶತಾಯುಷಿ ಎ.ಎನ್. ಮೂರ್ತಿರಾಯರೂ ಪ್ರಭುಶಂಕರರೂ ಪ್ರಾಯಶಃ ಒಟ್ಟಿಗೇ ಮಾವನವರ ಭೇಟಿಗೆ ಬರುತ್ತಿದ್ದರು. ಅವರ ಸ್ವಭಾವವೂ ಅಂತಹುದೇ. ಈ ಪ್ರಸಿದ್ಧ ಲೇಖಕರೆಲ್ಲ ಮಾವನವರ ಮನೆಯಲ್ಲಿ ಅವರ ನಡುಮನೆಯ ಬೆತ್ತದ ಕುರ್ಚಿಗಳನ್ನು ಅಲಂಕರಿಸಿ ಗಂಟೆಗಟ್ಟಲೆ ವಿನೋದದ ಸಂಭಾಷಣೆಯಲ್ಲಿ ಕಾಲ ಕಳೆಯುತ್ತಿದ್ದರು. ಈ ಸಾಹಿತಿಗಳ ಬರೆಹಗಳಲ್ಲಿ ಕಂಡುಬರುವ ಮಧುರ ಹಾಸ್ಯಕಲೆ ಹರ್ಷ ತುಂಬಿದ ಇಂತಹ ಮಾತುಕತೆಯ ಸೆಷನ್‌ಗಳಲ್ಲಿಯೇ ಜನಿಸಿದುದೆಂದು ನನ್ನ ಅಭಿಪ್ರಾಯ.

ಪ್ರಭುಶಂಕರರು ಆಗಿನ ಕಾಲದಲ್ಲಿ ಮೈಸೂರಿನಲ್ಲಿ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ರೀಡರಾಗಿದ್ದರೆಂದು ನೆನಪು. ಆಗ ಶಾಂತಮ್ಮ ಅಲ್ಲೇ ಡಾಕ್ಟರಾಗಿದ್ದರು. ಅಲ್ಲಿ ಅವರಿಗೆ ವಿಶ್ವವಿದ್ಯಾಲಯದವರು ಒದಗಿಸಿದ್ದ ಒಂದು ವಿಸ್ತಾರವಾದ ಮನೆಯಿತ್ತು. ನಾವು ಒಂದು ಬಾರಿ ರಜೆಗೆ ಹೋಗಿದ್ದಾಗ ಆ ಮನೆಯಲ್ಲಿ ರಾತ್ರಿ ಊಟಕ್ಕೆ

ಅತಿಥಿಗಳಾಗಿದ್ದೆವು. ಶಾಂತಮ್ಮನವರು ಸೊಗಸಾದ ರಾಗಿ ಮುದ್ದೆ, ಸೊಪ್ಪಿನ ಹುಳಿ ಬಡಿಸಿದರು. ರಾತ್ರಿ ಬಹಳ ಹೊತ್ತು ಮಾತನಾಡುತ್ತಾ ಇದ್ದು ಮನೆಗೆ ಹೋದ ಜ್ಞಾಪಕ ಈಗ ಮಬ್ಬು ಮಬ್ಬಾಗಿ ಮನಸ್ಸಿಗೆ ಬರುತ್ತಿದೆ. ನಮ್ಮ ಮಾವನವರೂ ಆಗ ಮೈಸೂರಿನಲ್ಲೇ ಜಯಲಕ್ಷ್ಮೀಪುರದಲ್ಲಿ ಒಂದು ಸಣ್ಣ ಮನೆಯಲ್ಲಿ ವಾಸವಾಗಿದ್ದರು. ಇದು ಪ್ರಾಯಶಃ ೧೯೭೧ರ ಬೇಸಿಗೆಯಲ್ಲಿ. ಮಾವನವರು ಮೈಸೂರು ವಿಶ್ವವಿದ್ಯಾನಿಲಯ ಹೊರತರುತ್ತಿದ್ದ ಇಂಗ್ಲಿಷ್-ಇಂಗ್ಲಿಷ್-ಕನ್ನಡ ಶಬ್ದಕೋಶದ ಕೆಲಸದಲ್ಲಿ ನಿರತರಾಗಿದ್ದರು. ಅದಕ್ಕೆ ಆಗ ವಿಶ್ವವಿದ್ಯಾನಿಲಯದ ಪ್ರಸಾರಾಂಗದ ನಿರ್ದೇಶಕರಾಗಿದ್ದ ಪ್ರಭುಶಂಕರರೂ ಸಂಪರ್ಕವುಳ್ಳವರಾಗಿದ್ದರು. ಅಂತೂ ಅದು ಬಹಳ ತೂಕದ ಸಾಹಿತ್ಯ, ಶಾಶ್ವತವಾಗಿ ಉಳಿಯುವುದು ನಿಸ್ಸಂದೇಹ ಎಂದು ನನಗನ್ನಿಸಿದ್ದು ಜ್ಞಾಪಕ. ಆಗ ನಾನು ಈ ಮಾತುಗಳನ್ನು ಯಥಾರ್ಥದ ರೀತಿಯಲ್ಲಿ ಮಾತ್ರ ತಿಳಿದುಕೊಂಡಿದ್ದೆ. ಈ ಮಾತುಗಳಿಗೆ ಬೇರೆ ಅರ್ಥವೇ ಇದೆ. ಆ ಸ್ವಾರಸ್ಯಪೂರ್ಣ ಅರ್ಥ ತಿಳಿದು ನಗೆಯ ಹೊಳೆಯಲ್ಲಿ ಕೊಚ್ಚಿಹೋದುದು ಇತ್ತೀಚೆಗೆ ಪ್ರಕಟವಾಗಿರುವ ಪ್ರಭುಶಂಕರರ 'ಮಂದಹಾಸ ಮೀಮಾಂಸೆ'ಯಲ್ಲಿರುವ 'ಶಾಶ್ವತ ಸಾಹಿತ್ಯ, ತೂಕದ ಸಾಹಿತ್ಯ' ಎಂಬ ಹೆಸರಿನ ಪ್ರಬಂಧವನ್ನು ಓದಿದ ಮೇಲೆಯೇ!

ಆಮೇಲೆ ಅವರು ವಾರಾಣಸಿಯ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಅಧ್ಯಯನಕ್ಕೆ ಅನುಕೂಲಗಳನ್ನು ಕಲ್ಪಿಸಿಕೊಡುವ ಬಹಳ ಮುಖ್ಯ ಜವಾಬ್ದಾರಿಯುಳ್ಳ ಸಂದರ್ಶಕ ಪ್ರಾಧ್ಯಾಪಕ ಸ್ಥಾನವನ್ನು ಸ್ವೀಕರಿಸಿ ಅಲ್ಲಿಗೆ ತಾತ್ಕಾಲಿಕವಾಗಿ ಹೋಗಿದ್ದರೆಂದು ಕೇಳಿದೆ. ಅಲ್ಲಿಂದ ಪುನಃ ಮೈಸೂರಿಗೆ ಬಂದಮೇಲೆ ಒಂದು ಬಾರಿ ಪತ್ನಿ ಶಾಂತಮ್ಮನವರೊಡನೆ ಅಮೆರಿಕಕ್ಕೆ ಭೇಟಿಯಿತ್ತರು. ಅವರೂ ಡಾ. ಹಾಮಾನಾಯಕರೂ ನಮ್ಮ ನ್ಯೂ ಜೆರ್ಸಿಯ ಚೆರಿಹಿಲ್ ಮನೆಗೆ ಭೇಟಿ ಕೊಟ್ಟಿದ್ದು ನಮಗೆಲ್ಲಾ ಮರೆಯಲಾಗದ ಸಂಗತಿ. ಈಗ ಹಲವು ವರ್ಷಗಳ ಹಿಂದೆ ಶಾಂತಮ್ಮ ಡಯಾಬಿಟಿಸ್ ರೋಗಕ್ಕೆ ತುತ್ತಾಗಿ ಕಾಲವಾದದ್ದು ಒಂದು ವಿಷಾದದ ಸಮಾಚಾರ.

ಇತ್ತೀಚೆಗೆ ಪ್ರಭುಶಂಕರರು ಅಮೆರಿಕದಲ್ಲಿ ನಮ್ಮ 'ಕನ್ನಡ ಸಾಹಿತ್ಯ ರಂಗ'ದ ವಸಂತೋತ್ಸವವೆಂಬ ಮೊದಲನೆಯ ಸಮಾರಂಭಕ್ಕೆ ಬಂದು ಅದರ ಅಧ್ಯಕ್ಷತೆ ವಹಿಸಿ ಅದನ್ನು ತಮ್ಮ ಯಶಸ್ಸಿನಿಂದ ಬೆಳಗಿದರು. ಅದು ಅಮೆರಿಕದಲ್ಲಿ ಕನ್ನಡ ಸಾಹಿತ್ಯದ ಪ್ರಚಾರಕ್ಕೆ ಶ್ರಮಿಸುತ್ತಿರುವ ನಮಗೆಲ್ಲಾ ಬಹಳ ಉತ್ತೇಜಕವಾಗಿತ್ತು. ನಮ್ಮ ಕಾರ್ಯಗಳನ್ನು ಬಹಳ ಧಾರಾಳಮನಸ್ಸಿನಿಂದ ಮೆಚ್ಚಿ ಪ್ರಶಂಸಿಸಿದರು. (ಆಗ ಅವರು ನಮ್ಮ ಮನೆಯಲ್ಲೇ ಉಳಿದುಕೊಂಡಿದ್ದರು) ಭಾರತದಿಂದ ತಮ್ಮ ವಿದ್ವತ್ಪೂರ್ಣವಾದ ಅತ್ಯುನ್ನತ ಸ್ತರದ ಕೃತಿಗಳ ಪ್ರತಿಗಳನ್ನು ಕಷ್ಟ ಪಟ್ಟು ಹೊತ್ತು ತಂದು ನಮಗೆ ದಯಪಾಲಿಸಿದರು. ಅವರ ಈ ಪ್ರೀತಿಯನ್ನು ನಾನು ಎಂದೆಂದಿಗೂ ಮರೆಯಲಾರೆ.

ಹೀಗೆ ಪ್ರಭುಶಂಕರರೂ, ನಾನೂ ಆಗಾಗ ಅನಿಯತವಾಗಿ ಕಿಂಚಿತ್-ಕಿಂಚಿತ್ ಸಂಧಿಸಿ ಒಂದು ಬಗೆಯ ಸ್ನ್ಯಾಪ್ ಷಾಟ್ ಮೈತ್ರಿಯನ್ನು ಬೆಳೆಸಿಕೊಂಡಿದ್ದೇವೆ. ಅವರಂತಹವರು ನನ್ನ ಮಿತ್ರರಾಗಿರುವುದು ನನಗೆ ಬಹಳ ಹೆಮ್ಮೆಯ ವಿಷಯ. ಈ ತುಂಡು ತುಂಡು ಸಂಪರ್ಕಗಳ ಕಾರಣ ಅವರು ಕನ್ನಡ ಸಾಹಿತ್ಯ, ಅಧ್ಯಾಪನ ವೃತ್ತಿ, ಮತ್ತು ಭಾರತೀಯ ಜ್ಞಾನ ವಾಙ್ಮಯ ಕ್ಷೇತ್ರಗಳಲ್ಲಿ ಪಡೆದಿರುವ ಅದ್ಭುತ ಸಿದ್ಧಿಗಳ ಮತ್ತು ಹಲವಾರು ಪ್ರಶಸ್ತಿಗಳ ಸರಿಯಾದ ಪರಿಜ್ಞಾನವುಂಟಾಗಲೇ ಇಲ್ಲ. ನಾನು ಕಂಡಾಗಲೆಲ್ಲಾ ಲೋಕಾಭಿರಾಮವಾಗಿ ಹರಟುತ್ತಾ ನಗುತ್ತಾ ನಗಿಸುತ್ತಾ ಇರುವ ಪ್ರಭುಶಂಕರ ಅಷ್ಟು ಮಹತ್ತ್ವದ ಬರೆಹಗಾರರೂ ವಿದ್ವಾಂಸರೂ ಆಗಿದ್ದಾರೆಂದು ಸ್ವಲ್ಪವೂ ತಿಳಿಯಲೇ ಇಲ್ಲ. ಅದು ಒಂದು ವಿಧದಲ್ಲಿ ನನ್ನ ಪಾಲಿಗೆ ಒಳ್ಳೆಯದೇ ಆಯಿತು. ನನಗೆ ಅವರ ಮಹಾಕಾರ್ಯಸಿದ್ಧಿಗಳ ಯಥಾರ್ಥ ಅರಿವಾಗಿದ್ದರೆ ಗಾಬರಿಗೊಂಡು ಅವರೊಡನೆ ಸಹಜವಾಗಿ ಸಲಿಗೆಯಿಂದ ವರ್ತಿಸಲಾರದೇ ದೂರ ಸರಿಯುತ್ತಿದ್ದೆನೊ ಏನೋ. ಪ್ರಭುಶಂಕರರು ಇದ್ದಿಲು ಮುಚ್ಚಿದ ಕೆಂಡದಂತೆ. ಮೇಲ್ನೋಟಕ್ಕೆ ಅನಾಕರ್ಷಕವಾಗಿದ್ದು ಒಳಗಿನ ಪ್ರತಿಭೆಯ ಪ್ರಕಾಶವನ್ನು ಬಚ್ಚಿಡುತ್ತಾರೆ. ಅದೇಕೆ ಬೂದಿ ಮುಚ್ಚಿದ ಎಂದು ಹೇಳಲಿಲ್ಲ ಎಂದು ನೀವು ಕೇಳುತ್ತೀರೇನೊ. ಕಾರಣ ಇಷ್ಟೆ. ಅವರು ತಾನು ಕಪ್ಪು, ಕಪ್ಪು ಎಂದು ಬಹಳ ಬಾರಿ ಹೇಳಿಕೊಂಡಿದ್ದಾರೆ. ಅದನ್ನು ಅವರು ತಮ್ಮನ್ನೇ ಹಾಸ್ಯಮಾಡಿಕೊಳ್ಳುವುದಕ್ಕೆ ಚೆನ್ನಾಗಿ ಬಳಸಿಕೊಳ್ಳುತ್ತಾರೆ.

ಈಗ ಇಲ್ಲಿ ನಾನು ಅವರ ಮಹಾಗ್ರಂಥಕೃತಿಗಳ ಮತ್ತು ಪ್ರಶಸ್ತಿಗಳ ಪಟ್ಟಿಯನ್ನು ಕ್ರಮವಾಗಿ ಹೆಸರಿಸಲು ಹೋಗುವುದಿಲ್ಲ. ಅದಕ್ಕೆ ಇದು ಸಮಯವಲ್ಲವೆಂದು ನನ್ನ ಭಾವನೆ. ಆದರೆ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಅವರ 'ಮಂದಹಾಸ ಮೀಮಾಂಸೆ' ಮತ್ತು 'ಪ್ರಭು ಜೋಕ್ಸ್' ಎಂಬ ಕೃತಿಗಳ ಮೇಲೆ ಮಾತ್ರ ಒಂದಿಷ್ಟು ಹೇಳುತ್ತೇನೆ.

'ಮಂದಹಾಸ ಮೀಮಾಂಸೆ' ಒಂದು ಸೊಗಸಾದ ಲಘುಪ್ರಬಂಧಗಳ ಸಂಕಲನ. ಇದರಲ್ಲಿ ಪ್ರಭುಶಂಕರರು ಕಳೆದ ಹತ್ತಿಪ್ಪತ್ತು ವರ್ಷಗಳ ಕಾಲದಲ್ಲಿ ಆಗಾಗ ಪತ್ರಿಕೆ, ಮಾಸಿಕ, ತ್ರೈಮಾಸಿಕ ಮುಂತಾದವುಗಳಲ್ಲಿ ಪ್ರಕಾಶಗೊಂಡ ತಮ್ಮ ಪ್ರಬಂಧಗಳನ್ನು ಒಟ್ಟುಮಾಡಿದ್ದಾರೆ. ಪ್ರಭುಶಂಕರರ ವಿದ್ಯಾರ್ಥಿಯೂ, ಹಾಸ್ಯ ಪ್ರಪಂಚಕ್ಕೆ ಅಧಿರಾಜರೆನ್ನಿಸಿಕೊಳ್ಳುತ್ತಿರುವ ಶ್ರೀ. ಅ.ರಾ. ಮಿತ್ರ ಅವರ ಸುವಿಸ್ತೃತ ಮುನ್ನುಡಿಯಿದೆ. ಅವರು ತಮ್ಮ ಅಪ್ರತಿಮ ಹಾಸ್ಯದ ಶೈಲಿಯಲ್ಲಿ, ಈ ಪುಸ್ತಕದ ಪ್ರಬಂಧಗಳ ಹಾಸ್ಯಪ್ರತಿಭೆಯನ್ನು ಅಕ್ಕಸಾಲಿಗನು ಚಿನ್ನವನ್ನು ಒರೆಗೆ ಹಚ್ಚಿ ಪರೀಕ್ಷಿಸುವಂತೆ ಸಂಪೂರ್ಣ ವಿಶ್ಲೇಷಣೆಗೆ ಗುರಿಪಡಿಸಿ, ಇದು ಅಪರಂಜಿಯೆಂದು ಸಾಧಿಸಿ ತೋರಿಸಿದ್ದಾರೆ.

ಇದರಲ್ಲಿಯ ಲೇಖನಗಳು ಬರಿಯ ಹಾಸ್ಯ ಪ್ರಬಂಧಗಳು ಮಾತ್ರವಲ್ಲ. ಅವುಗಳಲ್ಲಿ ಒಂದೊಂದರಲ್ಲೂ ಒಂದು ಮುಖ್ಯವಾದ ಸಂದೇಶ, ಒಂದು ಹಿತವಾದ ಆದರ್ಶ ಹುದುಗಿದೆ. ಪ್ರಭುಶಂಕರರು ಬರಿಯ ಹಾಸ್ಯಗಾರರಲ್ಲ. ಉನ್ನತ ಮಟ್ಟದ ಜ್ಞಾನಿಗಳು, ಅಲ್ಲದೇ ವೃತ್ತಿಯಲ್ಲಿ ಉಪಾಧ್ಯಾಯರು, ಗುರುಗಳು. ಅವರು ನಗು ತರುವ ಶೈಲಿಯಲ್ಲಿ ಸತ್ಯವಾದುದನ್ನು, ಶ್ರೇಯಸ್ಕರವಾದುದನ್ನು ನಮಗೆ ಈ ಪ್ರಬಂಧಗಳಲ್ಲಿ ಕಾಣಿಸಿದ್ದಾರೆ. ಉದಾಹರಣೆಗೆ: 'ಮಂದಹಾಸ ಮೀಮಾಂಸೆ' ಹೆಸರಿನ ಅಗ್ರಪ್ರಬಂಧವನ್ನೇ ತೆಗೆದುಕೊಳ್ಳೋಣ. ಈ ಪ್ರಬಂಧದ ಹುರುಳು ಒಂದು ನೀತಿವಾಕ್ಯ. 'ಯಾವಾಗಲೂ ಇತರರ ಜೊತೆ ವ್ಯವಹಾರಮಾಡುವಾಗ ನಗುಮೊಗದಿಂದ ಇರು' ಎಂದು. ಅದನ್ನು ಉಚ್ಚಪೀಠದಿಂದ ಉಪದೇಶಮಾಡುವ ರೀತಿಯಲ್ಲಿ ಹೇಳದೇ ಗೆಳೆಯರಿಬ್ಬರ ಸಂಭಾಷಣೆಯ ರೂಪದಲ್ಲಿ ತಮಾಷೆಯಾಗಿ ಹೇಳಿದ್ದಾರೆ. ಈ ಅನೌಪಚಾರಿಕತೆ ಪ್ರಾಯಶಃ ಈ ಸಂಕಲನದ ಎಲ್ಲಾ ಪ್ರಬಂಧಗಳಿಗೂ ಅನ್ವಯಿಸುತ್ತದೆ.

ಪ್ರತಿ ಪ್ರಬಂಧವೂ ಬಹಳ ಸ್ವಾರಸ್ಯವಾಗಿರುವುದರಿಂದ ಪುಸ್ತಕವನ್ನು ಬಿಚ್ಚಿ ಓದಲು ಪ್ರಾರಂಭಿಸಿದಮೇಲೆ ಮುಗಿಸುವ ತನಕ ಕೈಬಿಡುವುದಕ್ಕಾಗುವುದಿಲ್ಲ. ನನಗೆ ಬಹಳ ಇಷ್ಟವಾದ ಕೆಲವನ್ನು ಇಲ್ಲಿ ಸೂಚಿಸುತ್ತೇನೆ: ಅಗ್ರ ಪ್ರಬಂಧ 'ಮಂದಹಾಸ ಮೀಮಾಂಸೆ', ನಗೆ ಉಕ್ಕಿ ಬರುವಂತೆ ಮಾಡುವ 'ಶಾಶ್ವತ ಸಾಹಿತ್ಯ ತೂಕದ ಸಾಹಿತ್ಯ', 'ನಾನೆಂಬ ಅಪರಿಚಿತ', 'ಸಾವಿನ ಸುತ್ತ', 'ಒಂದೂವರೆ ಹುಲಿ', 'ಗೊರಕೆ', 'ಸೆಮಿನಾರುಗಳು' ಇತ್ಯಾದಿ. ಈ ಲೇಖನಗಳಲ್ಲೆಲ್ಲಾ ಅತಿವಿಚಿತ್ರವೂ ಆ ಕಾರಣಕ್ಕಾಗಿಯೇ ಅತಿವಿಶಿಷ್ಟವೂ ಆದ ಪ್ರಬಂಧವೆಂದರೆ 'ಸಾವಿನ ಸುತ್ತ' ಎಂಬುದು. ಅಬ್ಬಾ, ಒಂದು ಸಂಸಾರದಲ್ಲಿ ಹೆಂಡತಿಯು ಕ್ಯಾನ್ಸರ್ ರೋಗದಿಂದ ಸತ್ತುಹೋಗಿರುವ ದಾರುಣ ಸನ್ನಿವೇಶದಲ್ಲಿ ಸದಾ ಹಾಸ್ಯಪ್ರಿಯರಾದ ಆಕೆಯ ಗಂಡ ಮತ್ತು ಅವನ ಗೆಳೆಯ (ಪ್ರಭುಶಂಕರ) ಪರಸ್ಪರ ಲಘುಸಂಭಾಷಣೆಗಳ ಉಪಚಾರಾಚರಣೆಯಲ್ಲಿ ತಮ್ಮಿಬ್ಬರ ಮನಸ್ಸಿನಲ್ಲಿ ನಡೆಯುತ್ತಿರುವ ದುಃಖಾವೇಶಗಳ ತುಮುಲವನ್ನು ಹೊರಬರದಿರುವಂತೆ ತಡೆದಿಟ್ಟುಕೊಂಡು ನಡೆದುಕೊಂಡ ಕಥೆ. ಇಂತಹ ಹಾಸ್ಯಭಂಡರನ್ನೇನೆನ್ನಬೇಕೋ ತಿಳಿಯುವುದಿಲ್ಲ. ಇದನ್ನೋದಿದ ಮೇಲೆ ಬಹಳ ಕಾಲದವರೆಗೆ ಹಾಸ್ಯವೆಂದರೇನು, ಅದರ ಪ್ರಯೋಗ ಉಪಯೋಗಗಳಲ್ಲಿ ಯಾವುದು ಉಚಿತ, ಯಾವುದು ಅನುಚಿತ ಎಂಬ ಪ್ರಶ್ನೆಯಲ್ಲಿ ಮನಸ್ಸು ಗ್ರಸ್ತವಾಗಿ ಬಹಳ ಹೊತ್ತು ತೊಳಲಾಡಿತು.

ಈಗ ಯಾವ ಬಗೆಯ ವಿಚಾರಾತ್ಮಕ ಹೊರೆಯೂ ಇಲ್ಲದ, ಕನ್ನಡ ಲೇಖಕರನ್ನೆಲ್ಲಾ ಒಂದೆ ಸಮನೆ ಕಾಡುತ್ತಿರುವ 'ಕೊಂಡು ಓದುವ ಓದುಗರ ಕ್ಷಾಮ'ದ ಶೋಚನೀಯ ಸ್ಥಿತಿಯ ವಿಚಾರವನ್ನು ಬಹಳ ನಗು ಬರುವಂತೆ ವರ್ಣಿಸುವ 'ಶಾಶ್ವತ ಸಾಹಿತ್ಯ ತೂಕದ

ಸಾಹಿತ್ಯ'ವೆಂಬ ಹೆಸರಿನ ಪ್ರಬಂಧವನ್ನು ಕುರಿತು ಹೇಳುತ್ತೇನೆ. ನೀವು ಯಾರಾದರೂ ಯಾವುದಾದರೂ ಪುಸ್ತಕವನ್ನು ಬರೆದಿದ್ದರೆ, ಅದರಲ್ಲೂ ಕತೆ-ಕಾದಂಬರಿಗಳಲ್ಲದೆ, ಸಾಮಾನ್ಯ ಜನರ ಜ್ಞಾನಾಭಿವೃದ್ಧಿ ಮಾಡಬೇಕೆಂಬ ಕಡುಬಯಕೆಯಿಂದ ಬರೆದಿದ್ದರೆ, ಈ ಪ್ರಬಂಧದ ಚುಚ್ಚು ನಗೆ ಹುಚ್ಚು ಹಿಡಿದವರಂತೆ ನಗಿಸುತ್ತದೆ. ಅನುಭವವಿಲ್ಲದೆ ಇರುವವರಿಗೆ ಇಲ್ಲಿ ಸ್ವಲ್ಪ ವಿವರಣೆ ಕೊಟ್ಟರೆ ತಪ್ಪಾಗಲಾರದು. ಸುಮಾರು ೫೦ ಮಿಲಿಯನ್ ಕನ್ನಡ ಮಾತನಾಡುವ ಜನಸಂಖ್ಯೆಯುಳ್ಳ ಕರ್ನಾಟಕದಲ್ಲಿ ಸುಮಾರು ಒಂದು ೧೦ ಸಾವಿರ ಕೊಂಡು ಓದುವ ಓದುಗರಿದ್ದಾರೆಂದು ಅಂದಾಜು ಮಾಡಲಾಗಿದೆ. ಓದುವ ವಿಷಯದಲ್ಲಿ ನಮ್ಮ ಕನ್ನಡಿಗರು ಮುಷ್ಟಿ ಬಿಚ್ಚುವವರಲ್ಲ. ಹಿಂದಿನಿಂದಲೂ ಅವರು 'ಕುರಿತೋದದೆಯುಂ ಪರಿಣತ ಮತಿಗಳ್' ಎಂದು ಹೆಸರು ಗಳಿಸಿದವರು. ಈಗ ಅದಕ್ಕೆ 'ಕೊಂಡೋದದೆಯುಂ' ಎಂಬುದನ್ನು ಸೇರಿಸಿದರೆ ಇನ್ನೂ ಚೆನ್ನಾಗಿ ಒಪ್ಪುತ್ತದೆ. ಅದರಿಂದ ಸಾಮಾನ್ಯವಾಗಿ ಯಾವ ಹೊಸ ಪುಸ್ತಕವನ್ನು ಪ್ರಕಟಿಸಬೇಕಾದರೂ ಒಂದು ಸಾವಿರ ಪ್ರತಿಗಳಷ್ಟು ಮಾತ್ರ ಅಚ್ಚು ಹಾಕುತ್ತಾರೆ. ಅದೇ ತುಂಬಾ ಧಾರಾಳ ಎಂದು ತಿಳಿಯಬೇಕು. ಪುಸ್ತಕವೇನಾದರೂ ಬಹಳ ಜನಪ್ರಿಯವಾದರೆ ಸುಮಾರು ಒಂದೆರಡು ವರ್ಷಗಳಲ್ಲಿ ಪೂರ್ಣ ಖರ್ಚಾಗಿಬಿಡುತ್ತದೆ. ಸಾಮಾನ್ಯವಾಗಿ ಕತೆ ಕಾದಂಬರಿಗಳು ಹೀಗೆ ಹಾದಿಗಾಣುತ್ತವೆ. ಅವೇನಾದರೂ ಜ್ಞಾನಾಭಿವೃದ್ಧಿಮಾಡುವಂತಹ ಗ್ರಂಥದ ಜಾತಿಗೆ ಸೇರಿದ್ದರೆ, ಅವು ಒಟ್ಟು ನೂರು ಇನ್ನೂರು ಖರ್ಚಾದರೆ ಹೆಚ್ಚು. ಅವೆಲ್ಲಾ ಮುಕ್ಕಾಲು ಪಾಲು ದೇಶದ ಲೈಬ್ರರಿಗಳಿಗೆ ಸರ್ಕಾರದವರ ಸಬ್ಸಿಡಿಯ ಸಹಾಯದಿಂದ ಮಾರಾಟವಾಗುತ್ತವೆ. ಆಗ ಉಳಿದವು ಲೇಖಕರ ಮನೆಯ ಷೆಲ್ಫುಗಳ ಮೇಲೋ ಅಥವಾ ಪ್ರಕಾಶಕರ ಮಳಿಗೆಯಲ್ಲೋ ಶಾಶ್ವತವಾಗಿ ನೆಲಸುತ್ತವೆ. ಅವು ಆಗ 'ಶಾಶ್ವತ ಸಾಹಿತ್ಯ' ಎಂದು ಹೆಸರು ಗಳಿಸಿಕೊಂಡು ಮೆರೆಯುತ್ತವೆ. ಕೆಲವು ವರ್ಷಗಳು ಕಳೆದ ಮೇಲೆ ಪ್ರಕಾಶಕರ ಮಳಿಗೆಯಲ್ಲಿ ಜಾಗದ ಕೊರತೆಯುಂಟಾಗುತ್ತದೆ. ಅಥವಾ ಲೇಖಕರ ಮನೆಯ ಷೆಲ್ಫುಗಳು ಭಾರ ತಡೆಯಲಾರದೇ ಕುಸಿದುಬೀಳುತ್ತವೆ. ಆಗ ಅವರು ಅವನ್ನು ರದ್ದಿ ಮತ್ತು ರೀಸೈಕಲ್ ಮಾರಾಟದವರಿಗೆ ತಕ್ಕಡಿ ತೂಕದ ಮೇಲೆ ಮಾರಿ ಬಿಡುತ್ತಾರೆ. ಆಗ ಅವುಗಳ ಬೆಲೆ ತೂಕದ ಮೇಲೆ ನಿಲ್ಲುವುದರಿಂದ ಅವನ್ನು ಸಹಜವಾಗಿಯೇ 'ತೂಕದ ಸಾಹಿತ್ಯ' ವೆಂದು ಜನರು ಕೊಂಡಾಡುತ್ತಾರೆ.

ಪ್ರಭುಶಂಕರರು ತಮ್ಮ ವೃತ್ತಿಜೀವನದ ಬಹುಭಾಗವನ್ನು ಕಾಲೇಜಿನ ವಾತಾವರಣದಲ್ಲಿ ಕಳೆದಿದ್ದಾರೆ. ಕ್ಲಾಸಿನಲ್ಲಿ ನಿದ್ದೆಮಾಡಿ ಗೊರಕೆ ಹೊಡೆಯುವುದು, ಪರೀಕ್ಷೆಯಲ್ಲಿ ಕಾಪಿ ಮಾಡುವುದು ಮುಂತಾದ ಕೆಲವು ಸ್ವಾರಸ್ಯಪೂರ್ಣ ಸನ್ನಿವೇಶಗಳನ್ನು ಒಂದೆರಡು ಪ್ರಬಂಧಗಳಲ್ಲಿ ನಿರೂಪಿಸಿದ್ದಾರೆ. ಇಂತಹ ಒಂದು ಸಂದರ್ಭದಲ್ಲಿ ಪರೀಕ್ಷೆಯ ಹಾಲಿನಲ್ಲಿ ಸೂಪರ್ವೈಜ಼್ ಮಾಡುತ್ತಿದ್ದ ಮೇಷ್ಟರು ನೇರವಾಗಿ

ಪತ್ಯಪುಸ್ತಕವನ್ನು ತೆಗೆದಿಟ್ಟುಕೊಂಡು ಎಲ್ಲರಿಗೂ ಕಾಣುವಂತೆಯೇ ಕಾಪಿ ಮಾಡುತ್ತಿದ್ದ ಒಬ್ಬ ಹುಡುಗನೊಬ್ಬನನ್ನು ಹಿಡಿದು ಛಾಲೆಂಜ್ ಮಾಡಿದಾಗ ನಡೆದ ಸಂಭಾಷಣೆ ತುಂಬಾ ತಮಾಷೆಯದು. ಈ ಸಂಭಾಷಣೆಯಲ್ಲಿ ಆ ವಿದ್ಯಾರ್ಥಿಯ ಮಾತುಗಳು ಬಹಳ ಮೋಹಕವಾಗಿವೆ. ಅವನು ಮೇಷ್ಟರನ್ನು 'ಸಾ' ಎಂದು ಸಂಬೋಧಿಸುತ್ತಾನೆ. 'ಈವಯ್ಯ ಅದ್ನೇ ಓದು ಓದೂಂತ ಬಂವ್ಡ ಹೊಡೀತವ್ನೆ' ಎಂದು ಮೇಷ್ಟರನ್ನೇ ಪ್ರಿನ್ಸಿಪಾಲರ ಮುಂದೆ ದೂರುತ್ತಾನೆ. ಈ ಮಾತುಗಳಿಂದ ಈಗಿನ ಸ್ವಾತಂತ್ರ್ಯೋತ್ತರ ಕಾಲದ ವಿದ್ಯಾರ್ಥಿಗಳಲ್ಲಿ ಧೈರ್ಯದಿಂದ ಗ್ರಾಮ್ಯಭಾಷೆಯಲ್ಲಿ ತಮಗೆ ಮನಸ್ಸಿಗೆ ಬಂದದ್ದನ್ನು ಅಭಿವ್ಯಕ್ತಿಪಡಿಸುವ ವಾಕ್ಯಕೌಶಲ್ಯ ಹೆಚ್ಚಿದೆ. ಉಪಾಧ್ಯಾಯರೊಡನೆ ಹೇಗೆ ನಡೆದುಕೊಳ್ಳಬೇಕೆನ್ನುವ ಬಗ್ಗೆ ನಮ್ಮ ಹಳೆಯ ಕಂದಾಚಾರದ ಕಾಲದಲ್ಲಿದ್ದ ಕಟ್ಟುನಿಟ್ಟುಗಳಿಂದ ಬಿಡುಗಡೆಪಡೆದು ಹೆಚ್ಚು ಅಭ್ಯುದಿತರಾಗಿದ್ದಾರೆಂದು ಸ್ಪಷ್ಟವಾಗುತ್ತದೆ. ಅದಿರಲಿ, ಈ 'ಬಂವ್ಡ' (ಬೊಂಬಡ) ಅಂತಹ ಮಾತನ್ನು ನಾವು ಅನೌಪಚಾರಿಕ ಮಾತುಕತೆಯಲ್ಲಿ, ಮನಸ್ಸು ಸಮಾಧಾನ ಕಳೆದುಕೊಂಡಾಗ ಹೇಳುತ್ತೇವೆ. ಅದನ್ನು ಇಲ್ಲಿ ಅಚ್ಚಿನಲ್ಲಿ ಕಂಡಾ ತುಂಬಾ ನಗು ಬಂತು.

ಈ ಪ್ರಬಂಧಗಳ ವಿವಿಧ ಕಥನವಸ್ತುಗಳ ಹಿನ್ನೆಲೆಯಲ್ಲಿ ಆಗಾಗ ಅಸ್ಪಷ್ಟವಾಗಿ ಕಂಡುಬರುವ ಒಂದು ಸ್ಥಾಯೀ ಭಾವನೆಯಿದೆ. ಅದು ಈಗಿನ ಸ್ವಾತಂತ್ರ್ಯೋತ್ತರ ಭಾರತವು ಸಾಧಿಸಿರುವ ಆರ್ಥಿಕಪ್ರಗತಿ, ಸಮಾಜದ ಸುಧಾರಣೆ, ಮತ್ತು ಡೆಮೊಕ್ರಾಟಿಕ್ ಮೌಲ್ಯಗಳ ಬಗ್ಗೆ ಸ್ವಾತಂತ್ರ್ಯಪೂರ್ವ ಭಾರತದ ಹಳೆಯ ವಿದ್ಯಾವಂತರ ವರ್ಗದವರಲ್ಲಿ ನಿಸ್ಸಂದೇಹವಾಗಿ ವ್ಯಾಪಿಸಿರುವ ಒಂದು ಬಗೆಯ ನಿರಾಸೆ ಮತ್ತು ವಿಷಾದ. ಮಂದಹಾಸ ಮೀಮಾಂಸೆಯ ಹಾಸ್ಯ ಬಹುಮಟ್ಟಿಗೆ ಆ ವಿಷಾದದ ಮೇಲೆ ನಿಂತಿದೆಯೆನ್ನಿಸುತ್ತದೆ. ಅವರ ಪೀಳಿಗೆಯ ಭಾರತಿಯರಲ್ಲಿ(ನಾನೂ ಅವರ ಸಮವಯಸ್ಕ. ನಾವಿಬ್ಬರೂ ಸಾವಿರದ ಒಂಬೈನೂರ ಇಪ್ಪತ್ತೊಂಭತ್ತರಲ್ಲಿ ಹುಟ್ಟಿದವರು. ಆ ವರ್ಷ ಅಮೆರಿಕದ ಇತಿಹಾಸದಲ್ಲಿ ಮರೆಯಲಾಗದ್ದು. ಸ್ಟಾಕ್ ಮಾರ್ಕೆಟ್ ಕುಸಿತ, ದಿಡೀರ್ ಬಡತನ, ಆತ್ಮಹತ್ಯೆಗಳು, ಸೂಪ್ ಕಿಚೆನ್ ಲೈನುಗಳು ಇತ್ಯಾದಿ ದುಸ್ಸ್ಮರಣೆಗಳ ವರ್ಷ. ಆ ವರ್ಷ ಭಾರತದಲ್ಲಿ ಹೇಗಿತ್ತೋ ನನಗೆ ತಿಳಿಯದು.) ಸ್ವಾತಂತ್ರ್ಯ ಬಂದ ಮೇಲೆ ನಮ್ಮ ದೇಶದ ಕಷ್ಟಗಳೆಲ್ಲಾ ತೀರುತ್ತವೆ, ಭಾರತವು ಒಂದು ನಿಜವಾದ ರಾಮರಾಜ್ಯವಾಗಿಬಿಡುತ್ತದೆ ಎಂಬ ಅತ್ಯಂತ ಅಸಹಜವಾದ ಆಸೆಯಿತ್ತು. ಅದು ಸಹಜವಾಗಿಯೇ ಭಂಗವಾಗಿದೆ. ಅವರು ಡೆಮಾಕ್ರಸಿಯ ಮಹಾವ್ಯಾಧಿಯಾದ ಸ್ವಾರ್ಥೀರಾಜಕಾರಣಿಗಳು ತಂದಿಕ್ಕುವ ಸಮಸ್ಯೆಗಳಿಗೆ ಸಿದ್ಧರಾಗಿರಲಿಲ್ಲ. ಡೆಮಾಕ್ರಸಿಯ ಆವರಣದಲ್ಲಿ ನಮ್ಮ ಸಮಾಜ ಯಾವ ರೀತಿಯಲ್ಲಿ

ತುಯ್ಯಾಡಿಕೊಂಡು ಬೆಳೆಯುತ್ತದೆಯೆಂಬುದನ್ನೂ ನಿರೀಕ್ಷಿಸಿರಲಿಲ್ಲ. ಅದರ ಪರಿಣಾಮ ವಿಷಾದ. ಅದರಲ್ಲಿ ಪ್ರಭುಶಂಕರರ ಹಾಸ್ಯ ಹುಟ್ಟಿ ಬೆಳೆದಿದೆ. ಅನೇಕ ಪ್ರಬಂಧಗಳಲ್ಲಿ, ಭಾಷಣ ಮಾಡುವ ರಾಜಕಾರಣಿಗಳು, ಅವರ ಭಾಷಣಗಳನ್ನು ಕೇಳುವವರಿಗೆ ಆಗುವ ಚಿತ್ರಹಿಂಸೆ, ಅವರು ಹುಟ್ಟುಹಾಕುವ ಮಹಾಮಹಾಯೋಜನೆಗಳು, ಅವುಗಳ ಉದ್ಘಾಟನೆಗೇ ಲಕ್ಷಾಂತರ ರೂಪಾಯಿಗಳ ವೆಚ್ಚ, ಆಮೇಲೆ ಅದರ ಸಾಧನೆಗೆ ಹಣವಿಲ್ಲದೇ, ಅಥವಾ ಎಲೆಕ್ಷನ್ನಿಂದ ಆದ ಅಧಿಕಾರವರ್ಗದ ಬದಲಾವಣೆಯಿಂದ ಕೈಬಿಡುವಿಕೆ, ಇವುಗಳ ಚಿತ್ರ ಸ್ಪಷ್ಟವಾಗಿ ಸಿಗುತ್ತದೆ. ದೇಶದಲ್ಲಿ ಎಲ್ಲೆಲ್ಲೂ ಒಂದು ಬಗೆಯ ಬೂಟಾಟಿಕೆಯ ಸಂಭ್ರಮ ಕಾಣುತ್ತದೆ. ಇದೆಲ್ಲಾ ಸಿನಿಕತೆ ಮಿಶ್ರಿತ ಹಾಸ್ಯಕ್ಕೆ ಎಡೆಗೊಡುತ್ತದೆ. ಸಿನಿಕ ಡೆಮಾಕ್ರಸಿಯ ಔರಸ ಪುತ್ರ.

ಪ್ರಭುಶಂಕರರ ಭಾಷೆ ನಮ್ಮ ಮೈಸೂರು ಸೀಮೆಯ ರಾಜಗನ್ನಡ. ಈ ಪದವನ್ನು ಡೆಮಾಕ್ರಸಿಯ ಈ ಕಾಲದಲ್ಲಿ ಕೆಲವರು ಸಹಿಸುವುದಿಲ್ಲವೇನೋ. ನಾನೂ ಆ ಸೀಮೆಯವನಾದ್ದರಿಂದ ಮತ್ತು ಅದು ನನ್ನ ಮೆಚ್ಚಿನ ಭಾಷೆಯಾದ್ದರಿಂದ ಹಾಗೆ ಹೇಳಿದ್ದೇನೆ. ದಯವಿಟ್ಟು ಈ ಪಕ್ಷಪಾತವನ್ನು ಕ್ಷಮಿಸಿ. ಅವರು ಸಂಸ್ಕೃತವನ್ನು ಬಹಳ ಚೆನ್ನಾಗಿ ಸುಸ್ವಾಧೀನತೆಯಿಂದ ಉಪಯೋಗಿಸುತ್ತಾರೆ. ವೈದ್ಯರ ಮೇಲಿನ ಪ್ರಬಂಧದಲ್ಲಿ ಬಂದಿರುವ ಸುಭಾಷಿತಗಳ ಉಲ್ಲೇಖ ಬಹಳ ಸಮಯೋಚಿತವಾಗಿ ಸರಿಯಾಗಿದೆ. ಇದನ್ನು ಇಲ್ಲಿ ಹೇಳಬೇಕಾದ ವಿಶೇಷವೇನು ಎಂದು ಕೇಳಿದರೆ, ಇತ್ತೀಚಿನ ಕನ್ನಡ ಲೇಖನಗಳಲ್ಲಿ ತಪ್ಪಿಲ್ಲದೇ ಸಂಸ್ಕೃತದಿಂದ ಸರಿಯಾಗಿ ಉಲ್ಲೇಖ ಮಾಡುವುದು ಅಪರೂಪವಾಗಿಬಿಟ್ಟಿದೆ. ಪ್ರಭುಶಂಕರರು ಅಜಮಾಯಿಷಿ, ಸಾದಿಲ್ವಾರು ಮುಂತಾದ ಅರಬ್ಬೀ ತದ್ಭವಗಳನ್ನೂ ಯಥಾನುಕೂಲವಾಗಿ ಉಪಯೋಗಿಸುತ್ತಾರೆ. ಕರಾರುವಾಕ್ಕು, ದಷ್ಟಪುಷ್ಟ, ನತದೃಷ್ಟ ಮತ್ತು ದುರಾದೃಷ್ಟ ಮುಂತಾದ ನಕಲೀ ತದ್ಭವಪದಗಳನ್ನೂ ಯಾವ ಕಸಿವಿಸಿಯೂ ಇಲ್ಲದೇ ಯಥೋಚಿತವಾಗಿ ಬಳಸುತ್ತಾರೆ. ಆದರೂ 'ಇದ್ರೆ, ಹೋದ್ರೆ, ಸುಮ್ನೆ' ಮುಂತಾದ ಅತ್ಯಾಧುನಿಕ ಪ್ರಯೋಗಗಳಿಗೆ ಹೋಗಿಲ್ಲ. ಆದ್ದರಿಂದ ಅವರು ನನ್ನಂತೆಯೇ ಇನ್ನೂ ಹಿಂದುವರೆದು ನಿಂತಿದ್ದಾರೆಂದು ನನಗೆ ಸ್ವಲ್ಪ ಖುಷಿಯಾಗುತ್ತಿದೆ!.

'ಪ್ರಭು ಜೋಕ್ಸ್' ಎಂಬುದು ಜೋಕುಗಳ ಒಂದು ಸಂಕಲನ. ಪ್ರಭುಶಂಕರರು ತಾವು ಅಲ್ಲಲ್ಲಿ ಓದಿ ಆನಂದಿಸಿ ಅನುಭವಿಸಿದ ಜೋಕುಗಳನ್ನು ಇಲ್ಲಿ ಸಂಪಾದಿಸಿ ನಮ್ಮ ಸಂತೋಷಕ್ಕೆ ಒದಗಿಸಿದ್ದಾರೆ. ಅವರ ಹಲವು ಸ್ವಂತ ಜೋಕುಗಳೂ ಇವುಗಳಲ್ಲಿ

ನಿಸ್ಸಂದೇಹವಾಗಿ ಬೆರೆತಿವೆ. ಓದುವುದಕ್ಕೆ ಬಹಳ ಹಾಸ್ಯಕರವಾದ ಜೋಕುಗಳು ಇವು. ಯಾವಾಗಲಾದರೂ ಪುರಸೊತ್ತಿದ್ದಾಗ ಒಂದಿಷ್ಟು ಈ ಜೋಕುಗಳನ್ನು ಓದಿ ಕಾಲವನ್ನು ಮನೋಹರವಾಗಿ ಕಳೆಯಬಹುದು. ಇಲ್ಲಿ ಜೋಕುಗಳನ್ನೂ ಒಂದು ಸಾಹಿತ್ಯ ಪ್ರಕಾರವೆಂದು ಪರಿಗಣಿಸುವುದೆ ಎಂಬ ಪ್ರಶ್ನೆಯೊಂದು ಮಾತ್ರ ನನ್ನನ್ನು ಕಾಡುತ್ತಿದೆ. ಕೂಡಲೇ ಯಾಕೆ ಸೇರಿಸಬಾರದು ಎಂಬ ಮರುಪ್ರಶ್ನೆಯೂ ಏಳುತ್ತಿದೆ. ಈ ಪ್ರಶ್ನೆಯನ್ನು ಎತ್ತಿದ್ದರಿಂದಲೇ ನಾನು ಎಷ್ಟು ಹಿಂದಿನಕಾಲದಲ್ಲೇ ಇನ್ನೂ ಹಿಂದುವರೆಯುತ್ತಿದ್ದೇನೆ ಎನ್ನುವುದು ಬಯಲಾಗಿಬಿಡುವುದೆಂಬ ಭಯದಿಂದ ಈ ಲೇಖನವನ್ನು ಇಲ್ಲಿಗೇ ಮುಗಿಸುತ್ತೇನೆ.

ಗ್ರಂಥಋಣ

೧. ಪ್ರಭುಶಂಕರ: ಮಂದಹಾಸ ಮೀಮಾಂಸೆ, ಪ್ರ. ಅಭಿನವ, ಬೆಂಗಳೂರು, ೨೦೦೩

೨. ಪ್ರಭುಶಂಕರ: ಪ್ರಭು ಜೋಕ್ಸ್, ಪ್ರ. ಡಿ.ವಿ.ಕೆ. ಮೂರ್ತಿ, ಮೈಸೂರು, ೨೦೦೪



*ಹಾಸ್ಯದ ಕಾಂತಿಯಿಂದ ಮಿರುಗುವ ಪಾಂಡಿತ್ಯ, ಪ್ರತಿಭೆ*

# ಅ. ರಾ. ಮಿತ್ರ

## ಶ್ರೀಕಾಂತ ಬಾಬು

ಮೊನಚು ಮಾತಿಗೆ ಮತ್ತೊಂದು ಹೆಸರು ಅ.ರಾ. ಮಿತ್ರ. ಅದು ಮೊನಚಷ್ಟೇ ಅಲ್ಲ, ಮಿತ್ರರ ಪ್ರತಿಮಾತಿಗೂ ಆಳವಾದ ಅಧ್ಯಯನ-ವಿದ್ವತ್ತಿನ ಲೇಪನವುಂಟು. ಕರ್ನಾಟಕದ ಆಕಾಶವಾಣಿ, ದೂರದರ್ಶನಗಳಲ್ಲಿ ಲೆಕ್ಕವಿಲ್ಲದಷ್ಟು ಚಿಂತನೆ, ಉಪನ್ಯಾಸಗಳು, ಕುಮಾರವ್ಯಾಸಭಾರತದ ವ್ಯಾಖ್ಯಾನ, ಹಾಸ್ಯೋತ್ಸವ ರಂಜನೆ, ಹರಟೆ ಇತ್ಯಾದಿಗಳನ್ನು ಪ್ರಸ್ತುತಪಡಿಸಿ ಕನ್ನಡಿಗರಲ್ಲಿ ಅತ್ಯಂತ ಜನಪ್ರಿಯರಾಗಿರುವ ಹಾಗೂ ಜನಾದಣೀಯರಾಗಿರುವ ವ್ಯಕ್ತಿ ಪ್ರೊ. ಅ. ರಾ. ಮಿತ್ರ.

ಉತ್ತಮ ಹಾಸ್ಯವು ಆನಂದದ ಒಂದು ಸ್ವರೂಪ. ಜ್ಞಾನಕ್ಕೆ ಒಂದು ಬಾಗಿಲು. ಅದೊಂದು ಸರ್ವಮಾನವ ಸಾಮಾನ್ಯವಾದ ಧರ್ಮ. ನಮ್ಮ ಜೀವನಾನುಭವದಲ್ಲಿ ಇಂಥಾ ಮೃದು ವಿಚಾರಗಳು ಸಿಹಿ ಹಣ್ಣುಗಳ ನಡುವೆ ಇರುವ ಹುಳಿ ದಾಳಿಂಬದಂತೆ ಪ್ರಿಯವೂ ಹೌದು, ಹಿತವೂ ಹೌದು. ಅ. ರಾ. ಮಿತ್ರ ಅವರು ಕನ್ನಡ ರಸಿಕರಿಗೆ ಈ ತಿಳಿ ಹಾಸ್ಯದ ಔತಣವನ್ನು ಹಲವಾರು ವರ್ಷಗಳಿಂದ ನಾನಾ ರೀತಿಯಿಂದ ಉಣಬಡಿಸುತ್ತಿದ್ದಾರೆ.

ಮಿತ್ರ ಅವರಿಗೆ ಎರಡು ಮುಖಗಳು. ಒಂದು ವಿದ್ವತ್ಪೂರ್ಣ 'ಅಂತರ್ಮುಖ'. ಇದು ಅವರ ಆಳವಾದ ಅಧ್ಯಯನ, ಅಪಾರವಾದ ಜ್ಞಾನಸಂಪತ್ತಿನಿಂದ ಮೂಡಿ ಬಂದದ್ದು. ಇನ್ನೊಂದು ಬಹಳ ಪರಿಚಿತವಾದ ವಿನೋದ, ಹಾಸ್ಯಗಳಿಂದ ಕೂಡಿದ

'ಬಹಿರ್ಮುಖ'. ಒಂದು ಚೋದ್ಯದ ಸಂಗತಿ ಏನೆಂದರೆ, ಮಿತ್ರ ಅವರು ಜನಪ್ರಿಯರಾಗಿರುವುದು ಅವರ ವಿನೋದಮಯ ಬಹಿರ್ಮುಖದಿಂದ. ಬಹಳಷ್ಟು ಮಂದಿ ಅವರನ್ನು ಒಬ್ಬ ಹಾಸ್ಯಗಾರನನ್ನಾಗಿ ಗುರುತಿಸುತ್ತಾರೆ. ಇದು ಒಂದು ವಿಧಕ್ಕೆ ವಿಷಾದನೀಯವೆಂದೇ ಹೇಳಬೇಕು. 'ಹಾಸ್ಯ' ಮಿತ್ರ ಅವರಿಗೆ ಕಚ್ಚಾ ಸಾಮಗ್ರಿ ಅಲ್ಲ. ಅದು ಅವರಿಗೆ ಮೌಲ್ಯ. ಎಂಥಹ ಸನ್ನಿವೇಶದಲ್ಲಾದರೂ ಅವರು ಹಾಸ್ಯವನ್ನು ಸೃಷ್ಟಿಸಬಲ್ಲರು ಅಥವಾ ಗುರುತಿಸಬಲ್ಲರು. ಇದು ಅವರ ಅಂತರ್ಮುಖದ ವಿದ್ವತ್ತಿನ ಪ್ರಭಾವದಿಂದ ಎನ್ನುವುದರ ಅರಿವು ಹಲವರಿಗಿಲ್ಲ.

ಮಿತ್ರ ಅವರು ಲಂಡನ್ನಿಗೆ ಮೊದಲ ಬಾರಿ ಹೋದಾಗ, ರಾತ್ರಿ ಮಲಗಿ ಬೆಳಗ್ಗೆ ಎದ್ದಾಗ, ಅವರ ಸ್ನೇಹಿತರು 'ನಿನ್ನೆ ಅರಾಮಿತ್ರ?' ಅಂತ ಕೇಳಿದ್ದಕ್ಕೆ ಮಿತ್ರ ಅವರ ಉತ್ತರ ಸಿದ್ಧ! 'ನಿನ್ನೆ ಮಾತ್ರ ಅಲ್ಲಪ್ಪಾ ಇವತ್ತೂ ನಾನು ಅರಾಮಿತ್ರನೇ!' (ಅರಾಮಿತ್ರ –ಪದವನ್ನು ಬಿಡಿಸಿದಾಗ).

ಮಿತ್ರ ಅವರ ಛಂದೋಮಿತ್ರದಿಂದ ಆರಿಸಿದ ಇನ್ನೆರಡು ಉದಾಹರಣೆಗಳನ್ನು ನೋಡಿ.

'ಸರಕಾರದ ಕೆಲಸ ದೇವರ ಕೆಲಸ' ವೆನ್ನುವ ಘೋಷಣೆ ಮಿತ್ರರಿಗೆ ಕಾಣಿಸಿದ್ದು ಹೀಗೆ...

ಸರಕಾರದ ಕಾರ್ಯವು ದೇವರ ಕಾರ್ಯ ಕಣೋ
ಉಳಿದಾರಿಗು ಸಾಧ್ಯವೆ ಇಲ್ಲ ಕಣೋ
ಭಗವಂತನಿಗೊಬ್ಬಗೆ ಮಾತ್ರವೆ ಸಾಧ್ಯ ಕಣೋ
ಅಪ್ಪನಿಗೆ ಎದುರುವಾದಿಸುವುದೆ? ತಪ್ಪು, ಹೀಗೆ ಮಾಡಿ ಎನ್ನುತ್ತಾರೆ....
ಎದರುವಾದಿಸಿದರೆ ಸಿಟ್ಟು ಬರದೆ ಇಹುದೆ ಅಪ್ಪಗೆ?
ಆದ್ದರಿಂದ ಎದರು ವಾದಿಸಲ್ಕೆ ಹೋಗಬೇಡಿರಿ
ಸ್ವಲ್ಪ ಪಕ್ಕದಲ್ಲಿ ನಿಂತು ವಾದಿಸಿದರೆ ಉತ್ತಮ

'ಸಮಗ್ರ ಲಲಿತಪ್ರಬಂಧಗಳು', 'ವಚನಕಾರರು ಮತ್ತು ಶಬ್ದಕಲ್ಪ', 'ಒಳನೋಟಗಳು', 'ಛಂದೋಮಿತ್ರ', 'ಕೈಲಾಸಂ', 'ಪ್ರೇಮನದಿಯ ದಡದಲ್ಲಿ', 'ಮಿತ್ರಪ್ರಬಂಧಗಳು' ಮುಂತಾದ ತಮ್ಮ ಕೃತಿಗಳಿಂದ ಹೆಸರುಮಾಡಿರುವ, ನಿಯತಕಾಲಿಕಪತ್ರಿಕೆಗಳಿಗೆ ಬರೆಯುವ ತಮ್ಮ ಅಂಕಣಬರಹ, ಧಾರಾವಾಹಿ ಲೇಖನ,

ಹರಟೆಗಳಿಂದ ಮನೆ ಮಾತಾಗಿರುವ ಅಕ್ಕಿಹೆಬ್ಬಾಳು ರಾಮಣ್ಣ ಮಿತ್ರ ಅವರು ಹುಟ್ಟಿದ್ದು ೧೯೩೫ರಲ್ಲಿ. ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜಿನಲ್ಲಿ ಕನ್ನಡ ಎಂ.ಎ. ವ್ಯಾಸಂಗ ಮಾಡಿದರು. ಇವರ ಗುರುವರ್ಗದಲ್ಲಿ ತೀ. ನಂ. ಶ್ರೀ ಹಾಗೂ ಡಿ. ಎಲ್. ನರಸಿಂಹಾಚಾರ್‌ಗಳೂ ಸೇರಿದ್ದರು. ಇವರಿಬ್ಬರನ್ನೂ ಮಿತ್ರ ಅವರು ಬಹಳ ಗೌರವದಿಂದ ತಮ್ಮ ವಿದ್ಯಾರ್ಜನೆಗೆ, ಮುಂದಿನ ವಿಕಾಸಕ್ಕೆ ಭದ್ರವಾದ ಅಡಿಪಾಯ ಹಾಕಿಕೊಟ್ಟವರೆಂದು ಸದಾಕಾಲವೂ ಸ್ಮರಿಸುತ್ತಾರೆ.

ವಿದ್ಯಾಭ್ಯಾಸದ ನಂತರ ವೃತ್ತಿಜೀವನದ ಆರಂಭ. ಬೆಂಗಳೂರಿನ ಸೈಂಟ್ ಜೋಸೆಫ್ ಕಾಲೇಜಿನಲ್ಲಿ೧೯೫೫ರಲ್ಲಿ ಕನ್ನಡ ಅಧ್ಯಾಪಕರಾಗಿ ಉದ್ಯೋಗ ಪ್ರಾರಂಭಿಸಿ,೧೯೭೪ರವರೆಗೆ ಅಲ್ಲಿದ್ದು ನಂತರ ಸರ್ಕಾರಿ ಕಾಲೇಜು ಶಿಕ್ಷಣ ಇಲಾಖೆಗಳಲ್ಲಿ ಪ್ರವಚಕರಾಗಿ ನೇಮಕಗೊಂಡು ಮಡಿಕೇರಿ, ತುಮಕೂರು, ಬೆಂಗಳೂರಿನ ಸರಕಾರೀ ಕಾಲೇಜು ಶಿಕ್ಷಣ ಇಲಾಖೆಗಳಲ್ಲಿ ಅವರು ಕೆಲಸ ಮಾಡಿದರು, ಪ್ರಾಧ್ಯಾಪಕರಾದರು. ಈ ಮಧ್ಯೆ 'American Peace Corps' ನಲ್ಲಿ ಕನ್ನಡ ಶಿಕ್ಷಕರೂ ಆಗಿದ್ದರು. ಕೊನೆಗೆ ಬೆಂಗಳೂರಿನ ಮಹಾರಾಣಿ ಕಾಲೇಜಿನ ಪ್ರಾಂಶುಪಾಲರಾಗಿ ನಿವೃತ್ತರಾದರು.

ವೃತ್ತಿಯಲ್ಲಿದ್ದಾಗಲೂ, ನಿವೃತ್ತರಾದಾ ಮೇಲೂ ಪ್ರಾಧ್ಯಾಪಕ ಮಿತ್ರ ಅವರ ಮಾತುಗಾರಿಕೆಗೆ ಬಹಳ ಬೇಡಿಕೆ. ನಿರರ್ಗಳವಾಗಿ ಹಳಗನ್ನಡ, ನಡುಗನ್ನಡ, ನವೋದಯ ನವ್ಯ ನವ್ಯೋತ್ತರ ಸಾಹಿತ್ಯ ಪ್ರಕಾರಗಳ ಬಗೆಗೆ ನುಡಿ, ಚಿಂತನೆಗಳನ್ನು ಹರಿಯಬಿಡಬಲ್ಲ ಅವರನ್ನು ಕರ್ನಾಟಕದ ಎಲ್ಲೆಡೆ ವಿವಿಧ ಶಾಲಾ ಕಾಲೇಜುಗಳಲ್ಲಿ ವಿಚಾರ ಸಂಕಿರಣ ಸಾಹಿತ್ಯೋತ್ಸವಗಳಲ್ಲಿ ನಾನಾ ವಿಷಯಗಳ ಬಗ್ಗೆ ಭಾಷಣಕ್ಕಾಗಿ ಜನ ಆಹ್ವಾನಿಸುತ್ತಾರೆ. ಅವರ ಲಘು ಹಾಸ್ಯ ಪೂರಿತ ಆದರೆ ಚಿಂತನಶೀಲ ಮಾತುಗಳನ್ನು ಕೇಳಲು ಜನ ಕಿಕ್ಕಿರದು ನೆರೆಯುತ್ತಾರೆ. ಈಗ ಕೆಲವು ವರ್ಷಗಳಿಂದ ಹಾಸ್ಯೋತ್ಸವಗಳನ್ನು ನಿಯೋಜಿಸಿ ನಡೆಸಿಕೊಡುತ್ತಿರುವ ಪರಿಪಾಠವೂ ಇವರ ಬೆನ್ನಿಗೆ ಬಿದ್ದಿದೆ. 'ಅಖಂಡ ಕರ್ನಾಟಕದಲ್ಲಿ ಹಾಸ್ಯ ಉಪನ್ಯಾಸಕಾರರನ್ನು ತಯಾರಿಸಿ ಬೆಳೆಸಿದ ಅಪವಾದವೂ ನನ್ನ ಮೇಲಿದೆ' ಎನ್ನುತ್ತಾರೆ!

ಮಿತ್ರ ಅವರ ಕಾರ್ಯಕ್ರಮ ವಿವಿಧ ವಿಶ್ವವಿದ್ಯಾನಿಲಯುಗಳಲ್ಲಿ, ಸಾಹಿತ್ಯ ಸಮ್ಮೇಳನಗಳಲ್ಲಿ, ಶಾಲಾ ಕಾಲೇಜುಗಳಲ್ಲಿ ಇಂಗ್ಲೀಷ್/ಕನ್ನಡ ಪ್ರಬಂಧಮಂಡನೆಗಳಿಗೇ ಸೀಮಿತ ಗೊಂಡಿಲ್ಲ– ಹಲವಾರು ಸಾಂಸ್ಕೃತಿಕ ಸಂಘಟನೆಗಳೂ ಇವರ ವಿದ್ವತ್ಪೂರ್ಣ ಉಪನ್ಯಾಸಗಳನ್ನು ಸದುಪಯೋಗಗೊಳಿಸಿಕೊಳ್ಳುತ್ತವೆ. ಉದಾಹರಣೆಗೆ, ಭಾರತೀಯ ವಿದ್ಯಾಭವನದಲ್ಲಿ ಕನ್ನಡ ಕಾವ್ಯದ ಸವಿವರ ಉಪನ್ಯಾಸಮಾಲಿಕೆಯಲ್ಲಿ ಸುಮಾರು ೪೦೦ ಉಪನ್ಯಾಸಗಳನ್ನು ನೀಡಿದ ಹೆಗ್ಗಳಿಕೆ ಇವರದು. ಬೆಂಗಳೂರಿನ ಗೋಖಲೆ

ಸಾರ್ವಜನಿಕ ಸಂಸ್ಥೆಯಲ್ಲಿ ಕುಮಾರವ್ಯಾಸ, ಲಕ್ಷ್ಮೀಶ, ಡಿ.ವಿ.ಜಿ ಮೊದಲಾದವರ ಬಗ್ಗೆ ನೂರಾರು ಉಪನ್ಯಾಸಗಳನ್ನು ಮಾಡಿ ಪಂಡಿತ ಪಾಮರರನ್ನು ರಂಜಿಸಿದ್ದಾರೆ. ಈ-ಟೀವಿ ದೂರದರ್ಶನದಲ್ಲಿ ಡಾ. ನಾಗವಲ್ಲಿ ನಾಗರಾಜ್ ಅವರೊಂದಿಗೆ ಗಮಕ ಕಾರ್ಯಕ್ರಮವನ್ನು ನಾಲ್ಕು ವರ್ಷಕ್ಕೂ ಮಿಗಿಲಾಗಿ ಪ್ರತಿನಿತ್ಯ ನೆಡೆಸಿಕೊಟ್ಟರು. ಇದೊಂದು ವಿಕ್ರಮ.

ಇವರ ಸಾಧನೆಯನ್ನು ಗುರುತಿಸಿ ಹಲವಾರು ಸಂಘ, ಸಂಸ್ಥೆಗಳು ಪ್ರಶಸ್ತಿಗಳನಿತ್ತು ಗೌರವಿಸಿವೆ. ಇವುಗಳಲ್ಲಿ ಗೊರೂರು ಪ್ರಶಸ್ತಿ, ಕಾವ್ಯಾನಂದ ಪ್ರಶಸ್ತಿ, ನವರತ್ನರಾಮ ಪ್ರಶಸ್ತಿ ಮತ್ತು ನಗೆರಾಜ ಪ್ರಶಸ್ತಿಗಳು ಮುಖ್ಯವಾದವು.

ಇಂಗ್ಲೆಂಡಿನ ಕನ್ನಡ ಬಳಗದ ಆಹ್ವಾನವನ್ನು ಸ್ವೀಕರಿಸಿ ಎರಡು ಬಾರಿ ಅಲ್ಲಿಗೆ ಹೋಗಿ, ಇಂಗ್ಲೆಂಡಿನ ವಿವಿಧ ಭಾಗಗಳಲ್ಲಿ ಕನ್ನಡಿಗರನ್ನು ಉದ್ದೇಶಿಸಿ ಉಪನ್ಯಾಸಗಳನ್ನು ಕೊಟ್ಟು ಬಂದಿದ್ದಾರೆ. ಅಮೆರಿಕಾ ದೇಶಕ್ಕೂ ಎರಡು ಬಾರಿ ವಿಶ್ವ ಕನ್ನಡ ಸಮ್ಮೇಳನದಿಂದ ಆಹ್ವಾನಿತರಾಗಿ ಹಲವಾರು ಪ್ರವಚನಗಳನ್ನಿತ್ತಿದ್ದಾರೆ.

ಮಿತ್ರ ಅವರ 'ನಾನೇಕೆ ಕೊರೆಯುತ್ತೇನೆ' ಹಾಗೂ 'ಆರತಕ್ಷತೆ' ಪ್ರಬಂಧಗಳು ಅವರ ವಿನೋದ ಪ್ರಜ್ಞೆಗೆ ಜೀವಂತ ಸಾಕ್ಷಿಗಳು. ಇವೆರಡರಲ್ಲೂ ತಲಾ ಐವತ್ತು ಪ್ರಬಂಧಗಳನ್ನು ಸಂಕಲಿಸಿದ್ದಾರೆ. ಮಿತ್ರರವರ ಹಾಸ್ಯ ಪ್ರಜ್ಞೆಯ ಪರಾಕಾಷ್ಠೆಯನ್ನು ಈ ಪ್ರಬಂಧಗಳಲ್ಲಿ ಕಾಣಬಹುದು.

'ಆರತಕ್ಷತೆ' ಪ್ರಬಂಧ ಸಂಕಲನದಲ್ಲಿ ವ್ಯಾಕರಣದ ಪರಿಭಾಷೆಯಲ್ಲಿ ಬರೆದ 'ಪಂಡಿತನ ಸಂಕಟ', ದೇವತೆಗಳನ್ನು ಲೇವಡಿಮಾಡುವ 'ಬಾಲ್ಕನಿಯ ಬಂಧುಗಳು', ಕನ್ನಡ ಭಾಷೆಯ ದೋಷಯುಕ್ತ ಬಳಕೆಯ ಬಗ್ಗೆ 'ಶಬ್ದ ಶುದ್ಧಿ', ಭೂತಭಯದ ಬಗ್ಗೆ 'ಬಾಡಿಗೆಮನೆ' ಇತ್ಯಾದಿಗಳು ನಮ್ಮನ್ನು ನಕ್ಕು ನಲಿಸುವುದರಲ್ಲಿ ಸಂದೇಹವಿಲ್ಲ.

'ಆರತಕ್ಷತೆ' ಪ್ರಬಂಧದಲ್ಲಿ ಕಾಣುವ ಜನರ ಉಲ್ಲಾಸ, ಸಡಗರ, ಸಂಭ್ರಮಗಳನ್ನು ಕುರಿತು ಒಂದು ಲವಲವಿಕೆಯ ಚಿತ್ರ ಮೂಡಿಸುತ್ತಾರೆ. ಆ ಸನ್ನಿವೇಶದಷ್ಟೇ ಸೊಗಸಾಗಿದೆ ಅವರ ಗದ್ಯವೂ:

ಮದುವೆ ಗದ್ದಲದಲ್ಲೆಲ್ಲಾ ಮುಖ್ಯವಾದುದೆಂದರೆ ಸಂಜೆಯ ಆರತಕ್ಷತೆಯ ಸಮಯದ ಕಾರ್ಯಕಲಾಪ. ಅದೊಂದು ಮನೋಹರಲೋಕ. ಭ್ರಮಾಲೋಕ ಎಂದರೂ ಸಲ್ಲುತ್ತದೆ. ನಿಮ್ಮ ಕಣ್ಣೆದುರಿಗೇ ಈ ಕನಸು ಮೈದುಂಬಿಕೊಂಡು ನಿಲ್ಲುತ್ತದೆ. ನೀವು ಒಳಗೆ ಹೋಗುವ ಮುನ್ನವೇ ಎಡಭಾಗದಲ್ಲಿ ಸಾಲುಗಟ್ಟಿ ನಿಂತ ಚೆಲುವೆಯರ ತಂಡ ಹೂ ಗಂಧಗಳೊಡನೆ ನಿಮ್ಮ ಸ್ವಾಗತ ಬಯಸಿ ನಿಮಗೆ ಭ್ರಮಾಲೋಕದ ಕೀಲಿಕೈ

ಕೊಡುವುದುಂಟು. ಜನರ ಮುಖದರ್ಶನವೇ ಒಂದು ಸೌಭಾಗ್ಯ. ವಸಂತಸ್ಪರ್ಶದಿಂದ ರೋಮಾಂಚಿತವಾದ ಋತುವೈಭವದಂತೆ ಎಲ್ಲರ ಮುಖದ ಮೇಲೂ ಚಿಲುಮೆಯಾಡುವ ನಗೆ. ಅದೂ ಎಂತಹ ನಗೆ! ನೀವಾಗಲೀ, ಆ ಮುಖಗಳ ಒಡೆಯರಾಗಲೀ ಮತ್ತೆ ಉಳಿದ ದಿನಗಳಲ್ಲಿ ಕಾಣಲಾಗದ ನಗೆ. ಜನರನ್ನು ಅವರ ಅತ್ಯುತ್ತಮ ವೇಷದಲ್ಲಿ, ಅತ್ಯುತ್ತಮ ಮುಖಭಂಗಿಯಲ್ಲಿ ಮುಕ್ತ ಮನಸ್ಸಿನಲ್ಲಿ ಅಲ್ಲಿ ಕಾಣಬಹುದು. ಒಬ್ಬಿಬ್ಬರೆಂದಲ್ಲ, ಎಲ್ಲ ದಿಕ್ಕುಗಳಿಂದ ಹರಿದು ಬರುವ ಒಂದು ರೂಪಪ್ರವಾಹ ಆ ಅವರಣದಲ್ಲೆಲ್ಲಾ ಹರಿದಾಡುತ್ತಿರುತ್ತದೆ. ಎದೆ ಕುಲುಕಿಸಿ, ಕಣ್ಣಲ್ಲಿ ಮಿಂಚು ತುಳುಕಿಸಿ ನಡೆದಾಡುವ ಅಥವಾ ಹರಿದಾಡುವ ಸೌಂದರ್ಯದ ಸುಳಿಗಳು ಮದುವೆಯ ಮನೆಯಲ್ಲಿ ಉನ್ಮಾದದ ಹೊಳೆ ಹರಿಸುತ್ತವೆ. ಆ ರೂಪಪ್ರವಾಹದ ಸುಳಿಗಳನ್ನೂ ಐರಿಳಿತದ ವೈಭವವನ್ನೂ ಬಿಡುಗಣ್ಣರಾಗಿ ದಡದಲ್ಲಿ ನಿಂತು ನೋಡುತ್ತಾ ಪುರುಷವೃಕ್ಷಗಳು ಮೀಸೆಯ ಮೊದಲಲ್ಲೇ ನಗುತ್ತವೆ.

ಆದರೆ ಈ ರೂಪಪ್ರವಾಹದಲ್ಲಿ ಕೊಚ್ಚಿಹೋಗುವಾಗಲೂ 'ವಿದ್ವಾಂಸ' ಮಿತ್ರರಿಗೆ ವ್ಯಾಕರಣದ ಚಿಂತನೆ ಹೋಗದು. ಇಲ್ಲಿ ಕೇಳಿ:

> ...ಆರತಕ್ಷತೆ ಎಂದು ಬರೆಯುವುದು ತಪ್ಪು ಎಂದು ವ್ಯಾಕರಣ ಹೇಳುತ್ತದೆ. ಶಬ್ದನಿಷ್ಠರಾದ ವೈಯಾಕರಣರು ಆರತಿ-ಅಕ್ಷತೆ ಎಂದು ಎರಡು ಶಬ್ದಗಳನ್ನೂ ಬೇರೆ ಬೇರೆ ಇರಿಸಿ ಮಧ್ಯೆ ಒಂದು ರೇಖೆ ಹಾಕಿ, ಗಡಿ ದಾಟಬಾರದೆಂದು ಹಟ ಹಿಡಿಯುತ್ತಾರೆ. ಇವೆರಡೂ ಬೇರೆ ಜಾತಿಯ ಶಬ್ದಗಳಂತೆ. ಇವುಗಳ ಮದುವೆಯನ್ನು ವ್ಯಾಕರಣ ಒಪ್ಪುವುದಿಲ್ಲ. (ಮದುವೆಯ ಸಂಭ್ರಮದ ಸಮಯದಲ್ಲಿ ಈ ಪದಗಳ 'ಮದುವೆ'ಯ ಬಗ್ಗೆ ಅಸಮ್ಮತಿ ತೋರಿರುವುದು ಎಷ್ಟು ಸ್ವಾರಸ್ಯವಾಗಿದೆ ನೋಡಿ!) 'ಅರತ್ಯಕ್ಷತೆ' ಎಂದು ಬರೆಯಬೇಕಂತೆ... ಆದರೂ ಈ ಶಬ್ದ ವ್ಯಾಕರಣವನ್ನು ಧಿಕ್ಕರಿಸಿ ಆರತಕ್ಷತೆ ಎಂದೇ ಕರೆಸಿಕೊಂಡು ಜನಪ್ರಿಯವಾಗಿದೆ. ತನ್ನಂತೆಯೇ ಎಲ್ಲರಲ್ಲೂ ಸ್ವತಂತ್ರ ಮನೋಧರ್ಮವನ್ನು ಅರಳಿಸಿ ನಮ್ಮನ್ನು ಒಂದು ಸಂಭ್ರಮದ ಲೋಕಕ್ಕೆ ಎಳೆದೊಯ್ಯುತ್ತದೆ. ನಗೆ, ಕೇಕೆ, ಉಲ್ಲಾಸಗಳ ಭಾವತರಂಗಗಳನ್ನು ಮದುವೆಯ ಚಪ್ಪರದ ತುಂಬ ಹರಡುತ್ತದೆ.

'ಆರತಕ್ಷತೆ' ಎಂಬ ಪದ ವ್ಯಾಕರಣವನ್ನು ಧಿಕ್ಕರಿಸಿ ಸಾರಿತೋರುವ ಸ್ವಾತಂತ್ರ್ಯ ಜನರನ್ನು ಹೇಗೆ ಸಚೇತನರನ್ನಾಗಿಸುತ್ತದೆ ಎಂಬಲ್ಲಿ ಜನ ಮತ್ತು ಭಾಷೆಯ ನಡುವಿನ ನಿಕಟ ಜೈವಿಕ ಸಂಪರ್ಕವನ್ನು ಎಷ್ಟು ಸೂಚ್ಯವಾಗಿ ತೋರಿಸಿದ್ದಾರೆ ಗಮನಿಸಬಹುದು.

'ಆರತಕ್ಷತೆ'ಯಲ್ಲಿ ನಗುಮೊಗಗಳನ್ನು ಕಂಡ ಮಿತ್ರರು 'ಮುಖಮಂಡಲದಲ್ಲಿ' ಕಾಣುವುದೇನು?

ನಾನು ಅನೇಕ ಮುಖಗಳನ್ನು ಕಂಡಿದ್ದೇನೆ. ಕೆಲವರ ಮುಖದಲ್ಲಿ ಜಗತ್ತಿನ ಭೂಪಟದ ಸುತ್ತ ಅಕ್ಷಾಂಶ ರೇಖಾಂಶದ ಗೆರೆಗಳೇ ತುಂಬಿಕೊಂಡಿರುವ ಹಾಗೆ ಬರಿಯ ಸಪ್ಪೆಗೆರೆಗಳೇ ತುಂಬಿರುತ್ತವೆ. ಕೆಲವು ಮುಖಗಳು ಬಸ್ಸಿನಲ್ಲಿ ಕುಳಿತಿರಲಿ, ಆಫೀಸಿನಲ್ಲಿರಲಿ, ಕ್ಲಬ್ಬಿನಲ್ಲಿರಲಿ, ಸದಾ ಉಷ್ಣವಲಯದ ಪ್ರಭಾವಕ್ಕೆ ಸಿಕ್ಕಿ ಕಾಯಿಸಿದ ತಮಟೆಯಂತೆ ಉರಿಮೋರೆಯಾಗಿರುತ್ತವೆ. ಹತ್ತಿರ ಸುಳಿದ ಗ್ರಹಗಳನ್ನೆಲ್ಲ ಸುಟ್ಟು ನಿರ್ನಾಮ ಮಾಡುವಂತಿರುತ್ತವೆ ಈ ಮುಖಾರವಿಂದಗಳು!

'ಪಂಡಿತನ ಸಂಕಟ'ದಲ್ಲಿ ಪಂಡಿತ ಮಕ್ಕಳ ಬಗ್ಗೆ ತನ್ನ ಸಂಕಟ ತೋಡಿಕೊಳ್ಳುವುದು ನೋಡಿ:

ಇವಳಿರಲಿ, ಆ ಮಕ್ಕಳಿಂದೇನಾದರೂ ಸುಖ ಇದೆಯೇ? ಅಮ್ಮನ್ನೇ ಹೋತುಕೊಂಡಿವೆ ವರ್ಗದ ಅಂತ್ಯಾಕ್ಷರಗಳ ಹಾಗೆ! ನಾನು ಹೊರಗೆ ಹೊರಟರೆ ಸಾಕು, ಒಂದು ಪಿಳ್ಳೆ ನಾನೂ ಬರ್ತೇನೆ ಅಂತ ನನ್ನ ಕಾಲಿಗೇ ಸುತ್ತಿಕೊಳ್ಳುತ್ತೆ 'ಊ' ಕಾರದ ಹಾಗೆ. ಎರಡನೆಯ ಮಗುವಿಗೋ 'ಖಟಲ'ಗಳ ಹಾಗೆ ತಲೆಕೊಟ್ಟೇ ನೆಟ್ಟಗಿಲ್ಲ. ಕೊನೇ ಹುಡುಗ ಶುದ್ಧ ತಲೆಹರಟೆ. ಬಿಂದುವಿನ ಹಾಗೆ ಎಲ್ಲಾ ವಿಷಯಗಳಲ್ಲೂ ತಲೆಹಾಕಿಕೊಂಡೇ ಬರ್ತಾನೆ. ಆ ಹುಡುಗರಂತೂ ಏನು ಗಲೀಜು ಅಂತೀರಿ, ಹೊಲಸು ಕೈ ಬರಹದ ಹಾಗೆ!

'ಬಾಲ್ಕನಿಯ ಬಂಧುಗಳು' ಪ್ರಬಂಧದಿಂದ:

ಮನುಷ್ಯನಿಗೆ ಅನನುಕೂಲತೆಗಳು ಬೆಳೆಯುತ್ತಾ ಹೋದಂತೆಲ್ಲಾ ಈ ದೇವತೆಗಳ ಸಂಖ್ಯೆಯೂ ಅನುಕ್ರಮವಾಗಿ ಬೆಳೆಯುತ್ತಲೇ ಹೋಯಿತು. ಒಂದೊಂದು ದೇವತೆಗೂ ವಿಶಿಷ್ಟವಾದ ರೂಪ, ಕೆಲಸಗಳನ್ನು ಕೊಡಲಾಗಿದೆ. ಒಬ್ಬೊಬ್ಬ ದೇವತೆಗೆ ಒಂದೊಂದು ಖಾತೆಯ ಕೆಲಸ ಹಂಚಲಾಗಿದೆ. ಆದರೆ ಎಷ್ಟೊಂದು ದೇವತೆಗಳಿದ್ದಾರೆ ಎಂದರೆ ಒಮ್ಮೊಮ್ಮೆ ಮನುಷ್ಯರಿಗೇ ಗೊಂದಲವಾಗಿ ಎರಡು ಮೂರು ದೇವತೆಗಳಿಗೆ ಒಂದೇ ಖಾತೆಯನ್ನು ಹಂಚಿ ಅವರಲ್ಲಿ ಯಾರನ್ನೂ ತೆಗೆದು ಹಾಕಲಾಗದೆ ಎಲ್ಲರನ್ನೂ ಸಮಾನವಾಗಿ ಗೌರವಿಸಬೇಕಾಗುತ್ತದೆ. ಮುಖ್ಯವಾದ ವಿದ್ಯಾ ಇಲಾಖೆಯನ್ನೇ ಗಣಪತಿ, ಸರಸ್ವತಿ ಇವರಿಗೆ ಹಂಚಲಾಗಿದೆ. ಈ ವಿಷಯದಲ್ಲಿ ದೇವತೆಗಳೂ ನಮ್ಮ ರಾಷ್ಟ್ರದ ಮಂತ್ರಿಮಂಡಲಗಳಂತೆಯೇ ಹಂಚಿಕೆಯಲ್ಲಿ ಪಕ್ಷಪಾತವಾಗಿದೆ ಎಂದು ಆರೋಪಣೆ ನೆಡೆಸುವುದುಂಟು. ದೇವವರ್ಗದಲ್ಲಿಯೂ ಈ ಭೇದ ಭಾವ ಕಡಿಮೆಯಾಗಿಲ್ಲ; ಅಲ್ಪಸಂಖ್ಯಾತರ ಸಂಕಟ ನಂದಿಲ್ಲ. ಎಲ್ಲರ ಗೌರವಕ್ಕೆ ಪಾತ್ರರಾದ ಇಂದ್ರಚಂದ್ರವರುಣಾದಿಗಳು ಒಂದು ಕಡೆ ನಗುತ್ತಿದ್ದರೆ ತೀರ ಅನಾದರಕ್ಕೆ ಪಾತ್ರರಾದ ಅಶ್ವಿನೀ ದೇವತೆಗಳೇ ಮೊದಲಾದ ಅಲ್ಪಸಂಖ್ಯಾತ ವರ್ಗದವರ ಗೋಣಗಾಟ ತಪ್ಪಲಿಲ್ಲ

(ಇವರ ಹೆಸರು ಹೇಳಿಕೊಂಡು ಹುಟ್ಟಿದ ನಕುಲ ಸಹದೇವ ಮೊದಲಾದ ನಿರ್ಭಾಗ್ಯ ಮಾನವರಿಗೂ ಈ ಅನಾದರದ ಕಳಂಕ ತಪ್ಪಲಿಲ್ಲ)...

*

ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ, ಕಾವ್ಯಾಭ್ಯಾಸಿಗಳಿಗೆ ಭಾಷೆಯ ವ್ಯಾಕರಣದಂತೆ ಛಂದಸ್ ಶಾಸ್ತ್ರದ ಅಧ್ಯಯನಗಳೂ ಅತೀ ಅವಶ್ಯಕ. ಆದರೆ ಆ ಭಾಗ ಹಲವರಿಗೆ ಕಬ್ಬಿಣದ ಕಡಲೆಯಾಗಿ ಅಡ್ಡ ನಿಲ್ಲುವುದುಂಟು. ಅ.ರಾ. ಮಿತ್ರರ 'ಛಂದೋಮಿತ್ರ' ಆ ಹಾದಿಯನ್ನು ಸಾಕಷ್ಟು ಸುಗಮಗೊಳಿಸಲು ಪ್ರಯತ್ನಿಸುತ್ತದೆ. ಇಲ್ಲಿ ಸಮಕಾಲೀನ ವಸ್ತುಗಳನ್ನು ವಿಷಯವಾಗಿಟ್ಟುಕೊಂಡು ಉದಾಹರಣೆಗಳನ್ನು ಆಯಾಯ ಛಂದಸ್ಸಿನಲ್ಲಿ ಪದ್ಯ ರಚನೆಮಾಡಿದ್ದಾರೆ.

ಮಿತ್ರ ಅವರು ಛಂದಸ್ಸನ್ನು ಪದ್ಯರೂಪದಲ್ಲಿ ಹೀಗೆ ಹೇಳುತ್ತಾರೆ:

ಛಂದಸ್ಸೆಂಬುದು ಕಾವ್ಯದ
ಬಂಧದ ಕೀಲುಗಳ ತೆರೆದು ತೋರುವ ಶಿಲ್ಪಂ
ವಂದ್ಯರ ಕವಿಗಳ ಪ್ರತಿಭಾ
ಸ್ಪಂದದ ನಾಡಿಗಳ ಮಿಡಿದು ನೋಡುವ ಶಾಸ್ತ್ರಂ

ಶತಾವಧಾನಿ ಗಣೇಶ್ ಆವರು 'ಛಂದೋಮಿತ್ರ'ದ ಮುನ್ನುಡಿಯಲ್ಲಿ ಹೀಗೆ ಬರೆಯುತ್ತಾರೆ:

'ಛಂದೋಮಿತ್ರದ ವೈಶಿಷ್ಟ್ಯ ಹಲವು ಬಗೆಯದು. ಆಧುನಿಕ ವಿದ್ವಾಂಸರ ಸಂಶೋಧನೆಯಂತೆ ತಿಳಿಸಬೇಕಾದ ವಸ್ತುವಿಗೆ ಅ ವಸ್ತುವನ್ನೇ ಮಾಧ್ಯಮವನ್ನಾಗಿ ಮಾಡಿಕೊಂಡರೆ ಪರಿಣಾಮಕಾರಿಯಾದ ಸಂವಹನ ಸಾಧ್ಯ. ಇದನ್ನು ಮನಗೊಂಡಿರುವುದರ ಸೊಗಸೇ ಛಂದೋಮಿತ್ರದ ಶರೀರ ವಿನ್ಯಾಸ. ಪೂರ್ಣವಾಗಿ ತಿಳಿಗನ್ನಡದ ಬಗೆಬಗೆಯ ಛಂದಸ್ಸಿನ ಪದ್ಯಗಳಲ್ಲಿಯೇ ಸಮಸ್ತ ವಿಚಾರಗಳನ್ನೂ ಅಭ್ಯಾಸಿಗಳ ಆಳವರಿತು ಹೇಳುವ ಕಲೆ ಅನನ್ಯ. ಇದರಿಂದಾಗಿ ಓದುತ್ತಲೇ ಪದ್ಯ ರಚಿಸುವ ತವಕ ಯಾರಿಗಾದರೂ ಆಗುತ್ತದೆ. ಆಶ್ಚರ್ಯಕರವಲ್ಲದಿದ್ದರೂ ವಿಸ್ಮಯಾವಹವಾದ ಮನವರಿಕೆ ಆಗುತ್ತದೆ. ಓ ಛಂದಸ್ಸು ಇಷ್ಟು ಸುಲಭವೇ? ಇಷ್ಟು ಸೊಗಸೇ? ಎಂದು'.

ಛಂದಸ್ಸನ್ನು ಸುಲಭವಾಗಿ ಮಕ್ಕಳಿಗೆ ಅರ್ಥವಾಗುವಂತೆ ಛಂದೋಮಾರ್ಗವಾಗಿ ಬರೆದ ಪುಸ್ತಕ ಛಂದೋಮಿತ್ರ. ಸಂಸ್ಕೃತದ ಕ್ಷೇಮೇಂದ್ರ ಕವಿ ಹೇಳಿದ 'ತಿಕ್ತೌಷಧಮ್

ಗುಥಲೇಪೇನ'ಎನ್ನುವ ಸೂತ್ರದಂತೆ ಹಾಸ್ಯವಾಗಿ ಛಂದಸ್ಸನ್ನು ತಿಳಿಸುವ ಮಾರ್ಗವನ್ನು ಅನುಸರಿಸಿದ್ದಾರೆ. ಕೆಲವು ಉದಾಹರಣೆಗಳನ್ನು ಇಲ್ಲಿ ನೋಡಬಹುದು.

'ಉತ್ಪಲಮಾಲಾವೃತ್ತ'ಕ್ಕೆ ಲಂಚಕೋರರ ಉದಾಹರಣೆ:

ಲಂಚವ ಕೈಲಿ ಮುಟ್ಟುವುದೆ? ಛೀ ಅದು ಪಾಪದ ಕಾರ್ಯ ಕಾಣಿರೋ
ಕೊಂಚವು ಬುದ್ಧಿಯಿಲ್ಲ ನಿಮಗಾರಿಗು ಜೇಬಿಗೆ ಹಾಕಿ ಹೋಗಿರೋ

'ಮತ್ತೇಭವಿಕ್ರೀಡಿತ'ದಲ್ಲಿ ಕುಡುಕನ ಸಂಕಟವನ್ನು ಪೊಲೀಸ್ ಪರಿಭಾಷೆಯಲ್ಲಿ ಹೀಗೆ ವಿವರಿಸುತ್ತಾರೆ:

ಮನೆಯಲ್ಲೇ ಕುಡಿಯೋಣವೆಂದರದಕೆ ಕರ್ಫ್ಯೂ ವಿಧಾನಂಗಡಾ
ಶನಿಕಾಟಂಗಳು ಅಶ್ರುವಾಯು ಸಿಡಿತಂ ಪತ್ನೀಸುಪುತ್ರರ್ಕಳಿಂ
ಕೊನೆಗಾಮಾಲೀಕ ಕೂಡಿ ಒಮ್ಮಿಗಿಲೆ ಲಾಠೀಛಾರ್ಜಗೈಸಿರ್ದಪಂ
ಕೊನೆಯಾಯ್ತೆನಗೊಂದೇ ಸೂತ್ರ ಕಂಡಲ್ಲಿ ಗುಂಡಿಕ್ಕುವೆಂ

'ಸಾಂಗತ್ಯ'ದ ಉದಾಹರಣೆಯಲ್ಲಿ ಇಡ್ಲಿಯ ಮಹತ್ವವನ್ನು ನೋಡಿ:

ನೋಡಿರಿ ಸಾವಿರ ವರ್ಷಕು ಹಳೆಯದು
ಇಡ್ಡಲಿ ಎನ್ನುವ ಶಬ್ದ
ನುಡಿ ಶಾಸ್ತ್ರದ ಬಲದಿಂದ ಇಂತೆಂದು ನುಡಿದರು
ದೊಡ್ಬೆಲೆ ನರಸಿಂಹಾಚಾರ್ಯ
ತರಗತಿ ಮುಗಿಸಿ ಕ್ಯಾಂಟೀನಡೆ ಹೊರಟಾಗ
ತರಿಸಿದ ಇಡ್ಲಿಯ ಕಂಡು
ಸೊರಗಿದ ಮುಖಗಳ ನಮಗೆಲ್ಲ ಅನಿಸಿತು
ಖರೆಖರೆ ಇದು ಅಂದಿನದೇ

'ಷರಪಟ್ಪದಿ' – ನಿದ್ರಿಸಲು ಸಲಹೆ

ನಿದ್ದೆಯು ಬರದಿರೆ
ಓದಿರಿ ನನ್ನಯ
ಛಂದೋಗ್ರಂಥವ ಮರಯದಲೇ
ಛಂದದಿ ನಿದ್ರೆಯು
ಬಂದೇ ಬರುವುದು
ಒಂದು ಪುಟವು ಮುಗಿಯುವಷ್ಟರೊಳೇ

ಮಿತ್ರರವರ ಭಾಷೆಯ ಶೈಲಿ 'ನಿಚ್ಚಂ ಪಸತು' ಎನ್ನುವಂತೆ ವಾಚೋವಿಧೇಯ-ವಾಗಿರುತ್ತದೆ. ರಸದ ದೃಷ್ಟಿಯಿಂದ ನೀರಸವಾದಂಥ ಜೈನ ಕಾವ್ಯಗಳನ್ನೂ ಸಹ ಕಾವ್ಯಮಯವಾಗಿ ವಿವರಿಸುವ ಕಲೆ ಅವರೊಬ್ಬರಿಗೇ ಸಿದ್ಧಿಸಿದೆಯೇನೋ ಎನ್ನಿಸುತ್ತದೆ. ಅವರ ಪ್ರಬಂಧಗಳಲ್ಲಿ ಕಾವ್ಯಗುಣಗಳು ಅಡಗಿವೆ. ಭಾಷೆಯ ಚಮತ್ಕಾರ, ಅರ್ಥದ ಸ್ವಾರಸ್ಯ, ಗುಣ ಗ್ರಹಣಶಕ್ತಿ ಇವೆಲ್ಲವೂ ಮಿತ್ರರವರ ವಿಶೇಷತೆಗಳು.

ಮಿತ್ರ ಅವರು ಇತ್ತೀಚೆಗೆ 'ಮಹಾಭಾರತದ ಪಾತ್ರ-ಸಂಗತಿಗಳು' ಎಂಬ ಪುಸ್ತಕವನ್ನು ಮೂರು ಸಂಪುಟಗಳಲ್ಲಿ ಹೊರತಂದಿದ್ದಾರೆ. ಮಹಾಭಾರತದ ಸುಮಾರು೨೮೦ ಪಾತ್ರಗಳ ಪರಿಚಯ ಈ ಪುಸ್ತಕಗಳಲ್ಲಿವೆ.

ಮಿತ್ರ ಅವರು ತಮ್ಮ ಪತ್ನಿ ಶ್ರೀಮತಿ ಲಲಿತ ಹಾಗೂ ಮಕ್ಕಳು, ಮೊಮ್ಮಕ್ಕಳೊಂದಿಗೆ ಸಾಹಿತ್ಯ ಕೃಷಿಯನ್ನು ಮುಂದುವರಿಸುತ್ತಾ ಬೆಂಗಳೂರಿನಲ್ಲಿ ವಿಶ್ರಾಂತ ಜೀವನವನ್ನು ನಡೆಸುತ್ತಿದ್ದಾರೆ. ಅವರ ಹಾಸ್ಯದ ತೊರೆ ಎಂದೂ ಬತ್ತದಿರಲಿ ಎಂದು ಹಾರೈಸುತ್ತೇನೆ.

ಗ್ರಂಥಋಣ

೧. ಅ.ರಾ. ಮಿತ್ರ: ಆರತಕ್ಷತೆ (ಆಯ್ದ ಲಲಿತ ಪ್ರಬಂಧ ಸಂಕಲನ), ವಸಂತ ಪ್ರಕಾಶನ, ನಂ. ೧೦, ತುಳಸಿವನಂ, ಬೆಂಗಳೂರು -೫೩, ೨೦೦೫

೨.ಅದೇ: ಛಂದೋಮಿತ್ರ, ಕಾಮಧೇನು ಪ್ರಕಾಶನ, ೬, ನಾಗಪ್ಪ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು-೨೦, ಎರಡನೇ ಮುದ್ರಣ ೧೯೯೫



# ಹಾಸ್ಯ ಸಾಹಿತಿ ಶ್ರೀನಿವಾಸ ವೈದ್ಯ

ಎಚ್.ಕೆ. ನಂಜುಂಡಸ್ವಾಮಿ

ಇಂದಿನ ಕನ್ನಡ ಹಾಸ್ಯ ಸಾಹಿತ್ಯದಲ್ಲಿ ಶ್ರೀನಿವಾಸ ವೈದ್ಯರ ಹೆಸರು ದೊಡ್ಡದು. ಮೂರು ಹಾಸ್ಯ ಪ್ರಧಾನವಾದ ಪುಸ್ತಕಗಳು, ಅನೇಕ ಹಾಸ್ಯ ಲೇಖನಗಳ ಮೂಲಕ ಅವರ ಹೆಸರು ಕರ್ನಾಟಕದಲ್ಲಿ ಪ್ರಸಿದ್ಧವಾಗಿದೆ.

ಶ್ರೀನಿವಾಸ ವೈದ್ಯರು ಉತ್ತರ ಕನ್ನಡದ ಧಾರವಾಡದಲ್ಲಿ ಅವಿಭಕ್ತ ಕುಟುಂಬವೊಂದರಲ್ಲಿ ಹುಟ್ಟಿ ಅಕ್ಕ ಅಣ್ಣಂದಿರೊಡನೆ ನಕ್ಕು ನಗುತ್ತ, ನಗಿಸುತ್ತ ಬೆಳೆದವರು. ಇವರ ತಂದೆಯವರ ಹಾಸ್ಯಪ್ರಜ್ಞೆ ಇವರಿಗೆ ರಕ್ತಗತವಾಗಿ ಬಂದಿತ್ತು. ಹುಟ್ಟೂರು ನವಿಲಗುಂದದ ಗ್ರಾಮೀಣ ಹಾಸ್ಯ ಇವರ ಮನಸ್ಸನ್ನು ಸೆರೆಹಿಡಿದಿಟ್ಟಿತ್ತು. ಇದಲ್ಲದೆ ಚಿಕ್ಕಂದಿನಲ್ಲೇ ಇವರ ಮೇಲೆ ವಿಶೇಷ ಪ್ರಭಾವ ಬೀರಿದ ಲೇಖಕರೆಂದರೆ ಎಚ್.ಕೆ.ರಂಗನಾಥ್, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎ.ಎನ್. ಮೂರ್ತಿರಾವ್, ಲಾಂಗೂಲಾಚಾರ್ಯ ಹಾಗೂ ಮರಾಠಿಯ ಪೂ.ಲಾ. ದೇಶಪಾಂಡೆ.

ಧಾರವಾಡದಲ್ಲಿದ್ದಾಗ ಕಥಾವಳಿಯ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ, ರಂಗನಾಥರ 'ಹಲ್ಲು' ಎಂಬ ಹಾಸ್ಯಪ್ರಬಂಧ ವೈದ್ಯರ ಮೇಲೆ ವಿಶೇಷ ಪ್ರಭಾವವನ್ನು ಬೀರಿತು. ರಂಗನಾಥರ ಉತ್ಪ್ರೇಕ್ಷಾಲಂಕಾರದಿಂದ ಭರಿತವಾದ ಪ್ರಬಂಧ, ವೈದ್ಯರ ಲೇಖನಿಯ ಮೇಲೂ ತನ್ನ ಅಚ್ಚನ್ನೊತ್ತಿತು. 'ವೈದ್ಯರು, ತಮ್ಮ ಲೇಖನಗಳಲ್ಲಿ ಉತ್ಪ್ರೇಕ್ಷಾಲಂಕಾರವನ್ನು ಹಾಸ್ಯಕ್ಕಾಗಿ ಉಪಯೋಗಿಸಿಕೊಳ್ಳಲು ರಂಗನಾಥರೇ ಮುಖ್ಯ ಕಾರಣರು ಎಂದಿದ್ದಾರೆ' (ಆಧಾರ ೧). ದೇಶಪಾಂಡೆಯವರ ಏಕಪಾತ್ರಾಭಿನಯಗಳು

ಮತ್ತು ಅವರ ಮುಂಬೈ ಕರ್ನಾಟಕದ ಮಧ್ಯಮವರ್ಗದ ವಿಶಿಷ್ಟ ಚಿತ್ರಣ, ಗೊರೂರರ 'ನಮ್ಮೂರ ರಸಿಕರು' ಮತ್ತು'ವೈಯಾರಿ', ಮೂರ್ತಿರಾಯರ 'ಲಲಿತೆಯ ವಿದ್ಯಾಭ್ಯಾಸ' ಮತ್ತು 'ಪ್ರಣಯ ಗೀತೆ' ವೈದ್ಯರ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿದ್ದವು.

ಕನ್ನಡದ ಹಾಸ್ಯ ಲೇಖಕರೆಲ್ಲರಮೇಲೆ ಪ್ರಭಾವಮಾಡಿದ್ದ ಕೊರವಂಜಿ ಇವರ ಮೇಲೂ ತನ್ನ ಮೋಡಿಯನ್ನು ಹಾಕಿದ್ದಳು. ಕೊರವಂಜಿಯ ಹಾಸ್ಯ ಲೇಖನಗಳು ಮತ್ತು ವ್ಯಂಗ್ಯ ಚಿತ್ರಕಾರ ಆರ್.ಕೆ. ಲಕ್ಷ್ಮಣ್ ಅವರ ಚಿತ್ರಗಳು ಇವರ ಮನಸ್ಸನ್ನು ಅಪಹರಿಸಿದವು. ಇಂತಹ ಹಾಸ್ಯ ವಾತಾವರಣದಿಂದ, ಹಾಸ್ಯಲೇಖಕರಿಂದ ಪ್ರಭಾವಿತರಾದ ಶ್ರೀನಿವಾಸ ವೈದ್ಯರು ಬರಹಕ್ಕೆ ಇಳಿದಿದ್ದು ಆಕಸ್ಮಿಕವಾಗಿಯೇ. ಕೊರವಂಜಿಯ ಸಂಪಾದಕರಾದ ರಾಶಿಯವರು ದೈವಾಧೀನರಾದಾಗ, ವೈದ್ಯರು ಒಂದು ಸಂತಾಪ ಸೂಚಕ ಪತ್ರವನ್ನು ಕೊರವಂಜಿಗೆ ಕಳಿಸಿದರಂತೆ. ಕಾಗದದ ಶೈಲಿ ಮತ್ತು ಅದರಲ್ಲಿ ಅವರು ವ್ಯಕ್ತಪಡಿಸಿದ್ದ ಹಾಸ್ಯಚೇತನ, ಇಂತಹ ಕಾಗದಗಳನ್ನು ಓದಿ ಉತ್ತರ ಬರೆಯುತ್ತಿದ್ದ, ಕೊರವಂಜಿಯ ನಿತ್ಯ ಲೇಖಕರಾಗಿದ್ದ ಅ.ರಾ.ಸೇತೂರಾಮ್ ಮತ್ತು ಕೇಫ ಇವರ ಗಮನವನ್ನು ಸೆಳೆಯಿತು. ಅವರಿಂದ ಹಾಸ್ಯ ಲೇಖನಗಳನ್ನು ಬರೆಯಬೇಕೆಂಬ ಉತ್ತೇಜನವೂ, ರಾಶಿಯವರ ಪುತ್ರ ಶಿವಪ್ರಕಾಶ್(ಶಿವು) ಅವರ ಸ್ನೇಹವೂ ದೊರೆಯಿತು. ಮುಂದೆ ಕೊರವಂಜಿಯ ಮಗಳು 'ಅಪರಂಜಿ'ಯು ಶಿವು ಅವರ ಸಂಪಾದಕತ್ವದಲ್ಲಿ ಬೆಳೆಯತೊಡಗಿದಾಗ ವೈದ್ಯರ ಮೊದಲ ಕೃತಿ'ಸಾರಿ ಗಾರ್ಡ್' ಅಪರಂಜಿಯಲ್ಲಿ ಪ್ರಕಟವಾಯಿತು. ಮುಂದೆ ಅವರ ಲೇಖನಗಳು ಅಪರಂಜಿಯಲ್ಲಿ ಮತ್ತು ಇತರ ಪತ್ರಿಕೆಗಳಲ್ಲಿ ಬೆಳಕು ಕಂಡವು(ಆಧಾರ ೧).

**ಕೃತಿಪರಿಚಯ:**

ವೈದ್ಯರ ಕೃತಿಗಳನ್ನು ಓದಿದಾಗ ಮೊದಲು ಓದುಗನಿಗೆ ಕಾಣಬರುವುದು ಅವರ ಮರಾಠಿ ಮಿಶ್ರಿತ ಉತ್ತರ ಕರ್ನಾಟಕದ ಆಡುಮಾತಿನ ವೈಖರಿ. ಈ ಭಾಷೆ ಅವರ ಹಾಸ್ಯಕ್ಕೆ ಮುದಕೊಡುತ್ತದೆ. ಈ ದೃಷ್ಟಿಯಿಂದ ವೈದ್ಯರು ಲಾಂಗೂಲಾಚಾರ್ಯ, ರಾವಬಹದ್ದೂರ ಇವರ ಸಾಲಿಗೆ ಸೇರಿದವರು. ವೈದ್ಯರ ಭಾಷಾಪ್ರಯೋಗವನ್ನು ಸ್ವಲ್ಪ ಗಮನಿಸಿ:

'ಹಾಂಗ ನೋಡಿದರ ಓಣ್ಯಾಗ ಇದ್ದೋರೆಲ್ಲ ಛಲೋ ಸೂಳೇಮಕ್ಕಳೇ. ಆದರ ಇಂವ ಒಬ್ಬಮಾತ್ರ ಕೆಟ್ಟ ಸೂಳೇಮಗ'

'ವರ ಹ್ಯಾಂಗಿದ್ದ ಅಂದರ ಗುದ್ದೀ ಗುದ್ದೀ ಮಾಡಿದ ಸದ್ದಾಂ ಹುಸೇನನ ಗತೆ ಇದ್ದ'.

'ನಮ್ಮಗೋದೀ(ಗೋದಾವರಿ) ನೀ ನೋಡಿದೀ. ಆಕಿ ಎಂದಾರ ಸಿಂಹಕಟಿ ಇದ್ದಳೋ ಇಲ್ಲೋ ಗೊತ್ತಿಲ್ಲ, ಆದರ ಮೊದಲಿನಿಂದ ಸಿಂಹಕಂಠಿ ಅಂತೂ ಇದ್ದಾಳ'.

'ಮುರಿಗೆಪ್ಪ ಹ್ಯಾಂಗಿದ್ದ ಅಂದರ ಕಂಸ, ಕುಂಭಕರ್ಣ, ಮಾರೀಚ, ಮಹಿಷಾಸುರ ಇವರನ್ನೆಲ್ಲ ಕೂಡಿಸಿ ಭಟ್ಟಿಗೆ ಹಾಕಿ ಎರಕಾ ಹೊಯ್ದಾಂಗಿದ್ದ'.

'ನಮ್ಮ ಗುಂಡಮ್ಮ ಸಮತಟ್ಟುನೆಲದಮೇಲೆ ಬಿದ್ದಾಗ ಅಲ್ಲೊಂದು ಹಳ್ಳ ಆತು'. (ಆಧಾರ ೨)

'ತಲೆಗೊಂದು ತರ ತರ' ವೈದ್ಯರ ಮೊದಲ ಪುಸ್ತಕ. ಕೊರವಂಜಿಯಲ್ಲಿ ಪ್ರಕಟವಾದ ಅವರ ಲೇಖನಗಳ ಸಂಕಲನ. ಹಾಸ್ಯಕ್ಕಾಗಿಯೇ ಬರೆದ ಲೇಖನಗಳು. ಓದುಗನನ್ನು ನಗಿಸುವುದೇ ಈ ಲೇಖನಗಳ ಗುರಿ. ಆದರೆ ಇಲ್ಲಿನ ಅನೇಕ ಲೇಖನಗಳಲ್ಲಿ ಉತ್ತಮ ಹಾಸ್ಯ ಸಾಹಿತ್ಯದ ರೂಪುರೇಷೆಗಳಿವೆ.

'ಪಿಂಡಪುರಾಣ'ದಲ್ಲಿ ಗತಿಸಿದ ಭೀಮರಾಯರ ಪಿಂಡವನ್ನು ತಿನ್ನಲು ಯಾವ ಕಾಗೆಯೂ ಬಂದಿಲ್ಲ. 'ಪುಣ್ಯಾತ್ಮ ಮನಸ್ಸಿನಾಗ ಏನು ಚಿಂತಿ, ಏನು ಆಶಾ ಇಟಗೊಂಡು ಸತ್ತಾನೋ ಯಾರಿಗೆ ಗೊತ್ತು? ಒಂದೇ ಒಂದು ಸಣ್ಣ ಕಾಗೀ ಮರಿ ಸಹಿತ ಪಿಂಡಸ್ಪರ್ಶ ಮಾಡಬಾರದಂದ್ರ......ಛೇ..ಛೇ! ಕಾಗೆ ಪಿಂಡ ಆಗದ ಹೊರತು ಭೀಮರಾಯರ ಆತ್ಮಕ್ಕೆ ಮುಕ್ತಿಯಿಲ್ಲ'. (ಭೀಮರಾಯರು ಹಾಳಾಗಿ ಹೋಗಲಿ ಅಂದರ, ಕಾಗೆ ಪಿಂಡ ಆಗೋತನಕ ಉಳಿದವರಿಗೂ ಊಟ ಇಲ್ಲ. ಅನ್ಯಾಯವಲ್ಲದೇ ಮತ್ತೇನು?)' ಬಂದಿದ್ದವರು ಕಾಗೆಗಳಿಗೆ ಪಿಂಡ ತಿನ್ನಿಸಲು ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾದವು.

'....ಸತ್ತ ಮನಿಶ್ಯಾ ಮನಸ್ಸಿನ್ಯಾಗ ಏನಾದ್ರೂ ಚಿಂತಿ, ಆಶಾ, ಕಾಳಜಿ ಇಟ್ಟುಕೊಂಡು ಸತ್ತಿದ್ರ, ಕಾಗಿ ಅಂತಹವನ ಪಿಂಡ ಮುಟ್ಟೂದನೂ ಇಲ್ಲ....'

'...ಅವನ ಚಿಂತೆಯನ್ನು ಯಾರಾದರೂ ಪರಿಹರಿಸಿದರೆ, ಆಗ ಕಾಗೆ ಅನ್ನವನ್ನು ಮುಟ್ಟಬಹುದು' ಎಂದು ಆಚಾರ್ಯರು ಹೇಳಿದುದನ್ನು ಕೇಳಿದ, ಭಿಮರಾಯರ ಮನೆಯ ಹರೆಯದ ಹೆಣ್ಣಾಳು ಯಾರಿಗೂ ಕಾಣದಂತೆ ಪಿಂಡದ ಬಳಿಗೆ ಹೋಗಿ, ತಲೆತಗ್ಗಿಸಿ ತನ್ನಲ್ಲಿಯೇ ಎಂಬಂತೆ, 'ನೀವೇನೂ ಹೆದರಿಕೋಬ್ಯಾಡ್ರಿ. ನಾ ಏನೂ ಯಾರಿಗೂ ಹೇಳಾಂಗಿಲ್ಲ' ಎನ್ನುತ್ತಾಳೆ. ಒಮ್ಮೆಲೇ ಹತ್ತಾರು ಕಾಗೆಗಳು ಅನ್ನದುಂಡೆಯ ಮೇಲೆ ಮುಗಿಬಿದ್ದವು. ಅಪ್ತೇಷ್ಟರು ಊಟಕ್ಕೆದ್ದರು.

ಓ. ಹೆನ್ರಿಯ ಬರಹದ ಛಾಯೆ ಈ ಕಥೆಯಲ್ಲಿದೆ.

'ಬದುಕಲು ಕಲಿಯಿರಿ'ಯಲ್ಲಿ ಶಿವಣ್ಣ ಮಾಸ್ತರ ಉಜ್ವಲವಾದ ವ್ಯಕ್ತಿಚಿತ್ರಣವಿದೆ. ಶಿವಣ್ಣಮಾಸ್ತರು, 'ದೇವಭೋಳೆ ಮನಿಷ. ಪ್ರಾಮಾಣಿಕ ಸತ್ಯನಿಷ್ಟ ವ್ಯಕ್ತಿತ್ವ. ಜಗಜ್ಯೋತಿ

ಬಸವೇಶ್ವರ, ಮಹಾತ್ಮ ಗಾಂಧಿ, ಶಿಶಿನಾಳ ಶರೀಫ, ಶಿರಡೀಸಾಯಿಬಾಬ ಇವರೆಲ್ಲ ಇನ್ನೊಮ್ಮೆ ಹುಟ್ಟಿಬಂದು ಒಬ್ಬನೇ ಮನುಷ್ಯರೂಪ ಧಾರಣ ಮಾಡಿದರ ಹ್ಯಾಂಗ ಇರಬೇಕೋ ಹಾಂಗ ಇದ್ದರು'. 'ಸ್ಕಾಲರ್ ಹುಡುಗರವೇನು ಹೇಂಗೋ ಆಕ್ಕೈತಿ. ನನಗೆ ನಿಮ್ಮದೇ ಚಿಂತಿ' ಅನಕೋತ ನಮ್ಮ ಹೈಸ್ಕೂಲು ಮುಗಿಯುವವರೆಗೆ ನಮ್ಮ ಗುರುಗಳಾಗಿ, ಹಿರಿಯರಾಗಿ, ರಕ್ಷಕರಾಗಿ, ಶಿಕ್ಷಕರಾಗಿ, ನಮ್ಮ ಹಿಂದಿನ ದೈವವಾಗಿ ನಮ್ಮನ್ನು ಸಲಹಿದರು'. ಒಮ್ಮೆ ಸ್ಕೂಲಿನ ಇನ್ನೊಬ್ಬ ಮಾಸ್ತರು ಸಿಗರೇಟು ಹಿಡಿದುಕೊಂಡು ಶಾಲೆಯ ಕಾಂಪೌಂಡಿನೊಳಕ್ಕೆ ಬಂದಾಗ ಉರಿದೆದ್ದ ಶಿವಪ್ಪ ಮಾಸ್ತರು 'ಮೊದಲನೇದು, ನೀವು ಹಿಂತಾ ವ್ಯಸನಾ ಮಾಡಬಾರದು. ಒಂದು ವ್ಯಾಳ್ಯಾ ಮಾಡಿದ್ರ ಸಹಿತ ನಿಮ್ಮ ದುಶ್ಚಟದ ಪ್ರದರ್ಶನ ಹುಡುಗರ ಮುಂದೆ ಮಾಡಬಾರದು' ಎಂದು ಸಹೋದ್ಯೋಗಿ ಮಾಸ್ತರಿಗೆ ಝಾಡಿಸಿದ್ದರು. ಪಾಪ, ಆನಂತರ ಆ ಮಾಸ್ತರು ಎಂದೂ ಸಿಗರೇಟಿನ ಜೊತೆ ಆ ಸ್ಕೂಲಿನೊಳಗೆ ಕಾಲಿಡಲಿಲ್ಲವಂತೆ. ಶಿವಪ್ಪ ಮಾಸ್ತರಿಗೆ ಶಾಲೆಯ ಹೆಡ್ಮಾಸ್ಟರದೂ ಹೆದರಿಕೆ ಇರಲಿಲ್ಲವಂತೆ. ಆಗಾಗ ಶಾಲೆಗೆ ತಡವಾಗಿ ಬರುತ್ತಿದ್ದ ಹೆಡ್ಮಾಸ್ಟರಿಗೆ, 'ನೀವು ಹೀಂಗ ವಾರದಾಗ ಎರಡೆರ್ಡು ದಿವ್ಸ ಸ್ರಾದ್ಧ, ಪಕ್ಷ, ಹಬ್ಬ, ಹುಣ್ಮೆ ಅನಕೋತ ಲೇಟಾಗಿ ಬರಾಕ ಹತ್ತಿದರ ವಿದ್ಯಾರ್ಥಿಗಳ ಮ್ಯಾಲೆ ಯೇನುಪರಿಣಾಮ ಆಕ್ಕೈತಿ ಗೊತ್ತೈತ್ಯಲ್ಲ. ನೀವು ಬ್ರ್ಯಾಮಿನ ಇದ್ದರೆ ನಿಮ್ಮ ಬ್ರಾಮ್ಯಾನಿಕಲ್ ಕೆಲಸ ಎಲ್ಲ ಒಂದೀಟು ದೌಡ ಮುಗಿಸಬೇಕು' ಎಂದು ದಬಾಯಿಸಿದ್ದರಂತೆ.

ಕ್ಲಾಸಿನಲ್ಲಿ ಅಭ್ಯಾಸ ನಡೆಸುತ್ತಿದ್ದಾಗ ಮಾಸ್ತರ 'ರನ್ನಿಂಗ್ ಕಾಮೆಂಟರಿ' ನಡೆದೇ ಇತ್ತಂತೆ :

'ಕ್ವಾಣನ್ಹಾಂಗ ಬೆಳೆದಿದ್ದಿ ಇನ್ನೂ ಫ್ಯಾಕ್ಟರ ಅಂದ್ರೇನು-ಪ್ರಾಡಕ್ಟ ಅಂದರೇನು ಗೊತ್ತಿಲ್ಲ?'

'ಕತ್ಯಾಗಿದಿ-ಸಾಲ್ವಂಟ ಅಂದ್ರೇನು ಸೊಲೂಷನ್ ಅಂದ್ರೇನು ತಿಳ್ಯಂಗಿಲ್ಲ?'

'ಏ ಬಟ್ಟS. ಈ ಸಲ ಫೇಲಾದೀ ಅಂದ್ರ ನಿಮ್ಮಪ್ಪ ನಿನ್ನ ತಲೇ ಬೋಳಿಸಿ ಮಂದೀ ಮನೀ ಗಂಟೀ ಬಡೆಯಾಕ ಕುಂದರಸ್ತಾನ, ತಿಳೀತಲ್ಲೋ'

'ಸಾಲೀಯಿದ್ಯಾ ನಿಮ್ಮಂತವರಿಗೆ ಅಲ್ಲರೀSS ಧಣೇರ.. ದಯಮಾಡಿ ನೀವು ದನಾ ಕಾಯಾಕ ಹೋಗರೀ..'

ಮಾಸ್ತರು ಸ್ವಾವಲಂಬದ ವ್ರತ ಹಿಡಿದಿದ್ದರಂತೆ. ಅವರ ಬಟ್ಟೆ ಸ್ವತಃ ತೆಗೆದ ನೂಲಿನಿಂದ ಮಾಡಿದ ಖಾದಿ ಬಟ್ಟೆ. ಪ್ರತಿದಿನ ಅದನ್ನು ತಾವೇ ಒಗೆದು ಶುದ್ಧಮಾಡಿ ಹಾಕಿಕೊಳ್ಳುತ್ತಿದ್ದರಂತೆ. ತಿನ್ನುತ್ತಿದ್ದುದು ತಾವೇ ಬೇಯಿಸಿದ ನಳಪಾಕ. ತಮ್ಮ ಹೊಸ

ಹೆಂಡತಿಗೆ, 'ನಿನ್ನ ಶೀರೀಕುಬಸಕ್ಕ ಬೇಕಾಗೂ ಅಷ್ಟ ನೀನ ನೂಲಬೇಕು...(ಧಾನ್ಯ ಬೆಳೆದು) ನಿನ್ನ ರೊಟ್ಟಿ ನೀನಾ ಮಾಡಿಕೋ ಬೇಕು' ಎಂದು ವಿಧಿಸಿದ್ದರಂತೆ. ಪಾಪ ಆಕೆ ಮದುವೆಯಾದ ಆರು ತಿಂಗಳೊಳಗೇ ಸತ್ತು ಹೋದಳಂತೆ! (ಏಕೆ ಸತ್ತಳು ಎನ್ನುವುದನ್ನು ವೈದ್ಯರು ಹೇಳುವುದಿಲ್ಲ. ಶಿವಪ್ಪ ಮಾಸ್ತರ ಕಾಟ-ತಡೆಯಲಾರದೆ ಎಂಬ ನಿರ್ಣಯವನ್ನು ನಮಗೆ ಬಿಡುತ್ತಾರೆ)

ಶಿವಪ್ಪ ಮಾಸ್ತರು ಶಾಲೆಯ ಹುಡುಗರನ್ನು 'ಸತ್ಯ ಹರಿಶ್ಚಂದ್ರ' ಸಿನೆಮವನ್ನು ನೋಡಲು ಕಳಿಸಿದ ಪ್ರಸಂಗವನ್ನು ಶ್ರೀನಿವಾಸ ವೈದ್ಯರು ವಿವರಿಸಿರುವ ರೀತಿ ಮನೋಹರವಾಗಿದೆ. ಗಾಂಧಿ ಸಣ್ಣವನಿದ್ದಾಗ ಹರಿಶ್ಚಂದ್ರ ಸಿನೆಮಾ ನೋಡಿದ್ದನಂತ. ಅಂದ ಮ್ಯಾಲ ಬಿಟ್ಟಾರ? ಮಾಸ್ತರು ಕಡ್ಡಾಯವಾಗಿ ನಮ್ಮನ್ನೆಲ್ಲಾ ಆ ಸಿನೆಮಾಕಾ ಅಟ್ಟಿದ್ದರು.... ಮರುದಿವ್ಸ ಕ್ಲಾಸಿನಾಗ ಮಾಸ್ತರು ಅಗಸಾಲರ ಅಂತ್ಯಾನ ಕರದು 'ಹರಿಶ್ಚಂದ್ರ ಸಿನೆಮಾದಾಗ ಏನ ನೋಡಿದೇಪಾ ಅನಂತ?' ಅಂತ ಕೇಳಿದರು. ಅಂತ್ಯ ಚಡ್ಡಿ ಜಗ್ಗಿಕೋತ 'ತಾರಾಮತಿ ಬಹಳ ಚಂದ ಕಾಣತಿದ್ದಳರಿ' ಅಂದ. ಇದನ್ನು ಕೇಳಿ ಮಾಸ್ತರು ಇದ್ದಕ್ಕಿದ್ದಂತಿ ತಮ್ಮ ಮುಕ್ಕಣ್ಣು ತೆಗೆದು ಅಂತ್ಯಾಗ ಎಲ್ಲಿಂದರಲ್ಲಿ ಹೊಡಕೋತ 'ಹೌದಾ ನನ್ಮಗನಾ, ಇಡಿ ಸಿನೆಮಾ ತುಂಬ ಬರೇ ತಾರಾಮತಿ ಛಂದSSನಾS ಕಾಣಸ್ತೇನೋ ನಿನಗ? ಅದನS ನೋಡಾಕ ಹೋಗಿದ್ಯೇನಾ?' ಅನಕೋತ ಹೊಡೆದದ್ದ ಹೊಡೆದದ್ದು. ತಮ್ಮ್ರ ಕೈ ಸೋತ ಮ್ಯಾಲ ಅಂತ್ಯಾನ್ನ ಬಿಟ್ಟು ನನ್ನ ಕಡೆ ಹೊರಳಿ, 'ಶೀನ್ಯೂ, ನೀ ಹೇಳು , ನೀ ಯೇನು ನೋಡ್ದಿ?' ಎಂದರು. ಅಂತ್ಯ ಹೊಡೆಸಿಕೊಂಡದ್ದಕ್ಕೂ, ಮತ್ತು ಮಾಸ್ತರ ದನಿಯಲ್ಲಿನ ಒಂದುತರಹದ ಡಿಸೆಪ್ಟಿವ್ ಮಾರ್ದವಕ್ಕೂ ಹೆದರಿ, ಕನ್ಫ್ಯೂಸ್ ಆಗಿ ನಡಗಿಕೋತ ನಾನು, 'ಹರಿಶ್ಚಂದ್ರನೂ ಚಂದ ಕಾಣತಿದ್ದನರೀ' ಎಂದೆ. ಈ ಸಲ ಮಾತ್ರ ಮಾಸ್ತರು ಹತಾಶರಾಗಿ ಕ್ರುದ್ಧರಾಗಿ ತಮಗೆ ತಾವೇ ಕಪಾಳಕ್ಕೆ ಹೊಡಕೋತ ನಡುನಡುವೆ 'ನನ್ನ ಖರ್ಮ, ನನ್ನ ಖರ್ಮ. ಏನು ಮಾಡೀರಿ. ಸತ್ಯ ಹರಿಶ್ಚಂದ್ರ ಸಿನೆಮಾದಾಗ ನಿಮಗ್ಯಾರಿಗೂ ಹರಿಶ್ಚಂದ್ರನ ಸತ್ಯ ಪ್ರೇಮ, ನಿಷ್ಠೆ, ಶ್ರದ್ಧೆ ಇವು ಯಾವೂ ಕಾಣಲಿಲ್ಲ. ಬರೇ ಆಕಿ ಚೆಂದಾದಾಳಾ, ಈಕಿ ಚೆಂದಾದಾಳಾ... ಇದನ ನೋಡಾಕಾ ಸಿನೆಮಾಕ ಹೋಗಿದ್ರೇನಾ'...ಅನಕೋತ ಹೊಡಕೊಂಡ ಹೊಡಕೊಂಡ್ರೂ.

ಮಾಸ್ತರು ಅಹಿಂಸಾವಾದಿಯಾಗಿದ್ದರೂ ಅವರು ವಿದ್ಯಾರ್ಥಿಗಳ ಶಿಕ್ಷೆಯಲ್ಲಿ ಹಿಂಸಾವಾದಿಯೇ ಆಗಿದ್ದರಂತೆ. ಆದ್ದರಿಂದ ಈ ಧಾರವಾಡದ ಗಾಂಧಿಯಿಂದ ತಮ್ಮನ್ನು ಬಿಡುಗಡೆ ಮಾಡಲು, (ವಿದ್ಯಾರ್ಥಿಗಳು) 'ಧಾರವಾಡದ ಗೊಡ್ಸೆಯೊಬ್ಬನನ್ನು ಹುಟ್ಟಿಸು ಎಂದು ಪರಮಾತ್ಮನಲ್ಲಿ ಬೇಡಿಕೊಂಡದ್ದಿದೆ' ಎನ್ನುತ್ತಾರೆ, ವೈದ್ಯರು.

'ಸಾರಿ ಗಾರ್ಡ್' ಲೇಖನದಲ್ಲಿ, ಪತ್ನಿ ಗುಂಡಮ್ಮನವರನ್ನು ಹಿಂದೆ ಕೂರಿಸಿಕೊಂಡು ಆಫೀಸಿನವರು ಕೊಟ್ಟ ಜಾವಾ ಸ್ಕೂಟರಿನ ಮೇಲೆ ಹೋಗುತ್ತಿರುವಾಗ ಆಕೆಯ ಸೀರೆಯು

ಅದರ ಚಕ್ರಕ್ಕೆ ಸಿಕ್ಕಿ, ಜಾವಾ ಹಳ್ಳಕ್ಕೆ ಬಿದ್ದು ಗುಂಡಮ್ಮನವರು ನೆಲದಮೇಲೆ ಬಿದ್ದು ಅಲ್ಲಿ ಇನ್ನೊಂದು ಹಳ್ಳವನ್ನು ಮಾಡಿದಮೇಲೆ, ವೈದ್ಯರು ಆಫೀಸಿಗೆ ಬರೆದು 'ಸಾರಿ ಗಾರ್ಡ್' ಸ್ಯಾಂಕ್ಷನ್ ಮಾಡಿಸಿಕೊಳ್ಳಲು ಪಟ್ಟ ಬವಣೆ, ಮತ್ತು ಹೆಡ್ಡಾಫೀಸು 'ಧೋತಿ ಗಾರ್ಡ್' ಅನ್ನು ಅನಾಯಾಸವಾಗಿ ಸ್ಯಾಂಕ್ಷನ್ ಮಾಡಿದುದು, ಚೆನ್ನಾಗಿ ಚಿತ್ರಿತವಾಗಿದೆ.

'ತಲೆಗೊಂದು ತರ ತರ'ದಲ್ಲಿ ಆಗಾಗ್ಯೆ ಕಂಡುಬರುವ ವೈದ್ಯರ ಹೊಸ ಭಾಷಾಪ್ರಯೋಗ ಕಸ್ತೂರಿಯವರ 'ಅನರ್ಥಕೋಶ'ವನ್ನು ನೆನಪಿಗೆ ತರುತ್ತವೆ. 'ವೇಳಾವದನ', 'ಗಾಂಧೀ ರೋಗ', 'ಲಾಂಗೂಲ ಚಾಲನ', 'ನಾಸಿಕ ಚಿರಾಪುಂಜಿ', 'ನರ್ವಸ್ಕ', 'ಕುಮಾರೀ ಮುದ್ರಣ' ಇವು ಕೆಲವು ಉದಾಹರಣೆಗಳು.

'ರುಚಿಗೆ ಹುಳಿಯೊಗರು' ವೈದ್ಯರ ಹಾಸ್ಯ ಲೇಖನಗಳ ಇನ್ನೊಂದು ಪುಸ್ತಕ. ಇಲ್ಲೂ ಹಾಸ್ಯಕ್ಕೇ ಪ್ರಾಧಾನ್ಯ. ಇಲ್ಲಿನ 'ಗಂಡಭೇರುಂಡ', 'ಕೀಲುಗುರ್ರಮ್', 'ಚಂದ್ರಹಾರ ಪ್ರಕರಣವು' ಉತ್ತಮ ಹಾಸ್ಯ ಲೇಖನಗಳು. 'ಗಂಡ ಭೇರುಂಡ'ದಲ್ಲಿ, ವೈದ್ಯರು ತಮ್ಮದೇ ಆದ ಅನನ್ಯ ಶೈಲಿಯಲ್ಲಿ ಉತ್ತರ ಕನ್ನಡದ ಕನ್ನಡ ಭಾಷೆಯ ತೇಜಃಪೂರ್ಣ ವ್ಯಕ್ತಿತ್ವವನ್ನು ಚಿತ್ರಿಸಿತೋರಿಸಿದ್ದಾರೆ. ಅಂತೆಯೇ ಉತ್ತರ ಕನ್ನಡಿಗರ, ಮೈಸೂರು ಕನ್ನಡಿಗರ ಬಾಹ್ಯವ್ಯಕ್ತಿತ್ವ ವಿಭಿನ್ನವಾಗಿದ್ದಂತೆ ಕಂಡರೂ, ಅಂತರಂಗದಲ್ಲಿ ಅವೆರಡರ ಸನ್ನಿಹತೆ ಎಷ್ಟಿದೆ ಎನ್ನುವುದನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

'ಕೀಲುಗುರ್ರಂ'ನಲ್ಲಿ ಮೂರನೆಯ ಬಾರಿಗೆ ಬಿ.ಎ.ಯಲ್ಲಿ ನಾಪಾಸಾಗಿ ಈಗ ನಾಲ್ಕನೆಯ ಬಾರಿಗೆ ನಾಪಾಸಾಗುವ ಚಿಂತೆಯಿಂದ ಬಾಡಿರುವ ಕಥಾನಾಯಕನ ಮನಸ್ಥಿತಿಯನ್ನು ವೈದ್ಯರು ವಿವರಿಸಿರುವ ರೀತಿಯನ್ನು ಗಮನಿಸಿ : 'ಇದೇ ಚಿಂತಿಯಲ್ಲಿ ನಾವು ಸಣ್ಣಾಗಿ ಹೋಗಿದ್ವಿ. ಪರಿಣಾಮ ಪ್ರಕಟಣೆಯ ದಿನ ಬಂಧಂಗ ಇನ್ನಷ್ಟು......ಮತ್ತಷ್ಟು ಸಣ್ಣಾಗಿಕೋತ ನಡೆದ್ವಿ. ಊಟ ಹೋಗದಂಗಾತು, ನಿದ್ದಿ ಹತ್ತದಂಗಾತು, ಚಹ, ಸಿಗರೇಟು ಯಾವುದರಾಗೂ ರುಚಿ ಇಲ್ಲಧಂಗಾತು. ತೀರ್ಥರೂಪರ ಮಾರೀತಪ್ಪಿಸಿ ಅಡ್ಡಾಡೋದಿವಸ ಬಂದ್ವೂ! ......ಪ್ಯಾಟಿಯೊಳಗ, ಕುಲಕರ್ಣಿ ಚಂಪಿ, ಹಿರೇಮಟ ಗಂಗೂ, ಲಿಲಿ ಡಿಸೋಝಾನಂತಹ ಕೆಣಕು ಚೆಲುವೆಯರು ತೀರಾ ಎದರಾ ಬದರಾ ಬಂದರೂ ಸಹಿತ ಮಾರೀ ಎತ್ತಿ ನೋಡೋ ಹಂಗ ಆಗತಿದ್ದಿಲ್ಲ! ಒಟ್ಟಿನವ್ಯಾಲೆ ಟೆನ್ಷನ್ನೋ ಟೆನ್ಷನ್ನು...ಎದ್ದರ ಬಿದ್ದರ ಟೆನ್ಷನ್ನು...ನಿಂತರ ಕುಂತರ ಟೆನ್ಷನ್ನು......ಒಟ್ಟS ಜೀವನಾ ಬ್ಯಾಸರ ಬಂದಿತ್ತು'.

ಇದೇ ಲೇಖನದಲ್ಲಿ ಇನ್ನೊಂದುಕಡೆ, ಗೀತೋಪದೇಶ ಮಾಡುತ್ತಿರುವ ಸುಬ್ಬಣ್ಣ ಮುಂದುವರೆಯುತ್ತ 'ಪರಮಾತ್ಮನ ಶ್ರೀಮುಖದಿಂದ ಹೊರಟು ನೇರವಾಗಿ ಭಕ್ತರ ಹೃದಯವನ್ನು ಪ್ರವೇಶಿಸುವ ಗೀತೆ, ಉಚ್ಚಕೋಟಿಯದು. ಅತ್ಯುಚ್ಚವಾದದ್ದು,

ಪರಮೋಚ್ಛವಾದದ್ದು...' ಎಂದಾಗ, ಇಷ್ಟೊಂದು ಸಲ 'ಉಚ್ಚ-ಉಚ್ಚ' ಎಂಬ ಶಬ್ದಕೇಳಿದ್ದನೆಂತೋ ಏನೋ, ಪರಮೇಶಿ ಒಮ್ಮೆಲೇ ಮೇಲೇಳುತ್ತ, 'ಒಂದೀಟ ಬಾಥರೂಮಿಗೆ ಹೋಗಿ ಬರತೇನಾ' ಎಂದು ಹೊರಗೆ ಹೊರಟ!

ವೈದ್ಯರ 'ತಲೆಗೊಂದು ತರ ತರ' ಮತ್ತು 'ರುಚಿಗೆ ಹುಳಿಯೊಗರು'ವಿನಲ್ಲಿನ ಹಾಸ್ಯ ಲೇಖನಗಳು ಓದುಗನನ್ನು ನಗಿಸಿ ಮನರಂಜಿಸಿದರೆ, ಅವರ 'ಮನಸುಖರಾಯನ ಮನಸು' ಪುಸ್ತಕದಲ್ಲಿ ಅವರ ಹಾಸ್ಯ ಒಂದು ಹೆಜ್ಜೆ ಮುಂದೆ ಇಟ್ಟಿದೆ. ಇಲ್ಲಿನ ಲೇಖನಗಳು ಕೇವಲ ಹಾಸ್ಯಕ್ಕಾಗಿಯೇ ಬರೆದವಲ್ಲ. ಇಲ್ಲಿ ವ್ಯಕ್ತಿಚಿತ್ರಣಕ್ಕೆ, ಕಥೆಗೆ ಪ್ರಾಧಾನ್ಯ. ಹಾಸ್ಯ ಇವರು ಹೇಳಬೇಕಾದ ವಿಷಯವನ್ನು ಸ್ವಾರಸ್ಯವಾಗಿಸಲು ಉಪಯೋಗಿಸಿಕೊಂಡ ವಾಹನವಷ್ಟೆ. ಈ ದೃಷ್ಟಿಯಲ್ಲಿ ವೈದ್ಯರ ಈ ಪುಸ್ತಕ ಹಾಸ್ಯಲೇಖನಗಳನ್ನು ಹಿಂದೆ ಬಿಟ್ಟು, ಉತ್ತಮ ಹಾಸ್ಯಸಾಹಿತ್ಯದತ್ತ ಸಾಗಿದೆ.

ಅವರ 'ಶ್ರದ್ಧಾ' ಒಂದು ಉತ್ತಮ ವ್ಯಕ್ತಿಚಿತ್ರ. ತಂದೆಯವರ ನಿಷ್ಠುರ, ಕಠೋರ ದರ್ಪದ ಆಡಳಿತದ ಬಗ್ಗೆ ವೈದ್ಯರು ಹೇಳುವುದನ್ನು ಕೇಳಿ: 'ಆ ಕಾಲದ ತಂದೆಯವರದ್ದೊಂದು ವಿಚಿತ್ರಾನೇ ಇತ್ತು. ಮಕ್ಕಳ ಸಂಗ್ತೀ ನೇರವಾಗಿ ಡಾಯರೆಕ್ಟಾಗಿ ಎಂದು ಮಾತಾಡತಿದ್ದಿಲ್ಲ. ಏನೇ ಇದ್ದರೂ ಅದು ತಮ್ಮ ಶ್ರೀಮತಿಯವರ ಮುಖಾಂತರ –ಅಂದರ ನಮ್ಮ ತಾಯಿಯವರ ಮುಖಾಂತರವೇ.. .. .. ಬಹುಶಃ ಪ್ರೀತಿ, ಅಂತಃಕರಣ, ಮಮತೆ, ಸ್ನೇಹ, ವಾತ್ಸಲ್ಯ ಇಂತಹ ದುರ್ಬಲ ಭಾವನೆಗಳಿಗೆ ಆಸ್ಪದಕೊಟ್ಟರೆ ಮಕ್ಕಳು ಎಲ್ಲಿ ಕೆಟ್ಟು ಹೋದಾರೋ ಎಂಬ ಭಯ. ಅಷ್ಟೇ ಅಲ್ಲ. ಪರೋಕ್ಷವಾಗಿ ಸಹಿತ ಏನೇ ಮಾತನಾಡಿದರೂ, ಅದೂ ಕೂಡ ಅತ್ಯಂತ ವೈಭವೋ ಪೇರಿತವಾದ, ತೀಕ್ಷ್ಣವಾದ ಹರಿತವಾದ, ಉಗ್ರವಾದ, ವ್ಯಂಗ್ಯದಿಂದ ಕೂಡಿರುತ್ತಿತ್ತು...'

ಆರನೆಯ ಇಯತ್ತೆಯ ಪರೀಕ್ಷೆಯಲ್ಲಿ ವೈದ್ಯರಿಗೆ ಗಣಿತದಲ್ಲಿ ಸೊನ್ನೆ ಪ್ರಾಪ್ತವಾಗಿದ್ದ ಸಮಯದಲ್ಲಿ ಅವರ ತಂದೆಯ ಪ್ರತಿಕ್ರಿಯೆಯನ್ನು ಹೀಗೆ ವಿವರಿಸುತ್ತಾರೆ: 'ನಾವು ಅಡಿಗೀ ಮನಿಯೊಳಗ ದೊಡ್ಡ ಕಂಬದ ಹಿಂದೆ ಅಡಗಿ ಕುಳಿತಿದ್ದೆವು. ನಮ್ಮ ಮಾತೋಶ್ರೀಯವರು ಭಕ್ರೀ ಬಡಕೋತ ಕೂತಿದ್ದರು. ಅದೇ ಸಮಯಕ್ಕೆ ರಕ್ಕಸನಾದ ಆ ಹಿರಣ್ಯಕಶಿಪು ಕೋಪೋದ್ರಿಕ್ತನಾಗಿ ಖಡ್ಗವನ್ನು ಝಳಪಿಸುತ್ತಾ ಧಾವಿಸಿಬಂದು ನಮ್ಮ ಬಡತಾಯಿಗೆ, 'ನಿಮ್ಮ ಚಿರಂಜೀವರಿಗೆ... ನಿಮ್ಮ ವಂಶದ ಕುಡಿಗೆ ಯಷ್ಟು ಮಾರ್ಕ್ಸ್ ಬಿದ್ದಾವ ನೋಡೀರೇನು?...ನಮ್ಮ ಸಮಸ್ತ ಮನೆತನದ ಮರ್ಯಾದಿ ಈ ಕಡೆಯಿಂದ ಆಕಡೆ ಹಾದು ಹೋಗೋವಷ್ಟು ಬಿದ್ದಾವ... ಇಷ್ಟು ದಿವಸ ಈ ನಿಮ್ಮ ವಂಶೋದ್ಧಾರಕರು... ಈ ನಿಮ್ಮ ಕುಲದೀಪಕರು... ಈ ದೇವಾಂಶಸಂಭೂತರು ತಮ್ಮ ತಲೀ ಅಷ್ಟ ಬೋಳಿಸಿಕೋತಿದ್ದರು... ಇವತ್ತ ತಮ್ಮದಷ್ಟಽಅಲ್ಲದ ನಮ್ಮದೂ...ನಮ್ಮ ಪಿತೃಗಳದೂ...ಪಿತಾಮಹ ಪ್ರಪಿತಾಮಹಗಳದೂ...ಎಲಾರದೂ ತಲೀ ಬೋಳಿಸಿ

ಒಗೆದುಬಿಟ್ಟಾರ... ಇನ್ನೊಂದು ಸ್ವಲ್ಪ ದಿವಸ ಹೀಂಗಬಿಟ್ಟರ ಅವರನ್ನು ಹೆತ್ತ ಹೊತ್ತ ತಪ್ಪಿಗ ನಿಮ್ಮದನ್ನೂ ಮುಗಿಸಿ ಬಿಡ್ತಾರ.. ... ... ನಿಮ್ಮ ಪುತ್ರ ರತ್ನರು ಎಲ್ಲಿದ್ದಾರ?... ......? ಈ ಮನೆತನದ ಮೇಧಾವಿ ಗಣಿತಜ್ಞ ಶ್ರೀನಿವಾಸ ರಾಮಾನುಜಂ ಅವರು ಎಲ್ಲಿದ್ದಾರ?... ಎಲ್ಲಿದ್ದಾರ?...' ಈ ರೀತಿ ವದರ್ಯಾಡಿಕೋತ ...ಚೀರ್ಯಾಡಿಕೋತ ...ಪಣಿ ಪಣಿ ಬಡಿಕೋತ ಭಕ್ತ ಪ್ರಹ್ಲಾದ ನಾಟಕದಾಗಿನ ಹಿರಣ್ಯ ಕಶಿಪುವಿನ್ಹಾಂಗ ರಂಗದ ಇನ್ನೊಂದು ಭಾಗಕ್ಕೆ ನಿಷ್ಕ್ರಮಿಸಿದರು. ಇಷ್ಟಲ್ಲ ಯಾಕ ಅಂದ್ರ ಆದೊಂದು ಸೊಟ್ಟಮಾರಿ ಗಣಿತದಾಗ ಜೀರೋ ಬಿದ್ದಿದ್ದಕ್ಕ. ಹಂಗ ನೋಡಿದರ ಅದೊಂದೇಸಲ ನನಗೆ ಜೀರೋ ಬಿದ್ದದ್ದು. ಅದಕ್ಕೂ ಮೊದಲೆಲ್ಲ ಭಲೋತನ್ಯಾಗ ಏಳು...ಎಂಟು...ಮಾರ್ಕ ಬೀಳತಿದ್ದವು'.

ಹೀಗೆ ಬಾಹ್ಯಕ್ಕೆ ಕಠೋರ ಹೃದಯಿಯಾಗಿ ತೋರುತ್ತಿದ್ದ ತಂದೆಯವರ ಹೃದಯದಲ್ಲಿ, ಮಗ ಬಹುದೂರದ ಮುಂಬಯಿಗೆ ಹೊರಡಲು ಸಿದ್ಧನಾದಾಗ ಆದ ಪರಿವರ್ತನೆಯ ಚಿತ್ರಣ ಮನೋಜ್ಞವಾಗಿದೆ. 'ಶ್ರದ್ಧಾ' ಉತ್ತಮ ಹಾಸ್ಯಸಾಹಿತ್ಯ.

'ಬಾಶಿಂಗ ಬಲ'ದಲ್ಲಿ ಗಂಡನ್ನ ಕಳಕೊಂಡ ದ್ಯಾಮಾಪುರದ ಉಡ್ಕೀ ಹೆಂಗಸು ಸಣ್ಣೀರವ್ವನಿಗೂ ಮತ್ತು ಹೆಂಡತಿಯನ್ನು ಕಳಕೊಂಡಿದ್ದ ಯರಗಟ್ಟಿಯವನ ಇಮನೀ ವರ ಮಲ್ಲಿಕಾರ್ಜುನಪ್ಪನಿಗೂ ಬೈಲಹೊಂಗಲದ ಸ್ವಾಮಿಗೋಳ ಆಶೀರ್ವಾದ ಮಾಡಿಕೊಟ್ಟಂಥ ಬಾಶಿಂಗ ಕಟ್ಟಿ 'ಲಗ್ಗಣ' ಹೊಡೆಸೇಬಿಟ್ಟ ಪ್ರಸಂಗ ಚೆನ್ನಾಗಿ ಚಿತ್ರಿತವಾಗಿದೆ.

'ಗಧೇ ಪಂಚವೀಶಿ'ಯಲ್ಲಿ ಇಪ್ಪತ್ತೈದರ ವೆಂಕಣ್ಣ, 'ದಾದರದಾಗನs ಯಲ್ಲಾರ ಇಡ್ಲಿ ತಿಂದ ಹೋಗಬೇಕೋ ಇಲ್ಲ, ಆಪೆರಾಹೌಸಿನ ಇರಾಣೀ ಹೋಟೆಲಿನ ಆಮ್ಲೇಟು ತಿನ್ನಬೇಕೋ ಅಂತಾ ದ್ವಿಧಾದೊಳಗೆ ಬಿದ್ದಿದ್ದ. ವಿಚಾರ ಬಗೀ ಹರೀದನs ರಾನಡೇ ರೋಡಿನ ಪೋಸ್ಟಾಫೀಸಿನ ಮುಂದ ಕಿಂಕರ್ತವ್ಯ ಮೂಢನಾಗಿ ಒದ್ದಾಡತಿರಬೇಕಾದರs; ಒಬ್ಬಾಕಿ ಸುಭ್ರಶ್ವೇತ ಬಿಳಿಯ ಸಿಲ್ಕ ಸಾರಿ ಉಟ್ಟಾಕಿ, ಬೆಳದಿಂಗಳ ಮೈಯಿನ, ದುಂಡುಮುಖದ, ಆಧುನಿಕ ರೀತಿಯಲ್ಲಿ ಕೂದಲು ಕತ್ತರಿಸಿದ, ನಸು ಎತ್ತರ ದೇಹದ, ಪುಟ್ಟಬಾಯಿನ, ಅಚುಂಬಿತ ತುಟಿಗಳ, ನೀಳ ನಾಸಿಕದ, ತೋಳಿಲ್ಲದ ರವಿಕೆಯ ಮೀನುಗಣ್ಣಿನ ಅಪ್ಸರೆ ಯಂಕಣ್ಣಗ ಡಿಕ್ಕಿ ಹೊಡೆದುಬಿಟ್ಟಳು. ಯಂಕಣ್ಣ ಸಾವರಿಸಿಕೊಂಡು 'ಆಯ್ ಆಮ್ ಸಾರಿ' ಎಂದು ಹೇಳುತ್ತಿದ್ದಂತೆಯೇ ಚೆಲುವೆ ಅವನ ಬಳಿಗೆ ಬಂದು ಮಲ್ಲಿಗೆ ಬಿರಿವ ಮುಗ್ಧ ಮುಗುಳು ನಗೆ ತೂರಿ, 'ಇಟ್ಸ್ ಆಲ್ ರೈಟ್' ಎಂದು ಪುಟ ಪುಟಿಸಿ, ಜಾರಿದ ಸೆರಗನ್ನು ನಾಜೂಕಾಗಿ ಸರಿಪಡಿಸಿಕೊಳ್ಳುತ್ತಾ ಹಣೆಯ ಮೇಲೆ ಬಿದ್ದ ಪೆಂಡಿ ಕೂದಲನ್ನು ಕೊರಳು ಕೊಂಕಿಸಿ ಹಿಂದಕ್ಕೆ ತಳ್ಳಿ, ಬಲಗೈಯನ್ನು ನಸುವೆ ಎತ್ತಿ ಯಂಕಣ್ಣನಿಗೆ ವಿದಾಯ ಹೇಳಿ ತಾಳ ಬದ್ಧವಾದ ನಡಿಗೆಯಿಂದ ಯಂಕಣ್ಣನ ಹೃದಯದ

ಮ್ಯಾಲ ಕಾಲಿಟಕೊಂಡು ಹೋಗಿಬಿಟ್ಟಳು'. ಹಾಗೆ ಅಂದು ಪ್ರಾರಂಭವಾದ ವೆಂಕಣ್ಣನ ಪ್ರಣಯ ಜ್ವರ ಏರಿಳಿದು, ಸರಿಸರಿದು ಕಡೆಗೆ disappointmentನಲ್ಲಿ ಕೊನೆಯಾದ ಪ್ರಸಂಗ ತುಂಬ ಸೊಗಸಾಗಿ ಚಿತ್ರಿತವಾಗಿದೆ. ಅಂತೆಯೇ 'ತ್ರಯಸ್ಥ' 'ಗಾಯಕವಾಡ ದಾದಾ' ಒಳ್ಳೆಯ ಚಿತ್ರಣಗಳು.

ಶ್ರೀನಿವಾಸ ವೈದ್ಯರ ಶೈಲಿಯ ಬಗ್ಗೆ ಅ.ರಾ.ಮಿತ್ರರು ಹೇಳುವುದನ್ನು ಗಮನಿಸಿ. '...ಧ್ವನಿಪೂರ್ಣವಾದ, ಉತ್ಪ್ರೇಕ್ಷೆಯ ಕುದುರೆಯನ್ನೇರಿ, ಧಾರವಾಡದ ದೇಸೀ ಪರಿಮಳವನ್ನು ಆಘ್ರಾಣಿಸುತ್ತ, ತನಗೇ ವಿಶಿಷ್ಟವಾದ ವಿಚಾರಸೀಮೆಯಲ್ಲಿ ಹೆಜ್ಜೆಹಾಕುವ ವೈಹಾಳಿತನ'.

ಕನ್ನಡ ಹಾಸ್ಯ ಸಾಹಿತ್ಯಕ್ಕೆ ಶ್ರೀನಿವಾಸ ವೈದ್ಯರ ಕೊಡುಗೆ ದೊಡ್ಡದು. ನಗೆಗಾಗಿ ಹಾಸ್ಯ ಲೇಖನವನ್ನೇ ಬರೆಯಲಿ, ಗಂಭೀರ ಚಿತ್ರಣವನ್ನು ತಿಳಿಯಾಗಿಸಲು ಹಾಸ್ಯದ ತೆಳು ಪರದೆಯನ್ನೇ ಉಪಯೋಗಿಸಲಿ, ಅವರು ಓದುಗನ ಮನಸ್ಸನ್ನು ಸೂರೆ ಹಿಡಿಯುತ್ತಾರೆ. ನಾಟಕಕಾರ, ಸಾಹಿತಿ ದಿವಂಗತ ಕೆ.ವಿ.ಸುಬ್ಬಣ್ಣನವರು ವೈದ್ಯರ ಲೇಖನಗಳ ಬಗ್ಗೆ ಹೇಳಿರುವುದನ್ನು ಓದುಗರ ಗಮನಕ್ಕೆ ತಂದು ಈ ಲೇಖನವನ್ನು ಮುಗಿಸುತ್ತೇನೆ. '(ನಿಮ್ಮ ಬರಹಗಳು) ನನಗೆ ತುಂಬ ಅಪರೂಪದ ಅಸಾಧಾರಣ ಅನುಭವ ಕೊಟ್ಟಿವೆ. ಮೂರು ನಾಲ್ಕುದಿನ ಅವು ನನ್ನನ್ನು ಆವರಿಸಿಬಿಟ್ಟಿದ್ದವು. ಯಾವುದೇ ಅತ್ಯುತ್ತಮ ಸಾಹಿತ್ಯ ಕೃತಿ ಕೊಡುವ ಬಹು ಗಾಢ ಅನುಭವವನ್ನು ಇವು ನನಗೆ ಕೊಟ್ಟಿವೆ. ನಿಮ್ಮ ಬರವಣಿಗೆ ನಮಗೆ ಬೇಂದ್ರೆಯವರನ್ನು ಅರ್ಥಮಾಡಿಸಿಕೊಡುತ್ತದೆ. ಧಾರವಾಡವನ್ನು ಅರ್ಥಮಾಡಿಸಿ ಕೊಡುತ್ತದೆ. ಕನ್ನಡದ ಒಟ್ಟು ಸಾಹಿತ್ಯದ ಕೆಲವು ಗುಣಗಳನ್ನು ಅರ್ಥಮಾಡಿಸಿಕೊಡುತ್ತದೆ ಅಥವ ಇವೆಲ್ಲ ಹೆಣೆದುಕೊಂಡಿರುವ 'ಕನ್ನಡ'ದಲ್ಲಿ ನೀವು ನಿಮ್ಮನ್ನು ಕೂಡಿಸಿ ನೇಯ್ದುಕೊಂಡು ಬಿಟ್ಟಿದ್ದೀರಿ...' (ದಿ. ಕೆ.ವಿ.ಸುಬ್ಬಣ್ಣನವರು ಶ್ರೀನಿವಾಸ ವೈದ್ಯರಿಗೆ ಬರೆದ ಮೆಚ್ಚಿಗೆಯ ಪತ್ರದಿಂದ).

ಕನ್ನಡ ಹಾಸ್ಯ ಸಾಹಿತ್ಯಕ್ಕೆ ಶ್ರೀನಿವಾಸ ವೈದ್ಯರ ಕೊಡುಗೆ ಅನನ್ಯವಾದದ್ದು.

ಗ್ರಂಥಋಣ:

೧. ಶ್ರೀನಿವಾಸ ವೈದ್ಯ: ಲೇಖಕನೊಡನೆ ಮುಖತಃ ಸಂಭಾಷಣೆಯಲ್ಲಿ.

೨. ಎಚ್.ಕೆ.ರಂಗನಾಥ್: 'ತಲೆಗೊಂದು ತರ' ಪುಸ್ತಕದ ಮುನ್ನುಡಿಯಲ್ಲಿ.



## ಇಂದಿನ ಪ್ರಮುಖ ಹಾಸ್ಯಸಾಹಿತಿ ಭುವನೇಶ್ವರಿ ಹೆಗಡೆ

### ಗುರುಪ್ರಸಾದ್ ಕಾಗಿನೆಲೆ

ಶ್ರೀಮತಿ ಭುವನೇಶ್ವರಿ ಹೆಗಡೆಯವರ ಹಾಸ್ಯ ಲೇಖನಗಳ ಬಗ್ಗೆ ಈ ಕೃತಿಗೆ ಒಂದು ಲೇಖನವನ್ನು ಬರೆದುಕೊಡಬೇಕಾಗಿ 'ಕನ್ನಡ ಸಾಹಿತ್ಯ ರಂಗ' ದವರು ಒತ್ತಾಯಪೂರ್ವಕವಾಗಿ ಕೇಳಿದಾಗ ಇಲ್ಲ ಎನ್ನಲು ಖಂಡಿತಾ ಹೇಳಲಾಗಲಿಲ್ಲ. ಇದುವರೆವಿಗೂ ಭುವನೇಶ್ವರಿಯವರು ಹತ್ತು ಹಾಸ್ಯ ಲೇಖನ ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಮೈಸೂರಿನ ರಂಗಾಯಣಕ್ಕಾಗಿ ಭುವನೇಶ್ವರಿಯವರು 'ಪುಟ್ಟಿಯ ಪಟ್ಟೆ ಹುಲಿ' ಎಂಬ ಮಕ್ಕಳ ನಾಟಕವನ್ನು ರಚಿಸಿದ್ದಾರಾದರೂ ಅದರಲ್ಲಿ ಮಕ್ಕಳ ಮುಗ್ಧ ಲೋಕಕ್ಕೆ ಹಾಸ್ಯದ ಕನ್ನಡಕ ಹಾಕಿ ಸಂಭ್ರಮಿಸಿದ್ದಾರೆ. ಇವರ ಎಲ್ಲಾ ಪುಸ್ತಕಗಳನ್ನೂ ಓದಿ ಅವುಗಳ ಬಗ್ಗೆ ಬರೆಯಬೇಕಾಗಿರುವ ನನ್ನ ಜವಾಬ್ದಾರಿ ಎಂಥದ್ದು ಎನ್ನುವ ಅರಿವು ನನಗಿದೆ. ಇದು ನಮ್ಮ ನಡುವಿನ ಒಬ್ಬ ಶ್ರೇಷ್ಠ ಹಾಸ್ಯಲೇಖಕಿಯ ಸಮಗ್ರ ಹಾಸ್ಯ ಸಾಹಿತ್ಯವನ್ನು ಕುರಿತಾದ ನನ್ನ ವಿಮರ್ಶೆಯಂತೂ ಅಲ್ಲವೇ ಅಲ್ಲ. ಹಾಗೆ ಮಾಡುವ ಧೈರ್ಯವೂ ನನಗಿಲ್ಲ. ಚಿಕ್ಕಂದಿನಿಂದಾ ಭುವನೇಶ್ವರಿಯುವರ ಹಾಸ್ಯಲೇಖನಗಳನ್ನು ಓದಿಕೊಂಡು ಬೆಳೆದ ನನ್ನ ಪೀಳಿಗೆಯವರಿಗೆ ಅವರ ಸಮಗ್ರ (?) ಸಾಹಿತ್ಯ ಓದಿದಾಗ ಸಿಗುವ ಹಾಸ್ಯಾನುಭೂತಿಯೇ ಬೇರೆ. ವಿಶೇಷಾಂಕ ಮತ್ತಿತರ ಪತ್ರಿಕೆಗಳಲ್ಲಿ ಓದುವ ಬಿಡಿಬಿಡಿ ಬರಹಗಳಿಗೂ ಇಡೀ ಸಮಗ್ರ 'ಹಾಸ್ಯ ಸಾಹಿತ್ಯ'ವನ್ನು ಓದಿದಾಗ ನನ್ನ ಗ್ರಹಿಕೆಗೆ ಬಂದದ್ದಕ್ಕೂ ಎಂಥ ವ್ಯತ್ಯಾಸವಿದೆ ಎನ್ನುವುದನ್ನು ಮಾತ್ರ ಇಲ್ಲಿ ಹೇಳಲು ಇಷ್ಟಪಡುತ್ತೇನೆ.

ಸಾಮಾನ್ಯವಾಗಿ ಚಿಕ್ಕಂದಿನಲ್ಲಿ ಒಂದು ದೀಪಾವಳಿ ವಿಶೇಷಾಂಕವೋ, ಯುಗಾದಿ ವಿಶೇಷಾಂಕವೋ ಕೈಗೆ ಸಿಕ್ಕಾಗ ಮೊದಲು ನಾನು ಮಾಡುತ್ತಿದ್ದುದು ಸುಮ್ಮನೆ ಪುಟ ತಿರುಗಿಸುವುದು, ಮಧ್ಯೆ ಮಧ್ಯೆ ಸಿಗುವ ನಾಡಿಗ್‌ರ ಕಾರ್ಟೂನುಗಳನ್ನು ಓದುವುದು, ಹಾಗೆಯೇ ತಿರುಗಿಸುತ್ತಿದ್ದಾಗ ಡುಂಡಿರಾಜರ ಹನಿಗವನಗಳಿದ್ದರೆ ಅವನ್ನೂ ಓದುವುದು. ನಂತರ ವರ್ಣರಂಜಿತ ಸಿನೆಮಾ ಪುಟಗಳನ್ನು ನೋಡಿ ಆ ತಾರೆಯರ ಇಲ್ಲದ ಗಾಸಿಪ್‌ಗಳ ಬಗ್ಗೆ ತಲೆಕೆಡಿಸಿಕೊಂಡು ನಂತರ ಗಮನ ಹೋಗುತ್ತಿದ್ದುದು ಈ ಹಾಸ್ಯಲೇಖನಗಳ ಮೇಲೆ. ಹೆಗಡೆ, ಸುನಂದಮ್ಮ, ಕೇಫ, ಎಚ್. ಎಲ್. ಕೇಶವಮೂರ್ತಿ, ವೈದ್ಯ, ನರಸಿಂಹಮೂರ್ತಿ ಮುಂತಾದವರ ಲೇಖನಗಳನ್ನು ಓದಿದ ಮೇಲೆಯೇ ಕಥೆ ಕವನಗಳಂಥ 'ತೂಕ'ದ(ಭಾರದ)ಪ್ರಕಾರಕ್ಕೆ ಕಣ್ಣುಹಾಯಿಸುತ್ತಿದ್ದುದ್ದು. ಹೀಗೆ ಹಾಸ್ಯಲೇಖನಗಳು (ಭುವನೇಶ್ವರಿಯವರ ಕ್ಷಮೆಯಿರಲಿ) ಒಂದು ರೀತಿ ಫಿಲ್ಲರ್‌ಗಳಾಗಿ, ಅಥವಾ ಕಥೆ, ಕವನಗಳನ್ನು ಓದುತ್ತಿದ್ದಾಗ ನಡುವೆ ಬೇಕಾದ 'ಕ್ರಿಯೇಟಿವ್ ರಿಲೀಫ್'ನ್ನು ಮಾತ್ರ ನನಗೆ ಒದಗಿಸುತ್ತಿದ್ದವು. ಹಾಸ್ಯ ಸಾಹಿತ್ಯ ಆಗ ನನ್ನ ಗ್ರಹಿಕೆಗೆ ಬಂದದ್ದು ಈ ಪರಿಯಲ್ಲಿ ಮಾತ್ರ. ಕೈಲಾಸಂರವರ ನಾಟಕಗಳನ್ನು, ನಾ.ಕಸ್ತೂರಿಯವರ ಲೇಖನಗಳನ್ನು ಪುಸ್ತಕ ರೂಪದಲ್ಲಿ ಓದಿದ್ದ ಕಾರಣ ಅವುಗಳ ಸಮಗ್ರ ಸ್ವರೂಪ ಬೇರೆಯೇ ರೀತಿಯಲ್ಲಿ ಅರ್ಥವಾಗಿತ್ತು.

ಆದರೆ, ಇಷ್ಟಕ್ಕೆ ಮಾತ್ರ ಹಾಸ್ಯಸಾಹಿತ್ಯವನ್ನು ಮೊಟಕುಗೊಳಿಸುವುದು ಎಂಥ ಮೂರ್ಖತನ ಎನ್ನಿಸಿದ್ದು ಭುವನೇಶ್ವರಿಯವರ ಎಂಟು ಪುಸ್ತಕಗಳನ್ನು ಒಟ್ಟಿಗೆ ಓದಲು ಪ್ರಯತ್ನ ಮಾಡಿದಾಗ. ಕಳೆದ ಹಲವಾರು ವರ್ಷಗಳಲ್ಲಿ ಭುವನೇಶ್ವರಿಯವರು ಬರೆದಿರುವ ಎಲ್ಲ ಲೇಖನಗಳನ್ನೂ ಓದಿದಾಗ ಎಲ್ಲಿಯೂ ಹಾಸ್ಯ 'ಓವರ್ಡೋಸ್' ಎನಿಸಲಿಲ್ಲ. ನನಗೆ ಲಭ್ಯವಿರುವ ಭುವನೇಶ್ವರಿಯವರ ಪುಸ್ತಕಗಳು 'ಮುಗುಳು', 'ವಲಲ ಪ್ರತಾಪ', 'ನಕ್ಕು ಹಗುರಾಗಿ', 'ಮೃಗ-ಯಾ-ವಿನೋದ', 'ಹಾಸ-ಭಾಸ', 'ಬೆಟ್ಟದ ಭಾಗೀರಥಿ', 'ಎಂಥದು ಮಾರಾಯ್ರೇ' ಮತ್ತು 'ಮಾತಾಡಲು ಮಾತು ಬೇಕೇ' ಈಗಾಗಲೇ ಭುವನೇಶ್ವರಿ ಹೆಗಡೆಯವರ ಲೇಖನಗಳನ್ನು ಕುರಿತು ಪಾವೆಂ ಆಚಾರ್ಯ, ಎಚ್ಚೆಸ್ಕೆ, ವೈದ್ಯ, ಜಯಂತ ಕಾಯ್ಕಿಣಿ, ಡಾ. ಎಚ್. ಎಸ್. ಸುಜಾತಾ ಮತ್ತು ಅನುಪಮಾ ನಿರಂಜನ ಮುಂತಾದ ಘಟಾನುಘಟಿಗಳು ಮುನ್ನುಡಿ, ಬೆನ್ನುಡಿ, ಅರಿಕೆ ಪ್ರಸ್ತಾವನೆಗಳ ಹೆಸರಿನಲ್ಲಿ ಸಾಕಷ್ಟು ಬರೆದಿದ್ದಾರೆ. ಇವರು ಹೇಳಿದ್ದಕ್ಕಿಂತ ಬೇರೆ ಹೆಚ್ಚಿನದನ್ನೇನನ್ನೂ ನಾ ಹೇಳುತ್ತೇನೆ ಎನ್ನುವ ನಂಬಿಕೆ ನನಗಿಲ್ಲ. ಮೇಲೆ ಹೇಳಿದ ನನ್ನ ಓದಿನ ಮಿತಿಯಲ್ಲಿ ನನ್ನ ಗ್ರಹಿಕೆಗೆ ಸಿಕ್ಕ ಭುವನೇಶ್ವರಿಯವರ ಲೇಖನಗಳ ಬಗ್ಗೆ ಹೇಳಲು ಪ್ರಯತ್ನಿಸುತ್ತೇನೆ. ಸುಮಾರು ಒಂಬೈನೂರು ಪುಟಗಳನ್ನು ಓದಿದಾಗಲೂ ಇನ್ನೂ ಇವರ ಕೃತಿಗಳನ್ನು ಓದಬೇಕು ಎನ್ನುವ ಹಪಾಹಪಿ ಓದುಗನಲ್ಲಿ ಉಳಿದಾಗ ಮತ್ತು ಭುವನೇಶ್ವರಿಯವರು

ಅದಕ್ಕೆ ಯಾವ ಚ್ಯುತಿಯೂ ಬರದಂತೆ ಇನ್ನೂ ಬರೆದುಕೊಂಡು ಹೋಗುತ್ತಿದ್ದಾರೆ ಎನ್ನುವ ವಿಷಯವೇ ಒಬ್ಬ ಲೇಖಕಿಯಾಗಿ ಅವರ ಸಾಧನೆ.

ಹಾಸ್ಯದ ವಿಶ್ಲೇಷಣೆ ಸುಲಭವಲ್ಲ. ಅಮೆರಿಕಾದ 'ಅಮೆರಿಕದ ತತ್ವಜ್ಞಾನ ತ್ರೈಮಾಸಿಕ' (American Philosophical Quartely)ದ ಪತ್ರಿಕೆಯಲ್ಲಿ ಪ್ಯೂ ಲಾ ಪೋಲೆಟ್ ಮತು ನಿಯಾಲ್ ಶಾಂಕ್ಸ್ ಎಂಬ ಲೇಖಕರ 'ಹಾಸ್ಯದ ತಾತ್ವಿಕ ಆಳ' ಎನ್ನುವ ಲೇಖನವನ್ನು ಓದುತ್ತಿದ್ದೆ. ಹಾಸ್ಯಕ್ಕೂ ತತ್ವಜ್ಞಾನಕ್ಕೂ ಎತ್ತಲಿಂದೆತ್ತಣ ಸಂಬಂಧ ಎನಿಸಬಹುದು. ಕೆಲವೊಂದು ಕುತೂಹಲಕರವಾದ ವಿಷಯಗಳನ್ನು ಅವರು ಈ ಪ್ರಬಂಧದಲ್ಲಿ ಮಂಡಿಸಿದ್ದಾರೆ. ಹಾಸ್ಯಕ್ಕೂ ನಗುವಿಗೂ ಸಂಬಂಧವಿದೆಯೇ? ಎನ್ನುವುದು ಅವರು ಉತ್ತರಿಸಲು ಪ್ರಯತ್ನಪಡುತ್ತಿರುವ ವಿಷಯ. ಹಾಸ್ಯ ಮುಗುಳ್ನಗೆಯನ್ನು ಹುಟ್ಟಿಸಬಹುದು, ಬಾಯಿ ಮುಚ್ಚಿನಗುವ ಒಂದು ತೂಕದ ನಗೆ, ಅಥವಾ ಬಾಯಿತುಂಬಾ ಬರುವ ಗಹಗಹಿಕೆ ಇತ್ಯಾದಿ. ಇಲ್ಲವೇ ಒಂದು ಮಟ್ಟದಲ್ಲಿ ಖುಷಿಕೊಟ್ಟುಕೊಳ್ಳುತ್ತಾ ಒಳಗೇ ನಕ್ಕೊಂಡು ನಗುವಿನ ಯಾವ ಭೌತಿಕ ಲಕ್ಷಣಗಳನ್ನೂ ತೋರಿಸಿಕೊಳ್ಳದ ಖುಷಿ (ಇದನ್ನೇ ನಾವು ತಿಳಿಹಾಸ್ಯ ಎಂದು ಕರೆಯುತ್ತೇವೇನೋ) ಆದರೆ, ನಗು ಹುಟ್ಟಬೇಕಾದರೆ ಅಲ್ಲಿ ಹಾಸ್ಯವಿರಬೇಕೆಂದಿಲ್ಲ. ನಗು ಖುಷಿಗೆ ಬರಬಹುದು, ಅಟ್ಟಹಾಸಕ್ಕೆ ಬರಬಹುದು, ನಗುವಿಗೆ ಒಂದು ವ್ಯಾಂಗಿಕ ಆಯಾಮವೂ ಇರಬಹುದು, ಇದನ್ನೇ smirk ಎನ್ನಬಹುದು. ಕಚಗುಳಿ ಇನ್ನಿತರ ಅಂಗಚೇಷ್ಟೆಗಳಿಂದಲೂ ನಗು ಬರಬಹುದು. ಆದರೆ, ಒಳ್ಳೆಯ ಹಾಸ್ಯದಿಂದ ಹುಟ್ಟುವುದು ಶುದ್ಧ ನಗು ಮಾತ್ರ. ಅಲ್ಲಿ ನಗು ಕೇವಲ ಭೌತಿಕ ಕ್ರಿಯೆ ಅಷ್ಟೇ ಅಲ್ಲ. ಆ ನಗುವಿಗೆ ಆನಂದದ ಆಯಾಮವಿರುತ್ತದೆ. ವ್ಯಂಗ್ಯ, ಹುಸಿನಗು, ಅಟ್ಟಹಾಸ, ಗಹಗಹಿಕೆಗಳ ಭೌತಿಕ ಹೊರರೂಪದ ನಗು ಇಲ್ಲಿ ಕಾಣಸಿಗುವುದಿಲ್ಲ. ಆದರೆ ಅದು ಬೇರೆ ಬೇರೆ ಹಾಸ್ಯದಲ್ಲಿ ಬೇರೆ ಬೇರೆ ಭೌತಿಕರೂಪದಲ್ಲಿರುತ್ತದೆ. ಹಾಸ್ಯೋತ್ಸವ, ಟೀವಿಯ ಸಿಟ್‌ಕಾಮ್‌ಗಳ ಹಾಸ್ಯದ ಉದ್ದೇಶವೇ ಒಂದು 'ದೊಡ್ಡ' ನಗು. ಅದು ಬಹಳಷ್ಟು ಬಾರಿ ಅಬ್ಬರದ ನಗುವೇ ಆಗಿರುತ್ತದೆ. ಗೊರೂರರ ಪ್ರಬಂಧಗಳ ನಗುವೇ ಬೇರೆ. ತೇಜಸ್ವಿಯವರ ಕೃಷ್ಣೇಗೌಡರ ಆನೆ, ಮಾಯಾಲೋಕಗಳ 'ಸಾಹಿತ್ಯಿಕ' ನಗುವೇ ಬೇರೆ. ಆದರೆ ಎಲ್ಲಿ ನಗುವಿರುತ್ತದೋ ಅಲ್ಲಿ ಹಾಸ್ಯವಿರಲೇಬೇಕೆಂದಿಲ್ಲ.

ಈ ಹಿನ್ನೆಲೆಯಲ್ಲಿ ಭುವನೇಶ್ವರಿಯವರ ಕೃತಿಗಳನ್ನು ಓದಿದಾಗ, ಕೊನೆಗುಳಿಯುವುದು ಒಂದು ಸುಂದರ ಮುಗುಳ್ನಗು. ಇಲ್ಲಿ ನಗುವು ಸುಂದರ ಝರಿಯಂತೆ ಎಲ್ಲೆಡೆಯಲ್ಲಿಯೂ ಹರಿಯುತ್ತದೆ. ಅಲ್ಲಲ್ಲಿ ಜಲಪಾತದಂತೆ ಧುಮ್ಮಿಕ್ಕುವ ಲಕ್ಷಣಗಳನ್ನು ತೋರಿಸಿದರೂ ಕೊನೆಗೆ ಇಲ್ಲಿನ ಜೀವಸೆಲೆಯಿರುವುದು ಓದುತ್ತಾ ಓದುತ್ತಾ ಹೋದಂತೆ ಸಣ್ಣ ಮುಗುಳಿನಿಂದ ಆರಂಭವಾದ ಅದೇ ಮುಗುಳು ಉಳಕೊಂಡು ಕೊನೆಗೆ ಓದಿ ಮುಗಿಸಿದಾಗಲೂ ತಣ್ಣದಾಗಿ ಹರಿದಿರುತ್ತದೆ.

ಭುವನೇಶ್ವರಿಯವರದ್ದು ಮುಕ್ಕಾಲುವಾಸಿ ಬರಹಗಳು ಪ್ರಸಂಗವನ್ನಾಧರಿಸಿದ್ದು. ಅಂದರೆ, ನಮ್ಮ ಸುತ್ತಲೂ ನಡೆಯುವ ಸಣ್ಣ ಸಣ್ಣ ದೈನಿಕಗಳನ್ನು ನಗುತ್ತಾ ನೋಡುತ್ತಾರೆ. ಉದಾಹರಣೆಗೆ ಹೆಂಗಸರ ಜಾತ್ರೆ ಸೇರುವ 'ಗಾರ್ಡನ್ ಮರೇಯ್ಸ್ಲಿ'ಯಲ್ಲಿ ಅಯಾಚಿತವಾಗಿ ನುಸುಳುವ ವಿಮಲ್, ತಮ್ಮ 'ವೃತ್ತಿಪರ' ಎಲೆಕ್ಟ್ರಿಫೈಯಿಂಗ್ ಮಾತುಕತೆಯನ್ನು, ಯಕ್ಷಗಾನದ ಪ್ರಸಂಗದಲ್ಲಿಯೂ 'ವಿದ್ಯುತ್' ಇಲ್ಲದೇ ಇದ್ದಾಗ ಮುಂದುವರೆಸಿಕೊಳ್ಳುತ್ತಾ ಪ್ರಸಂಗವನ್ನು ಮುಂದುವರೆಸುವ ಚಾತುರ್ಯ ತೋರಿಸುವ ಲೈನ್‌ಮನ್ ವಾಸು, ಮಾದಲಜಡ್ಡಿ ಯುವಕ ಯುವತಿ ಮಂಡಳಿಗಳ ಸಾಮರಸ್ಯ ಸಾರ, ಮೆಡಿಕಲ್ ರೆಪ್ರೆಸೆಂಟೆಟಿವ್ ರೀತಿ ವೇಶಭೂಷಿತನಾಗಿ ತನ್ನ ಕೆಲಸದಲ್ಲಿ ತೊಡಗಿರುವ ದೇವದೂತ, ತನ್ನ ಚಿತ್ರ ವಿಚಿತ್ರ ಚಿಕಿತ್ಸೆಗಳಿಂದ ತನ್ನ ರೋಗಿವರ್ಗಕ್ಕೇ ಒಂದು ರೀತಿಯ ಭಯಾಗ್ರೇಸರನಾದ ಚಿಕ್ಕಪ್ಪ, ಎಲ್ಲೆಡೆ ಇಣುಕುವ ನಳಿನಾಕ್ಷಿ, ಗೋದೂಬಾಯಿಯವರು, 'ಮಂದಸ್ಮಿತರಾಯರು', ಬ್ಯಾಂಕ್ ಖಾತೆ ಕಾತೆಯಾಗುವ ಪ್ರಸಂಗ ಇವೆಲ್ಲವೂ ನಮ್ಮ ದಿನನಿತ್ಯ ನಡೆಯುವ ಪ್ರಸಂಗಗಳೇ, ಪಾತ್ರಗಳೂ ನಮ್ಮ ಕಣ್ಣಮುಂದಿನವೇ. ಆದರೆ, ಈ ದೈನಿಕದ ಘಟನೆಗಳನ್ನು ಭುವನೇಶ್ವರಿಯವರು ನಗುವ ಕಣ್ಣಿಂದ ನೋಡಿದಾಗ ಆ ಘಟನೆಗಳ ಅನುಭವದ ಆಯಾಮವೇ ಬದಲಾಗಿ, ಅರೆ ಇದನ್ನು ಹೀಗೆ ಯಾಕೆ ನಾವು ನೋಡಲಿಲ್ಲ ಎನ್ನಿಸಿಬಿಡುತ್ತದೆ.

ಮೇಲೆ ಹೇಳಿದ 'ತತ್ವಜ್ಞಾನಿ'ಗಳ ಪ್ರಕಾರ ಹಾಸ್ಯದ ಹುಟ್ಟಿರುವುದೇ ಭಾಷೆಯಲ್ಲಿ. ಭುವನೇಶ್ವರಿಯವರು ಉಪಯೋಗಿಸುವ ಭಾಷೆ ಸರಳವಾದದ್ದು. ಉಪಯೋಗಿಸುವುದು ಎಂದು ನಾನು ಬೇಕಂತಲೇ ಹೇಳಿದ್ದೇನೆ. ಏಕೆಂದರೆ, ಇವರ ಭಾಷಾ ಪಾಂಡಿತ್ಯವನ್ನು ತೋರಿಸುವ ಅನೇಕ ಪ್ರಬಂಧಗಳೂ ಇಲ್ಲಿವೆ. ಆದರೆ, ಇವರಿಗೆ ತಮ್ಮ ಭಾಷಾಪಾಂಡಿತ್ಯ ತೋರಿಸಲೇಬೇಕಾದ ಹಮ್ಮಿಲ್ಲ. ಭಾಷೆಯ ಮೇಲೆ ಅಗಾಧ ಹಿಡಿತವಿರುವಿದರಿಂದಲೇ ಅದನ್ನು ಇವರು ತಮಗೆ ಹೇಗೆ ಬೇಕೋ ಹಾಗೆ ಉಪಯೋಗಿಸಿದರೂ ಎಲ್ಲಿಯೂ ಹಾಸ್ಯರಸಕ್ಕೆ ಧಕ್ಕೆಯಾಗದಂತೆ ಪ್ರಯತ್ನಪೂರ್ವಕವಾದ ಎಚ್ಚರವನ್ನು ವಹಿಸುತ್ತಾರೆ. ಕಾವ್ಯವಾಗಲೀ, ಆಡುನುಡಿಯಾಗಲೀ, ಕರ್ನಾಟಕದ ಬೇರೆ ಬೇರೆ ಪ್ರಾಂತ್ಯದ ಭಾಷೆಗಳನ್ನು ಅವರು ಬಳಸಲಿ, ತಮ್ಮ ಪಾಂಡಿತ್ಯ ಎಲ್ಲಿಯೂ ಪ್ರದರ್ಶನವಾಗುವುದಿಲ್ಲ. ಒಂದು ಸಣ್ಣ ಉದಾಹರಣೆ: 'ಮಳೆ ಬಂದರೆ' ಎಂಬ ಲೇಖನದ ಮೊದಲ ಪ್ಯಾರಾ ಈ ರೀತಿ ಆರಂಭವಾಗುತ್ತದೆ. 'ಬೇಸಿಗೆಯಿಡೀ ಬೆವರು ಸುರಿಯುವ ಮಂಗಳೂರಲ್ಲಿ ಈ ವರ್ಷ ಸುರಿದ ಧಾರಾಕಾರ ಮಳೆಯನ್ನು ನಾನು ತ್ರಿಕರಣಪೂರ್ವಕವಾಗಿ ಅನುಭವಿಸಿ ಆನಂದಿಸಿದ್ದೇನೆ. ಬಾನಿನ ತುಂಬ ದಟ್ಟೈಸಿ, ಭೂಮಿಯನ್ನೆಲ್ಲಾ ಆವರಿಸಿಬಿಡುವಂತೆ ಕವಿಯುವ ಕರಾವಳಿಯ ಘಳನೀಳ ಮೋಡಗಳನ್ನು ಮೊಗವೆತ್ತಿ ಆರಾಧನೆಯ ಭಾವದಲ್ಲಿ ಈಕ್ಷಿಸಿ ಆನಂದಿಸಿದ್ದೇನೆ. ಜೊಯ್ಯೋ ಎಂದು ಸ್ವರವೆಬ್ಬಿಸಿ ಸುರಿಯುವ ಮಳೆಗೆ

ಮೈಮನಗಳೆರಡೂ ಒದ್ದೆಯಾದಾಗ ಪುಳಕಿತಳಾಗಿ ವರುಣರಾಜನ ಧಾರಾಳ ಧಾರಾಕಾರಕ್ಕೆ ಆತ್ಮೀಯತೆಯಿಂದ ಸ್ಪಂದಿಸಿ ಗುನುಗಿದ್ದೇನೆ'. ಭಾಷೆಯ ಮೇಲಿನ ಲೇಖಕಿಯ ಹಿಡಿತ ನಮ್ಮ ಗ್ರಹಿಕೆಗೆ ಬಂದರೂ ಅದು ಎಲ್ಲೂ ಭಾರವೆನಿಸುವುದಿಲ್ಲ. ಕಾವ್ಯವಾಗುವುದಿಲ್ಲ. ಮುಂದಿನ ಅವರ ಮಳೆಯ ಬಗೆಗಿನ ಲಘು ಪ್ರಬಂಧಕ್ಕೆ ಇದು ಒಂದು ರೀತಿ ಅಕ್ಷರಗಳ ಸುಂದರ ಹೆಬ್ಬಾಗಿಲಾಗಿ ನಮ್ಮನ್ನು ಬರಮಾಡಿಕೊಳ್ಳುತ್ತದೆ. ಅಷ್ಟೇ ಅಲ್ಲ; ಕರ್ನಾಟಕದ ಬೇರೆ ಬೇರೆ ಪ್ರದೇಶದ ಭಾಷೆಗಳನ್ನು ಉಪಯೋಗಿಸುವ ಕಲೆ ಇವರಿಗೆ ಕರಗತವಾಗಿದೆ. ಮೂಲತಃ ಉತ್ತರ ಕನ್ನಡದವರಾಗಿದ್ದು ಈಗ ಮಂಗಳೂರಿನಲ್ಲಿ ನೆಲೆಸಿದ್ದರೂ ಮೈಸೂರಿನ 'ಹೋಗ್ರೀ ಬನ್ರೀ'ಗಳು, ಧಾರವಾಡದ 'ಚಲೋ' ಭಾಷೆ ಯಾವುದೇ ಕೃತಕತೆಯೂ ಇಲ್ಲದೇ ಉಪಯೋಗಿಸಲ್ಪಟ್ಟಿವೆ.

ಮಾರ್ಕ್ ಟ್ವೈನ್‌ನ ಹಾಸ್ಯ ಪ್ರಬಂಧಗಳ ಹಾಸ್ಯಕ್ಕೆ ಮುಕ್ಕಾಲುವಾಸಿ ಆತನ ಲೇಖನಗಳ ಶೀರ್ಷಿಕೆಗಳೇ ಕಾರಣವಾಗಿದ್ದವಂತೆ. ಇದಕ್ಕೆ ಭುವನೇಶ್ವರಿಯವರ ಪ್ರಬಂಧಗಳೂ ಹೊರತಾಗಿಲ್ಲ. ಅವರ ಲೇಖನಗಳ ಶೀರ್ಷಿಕೆಗಳನ್ನೇ ನೋಡಿ: 'ವಲಲ ಪ್ರತಾಪ', 'ರೆಂಟ್ ಕಂಟ್ರೋಲ್ ನಗು', 'ನಮಗ್ಯಾಕೆ ಬಿಡ್ರೀ', 'ಪ್ರೊ. ಪಾಪಯ್ಯನವರ ಪರೀಕ್ಷೆ ಕನವರಿಕೆ', 'ನೀರಾವರಿಯವರು', 'ಸುರತ್'ಕಲ್'ನಲ್ಲಿ ಎಲ್ಲರೂ ಕ್ಷೇಮವೇ?', 'ಮೇಷ್ಟ್ರುಗಳ ರಜಾಕಲಾಪ', 'ಅಡ್ಮಿಷನ್ ಅಪ್ಪ', 'ಓಡಿಹೋದ ಮಗನಿಗೊಂದು ಪತ್ರ' 'ಮೃಗ-ಯಾ-ವಿನೋದ' ಹೀಗೇ ಬಹಳಷ್ಟು ಪಂಚ್ ಇರುವ ಹೆಸರುಗಳು ಇವರ ಪುಸ್ತಕದುದ್ದಕ್ಕೂ ಬರುತ್ತವೆ.

ಹಾಸ್ಯದ ವಿಶ್ಲೇಷಣೆ ಬೇರೆಬೇರೆ ಮಟ್ಟದಲ್ಲಿ ನಡೆಯುತ್ತದೆ. ಅಮೆರಿಕಾದ ಟೀವಿ ಚಾನಲ್‌ನ ಸಂಶೋಧನಾ ಕಛೇರಿಗಳಲ್ಲಿ ಹಾಸ್ಯಕ್ಕೇ ಒಂದು ವಿಶೇಷ ಪರಿಣತ ವಿಭಾಗವಿರುತ್ತದೆ. ಇಲ್ಲಿ ಕೆಲಸ ಮಾಡುವವರ ಕೆಲಸ, ಜನಕ್ಕೆ ಏನನ್ನುಣಬಡಿಸಿದರೆ ಅದು ಹಾಸ್ಯವಾಗುತ್ತದೆ ಎನ್ನುವುದನ್ನು ಸಂಶೋಧಿಸುವುದು. ಹಾಸ್ಯ ಸಂದರ್ಭೋಚಿತವಾಗಿರಬೇಕು, ಇಂತಿಂತ ಕಡೆ ಪಂಚ್‌ಲೈನ್ ಇರಬೇಕು, ರಾಜಕೀಯ ವಿಡಂಬನೆಯಾದರೆ, ಅದು ತಟ್ಟಬೇಕಾದವರಿಗೆ ತಟ್ಟುತ್ತದೆಯೇ ಇಲ್ಲವೇ, ಅದನ್ನು ಪ್ರಸಾರ ಮಾಡಬೇಕಾದ ಪ್ರೈಮ್ ಟೈಮ್, ಎಲ್ಲದಕ್ಕಿಂತ ಹೆಚ್ಚಾಗಿ ನೋಡುಗ ಅಥವ ಓದುಗನಿಂದಲೂ ಕೊಂಚ ಮಟ್ಟಿನ ಹಾಸ್ಯಪ್ರಜ್ಞೆ ಅಥವಾ ಇಂತಹ ರಸಾನುಭೂತಿಯನ್ನು ಅನುಭವಿಸುವ ಒಂದು ಮನಸ್ಸೂ ಹಾಸ್ಯಕ್ಕೆ ಬೇಕೆಂದು ಅವರು ಅರಿತು ಹಾಸ್ಯಕ್ಕೆ ಬೇಕಾದ ಕೆಲವು ಸರಕುಗಳನ್ನು ವಿಶ್ಲೇಷಣಾಪೂರ್ವಕವಾಗಿ ಬರೆಯುತ್ತಾರೆ. ನಮ್ಮ ಗಿರಡ್ಡಿ ಗೋವಿಂದರಾಜರವರೂ ಕೂಡ ಒಮ್ಮೆ 'ಲಲಿತ ಪ್ರಬಂಧ' ಎಂದರೆ ಏನೆಂದು ಹೇಳುವ ಸಂದರ್ಭದಲ್ಲಿ ಹೇಳುತ್ತಾ 'ಸಣ್ಣ ವಿಷಯವನ್ನು ಬಹಳ ಗಹನವಾಗಿ

ಬರೆಯುವುದು ಅಥವಾ ಬಹಳ ಗಹನವಾದ ವಿಷಯವನ್ನು ತೀರ ಹಗುರವಾಗಿ ಹೇಳಿಬಿಡುವುದು ಲಲಿತ ಪ್ರಬಂಧ' ಎಂದು ಹೇಳುತ್ತಾರೆ. ಭುವನೇಶ್ವರಿಯವರ ಪ್ರಬಂಧಗಳನ್ನು ನಮ್ಮ ವಿಮರ್ಶಕರು ಲಲಿತಪ್ರಬಂಧ ಎಂಬ ಪ್ರಕಾರಕ್ಕೆ ಸೇರಿಸುತ್ತಾರೋ ಇಲ್ಲವೋ ಗೊತ್ತಿಲ್ಲ. ಇವರ 'ಆಕಳಿಕೆ', 'ರೀ', 'ಮಧ್ಯಾಹ್ನದ ನಿದ್ದೆ', 'ಮಂಗಳೂರಿನ ಬಸ್ಸುಗಳು', 'ರೆ' ಮುಂತಾದವು ಮೇಲೆ ಹೇಳಿದ ಗಿರಡ್ಡಿಯವರ ಮಾತಿಗೆ ಹೇಳಿಮಾಡಿಸಿದ ಉದಾಹರಣೆಯಾಗಿದೆ. ಆದ್ದರಿಂದಲೇ ಭುವನೇಶ್ವರಿಯವರ ಪ್ರಬಂಧಗಳನ್ನು ಕೇವಲ ಹಾಸ್ಯಪ್ರಬಂಧಗಳು ಎಂದು ವರ್ಗೀಕರಿಸುವುದು ತಪ್ಪೇನೋ ಎಂದು ಬಹಳಷ್ಟು ಜನಕ್ಕೆ ಎನಿಸಿದೆ.

ಮೇಲೆ ಹೇಳಿದ 'ಹ್ಯೂಮರಿಸ್ಟ್'ಗಳು ವಿಶ್ಲೇಷಿಸುವ ಪ್ರಕಾರ ಶುದ್ಧ ಹಾಸ್ಯದ ಪ್ರಮುಖ ಲಕ್ಷಣಗಳು–ಸರಳ ಭಾಷೆ, ಪನ್, ಒಂದೆರಡು ಪಂಚ್‌ಲೈನ್, ವರ್ತಮಾನದ ಪ್ರಸ್ತುತತೆ, ಕೊಂಚ ವ್ಯಂಗ್ಯ, ನಮ್ಮನ್ನು ನಾವೇ ನೋಡಿ ನಗುವ ಗುಣ, ಬೇಕಾದರೆ ಲೇವಡಿ ಮತ್ತು ಬುದ್ಧಿವಂತ ಓದುಗರಿಗೆ ಬೇಕಾದ ಸಂದಿಗ್ಧಾರ್ಥ ಅಥವಾ ಸಂದೇಹಾರ್ಥಗಳು (ಇದನ್ನೇ ಇಂಗ್ಲೀಷಿನಲ್ಲಿ Semantic ambuiguity, double entedre ಎನ್ನುತ್ತಾರೆ. ) ಭುವನೇಶ್ವರಿಯವರು ಈ ಹಾಸ್ಯದ ಅಕಾಡಿಮೆಕ್ ಲಕ್ಷಣಗಳನ್ನು ತಮ್ಮ ಲೇಖನಗಳಲ್ಲಿ ಒತ್ತಾಯಪೂರ್ವಕವಾಗಿ ಎಲ್ಲಿಯೂ ಸೇರಿಸಿಲ್ಲ. ಆದರೆ, ಅವರ ಯಾವುದೇ ಲೇಖನವನ್ನು ಓದಿನೋಡಿ, ಈ ಮೇಲಿನ ಎಲ್ಲಾ ಲಕ್ಷಣಗಳೂ ಯಾವುದೋ ಹಾಸ್ಯದ ಜರ್ನಲಿನ ಲೇಖನಕ್ಕೆ ಬರೆದಹಾಗೆ ಎನ್ನುವಷ್ಟು ಸಹಜವಾಗಿ ಸೇರಿಹೋಗಿದೆ. ಒಬ್ಬ ನ್ಯಾಚುರಲ್ ಲೇಖಕಿಗೆ ಮಾತ್ರ ಇದು ಸಾಧ್ಯ.

ಬಹಳಷ್ಟು ಭುವನೇಶ್ವರಿಯವರ ಲೇಖನಗಳು ನಮ್ಮ ದೈನಿಕಕ್ಕೊಂದು ನಗೆಯ ಕನ್ನಡಿ ಹಚ್ಚಿ ನೋಡುವವೇ ಆಗಿವೆ ಎನ್ನುವುದೇನೋ ನಿಜ. ಆದರೆ, ನಗೆಯ ಚಿಕಿತ್ಸಕ ಗುಣದಲ್ಲಿ ಅವರಿಗೆ ನಂಬಿಕೆಯಿದೆ. ಅದು ರೋಗಿಷ್ಠ ಮನಸ್ಸಾಗಿರಬಹುದು, ದೇಹವಾಗಿರಬಹುದು ಅಥವಾ ನಮ್ಮ ಸಮಾಜದ ಹುಳುಕೂ ಇರಬಹುದು. ನಮ್ಮನ್ನು ನಗಿಸುತ್ತಲೇ ಎಲ್ಲವನ್ನೂ ತೆರೆದಿಡುತ್ತಾರೆ. ಇವರ ಲೇಖನಗಳನ್ನು ಓದಿರುವವರೆಲ್ಲರೂ ಇವರದ್ದು ಹುಳುಕಿಲ್ಲದ, ಲೇವಡಿ ಕುಚೋದ್ಯವಿಲ್ಲದ ಆರೋಗ್ಯಪೂರ್ಣ ಹಾಸ್ಯ ಎಂದೇ ಹೇಳಿದ್ದಾರೆ. ಇದು ನಿಜವೇ. ಆದರೂ ಇವರ 'ಕುಸಿಯುತ್ತಿರುವ ಶಿಕ್ಷಣ ಮಟ್ಟ ಮತ್ತು ಸೆಮಿನಾರುಗಳು', 'ಜನಪ್ರಿಯ ಕಾದಂಬರಿಗಳಲ್ಲಿನ ಕಡ್ಡಾಯ ಚಿತ್ರಣಗಳು' 'ವಿಮರ್ಶಕರೇಕಿರಬೇಕು', 'ಅರಣ್ಯ ಇಲಾಖೆಯವರೊಂದಿಗೆ ಹುಲಿ' ಇಂತಹ ಇನ್ನೂ ಅನೇಕ ಲೇಖನಗಳಲ್ಲಿ ಕೊಂಚ ವ್ಯಂಗ್ಯ ಮತ್ತು ವಿಡಂಬನೆಗಳ ಆಚೀಚಿನಲ್ಲಿ ಒಂದು ರೀತಿಯ ಅಲಗಿನ ಮೇಲೆ ಹಾಸ್ಯ ಹಂಚಲು ಸಫಲರಾಗಿದ್ದಾರೆ. ಇಲ್ಲಿಯೂ ತಮಗೆ

ಹೇಳಬೇಕಾದ್ದನ್ನು ತಮ್ಮ ಧಾಟಿಯಲ್ಲಿಯೇ ಹೇಳುತ್ತಾರೆ. ನಮ್ಮ ಶಿಕ್ಷಣ ವ್ಯವಸ್ಥೆಯ ಬಗ್ಗೆ ಲೇಖಕಿಯವರ ನೋಟ, ಜನಪ್ರಿಯ ಕಾದಂಬರಿಗಳಲ್ಲಿನ ಕಷ್ಟಾಯ ಚಿತ್ರಣಗಳಲ್ಲಿನ ಕಾದಂಬರಿಯ ಪಾತ್ರದ ಹೆಸರುಗಳಿಂದ ಸನ್ನಿವೇಶಗಳು ಕಥಾಪ್ರಸಂಗ ಎಲ್ಲ ಹೇಗೆ ವಾಸ್ತವಿಕತೆಗೆ ಕಟ್ಟುಬಿದ್ದಹಾಗೆ ಏಕತಾನದಿಂದ ಕೂಡಿರುತ್ತದೆ ಎನ್ನುವುದು ಕೊಂಚ ಚುಚ್ಚುಮದ್ದಿನ ಹಾಸ್ಯವೇ. ಇಲ್ಲಿ ಕೊಂಚ ನಾ.ಕಸ್ತೂರಿ ಅಥವಾ ಕೇಫರವರಂತ ಹಾಸ್ಯದ ನೆರಳಿದೆ.

ನನಗನಿಸಿದ್ದು ಭಾಷೆ, ಪನ್, ಪಂಚ್‌ಲೈನ್, ವರ್ತಮಾನದ ಪ್ರಸ್ತುತತೆ, ವ್ಯಂಗ್ಯ, ಲೇವಡಿ ಈ ಎಲ್ಲಾ ಹಾಸ್ಯದ ಪರಿಭಾಷೆಗಳನ್ನೂ ಅತ್ಯುತ್ತಮವಾಗಿ ಭುವನೇಶ್ವರಿಯವರು ದುಡಿಸಿಕೊಂಡಿದ್ದು ಮುಖ್ಯವಾಗಿ ಎರಡು ಪ್ರಬಂಧಗಳಲ್ಲಿ. (ಬೇರೆ ಪ್ರಬಂಧಗಳಲ್ಲಿ ಇಲ್ಲ ಎಂದು ಹೇಳಲಾಗುವುದಿಲ್ಲ. ಆದರೆ, ಒಂದೇ ಲೇಖಕಿಯ ಬಿಡಿಬಿಡಿಲೇಖನಗಳ ಒಂಬೈನೂರು ಪುಟಗಳನ್ನು ಓದಿದಾಗ ವಿವರಗಳು ಮರೆತುಹೋಗುವುದು ಸಹಜ) ಆದರೆ, ಒಂದೇ ಓದಿನ ನಂತರವೂ ನನ್ನ ಮನಸ್ಸಿನಲ್ಲಿ ಮರೆಯದೇ ನಿಂತದ್ದು 'ಆಕಳಿಕೆ' ಮತ್ತು 'ವಿಮರ್ಶಕರೇಕಿರಬೇಕು' ಎನ್ನುವ ಪ್ರಬಂಧಗಳಲ್ಲಿ. 'ವಿಮರ್ಶಕರೇಕಿರಬೇಕು' ಎನ್ನುವ ಲೇಖನಗಳಲ್ಲಿ ಬರುವ ಈ ಸಾಲುಗಳನ್ನು ನೋಡಿ: 'ಈ ಕವನದಲ್ಲಿ ಕವಿಯ ಅಂತಃಸ್ಫುರಿತ ಭಾವನೆಗಳು ಅಷ್ಟೇನೂ ಬಿಗಿಯಿಲ್ಲದ ಬಂಧದ ಚೌಕಟ್ಟಿನಲ್ಲಿ ದಾಖಲಿಸಲ್ಪಟ್ಟಿದ್ದರೂ, ಒಂದು ಅನುಭವಕ್ಕೆ ಸ್ವತಂತ್ರ ವಸ್ತುವಿನಂತೆ ಕೊಡಲ್ಪಟ್ಟ ಅಸ್ತಿತ್ವದ ಅನುರಣನಗಳು ಕೇಂದ್ರಾಪಗಾಮಿಯಾಗಿ ಹರಡುತ್ತವೆ. ಹೀಗೆ ಗೃಹೀತವಾದ ಆಶಯವು ಒಂದು ಸ್ವತಂತ್ರ ಬಿಂದುವಿನಂತೆ ಪ್ರಣೀತವಾದುದರಿಂದ ಕವನವನ್ನು ಹೇಗೆ ವ್ಯಾಖ್ಯಾನಿಸಲೂ ಅನುಕೂಲಕರವಾಗಿದೆ'.

ಇದೇ ಲೇಖನದ ಇನ್ನೊಂದು ಕಡೆ: 'ಕೆಲವು ಶಬ್ದಗಳು ಇವೆ. ಅವುಗಳನ್ನು ಅರ್ಥವಾಗದ ರೀತಿಯಲ್ಲಿ ಬಳಸೋಕೆ ಬಂತೂ ಅಂದ್ರೆ ಯಾರೂ ವಿಮರ್ಶಕರಾಗಬಹುದು.. ಆ ಪದಗಳೆಂದರೆ, 'ಸಂಕೀರ್ಣತೆ', 'ಸ್ವೋಪಜ್ಞತೆ', 'ಸ್ವಂತಿಕೆ', 'ನಾಸ್ಟಾಲ್ಜಿಯಾ', 'ಬದ್ಧತೆ', 'ಜಿಜ್ಞಾಸೆ', 'ಅಂತರ್ಮುಖತೆ', 'ಸಮಕಾಲೀನತೆ', 'ಮುಖಾಮುಖಿ', 'ಗೃಹೀತ', 'ಪಾರಂಪರಿಕ ಮೌಲ್ಯಗಳು', 'ಸೈದ್ಧಾಂತಿಕ ನೆಲೆಗಟ್ಟು', 'ಜೀವನದೃಷ್ಟಿ' ಇತ್ಯಾದಿ, ಇತ್ಯಾದಿ.

ಥಟ್ಟನೆ ನಗು ಬಂದರೂ ವಿಮರ್ಶಕರಿಗೊಂದಿಷ್ಟು ಚುಚ್ಚುಮದ್ದನ್ನು ಕೊಡಲಾರದೇ ಉಳಿಯುವುದೇ ಈ ಸಾಲುಗಳು? ಹಾಗೆಯೇ ಇದನ್ನು ಯಾವುದಾದರೂ ಕಮ್ಮಟದಲ್ಲಿ ಓದಿದರೆ ಸಹೃದಯರ ಒರಗೆಯ ಲೇಖಕರಿಂದ ಚಪ್ಪಾಳೆಯನ್ನೂ ಗಿಟ್ಟಿಸದಿರದೀತೇ?ಹಾಗೆಯೇ ಆಕಳಿಕೆ ಎನ್ನುವ ಲೇಖನದಲ್ಲಿ ಆಕಳಿಕೆ ದೈಹಿಕ ಕ್ರಿಯೆಯೇ

ಅಥವಾ ಮಾನಸಿಕ ಕ್ರಿಯೆಯೇ ಎನ್ನುವ ಜಿಜ್ಞಾಸೆಯನ್ನು ತಾವೇ ಎತ್ತಿ, ಗೊಂದಲವೆಬ್ಬಿಸಿ ಕೊನೆಗೆ ತೀರ್ಮಾನಿಸುವುದು 'ಆಕಳಿಕೆ ಮನಸ್ಸಿನಿಂದ ಪ್ರಚೋದಿಸಲ್ಪಡುವ ದೈಹಿಕ ಕ್ರಿಯೆ' ಎಂದು. ಆಕಳಿಕೆಗೆ ಹೆಗಡೆಯವರ ವಿಶೇಷಣಗಳು ಅಕಾಲಿಕ, ಅವ್ಯಾಹತ, ಅಸಂಖ್ಯ, ಅಸಂಸ್ಕೃತ, ಅದಮ್ಯ, ಅಪ್ರಯತ್ನ, ಅಗಣಿತ, ಅವಿರತ, ಅನಂತ, ಅಖಂಡ, ಅಗೋಚರ, ಅನಿವಾರ್ಯ, ಅಸಹ್ಯ, ಅಸಂಬದ್ಧ'

ತಮ್ಮ ವ್ಯಾವಹಾರಿಕ ಮತ್ತು ಸಾಹಿತ್ಯಿಕ ಪರಿಧಿಯಿಂದಾಚಿನ ಓದು, ಬುದ್ಧಿವಂತಿಕೆ, ಭಾಷೆಯ ಮೇಲಿನ ಪರಿಪೂರ್ಣ ಹಿಡಿತ, ಲಾಲಿತ್ಯ, ಎಲ್ಲವನ್ನೂ ಪರಿಪೂರ್ಣವಾಗಿ ದುಡಿಸಿಕೊಂಡಾಗ ಮಾತ್ರ ಇಂತ ಸಾಲುಗಳು ಹುಟ್ಟಲು ಸಾಧ್ಯ.

ಎಲ್ಲ ಹಾಸ್ಯಸಾಹಿತಿಗಳೂ ಉಪಯೋಗಿಸುವಂತೆ 'ಮಾಂಸತೂಲಿಕಾತಲ್ಪ', 'ನೂಕ್ ಅವರ್', 'ವಾಕುಟಾಕು', 'ರೆಡ್‌ಲೆಗ್ಡ್ ಆಗಿ ಹಿಡಿಯುವುದು' ಇಂತಹ ಅನೇಕ ಹೊಸ ಪದಪುಂಜಗಳ ಜಾಣಪ್ರಯೋಗಗಳಿದ್ದಾವೆ. ಅದನ್ನು ಹೆಸರಿಸಲು ನಾ ಹೋದರೆ ಇನ್ನೊಂದು ಲೇಖನವೇ ಆದೀತು. ಬಹಳ ಜಾಣ್ಮೆಯಿಂದ ಮತ್ತು ಸಂದರ್ಭೋಚಿತವಾಗಿ ಇಂತ ಪದಪ್ರಯೋಗಗಳು ನಡೆಯುತ್ತವೆ. ಇಂತಹ ಪದಪ್ರಯೋಗಗಳಲ್ಲಿ ಈಕೆ ಬುದ್ಧಿವಂತ ಲೇಖಕಿ ಎನ್ನುವುದರಲ್ಲಿ ಅನುಮಾನವೇ ಇಲ್ಲ. (ಗಂಡಸರಿಗೆ ಮಾತ್ರ ಎನ್ನುವ ಲೇಖನದಲ್ಲಿ 'ಗಂಡು ಧಡಿಯ' ಎಂಬ ಪ್ರಯೋಗವನ್ನು ನಿರ್ಭಿಡೆಯಿಂದ ಮಾಡಿ ಅದಕ್ಕೊಂದು 'ಪೊಯೆಟಿಕ್ ಜಸ್ಟಿಸ್' ತಂದುಬಿಡುತ್ತಾರೆ. ಅದನ್ನು ಓದಿದ ಧಡಿಯ ಗಂಡಸರೂ ಇಡೀ ಲೇಖನವನ್ನು ಓದಿದ ಮೇಲೆ ಒಮ್ಮೆ ನಕ್ಕುಬಿಡಬಹುದು)

ಭುವನೇಶ್ವರಿಯವರ ಮುಖ್ಯ ಗುರಿ ಓದುಗರಿಂದ ಒಂದು ಮುಗುಳ್ನಗುವನ್ನು ಪಡೆಯುವುದು. ನನಗೆ ಕಂಡ ವಿಷಾಧರಾಗ 'ದರ್ಜಿಯ ಮರ್ಜಿ' ಎನ್ನುವ ಒಂದೇ ಲೇಖನದಲ್ಲಿ. ಒಬ್ಬ ವ್ಯಕ್ತಿಯ ವೃತ್ತಿಯ Obscession ಜಗತ್ತಿಗೇ ಹೊಸ ದರ್ಶನ ಮಾಡಿಸಲು ಪ್ರಯತ್ನಪಟ್ಟಂತೆ ಕಂಡರೂ, ಸಾಕಷ್ಟು 'ಅಪ್‌ಡೇಟೆಡ್' ಅಲ್ಲದ ಫ್ಯಾಶನ್ ಸ್ಟೇಟ್‌ಮೆಂಟ್'ನಿಂದಾಗಿ ದರ್ಜಿಗೆ ಯಾವ ಮರ್ಜಿಯೂ ಇಲ್ಲದ ಊರು ಬಿಡಿಸುವ ವಿಷಾಧ ಇಲ್ಲಿದೆ. ಇಂಥ ಲೇಖನಗಳಿಂದ ಭುವನೇಶ್ವರಿಯವರ 'ಹಾಸ್ಯ'ದ ಹೊರಗಿನ ಸಾಹಿತ್ಯಿಕ ಸಂವೇದನೆ ಅರಿವಾಗುತ್ತದೆ.

ಭುವನೇಶ್ವರಿಯವರು ತಮ್ಮ ಬಹುತೇಕ ಲೇಖನಗಳನ್ನು ವಿಶೇಷಾಂಕಗಳಿಗೋ ಅಥವಾ ಮ್ಯಾಗಝಿನ್‌ಗಳಿಗೋ ಬರೆದದ್ದು. ಇವರ ಲೇಖನಗಳ ಮಿತಿ ಏನಾದರೂ ಇವೆ ಅದನ್ನು ಹುಡುಕಲೇಬೇಕು ಎಂದರೆ ಅಕ್ಷರಗಳ ಮಿತಿ ಅಥವಾ ಲೇಖನದ ಗಾತ್ರದ ಮಿತಿ ಮಾತ್ರ. ಬಹುತೇಕ ಪ್ರಬಂಧಗಳಂತೆ, ಪ್ರಸಂಗಗಳಂತೆ ಓದಿಸಿಕೊಂಡು ಹೋಗುವ ಈ ಲೇಖನಗಳು ಕೆಲವೊಮ್ಮೆ ಕಥಸದಂತೆಯೂ ಓದಿಸಿಕೊಳ್ಳುತ್ತವೆ. ಆದರೆ, ಕಥನ

ವಿಸ್ತೃತವಾಗುವುದಕ್ಕೆ ಅಥವಾ ಮುಂದುವರೆಯುವುದಕ್ಕೆ ಪ್ರಾಯಶಃ ಅವುಗಳು ಪ್ರಕಟವಾಗುವ ಪತ್ರಿಕೆಗಳ ಸಂಪಾದಕರುಗಳು ಹಾಕುವ ಪದಗಳ ಮಿತಿಯೇ ಕಾರಣವಿರಬಹುದು. ಹೀಗಾಗಿ ಕೆಲವೊಮ್ಮೆ ಲೇಖನಗಳು ಧುತ್ತೆಂದು ನಿಂತುಹೋಗಿ ಇನ್ನೂ ಬೇಕು ಎನ್ನುವ ಹಂಬಲವನ್ನು ಓದುಗನಿಗೆ ಉಳಿಸುತ್ತವೆ. ಇವೇ ಇವರ ಲೇಖನಗಳ ಶಕ್ತಿಯೂ ಇರಬಹುದು. ಇವರು ಯಾವ ಮ್ಯಾಗಝಿನ್‌ಗಳ ಮೂರು ಪುಟಕ್ಕೂ ಮಿತಿಗೊಳಿಸದಂತೆ ವುಡ್‌ಹೌಸ್‌ನ 'ಕ್ಯಾರಿ ಆನ್ ಜೀವ್ಸ್' ಮಾದರಿಯ ಲಂಬಿತ ಹಾಸ್ಯಕಥನವನ್ನು ಬರೆಯಬಲ್ಲರು. ಬರೆಯಬೇಕು ಎನ್ನುವುದು ನನ್ನಂತವನ ಆಶಯ, ಹಾರೈಕೆ (ಬರೆದಿದ್ದರೆ ನನ್ನ ಅಜ್ಞಾನಕ್ಕೆ ಕ್ಷಮೆಯಿರಲಿ)

ಅರ್ಥಶಾಸ್ತ್ರದ ಪ್ರಾಧ್ಯಾಪಕಿಯಾಗಿ, ಸಾಹಿತ್ಯದ ಇತರೇ ಪ್ರಕಾರಗಳನ್ನೂ ಅಭ್ಯಸಿಸಿಯೂ (ಇಲ್ಲದಿದ್ದರೆ, ಭಾಷೆ ಮತ್ತು ವಸ್ತುವೈಶಾಲ್ಯ ಸಾಧ್ಯವಾಗುವುದಿಲ್ಲ ಎಂದು ನನ್ನ ಭಾವನೆ) ಭುವನೇಶ್ವರಿಯವರು ತಮ್ಮನ್ನು ತಾವೇ 'ಹಾಸ್ಯ ಬರಹ'ಗಳಿಗೆ ತೊಡಗಿಸಿಕೊಂಡವರು. ಕಳೆದ ಎರಡು ದಶಕಗಳಿಂದ ಬರೆಯುತ್ತಿದ್ದರೂ ಬೇರೆ ಇನ್ನೂ 'ತೂಕ'ದ ಸಾಹಿತ್ಯ ಪ್ರಕಾರಗಳ ವಾಂಛೆಗೆ ಬಲಿಯಾಗದೇ ತಮ್ಮ ಪರಿಪೂರ್ಣತೆಯನ್ನು ತಾವು ನೆಚ್ಚಿಕೊಂಡಿರುವ ಪ್ರಕಾರಕ್ಕೇ ಮೀಸಲಾಗಿಟ್ಟಿರುವರು. ಇದು ಬಹಳ ಜನ ಬರಹಗಾರರಿಗೆ ಸಾಧ್ಯವಿರದ ಕೆಲಸ. ಲೇಖನದ ಆಶಯಕ್ಕೆ ಕೊಂಚ ಅಪ್ರಸ್ತುತವಾಯಿತು ಎನ್ನಿಸಿದರೂ ನಾನು ಹೇಳಬೇಕೆನ್ನುವುದನ್ನು ಹೇಳಿಬಿಡುತ್ತೇನೆ. ಕನ್ನಡದಲ್ಲಿ ಎಲೀಟ್ ಬರಹಗಳು 'ನಕ್ಕರದೇ ನರಕ' ಎನ್ನುವ ಧೋರಣೆಯನ್ನು ಇಟ್ಟುಕೊಂಡೇ ಬರೆಯಲ್ಪಡುತ್ತವೆ. (ಪೂರ್ಣಚಂದ್ರ ತೇಜಸ್ವಿ, ಕುಂವೀ, ಲಂಕೇಶ್ ಕೆಲವರು ಇದಕ್ಕೆ ಹೊರತಾಗಿರಬಹುದು)ಆದರೆ, ವೈಚಾರಿಕತೆಯನ್ನು ತಮ್ಮ ಹಾಸ್ಯ ಪ್ರಜ್ಞೆಯನ್ನೂ ಅದ್ಭುತವಾಗಿ ಮಿಳಿತಗೊಂಡಿಸಿರುವವರು ಪ್ರಾಯಶಃ ವೈಎನ್ಕೆ. ಆದ್ದರಿಂದಲೇ ಬರೀ ಹಾಸ್ಯಲೇಖನಗಳನ್ನೇ ಬರೆದುಕೊಂಡಿದ್ದರೆ ಉದ್ದಾಮ ಸಾಹಿತಿ ಆಗುವುದಿಲ್ಲವೇನೋ ಎಂಬ ಭಯವೋ ಗೊತ್ತಿಲ್ಲ, ಬೇರೆ ಪ್ರಕಾರಗಳಿಗೆ (ವಿಮರ್ಶೆ, ವೈಚಾರಿಕ ಸಾಹಿತ್ಯ, ಕಾದಂಬರಿ ಇತ್ಯಾದಿ) ತಮ್ಮನ್ನು ವಿಸ್ತರಿಸಿಕೊಂಡ ಅನೇಕ ಸಾಹಿತಿಗಳನ್ನು ನಾವು ನೋಡುತ್ತೇವೆ. ವಿಪರ್ಯಾಸವೆಂದರೆ, ಇಂತಹ ಬೇರೆ ಪ್ರಕಾರಗಳಲ್ಲಿ ಯಶಸ್ಸು ಕಂಡ ಮೇಲೆ ಅಂತಹ ಬರಹಗಾರರ ಹಾಸ್ಯ ಲೇಖನಗಳೂ ಹೆಚ್ಚಿನ ಸಂಖ್ಯೆಯಲ್ಲಿ ಓದಲ್ಪಡುತ್ತವೆ. (ಉದಾ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿ ಬಂದಮೇಲೆ, ಯಶಸ್ವಿಯಾದ ಮೇಲೆ, ಅಕಾಡೆಮಿ ಪ್ರಶಸ್ತಿ ಬಂದಮೇಲೆ ಅವರದ್ದೇ ಆದ 'ಮನಸುಖರಾಯನ ಮನಸು' ಮತ್ತು 'ರುಚಿಗೆ ಹುಳಿಯೊಗರು' ಪುಸ್ತಕಗಳನ್ನು ಬಹಳಷ್ಟು ಜನ ಓದಿದರಂತೆ) ಹೀಗೆ ಕನ್ನಡದಲ್ಲಿ ಶ್ರೇಷ್ಠ ಮಟ್ಟದ ಹಾಸ್ಯದ ಪರಂಪರೆಯಿದ್ದರೂ ಹಾಸ್ಯಸಾಹಿತಿಗಳ 'ಪ್ರಕಾರ ಲಂಘನ' ಕ್ರಮಕ್ಕೆ ಭುವನೇಶ್ವರಿಯವರು ಬಲಿಯಾಗಿಲ್ಲ.

ಇದು ಅವರ ಬರವಣಿಗೆಯ ಪ್ರಕಾರದ ಮೇಲಿನ ಅವರ ವಿಶ್ವಾಸ ಮತ್ತು ಬದ್ಧತೆಯನ್ನು ತೋರುತ್ತದೆ.

ಭುವನೇಶ್ವರಿಯವರು ತಮ್ಮ 'ಮುಗುಳು' ಎಂಬ ಲೇಖನ ಸಂಕಲನದ ಮುನ್ನುಡಿಯಲ್ಲಿ 'ಪ್ರೀತಿ ಹಾಗೂ ಪ್ರಕೃತಿಗಳು ಸಮೃದ್ಧವಾಗಿದ್ದಾಗ ಅರಳುವುದು ನಗು ತಾನೇ' ಎಂಬ ಅರ್ಥಪೂರ್ಣವಾದ ಮಾತನ್ನು ಹೇಳಿದ್ದಾರೆ. ಇವರ ಲೇಖನಗಳೂ ಹಾಗೇ ಪ್ರೀತಿ ಹಾಗೂ ಪ್ರಕೃತಿಯನ್ನು ಸಮೃದ್ಧವಾಗಿ ಉಣಬಡಿಸುತ್ತವೆ. ಹಾಗಾಗೇ ಅಲ್ಲಿ ಉಳಿಯುವುದು ಒಂದು ಆನಂದಭರಿತ ನಗು ಮಾತ್ರ.



## 'ಡುಂಡಿ'ನಃ ಪದಲಾಲಿತ್ಯಮ್...'

### ಶ್ರೀವತ್ಸ ಜೋಶಿ

ಸಂಸ್ಕೃತದ ಮಹಾನ್ ಕವಿಗಳ ಶ್ರೇಷ್ಠತೆಯನ್ನು, ವೈಶಿಷ್ಟ್ಯವನ್ನು, ಸಿದ್ಧಿ-ಪ್ರಸಿದ್ಧಿಗಳನ್ನು ಬಣ್ಣಿಸುವ ಒಂದು ಶ್ಲೋಕವಿದೆ-ಅದು ಹೀಗಿದೆ:

ಉಪಮಾ ಕಾಲಿದಾಸಸ್ಯ ಭಾರವೇರರ್ಥಗೌರವಮ್
ದಂಡಿನಃ ಪದಲಾಲಿತ್ಯಮ್ ಮಾಘೆ ಸಂತಿ ತ್ರಯೊಗುಣಾಃ॥

ಕಾಳಿದಾಸ ತನ್ನ ಕಾವ್ಯಗಳಲ್ಲಿ ಉಪಮೆಗಳ ಮೂಲಕವೇ ಚಮತ್ಕಾರ ತೋರಿಸುವವನು, ಕಾವ್ಯವನ್ನು ರಮ್ಯವಾಗಿಸುವವನು. ಭಾರವಿಯಾದರೋ ಪ್ರತಿಯೊಂದು ಪದದ ಅರ್ಥಕ್ಕೆ ಗೌರವಕೊಟ್ಟು ಅದನ್ನು ಸೂಕ್ತವಾಗಿ, ಸಮಂಜಸವಾಗಿ ಬಳಸಿಕೊಂಡು ಕಾವ್ಯರಚನೆ ಮಾಡುವವನು. ಇನ್ನು ದಂಡಿ ಕವಿಯ ವಿಶೇಷತೆಯೆಂದರೆ ಪದಗಳೊಂದಿಗೆ ಸರಸ, ಅದರ ಮೂಲಕವೇ ಕಾವ್ಯವನ್ನು ರಸಮಯವಾಗಿಸುವ ಚಳಕ. ಆದರೆ ಮಾಘ ಈ ಮೂರೂ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡ ಕವಿವರೇಣ್ಯ.

ಪ್ರಚಲಿತ ಕನ್ನಡ ಸಾರಸ್ವತಲೋಕದಲ್ಲಿನ ಕವಿಪುಂಗವರ ಪೈಕಿ ಮೂರ್ನಾಲ್ಕು 'ಶ್ರೇಷ್ಠ'ರನ್ನಾರಿಸಿ ಅವರ ವೈಶಿಷ್ಟ್ಯಗಳ ಬಗ್ಗೆ ಈ ರೀತಿ ಶ್ಲೋಕವನ್ನು ಹೆಣೆಯುವುದು ಕಷ್ಟಕರವೆನಿಸಬಹುದು; ಅಲಂಕಾರಗಳಿಂದಲೇ ಕಾವ್ಯವನ್ನು ಸಿಂಗರಿಸುವ ಕಾಳಿದಾಸನಂಥವರು, ಅರ್ಥಕ್ಕೆ ಗೌರವಕೊಟ್ಟು ಪ್ರತಿಯೊಂದು ಪದವನ್ನು ಅಳೆದು ಸುರಿದು ನೋಡಿ ಆಯ್ದುಕೊಳ್ಳುವ ಭಾರವಿಯಂಥವರು ಈಗಿನವರ ಪೈಕಿ

ಇಲ್ಲದಿರಬಹುದು. ಆದರೆ 'ಪದಲಾಲಿತ್ಯ'ಕ್ಕೆ ಪ್ರಸಿದ್ಧಿಯಾದ ದಂಡಿ ಈಗಲೂ ಒಬ್ಬರಿದ್ದಾರೆ, ಅವರೇ ಡುಂಡಿ! ಹನಿಗವನಗಳಿಗೆ ಹೆಸರಾದ ಎಚ್. ಡುಂಡಿರಾಜ್!

ನನ್ನ ನೆಚ್ಚಿನ ಕವಿಯಾದ ಡುಂಡಿರಾಜ್ ಬಗ್ಗೆ ಇದೊಂದು ಸೋದಾಹರಣ ಪ್ರಬಂಧ. ಇಲ್ಲಿ ಕವಿ-ಕೃತಿ ಪರಿಚಯಕ್ಕಿಂತ, ಕವಿಗೆ ಸಿಕ್ಕ ಪ್ರಶಸ್ತಿ-ಪುರಸ್ಕಾರಗಳ ಪಟ್ಟಿಗಿಂತ, 'ನಾನು ಕಂಡಂತೆ ಡುಂಡಿರಾಜ್' ಅಥವಾ 'ಡುಂಡಿರಾಜ್ ನನಗೇಕೆ ಇಷ್ಟವಾಗುತ್ತಾರೆ' ಎಂಬ ಧಾಟಿಯಲ್ಲಿ ಬರೆಯುವವನಿದ್ದೇನೆ. ಸರಿಸುಮಾರಾಗಿ ನನ್ನ ಬಾಲ್ಯದಿಂದಲೂ ಡುಂಡಿರಾಜ್ ಕವಿತೆಗಳನ್ನು ಪತ್ರಿಕೆ/ನಿಯತಕಾಲಿಕಗಳಲ್ಲಿ ರುಚಿನೋಡಿ, ಬಾನುಲಿಯಲ್ಲಿ ಅವರ ಕಾರ್ಯಕ್ರಮಗಳನ್ನು ಆಲಿಸಿ, ಪ್ರಕಟಿತ ಕವನ ಸಂಕಲನಗಳು/ನಾಟಕಗಳ ಪೈಕಿ ಕೆಲವನ್ನು ಕೊಂಡು ಓದಿ ಸವಿದು, ಈಗ್ಗೆ ನಾಲ್ಕು ವರ್ಷಗಳಿಂದ 'ವಿಜಯ ಕರ್ನಾಟಕ' ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟವಾಗುತ್ತಿರುವ ಸಾಪ್ತಾಹಿಕ ಅಂಕಣ 'ಮಾತು-ಕ(ವಿ)ತೆ'ಯ ಖಾಯಂ ಓದುಗನಾಗಿ ಡುಂಡಿರಾಜ್ ಅವರನ್ನು ಅರಿತಿರುವುದು ಸ್ವಲ್ಪಾಂಶವಾದರೆ ನಾನು ಅವರನ್ನು ವೈಯಕ್ತಿಕವಾಗಿ ಭೇಟಿಯಾದ ಸಂದರ್ಭ, ತದನಂತರದ ನಮ್ಮಿಬ್ಬರ ಈಮೈಲ್ ಸಂಪರ್ಕ ಮತ್ತು ಸಮಾನ ಅಭಿರುಚಿಯ ಕೆಲ ವಿಚಾರ ವಿನಿಮಯಗಳ ಹೊಳಹುಗಳು-ಇವಿಷ್ಟು ಈ ಲೇಖನದ ಹೂರಣ. ಅಮೆರಿಕದಲ್ಲೂ ಕನ್ನಡ ಸಾಹಿತ್ಯದ ಘಮವನ್ನು ಪಸರಿಸುವ ಮಹತ್ವಾಕಾಂಕ್ಷೆಯ ಇಲ್ಲಿನ 'ಕನ್ನಡಸಾಹಿತ್ಯರಂಗ'ದ ಕೋರಿಕೆಯೇ ಇದನ್ನು ನಾನು ಡುಂಡಿರಾಜ್ ಮೇಲಿನ ಪ್ರೀತಿಯಿಂದ, ಗೌರವದಿಂದ ಮತ್ತು ಆತ್ಮೀಯತೆಯಿಂದ ಬರೆಯುವುದಕ್ಕೆ ಕಾರಣ.

*

ಎಪ್ಪತ್ತರ ದಶಕದ ಜನಪ್ರಿಯ ಕನ್ನಡಚಿತ್ರಗೀತೆಯೊಂದರ ಚರಣ ನೆನಪಾಗುತ್ತಿದೆ.

ಪದಗಳು ತುಂಬಿದ ಕವನವಿದಲ್ಲ
ಹೃದಯವೆ ಅಡಗಿದೆ ಇರಲಿ
ಅದರ ಒಡೆತನ ನಿನದೇ ಎಲ್ಲ
ಕೋಮಲ ಎಚ್ಚರವಿರಲಿ

ಹೌದು, ಪದಗಳನ್ನು ತುಂಬಿಸಿದರೆನೇ ಕವನ ಆಗೋದು. ಭಾವದಲ್ಲಿ ಅದ್ದಿದ ಅರ್ಥವತ್ತಾದ ಪದಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ತುಂಬಿಸಿದರೆ ಅದು ಕಾವ್ಯವಾಗಬಹುದು. ಪದಗಳ ಸಂಖ್ಯೆ ಕಡಿಮೆಯಾಗುತ್ತ ಬಂದಂತೆ ಖಂಡಕಾವ್ಯ, ನೀಳ್ಗವನ, ಕವನ... ಆಗಿ ಕೆಲವೇ ಕೆಲವು ಪದಗಳು ಅಥವಾ ಒಂದು ಹಿಡಿ ಅಕ್ಷರಗಳಷ್ಟೇ ತುಂಬಿದರೆ ಅದು 'ಮಿನಿಗವನ'ವಾಗಬಹುದು, 'ಹನಿಗವನ' ಎನಿಸಬಹುದು. ಅಂತೂ

ಕವನ ಎನಿಸಬೇಕಾದರೆ ಪದಗಳನ್ನು ತುಂಬಬೇಕು. ಆದರೆ, ಸೌದೆ ಸೀಳಿದಂತೆ ಪದಗಳನ್ನು ಉದ್ದಕ್ಕೆ ಅಡ್ಡಕ್ಕೆ ಸೀಳಿ, ಕಚಗುಳಿಯಿಡುವ ಹೊಸ ಅರ್ಥದ ಪದಗಳನ್ನು ಸೃಷ್ಟಿಸಿ ಅವುಗಳಿಂದ ಕವನವನ್ನು ತುಂಬಬಹುದಾ? ಖಂಡಿತವಾಗಿ! ಡುಂಡಿರಾಜ್ ಸ್ಪೆಷಾಲಿಟಿಯೇ ಅದು. ಅವರು ಪ್ರಾಸಕ್ಕಾಗಿ ಪ್ರಾಸ ಹೊಸೆದು ಕವನ ಬರೆಯುವವರ ಪೈಕಿಯಲ್ಲ. ಪದಗಳೊಂದಿಗೆ ಆಟ ಆಡಿ, ಲಲಿತವಾದ ಬರವಣಿಗೆಯಲ್ಲಿ ಆ ಪದದಾಟದಿಂದಲೇ ಅನಿರೀಕ್ಷಿತ ತಿರುವು ಕೊಟ್ಟು, ವಿನೂತನ ಅರ್ಥವೊಂದನ್ನು ಹೊಮ್ಮಿಸಿ ಓದುಗನಿಗೆ ಆಹ್ಲಾದದ ನವಿಲುಗರಿ ಸೋಕಿಸುವ ಕವನಗಳನ್ನು ಬರೆದೇ ಡುಂಡಿರಾಜ್ ಬರೀ ರಾಜರಲ್ಲ, ಹನಿಗವಿತೆಗಳ ಸಾಮ್ರಾಟರಾದವರು.

ಡುಂಡಿರಾಜ್ ಕಳೆದ ಮೂರ್ನಾಲ್ಕು ದಶಕಗಳಿಂದಲೂ 'ಹನಿ'ಗಳನ್ನುದುರಿಸುತ್ತಲೇ ಇದ್ದಾರೆ. ಮಕ್ಕಳ ಪದ್ಯಗಳ ಮೂಲಕ ಶುರುವಾದ ಅವರ ಬರವಣಿಗೆ ಹಾಸ್ಯನಾಟಕ, ಹಾಸ್ಯಲೇಖನ, ಪೂರ್ಣಪ್ರಮಾಣದ ಕವಿತೆಗಳು (ರಾಗಸಂಯೋಜನೆ ಮಾಡಬಲ್ಲವುಗಳು, ರಂಗಗೀತೆಗಳಾಗಬಲ್ಲವು ಸಹ), ಮತ್ತೀಗ ಅಂಕಣ ಬರಹ ಇತ್ಯಾದಿ ವಿವಿಧ ಮುಖಗಳಲ್ಲಿ ಪ್ರದರ್ಶಿತವಾಗಿದೆಯಾದರೂ ಸಾರ್ವತ್ರಿಕವಾಗಿ ಅವರು ಗುರುತಿಸಿಕೊಂಡದ್ದು 'ಹನಿಗವನ'ಗಳ ಕವಿಯೆಂದು. ಜನ ಮೆಚ್ಚುವುದು ಅವರೊಬ್ಬ 'ಪನ್'ಗಳ ಮೂಲಕ ನಗುವಿನ 'ಪಂಚ್' ಕೊಡುವ ಹಾಸ್ಯಕವಿಯೆಂದು. ನನಗೂ ಅಷ್ಟೇ, ಡುಂಡಿರಾಜ್ ಕವನಗಳಲ್ಲಿನ ಪ್ರಾಸ ಹಾಸ್ಯಕ್ಕಿಂತಲೂ ಶಬ್ದಸರಸ ತುಂಬ ಇಷ್ಟವಾಗೋದು. 'ಸೀನಪ್ಪನ ಸೀನು' ಪದ್ಯದಲ್ಲಿನ ಧಾರಾಕಾರವಾಗಿ ಸೋರುವ ಮೂಗSS ಕಂಡರೆ ನೆನಪಾಗುವುದು ಜೋಗ ಪ್ರಾಸಕ್ಕಿಂತಲೂ ಆಕ್ಷೀ ಎನ್ನುವ ಮುನ್ನ ಇವನ ಆಕ್ಷನ್ನು... ಹಿಂದೀ ಸಿನೆಮಾದ ಡಿಸ್ಕೊ ಸೀನು ಎಂದೂ, ಸೀನಿಗೆ ಹಾರಿಬಿದ್ದ ಮಡದಿ ತವರಿಗೆ ಹೋದಕಾರಣ... ಅಂದಿನಿಂದ ನಮ್ಮ ಸೀನ ಸಂಸಾರದಲ್ಲಿ ಉದಾಸೀನ! ಎಂದೂ, ಸೀನ/ಸೀನು/ಸೀನ್ ಪದಗಳೊಂದಿಗಿನ ಅವರ ಆಟ ಮನಸ್ಸಿಗೆ ಕಚಗುಳಿಯಿಡೋದು.

ಪದಲಾಲಿತ್ಯ ಎಂದರೆ ಅದೇ. ಅದಕ್ಕಾಗಿ ಡುಂಡಿರಾಜ್ ಬಳಸುವ ಕೊಡಲಿ ಎಷ್ಟು ಹರಿತವಾಗಿದೆಯೆಂದರೆ ಅವರ ಕವಿತೆಯಲ್ಲಿ ಸೆಮಿನಾರಿನಲ್ಲಿ ಮಾಡಿದ ಭಾಷಣ ಸೆಮಿ-ನಾರಿನಲ್ಲಿ ಕಟ್ಟಿದ ಮಲ್ಲಿಗೆ ಮಾಲೆಯಾಗುತ್ತದೆ! ಬದುಕಿನ ಬೆಳ್ಳಿ ತೆರೆಯಲ್ಲಿ ಕಪ್ಪುಬಿಳುಪು ಚಿತ್ರ, ಮೂಕಿ ಚಿತ್ರ, ಟಾಕಿ ಚಿತ್ರ ಸೇರಿದಂತೆ ಹೆಂಡತಿ ವರ್ಣರಂಜಿತ ಪ-ಟಾಕಿ ಚಿತ್ರ ಆಗುತ್ತಾಳೆ! ಯುಗಾದಿಗೆ ಚಿನ್ನದ ಸರ ಕೇಳುವ ಹೆಂಡತಿಗೆ ಹೊಸ ಸಂವತ್-ಸರವೇ ಗಂಡನ ಉಡುಗೊರೆಯಾಗುತ್ತದೆ! ಒಂದೊಮ್ಮೆ ಸೊಸೆಗೆ ಚಿನ್ನದ ಸರ ಬಂದರೂ ಅತ್ತೆಗೆ ಮತ್-ಸರ ಆಗುತ್ತದೆ! ಯಾವಾಗಲೂ ಗುಡುಗು ಸಿಡಿಲು ಗೋಳೋ ಅಳು ಬೈಗುಳಗಳ ಸುರಿಮಳೆ ಸುರಿವ ಪಕ್ಕದಮನೆ ನಿಜವಾಗ್ಲೂ 'ನೆರೆ'ಮನೆಯಾಗುತ್ತದೆ!

ದೀಪಾವಳಿಯ ಹಣತೆಗೆ ಎಣ್ಣೆ ಬೇಕಿದ್ದರೂ ಹಣ–ತೆಗೆ ಎನ್ನಬೇಕಾಗುತ್ತದೆ! ರಣದಲ್ಲಿ ಧುಮುಕಿ ಹೋರಾಡಿದ ರಾಜಮಹಾರಾಜರ ಮುಂದೆ ಹಗ–ರಣದಲ್ಲಿ ಸಿಲುಕಿ ನಲುಗುವ ಇಂದಿನ ರಾಜಕಾರಣಿಗಳ ತುಲನೆಯಾಗುತ್ತದೆ! ಅಂದಿನ ಗೋಕುಲದ ಸ್ತ್ರೀಯರು ಗೋಪಿಯರಾದರೆ ಇಂದಿನ ಉಚ್ಚಕುಲಗಳ ಸ್ತ್ರೀಯರು ಮುಂ–ಗೋಪಿಗಳಾಗುತ್ತಾರೆ! ಪಂಪನಿಗೆ ಅತಿ ಸುಂದರವಾದದ್ದು ಬನವಾಸಿ ಆದರೆ ಪ್ರಿಯಕರನಿಗೆ ಪ್ರಿಯತಮೆಯ ಚುಂ–ಬನ 'ವಾಸಿ'ಎನಿಸುತ್ತದೆ! ಎಲ್ಲವೂ ಪದಗಳ ಸೀಳು ನೋಟದಿಂದ. ಪದಗಳೊಂದಿಗೆ ಡುಂಡಿರಾಜ್ ಆಡುವ ಆಟದಿಂದ.

ಪದಗಳಿಗೆ, ನುಡಿಗಟ್ಟುಗಳಿಗೆ ರೂಢಿಯಲ್ಲಿರುವ ಅರ್ಥವನ್ನೇ ನಾವೆಲ್ಲ ಕಲ್ಪಿಸಿದರೆ ಡುಂಡಿರಾಜ್ ಅವೇ ಪದಗಳನ್ನು, ನುಡಿಗಟ್ಟುಗಳನ್ನು ಎಳ್ಳಷ್ಟೂ ವಿರೂಪಗೊಳಿಸದೆ ಬೇರೊಂದು ಅರ್ಥವನ್ನು ಹೊಳೆಯಿಸುತ್ತಾರೆ. ಉದಾಹರಣೆಗೆ, ಸಂವಿಧಾನಶಿಲ್ಪಿ ಬಿ. ಆರ್. ಅಂಬೇಡ್ಕರ್ ಪ್ರತಿಮೆಯಲ್ಲಿ ಅವರ ಬಲಗೈ ಎತ್ತಿದ್ದಿರುತ್ತದೆ (ಕ್ರಿಕೆಟ್ ಅಂಪೈರ್ 'ಔಟ್' ಸೂಚಿಸಿದಂತೆ...) ಯಾಕೆ? ಎಂಬ ಪ್ರಶ್ನೆಗೆ ಡುಂಡಿರಾಜ್ ಒಂದು ಹನಿಗವನದಲ್ಲಿ ಉತ್ತರ ಹೇಳಿದ್ದಾರೆ–ಯಾಕೆಂದರೆ ಅಂಬೇಡ್ಕರ್ ಅವರದು ಸಂವಿಧಾನ ಬರೆಯೋದ್ರಲ್ಲಿ ಎತ್ತಿದ ಕೈ! ಬ್ಯಾಂಕಿನ ಸಿಬ್ಬಂದಿಗಳ ಪೈಕಿ ಬೇರೆಲ್ಲರಿಗೂ ಸೆನ್ಸ್–ಆಫ್–ಹ್ಯೂಮರ್ ಇರುತ್ತದೆ, ಜೋಕ್ ಸಿಡಿಸಿದರೆ ಅವರೆಲ್ಲ ಬಿದ್ದುಬಿದ್ದು ನಗುತ್ತಾರೆ, ಆದರೆ ಕ್ಯಾಷಿಯರ್ ಮಾತ್ರ ಜಪ್ಪಯ್ಯ ಎಂದರೂ ತುಟಿಯಗಲಿಸುವುದಿಲ್ಲ ಯಾಕೆ? ಎಂಬ ಪ್ರಶ್ನೆ ಹಾಕಿ ಡುಂಡಿರಾಜ್ ಉತ್ತರಿಸುತ್ತಾರೆ–ಕ್ಯಾಷಿಯರ್ ಮುಂದೆ 'ನಗದು' ಎಂದು ಬೋರ್ಡ್ ಇರುತ್ತದಲ್ಲ, ಅದಕ್ಕೆ! ಇನ್ನೊಂದು, ಸಿರಿವಂತರ ತಿಜೋರಿಯಲ್ಲಿ ಹಣದ ಹೊಳೆ ಹರಿಯುತ್ತಿದೆ; ಸಾಮಾನ್ಯರ ಕೈಯಲ್ಲಿ ಒಂದು–ಎರಡರ ನೋಟು ಹರಿಯುತ್ತಿದೆ!– ಎಂಥ ಸಾರ್ವಕಾಲಿಕ ಸತ್ಯ! ಮತ್ತೊಂದು, ಅವರ ಸ್ವಕ್ಷೇತ್ರವಾದ ಬ್ಯಾಂಕಿಂಗ್‌ನದೇ– 'ಬ್ಯಾಂಕಿನಲ್ಲಿ ಸಿಬ್ಬಂದಿ ಚೆಕ್ ಕ್ಯಾಶ್ ಮಾಡುತ್ತಾರೆ; ಮನೆಯಲ್ಲಿ ಮಡದಿಯರು ಕ್ಯಾಶ್ ಚೆಕ್ ಮಾಡ್ತಾರೆ!'

ಮಡಿವಂತರು, ಭಾಷಾಪಂಡಿತರು ಮೂಗುಮುರಿದುಕೊಳ್ಳಬಹುದು; ಆದರೆ ನನಗೆ ತುಂಬಾ ಇಷ್ಟವಾಗುವುದು ಡುಂಡಿರಾಜ್ ಇಂಗ್ಲಿಷ್ ಪದಗಳನ್ನು/ಪದಭಾಗಗಳನ್ನು ಕನ್ನಡ ಪದಭಾಗಗಳೊಂದಿಗೆ 'ಕಸಿ' ಮಾಡಿ ಹುಟ್ಟಿಸುವ ಶ್ಲೇಷೆಗಳು. ಓದುವಾಗ ಒಂದಿನಿತೂ ಅಡಚಣೆಯಾಗದಂತೆ ಈ ರೀತಿಯ ಆಂಗ್ಲಪದಗಳನ್ನು ಆಂಗ್ಲಅಕ್ಷರಗಳಲ್ಲೇ ಉಳಿಸಿ ಕನ್ನಡದೊಂದಿಗೆ ಬೆಸೆದು ಪನ್ ಮಾಡುವ ಡುಂಡಿರಾಜ್ ನಿಜಕ್ಕೂ punಡಿತರು! ಉದಾಹರಣೆಯಾಗಿ ಕೆಲವು ಕ್ರಾಸ್–ಬ್ರೀಡ್ ಪನ್‌ಗಳು:

–ಕೊಡು ದೇವರೆ ವರ. ಕುಡಿದು ವಾಹನ ಓಡಿಸದಂಥ dryವರ.

–ghostಇಗೆ ಹೆದರದವನು ಸಾಹಿತ್ಯಗೋಷ್ಠಿಗೆ ಹೆದರುತ್ತಾನೆ!

–ಜೀವನದ ಬೇವಿನಲ್ಲೂ ಅವನು(ಭಗವಂತ) ಇದ್ದಾನೆ, ಬೆಲ್ಲದಲ್ಲೂ ಇದ್ದಾನೆ. ಅಂದರೆ ಕಹಿಯಲ್ಲೂ ಸಿಹಿಯಲ್ಲೂ ಇದ್ದಾನೆ. ಸಿಹಿ–ಕಹಿ ಎರಡರಲ್ಲೂ ಇರುವ ಹಿ ಎಂದರೆ He!

–ಪಟ್ಟದಕಲ್ಲು ಐಹೊಳೆ ಶಿಲಾಬಾಲಿಕೆ ಬೇಸರವಾದರೆ ಅಶ್ರುಧಾರೆ eyeಹೊಳೆ!

–ಕದ್ದು ಕದ್ದು ಪ್ರೀತಿಸಿದ್ದು ಸಮಾಜದ ಕಣ್ಣಲ್ಲಿ ಸಿಂಧು ಎನಿಸಿಕೊಳ್ಳಲು ಒಂದು ಮಾರ್ಗವೆ ಮದುway!

–ಹೆಣ್ಣು ತನ್ನ ಗಂಡನನ್ನು ತಾನೇ ಆರಿಸುವುದು ಸ್ವಯಂವರ; ಗಂಡು ಹಾಗೆ ಮಾಡಿದರೆ ಅದು ಸ್ವಯಂworry!

–ಅದೃಷ್ಟದ ಮರ ದುಡ್ಡಿನ ಮರ ಯಾವುದಂದ್ರೆ ಲಾtree.

–ಕೌರವರು ಗೋಗ್ರಹಣ ಮಾಡಿದ್ದೇಕೆಂದರೆ ಅವರು cowರವರು!

–ಬಿಳಿಬಿಳಿ ಹೆಣ್ಣನ್ನು ಹೋಲಿಸುತ್ತಾರೆ ivoryಗೆ; ಅಗತ್ಯ ಬಿದ್ದರೆ ಹಂಚುತ್ತಾರೆ ಐವರಿಗೆ, ದ್ರೌಪದಿಯನ್ನು ಹಂಚಿದಂತೆ ಪಾಂಡವರಿಗೆ!

–ಮಂತ್ರಿಯ ಹೊಟ್ಟೆ ನೋಡಿದವರು ಕೇಳಿಯಾರು ಎಷ್ಟು monthರೀ?

–ರಾಜಕೀಯ ಎಂದರೆ ಕುಬೇರನ ಖಜಾನೆಯ keyಯಾ?

– ಕಾಡು ಕಡಿಯುವಾಗ ನಮಗೆ ಆಗೋದಿಲ್ಲ ದುಃಖ; ವೈಶಾಖದಲ್ಲಿ ಕೇಳುತ್ತೇವೆ whyಶಾಖ? whyಶಾಖ?

–ಕವಿಗೋಷ್ಠಿಯಲ್ಲಿ ಸಿಕ್ಕೀತು ಎರಡು ಬಿಸ್ಕತ್ತು ಒಂದು ಟೀ; ಕನ್ನಡ ಕವಿಗೆ ಅದೇ ರಾಯಲ್–ಟಿ!

–ಎಷ್ಟು ಬೆಳ್ಳಗಿದ್ದಾಳೆ ಹಾಲಲ್ಲಿ ಮಿಂದವಳೇ?Hallನಲ್ಲಿ ಅಲ್ಲಾ ಸಾರ್ ಬಾತ್‌ರೂಮಿನಲ್ಲೇ!

–ಅಂತರ್ಜಾತೀಯ ವಿವಾಹದ ಮಹತ್ವವನ್ನು ವೇದಿಕೆಯಲ್ಲಿ ನಾವು ವಿವರಿಸುತ್ತೇವೆ, ಬದುಕಿನಲ್ಲಿ ನಮ್ಮವರನ್ನೇ weವರಿಸುತ್ತೇವೆ!

–ಹೇಗೆ ತಡೆಯಲಿ ಮೈ ನಡುಗುವ ಚಳಿ? ಇಲ್ಲ ನನ್ನ ಬಳಿ ಹೊದೆಯಲು ಕಂಬಳಿ. ಆದ್ದರಿಂದ ಪ್ರಿಯೆ ನೀನೇ comeಬಳಿ!

*

ಕವಿಗಳು, ಲೇಖಕರು, ಸಾಹಿತ್ಯಕೃಷಿಕರು ಸಾಮಾನ್ಯವಾಗಿ ಅವರ ಕೃತಿಗಳಿಂದಷ್ಟೇ ನಮಗೆ ಪರಿಚಿತರಾಗಿರುವುದು ಹೆಚ್ಚು. ಆದರೆ ಡುಂಡಿರಾಜ್ ನನಗೆ ವೈಯಕ್ತಿಕವಾಗಿ ಪರಿಚಯದವರು. ಅವರು ಮೂಲತಃ ನಮ್ಮ ಜಿಲ್ಲೆ (ಆಗಿನ ದಕ್ಷಿಣಕನ್ನಡ, ಈಗ ಉಡುಪಿ)ಯವರೇ. ಕುಂದಾಪುರ ತಾಲೂಕಿನ 'ಹಟ್ಟಿಕುದ್ರು' ಅವರ ಹುಟ್ಟೂರು. ಈಹಿಂದೆ ಕಾರ್ಪೊರೇಷನ್ ಬ್ಯಾಂಕ್‌ನ ಕ್ಷೇತ್ರಾಧಿಕಾರಿಯಾಗಿದ್ದಾಗ ಅವರು ನಮ್ಮೂರಿನ (ಕಾರ್ಕಳ ತಾಲೂಕಿನ 'ಮಾಳ' ಎಂಬ ಹಳ್ಳಿ) ಬ್ಯಾಂಕ್ ಶಾಖೆಗೂ ಪ್ರತಿ ವಾರ ಭೇಟಿಕೊಡುತ್ತಿದ್ದರು. ಹಾಗಾಗಿ ನಮ್ಮೂರು-ನಮ್ಮೋರು ಅವರಿಗೂ ಗೊತ್ತು; ಅವರೂ ನಮ್ಮೂರಿನವರಿಗೆ ಚೆನ್ನಾಗಿ ಗೊತ್ತು. ಪತ್ರಿಕೆಗಳಲ್ಲಿ, ನಿಯತಕಾಲಿಕಗಳಲ್ಲಿ ಡುಂಡಿರಾಜ್ ಹನಿಗವನಗಳನ್ನು ಓದುವುದೆಂದರೆ 'ಇವರು ನಮಗೆ ಗೊತ್ತಿರುವವರು' ಎಂಬ ಹೆಚ್ಚುವರಿ ಒತ್ತು!

ಈ ಆತ್ಮೀಯತೆಯೇ ನಾನು ನನ್ನ ಅಂಕಣಬರಹಗಳ ಸಂಕಲನವನ್ನು ಪುಸ್ತಕ ರೂಪದಲ್ಲಿ ತಂದಾಗ ಅದಕ್ಕೆ ಮುನ್ನುಡಿ ಬರೆಯುವಂತೆ ಡುಂಡಿರಾಜ್ ಅವರನ್ನು ಕೋರುವುದಕ್ಕೆ ಪ್ರೇರಣೆಯಾಯ್ತು. ನನ್ನ ಕೋರಿಕೆಯನ್ನು ಸಂತೋಷದಿಂದ ಒಪ್ಪಿದ ಅವರು ಚಿಕ್ಕದಾಗಿ ಚೊಕ್ಕವಾಗಿ ಸ್ವಾರಸ್ಯಕರವಾಗಿ ಮುನ್ನುಡಿ ಬರೆದುಕೊಟ್ಟಿದ್ದರು. ನನ್ನ ಪುಸ್ತಕ(ಮತ್ತು ಮೂಲ ಅಂಕಣ)ದ ಹೆಸರು 'ವಿಚಿತ್ರಾನ್ನ' ಎಂದಿರುವುದರಿಂದ ಮತ್ತು ಅದನ್ನೊಂದು 'ಭೋಜನ'ದ ಕಲ್ಪನೆಯಲ್ಲಿ ಪ್ರಸ್ತುತಪಡಿಸಿರುವುದರಿಂದ ಅದರಲ್ಲಿ ಪರಿವಿಡಿ, ಮುನ್ನುಡಿ, ಲೇಖಕನ ಮಾತು ಮುಂತಾದುವುಗಳಿಗೆಲ್ಲ ಭೋಜನಸಂಬಂಧಿ ಪರಿಭಾಷೆಯನ್ನೇ ಬಳಸಿದ್ದೆ. ಪರಿವಿಡಿಯನ್ನು 'ಪರಿಸಿಂಚನ' ಎಂದೂ ಮುನ್ನುಡಿಯನ್ನು 'ಹಸ್ತೋದಕ' ಎಂದೂ ನಮೂದಿಸಿದ್ದೆ. ಡುಂಡಿರಾಜ್ ಈ 'ಹಸ್ತೋದಕ' ಪದವನ್ನೇ ಅದೆಷ್ಟು ಸೊಗಸಾಗಿ ಬಳಸಿಕೊಂಡರೆಂದರೆ

ನಮ್ಮಿಬ್ಬರದೂ ಒಂದೇ ಜಿಲ್ಲೆ ಅವಿಭಜಿತ ದ.ಕ

ಅದಕ್ಕೇ ಇರಬೇಕು ಬಯಸಿದ್ದಾರೆ ಜೋಶಿಯವರು

'ವಿಚಿತ್ರಾನ್ನ'ಕ್ಕೆ ನನ್ನ ಮುನ್ನುಡಿಯ ಹಸ್ತೋ-ದಕ!

ಎಂದು ಅಲ್ಲೇ ಒಂದು ಅದ್ಭುತವಾದ ಮತ್ತು ಸಾಂದರ್ಭಿಕವಾದ ಪನ್ ಪ್ರಯೋಗಿಸಿದ್ದಾರೆ. ಅಷ್ಟೇ ಅಲ್ಲ, 'ಇದು ಎಲ್ಲರಿಗೂ ಇಷ್ಟವಾಗುವ ವಿ-ಚಿತ್-raw-ಅನ್ನ' ಎಂದು ಅಂಕಣವನ್ನು ಅಕ್ಷರಶಃ ಅನ್ನಕಣವಾಗಿಸಿ ಅರ್ಥೈಸಿ ಹರಸಿ ಹಾರೈಸಿದ್ದಾರೆ.

ಬೆಂಗಳೂರಲ್ಲಿ ಆಗಸ್ಟ್೧೩,'೨೦೦೫ರಂದು ನಡೆದ 'ವಿಚಿತ್ರಾನ್ನ' ಪುಸ್ತಕ ಬಿಡುಗಡೆ ಸಮಾರಂಭಕ್ಕೆ ಡುಂಡಿರಾಜ್ ಅವರನ್ನು ಆಹ್ವಾನಿಸಿದ್ದೆನಾದರೂ ಕಾರ್ಯಬಾಹುಳ್ಯದಿಂದ ಅವರಿಗೆ ಬರಲಿಕ್ಕಾಗಲಿಲ್ಲ. ಸ್ವಾತಂತ್ರ್ಯದಿನಾಚರಣೆಯ ರಜೆಯ ನಂತರ ಆ ವಾರವಿಡೀ

ರಜೆ ಹಾಕಿ ಮಂಗಳೂರಲ್ಲಿ ಇರುವುದಾಗಿಯೂ, ನಾನು ಕಾರ್ಕಳಕ್ಕೆ ಹೋದಾಗ ಮಂಗಳೂರಿಗೆ ಪ್ರಯಾಣ ಬೆಳೆಸಿ ಅವರ ಮನೆಗೂ ಭೇಟಿಕೊಡಬೇಕೆಂದು ನನಗವರು ಆತ್ಮೀಯವಾದ ಆಮಂತ್ರಣ ಕೊಟ್ಟಿದ್ದರು. ಆ ಪ್ರಕಾರ ಆಗಸ್ಟ್ ೧೮ರಂದು ಮಂಗಳೂರಲ್ಲಿ ಅವರ ಮನೆಯಲ್ಲೇ ನಾನವರನ್ನು ಭೇಟಿಯಾಗುವುದೆಂದು ನಿಗದಿಪಡಿಸಿಕೊಂಡಿದ್ದೆವು. ಆ ಭೇಟಿಯ ನಂತರ ಮುಂದಿನ ವಾರದ ನನ್ನ ಅಂಕಣದಲ್ಲಿ 'ಬಾರಿಸು ಕನ್ನಡ ಡುಂಡಿ ಮವ...' ಎಂಬ ಶೀರ್ಷಿಕೆಯೊಂದಿಗೆ ಲೇಖನವನ್ನು ಬರೆದಿದ್ದೆ. ಅದರಿಂದ ಕೆಲವು ಭಾಗಗಳನ್ನು ಇಲ್ಲಿ ಸಂದರ್ಭೋಚಿತವಾಗಿ ಉಲ್ಲೇಖಿಸುತ್ತೇನೆ:

'ಮಂಗಳೂರಿನಲ್ಲಿ ಡುಂಡಿರಾಜ್ ಮನೆ ಇರುವುದು ಬಿಜೈ ಎಂಬ ಪ್ರದೇಶದಲ್ಲಿ. ನಮ್ಮೂರಿಂದ ನನ್ನ ಅಣ್ಣನೊಂದಿಗೆ ಮಾರುತಿವ್ಯಾನ್‌ನಲ್ಲಿ ಬಿಜೈಗೆ ಬಿಜಯಂಗೈಯುವ ಕಾರ್ಯಕ್ರಮ ಹಾಕಿಕೊಂಡೆ. ಅವರ ಮನೆ ಒಂದು ಅಪಾರ್ಟ್‌ಮೆಂಟ್ ಕಾಂಪ್ಲೆಕ್ಸ್‌ನ ಮೂರನೆ ಮಹಡಿಯಲ್ಲಿ. ಬೇಸ್‌ಮೆಂಟಲ್ಲಿ ಕಾರ್ ಪಾರ್ಕ್ ಮಾಡಿ ನಾವು ಮೆಟ್ಟಲು ಹತ್ತುವವರಿದ್ದೆವಾದರೂ ಅಪಾರ್ಟ್‌ಮೆಂಟ್‌ನ ಸೆಕ್ಯುರಿಟಿ ಗಾರ್ಡ್ ನಮ್ಮನ್ನು ಲಿಫ್ಟ್‌ನಲ್ಲೇ ಹೋಗುವಂತೆ ಆಜ್ಞಾಪಿಸಿದ, ಮಾತ್ರವಲ್ಲ ಅವನೂ ನಮ್ಮ ಜತೆ ಲಿಫ್ಟ್‌ನಲ್ಲಿ ಸೇರಿಕೊಂಡ. ಲಿಫ್ಟ್ ಸರಿಸುಮಾರು ಒಂದೂವರೆ ಮಹಡಿಯಷ್ಟು ಮೇಲೇರಿದ ಕೂಡಲೇ ಕರೆಂಟ್ ಕಟ್ ಆಗಿಬಿಡಬೇಕೇ! ಸದ್ಯ ಆ ಗಾರ್ಡ್ ಕೂಡ ನಮ್ಮೊಂದಿಗೆ ಲಿಫ್ಟ್‌ನಲ್ಲಿದ್ದುದರಿಂದ ಬಚಾವ್. ಅವನು ಲಿಫ್ಟ್ ಬಾಗಿಲು ತೆಗೆದು ಅಲ್ಲಿಂದಲೇ ಇನ್ನೊಬ್ಬ ಗಾರ್ಡನ್ನು ಕರೆದು ಜನರೇಟರ್ ಸ್ಟಾರ್ಟ್ ಮಾಡಲು ಹೇಳಿದ, ಹಾಗಾಗಿ ಸೆಕೆಂಡ್ ಹಾಫ್ ಅಫ್ ಅವರ್ ಜರ್ನಿ ವಾಸ್ ಪವರ್‌ಡ್ ಬೈ ಜನರೇಟರ್. ಬಹುಶಃ ಡುಂಡಿರಾಜ್ ಚುಟುಕಗಳಲ್ಲಿ ಪದಗಳನ್ನು ವಾಕ್ಯಗಳನ್ನು ಅರ್ಧಂಬರ್ಧ ತುಂಡರಿಸಿ ಪನ್ ಮಾಡುತ್ತಾರಾದರೆ ಅವರ ಮನೆಯ ಲಿಫ್ಟ್ ಸಹ ತನ್ನ ಸರ್ವೀಸನ್ನು ಅರ್ಧಂಬರ್ಧ ನಿಲ್ಲಿಸಿ ನಮ್ಮ ಮೇಲೊಂದು ಲಘುವಾದ ಫನ್ ಪ್ರಯೋಗಿಸಿತೋ ಏನೊ!

ಅಂತೂ ಸುದೀರ್ಘವಾದ ಲಿಫ್ಟ್ ಪ್ರಯಾಣ ಮುಗಿಸಿ (ಮತ್ತು ಅದರಿಂದಾಗಿ, ಏಳು ನಿಮಿಷ ತಡವಾಗಿ) ಅಪರಾಹ್ನ ೨:೩೭ಕ್ಕೆ ನಾವು ಡುಂಡಿರಾಜ್ ಮನೆ ತಲುಪಿದೆವು. ಕರೆಗಂಟೆ ಒತ್ತಿದ ಕೂಡಲೆ ಬಾಗಿಲು ತೆರೆದು ನಗುಮೊಗದಿಂದ ನಮ್ಮನ್ನು ಸ್ವಾಗತಿಸಿದ ಡುಂಡಿರಾಜ್ ನಿಜಕ್ಕೂ ಒಬ್ಬ ಸರಳ ವ್ಯಕ್ತಿಯಾಗಿ ಕಂಡರು. ಉಭಯಕುಶಲೋಪರಿ, ಅಭಿನಂದನೆ, ಪರಿಚಯ (ಅವರ ಮಡದಿ–ಮಕ್ಕಳಿಗೆ) ಇತ್ಯಾದಿ ಆಯ್ತು. ಡುಂಡಿರಾಜ್‌ಗೆ ಇಬ್ಬರು ಮಕ್ಕಳು. ಮಂಗಳೂರಲ್ಲೇ ಇಂಜನಿಯರಿಂಗ್ ಓದುತ್ತಿರುವ ಸಹಜಾ ಮತ್ತು ಹತ್ತನೆ ತರಗತಿಯಲ್ಲಿರುವ ಮಗ ಸಾರ್ಥಕ್. ಈ ಹಾಸ್ಯಕವಿ ಮಕ್ಕಳಿಗೆ ಹೆಸರಿಡುವಾಗಲೂ ಉಪಯೋಗಿಸಿರುವ ಚಾತುರ್ಯವನ್ನು ಗಮನಿಸಿ. 'ಆರತಿಗೊಬ್ಬಳು ಮಗಳು ಕೀರ್ತಿಗೊಬ್ಬ

ಮಗ' ಎನ್ನುವ ಸಂದೇಶವನ್ನೇ ಅವರು ಮಕ್ಕಳ ಹೆಸರಲ್ಲಿ ಪ್ರತಿಬಿಂಬಿಸಿದ್ದಾರೆ. ಮೊದಲ ಮಗು ಹುಟ್ಟಿದ ಸಡಗರದಲ್ಲಿ ಸಹಜಾ; ಜನ್ಮಸಾರ್ಥಕವೆಂಬ ಭಾವದಲ್ಲಿ ಎರಡನೆ ಮಗು ಸಾರ್ಥಕ! ಡುಂಡಿರಾಜ್‌ರಂತೆಯೇ ಲವಲವಿಕೆ-ಖುಶಿಯ ಜೀವಿಗಳು ಅವರ ಮನೆಯವರೆಲ್ಲ.

ಇನ್ನೊಂದು ವಿಶೇಷ ಏನಾಯ್ತೆಂದರೆ ಅವತ್ತು (ಆಗಸ್ಟ್೧ಲ) ನಾನು ಹೋಗಿದ್ದ ದಿನವೇ ಡುಂಡಿರಾಜ್ ಅವರ ಜನ್ಮದಿನ! ಅವರಿಗೆ ಹುಟ್ಟುಹಬ್ಬದ ಶುಭಾಶಯಗಳನ್ನು ತಿಳಿಸಲು ನಾನು ಸ್ಪೆಷಲ್ಲಾಗಿ ಅಮೆರಿಕದಿಂದ ಬರುವುದು ಸಾಧ್ಯವಿತ್ತೇ? ಅವರು ಬೆಳಗಾವಿಯಲ್ಲೇ ಇರುತ್ತಿದ್ದರೆ ವೈಯಕ್ತಿಕ ಭೇಟಿ ಸಾಧ್ಯವಾಗುತ್ತಿತ್ತೇ? ಆದರೆ ಈಗ ಅಚಾನಕ್ಕಾಗಿ ಜನ್ಮದಿನದ ಶುಭಾಶಯಗಳನ್ನು ಖುದ್ದಾಗಿ ತಿಳಿಸುವುದು ಸಾಧ್ಯವಾಯ್ತು; ಮಾತ್ರವಲ್ಲ, ನನ್ನ ಪುಸ್ತಕದ ಗೌರವಪ್ರತಿಯನ್ನು ಜನ್ಮದಿನದ ಉಡುಗೊರೆಯಂತೆಯೂ ಕೊಡುವುದು ಸಾಧ್ಯವಾಯ್ತು. ಜತೆಯಲ್ಲೇ ಬರ್ತ್‌ಡೇ ಸ್ವೀಟ್ ಎಂದು ಅವರು ಕೊಟ್ಟ, ನನಗೆ ತುಂಬ ಇಷ್ಟವಾದ ಜಿಲೇಬಿಯನ್ನು ಚಪ್ಪರಿಸುವುದೂ ಸಾಧ್ಯವಾಯ್ತು. ಈ ಸಿಹಿಯೊಂದಿಗೆಯೇ ಡುಂಡಿರಾಜ್ ತನ್ನ ಕೆಲವು ಪುಸ್ತಕಗಳನ್ನೂ ಸಹಿ ಹಾಕಿ ನನಗೆ ಉಡುಗೊರೆಯಾಗಿತ್ತರು. ಸೌಹಾರ್ದ ಭೇಟಿಗೆ ಎಷ್ಟೊಂದು ಸಂತಸದ ಸಂದರ್ಭ ಬಂದೊದಗಿತ್ತು!

ಡುಂಡಿರಾಜ್ ಸಾಕಷ್ಟು ಪ್ರಶಸ್ತಿ-ಸನ್ಮಾನಗಳಿಗೆ ಪಾತ್ರರಾಗಿದ್ದಾರೆ. ಅವರ ಮನೆಯ ಶೋಕೇಸ್‌ನತ್ತ ಒಂದು ನೋಟ ಬೀರಿದರೆ ಅದೆಲ್ಲದರ ಸಾರಾಂಶ ತಿಳಿಯುತ್ತದೆ. ಅವರೇ ಹೇಳುವಂತೆ ಶೋಕೇಸಲ್ಲಿ ಅವರ ಮಕ್ಕಳು ಗಳಿಸಿದ ಪ್ರಶಸ್ತಿ-ಫಲಕಗಳೂ ಇವೆಯಂತೆ. ಆದರೆ ಅವು ಚುಟುಕ ಸಾಹಿತ್ಯದವಲ್ಲ, ಶಾಲೆ-ಕಾಲೇಜಲ್ಲಿ ಆಟೋಟ ಸ್ಪರ್ಧೆಗಳ ಬಹುಮಾನಗಳು. ಅಪ್ಪ ಅಕ್ಷರಗಳೊಂದಿಗೆ, ಪದಗಳೊಂದಿಗೆ ಆಟ ಆಡುತ್ತಿದ್ದರೆ ಮಕ್ಕಳು ನಿಜವಾಗಿಯೂ ಆಟಓಟಗಳಲ್ಲಿ ಆಸಕ್ತರು. ಡುಂಡಿರಾಜ್ ಯಥೇಷ್ಟ ಸನ್ಮಾನಗಳಿಗೆ ಆಹಾರ (ಬಲಿಪಶು)ವಾಗಿದ್ದಾರೆಂಬುದಕ್ಕೆ ಇನ್ನೊಂದು ಸಾಕ್ಷಿ ಅವರ ಮನೆಯ ಹಜಾರದಲ್ಲಿರುವ ಸಾಲು ಸಾಲು ಗಂಧದ ಹಾರಗಳು. ಆದರೆ ಒಂದು ಮಾತು, ಹಾರ-ತುರಾಯಿ, ಪ್ರಶಸ್ತಿ-ಪ್ರಶಂಸೆ ಏನೇ ಇರಲಿ, ಎಷ್ಟೇ ಇರಲಿ, ಡುಂಡಿರಾಜ್‌ಗೆ ಅದರಿಂದ ಕೋಡು ಮೂಡಿಲ್ಲ. ಅವರೊಬ್ಬ ಡೌನ್-ಟು-ಅರ್ತ್ ಮನುಷ್ಯ. ಸರಳಮನಸ್ಸಿನ ಸಹೃದಯಿ. ಅವರ ಮನೆಗೆ ಭೇಟಿ ಕೊಟ್ಟದ್ದು, ವೈಯಕ್ತಿಕವಾಗಿ ಅವರನ್ನು ಭೇಟಿಯಾಗಿ ಮಾತನಾಡಿಸಿದ್ದು, ಕೈಕುಲುಕಿದ್ದು ಎಲ್ಲವೂ ನನಗೆ ತುಂಬಾ ಖುಷಿ ತಂದಿತು. ಅವರ ಸೆನ್ಸ್ ಆಫ್ ಹ್ಯೂಮರ್, ಸಿಂಪ್ಲಿಸಿಟಿ ಮತ್ತು ಆತ್ಮೀಯತೆಗಳೆಲ್ಲ ಹೀಗೇ ಇರಲಿ, ನಮಗೆಲ್ಲ ಅವು ಆದರ್ಶವಾಗಿರಲಿ, ಹುಟ್ಟುಹಬ್ಬದಾಚರಣೆಯಲ್ಲಿ

ಅವರು ಸೆಂಚುರಿ ಬಾರಿಸಲಿ ಎಂದು ಹಾರೈಸುತ್ತ ನಾವು ಅವರನ್ನು ಬೀಳ್ಕೊಂಡು ನಮ್ಮ ಮನೆಕಡೆಗೆ ಹೊರಟೆವು.

ಆ ಭೇಟಿಯ ನಂತರ ಡುಂಡಿರಾಜ್ ನನಗೆ ಮತ್ತಷ್ಟು ಆತ್ಮೀಯರೆನಿಸಿಕೊಂಡಿದ್ದಾರೆ. 'ವಿಜಯ ಕರ್ನಾಟಕ' ಪತ್ರಿಕೆಯಲ್ಲಿ ಪ್ರತಿ ಮಂಗಳವಾರ ಪ್ರಕಟವಾಗುವ ಅವರ ಅಂಕಣ 'ಮಾತು-ಕ(ವಿ)ತೆ'ಯನ್ನು ಓದಿ ಈಮೈಲ್‌ನಲ್ಲಿ ಅವರಿಗೆ ನನ್ನ ಅನಿಸಿಕೆಗಳನ್ನು ತಿಳಿಸುವುದು, ಅವರ ಪದಗಳಾಟಕ್ಕೆ ಹೊಸದೇನಾದರೂ ಸೂಚಿಸುವುದು, ಅದರ ಬಗ್ಗೆ ವಿಚಾರವಿನಿಮಯ ಮಾಡುವುದು-ಇತ್ಯಾದಿಯಿಂದಾಗಿ ನಮ್ಮ ಈ-ಸ್ನೇಹ ಹೆಚ್ಚಿದೆ. ಡುಂಡಿರಾಜ್ ತಮ್ಮ ಅಂಕಣದಲ್ಲಿ ಆಗಾಗ ಓದುಗರ ಅನಿಸಿಕೆ/ಕೊಡುಗೆಗಳನ್ನು ಅಳವಡಿಸಿಕೊಂಡು ಹೊಸ ಹೊಸ ಹಾಸ್ಯವನ್ನು ಹೊಸೆಯುವುದಿದೆ. ಹಾಗೆ ಒಂದೆರಡು ಸಲ ಅವರು ನನ್ನ ಪತ್ರಗಳನ್ನೂ ಉಲ್ಲೇಖಿಸಿದ್ದಾರೆ. ಕಾರ್ಗಿಲ್ ಯುದ್ಧದ ನಂತರ ಸಾರ್ವಜನಿಕ ಗಣೇಶೋತ್ಸವಗಳಲ್ಲಿ ಸೈನಿಕನ ರೂಪದ ಗಣೇಶವಿಗ್ರಹಗಳನ್ನು ಕಂಡು ಅವರೊಮ್ಮೆ ಗನ್ ಹಿಡಿದ ಸೈನಿಕನಂತಿರುವ ವಿಘ್ನೇಶ್ವರ ನಿಜವಾಗಿಯೂ 'ಗನ್‌ಪತಿಯೇ ಸೈ!' ಎಂದು ಬರೆದಿದ್ದರು. ಅದಕ್ಕೆ ಪ್ರತಿಕ್ರಿಯೆಯಾಗಿ ನಾನವರಿಗೆ, 'ಗಣಪ ಗನ್‌ಪತಿಯಾಗಿರುವುದು ಸಹಜವೇ. ಹೇಗಿದ್ದರೂ ಆತ ಗನ್‌ಗಾಧರನ ಸುಪುತ್ರ!' ಎಂದು ಬರೆದಿದ್ದೆ. ಮತ್ತೊಂದು ಸಲ ಕಡಲತಡಿಯ ಮುರ್ಡೇಶ್ವರ ಕ್ಷೇತ್ರದ ಬಗ್ಗೆ ಬರೆಯುತ್ತ 'ಇತ್ತೀಚೆಗೆ ಮುರ್ಡೇಶ್ವರ ದೇವಸ್ಥಾನದ ಶಿವನ ವಿಗ್ರಹದ ಮೇಲೆ ಸಿಡಿಲು ಬಡಿದು ವಿಗ್ರಹದ ಕೈ ತುಂಡಾಗಿ ಅವನೀಗ 'ಮುರ್ದೇಶ್ವರ' ಆಗಿದ್ದಾನೆ ಎಂದಿದ್ದರು. ಅದಕ್ಕೆ ನಾನು 'ಸದ್ಯ ಆ ಮಹಾರುದ್ರನು ಕೋಪಗೊಂಡು ತಾಂಡವವಾಡುತ್ತ ಪ್ರಳಯಾಂತಕನಾಗಿ ಮರ್ಡರೇಶ್ವರ ಆಗದಿದ್ದರೆ ಸಾಕು!' ಎಂದು ಹಾರೈಸಿದ್ದೆ. ಇದನ್ನು ಡುಂಡಿರಾಜ್ ಸಾಂದರ್ಭಿಕವಾಗಿ ತಮ್ಮ ಅಂಕಣದಲ್ಲಿ ಉಲ್ಲೇಖಿಸಿದ್ದರು.

ಇಲ್ಲಿ ಗಮನಿಸಬೇಕಾದ ಮತ್ತು ಮೆಚ್ಚಬೇಕಾದ ಅಂಶವೇನೆಂದರೆ ತಾನು ಬರೆದದ್ದಷ್ಟೇ ಅತ್ಯುತ್ತಮ ಹಾಸ್ಯ ಎಂದು ಬೀಗದೆ ಜನಸಾಮಾನ್ಯ ಓದುಗರು ಸೂಚಿಸಿದ್ದನ್ನೂ ಸಂತೋಷದಿಂದ ಸ್ವೀಕರಿಸಿ ಗೌರವಿಸುವ ಅವರ ಹೃದಯವೈಶಾಲ್ಯ, ವಿನೀತಭಾವ. ಹಾಗೆಯೇ ನನ್ನ ಅಂಕಣದಲ್ಲಿ ಪ್ರಕಟವಾಗುವ ಲೇಖನಗಳನ್ನು ಪರಾಮರ್ಶೆಗೆಂದು ಕೆಲವೊಮ್ಮೆ ಡುಂಡಿರಾಜ್ ಅವರಿಗೆ ಕಳಿಸುತ್ತೇನೆ. ಅವನ್ನು ಓದಿ ಮೆಚ್ಚುಗೆ ಸೂಚಿಸಿಯೋ, ಪ್ರೋತ್ಸಾಹದ ಮಾತುಗಳನ್ನಾಡಿಯೋ, ಅಥವಾ 'ಸುಮಾರಾಗಿದೆ, ಇನ್ನೂ ಚೆನ್ನಾಗಿ ಬೇರೆ ರೀತಿಯಲ್ಲಿ ಬರೆಯಬಹುದು...' ಎಂದು ರಚನಾತ್ಮಕ ಸಲಹೆಗಳನ್ನು ನೀಡಿಯೋ-ಪ್ರತಿಸಲವೂ ಅವರು ತಪ್ಪದೆ ಈಮೈಲ್‌ನಲ್ಲೇ ಉತ್ತರಿಸುತ್ತಾರೆ. ಕಿರಿಯರಿಗೆ ಉತ್ತೇಜನ ಕೊಡುವ, ಮಾರ್ಗದರ್ಶನ ಮಾಡುವ ಅವರ ದೊಡ್ಡಗುಣಕ್ಕೆ ನಾನು ಮಾರುಹೋಗಿದ್ದೇನೆ.

ಡುಂಡಿರಾಜ್‌ರೊಂದಿಗೆ ಈಪರಿಯಲ್ಲಿ ಈಮೈಲ್ ಒಡನಾಟವಿರುವಾಗ, ಈಮೈಲ್ ಮೂಲಕವೇ ಒಂದು ಮಿನಿಸಂದರ್ಶನವನ್ನು ನಡೆಸಿ ಅದನ್ನೂ ಏಕೆ ಈ ಪ್ರಬಂಧದಲ್ಲಿ ಅಳವಡಿಸಿಕೊಳ್ಳಬಾರದು ಎಂಬ ಯೋಚನೆ ನನಗೆ ಹೊಳೆಯಿತು. ಕೂಡಲೆ ಅದನ್ನು ಕಾರ್ಯಗತಗೊಳಿಸಿ ಒಂದು ಪ್ರಶ್ನಾವಳಿಯನ್ನು ಅವರಿಗೆ ಕಳಿಸಿದೆ, ಅಮೆರಿಕದ 'ಕನ್ನಡ ಸಾಹಿತ್ಯ ರಂಗ'ವು ೨೦೦೭ರ ಬೇಸಿಗೆಯಲ್ಲಿ ಚಿಕಾಗೊದಲ್ಲಿ ನಡೆಸಲಿರುವ ಸಾಹಿತ್ಯೋತ್ಸವದ ಬಗ್ಗೆ, ಆ ಸಂದರ್ಭದಲ್ಲಿ 'ಹಾಸ್ಯ ಸಾಹಿತ್ಯ' ವಿಷಯದ ಗ್ರಂಥವನ್ನು ಹೊರತರಲು ಉದ್ದೇಶಿಸಿರುವ ಬಗ್ಗೆ, ಡುಂಡಿರಾಜ್ ಕುರಿತು ಲೇಖನವನ್ನು ಸಿದ್ಧಪಡಿಸುವಂತೆ ಸಾಹಿತ್ಯರಂಗದ ಆಯೋಜಕರು ನನಗೆ ಆದೇಶವಿತ್ತಿರುವ ಬಗ್ಗೆ ಅವರಿಗೆ ತಿಳಿಸಿದೆ. ಸಂತೋಷದಿಂದ ಒಪ್ಪಿದ ಡುಂಡಿರಾಜ್ ನನ್ನ ಪ್ರಶ್ನೆಗಳಿಗೆ ಬಹಳ ಸ್ವಾರಸ್ಯಕರವಾಗಿ ಉತ್ತರಗಳನ್ನು ಬರೆದುಕಳಿಸಿದ್ದಾರೆ. ಅವರ ಒಂದೊಂದು ಉತ್ತರದಲ್ಲೂ ಟಿಪಿಕಲ್ ಡುಂಡಿರಾಜ್ ಸಿಗ್ನೇಚರ್ 'ಪಂಚ್' ವಿಪುಲವಾಗಿ ಕಾಣುತ್ತದೆ. ಆ ಪ್ರಶ್ನೋತ್ತರವನ್ನು ಯಥಾವತ್ತಾಗಿ ಇಲ್ಲಿ ದಾಖಲಿಸಿದ್ದೇನೆ.

೧. ಮೊಟ್ಟಮೊದಲಿಗೆ ನೀವು 'ಹನಿ' ಉದುರಿಸಿದ್ದು ನೆನಪಿದೆಯೇ? ಅದರ ಬಗ್ಗೆ ಸ್ವಲ್ಪ ಹೇಳ್ತೀರಾ?

**ಡುಂ:** ಮೊದಲ ಹನಿ ಉದುರಿಸಿದ್ದು ಹದಿಹರೆಯದಲ್ಲಿ! ಅದೀಗ ಮರೆತು ಹೋಗಿದೆ.

೨. ಹನಿಗವನ ರಚನೆಗಾಗಲೀ ಇತರೇ ವಿಷಯದಲ್ಲಾಗಲೀ ನಿಮ್ಮ ಜೀವನದ ಮೇಲೆ ಅತ್ಯಂತ ಹೆಚ್ಚು ಪ್ರಭಾವ ಬೀರಿದವರಾರು?

**ಡುಂ:** ಹನಿಗವನ ರಚನೆಗೆ ವಿ. ಜಿ. ಭಟ್, ದಿನಕರ ದೇಸಾಯಿ, ನಾಡಿಗ್, ಬಿ. ಆರ್. ಲಕ್ಷ್ಮಣರಾವ್ ಮುಂತಾದವರ ಪ್ರಭಾವ ನನ್ನ ಮೇಲೆ ಬಿದ್ದಿದೆ. ಹಾಗೆಯೇ ನಮ್ಮ ತಂದೆಯವರು ಹೇಳುತ್ತಿದ್ದ ಸಂಸ್ಕೃತ ಸುಭಾಷಿತಗಳು ಕೂಡ. ಜೀವನದಲ್ಲಿ ನನಗೆ ಸಿಕ್ಕ ಎಲ್ಲರಿಂದಲೂ ಪ್ರಭಾವಿತನಾಗಿದ್ದೇನೆ ಎನ್ನಬಹುದು.

೩. ಮೊದಲೆಲ್ಲ ಪತ್ರಿಕೆಗಳಿಂದ ನಿಮ್ಮ 'ಹನಿ' ನಿಮಗೇ ವಾಪಾಸ್ ಬರುತ್ತಿದ್ದದ್ದಿದೆಯೇ? ಆಗ ಏನನಿಸುತ್ತಿತ್ತು? ಉತ್ಸಾಹವರ್ಧಕ ಟಾನಿಕ್ ಏನಿತ್ತು?

**ಡುಂ:** ಅದರ ಬಗ್ಗೆಯೇ ಈ ಹಿಂದೆ ಒಮ್ಮೆ ಒಂದು ಕವನ ಬರೆದಿದ್ದೆ.

ಒಳ್ಳೆಯ ಕವಿತೆಯ ಹಿಂದೆ
ವಿಷಾದವಿದೆ
ಎನ್ನುತ್ತಾರೆ

ಒಳ್ಳೆಯ ಕವಿತೆ ಪತ್ರಿಕೆಯಿಂದ
ಹಿಂದೆ ಬಂದಾಗಲೂ
ಅದು ಇರುತ್ತದೆ!

೪. ನಿಮಗೆ ಅತ್ಯಂತ ಖುಷಿಕೊಟ್ಟ ನಿಮ್ಮದೇ ಆದ ಒಂದು ಹನಿಗವನ? (ಒಂದನ್ನು ಆಯ್ಕೆಮಾಡುವುದು ಕಷ್ಟವಾದರೆ ಎರಡು–ಮೂರು ಓಕೆ)

**ಡುಂ:** ಇದನ್ನೂ ಒಂದು ಹನಿಯ ಮೂಲಕವೇ ಉತ್ತರಿಸುತ್ತೇನೆ.
ಬರೆದದ್ದು ಹತ್ತಾದರೆ
ಬರೆಯಲಾಗದ್ದು ಸಾವಿರ
ಹೆಕ್ಕಿದ್ದು ಮುತ್ತಾದರೆ
ಉಳಿದದ್ದು ಸಾಗರ

೫. Honeyಗವನ ರಚನೆಗೂ 'ಮಧು'ಪಾನಕ್ಕೂ ಸಾಮ್ಯ–ಸಂಬಂಧ ಇದೆ ಅಂತೀರಾ?

**ಡುಂ:** ನನ್ನ ಪ್ರಾಮಾಣಿಕ ಅಭಿಪ್ರಾಯವೇನೆಂದರೆ,
ಮಧು ಕುಡಿದರೆ ಕಿಕ್ಕು
ಹನಿ ನುಡಿದರೆ ಕಿಕ್ಕು
ಹೆಚ್ಚಾದರೆ ಎರಡೂ ನಾಲಾಯಕ್ಕು

೬. ನಿಮ್ಮ ಹಾಸ್ಯವನ್ನು ಹಾಸ್ಯವಾಗಿ ಸ್ವೀಕರಿಸದೆ ಯಾರಾದರೂ ಸಿಟ್ಟಿಗೆದ್ದದ್ದಿರಬಹುದು, ಅಂಥ ಪ್ರಸಂಗ ಮತ್ತು ಅದನ್ನು ನೀವು ನಿಭಾಯಿಸಿದ ಬಗೆಯನ್ನು ಹೇಳ್ತೀರಾ?

**ಡುಂ:** ಯಾರೂ ಸಿಟ್ಟಾಗಿಲ್ಲ, ಹೆಂಡತಿಯೊಬ್ಬಳನ್ನು ಬಿಟ್ಟು. ನಿಭಾಯಿಸುತ್ತಿರುವೆ ಅವಳನ್ನು ಈಗ ಮಂಗಳೂರಲ್ಲೇ ಬಿಟ್ಟು!

೭. ಹಾಸ್ಯರಸದ ಅಭಿರುಚಿ, ನಿಮ್ಮ ಅನುಭವದಂತೆ, ಗಂಡಸರಿಗೆ .ಹೆಚ್ಚೋ ಹೆಂಗಸರಿಗೆ ಹೆಚ್ಚು?

**ಡುಂ:** ನಿಸ್ಸಂಶಯವಾಗಿಯೂ ಗಂಡಸರಿಗೇ ಹೆಚ್ಚು. ಇದಕ್ಕೆ ಹೆಂಗಸರ ಅಳುವಿಗಿಂತ ಹೆಚ್ಚಿನ ಪುರಾವೆ ಬೇಕೇ!

೮. ನಿಮಗೆ ಹನಿ ಉದುರಿಸಲು 'ಸೂಕ್ತ ವಾತಾವರಣ' ಯಾವುದು?

**ಡುಂ:** ನಿಜ ಹೇಳಬೇಕೆಂದರೆ,

ಹನಿಗೆ ಪ್ರಶಸ್ತ

ವಾತಾವರಣ

ಪ್ರಯಾಣ ಮತ್ತು ಸ್ನಾನ!

೯. ರಾಜಕೀಯ ವಿಡಂಬನೆ, ಸಮಾಜದ ರೀತಿನೀತಿಗಳ/ಅಂಕುಡೊಂಕುಗಳ ವಿಶ್ಲೇಷಣೆ, ಅಥವಾ ಜಗತ್ತನ್ನು ವಿಭಿನ್ನ ದೃಷ್ಟಿಯಿಂದ ನೋಡುವ ಉತ್ಸಾಹ-ಇವುಗಳ ಪೈಕಿ ನಿಮ್ಮ ಕೃಷಿಗೆ ಯಾವುದು ಒಳ್ಳೆಯ ಗೊಬ್ಬರ? (ನೀವು ಕೃಷಿವಿಜ್ಞಾನದಲ್ಲಿ ಸ್ನಾತಕೋತ್ತರ ಪದವೀಧರರು ಎಂಬ ಹಿನ್ನೆಲೆಯಲ್ಲಿ ಈ ಪ್ರಶ್ನೆ!)

**ಡುಂ:** ಕೊನೆಯದು.

೧೦. 'ಹನಿ'ಗಳಲ್ಲದೆ ನೀವು ನಗೆನಾಟಕಗಳ ಜಡಿಮಳೆ, ಹಾಸ್ಯಲೇಖನಗಳ 'ಅಲ್ಲಲ್ಲಿ ಚದುರಿದಂತೆ ಗುಡುಗಿನಿಂದ ಕೂಡಿದ ಸಾಧಾರಣದಿಂದ ಅತಿಭಾರಿ ಮಳೆ'ಯನ್ನೂ ಸುರಿಸಿದ್ದೀರಿ. ಅವುಗಳ ಪೈಕಿಯೆಲ್ಲ ನಿಮಗೆ ಹೆಚ್ಚು ತೃಪ್ತಿ ಕೊಡುವುದು ಯಾವುದು?

**ಡುಂ:** ಮನಸ್ಸಿನಲ್ಲಿ ಹೊಳೆದದ್ದು ಹಾಳೆಯಲ್ಲಿ ಸರಿಯಾಗಿ ಮೂಡಿಬಂದರೆ ಅದು ಯಾವ ಪ್ರಕಾರದಲ್ಲಿದ್ದರೂ ತೃಪ್ತಿ ಕೊಡುತ್ತದೆ.

೧೧ 'ವಿಜಯ ಕರ್ನಾಟಕ'ದಲ್ಲಿ ಮಾತು-ಕ(ವಿ)ತೆ ಅಂಕಣ ಬರೀತಿದ್ದೀರಲ್ಲ? ಇದರಿಂದ ಫಲಿಸಿದ/ಘಟಿಸಿದ ಒಂದೆರಡು ಸ್ವಾರಸ್ಯಕರ ಘಟನೆಗಳೇನಾದರೂ...?

**ಡುಂ:** ತುಂಬಾ ಇವೆ, ಚುಟುಕಾಗಿ ಹೇಳಲಾಗದಷ್ಟು!

೧೨. ಒಂದು ತರಲೆ/ಅಸಂಬದ್ಧ ಪ್ರಶ್ನೆ. ತೆನಾಲಿರಾಮನಿಗೆ ದೇವಿ ಪ್ರತ್ಯಕ್ಷಳಾದಾಗ ಅವನೇನೋ ಪರಿಹಾಸ್ಯಮಾಡಿ ವಿಕಟಕವಿ ಎನಿಸಿದ ಎಂದು ಕಥೆಯಿದೆ. ನಿಮಗೆ ದೇವಿ ಪ್ರತ್ಯಕ್ಷವಾದರೆ? (ಯಾವ ದೇವಿಯನ್ನೇ ಬೇಕಾದರೂ, ಅಥವಾ ಚಿತ್ರನಟಿ ಶ್ರೀದೇವಿಯನ್ನು ಬೇಕಾದರೂ) ಊಹಿಸಿ!

**ಡುಂ:** ನಾನೊಬ್ಬ ಬ್ಯಾಂಕರ್ ಆದ್ದರಿಂದ ದೇವಿಯೊಂದಿಗೆ ಲೇವಾ-ದೇವಿ!

೧೩. ಅಥವಾ, ಪದಗಳನ್ನು ಸದೆಬಡಿದದ್ದಕ್ಕಾಗಿ/ ಛಿದ್ರವಿಚ್ಛಿದ್ರ ಮಾಡಿದ್ದಕ್ಕಾಗಿ ಅಕ್ಷರಸರಸ್ವತಿಯು ನಿಮ್ಮ ಮೇಲೆ ಮುನಿಸಿದರೆ ಆಕೆಗೆ ನೀವು ಕೊಡುವ ಸಬೂಬು?

**ಡುಂ:** ತಲೆ ಒಡೆಯೋದಕ್ಕಿಂತ, ಜನರನ್ನು/ಪಾರ್ಟಿಗಳನ್ನು ಒಡೆಯೋದಕ್ಕಿಂತ ಪದ ಒಡೆಯೋದೇ ಮೇಲು.

೧೪. ಅಮೆರಿಕನ್ನಡಿಗರಿಗೆ (ಅಥವಾ ಎಲ್ಲ ಎನ್ನಾರೈಗಳಿಗೆ) ನಿಮ್ಮದೊಂದು ಪುಟ್ಟ ಸಂದೇಶ ಅಥವಾ ಪನ್‌ದೇಶ?

ಡುಂ: ಅಲ್ಲಿಯ ಎಲ್ಲ ಸ್ನೇಹಿತರಿಗೂ ನನ್ನ ಶುಭಾಶಯಗಳು.
NRI,NRI,NRI...
ನೀವಲ್ಲದೆ ನಮಗೆ ಇನ್ನಾರೈ?

*

ಹೀಗೆ ಪದಗಳನ್ನು ಹಿಗ್ಗಾಮುಗ್ಗಾ ದಂಡಿಸಿ, ಓದುಗನಿಗೆ ರಂಜನೆಯನ್ನು ದಂಡಿಯಾಗಿ ಕೊಟ್ಟು, ಹನಿಗವನ ಸಾಮ್ರಾಜ್ಯದ ದಂಡಯಾತ್ರೆ ಮಾಡಿ ಗೆದ್ದಿರುವ ಡುಂಡಿರಾಜ್, ಆಧುನಿಕ ಕನ್ನಡ ಕವಿವರೇಣ್ಯರ ಪಟ್ಟಿಯಲ್ಲಿ 'ಡುಂಡಿನಃ ಪದಲಾಲಿತ್ಯಮ್' ಎಂದು ಬಣ್ಣಿಸಿಕೊಳ್ಳಲು ಹದಿನಾರಾಣೆ ಅರ್ಹತೆ ಮತ್ತು ಯೋಗ್ಯತೆ ಉಳ್ಳವರಲ್ಲವೇ?

ಗ್ರಂಥಋಣ:

೧ 'ಹನಿ ಖಜಾನೆ', ಎಚ್. ಡುಂಡಿರಾಜ್, ಅಂಕಿತ ಪುಸ್ತಕ ಬೆಂಗಳೂರು (೨೦೦೦)

೨ 'ಬನ್ನಿ ನಮ್ಮ ಹಾಡಿಗೆ', ಎಚ್. ಡುಂಡಿರಾಜ್, ಸಿವಿಜಿ ಪಬ್ಲಿಕೇಶನ್ಸ್ ಬೆಂಗಳೂರು (೨೦೦೪)

೩. ವಿಚಿತ್ರಾನ್ನ, ಶ್ರೀವತ್ಸ ಜೋಶಿ, ಗೀತಾ ಬುಕ್ ಹೌಸ್(ಮೈಸೂರು೨೦೦೫)

ಶ್ರೀ ಡುಂಡಿರಾಜ್ ಅವರ 'ಹನಿಖಜಾನೆಯಿಂದ'... (ಸಂ.)

**ಹುಟ್ಟುಗುಣ**

ಬೆಣ್ಣೆ ಕದ್ದನೆ?
ಮೊಸರು ಕದ್ದನೆ?
ನಾರಿಯರ ಸೀರೆ ರವಿಕೆ
ಹೃದಯ ಕದ್ದನೆ?
ಹೋಗಲಿ ಬಿಡಿ
ಜೈಲಿನಲ್ಲಿ
ಜನಿಸಿದವ ತಾನೆ?

## ಪುಢಾರಿಯ ಸ್ವಗತ

ಕಾಂಗ್ರೆಸ್ಸಿನಲ್ಲಾದರೂ ಇರು
ಭಾಜಪದಲ್ಲಾದರೂ ಇರು
ದಳದಲ್ಲಾದರೂ ಇರು
ಎಂದೆಂದಿಗು ನೀ
ಸಚಿವನಾಗಿರು

## ಅಚ್ಚ ಕನ್ನಡಿಗ

ನಿಜವಾಗಿಯೂ
ಅಚ್ಚ ಕನ್ನಡಿಗ
ಅಂದರೆ ಇವನೇ.
ಮಾತು ಮಾತಿಗೂ ಅಚ್ಛಾ, ಅಚ್ಛಾ
ಅನ್ನುತ್ತಾನೆ!

## ಹೆಂಡತಿ ಹೇಳಿದ್ದು

ಇನ್ನೆಷ್ಟು ದಿನ ಹೀಗೆ
ಬರೆಯುತ್ತೀರಿ
ಬರೀ ಮಿನಿಗವನ?
ರಚಿಸಬೇಕು
ಇನ್ನಾದರೂ
ಪ್ರಶಸ್ತಿ ತರುವ
MONEY ಗವನ?



## ಅಪರಂಜಿ ಮತ್ತು ಶಿವು

### ಎಚ್.ಕೆ.ಚಂದ್ರಶೇಖರ್

ಕೊರವಂಜಿಯನ್ನು ಕಾಡಿಗೆ ಕಳಿಸಿ ಹದಿನೈದು ವರ್ಷಗಳೇ ಕಳೆದಿದ್ದವು. ಪ್ರತಿ ತಿಂಗಳೂ ಎದುರುನೋಡುತ್ತಿದ್ದ ಹಾಸ್ಯಸಂಚಿಕೆ ಇಲ್ಲದೆ ಖಿನ್ನರಾದ ಓದುಗರು ಯಾರಾದರೂ ಕೊರವಂಜಿಯನ್ನು ಪುನರಾರಂಭಿಸುವರೇ ಎಂದು ಕಾಯುತ್ತಿದ್ದರು. ಈ ವರ್ಷಗಳಲ್ಲಿ ಕೊರವಂಜಿಗೆ ಹಾಸ್ಯಲೇಖನಗಳನ್ನು ಒದಗಿಸುತ್ತಿದ್ದ ಅನೇಕ ಲೇಖಕ ಲೇಖಕಿಯರು ಇತರ ಕನ್ನಡ ಪತ್ರಿಕೆಗಳಿಗೆ ಬರೆಯಲು ಮೊದಲುಮಾಡಿದ್ದರು. ಹಾಸ್ಯಲೇಖನಗಳನ್ನು ಪ್ರಕಟಿಸಿದರೆ ಓದಿ ಸಂತೋಷಿಸುವ ಜನ ಎಂದಿನಂತೆ ಇದ್ದಾರೆ ಎಂಬುದು ಖಚಿತವಾಗಿತ್ತು.

ಆಗ ರಾಶಿಯವರಿಗೆ ತಾವೇ ಸ್ವಂತವಾಗಿ ಪತ್ರಿಕೆಯನ್ನು ನಡೆಸುವ ಉತ್ಸಾಹ ಕುಂದಿತ್ತು. ತುಂಟನಗೆ ದಾಟಿ ಮನಸ್ಸು ಅಧ್ಯಾತ್ಮಕ್ಕೆ ತೊಡಗಿಸಿಕೊಂಡಿತ್ತು. ಆದರೂ ಜನಕ್ಕೆ ನಗುವ ಅವಶ್ಯಕತೆ ಎಂದಿಗಿಂತ ಹೆಚ್ಚಾಗಿಯೇ ಇದೆ ಎಂಬ ಅರಿವು ಅವರಿಗೆ ಇದ್ದದ್ದರಿಂದ ಮಗ ಶಿವಕುಮಾರ್ ಕೈಗೆ ತೆಗೆದುಕೊಂಡಾನೇ?ಎಂದು ಪ್ರಶ್ನಿಸತೊಡಗಿದ್ದರು. ಈ ಹೊಣೆ ದೊಡ್ಡದು ಎಂದು ಅವರು ತಿಳಿದದ್ದರಿಂದ ಪ್ರಕಟಣೆ ಕೈಗೆತ್ತಿಕೊಳ್ಳಲು ಆಗೀಗ ಕೇಳಿದ ಮಂದಿಗೆ ಇಲ್ಲವೆನ್ನುತ್ತಲೇ ಬಂದಿದ್ದರು. ಮಗ ಶಿವಕುಮಾರ್ ಉತ್ತಮ ಹಾಸ್ಯಪ್ರಜ್ಞೆ ಮತ್ತು ವಿಶಾಲ ಓದಿನ ಅನುಭವ ಇದ್ದ ಯುವಕ; ಮನೆಯ ಪರಿಸರದಲ್ಲಿ ನಾಡಿನ ಅನೇಕಾನೇಕ ಸಾಹಿತಿಗಳನ್ನು ಕಂಡು ಸಂಭಾಷಿಸಿ

ಅನುಭವ ಗಳಿಸಿದವ ಎಂಬುದು ಗೊತ್ತಿದ್ದುದರಿಂದ ಹಾಸ್ಯ ಪತ್ರಿಕೆಯ ಪುನರುಜ್ಜೀವನಕ್ಕೆ ಮಗ ಶಿವುವೇ ಸರಿಯಾದ ವಾರಸುದಾರನೆಂದು ರಾಶಿಯವರಿಗೆ ಮನದಟ್ಟಾಗಿತ್ತು. ೧೯೮೨ರಲ್ಲಿ ಕೊರವಂಜಿಯ ಪ್ರಕಟಣೆ ನಿಂತ ಹದಿನೈದು ವರ್ಷಗಳ ನಂತರ ಶಿವಕುಮಾರ್ ಕೊರವಂಜಿಯ ಅಗ್ರಗಣ್ಯ ಬರಹಗಾರ ಆರಾಸೇ ಮತ್ತು ಇನ್ನೊಬ್ಬ ಗೆಳೆಯರೊಂದಿಗೆ ತಂದೆಯನ್ನು ನೋಡಿ ಕೊರವಂಜಿಯನ್ನು ಪುನಃ ಬೆಳಕಿಗೆ ತರುವ ವಿಷಯ ಚರ್ಚಿಸಿದರು. ರಾಶಿಯವರು: 'ಕೊರವಂಜಿಯನ್ನು ಕಾಡಿಗೆ ಕಳಿಸಿದ್ದಾಗಿದೆ. ಆ ಹೆಸರು ಇನ್ನು ಸಾಕು. ಅಂಥದೆ ಬೇರೆ ಹೆಸರಿನ ಮಾಸಪತ್ರಿಕೆ ಹೊರಡಿಸಿದರೆ ನನಗೆ ಸಂತೋಷವೇ...ನಮ್ಮ ಪರಿಚಯದ ಲೇಖಕರು ಎಲ್ಲರೂ ಗೊತ್ತೇ ಇದ್ದಾರಲ್ಲ 'ಎನ್ನುತ್ತ ಬೆನ್ನುತಟ್ಟಿ ಆಶೀರ್ವದಿಸಿದರು

ಸರಿ, ಹೊಸಪತ್ರಿಕೆ ಆರಂಭಿಸುವ ಕೆಲಸ ಮೊದಲಾಯಿತು. ಶಿವಕುಮಾರ್ ಪ್ರಕಟಣೆಯ ಭಾರ ಹೊತ್ತರು. ಅರಾಸೇ ಸಲಹೆಗಾರರಾಗಿ ನಿಂತರು. ಹಿಂದೆ ೧೯೪೨ರ ಯುಗಾದಿಯ ದಿನ ಹೊರಬಂದ ಮೊದಲ ಕೊರವಂಜಿ ಸಂಚಿಕೆಯಲ್ಲಿ ಹೊರಹೊದಿಕೆ ತೆಗೆದೊಡನೆ ಮೊದಲ ಪುಟದಲ್ಲಿ ಅಪರಂಜಿ ಎಂಬ ಶೀರ್ಷಿಕೆಯಲ್ಲಿ ರಾಶಿಯವರೇ ಬರೆದಿದ್ದ ಹಾಸ್ಯದ ತುಣುಕುಗಳು ಇದ್ದವು. ರಾಶಿಯವರ ಇಷ್ಟದಂತೆ ಆ ಶೀರ್ಷಿಕೆಯ ಹೆಸರನ್ನೇ ಹೊಸ ಪತ್ರಿಕೆಗೆ ಇಟ್ಟದ್ದಾಯಿತು. ಕನ್ನಡ ಸ್ಕೂಲಿನಲ್ಲಿ ಹೆಡ್‌ಮೇಷ್ಟರಾಗಿ ಚಿತ್ರದುರ್ಗದಲ್ಲಿ ನೆಲಸಿದ್ದ ಆರ್. ಶೇಷಗಿರಿರಾಯರು ಮೊದಲ ಸಂಪಾದಕರಾಗಿರಲು ಒಪ್ಪಿದರು. ಮುದ್ರಣದ ಕೆಲಸ ಮೈಸೂರಿನಲ್ಲಿ ಪಂಚಾಕ್ಷರಿ ಮುದ್ರಣಾಲಯದಲ್ಲಿ ನಡೆಯಿತು. ರಾಶಿಯವರು ಜೀವಂತರಾಗಿದ್ದಾಗಲೇ, ಅಕ್ಟೋಬರ್ ೧೯೮೩ರಲ್ಲಿ ಅಪರಂಜಿ ಮೊದಲ ಸಂಚಿಕೆ ಹೊರಬಂದಿತು.(ರಾಶಿಯವರು ಜನವರಿ ೧೩, ೧೯೮೪ರಂದು ನಿಧನರಾದರು)ಪತ್ರಿಕೆ ಬಿಡುಗಡೆಯಾದದ್ದು ಚಿತ್ರದುರ್ಗದಲ್ಲಿ! ಶಿವಕುಮಾರ್ ಅಧ್ಯಕ್ಷತೆ ವಹಿಸಿ ಗಾಯಕ ಶಿವಮೊಗ್ಗ ಸುಬ್ಬಣ್ಣ ಅವರನ್ನು ಪ್ರಧಾನ ಅತಿಥಿಯಾಗಿಟ್ಟುಕೊಂಡು ಅಪರಂಜಿ ಬಿಡುಗಡೆ ಮಾಡಲಾಯಿತು. ಮೊದಲ ಸಂಚಿಕೆಯಲ್ಲಿ ರಾಶಿಯವರೇ ಅಪರಂಜಿಯನ್ನು ಹರಸಿ ಹೀಗೆಂದು ಬರೆದಿದ್ದರು: '.....ಈಗ ಕೊರವಂಜಿಯ ಹಳೆಯ ಜೊತೆಗಾರರು 'ಅಪರಂಜಿ'ಯಾಗಿ ನಲಿದಾಡಲು ಮುಂದೆ ಬಂದಿದ್ದಾರೆ. ಅದರಿಂದಾಗಿ ಕೊರವಂಜಿ 'ಅಪರಂಜಿ' ಚಿರಕಾಲ ನಗುತ್ತ ಬಾಳಲಿ ಎಂದು ಬುಡುಬುಡಿಕೆ ಆಡಿಸುತ್ತಾಳೆ. ಹಿಂದೆ ಕೊರವಂಜಿಯಲ್ಲಿ ಬರೆಯುತ್ತಿದ್ದ ಪ್ರಸಿದ್ಧ ಹಾಸ್ಯ ಲೇಖಕರಲ್ಲಿ ಬಹುಮಂದಿ ಅಪರಂಜಿಯನ್ನು ಆರೋಗ್ಯವಾಗಿ ಬಾಳಿಸಲು ಮುಂದೆ ಬಂದಿದ್ದರು. ಸ್ವತಃ ಶಿವಕುಮಾರ್ ಸಣ್ಣ ಕೈಗಾರಿಕೆಯಲ್ಲಿ ಅನುಭವ ಗಳಿಸಿದ್ದವರಾಗಿ ಮೊದಲಲ್ಲಿ ಹಾಸ್ಯ ಬರಹಗಾರರಾಗಿ ಪ್ರಕಟಿಸಿದ 'ಸಾಲಗ್ರಾಮದ ಜೆನ್ ಸಾಧಕ' ರಾಶಿಯವರ ಮೆಚ್ಚಿಗೆ ಗಳಿಸಿತ್ತು. ಒಟ್ಟಿನಲ್ಲಿ ವಿಡಂಬನೆಗೊಂದು ವೇದಿಕೆ

ಸಿದ್ಧವಾಯಿತು. ಪತ್ರಿಕೆಗೆ ಚಂದಾದಾರರನ್ನು ಕೂಡಿಸುವ ಕಾರ್ಯ ಭರದಿಂದ ನಡೆಯಿತು. ಚಿತ್ರದುರ್ಗದಲ್ಲಿ ಇನ್ನೂರು ಮಂದಿ, ಬೆಂಗಳೂರಿನಲ್ಲಿ ನಾನ್ನೂರು ಗ್ರಾಹಕರ ವಿಳಾಸಗಳನ್ನು ಪತ್ತೆ ಹಚ್ಚಿ ಪ್ರಕಟಣೆಯ ವೆಚ್ಚಕ್ಕೆ ಧನಸಂಗ್ರಹಣೆಯ ಕಾರ್ಯ ಬಿರುಸಾಗಿ ಆರಂಭವಾಯಿತು. ಅಪರಂಜಿ ಹೊರಬಂದ ಎಂಟು ತಿಂಗಳವರೆಗೆ ಸಂಪಾದಕರು ಇದ್ದದ್ದು ಚಿತ್ರದುರ್ಗದಲ್ಲಿ, ಸಂಚಿಕೆಯ ಮುದ್ರಣ ನಡೆದದ್ದು ಮೈಸೂರಿನಲ್ಲಿ, ಹಂಚಿಕೆಯ ಹೊಣೆಹೊತ್ತ ಶಿವಕುಮಾರ್ ಇದ್ದದ್ದು ಬೆಂಗಳೂರಿನಲ್ಲಿ! ಮೈಸೂರಿನ ಮುದ್ರಣಾಲಯ ಚಿಕ್ಕದಾಗಿದ್ದು ಅವಶ್ಯ ಸಂಖ್ಯೆಯ ಪ್ರತಿಗಳನ್ನು ಮುದ್ರಿಸಲು ಬಹುಕಾಲ ಬೇಕಾಗುತ್ತಿತ್ತು. ಈ ಕಾರಣಗಳಿಂದಾಗಿ ಎಲ್ಲ ಪ್ರಕಟಣೆಯ ಹಂತಗಳನ್ನೂ ಬೆಂಗಳೂರಿನಲ್ಲಿ ಮಾಡುವುದೇ ಸೂಕ್ತ ಎಂದು ಅರಾಸೇ ಕೂಡ ಅಭಿಪ್ರಾಯಪಟ್ಟ ಮೇಲೆ ಅಪರಂಜಿಯ ಒಡೆತನ ಮತ್ತು ಪ್ರಕಾಶನದ ಹೊಣೆಯನ್ನು ಶಿವಕುಮಾರ್ ತಾವೇ ಕೈಗೆ ತೆಗೆದುಕೊಂಡರು. ಸಂಪಾದಕತ್ವದ ಹೊಣೆಯೂ ಅವರ ಪಾಲಿಗೇ ಬಂತು. ಅವರ ಆಪ್ತಸ್ನೇಹಿತರಾಗಿದ್ದ ಸಾಹಿತಿ ನಿರಂಜನ, ಅಪರಂಜಿ ಪ್ರಕಟಣೆಯ ನಿರ್ಧಾರದ ಸಮಯದಲ್ಲಿ, ಕೊರವಂಜಿಯ ಮುಖಚಿತ್ರವನ್ನು ಉಪಯೋಗಿಸುವುದು ಬೇಡ–ಅಪರಂಜಿ ತನ್ನದೇ ಪರಂಪರೆ ಆರಂಭಿಸಲಿ ಎಂದು ಸಲಹೆ ಮಾಡಿದ್ದರಿಂದ ವ್ಯಂಗ್ಯ ಚಿತ್ರರಚನೆಯಲ್ಲಿ ಖ್ಯಾತನಾಮರಾದ ಚಂದ್ರನಾಥ ಆಚಾರ್ಯ ಅಪರಂಜಿಗಾಗಿಯೇ ಹೊಸ ಚಿತ್ರ ಬರೆದುಕೊಟ್ಟರು. ಮೊದಲು ತಯಾರಾದ ಚಿತ್ರ ಧರಿಸಿ ಎಂಟು ವರ್ಷಗಳ ಪ್ರಕಟಣೆಯ ನಂತರ ಇನ್ನೊಮ್ಮೆ ಮುಖಚಿತ್ರದ ಬದಲಾವಣೆ ಆಗಿದೆ. ಈಗಿನ ಮುಖಚಿತ್ರದ ಹೆಣ್ಣು ತುಂಟನಗೆ ಮಿಂಚುವ ಸರಸಿ ಯುವತಿ. ಆಭರಣಗಳ ಚೀಲ ಹೊತ್ತು ಎಡಗೈಯಲ್ಲಿ ಅಪರಂಜಿ ಒಡವೆ ಎತ್ತಿ ಹಿಡಿದಿದ್ದಾಳೆ.

ಅಪರಂಜಿಯನ್ನು ತಪ್ಪದೆ ಪ್ರತಿ ತಿಂಗಳ ಐದರ ದಿನ ಅಂಚೆಯಲ್ಲಿ ತಲುಪಿಸುವ ಪದ್ಧತಿ ಉದ್ದಕ್ಕೂ ನಡೆದುಬಂದಿದೆ. ಲೇಖನಗಳನ್ನು ಪ್ರತಿ ತಿಂಗಳ ೨೦ರೊಳಗೆ ಸ್ವೀಕರಿಸಿ ಅದರ ಸಂಪಾದಕೀಯ ಮತ್ತಿತರ ಸಿದ್ಧತೆಗಳು ಮುಗಿದು ಸಂಚಿಕೆ ಗ್ರಾಹಕರನ್ನು ತಲುಪಲು ಸಿದ್ಧವಾಗುತ್ತದೆ. ಅಪರಂಜಿಯ ಪ್ರಕಟಣೆಗೆ ಭದ್ರವಾದ ಬುನಾದಿ ಹಾಕುವ ಉದ್ದೇಶದಿಂದ ೧೯೯೯ರಲ್ಲಿ ಶಿವಕುಮಾರ್ ಅವರು ಕೊರವಂಜಿ–ಅಪರಂಜಿ ಟ್ರಸ್ಟ್ ಎಂಬ ದತ್ತಿ ನಿರ್ಮಾಣ ಮಾಡಿ ತಾವೇ ನಿರ್ವಾಹಕ ಅಧಿಕಾರಿಯಾದರು. ದತ್ತಿಯ ಇತರ ಅಧಿಕಾರಿಗಳೆಂದರೆ: ಬೇಲೂರು ರಾಮಮೂರ್ತಿ, ಜಿ.ನಾಗೇಶ್, ವಿ.ಆರ್.ನಾಥ್, ಎ.ಆರ್ ರಾಜಗೋಪಾಲ್ ಮತ್ತು ಕೆ. ರವೀಂದ್ರ. ಅರಾಸೇ ಗೌರವ ಸಲಹೆಗಾರರಾಗಿ ಉಳಿದಿದ್ದಾರೆ. ಸಂಪಾದಕತ್ವ ಈಗ ಮಂಡಲಿಯೊಂದರ ಜವಾಬ್ದಾರಿಯಾಗಿದೆ. ಮುಖ್ಯ ಸಂಪಾದಕರಾದ ಶಿವಕುಮಾರ್ ಜತೆಗೆ ಬೇಲೂರು ರಾಮಮೂರ್ತಿ ಉಪಸಂಪಾದಕರಾಗಿದ್ದು ಮಂಡಲಿಯಲ್ಲಿ ಬಾಗೂರು ರಾಮಚಂದ್ರ, ಎಚ್. ಎಸ್. ಆನಂದ ಮತ್ತು ಎಚ್. ಗೋಪಾಲಕೃಷ್ಣ ಇದ್ದಾರೆ.

೧೯೯೪ಳ ಅಪರಂಜಿಯ ಹತ್ತನೆಯ ಜನ್ಮದಿನೋತ್ಸವ ವರ್ಷ. ಭಾರೀ ಜನಸಂದಣಿ ಸೇರಿದ ಈ ಹುಟ್ಟುಹಬ್ಬ ಬಹು ಸಂಭ್ರಮದಿಂದ ಬೆಂಗಳೂರಿನ ಭಾರತೀಯ ವಿದ್ಯಾ ಭವನದ ಸಭಾಂಗಣದಲ್ಲಿ ನಡೆಯಿತು. ಈ ವಾರ್ಷಿಕದ ನಂತರ ೧೯೯೫ರ ನವೆಂಬರ್ ಒಂದರಂದು ರಾಜ್ಯೋತ್ಸವದ ದಿನ ನಗರದಲ್ಲಿ ಹಾಸ್ಯೋತ್ಸವ ನಡೆಸಲು ಕೊರವಂಜಿ–ಅಪರಂಜಿ ಟ್ರಸ್ಟ್ ಮೊದಲಿಟ್ಟಿತು. ಆ ವರ್ಷ ಭಾರತೀಯ ವಿದ್ಯಾ ಭವನದಲ್ಲಿ ನಡೆದ ಹಾಸ್ಯೋತ್ಸವ ಸಮಾರಂಭಕ್ಕೆ ಜನ ಕಿಕ್ಕಿರಿದಿದ್ದು ಸಭಾಂಗಣ ಸಾಕಾಗದೆ ಬಂದದ್ದರಿಂದ ೧೯೯೬ರ ಉತ್ಸವ ಜಯನಗರದ ಎಚ್. ನರಸಿಂಹಯ್ಯ ಸಭಾಂಗಣದಲ್ಲಿ ನಡೆಯಲು ಆರಂಭವಾಯಿತು. ಆ ವರ್ಷದ ಉತ್ಸವವನ್ನು ದಿಸೆಂಬರ್ ೨೫ರ ದಿನ ಆಚರಿಸಲಾಯಿತು. ಕನ್ನಡ ನಾಡಿನಲ್ಲಿ ಹಾಸ್ಯಬ್ರಹ್ಮರೆಂದೇ ಖ್ಯಾತನಾಮರಾದ ನಾ.ಕಸ್ತೂರಿಯವರ ಜನ್ಮದಿನೋತ್ಸವ ಡಿಸೆಂಬರ್ ೨೫ ಆದ್ದರಿಂದ ಮುಂದೆ ಪ್ರತಿ ವರ್ಷವೂ ಅದೇ ದಿನ ಆಚರಿಸಲು ಟ್ರಸ್ಟ್ ನಿರ್ಧರಿಸಿತು. ದಿನವಿಡೀ ನಡೆಯುವ ಈ ಸಮಾರಂಭದಲ್ಲಿ ಪ್ರತಿವರ್ಷವೂ ಜನ ಕಿಕ್ಕಿರಿದು ನೆರೆಯುತ್ತಾರೆ. ಸಭಾಂಗಣದ ಹೊರಗಿನ ವಿಶಾಲ ಆವರಣದಲ್ಲಿ ಭಾರೀ ಟೆಲಿವಿಷನ್ ಪರದೆಗಳಲ್ಲಿ ಕಾರ್ಯಕ್ರಮ ವೀಕ್ಷಿಸುವ ಅನುಕೂಲ ಮಾಡಿಕೊಡುವುದರಿಂದ ಅಸಂಖ್ಯಾತ ಜನ ಕಾರ್ಯಕ್ರಮಗಳನ್ನು ನೋಡಲು ಸಾಧ್ಯವಾಗಿದೆ. ಅಲ್ಲದೆ ಈ ಬಹು ಜನಪ್ರಿಯ ವಾರ್ಷಿಕ ಉತ್ಸವ ಟೆಲಿವಿಷನ್‌ನಲ್ಲೂ ಪ್ರಸಾರವಾಗುತ್ತದೆ. ವರ್ಷವೆಲ್ಲ ಆಸಕ್ತ ಜನ ಎದುರು ನೋಡುವ ಈ ಪ್ರಚಂಡ ಉತ್ಸವದಲ್ಲಿ ಯಾರಾದರೊಬ್ಬ ಪ್ರಮುಖ ಹಾಸ್ಯ 'ಸಾಹಿತಿಯ ಹೆಸರಿನಲ್ಲಿ ಕಾರ್ಯಕ್ರಮಗಳು ಜರುಗುತ್ತವೆ. ೨೦೦೬ರಲ್ಲಿ ಟಿ. ಸುನಂದಮ್ಮನವರ ಹೆಸರಿನಲ್ಲಿ ಹಾಸ್ಯೋತ್ಸವ ನಡೆಯಿತು. ನಾಡಿನ ಸುಪ್ರಸಿದ್ಧ ಹಾಸ್ಯ ಪಟುಗಳನ್ನು ಆ ದಿನ ನೋಡುವ ಅವಕಾಶ ನಗರದ ಹಾಸ್ಯಪ್ರೇಮಿಗಳಿಗೆ ದೊರೆಯುತ್ತದೆ. ಈಗ ಕನ್ನಡ ನಾಡಿನಲ್ಲಿ ಇಂಗ್ಲೆಂಡ್ ಅಮೆರಿಕಗಳಲ್ಲಿದ್ದಂತೆ ಸಭಿಕರೆದುರು ನಿಂತು ಹಾಸ್ಯ ಚಟಾಕಿಗಳನ್ನು ಹಾರಿಸುತ್ತ ಮನರಂಜಿಸುವ ಹಾಸ್ಯಪಟುಗಳ ಭಾರೀ ಸಮೂಹ ನಿರ್ಮಾಣವಾಗಿದೆ. ಇದು ಕಳೆದ ಸುಮಾರು ಐದಾರು ವರ್ಷಗಳಿಂದೀಚೆಗೆ ಪ್ರಚಲಿತವಾಗಿರುವ ಅತ್ಯಂತ ಆಕರ್ಷಕ ಮನರಂಜನೆಯ ಸಂಭ್ರಮ! ಪಟಟನೆ ಒಂದಾದಮೇಲೊಂದು ಹಾಸ್ಯದ ತುಣುಕುಗಳನ್ನು ಚಿಮ್ಮಿಸುವ ಹಾಸ್ಯಗಾರರಿದ್ದರಂತೂ ಜನ ಬಿದ್ದು ಬಿದ್ದು ನಗುವ ದೃಶ್ಯ ಸಾಮಾನ್ಯವಾಗಿರುತ್ತದೆ.

ಅಪರಂಜಿಗೆ ಬರಹಗಾರರ ಸಂಸಾರವೇ ಒಂದು ಸೃಷ್ಟಿಯಾಗಿದೆ– ಕೊರವಂಜಿಯಲ್ಲಿದ್ದಂತೆ. ಅನೇಕರು ಕೊರವಂಜಿಯ ಬಳಗದಲ್ಲಿದ್ದವರೇ. ಶಿವಕುಮಾರ್ ಅವರ ಸೋದರ ಡಾ.ಓಂಪ್ರಕಾಶ್ ಅವರು ಕೊರವಂಜಿಯ ಕುಹಕಿಡಿಗಳಿದ್ದಂತೆ ಅಪರಂಜಿ ಕಿಡಿಗಳನ್ನು ಸಿಡಿಸುತ್ತಾರೆ. ಇತರ ಖ್ಯಾತ ಲೇಖಕರೆಂದರೆ ಶ್ರೀನಿವಾಸ ವೈದ್ಯ, ಲೀಲಾ

ಮಿರ್ಲೆ (ಶಿವಕುಮಾರ್ ಅವರ ಅಕ್ಕ) , ಭುವನೇಶ್ವರಿ ಹೆಗಡೆ., ಬಾಗೂರು ಚಂದು, ಅ.ರಾ ಮಿತ್ರ ಮುಂತಾದವರು. ವ್ಯಂಗ್ಯ ಚಿತ್ರಕಾರರಾಗಿ ಬಾಗೂರು ಮಾರ್ಕಂಡೇಯ, ಆರಗಂ, ಅನಂತಯ್ಯ ಮುಂತಾದವರನ್ನು ಹೆಸರಿಸಬಹುದು. ಹಿಂದೆ ಕೊರವಂಜಿಗೆ ಬರೆಯುತ್ತಿದ್ದ ಲೇಖಕರಲ್ಲಿ ಪ್ರಮುಖರಾದವರು ದಾಶರಥಿ ದೀಕ್ಷಿತ್, ಟಿ.ಸುನಂದಮ್ಮ, ಅರಾಸೇ, ಎ.ಎಸ್.ರಾಮಕೃಷ್ಣ, ಕೇಫ಼(ಕೇಶವಮೂರ್ತಿ)ಮುಂತಾದವರಿದ್ದಾರೆ. ಈಚಿನ ವರ್ಷಗಳಲ್ಲಿ ಬೇಲೂರು ರಾಮಸ್ವಾಮಿ, ಎಚ್. ಗೋಪಾಲಕೃಷ್ಣ, ಅಣ್ಣಾಸ್ವಾಮಿ ಮೊದಲಿಯಾರ್, ವೈ.ಎನ್.ಗುಂಡೂರಾವ್, ಸಿ.ಆರ್.ಸತ್ಯ ಮುಂತಾದವರಿದ್ದಾರೆ. ಎಸ್ ರಾಮಮೂರ್ತಿ ಗುಂಡಾಯಣವೆಂಬ ಹಾಸ್ಯ ಸನ್ನಿವೇಶಗಳ ಧಾರಾವಾಹಿಯನ್ನೇ ಅಪರಂಜಿಯಲ್ಲಿ ಸೃಷ್ಟಿಸಿದರು.

ಅಪರಂಜಿಗೆ ೨೦ ವರ್ಷ ತುಂಬಿದಾಗ ಅಪರಂಜಿ–ರಸರಂಜಿ ಎಂಬ ಹೆಸರಿನಲ್ಲಿ ಅಪರಂಜಿಯಲ್ಲಿ ಅದುವರೆಗೆ ಪ್ರಕಟವಾಗಿದ್ದ ಲೇಖನಗಳಲ್ಲಿ ಕೆಲವನ್ನು ಆಯ್ದು ಕೊರವಂಜಿ–ಅಪರಂಜಿ ಟ್ರಸ್ಟ್ ಪ್ರಕಟಿಸಿತು. ಇಪ್ಪತ್ತನೆಯ ಶತಮಾನದ ಕೊನೆಯ ಎರಡು ದಶಕಗಳ ನಗೆಸಾಹಿತ್ಯ ಸೃಷ್ಟಿಯಲ್ಲಿ ಅಪರಂಜಿ ವಹಿಸಿದ ಪಾತ್ರವನ್ನು ಈ ಸಂಕಲನ ಪ್ರತಿನಿಧಿಸುತ್ತದೆ. ಅಂತೆಯೇ ಎರಡು ದಶಕಗಳಲ್ಲಿ ಹರಿದ ಹಾಸ್ಯವಾಹಿನಿಯ ರೂಪರೇಷೆಗಳನ್ನು ತಿಳಿಯಲು ಈ ಗ್ರಂಥ ಸಹಕರಿಸುತ್ತದೆ.

ಕನ್ನಡದ ಹಾಸ್ಯಪರಂಪರೆಯನ್ನು ರಾಶಿಯವರ ನಂತರ ಬಹು ಸಮರ್ಥವಾಗಿ ಮುಂದುವರೆಸಿಕೊಂಡು ಹೋಗಿರುವ ಅವರ ಪುತ್ರ ಶಿವಕುಮಾರ್ ಇಂದಿನ ಹಾಸ್ಯಲೇಖಕರ ಸೃಷ್ಟಿಗೆ ಬಹುಮಟ್ಟಿಗೆ ಕಾರಣರಾಗಿದ್ದಾರೆ ಎಂಬುದು ನಿರ್ವಿವಾದ. ಅವರು ಆರಂಭಿಸಿದ ಹಾಸ್ಯಪತ್ರಿಕೆ ಅಪರಂಜಿಯ ಮೂಲಕ 'ಅಪರಂಜಿ ಶಿವು' ಎಂದೇ (ಅ)ಪ್ರಖ್ಯಾತರಾಗಿರುವ ಶಿವಕುಮಾರ್ ತಂದೆಯಂತೆಯೇ ಅಸಾಮಾನ್ಯ ಹಾಸ್ಯಪ್ರಜ್ಞೆ ಮತ್ತು ಬರಹದ ಚಾತುರ್ಯ ಹೊಂದಿರುವ ವಿಶಿಷ್ಟ ವ್ಯಕ್ತಿ. ಡಿಸೆಂಬರ್ ೧೩, ೧೯೪೦ರಲ್ಲಿ ಶಿವು ಹುಟ್ಟಿದ್ದು ರಾಶಿಯವರ ದೊಡ್ಡ ಸಂಸಾರದಲ್ಲಿ. ಮೂವರು ಅಕ್ಕಂದಿರು, ಇಬ್ಬರು ತಮ್ಮಂದಿರು. ತಾಯಿ–ತಂದೆ, ಸೋದರಿಕೆಯ ಬಳಗದವರು ಎಲ್ಲರೂ ಒಂದೇ ಮನೆಯಲ್ಲಿ. 'ದೊಡ್ಡ ಹಡಗು ಕಟ್ಟಿಕೊಂಡಿದ್ದೀಯಲ್ಲಪ್ಪಾ, ದಡ ಹೇಗೆ ಸೇರಿಸ್ತೀಯಾ?' ಎಂದು ಮಿತ್ರರು ಸಹಾನುಭೂತಿ ವ್ಯಕ್ತಪಡಿಸುತ್ತಿದ್ದಂಥ ಮನೆ. ಬಳೇಪೇಟೆಯ ದವಾಖಾನೆ ಆ ವೇಳೆಗಾಗಲೇ ಅತ್ಯಂತ ಜನಪ್ರಿಯವಾಗಿದ್ದು ತಂದೆ ಮಕ್ಕಳ ಜತೆ ಕಾಲ ಕಳೆಯುವುದಿರಲಿ, ಆಗೊಮ್ಮೆ ಈಗೊಮ್ಮೆ ಭೇಟಿ ಮಾಡುವುದೂ ದುಸ್ತರವಾಗುತ್ತಿತ್ತು. ಶಿವು ತಂದೆಯವರು ಕಾಲವಾದ ನಂತರ ಬರೆದ ಸ್ಮರಣಲೇಖನದಲ್ಲಿ ತಮ್ಮ ಚಿಕ್ಕಂದಿನ ದಿನಗಳನ್ನು ನೆನೆದಿದ್ದಾರೆ. ಡಾ.ಶಿವರಾಂ ಅವರ ಶಿಸ್ತಿನ ನಡಾವಳಿಕೆ, ಗಡಸು ಮುಖಭಾವ,

ಮತ್ತು ಅವರು ಸದಾ ಸಾಹಿತ್ಯಕಾರ್ಯವೋ ವೈದ್ಯಕೀಯವೋ, ಮಿತ್ರರೊಂದಿಗೆ ಸಂಭಾಷಣೆಯೋ ಏನಾದರೊಂದರಲ್ಲಿ ಮಗ್ನವಾಗಿರುತ್ತಿದ್ದರಿಂದ ಮನೆಯಲ್ಲಿದ್ದ ಮಕ್ಕಳ ಮನಸ್ಸಿನಲ್ಲಿ ಸಹಜವಾಗಿಯೇ ಭಯ ಸಂಕೋಚಭಾವಗಳಿದ್ದವು . ಎಲ್ಲ ವ್ಯವಹಾರಗಳೂ ತಾಯಿಯ ಮೂಲಕವೇ ನಡೆಯಬೇಕು. ಫೀಸ್ ಪಡೆಯುವ ಕ್ರಿಯೆ ಮಾತ್ರ ಇದಕ್ಕೆ ಅಪವಾದವಾಗಿತ್ತು. ಫೀಸನ್ನು ಮಕ್ಕಳು ತಂದೆಯವರಿಂದ ನೇರವಾಗಿ ಕೇಳಿ ಪಡೆಯಬೇಕಾಗಿತ್ತು. ಹಾಗೆಂದು ತಂದೆ ಕಟ್ಟಪ್ಪಣೆ ಮಾಡಿದ್ದರು. ಇದರಿಂದಾಗಿ ತಿಂಗಳಿಗೊಮ್ಮೆ ಅವರನ್ನು ಬಲವಂತದಿಂದಲಾದರೂ ಭೇಟಿ ಮಾಡುವ ಶಿಕ್ಷೆ! ಫೀಸು ಕೇಳುವ ದಿನ ಹತ್ತಿರ ಬರುತ್ತಿದ್ದ ಹಾಗೆ ಆತಂಕ, ಸಂಕೋಚ, ಭಯ ಎಲ್ಲ ಭಾವನೆಗಳೂ ಬರುತ್ತಿದ್ದವಂತೆ. ಈ ಮಹತ್ಕಾರ್ಯಕ್ಕೆ ಮುಹೂರ್ತವನ್ನೂ ಶಿವು ನಿರೀಕ್ಷಿಸಬೇಕಾಗಿತ್ತು. ತಂದೆ ಸ್ನಾನ ಮುಗಿಸಿ ತಮ್ಮ ಕೊಠಡಿಯಲ್ಲಿ ಉಡುಪು ಧರಿಸುತ್ತಿದ್ದಾಗ ಹುಲಿಯನ್ನು ಅದರ ಗುಹೆಯಲ್ಲೇ ನೋಡುವ ಹಾಗೆ ಶಿವು ಗಟ್ಟಿಮನಸ್ಸು ಮಾಡಿ ನೋಡಲು ಹೋಗುತ್ತಿದ್ದರಂತೆ. ರಾಶಿಯವರು ಕನ್ನಡಿ ಮುಂದೆ ನಿಂತು ಬಿಳೀ ಪ್ಯಾಂಟು, ಬಿಳೀ ಷರಟು ಧರಿಸಿ ಗಂಜಿ ಹಾಕಿ ಇಸ್ತ್ರಿ ಮಾಡಿದ ಕಾಲರ್ ಪಟ್ಟಿಗೆ ಬೋಟೈ ಕಟ್ಟುತ್ತಿದ್ದ ಸಮಯದಲ್ಲಿ ಶಿವು ಚಿರತೆಯನ್ನು ನೆನಪಿಸುತ್ತಿದ್ದ ಚುಕ್ಕಿ ಚುಕ್ಕಿ ಬೋಟೈ ನೋಡುತ್ತ ಉಗುಳು ನುಂಗಿ 'ಫೀಸ್ ಬೇಕು...' ಅಂತ ಕ್ಷೀಣಧ್ವನಿಯಲ್ಲಿ ಕೇಳುವುದು. ತಂದೆಯವರಿಂದ 'ಎಷ್ಟು' ಅಂತ ಮರುಪ್ರಶ್ನೆ.

'ಒಂದೂಕಾಲು ರೂಪಾಯಿ'

'ತಿಂಡಿಗೇನಾದರೂ ಬೇಡವೇನು?'

'ಬೇಕು'

'ಮತ್ತೆ ಯಾಕೆ ಅದನ್ನೂ ಸೇರಿಸಿ ಹೇಳಲಿಲ್ಲ?'

ನಿರುತ್ತರ.

'ಎಲ್ಲ ಸೇರಿ ಹೇಳು'

'ಮೂರು ರೂಪಾಯಿ'

ಅವರು ಪರ್ಸ್ ತೆಗೆದು ಎಣಿಸಿಕೊಟ್ಟ ಮೂರು ರೂಪಾಯಿ ಪಡೆದು ರೂಮಿನಿಂದ ಬರುವ ಹೊತ್ತಿಗೆ ಏನೋ ದಿಗ್ವಿಜಯ ಸಾಧಿಸಿದ ಭಾವನೆ! ಇಂಥ ಅನುಭವಗಳ ಮೂಲಕ ಚಿಕ್ಕ ವಯಸ್ಸಿನಲ್ಲೇ ಹಣದ ವೆಚ್ಚದ ಬಗ್ಗೆ ಶಿಸ್ತು, ಖರ್ಚಿನ ನಿಯಂತ್ರಣದ ಬಗ್ಗೆ ಪರಿಶ್ರಮ ಸಿಗುತ್ತಿತ್ತು ಎನ್ನುತ್ತಾರೆ ಶಿವು.

ಶಿವು ಎಲ್ಲರಂತೆ ಸ್ಕೂಲಿನಲ್ಲಿ ಇಂಗ್ಲಿಷ್ ಮಾಧ್ಯಮ ಬೇಕೆಂದು ಕೇಳಲು

ತಂದೆಯವರ ಅನುಮತಿ ಕೇಳಿದರಂತೆ. ಕನ್ನಡದ ಬಗ್ಗೆ ಇಷ್ಟೆಲ್ಲ ಕೆಲಸ ಮಾಡುತ್ತಿರುವಾಗ (ಆಗ ಕೊರವಂಜಿಯ ಪ್ರಕಟಣೆ ಮತ್ತಿತರ ಗ್ರಂಥಗಳ ಪ್ರಕಟಣೆ ಭರದಿಂದ ಸಾಗಿತ್ತು) ನನ್ನ ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮ ಕೊಡಿ ಅಂತ ಯಾವ ಬಾಯಿಂದ ಕೇಳಲಿ? ಎನ್ನುತ್ತ ಮಗನಿಗೆ ಕನ್ನಡ ಮಾಧ್ಯಮವನ್ನೇ ಕೊಡಿಸಿದರಂತೆ. ಆದರಿಂದ ಶಿವು ತಮಗೆ ಪ್ರಯೋಜನವೇ ಆಯಿತು ಎನ್ನುತ್ತಾರೆ.

ಮಲ್ಲೇಶ್ವರದಲ್ಲಿರುವ ಮನೆಯ ಡ್ರಾಯಿಂಗ್ ರೂಮಿನ ಕಪಾಟುಗಳಲ್ಲಿ ಸಹಸ್ರಗಟ್ಟಲೆ ಗ್ರಂಥರಾಶಿಯಿದ್ದುದರಿಂದ ಶಿವುಗೆ ಓದಲು ವೈವಿಧ್ಯಮಯ ಪುಸ್ತಕಗಳು ಸಿಕ್ಕುತ್ತಿದ್ದವು. ಶಿವು ಎಳೆಯುವನಿದ್ದಾಗಲೇ ಮನೆಯಲ್ಲಿ ಕೊರವಂಜಿಯ ಅವತಾರವಾಗಿದ್ದುದರಿಂದ ನಗೆ ಬರಹಗಾರರು ಸದಾ ತಂದೆಯನ್ನು ಭೇಟಿಮಾಡಲು ಬರುತ್ತಿದ್ದರು. ಅವರ ಮಾತುಕತೆ ಕೇಳುತ್ತ ಕನ್ನಡ ಸಾಹಿತ್ಯದ ಬಗ್ಗೆ, ಹಾಸ್ಯಪ್ರಜ್ಞೆಯ ಬಗ್ಗೆ ಅಭಿರುಚಿ ಬೆಳೆದದ್ದು ಆಶ್ಚರ್ಯವೇನಲ್ಲ. ಮನೆಗೆ ಸಮೀಪದಲ್ಲೇ ವಾಸಿಸುತ್ತಿದ್ದ ಶ್ರೀರಂಗ ಅಲ್ಲದೆ ನಾ.ಕಸ್ತೂರಿ ಮತ್ತು ಜಿ.ಪಿ.ರಾಜರತ್ನಂ ಇವರೆಲ್ಲರೂ ಬಹು ಸಾಮಾನ್ಯವಾಗಿ ಮನೆಗೆ ಬರುತ್ತಿದ್ದವರು. ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ ಶ್ರೀರಾಮಪುರದ ಬಿ.ಪುಟ್ಟಸ್ವಾಮಯ್ಯ ತಮ್ಮ ಪುಸ್ತಕಗಳನ್ನು ರಾಶಿಯವರೊಂದಿಗೆ ಚರ್ಚಿಸಲು ಮನೆಗೆ ಬರುತ್ತಿದ್ದರು . ಆ ಕಾಲಕ್ಕೆ ಸಂಸ್ಕೃತ ಓದಿಕೊಂಡಿದ್ದ ಒಬ್ಬ ಮಿಲಿಟರಿ ಅಧಿಕಾರಿ ಎಫ್. ಡಬ್ಲ್ಯೂ. ಬೇನ್ ಇಂಗ್ಲಿಷಿಗೆ ಭಾಷಾಂತರಿಸಿದ್ದ ಪ್ರೇಮ ಕತೆಗಳು ಭಾರತೀಯರ ಬಗ್ಗೆ ಅಭಿಮಾನ ಸೂಸುವಂಥದ್ದಾದ್ದರಿಂದ ಅವುಗಳನ್ನೆಲ್ಲ ಶಿವು ಉತ್ಸಾಹದಿಂದ ಓದಿದರು. ಎರಡು ತಿಂಗಳಿಗೊಂದು ಬಾರಿ ಶಿವರಾಮ ಕಾರಂತರು ಬರುತ್ತಿದ್ದುದುಂಟು. ವರ್ಷಕ್ಕೊಮ್ಮೆ ಬೇಂದ್ರೆಯವರು, ಜಿ.ಬಿ.ಜೋಷಿ ನಿರಂಜನ, ಲಂಕೇಶ್, ಗಿರೀಶ ಕಾರ್ನಾಡ, ಹೆಗ್ಗೋಡಿನ ಸುಬ್ಬಣ್ಣ– ಹೀಗೆ ಕನ್ನಡ ಸಾಹಿತಿಗಳು ಸದಾ ಮನೆಗೆ ಬರುತ್ತಿದ್ದು ಮನೆಯ ಮಕ್ಕಳಿಗೆಲ್ಲ ಸಾಹಿತ್ಯದ ಸುಗ್ಗಿ! ಜೇಮ್ಸ್ ಥರ್ಬರ್, ಸ್ಟೀಫನ್ ಲೀಕಾಕ್ ಪುಸ್ತಕಗಳನ್ನು ಶಿವು ಕಿರುಯೌವನದಲ್ಲೇ ಓದಿದ್ದರು. ಆರ್ಥರ್ ಕೀಸ್ಲರ್‌ನ 'ದಿ ಆಕ್ಟ್ ಆಫ್ ಕ್ರಿಯೇಷನ್' ನಲ್ಲಿ ಮನುಷ್ಯ ಏಕೆ ನಗುತ್ತಾನೆ ಎಂಬುದರ ಬಗ್ಗೆ ನಡೆಸಿರುವ ವಿವೇಚನೆಯನ್ನು ಚಿಕ್ಕಂದಿನಲ್ಲೇ ಓದಿ ತಿಳಿದುಕೊಂಡಿದ್ದರು. ಟೆಲಿವಿಷನ್ ಇಲ್ಲದ ಆ ಕಾಲದಲ್ಲಿ ಈ ಬಗ್ಗೆ ವಿಶಾಲವಾದ ಓದು ಮತ್ತು ಕೊರವಂಜಿ ನೀಡುತ್ತಿದ್ದ ಪ್ರಭಾವ ಅತ್ಯಂತ ಉಪಯುಕ್ತವಾಗಿ ಪರಿಣಮಿಸಿತು. ಆಗಲೇ ಉತ್ತಮ ಜೀವನಧ್ಯೇಯಗಳನ್ನು ರೂಢಿಸಿಕೊಂಡಿದ್ದರು ಎನ್ನುತ್ತಾರೆ ಅವರ ಅಕ್ಕ ವಿಮಲಾ ಶೇಷಾದ್ರಿ. ಚಿಕ್ಕಂದಿನಲ್ಲಿ ಅಕ್ಕಂದಿರು ಶಿವುಗೆ ಎಂಜಿನಿಯರಿಂಗ್ ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಕೋಟು ಹೊಲಿಸಿಕೊ ಎಂದು ಒತ್ತಾಯ ಮಾಡಿದರಂತೆ. ಆಗ ಶಿವು ಅದೆಲ್ಲ ಈಗ ಬೇಡ. ಈಗ ನಾನು ಯಾರು ಅಂತ ಗೊತ್ತಿರುವವರಿಗೆ ನನ್ನ ಸ್ವಭಾವ ಗೊತ್ತು.

'ನಾನು ಯಾರು ಅಂತ ಗೊತ್ತಿಲ್ಲದವರು ನನ್ನನ್ನು ಗಮನಿಸುವುದೇ ಇಲ್ಲ. ಈಗ ಅವಶ್ಯವಾದದ್ದು ಮಾತ್ರ ಇರಲಿ. ಮಿಕ್ಕದ್ದೆಲ್ಲ ನನ್ನ ಕಾಲ ಮೇಲೆ ನಾನು ನಿಂತಾಗ' ಎಂದುಬಿಟ್ಟರಂತೆ. ಮನೆಯ ಮಕ್ಕಳೆಲ್ಲ ಉತ್ತಮ ಲೇಖಕರು. ತಮ್ಮ ಓಂಪ್ರಕಾಶ್ ಅಪರಂಜಿಗೆ ಹಾಸ್ಯಪ್ರಕಾರಗಳನ್ನು ಒದಗಿಸುತ್ತಾರೆ. ಇನ್ನೊಬ್ಬ ತಮ್ಮ ರಾಮಸ್ವಾಮಿ ಕವಿತೆ ರಚಿಸುತ್ತಾರೆ.

ಓದು ಮುಗಿಸಿ ಯಂತ್ರವಿಜ್ಞಾನದ ಎಂಜಿನಿಯರಿಂಗ್‌ನಲ್ಲಿ ಪದವಿ ಪಡೆದು ಇಂಗ್ಲೆಂಡಿನಲ್ಲಿ ಉನ್ನತ ಶಿಕ್ಷಣ ಪಡೆದ ತರುಣದಲ್ಲಿ ಜನ ಸಾಮಾನ್ಯರಿಗೆ ವಿಜ್ಞಾನದ ಬಗ್ಗೆ ತಿಳಿವು ಕೊಡುವ ಉತ್ಕಟ ಇಚ್ಚೆಯಿಂದ 'ಯಂತ್ರಕತೆ' ಎಂಬ ಪುಸ್ತಕ ಬರೆದರು. ಈ ಪುಸ್ತಕಕ್ಕೆ ೧೯೮೭ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆಯಿತು. ಜತೆಗೆ 'ಸೈಕಲ್‌ವಾಲಾ', 'ಕಂಪ್ಯೂಟರ್ ಕಲೀರಿ' ಎಂಬ ಪುಸ್ತಕಗಳನ್ನೂ ಬರೆದರು. ಈ ಎಲ್ಲ ಪ್ರಕಟಣೆಗಳೂ ಜನಪ್ರಿಯವಾಗಿವೆ. ಪೀಣ್ಯ ಕೈಗಾರಿಕೋದ್ಯಮಿಗಳ ಸಂಘದ ಅಧ್ಯಕ್ಷರಾಗಿದ್ದು ವಿಜ್ಞಾನಸಾಹಿತ್ಯ ಪ್ರಚಾರಕ್ಕೆ ಮನಸ್ಸು ಕೊಟ್ಟದ್ದು ಅವರಿಗೆ ಸಹಜಕ್ರಿಯೆಯಾಗಿತ್ತು. ಕನ್ನಡದಲ್ಲಿ ವಿಜ್ಞಾನದ ಬೋಧನೆಯನ್ನು ಉತ್ತಮಗೊಳಿಸಲು ಶಿವು ಬಹುವಾಗಿ ಶ್ರಮಿಸಿದ್ದಾರೆ. ಹಳ್ಳಿಯ ಮಕ್ಕಳಿಗೆ ಭೌತಶಾಸ್ತ್ರ ಮತ್ತು ಗಣಿತ ಕಲಿಸಿಕೊಡಲು ಅನೇಕ ಕಲಿಕೆಯ ಮಾದರಿಗಳನ್ನು ಅವರು ಸೃಷ್ಟಿಸಿದ್ದಾರೆ. ಶಿವು ಒಳ್ಳೆಯ ಗಾಲ್ಫ್ ಆಟಗಾರರೂ ಹೌದು. ೨೦೦೪ರಲ್ಲಿ ಬೆಂಗಳೂರು ಟರ್ಫ್ ಕ್ಲಬ್ಬಿನಲ್ಲಿ 'ಹೋಲ್ ಇನ್ ಒನ್' ಬಾರಿಸಿದೆನೆಂದು ಅವರಿಗೆ ಬಹು ಹೆಮ್ಮೆ! ಈಗಲೂ ಅವರ ವಾಸ ಮಲ್ಲೇಶ್ವರದ ೩೬ನೆಯ ಕ್ರಾಸಿನಲ್ಲಿರುವ ಕೊರವಂಜಿ ಹುಟ್ಟಿದ ಮನೆಯಲ್ಲೇ. ಮೆಚ್ಚಿನ ಮಡದಿ ಮಂಗಳ ಅವರು ಸುಮಾರು ಎರಡು ವರ್ಷಗಳ ಹಿಂದೆ ತೀರಿಕೊಂಡಾಗಿನಿಂದ ಒಂಟಿ ಜೀವನ. ಒಬ್ಬಳೇ ಮಗಳು ಆರತಿ, ಪತಿ ಡಾ.ವಿಜಯ್ ದೇಸಾಯ್ ಮತ್ತು ಮಗಳು ಅರುಶಿಯವರೊಡನೆ ಇಂಗ್ಲೆಂಡಿನಲ್ಲಿದ್ದಾರೆ.

ಅಪರಂಜಿಯಲ್ಲಿ ಎರಡು ದಶಕಗಳಲ್ಲಿ ಆಗಾಗ ತಾವು ಬರೆದ ಹಾಸ್ಯಲೇಖನಗಳ ಸಂಕಲನವೊಂದನ್ನು 'ಮಧುಚಂದ್ರ' ಎಂಬ ಹೆಸರಿನಲ್ಲಿ ಶಿವು ೧೯೯೧ರಲ್ಲಿ ಪ್ರಕಟಿಸಿದರು. ಈ ಸಂಕಲನದಲ್ಲಿ ಲೇಖನಗಳ ಜತೆ ಕವಿತೆಗಳು, ಅಣಕವಾಡುಗಳು ಸೇರಿವೆ. ವಿನೋದ ಸಾಹಿತ್ಯ ವಿಭಾಗದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಇದಕ್ಕೆ ಪ್ರಶಸ್ತಿ ನೀಡಿತು. ೧೯೯೯ರಲ್ಲಿ ಪ್ರಕಟವಾದ 'ಯೋಗಿ ಮತ್ತು ಅಪ್ಸರೆ', ೨೦೦೫ರಲ್ಲಿ ಹೊರಬಂದ 'ಬ್ರೇಕಿಲ್ಲದ ಬೆಳ್ಳಿಯ ತೇರು' ಇವರ ಭಿನ್ನ ರೀತಿಯ ನಗೆಬರಹ ಸಂಕಲನಗಳು. ಈ ಪುಸ್ತಕಗಳ ಬಗ್ಗೆ ಹೇಳುತ್ತ 'ವಿನೋದ ಎಂದರೆ ಸದಾ ಹೊಟ್ಟೆ ಬಿರಿಯುವಂತೆ ನಕ್ಕು

'ಅಪರಂಜಿ ಮತ್ತು ಶಿವು

ಹೋರಾಡುವುದು ಮಾತ್ರವೇ ಅಲ್ಲ– ಮನಸ್ಸಿಗೆ ಮುದ ಕೊಟ್ಟರೆ ಹಾಸ್ಯ ಸಾಹಿತ್ಯ ತನ್ನ ಕೆಲಸ ಮಾಡಿದಂತೆ' ಎನ್ನುತ್ತಾರೆ ಶಿವು. ಈ ಸಂಕಲನದಲ್ಲಿ ತುಟಿಬಿರಿಯದ ಮೆಲುನಗೆಗೆ ಸಾಕಷ್ಟು ಉದಾಹರಣೆಗಳಿವೆ. ಅಪರಂಜಿಯಲ್ಲಿ ಪ್ರಕಟವಾಗಿರುವ ಬರವಣಿಗೆಯಲ್ಲಿ ಕಾಣುವ ಹಾಸ್ಯದ ರೂಪುರೇಷೆಗಳನ್ನು ಈ ಲೇಖನದ ಅಂತ್ಯದಲ್ಲಿರುವ ಅನುಬಂಧದಲ್ಲಿ ನೋಡುತ್ತೀರಿ. ಅನುಬಂಧದಲ್ಲಿ ಶಿವು ಅವರ 'ಕಿವುಡು' ಎಂಬ ಲೇಖನ ಮತ್ತು ಅವರ ಒಂದು ಹನಿಗವನದ ಜತೆಗೆ ಇತರ ಕೆಲವರ ಬರವಣಿಗೆಯ ತುಣುಕುಗಳಿವೆ.

ಅಪರಂಜಿ ಅವತರಿಸಿದನಂತರ ಅದರಲ್ಲಿ ಹಾಸ್ಯಲೇಖನಗಳನ್ನು ಬರೆಯುವ ಉತ್ಸಾಹ ಚಿಗುರಿ ಒಂದು ಮಹಿಳಾ ಲೇಖಕರ ದಂಡೇ ಸೃಷ್ಟಿಯಾಗಿದೆ. ಮೊದಲ ಸಂಚಿಕೆಗಳಿಗೆ ಬರೆಯುತ್ತಿದ್ದ ಲೀಲಾ ಮಿರ್ಲೆ, ಕಮಲಾ ರಾಮಸ್ವಾಮಿ (ಇವರಿಬ್ಬರೂ ಶಿವು ಅಕ್ಕಂದಿರು) ಅಲ್ಲದೆ ಭುವನೇಶ್ವರಿ ಹೆಗಡೆ, ಟಿ ಎಸ್. ಅಂಬುಜ, ಚಂಚಲಾ ಶ್ರೀಕಂತಯ್ಯ, ಚಂಚಲಾ ಸುರತ್ಕಲ್, ಇಂದೂ ರಮೇಶ್, ಜ್ಯೋತ್ಸ್ನಾ ಕಾಮತ್, ಸರೋಜ ಆಚಾರ್ಯ, ಶೈಲಜಾ ಪ್ರಭಾಕರ್, ಶೋಭಾ ಪ್ರಮೋದ್, ವಿಜಯಾ ಸಚ್ಚಿದಾನಂದ್, ನಂದಿನಿ ಕಾಪಡಿ, ಶ್ಯಾಮಲಾ ರವಿಶಂಕರ್, ಕುಮುದಾ ಪುರುಷೋತ್ತಂ, ಅರುಣಾ ಕಾರಂತ್, ಲೀಲಾ ಕಾರಂತ್ ಇವರೇ ಮೊದಲಾಗಿ ಅನೇಕ ಲೇಖಕಿಯರು ಅಪರಂಜಿಯ ನಗೆಬುಗ್ಗೆಯನ್ನು ಶ್ರೀಮಂತಗೊಳಿಸಿದ್ದಾರೆ.

ಕನ್ನಡಿಗರು ಕಾಡಿಗೆ ಕಳುಹಿಸಿದ್ದ ಕೊರವಂಜಿಯನ್ನು ಅಪರಂಜಿಯನ್ನಾಗಿ ನಾಡಿಗೆ ತಂದುಕೊಟ್ಟ ಅಪರಂಜಿ ಶಿವುಗೆ ಹಾಸ್ಯ ಅನುವಂಶೀಯವಾಗಿ ಬಂದದ್ದು. ಅದು ಉತ್ತಮ, ನವುರಾದ ಮಧುರಹಾಸ್ಯ. ಅಶ್ಲೀಲದ ಸೋಂಕಿಲ್ಲದ್ದು. ಶಿವು ಯಂತ್ರವಿಜ್ಞಾನದಲ್ಲಿ ಪರಿಣತಿ ಪಡೆದು ವೃತ್ತಿಯಲ್ಲಿ ಕೈಗಾರಿಕೋದ್ಯಮಿಯಾಗಿದ್ದರೂ ಸಾಹಿತ್ಯದ ಬಗ್ಗೆ ಅಪಾರ ಒಲವು ಉಳಿಸಿಕೊಂಡು ನಗೆ ಸಾಹಿತ್ಯ ಮತ್ತು ವಿಜ್ಞಾನ ಸಾಹಿತ್ಯ ಎರಡರಲ್ಲೂ ಜನ ಮೆಚ್ಚುವ ಬರವಣಿಗೆ ನೀಡಿದ್ದಾರೆ. ಅಪರಂಜಿಯ ಪ್ರಕಟಣೆಯ ಮೂಲಕ ಅಸಂಖ್ಯಾತ ನಗೆ ಬರಹಗಾರರ ಸೃಷ್ಟಿ ಮಾಡಿದ ಹೆಗ್ಗಳಿಕೆ ಅವರದು. ಬಹು ಸಂಖ್ಯೆಯಲ್ಲಿ ಮಹಿಳಾಲೇಖಕಿಯರು ಅಪರಂಜಿಯ ಮೂಲಕ ಕನ್ನಡ ಸಾಹಿತ್ಯಕ್ಕೆ ಒದಗಿದ್ದಾರೆ. ಶಿವಕುಮಾರ್ ಪ್ರಯತ್ನದಿಂದ ಅಸಾಮಾನ್ಯ ಜನಪ್ರಿಯತೆ ಪಡೆದುಕೊಂಡಿರುವ ವಾರ್ಷಿಕ ಹಾಸ್ಯೋತ್ಸವಗಳಂತೂ ನಗರದ ನಗೆಜೀವನಕ್ಕೆ ಕಿರೀಟವಿಟ್ಟಂತೆ. ಶ್ರೀಯುತರ ಕನ್ನಡಸೇವೆ ಹೀಗೆಯೇ ಅತಿಶಯವಾಗಿ ನಡೆದು ಅವರ ಕೀರ್ತಿ ವೃದ್ಧಿಸಲಿ ಎಂದು ಹಾರೈಸುತ್ತ ಈ ಲೇಖನವನ್ನು ಮುಗಿಸುತ್ತೇನೆ.

## ಅನುಬಂಧ

ಈ ವಿಭಾಗದಲ್ಲಿ ಇಂದಿನ ಲೇಖಕ ಲೇಖಕಿಯರು ಅಪರಂಜಿಯಲ್ಲಿ ಪ್ರಕಟಿಸಿರುವ ರಂಜಕ ಬರವಣಿಗೆಯ ಕೆಲವು ನಿದರ್ಶನಗಳನ್ನು ನೋಡಿ: ಮೊದಲಲ್ಲಿ ಅಪರಂಜಿ ಶಿವು ಅವರ ಒಂದು ಲೇಖನ ಮತ್ತು ಒಂದು ಹನಿಗವನ ಪೂರ್ಣವಾಗಿ ಅಚ್ಚಾಗಿದೆ. ನಂತರದಲ್ಲಿ ಕೆಲವು ಆಯ್ದ ಲೇಖನಗಳ ತುಣುಕುಗಳಿವೆ.

### ೧. ಕಿವುಡು–ಅಪರಂಜಿ ಶಿವು

ಯಾಕೋ ನೋಡಿ, ಈಚೀಚೆಗೆ ನಮ್ಮ ಯಜಮಾನ್ತಿಗೆ ಕಿವಿ ಸ್ವಲ್ಪ ಮಂದ ಆಗ್ತಾ ಇದೆ. ಪೂರ್ತಿ ಕಿವುಡು ಅಂತೇನೂ ಅಲ್ಲ. ಆಗಾಗ ಸಂದೇಹ ಬರೋ ಅಷ್ಟು. ಒಮ್ಮೆ ಅವಳು ಅಡಿಗೆ ಮನೇಲಿ ಏನೋ ಹುರೀತಿದ್ಲು. ನಾನು ಊಟದಮನೇಲಿ ಉಪ್ಪಿಟ್ಟು ತಿಂತಾ ಕೂತಿದ್ದೆ. ಉಪ್ಪಿಟ್ಟಿಗೆ ಉಪ್ಪು ಸಾಲದು ಅನ್ನಿಸ್ತು.

'ಸ್ವಲ್ಪ ಉಪ್ಪು ಬೇಕಾಗಿತ್ತು!' ಅಂತ ಸಾಧಾರಣ ಧ್ವನೀಲಿ ಕೂಗಿದೆ. ನಿರುತ್ತರ. ಹುರಿಯುವಿಕೆ ಅವ್ಯಾಹತವಾಗಿ ಸಾಗಿತ್ತು. ನಾನೇ ಅಡಿಗೆ ಮನೆಗೆ ಹೋಗಿ ಉಪ್ಪಿನ ಭರಣಿ ತಗೊಂಡು, ನಮ್ಮಾಕೆ ಹತ್ತಿರ ಹೋಗಿ,

'ಉಪ್ಪು ಕೇಳಿದ್ದು ಕೇಳಿಸ್ಲಿಲ್ವೇನು?' ಅಂತ ಕೇಳಿದೆ.

ಆಕೆ 'ಕೇಳಿಸ್ತೆ ಏನು? ನಿಮ್ಮ ಬಿ.ಪಿ.ಗೆ ಉಪ್ಪು ಒಗ್ಗೋಲ್ಲ ಅಂತ ಸುಮ್ಮನಾದೆ' ಅಂದಳು. ನನಗ್ಗೊತ್ತು, ತನ್ನ ಕಿವುಡಿನ ಗುಟ್ಟು ಬಿಟ್ಟುಕೊಡದೆ ಇರೋದಕ್ಕೆ ಇದೊಂದು ಸಬೂಬು ಅಂತ. ಮಾತನಾಡಿ ಏನು ಪ್ರಯೋಜನ ಅಂತ ಅಲ್ಲಿಂದ ಹೊರಟೆ.

ಆವಾಗಿನಿಂದ, ಅನೇಕ ಬಾರಿ ಅವಳ ಅರ್ಧ ಕಿವುಡಿನ ಬಗ್ಗೆ ನನಗೆ ನಿದರ್ಶನ ಸಿಗ್ತಾನೇ ಇತ್ತು. ನನಗೋ ಆತಂಕ. 'ಡಾಕ್ಟರ ಹತ್ತಿರ ಒಂದ್ಸಾರಿ ತೋರಿಸ್ಕೋಬಾರ್ದೇನೇ?' ಅಂತ ನಯವಾಗಿ ಹೇಳಿದೆ. 'ನನಗೇನಾಗಿದೇರೀ ಡಾಕ್ಟರ ಹತ್ತಿರ ಹೋಗೋದಕ್ಕೆ? ಸುಮ್ನೆ ದುಡ್ಡು ದಂಡ' ಅಂತ ಆ ಸಲಹೇನ ಕೊಡವಿಬಿಟ್ಟಳು.

ನನಗೂ ಸಹ ಅರ್ಧ ಸಂಶಯ. ನಿಜವಾಗಿ ಕಿವುಡು ಇದೆಯೋ ಇಲ್ವೋ ಅಂತ ವೈಜ್ಞಾನಿಕವಾಗಿ ಕಂಡು ಹಿಡಿದೇ ಬಿಡಬೇಕು ಅಂತ ನಿರ್ಧರಿಸಿದೆ.

ಒಂದು ಸಂಜೆ ಅವಳು ಡ್ರಾಯಿಂಗ್ ರೂಮ್ ಸೋಫಾದ ಮೇಲೆ ನಿಟ್ಟಿಂಗ್ ಹಾಕ್ತಾ, ಬಾಗಿಲಿಗೆ ಬೆನ್ನು ಮಾಡಿ ಕುಳಿತಿದ್ದಳು. ಡ್ರಾಯಿಂಗ್ ರೂಮಿನಿಂದ ಒಂದೇ ನೇರದಲ್ಲಿ ಮೂವತ್ತು ಅಡಿ ನಡೆದರೆ ನಮ್ಮ ಊಟದ ಮನೆ. ನಾನು ಊಟದ ಮನೇಲಿ ನಿಂತು, ಸಾಧಾರಣ ಧ್ವನೀಲಿ:

'ಈಗ ನಾನು ಮಾತಾಡ್ತಾ ಇರೋದು ಕೇಳಿಸ್ತಿದೆಯೇನೇ?' ಅಂತ ಕೇಳಿದೆ. ಏನೂ ಪ್ರತಕ್ರಿಯೆ ಕಾಣಿಸಲಿಲ್ಲ. ನಿಟ್ಟಿಂಗ್ ಹಾಕ್ತಾನೇ ಇದ್ಲು.

ಕಿವುಡು ಇಲ್ದೇ ಇದ್ರೆ, ಸಾಧಾರಣ ಧ್ವನಿ ಮೂವತ್ತು ಅಡಿ ದೂರದಿಂದ ಕೇಳಿಸುತ್ತದಂತೆ. ಐಬು ಇದೆ ಅಂತ ಖಂಡಿತಾ ಆಯ್ತು. ಎಷ್ಟರಮಟ್ಟಿಗೆ ಇದೆ ಅಂತ ಕಂಡುಹಿಡೀಬೇಕಲ್ಲ. ಸರಿಯಾಗಿ ಹತ್ತು ಅಡಿ ಮುಂದೆ ನಡೆದು ಹಾಲ್ನಲ್ಲಿ ನಿಂತೆ. ಸೋಫಾದಿಂದ ಇಪ್ಪತ್ತು ಅಡಿ.

'ಈಗ ನಾನು ಮಾತಾಡ್ತಾ ಇರೋದು ಕೇಳಿಸ್ತಿದೆಯೇನೇ?' ಪುನಃ ಕೇಳಿದೆ. ನಾನು ಅನ್ಕೊಂಡಿದ್ದ ಹಾಗೇ ಆಯ್ತು. ಮಹರಾಯ್ತಿ ಮಿಸುಕಾಡಲಿಲ್ಲ. ಡಾಕ್ಟರ್ ಹತ್ತಿರ ಹೋಗೋದಂತೂ ಖಾತ್ರಿ ಆಯ್ತು. ಆದರೆ ಪ್ರಯೋಗ ಪೂರ್ಣವಾಗಬೇಕಲ್ಲ.

ಇನ್ನೂ ಹತ್ತು ಅಡಿ ನಡೆದು ಡ್ರಾಯಿಂಗ್ ರೂಮ್ ಬಾಗಿಲಿಗೆ ಬಂದೆ. ನನ್ನ ಟೆಸ್ಟ್ ಹೇಳಿಕೇನ ರಿಪೀಟ್ ಮಾಡ್ದೆ.

'ಈಗ ನಾನು ಮಾತಾಡ್ತಿರೋದು ಕೇಳಿಸ್ತಿದೆಯೇನೇ?'

ಯಜಮಾನ್ತಿ ನನ್ನ ಕಡೆ ತಿರುಗಿ ಕೂಗಿದಳು.

'ಅಯ್ಯೋ ದೇವರೇ! ಮೂರ್ನೇ ಸಾರ್ತಿ ಹೇಳ್ತಿದೀನಿ, ಕೇಳಿಸ್ತೂರೀ!!'

### ೨. ಒಲುಮೆಯ ಕಾಣಿಕೆ –ಅಪರಂಜಿ ಶಿವು

ನನ್ನ ದೋಸ್ತ್ ಸೊಗಸುಗಾರ ಶಾಮಿ
ಭೀಷ್ಮನೆಗಡಿಯ ಅಟಾಟೋಪಕ್ಕೆ
ತತ್ತರಿಸುತ್ತಾ, ಸಂತೋಷದಿಂದ ನುಡಿದ
ಕಂಡೆ ನಾನವಳನ್ನು ನಿನ್ನೆ ಬಸ್ಸಿನಲಿ
ಅಪ್ರತಿಮ ರೂಪವತಿ ನನ್ನ ಗೆಸ್ಸಿನಲಿ.
ನಿಂತಿದ್ದೆ ಅವಳ ಸನಿಹದಲೆ ನಾನು
ಸವಿಯುತ್ತ ನಲ್ಮೊಗದ ಸೌಂದರ್ಯಭಾನು
ಕಾಲೇಜು ಸ್ಟಾಪಿನಲಿ ಬಸ್ಸಿಳಿವ ಮುನ್ನ
ಕೊಟ್ಟಳೀ ನೆಗಡಿಯನು ಓಹ್ ನಾನೆ ಧನ್ಯ!

### ೩: ತಿರುಗು ಬಾಣ –ಕಂ.ಭಂ.ಕೃಷ್ಣಮೂರ್ತಿ

ಮುನಿಸಿಪ್ಪು ಕೋರ್ಟಿನ ಕಾಪೀಯಿಂಗ್ ಶಾಖೆಯ ಎಗ್ಜಾಮಿನರ್

ವೆಂಕಪ್ಪಯ್ಯನಿಗೂ ಗುಮಾಸ್ತ ನರಸಿಮ್ಹಯ್ಯನಿಗೂ ಸ್ನೇಹ ಸಂಬಂಧ ಕಡಿದುಹೋಗಲು ಬಲವಾದ ಕಾರಣವಿತ್ತು. ಒಂದು ಬಾರಿ ಕಕ್ಷಿಗಾರರೊಬ್ಬರು, 'ಎಗ್ಸಿಕ್ಯೂಷನ್ ನಂಬರ್ ಮೂವತ್ತೊಂದರ ಆರ್ಡರ್ ಕಾಪಿ ಅರ್ಜೆಂಟಾಗಿ ಬೇಕು ಸ್ವಾಮಿ ಸಂಜೆ ಹೊತ್ತಿಗೆ ರೆಡಿ ಮಾಡಿ ಕೊಡಿ' ಎಂದು ಹೇಳಿ ವೆಂಕಪ್ಪಯ್ಯನಿಗೆ ಮೂವತ್ತು ರೂಪಾಯಿಗಳ ದಕ್ಷಿಣೆ ಕೊಟ್ಟು ಹೋಗಿದ್ದರು. ಶಿರಸ್ತೆದಾರ ಶೀನಪ್ಪನವರಿಗೆ ದಾಯಭಾಗ ಹತ್ತು ರೂಪಾಯಿ ಕೊಡದಿದ್ದರೆ ಅವರು ಅದಕ್ಕೆ ಸಹಿ ಹಾಕದೆ ಕಾಡಿಸುತ್ತಾರೆಂಬುದನ್ನು ತಿಳಿದಿದ್ದ ವೆಂಕಪ್ಪಯ್ಯ ಅವರಿಗೆ ಸಲ್ಲಬೇಕಾದ ಹತ್ತು ರೂಫಾಯಿ ಕಾಣಿಕೆಯನ್ನು ಸಲ್ಲಿಸಿ, ಮಿಕ್ಕ ೨೦ ರೂ.ಗಳಲ್ಲಿ ಕಾಪೀಯಿಸ್ಟ್ ನಾರಣಪ್ಪನಿಗೆ ಐದು ರೂಪಾಯಿ ಕೊಟ್ಟು ಮಿಕ್ಕ ೧೫ ರೂ.ಗಳನ್ನು ಜೇಬಿಗಿಳಿಸುವ ಸನ್ನಾಹ ಮಾಡಿದ್ದರು. ಆದರೆ ಮೂವತ್ತೊಂದನೆ ನಂಬರಿನ ಫೈಲು ಎಗ್ಸಿಕ್ಯೂಷನ್ ಗುಮಾಸ್ತೆ ನರಸಿಂಹಯ್ಯನ ಸುಫರ್ದಿನಲ್ಲಿ ಇದ್ದದ್ದರಿಂದ ಅವನ ತಲೆ ಸವರಿ ಫೈಲು ಗಿಟ್ಟಿಸಲು ದೇಶಾವರ ನಗೆ ಬೀರುತ್ತಾ ವೆಂಕಪ್ಪಯ್ಯ ಅವನ ಕೊಠಡಿಗೆ ಬಂದರು.

'ನರಸಿಂಹಯ್ಯನೋರೇ ಸ್ವಲ್ಪ ಮೂವತ್ತೊಂದನೇ ನಂಬರ್ ಫೈಲು ಬೇಕಾಗಿತ್ತು. ದಯವಿಟ್ಟು ಕೊಡಿ ದೇವರು' ಎಂದು ಅತೀ ನಮ್ರತೆಯಿಂದ ಕೇಳಿದರು. ಕೇವಲ ಐದೇ ವರ್ಷ ಸರ್ವೀಸಾಗಿದ್ದರೂ ಐವತ್ತು ವರ್ಷದ ಅನುಭವ ಪಡೆದವರ ಚಾಣಾಕ್ಷತನ ನರಸಿಂಹಯ್ಯನಲ್ಲಿತ್ತು.

'ಏನು ಸ್ವಾಮಿ ಫೈಲು ಅರ್ಜೆಂಟಾಗಿ ಬೇಕಿತ್ತೇ?' ಎಂದು ಕೇಳಿದ. ಅರ್ಜಂಟು ಅಂದರೆ ಅವನ ನಿಘಂಟಿನಲ್ಲಿ ಕಕ್ಷಿಗಳಿಂದ ಹಣ ಬಂದಿದೆ ಎಂದೇ ಲೆಕ್ಕಾಚಾರ. ಅರ್ಜೆಂಟೂಂತಂದ್ರೆ ಇನ್ನು ಅವನಿಗೆಲ್ಲಿ ಪಾಲು ಕಕ್ಕಬೇಕಾಗುತ್ತದೋ ಎಂದುಕೊಂಡು 'ಅರ್ಜೆಂಟೇನಿಲ್ಲ ಸ್ವಾಮಿ. ಆದರೆ ಪಾರ್ಟಿ ಸಾಹೇಬರ ಕಡೆಯೋರು. ಅದಕ್ಕೇ ಬ್ಯಾಗ ಮಾಡಿಕೊಡಬೇಕು' ಅಂತ ವೆಂಕಪ್ಪಯ್ಯ ಒಂದು ಹಸೀ ಸುಳ್ಳನ್ನು ಸರಾಗವಾಗಿ ಹೇಳಿದರು. ನರಸಿಂಹಯ್ಯ ಇದನ್ನೆಲ್ಲಾ ನಂಬಲು ಹೆಡ್ಡನೇ? 'ಆಯ್ತು ಸ್ವಾಮಿ ಮಧ್ಯಾನ್ಹ ಬನ್ನಿ ಹುಡುಕಿ ಕೊಡ್ತೀನಿ' ಅಂತ ತಣ್ಣಗೆ ಹೇಳಿದ......................

## ೪. ವಾತಾಪಿ ಜೀರ್ಣೋಭವ –ಅಣ್ಣಾಸ್ವಾಮಿ ಮೊದಲಿಯಾರ್

(ಮದುವೆ ಮನೆ)

'........ಇದೇನು ಮಹಾ! ನಾನು ಇಪ್ಪತ್ತು ಹೋಳಿಗೆ ತಿಂತೀನಿ!' ಎಂದ ಗುಂಡಣ್ಣ. ಪೈಲ್ವಾನ್ ವರದಪ್ಪನಿಗೆ ಕೋಪ ಬಂತು.

'ನೀನು ಇಪ್ಪತ್ತು ಹೋಳಿಗೆ ತಿಂದರೆ ನೂರು ರೂಪಾಯಿ ಕೊಡ್ತೀನಿ' ಎಂದ.

'ಜುಜುಬಿ ನೂರು ಯಾರಿಗೆ ಬೇಕು, ಐನೂರು ಕೊಡ್ತೀಯ ಬೇಕಾದ್ರೆ ಮೂವತ್ತು ಹೋಳಿಗೆ ತಿಂತೀನಿ' ಎಂದ ಗುಂಡಣ್ಣ. ವರದಪ್ಪನಿಗೆ ರೇಗಿ ಹೋಯಿತು.

'ನೀನು ಮೂವತ್ತು ಹೋಳಿಗೆ ತಿಂದರೆ ಐನೂರು ಕೊಡ್ತೀನಿ'

'ಅಷ್ಟೇ ಅಲ್ಲ ಅದನ್ನು ತಯಾರಿಸಲು ಆಗುವ ಖರ್ಚು ಕೊಡಬೇಕು'.

'ಸೋತರೆ ನೀನು ಕೊಡಬೇಕು'

'ಸರಿ'

ವರದಪ್ಪನ ಚೇಲಾಗಳು ಅಡಿಗೆಮನೆಗೆ ಹೋಗಿ ಅಡಿಗೆ ಭಟ್ಟರನ್ನು ಕರೆತಂದರು. ಅಲ್ಲೇ ಮಾತುಕತೆಯಾಗಿ ಅಡಿಗೆ ಭಟ್ಟರು ಮದುವೆ ಖರ್ಚಿಗೆ ಸೇರಿಸದೆ ಐವತ್ತು ಹೋಳಿಗೆಗಳನ್ನು ಮಾಡುವ ಏರ್ಪಾಡಾಯಿತು.

ಬೆಳಿಗ್ಗೆ ನಮಗೆಲ್ಲಾ ಕುತೂಹಲ. ನಾವೆಲ್ಲಾ ಟಿಫನ್ನಿಗೆ ಕುಳಿತೆವು. ಇಡ್ಲಿ ವಡೆ ಸಾಂಬಾರ್, ಪೊಂಗಲ್ ಸೇವೆ ನಡೆಯಿತು. ಗುಂಡಣ್ಣ ನನ್ನಪಕ್ಕ ಕುಳಿತಿದ್ದ. ನಮ್ಮ ಎದುರು ಸಾಲಿನಲ್ಲಿ ಕುಳಿತಿದ್ದ ವರದಪ್ಪ 'ಭಟ್ಟರೇ ಹೋಳಿಗೆ ಬರಲಿ' ಎಂದ. ಭಟ್ಟರು ತಟ್ಟೆ ತುಂಬ ಹೋಳಿಗೆ ತಂದರು. ನಮ್ಮ ತಟ್ಟೆಗಳಿಗೂ ಎರಡೆರಡು ಹೋಳಿಗೆಗಳು ಬಂದವು. ಭಟ್ಟರ ಶಿಷ್ಯ ಬಟ್ಟಲಿನಲ್ಲಿ ಬಿಸಿ ಬಿಸಿ ಕಾಯಿಸಿದ ತುಪ್ಪ ಹಿಡಿದು ಬಂದ. ನಾವು ಎರಡು ಹೋಳಿಗೆ ತಿನ್ನುವ ವೇಳೆಗೆ ಸುಸ್ತಾದೆವು. ಗುಂಡಣ್ಣನ ತಟ್ಟೆಗೆ ಒಂದರ ಮೇಲೊಂದು ಹೋಳಿಗೆಗಳು ಬೀಳತೊಡಗಿದವು. ಹಿಂದೆಯೇ ತುಪ್ಪದ ಸರಬರಾಜು. ಒಂದು–ಎರಡು–ಮೂರು....ಮೂವತ್ತು ಹೋಳಿಗೆಗಳನ್ನು ತಿಂದು, ಒಂದು ತಂಬಿಗೆ ನೀರು ಕುಡಿದು 'ಸಾಕು ಭಟ್ಟರೇ....ಮಧ್ಯಾನ್ಹ ಮದುವೆ ಊಟ ಮಾಡಬೇಕು' ಎಂದು ನಿಲ್ಲಿಸಿದ. ಭಟ್ಟರು ಗುಂಡಣ್ಣನಿಗೆ ಕೈಮುಗಿದು 'ನೀನು ನೂರು ವರ್ಷ ಬದುಕಪ್ಪ, ನನಗೆ ಈ ದಿನ ವಾಯುಪುತ್ರ ಭೀಮಸೇನನ ದರ್ಶನ ಆಯ್ತು' ಎಂದು ಕಣ್ಣೀರಿಟ್ಟರು. ವರದಪ್ಪ ಐದು ಹಸಿರುನೋಟುಗಳನ್ನು ಗುಂಡಣ್ಣನ ಮುಂದೆ ಹಾಕಿ, ದುರ್ದಾನ ಪಡೆದವನಂತೆ ತಲೆ ಮೇಲೆ ಟವಲು ಹಾಕಿಕೊಂಡು ಮದುವೆಮನೆ ಜನಜಂಗುಳಿ ಮಧ್ಯೆ ಸೇರಿಕೊಂಡ.

## ೫. ಮೇಡ್ ಫ಼ಾರ್ ಈಚ್ ಅದರ್ –ವೈ.ಎನ್.ಗುಂಡೂರಾವ್

ಬೆಳಿಗ್ಗೆಯಿಂದ ಪತ್ರಿಕೆ ಓದಲೂ ಸಹ ಬಿಡುವಿಲ್ಲದೆ ರಾತ್ರಿ ಮಲಗುವ ಮುಂಚೆ, ಕೊಂಚ ಪತ್ರಿಕೆ ನೋಡಿ ಮಲಗೋಣವೆಂದು ಪತ್ರಿಕೆ ಹಿಡಿದು ಕುಳಿತಾಗ, ಪಕ್ಕದಲ್ಲಿ ಬಂದು ಕುಳಿತ ರಜನಿ 'ರೀ....ಪಕ್ಕದಮನೆಗೆ ಬಾಡಿಗೆಗೆ ಬಂದಿರುವ ಜೋಡಿ ನೋಡಿದ್ರಾ?' ಎಂದಳು.

'ಇಲ್ಲ ಸೂರ್ಯ ಹುಟ್ಟೋದಕ್ಕೆ ಮುಂಚೆ ಮನೆಬಿಟ್ರೆ, ಸಂಜೆ ಪಶ್ಚಿಮದಲ್ಲಿ ಮುಳುಗಿದ ಮೇಲೇ ಅಲ್ವ ನಾನು ಮನೆ ತಲುಪೋದು. ಇನ್ನು ಪಕ್ಕದ ಮನೆ ಜೋಡಿ ಹೇಗಿದ್ದಾರೆ, ಎಲ್ಲಿಂದ ಬಂದ್ರು, ಎಲ್ಲಿಗೆ ಹೋಗ್ತಾರೆ ಅಂತಾ ನನಗೇನಮ್ಮ ಗೊತ್ತಾಗೋದು' ಎಂದೆ.

'ನೀವು ಫ್ಯಾಕ್ಟರಿಗೆ ಹೊರಡುವ ಸಮಯಕ್ಕೆ ಸರಿಯಾಗಿ ಬಾಗಿಲಿಗೆ ರಂಗೋಲಿ ಬಿಡಲು ಅವಳೂ ಎದ್ದಿರ್ತಾಳೆ. ಆಗಲಾದ್ರೂ ನೀವು ನೋಡಿಲ್ವೇನ್ರೀ ಅದ್‌ಹೇಗೆ ಅವಳು ನಿಮ್ಮ ಕಣ್ಣು ತಪ್ಪಿಸಿಕೊಳ್ಳೋಕೆ ಸಾಧ್ಯ?' ಎಂದು ನಾನು ಅವಳನ್ನು ನೋಡೇ ನೋಡಿರ್ತೀನಿ ಎನ್ನುವ ಗುಮಾನಿಯ ಜೊತೆಗೆ ತನ್ನ ಗೂಢಚಾರಿಣಿ ಬುದ್ಧಿಯನ್ನು ತೋರಿಸಿದಳು.

ಇಲ್ಲ ಮಾರಾಯ್ತೀ ನಾನು ಹೊರಡೋ ಆತುರದಲ್ಲಿ ಮನೆಬಾಗಿಲಿಗೆ ಯಾರ್ಯಾರು ರಂಗೋಲಿ ಬಿಡ್ತಾರೆ ಅಂತ ನೋಡ್ತಾ ನಿಲ್ಲೋಕಾದ್ರೂ ಸಮಯವಿರುತ್ತಾ ಹೇಳು? ಹೀಗೆ ನಿಂತ್ರೆ ಫ್ಯಾಕ್ಟರಿಬಸ್ಸು ನನಗಾಗಿ ಕಾಯುತ್ತ? ...ಅಂದ್‌ಹಾಗೇ .....ಅದೇ, ಸಣ್ಣ, ಬಿಳೀ ಜಿರಳೆ ತರಹಾ ಇದ್ದಾಳಲ್ಲ....ಅವಳಾ?'

'ಹ್ಞಾಂ! ನೋಡಿದ್ರಾ...ನೋಡೇ ಇಲ್ಲಾ ಅಂತ ಸುಮ್ನೆ ಸುಳ್ಳು ಹೇಳ್ತೀರಲ್ಲ'

## ೬.ಮನೆ ಹುಡುಕಿ ನೋಡು–ಎಚ್ ಎಲ್. ಕೇಶವಮೂರ್ತಿ

.................

ಕಛೇರಿಗೆ ಹತ್ತಿರದ ಬಡಾವಣೆಯಲ್ಲಿ ನನಗೆಟಗುವ ಐದಾರು ಮನೆಗಳು ಖಾಲಿ ಇವೆ ಅಂತ ತಿಳೀತು. ಹುಡುಕಿಕೊಂಡು ಹೊರಟೆ. ಮನೆ ಬಾಡಿಗೆಗೆ ಇದೆ ಅನ್ನೋ ಬೋರ್ಡು ಎಲ್ಲೂ ಕಾಣಿಸಲಿಲ್ಲ ಯಾರನ್ನಾದರೂ ವಿಚಾರಿಸಬೇಕಾಗಿತ್ತು. ಮನೆಯ ವರಾಂಡಾದಲ್ಲಿ ಪೇಪರ್ ಒದ್ತಾ ಕುಳಿತಿದ್ದ ಹಿರಿಯರೊಬ್ಬರು ಕಣ್ಣಿಗೆ ಬಿದ್ರು.

'ಸಾರ್?'

ಪೇಪರ್‌ರಿಂದ ಕಣ್ಣೆತ್ತಿ ಪ್ರಶ್ನಾರ್ಥಕ ನೋಟ ಬೀರಿದ್ರು.

'ಇಲ್ಲಿ ಮನೆ ಇದ್ಯ?'

'ಇದೆ. ಯಾಕೆ? ನಿಮಗೆ ಕಣ್ಣು ಮಂದ ಏನು? ಇವೆಲ್ಲ ಮನೆ ತರಹ ಕಾಣಿಸಲ್ವೇ?'

'ಹಾಗಲ್ಲ ಸಾರ್, ಬಾಡಿಗೆ ಮನೆ ನಾನು ಕೇಳಿದು'

'ಅವೂ ಇದಾವೆ'

'ಎಲ್ಲಿ ಸಾರ್?'

'ಅದು, ಬಾಡಿಗೆಮನೇನೆ'

'ನೋಡ್ಲ ಸಾರ್?'

'ನೋಡಿ'

'ನೋಡಿದೆ. ಯಾರೋ ವಾಸ ಇದ್ದಂತಿತ್ತು'.

'ಸಾರ್, ಯಾರೋ ಇರೋಹಾಗಿದೆ?'

'ಹೌದು, ಇದಾರೆ'

'ಸಾರ್ ಮತ್ತೆ ಬಾಡಿಗೆಮನೆ ಇದೆ ಅಂದ್ರಿ?

'ಹೌದು. ನೀವು ಕೇಳಿದ್ದು ಏನಂತ? ಬಾಡಿಗೆಮನೆ ಇದೆಯೇ ಅಂತ. ಅದು ಬಾಡಿಗೆಮನೇನೆ. ಆದ್ರೆ ಖಾಲಿ ಇಲ್ಲ ಅಷ್ಟೆ. ನಿಮಗೆ ಬಾಡಿಗೆಮನೆ ಬೇಕಾಗಿತ್ತ?'

'ಹೌದು ಸಾರ್'

'ಪ್ರಶ್ನೆ ಸರಿಯಾಗಿ ಹಾಕ್ಬೇಕು., ನೀವು ಕೇಳಬೇಕಾಗಿದ್ದು ಬಾಡಿಗೆಮನೆ ಖಾಲಿ ಇದೆಯೆ ಅಂತ ಅಲ್ವೇ?'

'ಹೌದು ಸಾರ್ ಇದ್ಯೇ ಸಾರ್?'

'ಯಾವುದೂ ಖಾಲಿ ಇಲ್ಲ'

ಈ ಹಾಳಾದ ಮುದುಕ ಸರ್ಕಾರೀ ಕೆಲಸದಿಂದ ರಿಟೈರಾದ ಆಸಾಮಿ ಇರಬೇಕು. ಈಗ ಬರೀ ಹಳೇ ಟೈರು. ಹೊತ್ತು ಕಳೆಯೋಕ್ಕೆ ನನ್ನಂತಹ ಬಕರಾನ್ನೇ ಬಕಪಕ್ಷಿತರಹ ಬಯಸ್ತಿದ್ದ ಅಂತ ಕಾಣಿಸುತ್ತೆ.......

## ೭. ಒಂದು ಜುಬ್ಬಾ ಕತೆ–ಪ್ರಭಾ

ಹೊಸ ಅಲೆ ಚಿತ್ರಗಳು. ಗೊತ್ತು ತಾನೆ? ಹಾಗೆಂದರೆ ಅದೇನೋ ಇಂದಿಗೂ ನನಗೆ ತಿಳಿಯದು. ಆದರೂ ಈ ಹೊಸ ಅಲೆಗಳ ಚಿತ್ರಗಳ ಹೊಡೆತ ಅದರ ಮೇರು ಫ಼ಾರಂನಲ್ಲಿದ್ದಾಗ (ಅಂದರೆ ಪೀಕ್ ಫ಼ಾರ್ಮ್) ನಾನು ಸಾಹಿತ್ಯದ ಕಾರ್ಯಕ್ರಮಗಳಿಗೆ ತಪ್ಪದೇ ಹೋಗುತ್ತಿದ್ದೆ. ಅಲ್ಲಿ ನನ್ನ ತರಹವೇ ಸಭೆಗೆ ಎಂದು ಬಂದ ಜನ ಸಭೆಯ ಮೊದಲೇ ಅಥವಾ ನಂತರವೊ ಗುಂಪು ಸೇರಿಕೊಂಡು ತಲೆ ಮೇಲೆ ಆಕಾಶ ಕಳಚಿಬಿದ್ದ ಹಾಗೆ ಸಂಕೀರ್ಣ, ಕಂಕೀರ್ಣ, ಸಂವಹನ, ಅಪರಿಗ್ರಾಹ, ಅನ್ಯದೇಶೀಯ, ವಸ್ತುನಿಷ್ಠ ಮೊದಲಾದ ಪದಗಳನ್ನು ಪುಂಖಾನುಪುಂಖವಾಗಿ ಬಳಸುತ್ತ

ಕೂಗಾಡುತ್ತಿದ್ದುದು ನನಗೆ ಒಂದು ರೀತಿಯ ವಿಸ್ಮಯ ತರುತ್ತಿತ್ತು. ಅದೇ ರೀತಿ ವಿಸ್ಮಯವನ್ನುಂಟುಮಾಡುತ್ತಿದ್ದ ಮತ್ತೊಂದು ಸಂಗತಿ ಎಂದರೆ ಈ ಗುಂಪಿನ ಜನರ ವೇಷಭೂಷಣಗಳು . ಈ ಜನರ ಮಾತುಗಾರಿಕೆಗಳಿಂದ ಇವರುಗಳು ಸಾಹಿತಿಗಳೇ ಇರಬೇಕು ಎಂದು ಅರ್ಥೈಸಿಕೊಂಡಿದ್ದೆ. ಈ ಸಾಹಿತಿಗಳಲ್ಲಿ ಸುಮಾರು ಜನ ಅಂದರೆ ಹತ್ತಕ್ಕೆ ಒಂಬತ್ತೂವರೆಯಷ್ಟು ಜನರು ದೊಗಳೆ ಜುಬ್ಬ ,ಪೈಜಾಮ ಅಥವಾ ಪ್ಯಾಂಟು ಧರಿಸಿದ್ದು, ದಪ್ಪ ಕನ್ನಡಕಗಳು ಅವರ ಮುಖದ ಮೇಲಿರುತ್ತಿದ್ದವು. ಮತ್ತು ತಲೆಗಳನ್ನು ಎಲ್ಲರೂ ಒಂದೇ ರೀತಿ ಕೆದರಿಕೊಂಡಿರುತ್ತಿದ್ದರು. ಜುಬ್ಬದ ಬಲ ಹೆಗಲಿಗೆ ಅನಿವಾರ್ಯವಾಗಿ ಒಂದು ಚೀಲ ನೇತುಬೀಳುತ್ತಿದ್ದು ಅದರೊಳಗೆ ಜಗತ್ತಿನ ರಹಸ್ಯಗಳನ್ನು ಈ ಜನ ತುಂಬಿಕೊಂಡಿರುತ್ತಿದ್ದರು..................

## ೮. ತ್ರಿಮೂರ್ತಿಗಳ ರಿಟೈರ್ಮೆಂಟ್ ಪ್ಲಾನ್–ಬೇಲೂರು ರಾಮಮೂರ್ತಿ

ಮರುದಿನ ಶೀನಪ್ಪ ಇನ್ನೇನು ವಾಕಿಂಗ್ ಹೋಗಬೇಕು ಅಷ್ಟರಲ್ಲಿ ಮಡದಿಯ ಗುಡುಗು 'ರೀ, ಮಕ್ಕಳು ಬೇಗ ಕಾಲೇಜಿಗೆ ಹೋಗಬೇಕಂತೆ. ಒಲೆ ಉರಿ ಹಾಕಿ'. ಹೆಂಡ್ತಿಮಾತೂಂದ್ರೆ ಮೀರೋಕಾಗುತ್ಯೇ ಅದೂ ರಿಟೈರಾದಮೇಲೆ. ಶೀನಪ್ಪ ಮುಖಮೂತೀನೆಲ್ಲ ಮಸಿ ಮಾಡ್ಕೊಂಡು ಒಲೆ ಉರಿ ಹಾಕಿ , ಊದೂ ಕೊಳವೆಯಿಂದ ಒಲೆ ಊದಿ ಕಣ್ಣು ಕೆಂಪುಮಾಡಿಕೊಂಡ. ಅದು ಮುಗಿದದ್ದೇ ತಡ ಚೊಂಬು ಕೈಲಿ ಕೊಟ್ಟು 'ಹಾಲು ತಗೊಂಡ್ ಬನ್ನಿ' ಅನ್ನೋ ಆದೇಶ.. ಅದಾದ ಮೇಲೆ ಪೇಪರ್ ಕೈಲಿ ಹಿಡಿದು ಕೂತರೆ ಪೇಪರ್ ಕಿತ್ ಬಿಸಾಕಿ 'ದಿನಾ ಎಲ್ಲಾ ಪೇಪರ್ರೂ ಮನ್ಲೇ ಇರುತ್ತೆ.. ನೀವೂ ಮನ್ಲೇ ಇರ್ತೀರಿ. ಅದಿಕ್ಕೇನು ಅರ್ಜೆಂಟು ಬನ್ನಿ ಒಂಚೂರು ತರ್ಕಾರಿ ಹೆಚ್ಚಿಕೊಡಿ' ಅಂತ ದುಂಬಾಲು. ಅಂತೂ ಶೀನಪ್ಪ ಮಧ್ಯಾನ್ಹದವರೆಗೇ ಸುಸ್ತು. ಪಕ್ಕದ ಮನೆಯ ಗುರುಸ್ವಾಮಿಯನ್ನಾಗಲೀ, ಎದುರುಮನೆ ಕಪಿನಿಪತಿಯನ್ನಾಗಲೀ ಮಾತಾಡಿಸಲಾಗದಷ್ಟು ಬಿಸಿ. ಅವರಿಬ್ಬರ ಹಣೆಪಾಡೂ ಇದಕ್ಕಿಂತ ಬೇರೆಯಾಗಿರಲಿಲ್ಲ. ಮೂರು ಜನಕ್ಕೂ ರಿಟೈರಾದ ಮೊದಲನೇ ದಿನದ ನೋವನ್ನು ತೊಡಿಕೊಳ್ಳೋ ತವಕ. ಆದರೆ ಹೆಂಡತೀರು ಒಂಚೂರೂ ಪುರುಸೊತ್ತು ಕೊಡ್ತಿರಲಿಲ್ಲ.

ಗ್ರಂಥಋಣ:

೧. ಈ ಲೇಖನದಲ್ಲಿ ನಾನು ಶ್ರೀ ಶಿವಕುಮಾರ್ ಅವರೊಡನೆ ಮುಖತಃ ನಡೆಸಿದ ಸಂಭಾಷಣೆಯನ್ನು ಹೇರಳವಾಗಿ ಆಧರಿಸಿದ್ದೇನೆ.

೨. ಅಪರಂಜಿ. ವಿವಿಧ ಸಂಚಿಕೆಗಳು. ಸಂ. ಎಂ.ಶಿವಕುಮಾರ್. ಕೊರವಂಜಿ ಅಪರಂಜಿ ಟ್ರಸ್ಟ್.

೩. ಅಪರಂಜಿ ಶಿವು. ಮಧುಚಂದ್ರ. ವಸಂತ ಪ್ರಕಾಶನ. ಬೆಂಗಳೂರು. ೧೯೬೧.

೪. ಅಪರಂಜಿ ಶಿವು. ಅಪರಂಜಿ ರಸರಂಜಿ. ಸಂ. ಬೇಲೂರು ರಾಮಮೂರ್ತಿ. ಕೊರವಂಜಿ ಅಪರಂಜಿ ಟ್ರಸ್ಟ್.೨೦೦೫.

೫. ಅಪರಂಜಿ ಶಿವು. ಕನ್ನಡದ ಹಾಸ್ಯ ಸಾಹಿತ್ಯ ಪರಂಪರೆ. ವಿಕಾಸ. ಸಂ. ಯು.ಬಿ.ವಾಸುದೇವ್.ವಿಶ್ವ ಕನ್ನಡ



# ಅಮೆರಿಕದ ಕನ್ನಡ ಬರಹಗಾರರು ಮತ್ತು ಹಾಸ್ಯ

ಮೈ.ಶ್ರೀ. ನಟರಾಜ

## ಸಾರಾಂಶ

ಅಮೆರಿಕದಲ್ಲಿ ನೆಲೆಸಿರುವ ಕನ್ನಡಿಗರಲ್ಲಿ ಹಾಸ್ಯ ಬರವಣಿಗೆಯಲ್ಲಿ ತೊಡಗಿದ ಪ್ರಾತಿನಿಧಿಕ ಬರಹಗಾರರ ಕೊಡುಗೆಯ ಕಿರುಪರಿಚಯ ಮಾಡಿಕೊಡುವುದೇ ಈ ಲೇಖನದ ಮೂಲ ಉದ್ದಿಶ್ಯ. ಲೇಖನದ ಮೊದಲ ಭಾಗದಲ್ಲಿ ಅಮೆರಿಕದಲ್ಲಿ ಕನ್ನಡ ಬರವಣಿಗೆಯ ಗಾತ್ರದ ಸ್ಥೂಲ ಪರಿಚಯ ಮತ್ತು ಅಮೆರಿಕನ್ನರ ಹಾಸ್ಯಪ್ರಜ್ಞೆಯ ಬಗ್ಗೆ ಗಮನ ಸೆಳೆಯುವ ಯತ್ನವಿದೆ. ಮುಂದಿನ ಭಾಗದಲ್ಲಿ, ಅಮೆರಿಕದಲ್ಲಿ ಕನ್ನಡದ ಹಾಸ್ಯ ಬರವಣಿಗೆಯ ಬೆಳವಣಿಗೆಗೆ ನಿದರ್ಶನವಾಗಿ ಗದ್ಯ-ಪದ್ಯ-ನಾಟಕ ಮಾಧ್ಯಮಗಳಲ್ಲಿ ಹಾಸ್ಯವನ್ನು ಸಮೃದ್ಧವಾಗಿ ಬಳಸಿಕೊಂಡು ಪುಸ್ತಕ ರೂಪದಲ್ಲಿ ಪ್ರಕಟಿಸಿದವರ ಕೊಡುಗೆಯನ್ನು ಪ್ರಾತಿನಿಧಿಕವಾಗಿ ಪ್ರಸ್ತುತಪಡಿಸಲಾಗಿದೆ.

## ಅಮೆರಿಕದಲ್ಲಿ ಕನ್ನಡ ಬರವಣಿಗೆ

ಕನ್ನಡ ಬರವಣಿಗೆ ಅಮೆರಿಕದಲ್ಲಿ ನೆಲೆಸಿರುವ ಕನ್ನಡ ಬರಹಗಾರರಲ್ಲಿ ಕತೆಗಾರರು, ನಾಟಕಕಾರರು, ಕವಿಗಳು ಮತ್ತು ವಿವಿಧ ರೀತಿಯ ಗದ್ಯಸಾಹಿತ್ಯದಲ್ಲಿ ಕೈಯ್ಯಾಡಿಸಿದವರು ಸಾಕಷ್ಟು ಮಂದಿ ಇದ್ದಾರೆ. ಸಂಖ್ಯೆಯ ದೃಷ್ಟಿಯಿಂದ ಹೆಚ್ಚೆನಿಸದಿದ್ದರೂ ಇಲ್ಲಿನ ಕನ್ನಡಿಗರ ಜನಸಂಖ್ಯೆಯ ಶೇಕಡಾವಾರು ದೃಷ್ಟಿಯಿಂದ ಅವರ ಸಂಖ್ಯೆ ಗಮನೀಯವಾಗಿದೆ. ಒಟ್ಟಾರೆ ಕನ್ನಡ ಸಾಹಿತ್ಯಕ್ಕೆ ಅಮೆರಿಕನ್ನಡಿಗರಿಂದ ಆಗಿರುವ ಸಮಗ್ರ ಕೊಡುಗೆಯನ್ನು ಗಂಭೀರವಾಗಿ ಪರಿಶೀಲಿಸಿ ಆಳವಾಗಿ ಅಧ್ಯಯನ ಮಾಡಿ ಬರೆದ ವಿಮರ್ಶಾತ್ಮಕ

ಪ್ರಬಂಧಗಳ ಪ್ರಕಟಣೆ ಇನ್ನೂ ಆಗಿರುವಂತೆ ತೋರುವುದಿಲ್ಲ. ಸುಮಾರು ಮೂವತ್ತು ವರ್ಷಗಳಿಂದ ಅಸ್ತಿತ್ವದಲ್ಲಿರುವ ಹಲವಾರು ಕನ್ನಡಕೂಟಗಳು ಅಮೆರಿಕದಲ್ಲಿ (ಪ್ರಮುಖವಾಗಿ, ನ್ಯೂಯಾರ್ಕ್, ವಾಷಿಂಗ್ಟನ್, ಬಾಸ್ಟನ್, ಫಿಲಡೆಲ್ಫಿಯ, ಅಟ್ಲಾಂಟಾ, ಹ್ಯೂಸ್ಟನ್, ಶಿಕಾಗೋ, ಸ್ಯಾನ್‌ಫ್ರಾನ್‌ಸಿಸ್‌ಕೋ, ಲಾಸ್ ಏಂಜಲೀಸ್ ಮುಂತಾದ ನಗರಗಳಲ್ಲಿ) ಕೆಲಸ ಮಾಡುತ್ತಿವೆ. ಇನ್ನೂ ಹೊಸಹೊಸ ಕನ್ನಡ ಸಂಘಗಳು ತಲೆ ಎತ್ತುತ್ತಲೇ ಇವೆ. ಅನೇಕ ಸಂಸ್ಥೆಗಳು ವರ್ಷಕ್ಕೊಮ್ಮೆಯಾದರೂ ಕನ್ನಡ ಬರಹಗಳನ್ನೊಳಗೊಂಡ ಕಿರುಹೊತ್ತಗೆಗಳನ್ನು ಪ್ರಕಟಿಸುತ್ತವೆ. ಇಂಥ ಸಂಚಿಕೆಗಳಲ್ಲಿ ಕಥೆ, ಕವನ, ನಗೆಹನಿ ಮುಂತಾದ ಸ್ವಾರಸ್ಯಕರವಾದ ಲೇಖನಗಳು ಇರುತ್ತವೆ. ಆಗಾಗ್ಗೆ ನಡೆದ ಪ್ರಾಂತೀಯ ಸಮ್ಮೇಳನಗಳ ಸಂದರ್ಭಗಳಲ್ಲಿ ಸಹ ಮುಖ್ಯವಾಗಿ ಈಶಾನ್ಯ ವಿಭಾಗದಲ್ಲಿ, ಇತ್ತೀಚೆಗೆ ಪಶ್ಚಿಮ ವಲಯದಲ್ಲಿ ಹಲವು ಉತ್ತಮ ಮಟ್ಟದ ಲೇಖನಗಳನ್ನೊಳಗೊಂಡ ಸ್ಮರಣ ಸಂಚಿಕೆಗಳು ಪ್ರಕಟವಾಗಿವೆ. ೨೦೦೦ರಿಂದೀಚೆಗೆ ಅಮೆರಿಕದಲ್ಲಿ ನಡೆದ ನಾಲ್ಕು ವಿಶ್ವಕನ್ನಡ ಸಮ್ಮೇಳನಗಳ (ಹ್ಯೂಸ್ಟನ್, ಡಿಟ್ರಾಯಿಟ್, ಫ್ಲಾರಿಡ, ಮತ್ತು ಬಾಲ್ಟಿಮೋರ್) ಪ್ರಕಟಣೆಗಳನ್ನು ಪರಿಶೀಲಿಸಿದರೆ, ಅಂದಾಜಿನ ಪ್ರಕಾರ, ಪುಸ್ತಕಾಕಾರದ ಎರಡು–ಮೂರು ಸಾವಿರ ಪುಟಗಳಷ್ಟು ವಿಪುಲವಾದ ಬರವಣಿಗೆ ಗೋಚರವಾಗುತ್ತದೆ. ೧೯೭೦ರಿಂದೀಚೆಗೆ ಅಮೆರಿಕದಲ್ಲಿ ಪ್ರಕಟವಾದ ಎಲ್ಲಾ ಪುಸ್ತಕಗಳ, ನಿಯತಕಾಲಿಕ ಸಂಚಿಕೆಗಳ (ಉದಾಹರಣೆಗೆ ಹಲವು ವರ್ಷಗಳು ನಡೆದು ನಿಂತುಹೋದ 'ಅಮೆರಿಕನ್ನಡ' ದ್ವೈಮಾಸಿಕ) ಮತ್ತು ಇತರ ವಾರ್ಷಿಕ ಹಾಗೂ ಅನಿಯತಕಾಲಿಕ ಸಂಚಿಕೆಗಳನ್ನೆಲ್ಲಾ ಕೂಡಿದರೆ ಇನ್ನೂ ಒಂದೆರಡು ಸಹಸ್ರ ಪುಟಗಳಷ್ಟುಅಮೆರಿಕದಲ್ಲೇ ಹುಟ್ಟಿದ ಮುದ್ರಿತ ಕನ್ನಡ ಬರವಣಿಗೆ ದೊರಕುತ್ತದೆ. ವೃತ್ತಿಯಿಂದ ಬರಹಗಾರರಲ್ಲದ ಈ ಲೇಖಕರ ಬರವಣಿಗೆ ನಿಜಕ್ಕೂ ಸ್ತುತ್ಯರ್ಹ. ಹಾಗೆಂದ ಮಾತ್ರಕ್ಕೆ ಪ್ರಕಟವಾದ ಬರವಣಿಗೆ ಎಲ್ಲ ಒಂದೇ ಸಮನಾದ ಗುಣಮಟ್ಟದ್ದೆಂದು ಹೇಳಲಾಗುವುದಿಲ್ಲ. ಆದರೆ, ಗಾತ್ರದ ದೃಷ್ಟಿಯಿಂದ ನೋಡಿದರೆ ಸಾಕಷ್ಟು ಗಮನೀಯವಾದ ಸಾಹಿತ್ಯ ಅಮೆರಿಕದಲ್ಲಿ ನೆಲೆಸಿರುವ ಕನ್ನಡಿಗರಿಂದ ಸೃಷ್ಟಿಯಾಗಿದೆ ಎಂದು ಧೈರ್ಯವಾಗಿ ಹೇಳಬಹುದು.

ಅಮೆರಿಕದಲ್ಲಿ ಪುಸ್ತಕರೂಪದಲ್ಲಿ ಪ್ರಕಟವಾದ ಸಾಹಿತ್ಯದಲ್ಲಿ ಹತ್ತಾರು ಕವನ ಸಂಕಲನಗಳು, ನಾಲ್ಕಾರು ನಾಟಕ ಸಂಕಲನಗಳು, ನಾಲ್ಕಾರು ಕಥಾಸಂಕಲನಗಳು, ಒಂದೆರಡು ಗಂಭೀರ ವಸ್ತುಗಳನ್ನೊಳಗೊಂಡ ಹೊತ್ತಗೆಗಳು, ಹಲವು ಲಲಿತ ಪ್ರಬಂಧಗಳು, ಒಂದು (ಹೆಚ್ಚೆಂದರೆ ಎರಡು) ಕಾದಂಬರಿ(ಗಳು) ಮತ್ತು ಅಪರೂಪಕ್ಕೆ ಕೆಲವು ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಬಂಧಗಳ ಸಂಕಲನಗಳು ಕಾಣಸಿಗುತ್ತವೆ. ಅಲ್ಲಿಲ್ಲಿ ಪ್ರಕಟವಾದ ಹರಟೆಗಳು ಮತ್ತು ಲಲಿತಪ್ರಬಂಧಗಳಲ್ಲಿ ಹಾಸ್ಯ ಇಣುಕಿ ನೋಡಿದೆಯಾದರೂ ಹಾಸ್ಯವನ್ನೇ ಪ್ರಧಾನ ಮಾಧ್ಯಮವಾಗಿ ಬಳಸಿರುವ ಅಮೆರಿಕನ್ನಡ ಲೇಖಕರು ಅಲ್ಪಸಂಖ್ಯಾತರೆಂದೇ ನನ್ನ ನಂಬಿಕೆ.

## ಅಮೆರಿಕನ್ನರ ಹಾಸ್ಯ ಪ್ರವೃತ್ತಿ

ಒಂದು ದೇಶದ ಇಡೀ ಜನರ ಗುಣಗಳನ್ನು 'ಹೀಗೆ....' ಎಂದು ಹೇಳುವುದು ಸುಲಭವಲ್ಲ. ಆದರೂ, ಅಮೆರಿಕನ್ನರು ಹಾಸ್ಯಪ್ರಿಯರು ಎನ್ನಲಡ್ಡಿಯಿಲ್ಲ. ಇಲ್ಲಿನ ದಿನಪತ್ರಿಕೆ ಮುಂತಾದ ಸಂಚಿಕೆಗಳಲ್ಲಿ ಪ್ರಕಟವಾಗುವ ವ್ಯಂಗ್ಯಚಿತ್ರಗಳು, ನಗೆಹನಿಗಳು ನಮ್ಮ ಗಮನ ಸೆಳೆಯುತ್ತವೆ. 'ರೀಡರ್ಸ್ ಡೈಜೆಸ್ಟ್' ಮುಂತಾದ ಮಾಸಪತ್ರಿಕೆಗಳಲ್ಲಿ ಹಾಸ್ಯದ ವಿವಿಧ ಬಗೆಗಳನ್ನು ವಿಭಜಿಸಿ, ಪ್ರತ್ಯೇಕ ಶೀರ್ಷಿಕೆಯಡಿ ಪ್ರಕಟಿಸುತ್ತಾರೆ. ಶಾಲಾ-ಕಾಲೇಜುಗಳ ಕ್ಯಾಂಪಸ್‌ನಲ್ಲಿ ನಡೆಯುವ ಹಾಸ್ಯ ಪ್ರಕರಣಗಳು, ರಕ್ಷಣಾ ಇಲಾಖೆಯಲ್ಲಿ ಭೂಸೇನೆ, ವಾಯುಸೇನೆ ಮತ್ತು ನೌಕಾಸೇನೆಗಳಲ್ಲಿ ನಡೆಯುವ ಹಾಸ್ಯಪ್ರಕರಣಗಳು, ನಿತ್ಯಜೀವನದ ಆಗುಹೋಗುಗಳಲ್ಲಿನ ಹಾಸ್ಯಪ್ರಕರಣಗಳು, ಹೀಗೆ ಸಾಕಷ್ಟು ನಗೆಹನಿಗಳು ಅಚ್ಚಾಗುತ್ತವೆ.

ದೂರದರ್ಶನದಲ್ಲಂತೂ 'ಸ್ಟ್ಯಾಂಡಪ್ ಕಮೀಡಿಯನ್' ಅಥವಾ ನಕಲೀಶಾಮರ ಪ್ರದರ್ಶನಗಳಿಗೆ ತುಂಬ ಪ್ರಾಶಸ್ತ್ಯ ದೊರಕುತ್ತದೆ. 'ಸೈನ್‌ಫೆಲ್ಡ್', 'ಎವೆರಿಬಾಡಿ ಲೌಸ್ ರೇಮಂಡ್' ಮೊದಲಾದ 'ಸಿಟ್‌ಕಾಮ್'ಗಳು ನಿಂತಿರುವುದೇ (ಕೂತಿರುವುದೇ?) ಹಾಸ್ಯದ ಅಧಾರದಮೇಲೆ. ಅಮೆರಿಕೆಯ ಕಛೇರಿಗಳಲ್ಲಿ ನಡೆಯುವ ಮೀಟಿಂಗುಗಳು ಸಹ ಹಲವಾರು ಲಘು-ವಿನೋದಗಳಿಂದ ಕೂಡಿರುತ್ತವೆ. ಯಾವುದೇ ಸಮ್ಮೇಳನದಲ್ಲಿ ಪೇಪರುಗಳನ್ನು ಮಂಡಿಸುವಾಗ, ಆಹ್ವಾನಿತಭಾಷಣಗಳನ್ನು ಬಿಗಿಯುವಾಗ, ಮಂಡಕರು/ ಭಾಷಣಕಾರರು, ಮೊದಲು ಒಂದು ಸಣ್ಣ ಜೋಕ್ ಮಾಡಿ ಎಲ್ಲರ ಗಮನ ಸೆಳೆದೇ ಮುಂದಕ್ಕೆ ಗಂಭೀರ ಮಂಡನೆಗೆ ಕೈಹಾಕುವುದು. ಈ ವಿಚಾರವನ್ನು ಸಮ್ಮೇಳನಗಳಲ್ಲಿ ಭಾಗವಹಿಸಿದ ಎಲ್ಲರೂ ಸಾಧಾರಣವಾಗಿ ಗಮನಿಸಿರುತ್ತಾರೆ. ಎಂತಹ ಗಂಭೀರವಾತಾವರಣವನ್ನೂ ತಿಳಿಗೊಳಿಸಿ ಸಭಿಕರನ್ನು ಮನರಂಜಿಸಿ ಅವರ ಗಮನ ಸೆಳೆಯುವ ಅಮೆರಿಕನ್ನರ ತಂತ್ರವನ್ನು ಎಲ್ಲರೂ ಮೆಚ್ಚಬೇಕಾದ್ದು. ಪೌರ್ವಾತ್ಯರು ಸಾಮಾನ್ಯವಾಗಿ ಅಗತ್ಯಕ್ಕಿಂತ ಹೆಚ್ಚು ಗಾಂಭೀರ್ಯವನ್ನು ಪ್ರದರ್ಶಿಸುವುದೇ ಅವರ ರೂಢಿ. ಅವರಲ್ಲಿ ಹಾಸ್ಯಪ್ರಜ್ಞೆ ಇಲ್ಲವೆಂದಲ್ಲ, ಎಷ್ಟಿರಬಹುದೋ ಅಷ್ಟಿಲ್ಲವೇನೋ ಎನ್ನಿಸುತ್ತದೆ.

ನನ್ನ ವೃತ್ತಿಗೆ ಸಂಬಂಧಪಟ್ಟ ಕ್ಷೇತ್ರದಲ್ಲೇ ಸಂಶೋಧನೆಮಾಡಿ ಪ್ರಸಿದ್ಧನಾಗಿದ್ದ ಒಬ್ಬ ಪ್ರಾಧ್ಯಾಪಕ ತನ್ನ ಮಂಡನೆಗಳನ್ನುಪ್ರಾರಂಭಿಸುವ ಮುನ್ನ ಯಾವಾಗಲೂ ಒಂದೇ ಜೋಕ್ ಮಾಡಿ ಎಲ್ಲರನ್ನೂ ಬೋರ್ ಮಾಡುತ್ತಿದ್ದ. ಆ ಜೋಕ್ ಹೀಗಿತ್ತು. ಒಂದು ತರಗತಿಯಲ್ಲಿ ಇಂಗ್ಲಿಷು ಬೋಧಕ, ವಿದ್ಯಾರ್ಥಿಗಳಿಗೆ ಸಣ್ಣಕಥೆಗಳ ಗುಣಲಕ್ಷಣಗಳ ಬಗ್ಗೆ ತಿಳಿಸುತ್ತಿದ್ದ. ಒಂದು ಕಥೆ ಉತ್ತಮ ಮಟ್ಟದ್ದಾಗಿರಬೇಕಾದರೆ, ಅದರಲ್ಲಿ ಒಂದಿಷ್ಟು

'ಸೆಕ್ಸ್'(ಶೃಂಗಾರ ಎಂದಿಟ್ಟುಕೊಳ್ಳೋಣ), ಒಂದಿಷ್ಟು 'ಮಿಸ್ಟರಿ' (ರಹಸ್ಯ) ಮತ್ತು ಒಂದಿಷ್ಟು 'ರಿಲಿಜನ್' (ದೇವರು-ದಿಂಡರಿಗೆ ಸಂಬಂಧಪಟ್ಟ ತಾತ್ವಿಕ ಚರ್ಚೆ) ಇರಬೇಕು. 'ಈಗ, ನೀವೆಲ್ಲ ಹೋಗಿ ಅತ್ಯಂತ ಸಣ್ಣ ಕತೆಯೊಂದನ್ನು ಬರೆದುಕೊಂಡು ಬನ್ನಿ. ಅದರಲ್ಲಿ ನಾನು ತಿಳಿಸಿದ ಮೂರೂ ಅಂಶಗಳು ಕಡ್ಡಾಯವಾಗಿ ಇರಬೇಕು' ಎಂಬ ನಿರ್ಬಂಧವನ್ನೂ ಹಾಕಿದ. ಎಲ್ಲಕ್ಕಿಂತ ಚಿಕ್ಕದೂ ಮತ್ತು ಮೂರೂಗುಣಗಳನ್ನು ಕೂಡಿದ್ದೂ ಆದ ಕಥೆ ಹೀಗಿತ್ತು: 'ಓ ಮೈ ಗಾಡ್(ಅಯ್ಯೋ ದೇವರೇ!), ಐ ಆಮ್ ಪ್ರೆಗ್ನೆಂಟ್ (ನಾನು ಗರ್ಭಿಣಿ), ಹೂ ಡನ್ನಿಟ್? (ಯಾರಿದಕ್ಕೆ ಜವಾಬ್ದಾರ?)' ಮೊದಲನೇ ಪದಪುಂಜದಲ್ಲಿ ದೇವರಬಗ್ಗೆಯೂ, ಎರಡನೆಯದರಲ್ಲಿ ಲೈಂಗಿಕ ವಿಚಾರವೂ ಮತ್ತು ಕೊನೆಯ ಭಾಗದಲ್ಲಿ ರಹಸ್ಯಮಯವಾದ ಕುತೂಹಲವೂ ಇರುವುದರಿಂದ ಈ ಕಥೆ ಮೊದಲ ಬಹುಮಾನವನ್ನು ಪಡೆಯಿತು!

ಒಮ್ಮೊಮ್ಮೆ ಅಮೆರಿಕನ್ನರ ಹಾಸ್ಯಪ್ರಜ್ಞೆ ಪೌರ್ವಾತ್ಯರ ಸಂಯಮಶೀಲತೆಯೊಂದಿಗೆ ತಾಕಲಾಟವಾಡುತ್ತದೆ. ಅಷ್ಟೇ ಅಲ್ಲ; ಪೌರ್ವಾತ್ಯರ ಕೆಲವು ನಂಬಿಕೆಗಳ ಮೇಲೆ ಪ್ರಹಾರವನ್ನೂ ಮಾಡುತ್ತದೆ. ನಿದರ್ಶನಕ್ಕಾಗಿ, ನನ್ನ ಜೊತೆಯಲ್ಲಿ ಕೆಲಸಮಾಡುತ್ತಿದ್ದ ಒಬ್ಬ ಸಂಶೋಧಕ ತನ್ನ ಒಂದು ಭಾಷಣವನ್ನು ಪ್ರಾರಂಭಿಸುವ ಮುನ್ನ ಯಾವಾಗಲೂ ಒಂದು ಸ್ಲೈಡ್ ಪ್ರದರ್ಶಿಸುತ್ತಿದ್ದ. 'ನಮ್ಮ ಸಂಶೋಧನೆ ಮಣ್ಣು-ಕಲ್ಲು, ಭೂಮಿಯ ಮೇಲ್ಮೈ, ಭೂಗರ್ಭ ಮುಂತಾದ ವಿಷಯಗಳಿಗೆ ಸಂಬಂಧಪಟ್ಟಿದ್ದು, ಸ್ಥಳದಿಂದ ಸ್ಥಳಕ್ಕೆ ಭೂಮಿಯ ಮೇಲ್ಮೈ ಲಕ್ಷಣ ವ್ಯತ್ಯಾಸ ಹೊಂದಿರುತ್ತದೆ, ಆದ್ದರಿಂದ ಕಟ್ಟಡಗಳ ತಳಪಾಯಗಳನ್ನು ಕಟ್ಟುವ ವಿಧಾನಗಳು ಸ್ಥಳದಿಂದ ಸ್ಥಳಕ್ಕೆ ಬದಲಾಯಿಸುತ್ತವೆ. ಈ ಅಂಶವನ್ನು ಸೌಧ ಶಿಲ್ಪಿಗಳು ಅರಿತುಕೊಂಡಿರಬೇಕು, ಇಲ್ಲದಿದ್ದರೆ ಭೂಮಿ ಒಡ್ಡುವ ಸವಾಲುಗಳನ್ನು ಯಶಸ್ವಿಯಾಗಿ ಎದುರಿಸಲು ಸಾಧ್ಯವಾಗುವುದಿಲ್ಲ' ಎಂಬುದು ಆ ಭಾಷಣದ ಪೀಠಿಕೆ. ಆತ ತೋರಿಸುತ್ತಿದ ಮೊದಲ ಸ್ಲೈಡಿನಲ್ಲಿ ಬಿಕಿನಿ ಧರಿಸಿರುವ ಒಬ್ಬಳು ಚಲುವೆ ಬೀಚಿನ ಮೇಲೆ ಮಲಗಿ ಬಿಸಿಲುಕಾಯಿಸುತ್ತಿರುವ ದೃಶ್ಯ, ಅದರ ಕ್ಯಾಪ್ಷನ್ 'ಮದರ್ ಅರ್ಥ್ ಈಸ್ ಎ ಬಿಚ್' (ಭೂತಾಯಿ ಒಬ್ಬಳು ಹಾದರಗಿತ್ತಿ) ಎಂದಿರುತ್ತಿತ್ತು! ಆ ಚಿತ್ರವನ್ನು ನೋಡಿ ಎಲ್ಲರೂ ಇವನ ಭಾಷಣದ ಕಡೆ ಗಮನ ಕೊಡಲಿ ಎಂಬುದು ಅವನ ಉದ್ದೇಶವಾಗಿರುತ್ತಿತ್ತು. ಅವನ ಉದ್ದೇಶ ಸಾಧಾರಣವಾಗಿ ಸಫಲವಾಗುತ್ತಿತ್ತು. ನಾನು ಅವನ ಸಹ-ಸಂಶೋಧಕನಾಗಿ 'ಇಂಥ ಸ್ಲೈಡಿಗೂ ನನಗೂ ಯಾವ ಸಂಬಂಧವೂ ಇಲ್ಲ' ಎನ್ನುತ್ತಿದ್ದೆ. ಅದಕ್ಕವನು 'ಎಲೈ ಭಾರತೀಯನೇ ನೀನೇನೆನ್ನುತ್ತಿ? ಕಿರೀಟ ಧರಿಸಿದ ಒಂದು ಭೂಮಿದೇವಿಯ ಚಿತ್ರವನ್ನು ಹಾಕಿ 'ಸೇಕ್ರೆಡ್ ಮದರ್ ಅರ್ಥ್ ಇಸ್ ಮಿಸ್ಟೀರಿಯಸ್' (ಪವಿತ್ರ ಭೂಮಿತಾಯಿ ರಹಸ್ಯಮಯಿ) ಎಂಬ ಕ್ಯಾಪ್ಷನ್ ಹಾಕಬೇಕೋ?' ಎನ್ನುತ್ತಿದ್ದ. ಈ ಮೇಲಿನ ವಿಷಯವನ್ನು ಪ್ರಸ್ತಾಪಿಸುವುದಕ್ಕೆ

ಕಾರಣವೇನೆಂದರೆ, ಅಮೆರಿಕದಲ್ಲಿ ನೆಲೆಸಿರುವ ಕನ್ನಡ ಬರಹಗಾರರು ತಮ್ಮ ಪರಿಸರವನ್ನು ಗಮನಿಸಿದರೆ ಅವರಿಗೆ ವಿಪುಲವಾದ ಹಾಸ್ಯ ಸುಲಭವಾಗಿ ಕೈಗೆಟಕುತ್ತದೆಯಾದರೂ, ಅಮೆರಿಕನ್ನರ ಹಾಸ್ಯವನ್ನು ಅನಾಮತ್ತಾಗಿ ಕನ್ನಡಕ್ಕಿಳಿಸಿದರೆ ಓದುಗರು ಮೆಚ್ಚುತ್ತಾರೆಂದು ನಂಬಲಾಗುವುದಿಲ್ಲ. ಈ ಎಚ್ಚರಿಕೆಯನ್ನು ಗಮನದಲ್ಲಿಟ್ಟುಕೊಂಡು ಮುಂದುವರೆದರೆ, ಸಾಕಷ್ಟು ಪ್ರಮಾಣದಲ್ಲಿ, ವೈವಿಧ್ಯಮಯ ಹಾಸ್ಯ ಸನ್ನಿವೇಶಗಳು ನಮಗೆ ದೊರಕುತ್ತವೆ, ಅಂಥ ಸನ್ನಿವೇಶಗಳನ್ನು ಬಳಸಿಕೊಳ್ಳಲು ಅವಕಾಶಗಳು ದೊರೆಯುತ್ತವೆ.

## ಅಮೆರಿಕದ ಕನ್ನಡ ಬರಹಗಳಲ್ಲಿ ಹಾಸ್ಯ

ಇಲ್ಲಿನ ಕನ್ನಡ ಬರಹಗಾರರು ಹಾಸ್ಯವನ್ನೇ ತಮ್ಮ ಮಾಧ್ಯಮವನ್ನಾಗಿ ಮಾಡಿಕೊಳ್ಳದಿದ್ದರೂ ತಮ್ಮ ಬರವಣಿಗೆಯಲ್ಲಿ ಅಲ್ಲಲ್ಲಿ ಹಿತಮಿತವಾದ ಹಾಸ್ಯವನ್ನು ಬಳಸಿಕೊಂಡಿದ್ದಾರೆ. ಹಲವು ದಶಕಗಳಿಂದ ಅಮೆರಿಕದಲ್ಲೇ ನೆಲೆಸಿರುವ ಅನೇಕ ಹಿರಿಯ ಕನ್ನಡ ಬರಹಗಾರರು ಬರೆದಿರುವ ಲಲಿತಪ್ರಬಂಧಗಳಲ್ಲಿ ಮತ್ತು ಲಘು ಹರಟೆಗಳಲ್ಲಿ ಉತ್ತಮ ಮಟ್ಟದ ತಿಳಿಹಾಸ್ಯವನ್ನು ಕಾಣಬಹುದು. ಕ್ಯಾಲಿಫೋರ್ನಿಯಾದಲ್ಲಿ ನೆಲೆಸಿರುವ ಶ್ರೀ ಜನಾರ್ಧನಸ್ವಾಮಿ ಅವರು ಇಲ್ಲಿನ ಸನ್ನಿವೇಶಗಳನ್ನು ಬಳಸಿಕೊಂಡು ಹಲವಾರು ಉತ್ತಮ ವ್ಯಂಗ್ಯಚಿತ್ರಗಳನ್ನು ಪ್ರಕಟಿಸುತ್ತಲೇ ಇರುತ್ತಾರೆ. ಆಗಾಗ್ಗೆ ಜಾಲದ ಮೇಲೆ ಪ್ರಕಟವಾಗುವ ಮತ್ತು ಮುದ್ರಣಮಾಧ್ಯಮದಲ್ಲೂ ಬೆಳಕುಕಂಡಿರುವ ಅನೇಕ ಕವನಗಳು, ಅದರಲ್ಲೂ ಚುಟುಕಗಳು ಹಾಸ್ಯವನ್ನು ಚೆನ್ನಾಗಿ ಬಳಸಿಕೊಂಡಿವೆ.

ಅಮೆರಿಕನ್ನಡಿಗರು ಪ್ರಕಟಿಸಿರುವ ಒಟ್ಟಾರೆ ಸಾಹಿತ್ಯದಲ್ಲಿ ಅಡಕವಾಗಿರುವ ಹಾಸ್ಯದ ದರ್ಶನಮಾಡಿಸುವುದು ಈ ಲೇಖನದ ವ್ಯಾಪ್ತಿಗೆ ಎಟುಕದ ವಿಚಾರ. ಪ್ರಾಯಶಃ, ಕನ್ನಡದಲ್ಲಿ ಸಂಶೋಧನೆ ಮಾಡಲು ಆಸಕ್ತಿಯುಳ್ಳವರು ಇಲ್ಲಿ ಪ್ರಕಟವಾದ ಪ್ರತಿ ಸಂಚಿಕೆಯನ್ನೂ ಕೂಲಂಕುಶವಾಗಿ ಮತ್ತು ಸಮಗ್ರವಾಗಿ ಅಧ್ಯಯನ ಮಾಡಿದರೆ ಒಂದು ಉತ್ತಮವಾದ ಮಹಾಪ್ರಬಂಧವನ್ನು ಬರೆಯಬಹುದೇನೋ. ಹಾಸ್ಯಕ್ಕೆ ಒತ್ತುಕೊಟ್ಟಿರುವ ಹಲವು ಲೇಖಕರ ಆಯ್ದ ಬರಹಗಳನ್ನು ಮಾತ್ರ ಪರಿಚಯಿಸುವುದು ಈ ಲೇಖನದ ಮುಖ್ಯ ಉದ್ದೇಶ. ಆ ನಿಟ್ಟಿನಲ್ಲಿ, ಇತ್ತೀಚೆಗೆ ಪ್ರಕಟವಾದ (ಬಹುಮಟ್ಟಿಗೆ, ಪುಸ್ತಕರೂಪದಲ್ಲಿ ಪ್ರಕಟವಾದ) ಗದ್ಯ, ಪದ್ಯ ಮತ್ತು ನಾಟಕ ಪ್ರಕಾರಗಳ ಒಂದಿಷ್ಟು, ಪ್ರಾತಿನಿಧಿಕ ಉದಾಹರಣೆಗಳನ್ನು ಸಂಕ್ಷಿಪ್ತವಾಗಿ ಪರಿಚಯಮಾಡಿಕೊಡುವ ಯತ್ನವನ್ನು ಈ ಕೆಳಗೆ ಮಾಡಲಾಗಿದೆ.

### ಎಚ್. ಕೆ. ನಂಜುಂಡಸ್ವಾಮಿಯವರ 'ಕಲಸುಮೇಲೋಗರ'

ನಂಜುಂಡಸ್ವಾಮಿ ಅಪ್ಪಟ ಮೈಸೂರಿಗರು, ಅಮೆರಿಕದಲ್ಲಿ ಶಸ್ತ್ರಚಿಕಿತ್ಸೆಯಲ್ಲಿ

ಉನ್ನತ ವ್ಯಾಸಂಗ ಮಾಡಿ ಪರಿಣತ ತಜ್ಞವೈದ್ಯರ ಗುಂಪಿಗೆ ಸೇರಿದವರು. 'ನಿಶ್ಶಬ್ದ ಸಂಗೀತ', 'ಕಾನನದ ಮಲ್ಲಿಗೆ', 'ಕಲಸುಮೇಲೋಗರ', 'ಸುಶ್ರುತ ನಡೆದ ಹಾದಿಯಲ್ಲಿ....' ಎಂಬ ನಾಲ್ಕು ಪುಸ್ತಕಗಳು ಕನ್ನಡ ಸಾಹಿತ್ಯಕ್ಕೆ ಇವರ ಕೊಡುಗೆ. ಶಸ್ತ್ರಚಿಕಿತ್ಸೆ ಇವರ ವೃತ್ತಿಯಾದರೆ ಕನ್ನಡ ಬರವಣಿಗೆ ಇವರ ವಿಶ್ರಾಂತ ಸಮಯವನ್ನು ಕಳೆಯುವ ಹವ್ಯಾಸ. 'ಗಿನ್ನಡ'ದಲ್ಲಿ 'ಗೀ.ಎಚ್.ಡಿ' ಪದವಿ ಗಳಿಸಿದ ಏಕೈಕ ಪಂಡಿತರೆಂದರೆ ಇವರೇ. ನನ್ನ ಮಾತಿನ ಅರ್ಥ ಆಗಬೇಕಿದ್ದಲ್ಲಿ 'ಗಿನ್ನಡ' ಎಂಬ ಇವರ ಸಂಶೋಧನಾತ್ಮಕ ಲಲಿತಪ್ರಬಂಧವನ್ನು ಓದಬೇಕು. ಇವರು ಪ್ರಕಟಿಸಿರುವ 'ಕಲಸುಮೇಲೋಗರ' ಪುಸ್ತಕದ ಮೊಟ್ಟಮೊದಲ ಪ್ರಬಂಧವೇ ಇದು.

'ಏನು, ಊಟ-ಗೀಟ ಮಾಡ್ತೀರೋ? ಇಲ್ಲ ಹೀಗೆ ಟೀವಿ ನೋಡ್ತಾ ಕೂತಿರ್ತೀರೋ' ಎಂದಳು ಲೀಲ. 'ಓ! ಆಗಲೇ ಊಟದ ಸಮಯವಾಯಿತೇನು? ಫುಟ್ ಬಾಲು-ಗಿಟ್ ಬಾಲು ಅಂತ ನೋಡಿಕೊಂಡು ಟೈಮ್ ಹೋದದ್ದೇ ಗೊತ್ತಾಗಲಿಲ್ಲ. ಈಗ ಎದ್ದು ಬಿಡುತ್ತೇನೆ. ಅಂದಹಾಗೆ ಅಡಿಗೆ ಏನು ಇವತ್ತು? ಪಲ್ಯ-ಗಿಲ್ಯ ಮಾಡಿದೆಯೋ ಇಲ್ಲ ಯಥಾಪ್ರಕಾರ ಅನ್ನ ಸಾರೋ?' ಹೀಗೆ ಶುರುವಾಗಿ ಗೀಟ, ಗಿಟ್‌ಬಾಲು, ಗಿಲ್ಯ, ಗಿದನೇಕಾಯಿ, ಗೀಲಂಗಿ, ಗಿಂಕೆ, ಗಿನ್ನಸಾರು ಮುಂತಾದ ಗಿನ್ನಡ ಶಬ್ದಗಳ ವ್ಯುತ್ಪತ್ತಿಯತ್ತ ಓದುಗನ ಗಮನ ಸೆಳೆಯುವ ಈ ಹಾಸ್ಯಪ್ರಬಂಧ ಈ ಪುಸ್ತಕದ ಅತ್ಯುತ್ತಮ ಲೇಖನಗಳಲ್ಲೊಂದು.

ನನ್ನ ಮುಸಲ್ಮಾನ ಸ್ನೇಹಿತನೊಬ್ಬ ಇದ್ದ. ಇತರರು ಉರ್ದುವಿನಲ್ಲಿ ಮಾತಾಡಿಸಿದರೂ ಆತ ಅಪ್ಪಟ ಕನ್ನಡದಲ್ಲಿ ಮಾತು ಪ್ರಾರಂಭಿಸುತ್ತಿದ್ದ. ಅದರಲ್ಲೂ ಪುಳಿಚಾರಿಗಳನ್ನು ಕಂಡಾಗ ಆತನ ಕನ್ನಡಪ್ರೇಮ ಅತಿಯಾಗಿ ಗಿನ್ನಡಪ್ರೇಮಕ್ಕೆ ತಿರುಗುತ್ತಿತ್ತು. 'ಏನ್ ಸಾರ್, ಬಹಳ ಖುಷೀಲಿರೋಹಾಗಿದೆ, ಮದ್ವೇಗ್-ಗಿದ್ವೇಗ್ ಹೋಗಿದ್ರೋ? ಅಥ್ವಾ ತಿಥಿ-ಗಿಥಿ ಊಟಾ ಮಾಡ್‌ಬಂದ್ರೋ? ಜುಟ್ ನಿಗರಿಸ್‌ಕೊಂಡು ಸಕತ್ತಾಗ್ ಲಾಡೂನೋ-ಗೀಡೂನೋ ಅಥ್ವಾ ವಡೇನೋ-ಗಿಡೇನೋ ತಿಂದ್‌ಬಂದಿರೋಹಾಗಿದೆ' ಮುಂತಾದ ಪ್ರಚಂಡ ಗಿನ್ನಡ ಮಾತುಗಳಿಂದ ಮಿತ್ರರ ಮನಸ್ಸನ್ನು ಸೂರೆಗೊಳ್ಳುತ್ತಿದ್ದ. ಅವನ ಗಿನ್ನಡವನ್ನು ಎಷ್ಟೊಂದು ಬಾರಿ ಕೇಳಿದ್ದರೂ ಗಿನ್ನಡ ವ್ಯಾಕರಣದ ಬಗ್ಗೆ ನಾನು ಎಂದೂ ತಲೆ ಕೆಡಿಸಿಕೊಂಡಿರಲಿಲ್ಲ. ಗಿನ್ನಡ ವ್ಯಾಕರಣ ಮತ್ತು ಗಿನ್ನಡ ಶಬ್ದಕೋಶವನ್ನು ಮೊಟ್ಟಮೊದಲಾಗಿ ಮುದ್ರಣದಲ್ಲಿ ನೀವು ನೋಡುವುದು ಈ ಪ್ರಬಂಧದಲ್ಲೇ. ಅದಷ್ಟೇ ಅಲ್ಲ, ಗಿನ್ನಡ ಪರಾವಲಂಬಿ, ಕನ್ನಡವಿಲ್ಲದೇ ಗಿನ್ನಡಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ ಎಂಬ ವಿಷಯವನ್ನು ಆಧಾರಸಹಿತ ಅತ್ಯಂತ ಸ್ವಾರಸ್ಯಕರವಾಗಿ ಮಂಡಿಸಿದವರು ಡಾ. ನಂಜುಂಡಸ್ವಾಮಿಯವರೇ.

ಈ ಪ್ರಬಂಧದೊಂದಿಗೆ ಪ್ರಾರಂಭವಾಗುವ 'ಕಲಸುಮೇಲೋಗರ'ದಲ್ಲಿ ಇನ್ನೂ ಹಲವು ನಗೆಬುಗ್ಗೆಯನ್ನು ಹರಿಸುವ ಉತ್ತಮ ಪ್ರಬಂಧಗಳಿವೆ. ಮೈಸೂರಿನ ಬೀದಿ ನಾಯಿಯ ಕತೆಯನ್ನು ಹೇಳುವುದಕ್ಕೆ ಪೀಠಿಕೆಯಾಗಿ ಅಮೆರಿಕದಲ್ಲಿ ನಾಯಿ ಸಾಕುವವರ ಬವಣೆಗಳನ್ನು ಕಚಕುಳಿ ಇಡುತ್ತ ವಿವರಿಸುವ 'ಶ್ವಾನಾನುಬಂಧ' ಮತ್ತೊಂದು ಪ್ರಬಂಧ. ಮೈಸೂರಿನ ಸಂಜೆಗಳಲ್ಲಿ ಗಾಳಿಸಂಚಾರಕ್ಕೆ ಹೋಗುವ ನೆಪದಲ್ಲಿ ಟಾಪಿಕ್ಕಿನಿಂದ ಟಾಪಿಕ್ಕಿಗೆ ನೆಗೆಯುತ್ತ ಊರಿನ ಮತ್ತು ದೇಶದ ಆಗುಹೋಗುಗಳನ್ನು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಚರ್ಚಿಸಿ ತಾರ್ಕಣೆಮಾಡುವ ನಾಲ್ಕು ಸ್ನೇಹಿತರ ಪಾತ್ರಗಳನ್ನು ಚಿತ್ರಿಸುವ 'ನಮ್ಮೂರ ನಾಲ್ಕು ಸಮಸ್ತರು' ಮತ್ತೊಂದು. ಇದೇ ರೀತಿ, ಮೈಸೂರಿನಲ್ಲಿ ಜನಗಳು ಯಾರದ್ದಾದರೋ ಮನೆಯ ವಿಳಾಸವನ್ನು ಕೇಳಿದರೆ ಹೇಗೆ ಅರ್ಥಂಬರ್ಥದಾರಿತೋರಿ ಒಂದಿಷ್ಟು ದಿಕ್ಕು ತಪ್ಪಿಸಿ ಗೊಂದಲವನ್ನುಂಟು ಮಾಡುತ್ತಾರೆ ಎಂಬ ವಿಚಾರವನ್ನು ಅತ್ಯಂತ ರೋಚಕವಾಗಿ ವಿವರಿಸುವ 'ಯಾರನ್ನು ಕೇಳಿದರೂ ಹೇಳುತ್ತಾರೆ' ಎಂಬ ಪ್ರಬಂಧ. ಇದನ್ನೋದುವಾಗ, ಅಮೆರಿಕನ್ನರ ಚಾಳಿಯ ನೆನಪಾಗುತ್ತದೆ. 'ಮೊದಲು ಎಡಕ್ಕೆ ತಿರುಗಿ, ನಂತರ ಹತ್ತು ಮೈಲು ನೇರ ಹೋಗಿ, ಅದಾದ ಮೇಲೆ ಒಂದು ಬಲತೆಗೆದುಕೊಳ್ಳಿ' ಮುಂತಾಗಿ ಹೇಳಿ, ಕೊನೆಗೆ 'ಗೋ ಆಲ್ ದಿ ವೇ ಟು ದಿ ಎಂಡ್, ಆಂಡ್ ಮೇಕ್ ಎ ರೈಟ್, ಯು ಕ್ಯಾಂಟ್ ಮಿಸ್ ಇಟ್' ಎಂದು ಹೇಳಿ ಅಥಿಷ್ಟೂ ನಮಗೆ ನೆನಪಿನಲ್ಲಿರುತ್ತದೆ ಎಂದು ಭಾವಿಸುವ ಅವರ ಚಾಳಿ!

ಸ್ವಾಮಿಯವರ ಈ ಕೆಲವು ಪ್ರಬಂಧಗಳನ್ನು ಓದುತ್ತಿದ್ದರೆ ನಾವೇ ಸುಮಾರು ನಲ್ವತ್ತು ವರ್ಷಗಳ ಹಿಂದಿನ ಮೈಸೂರನ್ನು ಸುತ್ತಿಬಂದಂತೆ ಆಗುತ್ತದೆ. ಡಾ. ಸ್ವಾಮಿಯವರ ಲೇಖನ ಕೇವಲ ಹಾಸ್ಯದಲ್ಲೇ ಮುಗಿದುಹೋಗುವುದಿಲ್ಲ. ಹಲವು ಹತ್ತು ಉಪಯುಕ್ತ ಮಾಹಿತಿಗಳೂ ದೊರಕುತ್ತವೆ. ಉದಾಹರಣೆಗೆ 'ಅಮೆರಿಕದಲ್ಲೊಂದು ಚುನಾವಣೆ' ಗೋರ್ ಮತ್ತು ಬುಷ್‌ರ ನಡುವೆ ನಡೆದ ಮತದಾನದ ಹಗರಣವನ್ನು ಪದರಪದರವಾಗಿ ಬಿಡಿಸುವ ಒಂದು ಉತ್ತಮ ಲೇಖನ. ಹಾಗೇ, 'ಇದಿ ನ್ಯಾಯಮಾ?' ಎಂಬ ಹಾಸ್ಯಲೇಖನ ಅಮೆರಿಕದ ಕಾನೂನು ಮತ್ತು ಶ್ರೀಸಾಮಾನ್ಯರೂ, ವಕೀಲರೂ ಕಾನೂನನ್ನು ದುರುಪಯೋಗಪಡಿಸಿಕೊಳ್ಳುವಾಗ ನಡೆಯುವ ಮೋಜನ್ನು ಚಿತ್ರಿಸುವುದರಲ್ಲಿ ಸಫಲವಾಗುತ್ತದೆ. ಒಟ್ಟಿನಲ್ಲಿ, ವೈದ್ಯರಾದ ನಂಜುಂಡಸ್ವಾಮಿ ಕನ್ನಡದಲ್ಲಿ ಹಾಸ್ಯ ಬರವಣಿಗೆಯ ಒಂದು ಸೂಕ್ಷ್ಮಮಾರ್ಗವನ್ನು ಕರಗತಮಾಡಿಕೊಂಡಿದ್ದಾರೆ ಎಂಬುದಕ್ಕೆ 'ಕಲಸುಮೇಲೋಗರ'ವೇ ಸಾಕ್ಷಿ.

## ಅಲಮೇಲು ಅಯ್ಯಂಗಾರ್ ಅವರ ನಗೆ ನಾಟಕಗಳು

ಶ್ರೀಮತಿ ಅಲಮೇಲು ಅಯ್ಯಂಗಾರ್ ಅವರ ಹೆಸರು ಅಮೆರಿಕದ ಕನ್ನಡಿಗರ

ನಡುವೆ ತುಂಬ ಪ್ರಸಿದ್ಧವಾದದ್ದು. ಅಲ್ಲಿನ ಕನ್ನಡ ಕೂಟಗಳಲ್ಲಿ ಅವರು ಬರೆದು, ನಿರ್ದೇಶಿಸಿ, ಅಭಿನಯಿಸಿರುವ ನಾಟಕಗಳು ಕನ್ನಡಿಗರ ವಲಯಗಳಲ್ಲಿ ಜನಪ್ರಿಯವಾಗಿವೆ. ದೈನಂದಿನ ಜೀವನ ಜಂಜಾಟದಲ್ಲಿ ತೊಳಲಿ ಬಳಲುತ್ತಿರುವ, ನಾನಾ ರೀತಿಯ ಮಾನಸಿಕ ಒತ್ತಡಗಳಿಗೆ ಸಿಲುಕಿ ಅವುಗಳಿಂದ ಬಿಡುಗಡೆ ಬಯಸುತ್ತಿರುವ ಅಮೆರಿಕನ್ನಡಿಗರು ಅಲಮೇಲು ಅವರು ಬರೆದು ಪ್ರಯೋಗಿಸುತ್ತಿರುವ ನಾಟಕಗಳಿಂದ ಎಷ್ಟೊಂದು ಸಂತೋಷ ಸಮಾಧಾನಗಳನ್ನು ಪಡೆಯುತ್ತಾರೆ ಎಂಬುದನ್ನು ಅಲ್ಲಿನ ಮಿತ್ರರಿಂದ ಕೇಳಿದ್ದೇನೆ. ಅಷ್ಟೇ ಅಲ್ಲ; ಈ ಸಂಕಲನದ ನಾಲ್ಕು ನಾಟಕಗಳಲ್ಲಿ 'ಅಪ್ಡೇಟ್ ಅಂಬುಜಮ್ಮ' ಮತ್ತು 'ಹೈಟೆಕ್ ಹಯವದನಾಚಾರ್' ಎಂಬ ಎರಡನ್ನು ವಿಡಿಯೋಗಳಲ್ಲಿ ನೋಡಿ ನಕ್ಕು ನಲಿದಾಡಿದ್ದೇನೆ. ಈ ಮಾತುಗಳು ನನ್ನವಲ್ಲ, ಪ್ರಸಿದ್ಧ ಕನ್ನಡ ಬರಹಗಾರರಾದ ಡಾ. ಪ್ರಭುಶಂಕರ ಅವರು ಅಲಮೇಲು ಅವರ ನಾಟಕ ಸಂಕಲನ 'ಹೈಟೆಕ್ ಹಯವದನಾಚಾರ್ ಮತ್ತು ಇತರ ನಾಟಕಗಳು' ಪುಸ್ತಕದ ಬೆನ್ನುಡಿಯಲ್ಲಿ ವ್ಯಕ್ತಪಡಿಸಿದ ಮಾತುಗಳು. ಈ ಪ್ರತಿಭಾವಂತ ನಾಟಕಕಾರ್ತಿಗೆ ಇದಕ್ಕಿಂತ ಹೆಚ್ಚಿನ ಶಹಭಾಶ್‌ಗಿರಿಯನ್ನು ನಾನೇನೂ ಕೊಡಲಾರೆ.

ಅಲಮೇಲು ಅವರ ನಾಟಕ ಪ್ರಪಂಚ ಕರ್ನಾಟಕವನ್ನು ಅಮೆರಿಕಾದಲ್ಲಿ ಕಸಿ ಮಾಡುವ ಒಂದು ಸಾರ್ಥಕ ಪ್ರಯತ್ನ ಎನ್ನಬಹುದು. ಸರಳ ಸಂವಾದ, ಗರಿಗಟ್ಟುವ ಹಾಸ್ಯ, ದೃಶ್ಯವತ್ತಾಗುವ ಕಥಾನಕಗಳು, ವೈವಿಧ್ಯಮಯ ಪಾತ್ರಲೋಕ-ಇವೆಲ್ಲ ಈ ನಾಟಕಗಳಲ್ಲಿ ಸೇರಿಕೊಂಡು ಪ್ರೇಕ್ಷಕರನ್ನು ಹಸನ್ಮುಖಿಗಳನ್ನಾಗಿ ಮಾಡಲು ದುಡಿಯುತ್ತವೆ. ನಾಟಕಕಾರ್ತಿಯ ರಚನಾಶಕ್ತಿ, ಹಾಸ್ಯಪ್ರಜ್ಞೆ ಮತ್ತು ಸೂಕ್ಷ್ಮ ಅನುಭವಗ್ರಹಣ ಸತ್ತ್ವಗಳು ಈ ನಾಟಕಗಳಲ್ಲಿ ಹದವಾಗಿ ಆವರಣಗೊಂಡಿವೆ ಎಂದು ಸಂಕೋಚವಿಲ್ಲದೆ ಹೇಳಿ 'ಈ ಎಲ್ಲ ನಾಟಕಗಳಿಗೆ ಇನ್ನಷ್ಟು ಪ್ರಯೋಗಭಾಗ್ಯ ದೊರೆಯಲಿ ಎಂದು ಹಾರೈಸುತ್ತೇನೆ'. ಈ ಮಾತುಗಳೂ ನನ್ನವಲ್ಲ. ಅಲಮೇಲು ಅವರ ನಾಟಕಸಂಕಲನಕ್ಕೆ ಮುನ್ನುಡಿ ಬರೆದಿರುವ ಕನ್ನಡದ ಸುಪ್ರಸಿದ್ಧ ಹಾಸ್ಯಬರಹಗಾರ ಅ.ರಾ. ಮಿತ್ರ ಅವರದ್ದು.

ಅಲಮೇಲು (ಇವರು ಕನ್ನಡದ ವರಕವಿಗಳಲ್ಲಿ ಒಬ್ಬರಾದ ಪುತಿನ ಅವರ ಮಗಳು) ಅಮೆರಿಕದಲ್ಲಿ ನೆಲೆಸಿದ್ದರೂ ಕನ್ನಡ ಬರವಣಿಗೆಯನ್ನು ನಿರಂತರವಾಗಿ ಮಾಡುತ್ತ ಬಂದವರ ಪೈಕಿ ಒಬ್ಬರು. ಇವರ ಹುಟ್ಟು ಮತ್ತು ಇವರು ಬೆಳೆದ ವಾತಾವರಣ ಇವುಗಳ ಕಾರಣದಿಂದ ಕನ್ನಡ ಭಾಷೆ ಅಲಮೇಲು ಅವರಿಗೆ ಸುಲಭವಾಗಿ ಒಲಿದು ಬಂದಿದೆ. ತಮ್ಮ ಸುತ್ತ ಇರುವ ನಿಜಜೀವನದ ಪಾತ್ರಗಳನ್ನು ರಂಗದ ಮೇಲೆ ತರುವ ತಂತ್ರ ಇವರಿಗೆ ಸುಲಭವಾಗಿ ದಕ್ಕಿದೆ. ತಮ್ಮ ಮಕ್ಕಳ ಮನೆಗೆ ಭಾರತದಿಂದ ಬಂದ ತಂದೆ ತಾಯಿಗಳು ಹೊಸದರಲ್ಲಿ ಇಲ್ಲಿನ ಜೀವನಕ್ಕೆ ಹೊಂದಾಣಿಕೆ ಮಾಡಿಕೊಳ್ಳಲಾಗದೇ

ಚಡಪಡಿಸಿದರೂ, ಅಂಥವರಲ್ಲಿ ಹಲವರು 'ಅಪ್ಟುಡೇಟ್ ಅಂಬುಜಮ್ಮ' ನಂಥವರು ಇಲ್ಲಿಯೇ ನೆಲೆಸಿದ ತಮ್ಮ ಮಕ್ಕಳಿಗಿಂತಲೂ ಒಂದು ಹೆಜ್ಜೆ ಮುಂದಿಟ್ಟು ಮೊಮ್ಮೊಕ್ಕಳ ನಡೆನುಡಿಗಳಿಗೆ ಅಳವಡಿಸಿಕೊಳ್ಳುತ್ತಾರೆ ಎಂಬ ವಸ್ತುವನ್ನು 'ಅಪ್ಟುಡೇಟ್ ಅಂಬುಜಮ್ಮ' ಎಂಬ ನಾಟಕವಾಗಿ ಸೃಷ್ಟಿಸಿದ್ದಾರೆ. ಮಂಗಳೂರು ಕನ್ನಡ ಮಾತಾಡಿ ಎಲ್ಲರ ತಲೆ ತಿನ್ನುವ ಜಯಶ್ರೀ, ಸಾಬರ ಕನ್ನಡ ಮಾತಾಡಿ ನಗಿಸುವ ಮೈಸೂರಿನ ಇಸ್ಮಾಯಿಲ್ ಸಾಹೇಬ, ಮೊಮ್ಮಗ ಅಜ್ಜಿಯರ ನಡುವಿನ ಸರಸ ಸಂಭಾಷಣೆ ಇವೆಲ್ಲ ಸೇರಿಕೊಂಡು ಹಾಸ್ಯದ ಹೊನಲನ್ನು ಹರಿಸುವ 'ಅಪ್ಟುಡೇಟ್ ಅಂಬುಜಮ್ಮ' ವಯಸ್ಸಾದರೂ ಮೊಮ್ಮಗನೊಡನೆ ಫುಟ್‌ಬಾಲ್ ಆಟಕ್ಕೆ ಹೋಗಿಬರಲು ಹೇಸುವುದಿಲ್ಲ!

ಭಾರತದಿಂದ ಸ್ನಾತಕೋತ್ತರ ಪದವಿಗಾಗಿ ಬರುವ ಗಂಡು ಹುಡುಗರು, ಹುಡುಗಿಯರನ್ನು 'ಇಂಪ್ರೆಸ್' ಮಾಡುವ ಸಲುವಾಗಿ ಅವರನ್ನು ಹೊಟೇಲಿಗೆ ಕರೆದುಕೊಂಡು ಹೋಗಲು ಬಯಸಿ, ಅದು ದುಬಾರಿಯಾಗಬಹುದೆಂದು ಹೆದರಿ, ಮನೆಯಲ್ಲೇ ಅಡುಗೆ ಮಾಡಿ ಬಡಿಸುವ ಸಂದರ್ಭವನ್ನೇ ಮುಖ್ಯವಸ್ತುವನ್ನಾಗಿಟ್ಟುಕೊಂಡು ಬರೆದಿರುವ ನಾಟಕ 'ನಳಪಾಕ'. ಈ ದೇಶದಲ್ಲಿ ಉನ್ನತವ್ಯಾಸಂಗಕ್ಕೆಂದು ಬಂದ ಎಲ್ಲ ಹುಡುಗರೂ ಒಂದಿಲ್ಲ ಒಂದು ರೀತಿ ಪಟ್ಟ ಅನುಭವವನ್ನೆಲ್ಲ ಇಲ್ಲಿ ಭಟ್ಟಿ ಇಳಿಸಿದಂತೆ ಅನುಭವವಾಗುತ್ತದೆ. 'ಸಾಮರಸ್ಯಕ್ಕೆ ಒಂದು ಸಲಹೆ' ಎಂಬ ನಾಟಕದಲ್ಲಿ, ಪರಸ್ಪರ ಹೊಂದಾವಣೆಯಲ್ಲಿ ತೊಂದರೆ ಅನುಭವಿಸುತ್ತಿರುವ ದಂಪತಿಗಳಿಗೆ ಕೌನ್ಸೆಲಿಂಗ್ ಮಾಡುವ ಪದ್ಮ ತನ್ನ ಸ್ವಂತ ದಾಂಪತ್ಯದಲ್ಲೇ ಕಿರಿಕಿರಿ ಅನುಭವಿಸುತ್ತಿರುವವಳು. ದಾಂಪತ್ಯದ ಕಿರಿಕಿರಿಗಳನ್ನು ಸ್ವಲ್ಪ ಲಘುವಾಗಿ ನೋಡಿ ಪ್ರೇಕ್ಷಕರಿಗೆ ಕಚುಕುಳಿ ಇಡುವ ಯತ್ನ ಈ ನಾಟಕದಲ್ಲಿದೆ.

ಅಮೆರಿಕದ ದೇವಸ್ಥಾನಗಳಲ್ಲಿ ಪೂಜೆ ಮಾಡಿಸಲು ಬಂದ ಹಲವಾರು ಪುರೋಹಿತರು ದುಡ್ಡಿನ ದಾಹಕ್ಕೆ ಸಿಕ್ಕಿಬೀಳುವುದು ಒಂದು ರೀತಿಯ ದುರಂತ. ಅವಕಾಶಗಳ ತವರಾದ ಅಮೆರಿಕದ ತಂತ್ರಜ್ಞಾನವನ್ನು ಕೈಗೂಡಿಸಿಕೊಂಡು ಇತರ ಭಾರತೀಯರಿಗೆ ಹೊಟ್ಟೆಕಿಚ್ಚಾಗುವಂತೆ ಆಸ್ತಿ ಮಾಡಿರುವ ಹಲವು ಪುರೋಹಿತರ ನಿದರ್ಶನಗಳಿವೆ. ಇದನ್ನೇ ಮೂಲವಸ್ತುವನ್ನಾಗಿಟ್ಟುಕೊಂಡು, ಅಮೆರಿಕದ ಭಾರತೀಯರಿಗೆ ತೀರ್ಥ-ಪ್ರಸಾದದ ಹೆಸರಿನಲ್ಲಿ ನೀರು ಕುಡಿಸುತ್ತಿರುವ ಹೈಟೆಕ್ ಪೂಜಾರಿ ಮತ್ತು ಅವನ ಕುಟುಂಬ ಮತ್ತು ಸಹಚರರು ನಡೆಸುವ ನಾಟಕವೇ ಸುಪ್ರಸಿದ್ಧವಾದ 'ಹೈಟೆಕ್ ಹಯವದನಾಚಾರ್'. ಒಟ್ಟಿನಲ್ಲಿ, ಅಲಮೇಲು ಅವರು ಕನ್ನಡ ಪ್ರಹಸನಗಳ ಮೂಲಕ ಹಾಸ್ಯಮಾಧ್ಯಮವನ್ನು ತಮ್ಮದಾಗಿಸಿಕೊಂಡಿದ್ದಾರೆ.

## ಶ್ರೀವತ್ಸ ಜೋಶಿಯವರ 'ವಿಚಿತ್ರಾನ್ನ'

೨೦೦೨ರ ವಿಜಯದಶಮಿಯಂದು ಕನ್ನಡ ಜಾಲತಾಣವಾದ 'ಅದುವೆಕನ್ನಡ' (Thatskannada.com)ದಲ್ಲಿ ಪ್ರಾರಂಭವಾಗಿ ಇನ್ನೂ ಅನವರತವಾಗಿ ಪ್ರತಿ ಮಂಗಳವಾರವೂ ಪ್ರಕಟವಾಗುವ 'ವಿಚಿತ್ರಾನ್ನ' ಎಂಬ ವೈವಿಧ್ಯಪೂರ್ಣ ಅಂಕಣ ಕನ್ನಡ ಜಾಲದ ಓದುಗರಿಗೆ ('ಅದುವೆಕನ್ನಡದ' ಸಂಪಾದಕರಾದ ಶಾಮಸುಂದರ್ ಅವರ ಭಾಷೆಯಲ್ಲಿ ಹೇಳುವುದಾದರೆ, ಜಾಲಿಗರಿಗೆ) ಚಿರಪರಿಚಿತ. ಈ ಅಂಕಣ ಬರಹ ಈಗಾಗಲೇ ಎರಡು ಶತಕಗಳನ್ನು ಬಾರಿಸಿ ಮೂರನೆಯ ಶತಕದತ್ತ ಧಾವಿಸುತ್ತಿದೆ. 'ವಿಚಿತ್ರಾನ್ನ' ಮೊದಲನೆಯ ಶತಕವನ್ನು ಬಾರಿಸಿದಾಗ ಶುಭಕೋರಿ ಬರೆದ ಕಿರು ಪತ್ರವೊಂದು ನನ್ನ ಗಣಕದಡಿಯಲ್ಲಿ ಅಡಗಿ ಕೂತಿತ್ತು. ಅದನ್ನು 'ಜಾಲಾ'ಡಿಸಿ ತೆಗೆದು ಸ್ವಲ್ಪ ತುಂಡರಿಸಿ ಅದರ ಸಾರಾಂಶವನ್ನು ಈ ಮುಂದೆ ಪ್ರಸ್ತುತಪಡಿಸಿದ್ದೇನೆ. ಜೋಶಿಯವರ ಕಂಗ್ಲೀಷಿನಲ್ಲಿ ಹೇಳುವುದಾದರೆ-ಟೈಪಿಸಿದ್ದೇನೆ ಅಥವಾ ಪ್ರೆಸೆಂಟಿಸಿದ್ದೇನೆ:

ನಿಮ್ಮ 'ವಿಚಿತ್ರಾನ್ನ' ಅಂಕಣ, ಶತಕವನ್ನು ಬಾರಿಸ ಹೊರಟಿರುವುದು ತುಂಬಾ ಸಂತೋಷ. ಪ್ರತಿವಾರವೂ ತಪ್ಪದೆ ವಿವಿಧ ವಿಷಯಳ ಮೇಲೆ ಸ್ವಾರಸ್ಯಕರವಾಗಿ ಬರೆಯುವ ನಿಮ್ಮ ಕಲೆಗೆ ತಲೆತೂಗುವವರು ವಿಶ್ವದ ನಾನಾ ಮೂಲೆಗಳಲ್ಲಿದ್ದಾರೆ ಎಂಬುದು ಹೆಮ್ಮೆಯ ವಿಷಯ. ನಿಮ್ಮ ಬರವಣಿಗೆಯಲ್ಲಿ pun ಇದೆ, punch ಇದೆ, fun ಇದೆ, information ಜೊತೆಗೆ funformationಊ ಇದೆ, ಅಂತೂ ಭಾಳ ಛಲೋ ಅದೆ! ನಿಮ್ಮ ವಿಚಾರಧಾರೆ ಭಾರತದಿಂದ ಅಮೇರಿಕಕ್ಕೆ ಓಡಾಡುವರೀತಿ, ನಿಮ್ಮ ವಸ್ತುವೈವಿಧ್ಯದಲ್ಲಡಗಿರುವ ಜೀವನಪ್ರೀತಿ, ಮತ್ತು ನೀವು ಓದುಗರ ಅಭಿಪ್ರಾಯಗಳಿಗೆ ಸ್ಪಂದಿಸುವ ನೀತಿ ಮನಸ್ಸಿಗೆ ಆಪ್ಯಾಯಮಾನ. ಆಯ್ದ ಹಲವು ಲೇಖನಗಳನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಏಕೆ ಪ್ರಕಟಿಸಬಾರದು? ಗಣಕವನ್ನು ತಲಪಲಾಗದ, ಮುದ್ರಣವನ್ನೇ ನಂಬಿರುವ ಓದುಗರನ್ನೂ ರಂಜಿಸಬಹುದಲ್ಲ ಎಂಬ ಸಲಹೆಯೊಂದಿಗೆ, ಬೆನ್ನು ತಟ್ಟುತ್ತಾ,ಇತ್ಯಾದಿ ಇತ್ಯಾದಿ.

ಚಿತ್ರ-ವಿಚಿತ್ರ ಮನರಂಜನೆಯ ಬರಹಗಳನ್ನೊಳಗೊಂಡಿರುವ 'ವಿಚಿತ್ರಾನ್ನ' ಪುಸ್ತಕ ರೂಪದಲ್ಲಿ ೨೦೦೫ರಲ್ಲಿ ಪ್ರಕಟಗೊಂಡಿತು. ಅಂಕಣದ ಮೊದಲ ೧೨೬ ಕಂತುಗಳು ಈ ಪುಸ್ತಕದಲ್ಲಿ ಪ್ರಕಟಗೊಂಡಿವೆ. ಜೋಶಿಯವರು ಹಾಸ್ಯಕ್ಕೆಂದೇ ಜೋಕುಗಳನ್ನು ಬರೆಯುವವರಲ್ಲ. ಅವರು ಲೇಖನಗಳನ್ನು ಬರೆಯುವಾಗ ವಿಷಯಗಳನ್ನು ಮಾಹಿತಿಗಳ ಸಹಿತ ನಾನಾ ಮೂಲೆಗಳಿಂದ ಶೇಖರಿಸಿ ಅವಕ್ಕೆ ತಮ್ಮದೇ ಆದ ಹಾಸ್ಯಲೇಪನವನ್ನು ಮಾಡಿ ಬಡಿಸುತ್ತಾರೆ. ಎಲ್ಲಕ್ಕಿಂತ ಇವರ ಬರವಣಿಗೆಯಲ್ಲಿ ಬರುವ ದ್ವಂದ್ವಾರ್ಥಗಳು,

ಇಂಗ್ಲಿಷ್ ಮತ್ತು ಕನ್ನಡದ ಹೆಣೆತ (ಒಮ್ಮೊಮ್ಮೆ ಬೆಸುಗೆ) ಖುಷಿಕೊಡುತ್ತವೆ. ಉದಾಹರಣೆಗೆ: ಜನ worry ಯಲ್ಲಿರುವಾಗಲೇ ಬರುವ ಜನವರಿ ಮಾಸ; ಐಶ್ವರ್ಯಾ ರೈ ಇದ್ದಹಾಗೆ ಎನ್ನಾ-ರೈ; ಫೋನ್ ಮಾಡಲು ಆಸಕ್ತನಾದವ ಫೋನಾಸಕ್ತ; ಇತ್ಯಾದಿ. ಒಟ್ಟಿನಲ್ಲಿ ಶ್ರೀವತ್ಸ ಜೋಶಿಯವರು ಅಮೆರಿಕದಲ್ಲಿರುವ ಹಾಸ್ಯ ಬರಹಗಾರರಲ್ಲಿ ತಮ್ಮ ಸ್ಥಾನವನ್ನು ಪಡೆದುಕೊಂಡಿದ್ದಾರೆನ್ನಲು ಯಾವ ಅಡ್ಡಿಯೂ ಇಲ್ಲ.

## ಅಮೆರಿಕನ್ನಡಿಗರ ಕವನಗಳಲ್ಲಿ ಹಾಸ್ಯ

ಪ್ರಾಯಶಃ ಅಮೆರಿಕದ ಕನ್ನಡ ಬರಹಗಾರರು ಕವನರೂಪದಲ್ಲಿ ಅಭಿವ್ಯಕ್ತಿಗೊಳಿಸಿದಷ್ಟು ಹಾಸ್ಯ, ಗದ್ಯರೂಪದಲ್ಲಿ ಆಗಿಲ್ಲವೇನೋ ಎನ್ನಿಸುತ್ತದೆ. ಇದಕ್ಕೆ ಹಲವು ಕಾರಣಗಳಿವೆ. ಮೊದಲನೆಯದಾಗಿ, ಚುಟುಕಗಳನ್ನು ಬರೆಯಲು ಹೆಚ್ಚು ಸಮಯ ಹಿಡಿಯುವುದಿಲ್ಲ. ಪ್ರತಿಭೆಯುಳ್ಳ ಸೋಮಾರಿಗಳು ಅಥವಾ ನಿಜವಾಗಿಯೂ ಸಮಯದ ಅಭಾವದಿಂದ ನರಳುತ್ತಿರುವವರು, ಸ್ಫೂರ್ತಿ ಬಂದಾಗ ನಾಲ್ಕು ಸಾಲುಗಳನ್ನು ಗೀಚಿಹಾಕುತ್ತಾರೆ. ಇದನ್ನು ನಾನು ಲಘುವಾಗಿ ಹೇಳುತ್ತಿಲ್ಲ. ಯಾವುದಾದರೂ ವಾರ್ಷಿಕ ಸಂಚಿಕೆಯ ಸಂಪಾದಕತ್ವ ವಹಿಸಿದವರನ್ನು ಕೇಳಿ ನೋಡಿ. ಪ್ರಬಂಧ ಬರೆಯಿರಿ ಎಂದರೆ, 'ಸ್ವಾಮಿ ನಮಗೆಲ್ಲಿದೆ ಪುರುಸೊತ್ತು' ಎನ್ನುತ್ತಾರೆ. ಪ್ರಬಂಧ ಬರೆಯುವ ಮುನ್ನ ಒಂದಿಷ್ಟು ಓದಬೇಕಾಗುತ್ತದೆ. ಓದಿದ್ದನ್ನು ಜೀರ್ಣಿಸಿಕೊಳ್ಳಬೇಕಾಗುತ್ತದೆ, ಅದರ ಬಗ್ಗೆ ಚಿಂತಿಸಿ ಮಂಥನಮಾಡಿದಮೇಲೆ ಹೊಸದೊಂದು ವಿಷಯ ಹೊಳೆದ ಮೇಲಲ್ಲವೇ ಪ್ರಬಂಧ ಬರೆಯುವುದು? ಕಥೆಯೂ ಅಷ್ಟೆ, ಪಾತ್ರಗಳ ಬಗ್ಗೆ ಎಷ್ಟೊಂದು ಯೋಚಿಸಬೇಕು, ಅದು ನಡೆಯುವ ಸ್ಥಳವನ್ನು ಸಂಶೋಧಿಸಿ ಕಾಲ, ದೇಶ ಮುಂತಾದವೆಲ್ಲ ಒಂದಕ್ಕೊಂದು ಹೊಂದಿಕೊಳ್ಳುವಹಾಗೆ ಬರೆಯಬೇಕು. ಅದಕ್ಕೆಲ್ಲ ಎಲ್ಲಿದೆ ವ್ಯವಧಾನ? ಹೀಗಾಗಿ, ಪದ್ಯ ಬರೆದು ಕಳುಹಿಸುವವರೇ ಹೆಚ್ಚು. ಹಾಗೆಂದಮಾತ್ರಕ್ಕೆ ಸಂಪಾದಕರ ಕೈಗೆ ಸಿಕ್ಕ ಕವನಗಳನ್ನೆಲ್ಲ ಪ್ರಕಟಿಸಲು ಸಾಧ್ಯವೇ? ಕೆಲವು ಕವಿಗಳಂತೂ ಒಂದೇ ಸಾಲಿನ ಕವಿತೆ, ಒಂದೇ ಪದದ ಕವಿತೆ, ಒಂದೇ ಅಕ್ಷರದ ಕವಿತೆ, ಕೇವಲ ಚಿಹ್ನೆಗಳಿಂದ ಕೂಡಿದ ಕವಿತೆ ಮುಂತಾಗಿ ಪ್ರಯೋಗಗಳನ್ನು ಮಾಡಿದ್ದಾರೆ. (ಉದಾಹರಣೆಗೆ ಕೆ.ಆರ್. ಎಸ್. ಮೂರ್ತಿಯವರ ಪರಮಾಣು ಕವಿತೆಗಳನ್ನು ನೋಡಬಹುದು.) ಅಂಥಾ ಪ್ರಯೋಗಗಳು ಕಾವ್ಯಪ್ರೇಮಿಗಳನ್ನು ಕಾಡುತ್ತವೆ, ಸಾಧಾರಣ ಓದುಗರನ್ನು ತಿಣುಕುವಂತೆ ಮಾಡುತ್ತವೆ, ಹಾಗೇ ಒಂದಿಷ್ಟು ಹಾಸ್ಯಾನುಭವವನ್ನಂತೂ ಕೊಡುತ್ತವೆ ಎನ್ನಲು ಅಡ್ಡಿಯಿಲ್ಲ. ಇಷ್ಟೆಲ್ಲ ಕಾವ್ಯಸಮೃದ್ಧಿ ಇದ್ದರೂ ಹಾಸ್ಯಕವಿತೆಗೇ ಮೀಸಲಾದ ಕವನಸಂಗ್ರಹಗಳು ಅಮೆರಿಕದಲ್ಲಿ ಇನ್ನೂ ಪ್ರಕಟವಾದಂತೆ ಕಾಣಲಿಲ್ಲ.

ಆದರೂ ಕವಿತೆಯಲ್ಲಿ ಹಾಸ್ಯವನ್ನು ವ್ಯಕ್ತಪಡಿಸಿದವರ ಒಂದೆರಡು

ಉದಾಹರಣೆಗಳನ್ನು ಪ್ರಸ್ತುತಪಡಿಸದಿದ್ದರೆ, ಈ ಲೇಖನ ಅಪೂರ್ಣವೆನಿಸಿಬಿಡಬಹುದೆಂಬ ಕಾರಣದಿಂದ ಒಂದೆರಡು ಚುಟುಕಗಳನ್ನಾದರೂ ಪರಿಶೀಲಿಸೋಣ. ಶಶಿಕಲಾ ಚಂದ್ರಶೇಖರ್ ಅವರು ಉತ್ತಮ ಕತೆಗಾರ್ತಿ, ಸಾಕಷ್ಟು ಕವನಗಳನ್ನೂ ಬರೆದಿದ್ದಾರೆ. ಅವರ ಗಂಭೀರ ಕವಿತೆಗಳ ಜೊತೆಗೆ ಅನೇಕ ಚುಟುಕಗಳನ್ನೂ ಬರೆದಿದ್ದಾರೆ. ಅಂಥಾ ಕೆಲವು ಚುಟುಕಗಳಲ್ಲಿ ಅಮೆರಿಕದ ಜೀವನದೃಷ್ಟಿಯ ಇಣುಕುನೋಟವನ್ನು ಕಾಣಬಹುದು. ಓದುಗರನ್ನು ಕೀಟಲೆ ಮಾಡಿ ಕಚುಗುಳಿ ಇಡುವ ಹಲವಾರು ಚುಟುಕುಗಳನ್ನು ಅವರು ಪ್ರಕಟಿಸಿದ್ದಾರೆ. ಉದಾಹರಣೆಗೆ, ಮಗಳು ಅಮೆರಿಕನ್ ಹುಡುಗನ ಕೈಹಿಡಿದ ಸಂದರ್ಭದಲ್ಲಿ ಅತ್ತೆ ವಿಶ್ವಕುಟುಂಬಿಯಾಗುವ ಈ ಪುಟ್ಟ ಕವನವನ್ನು ನೋಡಿ.

**ವಿಶ್ವಕುಟುಂಬಿ**

ಮಗಳ ಪಕ್ಕ ನಿಂತ ಬಿಳಿ ಹುಡುಗ
'ಅತ್ತೇ' ಎಂದಾಗ
ನಾ ಅಳದೇ ಅವನ ತಬ್ಬಿ
ವಿಶ್ವಕುಟುಂಬಿ ಎನಿಸಿದೆ.

ಅದೇ ರೀತಿ, ಭಾರತೀಯರ ಕಾಲುಂಗುರ ಮತ್ತು ಅಮೇರಿಕನ್ನರ ಕೈಯುಂಗುರಗಳ ತುಲನೆಯಿಂದ ಎರಡು ಬಗೆಯ ದಾಂಪತ್ಯಗಳ ಬಗ್ಗೆ ಒಂದು ಕ್ಷ-ಕಿರಣ ಬೀರುವ ಕೆಳಗಿನ ಕವಿತೆಯನ್ನು ನೋಡಿ:

**ಕಾಲುಂಗುರ**

ನನ್ನ ಕಾಲುಂಗುರ ಕಂಡ ಇಸಬೆಲ್ಲಾ
ಕಿಸಕ್ಕನೆ ನಗುತ್ತಾ
'ಮದುವೆಯಾದ ನಾವು
ಇಡುವೆವು ಕೈಯುಂಗುರ,
ನೀ ಇಟ್ಟೆದ್ದಿ ಕಾಲುಂಗುರ
ದಟ್ಸ್‌ವೇರ್ ದೇ ಬಿಲಾಂಗ್'
ಎಂದು ಗೊಣಗಿದಳು,
ತನ್ನ ಮೂರು ಮಾಜಿ
ಗಂಡಂದಿರ ನೆನೆದು.

ಇದೇ ರೀತಿ, ಇನ್ನೂ ಅನೇಕ ಕವಿತೆಗಳಿವೆ.

ವಾಣಿ ಅರವಿಂದ್, ಸಂಧ್ಯಾ ರವೀಂದ್ರನಾಥ್, ಶ್ರೀವತ್ಸ ದುಗ್ಗಾಪುರ, ರವಿ ರೆಡ್ಡಿ, ಮುಂತಾದ ಕವಿ/ಕವಿಯತ್ರಿಯರು 'ಸ್ವರ್ಣಸೇತು'ವಿನಲ್ಲಿ ಹಲವು ನಗೆ ತರಿಸುವ ಕವಿತೆಗಳನ್ನು ಪ್ರಕಟಿಸಿದ್ದಾರೆ.

**ಹಾಸ್ಯಕ್ಕೆ ನನ್ನದೂ ಒಂದಿಷ್ಟು ಅಳಿಲು ಸೇವೆ**

ಈ ಲೇಖನದಲ್ಲಿ ಮುಖ್ಯವಾಗಿ ಅಮೆರಿಕದ ಇತರ ಕನ್ನಡ ಲೇಖಕರ ಕೊಡುಗೆಯನ್ನು ಪರಿಚಯಮಾಡಿಕೊಡುವ ಉದ್ದೇಶವಿದ್ದಿತಾದರೂ, ನಾನು ಕೂಡ ಹಾಸ್ಯಬರವಣಿಗೆಯಲ್ಲಿ ಕೈಯಾಡಿಸಿದವನೇ ಎಂಬ ವಿಷಯವನ್ನು ಪ್ರಸ್ತಾಪಿಸಿದರೆ ಅಪ್ರಸ್ತುತವಾಗಲಾರದೆಂದು ನಂಬಿ ಈ ಮುಂದಿನ ಮಾತುಗಳನ್ನು ಸೇರಿಸಿದ್ದೇನೆ. ನಾನು ಗದ್ಯ, ಪದ್ಯ ಮತ್ತು ನಾಟಕ, ಮೂರೂ ಪ್ರಕಾರಗಳಲ್ಲಿ ಪುಸ್ತಕಗಳನ್ನು ಪ್ರಕಟಿಸಿದ್ದೇನೆ. ನಾನು ಬರೆದ ಮೊದಲ ಕನ್ನಡ ನಾಟಕ 'ಮರಳಿ ಯತ್ನವ ಮಾಡು'(೧೯೭೭) ಮೂಲಭೂತವಾಗಿ ಒಂದು ಪ್ರಹಸನ. ಇದು ಭಾರತದಾಚೆ ಬಾನುಲಿಯಲ್ಲಿ ಪ್ರಸಾರವಾದ ಮೊಟ್ಟ ಮೊದಲ ಕನ್ನಡ ನಾಟಕ (ಕೊಲಂಬಿಯಾ ವಿಶ್ವವಿದ್ಯಾಲಯದ ಭಾರತೀಯ ವಿದ್ಯಾರ್ಥಿಗಳು ನಡೆಸುತ್ತಿದ್ದ ಆಕಾಶವಾಣಿ ಕಾರ್ಯಕ್ರಮದಲ್ಲಿ, ಆಗ ನ್ಯೂಯಾರ್ಕ್ ಕನ್ನಡ ಕೂಟದ ಅಧ್ಯಕ್ಷರಾಗಿದ್ದ ಡಾ. ಎಚ್.ಕೆ. ಚಂದ್ರಶೇಖರ್ ಅವರ ನಿರ್ದೇಶನದಲ್ಲಿ ಪ್ರಸಾರವಾಯಿತು.)

'ದುಡಿದು ಮಡಿದವರು' ಎಂಬ 'ಅಸಂಗತ ನಾಟಕ'ಗಳ ಗುಂಪಿಗೆ ಸೇರುವ ಮತ್ತೊಂದು ವ್ಯಂಗ್ಯ ಮತ್ತು ಹಾಸ್ಯ ತುಂಬಿದಗಂಭೀರ ನಾಟಕ (೧೯೮೦). 'ಕಾವಿ-ಖಾದಿ-ಕಾಳಿ' ಎಂಬ ನಾಟಕದ ವಸ್ತು, ಪ್ರಜಾಪ್ರಭುತ್ವದ ತತ್ವಗಳಿಗೆ ತಿಲಾಂಜಲಿ ಇತ್ತು ಸರ್ವಾಧಿಕಾರಿಯಾಗ ಬಯಸಿದ ಇಂದಿರಾ ಗಾಂಧಿಯವರ ರಾಜಕೀಯದ ವಿಡಂಬನೆ. 'ಅಪ್ಪ ಅಮ್ಮ ಅಮೆರಿಕೆಗೆ ಬಂದದ್ದು' ಎಂಬ ನಾಟಕದ ವಸ್ತು ಮಕ್ಕಳನ್ನು ಭೇಟಿ ಮಾಡಲು ಭಾರತದಿಂದ ಬರುವ ವಯಸ್ಸಾದ ತಂದೆತಾಯಿಗಳು ಪಡುವ ಬವಣೆ. 'ಮೀನಿನ ಹೆಜ್ಜೆ' ಎಂಬ ನಾಟಕದ ವಸ್ತು ಗಂಡು-ಹೆಣ್ಣಿನ ಸಂಬಂಧ. 'ನೇಣು' ಎಂಬ ನಾಟಕ ವ್ಯಕ್ತಿಯ ವೈಯಕ್ತಿಕತೆಯ ಸಾವನ್ನು ಕುರಿತ ವಿಡಂಬನಾತ್ಮಕ ಪ್ರಹಸನ. ಹಲವಾರು ಬಾರಿ ರಂಗದ ಮೇಲೇರಿದ ಈ ಆರೂ ನಾಟಕಗಳಲ್ಲಿ ಹಾಸ್ಯಮಾಧ್ಯಮವನ್ನು ನಾನು ಸಾಕಷ್ಟು ಬಳಸಿಕೊಂಡಿದ್ದೇನೆ. ನೂರಾರು ಜನರು ನೋಡಿ ಸಂತಸಪಟ್ಟಿದ್ದಾರೆ.

ನನ್ನ ಮೊದಲ ಕವನ ಸಂಕಲನ 'ನಾನೂ ಅಮೆರಿಕನ್ ಆಗಿಬಿಟ್ಟೆ' (೧೯೮೮) ಮತ್ತು ಎರಡನೆಯ ಕವನ ಸಂಕಲನ 'ಮಧುಚಂದ್ರ-ಸಿರಿಕೇಂದ'(೨೦೦೨) ಇದು

ಗೊರೂರು ಪ್ರಶಸ್ತಿ ಪಡೆದ ಕೃತಿ. ನನ್ನ ಅನೇಕ ಕವಿತೆಗಳಿಗೆ ಹಾಸ್ಯವೇ ಜೀವಾಳ. ನಾನು 'ಅದುವೆಕನ್ನಡ' ವೆಂಬ ಜಾಲತಾಣದಲ್ಲಿ ಬರೆಯುವ ಅನಿಯತಕಾಲಿಕ ಅಂಕಣ 'ಜಾಲತರಂಗ'. ಅಲ್ಲಿ ಪ್ರಕಟವಾದ ಸುಮಾರು ಮೂರು ವರ್ಷಗಳ ಕಂತುಗಳು ಪುಸ್ತಕರೂಪದಲ್ಲಿ ಪ್ರಕಟಗೊಂಡಿವೆ(೨೦೦೬). 'ಜಾಲತರಂಗ'ದ ಅನೇಕ ಬರಹಗಳಲ್ಲಿಯೂ ಲಲಿತಶೈಲಿಯಲ್ಲಿ ಗಂಭೀರ ವಿಷಯಗಳ ಒಳಹೊಕ್ಕು ನೋಡುವ ಯತ್ನ ಮಾಡಿದ್ದೇನೆ. ಮುಗಿಸುವ ಮುನ್ನ ಒಂದೆರಡು ಚುಟುಕು ಕವನಗಳನ್ನು ಉದಹರಿಸಿ ನನ್ನ ಲೇಖನದ ಕೊನೆಯನ್ನು ಮುಟ್ಟ ಬಯಸುತ್ತೇನೆ.

**ಮುನ್ನ–ನಂತರ**

ಮದುವೆಗೆ ಮುನ್ನ
ಚಿನ್ನ ರನ್ನ
ಮಾಡಿದ್ದೆಲ್ಲ ಮನ್ನ
ಮದುವೆ ಆದ್ಮೇಲೆ
ಪಕ್ಕದ್ಮನೇಲಿರೋ
ಹೆಣ್ಣೇ ಚೆನ್ನ!

**ಆಚಾರಿ–ತಂದೂರಿ**

ನಮ್ಮೂರಲ್ಲೊಬ್ಬ ರಾಮಾಚಾರಿ
ಅವ, ಅಪ್ಪಟ ಶಾಕಾಹಾರಿ
ಪಾರ್ಟೀಗ್–ಗೀರ್ಟೀಗ್–ಹೋದಾಗ್‌ಮಾತ್ರ
ಹುಡುಕ್ತಾನ್ ಕೋಳಿ ತಂದೂರಿ!

**ಡಯಟ್ ಮಾಡಿದ ಗುಂಡಣ್ಣ**

ಇಡೀ ವಾರ ಸ್ಯಾಲೆಡ್ ತಿನ್ನುತ
ಭಾರವನಿಳಿಸಿದ ಗುಂಡಣ್ಣ
ವಾರಾಂತ್ಯದಲಿ ಮೂರ್ಮೂರ್ ಪಾರ್ಟಿ
ಪುನಃ ಹೊಟ್ಟೆ ಡುಮ್ಮಣ್ಣ

**ಕಾರನು ತೊಳೆಸಿದ ಸಂಪತ್ತು**

ವಾತಾವರಣ ಬಿಸಿಲಾಗಿತ್ತು
ಕಾರನು ತೊಳೆಸಿದ ಸಂಪತ್ತು
ಮಾರನೇ ದಿನವೇ ಮಂಜ್ ಬಿತ್ತು
ಕೊಚಕೊಚ ಕೊಚ್ಚೆಯು ಕಾದಿತ್ತು

ಕೊನೆಯದಾಗಿ, ಅಮೆರಿಕದಲ್ಲಿ ನೆಲೆಸಿರುವ ಹಾಸ್ಯಪ್ರಿಯ ಕನ್ನಡಿಗರು ಗದ್ಯ-ಪದ್ಯ-ನಾಟಕ ಮುಂತಾದ ಪ್ರಕಾರಗಳಲ್ಲಿ ಸಾಕಷ್ಟು ಪ್ರತಿಭೆ ತೋರಿದ್ದಾರೆ. ಪುಸ್ತಕ ರೂಪದಲ್ಲಿ ಪ್ರಕಟಿಸಿರುವವರ ಸಂಖ್ಯೆ ಕೈಬೆರಳುಗಳಲ್ಲಿ ಎಣಿಸುವಷ್ಟೇ ಇದ್ದರೂ ಲಲಿತ ಪ್ರಬಂಧಗಳನ್ನು ಮತ್ತು ಚುಟುಕುಗಳನ್ನು ಅಲ್ಲಲ್ಲಿ ವಾರ್ಷಿಕ ಸಂಚಿಕೆಗಳಲ್ಲಿ ಪ್ರಕಟಿಸಿರುವ ಹಿರಿಯ ಕಿರಿಯ ಕನ್ನಡಿಗರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಉದಾಹರಣೆಗೆ, ಹಳೆಗನ್ನಡವನ್ನು ನಡುಗನ್ನಡ ಮತ್ತು ಆಧುನಿಕ ಕನ್ನಡ ಮತ್ತು ಇಂಗ್ಲಿಷಿನೊಂದಿಗೆ ಹಿತವಾಗಿ ಬೆರೆಸಿ ಹಾಸ್ಯದ ಹೊನಲನ್ನು ಹರಿಸಿ ಯಶಸ್ವಿಯಾದವರಲ್ಲಿ ರಾಮಪ್ರಿಯನ್ ಮತ್ತು ಕೃಷ್ಣಪ್ರಿಯನ್ ಸಹೋದರರು ಮೊದಲಿಗರು. ಇವರ ಅನೇಕ ಕವಿತೆಗಳು ಅಂತರ್ಜಾಲದಲ್ಲೂ ಸಂಚಿಕೆಗಳಲ್ಲೂ ಪ್ರಕಟವಾಗಿವೆ. ಹಾಸ್ಯಭರಿತ ಪ್ರಬಂಧಗಳನ್ನು ಬರೆದವರಲ್ಲಿ ಹಿರಿಯರು ಡಾ.ಅಶ್ವತ್ಥ ಎನ್. ರಾವ್. (ಇವರ ಪ್ರಖ್ಯಾತವಾದ ಎರಡು ಪ್ರಬಂಧಗಳು: 'ಕಾರ್‌ವಾರ್ಮಿಂಗ್' ಮತ್ತು 'ಅಮೆರಿಕದ ಮೇಡ್' ಅತ್ಯಂತ ರಂಜಕವಾದ ಲೇಖನಗಳು) ನವ್ಯ ಬೇತಾಳದ ಕತೆಗಳನ್ನು ಬರೆದ ತಾವರೇಕೆರೆ ಶ್ರೀಕಂಠಯ್ಯ, ಕನ್ನಡ ಸಂಘಗಳ ಕಾರ್ಯಕಾರೀ ಸಮಿತಿಗಳ ಮೀಟಿಂಗನ್ನು ವಿಡಂಬನೆಮಾಡಿ ಬರೆದ (ದಿವಂಗತ) ಎಂ. ಜಿ. ನರಸಿಂಹ ಸ್ವಾಮಿ ಹಾಗೂ 'ಜಾಗೋಪಾಸನೆ'ಯಂಥ ಸುಂದರ ಲಲಿತಪ್ರಬಂಧವನ್ನು ಬರೆದ ಎಚ್. ವೈ. ರಾಜಗೋಪಾಲ್- ಇವರುಗಳಂಥ ಉತ್ತಮ ಲೇಖಕರು ಅಮೆರಿಕದಲ್ಲಿದ್ದಾರೆ. ಯಮನನ್ನೇ ಮುಖ್ಯಪಾತ್ರವನ್ನಾಗಿಸಿ ನಗೆನಾಟಕಗಳ ಗುಚ್ಛವನ್ನು ಹೆಣೆದ ವಲ್ಲೀಶ ಶಾಸ್ತ್ರಿ, ೧೯೭೦-೮೦ರ ದಶಕದಲ್ಲೇ ಲಲಿತಪ್ರಬಂಧಗಳ ಕಂಪನ್ನು ಪಸರಿಸಿದ ಡಾ. ಎಚ್. ವಿ. ರಂಗಾಚಾರ್ ಮತ್ತು 'ನಾನು ಹೆಸರಿಸದೇ ಬಿಟ್ಟ ಇನ್ನೂ ಅನೇಕ ಹಾಸ್ಯಬರಹಗಾರರಿದ್ದಾರೆ' ಎಂದಿಷ್ಟು ಹೇಳಿ ಈ ಲೇಖನವನ್ನು ಮುಗಿಸುವುದು ಅನಿವಾರ್ಯವಾಗಿದೆ. ಒಟ್ಟಿನಲ್ಲಿ, ಅಮೆರಿಕದ ಕನ್ನಡ ಬರಹಗಾರರು ತಮ್ಮ ಹಲವಾರು ವಿಶಿಷ್ಟವಾದ ಲೇಖನ/ಕವಿತೆ/ನಾಟಕಗಳಿಂದ ಹಾಸ್ಯರಸವನ್ನು ಶ್ರೀಮಂತಗೊಳಿಸಿದ್ದಾರೆ.

ಹಾಸ್ಯ ಅಮೆರಿಕನ್ನರ ಹುಟ್ಟುಗುಣಗಳಲ್ಲೊಂದು. ಹಾಸ್ಯಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಅಮೆರಿಕದ ನೆಲ ಮತ್ತು ಜಲ ಹಾಗೂ ಇಲ್ಲಿನ ಸಾಹಿತ್ಯ ಮತ್ತು ದೃಶ್ಯಮಾಧ್ಯಮಗಳು ತುಂಬಾ ಸಹಾಯಕವಾಗಿವೆ. ಅವುಗಳನ್ನು ಯಶಸ್ವಿಯಾಗಿ ಉಪಯೋಗಿಸಿಕೊಂಡಲ್ಲಿ ಕನ್ನಡಿಗರ ಹಾಸ್ಯ ಬರವಣಿಗೆ ವಿಪುಲವಾಗಿ ಬೆಳೆಯಬಹುದೆಂದು ನನ್ನ ನಂಬಿಕೆ.

ಗ್ರಂಥಋಣ

'ಕಲಸುಮೇಲೋಗರ', ಡಾ. ಎಚ್.ಕೆ. ನಂಜುಂಡಸ್ವಾಮಿ, ಅಂಕಿತ ಪ್ರಕಾಶನ, ೨೦೦೨

'ಹೈಟೆಕ್ ಹಯವದನಾಚಾರ್ ಮತ್ತು ಇತರ ನಾಟಕಗಳು', ಅಲಮೇಲು ಅಯ್ಯಂಗಾರ್, ಅಭಿವ್ಯಕ್ತಿ ಪ್ರಕಾಶನ, ೨೦೦೩

'ವಿಚಿತ್ರಾನ್ನ' ಶ್ರೀವತ್ಸ ಜೋಶಿ, ಗೀತಾ ಬುಕ್ ಹೌಸ್, ೨೦೦೫

'ಸ್ವರ್ಣಸೇತು', ಉತ್ತರ ಕ್ಯಾಲಿಫ಼ೋರ್ನಿಯಾ ಕನ್ನಡ ಕೂಟದ ವಾರ್ಷಿಕ ಸಂಚಿಕೆಗಳು ೨೦೦೪, ೨೦೦೫, ೨೦೦೬

ಅಮೆರಿಕದಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನಗಳ ಸ್ಮರಣ ಸಂಚಿಕೆಗಳು, ೨೦೦೦, ೨೦೦೨, ೨೦೦೪, ೨೦೦೬

ನನ್ನ ಐದು ಪುಸ್ತಕಗಳು: 'ನಾನೂ ಅಮೆರಿಕನ್ ಆಗಿಬಿಟ್ಟೆ', ಅಮೆರಿಕನ್ನಡ ಪ್ರಕಾಶನ (೧೯೮೪), 'ಮೀನಿನ ಹೆಜ್ಜೆ ಮತ್ತು ನೇಣು', ಅಭಿವ್ಯಕ್ತಿ ಪ್ರಕಾಶನ (೧೯೯೬), 'ಪರದೇಶಿಗಳ ಪಾರ್ಟಿ ಮತ್ತು ಇತರ ಮೂರು ನಾಟಕಗಳು', ಗೀತಾ ಬುಕ್ ಹೌಸ್(೨೦೦೦), 'ಮಧುಚಂದ್ರ-ಸಿರಿಕೇಂದ್ರ', ಗೀತಾ ಬುಕ್ ಹೌಸ್ (೨೦೦೨), ಮತ್ತು 'ಜಾಲತರಂಗ' ಗೀತಾ ಬುಕ್ ಹೌಸ್ (೨೦೦೬).




ನಂಗೆ ಬೆಂಗ್ಳೂರ್ನಾಗೆ ನಾಕು ಸೈಟಿವೆ. ಒಂದರ ಬಂದು ಫ್ಲ್ಯಾಟ್ ಆಗುತ್ತಿದೆ, ಮತ್ತೊಂದು ಕೋರ್ಟ್ ಕೇಸಿನಲ್ಲಿದೆ, ಇನ್ನೊಂದಕ್ಕೆ ದಾರಿಯಿಲ್ಲ, ಕೊನೆಯದ್ರಲ್ಲಿ ಯಾರೋ ಬಂದು ಮನೆ ಕಟ್ಕೊಂಡವ್ರೆ!
© 2005 Janardhana Swamy [www.jswamy.com]


ಇವರೇರಿ, ಅಪ್ಪುಟಿಮ್ಮ ಅಂತ. ನ್ಯಾಷನಲ್ ಕಾಂಟೆಸ್ಟ್‌ನಲ್ಲಿ, "ನೀರು ಕಾಯಿಸೋ" ಕವಿತೆ ಬರೆದು ಮೊದಲ ಬಹುಮಾನ ಗೆದ್ದೋರು!
© 2005 Janardhana Swamy, www.jswamy.com

ನಾನು ಸಣ್ಣಗಾಗಲಿಕ್ಕೆ ಯೋಗ ಕಾರಣ, ಸಾರ್!
ನನ್ಹೆಂಡ್ತಿ ಯೋಗಕ್ಕೆ ಹೋಗಿದ್ದಳು, ನಾನು
ಫೀಜ್ ಕಟ್ಟಿ ಕಟ್ಟಿ ಸಣ್ಣಗಾದೆ!!



ಏನು? ಬಿ. ಪಿ. ಜಾಸ್ತಿ ಇದೆಯಾ? ನಿಮಗೆ ಎಷ್ಟು ಸಾರಿ ಹೇಳಿದ್ದೀನಿ,
ರೋಗಿಗೆ ನರ್ಸ್ ಹತ್ರ ಕೂತ್ಕೊಂಡು ನೋಡಬೇಡಿ ಅಂತ!






ಗುಂಡಾಂದನೆ ಈಗ ಜೋರಾಗೈತೆ ಕಣಣ್ಣ,
ಸಾಹೇಬ್ರು ನನ್ನ ಜೊತೆ ಸೇರ್ಕಂಡವ್ರೆ!


ಇವತ್ತು ತುಂಬಾ ಬಿಜಿ ಮಾರಾಯ್ರೆ. ನಾನು ಈಗ ನಗ್ತೀನಿ, ನೀವು ಜೋಕ್ ನಾಳೆ ಹೇಳಿ!
© 2007 Janardhana Swamy. www.jswamy.com


ಔಟ್‌ಸೋರ್ಸಿಂಗ್‌ನಲ್ಲಿ ನಾವು ಅಮೇರಿಕಕ್ಕೆ ಯಾವುದರಲ್ಲೂ ಕಡಿಮೆಯಿಲ್ಲ. ನಾವು ಕನ್ನಡವನ್ನೇ ಅಮೇರಿಕಕ್ಕೆ ಔಟ್‌ಸೋರ್ಸ್ ಮಾಡಿಲ್ವೆ?
ಜನಾರ್ಧನಸ್ವಾಮಿ
© 2006 Janardhana Swamy. www.jswamy.com

## ಪುರಂದರದಾಸರ ಸಾಹಿತ್ಯದಲ್ಲಿ ವಿಡಂಬನೆ

ಅಲಮೇಲು ಅಯ್ಯಂಗಾರ್

ವಿಡಂಬನೆ ಹಾಸ್ಯರಸವನ್ನು ಸ್ಫುರಿಸುವ ಪ್ರಮುಖ ಸಾಧನಗಳಲ್ಲೊಂದು. ಅನ್ಯರಲ್ಲಿರುವ ಲೋಪದೋಷಗಳನ್ನು ಎತ್ತಿಆಡಿಕೊಳ್ಳುವುದು ಮಾನವ ಹುಟ್ಟುಗುಣ. ಸುತ್ತಮುತ್ತಲಿನ ವಸ್ತುಗಳಲ್ಲಿ, ವ್ಯಕ್ತಿಗಳಲ್ಲಿ ಇರುವ ಕುಂದುಕೊರತೆಗಳನ್ನು ಕಂಡುಹಿಡಿದು ಅದನ್ನು ಪರಿಹಾಸಕ್ಕೆ ಗುರಿಮಾಡಿ ಅದನ್ನು ಚತುರೋಕ್ತಿಗಳಿಂದ ತಿದ್ದಲು ಪ್ರಯತ್ನಿಸುವುದು ವಿಡಂಬನೆಯ ಗುರಿ. ವಿಡಂಬನೆ ಸಫಲವಾಗುವುದಕ್ಕೆ ಅದಕ್ಕೆ ಅಣಕದ ಸಾಹಚರ್ಯ ಬೇಕು. ಪ್ರೊ. ವಿ.ಕೃ.ಗೋಕಾಕ್ ಅವರು ವಿಡಂಬನೆಯನ್ನು ಕುರಿತು ಹಿಗೆ ಹೇಳಿದ್ದಾರೆ: 'ವಿಡಂಬನೆ ಎಂದರೆ ಬರಿ ಭೂಮದ ಹಾಡಲ್ಲ, ಬೀಭತ್ಸವಲ್ಲ, ಬರಿ ಸಿಟ್ಟಿನ ರಗಳೆಯಲ್ಲ, ಸಿಟ್ಟಿನೊಡನೆ ತುಸು ವಿನೋದವನ್ನೂ ಕೂಡಿಸಿದಾಗ ಹುಟ್ಟಿಬರುವ ಅಪಹಾಸವಲ್ಲ (Ridicule)ವಿಡಂಬನೆಯು ಅಣಕಕ್ಕೆ ಸಮೀಪವಾಗಿದ್ದರೂ ಅದರಲ್ಲಿ ವಿನೋದದ ಅಂಶವು ಇನ್ನೂ ಹೆಚ್ಚಾಗಿರುತ್ತದೆ; ಸಾತ್ವಿಕ ಕೋಪವೂ ತುಸಮಟ್ಟಿಗೆ ಅದರಲ್ಲಿ ಕೂಡಿರುತ್ತದೆ. ಸ್ವಾಭಿಮಾನ ಮಾತ್ರ ಅದೃಶ್ಯ. ವಿನೋದ, ಸ್ವಾಭಿಮಾನ ಮತ್ತು ಕೋಪ ಈ ಮೂರರ ವಿಶಿಷ್ಟ ಸಮ್ಮಿಶ್ರಣದಮೇಲೆ ವಿಡಂಬನೆಯ ಸ್ವಭಾವಗುಣದ ನಿರ್ಣಯವಾಗುತ್ತದೆ'. ಅಂದರೆ ವಿಡಂಬನೆ ಇರಿಯುವ ಚೂರಿಯಂತಿರಬಾರದು. ಚುರುಕು ಮುಟ್ಟಿಸುವ ಚಾವಟಿಯಂತಿರಬೇಕು. ವಿಡಂಬನೆಯನ್ನು ಸಮಾಜದ ಲೋಪದೋಷಗಳನ್ನು ತಿದ್ದಲು ವಚನಕಾರರೂ, ಹರಿದಾಸಪಂಥದವರೂ ಬಹಳ ಸಮರ್ಥವಾಗಿ ಉಪಯೋಗಿಸಿಕೊಂಡಿದ್ದಾರೆ. ದಾಸ ಸಾಹಿತ್ಯದ ಆದ್ಯ ಪ್ರವರ್ತಕರು

ಶ್ರೀ ಶ್ರೀಪಾದರಾಜರು (೧೪೦೪-೧೫೦೨). ಅವರನಂತರ ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರು, ವಿಜಯದಾಸರು, ಪ್ರಸನ್ನ ವೆಂಕಟದಾಸರು, ಗೋಪಾಲದಾಸರು, ಜಗನ್ನಾಥದಾಸರು ಹೀಗೆ ಹಲವಾರು ಮಂದಿ ದೇವರನಾಮಗಳನ್ನು ರಚಿಸಿ ಕನ್ನಡ ಸಾರಸ್ವತ ಪ್ರಪಂಚವನ್ನು ಬೆಳಗಿದ್ದಾರೆ. ಜನರ ನಡುವೆಯೇ ಇದ್ದು ಅವರ ಆಚಾರ, ವ್ಯವಹಾರಗಳನ್ನು ಗಮನಿಸಿ ಜನರ ಹಿತಕ್ಕಾಗಿ ಅವರ ಜೀವನವಮಟ್ಟವನ್ನು ಏರಿಸಲು ಅನುಗಾಲವೂ ಶ್ರಮಿಸಿದವರು ಹರಿದಾಸಪಂಥದವರು. ಭಕ್ತಿರಸವೇ ಮುಖ್ಯವಾಗಿದ್ದ ದಾಸಸಾಹಿತ್ಯದಲ್ಲಿ ವಿಡಂಬನೆ ಮತ್ತು ಹಾಸ್ಯ ಅಲ್ಲಲ್ಲಿ ಹಣುಕಿಹಾಕಿದ್ದರೂ ಬಹಳಷ್ಟು ಕಾಣಸಿಗುವುದಿಲ್ಲ. ಆದರೆ ಪುರಂದರದಾಸರ ನಗೆವಾಡುಗಳಲ್ಲಿ ನಮಗೆ ವಿಡಂಬನೆ ಹೇರಳವಾಗಿ ದೊರಕುತ್ತದೆ. ದಾಸಶ್ರೇಷ್ಠರೆಂದೂ, ಕರ್ನಾಟಕಸಂಗೀತದ ಪಿತಾಮಹರೆಂದೂ ಸುಪ್ರಸಿದ್ಧರಾಗಿರುವ ಪುರಂದರದಾಸರು ಜೀವನದ ತತ್ವಗಳನ್ನು ಬಹಳ ಸರಳವಾಗಿ, ಸುಂದರವಾಗಿ, ಸುಲಭವಾಗಿ ಮನಮುಟ್ಟುವಂತೆ ಆಡುಗನ್ನಡದಲ್ಲಿ ಕೃತಿಗಳನ್ನು ರಚಿಸಿ ಜನಸಮುದಾಯಕ್ಕೆ ಮಹೋಪಕಾರವನ್ನು ಮಾಡಿದ್ದಾರೆ. ಸಂಸ್ಕೃತವನ್ನು ಅಭ್ಯಾಸಮಾಡಿದ್ದ ಕೆಲವೇ ಜನರ ಸ್ವತ್ತಾಗಿದ್ದ ವೇದೋಪನಿಷತ್ತುಗಳ ಸಾರವನ್ನು ತಿಳಿಗನ್ನಡದಲ್ಲಿ ಹೇಳಿ ಜನಸಾಮಾನ್ಯರಿಗೂ ಅದು ನಿಲುಕುವಂತೆ ಮಾಡಿದ ಕೀರ್ತಿ ಈ ದಾಸಶ್ರೇಷ್ಠರದು. ಜನರು ಸನ್ಮಾರ್ಗದಲ್ಲಿ ಹೇಗೆ ನಡೆಯಬೇಕೆಂಬುದನ್ನು ಸರಸ, ಸಾಮ, ಬೇದ, ದಂಡ, ಚತುರೋಕ್ತಿಗಳಲ್ಲಿ ಹೇಳಿರುವ ಪುರಂದರದಾಸರು ಅನೇಕ ಆಣಕವಾಡುಗಳನ್ನೂ ರಚಿಸಿ ನಗೆಯ ಬುಗ್ಗೆ ಚಿಮ್ಮಿಸಿದ್ದಾರೆ. ಜನರ ತಪ್ಪು ನಡವಳಿಕೆಗಳನ್ನು ವಿಡಂಬನಾತ್ಮಕವಾಗಿ ಖಂಡಿಸಿ, ವ್ಯಂಗ್ಯೋಕ್ತಿಗಳಿಂದ ಚುಚ್ಚಿ ಎಚ್ಚರಿಸಲೆತ್ನಿಸಿದ್ದಾರೆ. ಹರಿದಾಸಪರಂಪರೆಯ ಮತ್ತಿತರರೂ ಜನರ ರೀತಿನೀತಿಗಳನ್ನು ವಿಡಂಬನೆ ಮಾಡಲು ಯತ್ನಿಸಿದ್ದರೂ ಮತ್ತಾರೂ ಪುರಂದರದಾಸರಷ್ಟು ಸಫಲರಾಗಿಲ್ಲ. ಪುರಂದರದಾಸರು ನಾಲ್ಕುಲಕ್ಷಕ್ಕೂ ಮೀರಿ ಕೃತಿಗಳನ್ನು ರಚಿಸಿದ್ದಾರೆ ಎಂಬ ಪ್ರತೀತಿ ಇದ್ದರೂ ನಮ್ಮಕೈಗೆ ಸಿಕ್ಕಿರುವುದು ಸಾವಿರದಷ್ಟು ಮಾತ್ರ. ಅದರಲ್ಲೂ ಎಷ್ಟು ಅವರದೋ ಎಷ್ಟು ಪ್ರಕ್ಷಿಪ್ತವೋ ಹೇಳುವುದು ಕಷ್ಟ.

ಪುರಂದರದಾಸರ ಕೃತಿಗಳಲ್ಲಿನ ವಸ್ತುವೈವಿಧ್ಯ ಅಚ್ಚರಿತರುವಂತದ್ದು. ಅವರು ಚರ್ಚೆಮಾಡದಿದ್ದ ವಸ್ತುಗಳೇ ಇಲ್ಲ ಎನ್ನಬಹುದೇನೊ. ಲೌಕಿಕ ಜಗತ್ತಿನ ಪರಿಚಯವಿದ್ದ ಅವರು ಜನಪ್ರಿಯವಾದ ಜಾನಪದ ಮಟ್ಟಿನಲ್ಲಿ ಬಳಕೆಯ ನುಡಿಗಟ್ಟುಗಳನ್ನು ಬಳಸಿ ಉದಾತ್ತತತ್ವಗಳನ್ನು ಜನರಿಗೆ ಬೋಧಿಸಿದರು. ಎಷ್ಟೋ ವೇಳೆ ನೇರವಾದ ಮಾತಿನಿಂದ ಹೇಳುವುದಕ್ಕಿಂತ ತಿಳಿಹಾಸ್ಯದ ಚುಚ್ಚುನುಡಿಗಳಿಗೆ ಜನ ಗಮನಕೊಡುತ್ತಾರೆ ಎಂದು ಕಂಡುಕೊಂಡಿದ್ದ ದಾಸರು ಅನೇಕ ಹಾಡುಗಳಲ್ಲಿ ಅದನ್ನು ಪ್ರಯೋಗ ಮಾಡಿದ್ದಾರೆ. ಅವರ ಸುಪ್ರಸಿದ್ಧ ಕೃತಿಯಲ್ಲಿ–

ಡೊಂಕುಬಾಲದ ನಾಯಕರೇ ನೀವೇನೂಟ ಮಾಡಿದಿರಿ
ಕಣಕಕುಟ್ಟೋ ಅಲ್ಲಿಗೆ ಹೋಗಿ
ಹಣಿಕಿ ಇಣುಕಿ ನೋಡುವಿರಿ
ಕಣಕ ಕುಟ್ಟೋ ಒನಕೆಲಿ ಬಡಿದರೆ
ಕುಂಯ್ ಕುಂಯ್ ರಾಗವ ಪಾಡುವಿರಿ
ಹುಗ್ಗಿಮಾಡೋ ಅಲ್ಲಿಗೆ ಹೋಗಿ
ತಗ್ಗಿಬಗ್ಗಿ ನೋಡುವಿರಿ
ಹುಗ್ಗಿಮಾಡೋ ಸೌಟಲಿ ಬಡಿದರೆ
ಕುಂಯ್ ಕುಂಯ್ ರಾಗವ ಪಾಡುವಿರಿ

ಓರೇ ಬೀದಿಯಲಿ ಓಡುವಿರಿ
ಕರೇ ಬೂದಿಯಲಿ ಹೊರಳುವಿರಿ
ಪುರಂದರವಿಠಲನ ಈಪರಿ
ಪರಿಯಾತದಿ ಸದಾ ಚಲಿಸುವಿರಿ।

ಎಂಬ ಹಾಡಿನಲ್ಲಿ ಸಂಬಂಧವಿಲ್ಲದ ವಿಷಯಗಳಲ್ಲಿ ತಲೆಹಾಕಿ ಯೋಗ್ಯತೆ, ಸಾಮರ್ಥ್ಯ, ಕೌಶಲ್ಯಗಳನ್ನು ಮೀರಿ ವರ್ತಿಸಿದರೆ ಆಗುವ ಅನಾಹುತಗಳನ್ನು ಬಹಳ ಚೆನ್ನಾದ ವ್ಯಂಗ್ಯೋಕ್ತಿಗಳಲ್ಲಿ ಹೇಳಿದ್ದಾರೆ. ನಿತ್ಯಜೀವನದ ಘಟನೆಗಳನ್ನು ಆಧಾರವಾಗಿಟ್ಟುಕೊಂಡು ಜನಸಾಮಾನ್ಯರಿಗೂ ಅರ್ಥವಾಗುವಂತೆ ತತ್ವಬೋಧನೆಮಾಡಿದ ಕೀರ್ತಿ ದಾಸರದು. ನಗುವುದರಲ್ಲಂತೂ ಅವರು ನಿಸ್ಸೀಮರು. ಇತರರನ್ನು ನೋಡಿ ನಗುವುದಿರಲಿ ತಮ್ಮನ್ನು ತಾವೇ ಗೇಲಿಮಾಡಿಕೊಂಡು ಅನೇಕ ಹಾಡುಗಳಲ್ಲಿ ನಕ್ಕಿದ್ದಾರೆ. ಯಾವುದೋ ನೆಪದಿಂದ ಯಾರನ್ನಾದರೂ ಯಾವಾಗಲೂ ಬೈಯುತ್ತಿರುವ ಕೆಲವು ಮಂದಿಯನ್ನು ಕಂಡು 'ನಿಂದಕರಿರಬೇಕು, ಹಂದಿ ಇದ್ದರೆ ಕೇರಿ ಹ್ಯಾಂಗೆ ಶುದ್ಧಿಯೊ ಹಾಂಗೆ' ಎಂದು ನಿಂದಕರ ಮಾನಕಳೆದಿದ್ದಾರೆ. 'ದುರುಳ ಜನಂಗಳು ಚಿರಕಾಲ ಇರುವಂತೆ ಕರವ ಮುಗಿದು ವರವ ಬೇಡುವೆನು' ಏಕೆಂದರೆ, 'ದುಷ್ಟ ಜನಂಗಳು ಸೃಷ್ಟಿಯೊಳಿದ್ದರೆ ಶಿಷ್ಟ ಜನರಿಗೆಲ್ಲ ಕೀರ್ತಿಗಳು' ಎನ್ನುತ್ತಾರೆ. ಸಂಸಾರ, ಗಂಡ ಹೆಂಡತಿಯರ ಸಾಹಚರ್ಯದ ಬಗೆಗಂತೂ ಪುರಂದರದಾಸರು ನಗೆವಾಡುಗಳ ಹೊಳೆಯನ್ನೇ ಹರಿಸಿದ್ದಾರೆ. ಗಂಡನೊಡನೆ ನೆಮ್ಮದಿಯಾಗಿ ಬಾಳಲೊಲ್ಲದ ಹೆಂಡತಿಯ ಈ ಚಿತ್ರ ನೋಡಿ:

ಹೆಂಡತಿ ಪ್ರಾಣ ಹಿಂಡುತಿ ದೊಡ್ಡ
ಕೊಂಡ ಕೋತಿಯಂತೆ ಕುಣಿಕುಣಿಸುತ್ತಿ

ಹೊತ್ತಾರೆ ಏಳುತ್ತಿ ಹೊರಗೆ ಸುತ್ತಾಡುತ್ತಿ
ಹೊತ್ತುಹೊತ್ತಾಯಿತ್ತು ಭತ್ಯ ತಾ ಎನ್ನುತ್ತಿ
ಉತ್ತಮ ಗುರುಹಿರಿಯರ ಮಾತುಮೀರುತ್ತಿ
ಮೃತ್ಯು ದೇವತೆಯಂತೆ ಮನೆಯೊಳಗಿರುತ್ತಿ।

ಇಲ್ಲದ್ದು ಬೇಡುತ್ತಿ ಸುಳ್ಳುಮಾತಾಡುತ್ತಿ
ಒಳ್ಳೆ ಊಟವನುಂಡು ಕುಳಿತಿರ್ಪೆನೆಂತಿ
ಎಳ್ಳಿನಷ್ಟು ಕೆಲಸ ಮಾಡಲಾರೆನೆಂತಿ
ಎಲ್ಲೆಲ್ಲು ತಲೆಯೆತ್ತದ ಹಾಗೆ ಮಾಡುತ್ತಿ

ಹಿರಿತನಕ್ಕೆ ಹೋಗುತ್ತಿ ಗರುವಿಕೆ ಮಾಡುತ್ತಿ
ನೆರೆಹೊರೆಯವರ ಕೂಡೆ ಬಡಿದಾಡುತ್ತಿ।

ಪಾಪ ಇಂತಹ ಹೆಂಡತಿಯ ಕೈಯಲ್ಲಿ ಸಿಕ್ಕಿರುವ ಆ ಗಂಡನ ಪಾಡೇನಾಗಬೇಡ! ಹಾಗೆಂದು ಅಂತಹ ಹೆಣ್ಣಿನ ಗಂಡ ಮತ್ತೊಬ್ಬ ಹೆಣಿನತ್ತ ಕಣ್ಣು ಹಾಯಿಸಿದರೆ ದಾಸರು ಒಡನೆಯೆ–

ಕಣ್ಣೆತ್ತಿ ನೋಡಲು ಬೇಡ ಅವಳ
ಸಣ್ಣ ಬೈತಲೆ ನೋಡಿ ಮರುಳಾಗಬೇಡ।

ಕಣ್ಣಿಟ್ಟು ಕೀಚಕ ಕೆಟ್ಟ, ಪರ
ಹೆಣ್ಣಿಗಾಗಿ ರಾವಣ ತಲೆ ಕೊಟ್ಟ
ಇನ್ನೆಷ್ಟು ಹೇಳಲಾ ನಷ್ಟ
ಹೆಣ್ಣ ಮೋಹಿಸಿದವ ಬಲು ಭ್ರಷ್ಟ।

ದೂಷಿಸದಿರು ದುರುಳ ಕಣ್ಣ, ಅವಳ
ತೋರ ಕಕ್ಕಸ ಕುಚ ನಡು ಬಹು ಸಣ್ಣ

ಸೀರೆಯ ಬಿಗಿದುಟ್ಟ ಹೆಣ್ಣ, ಅವಳ
ಓರೆ ನೋಟವ ನೋಡಿ ಹಾರಬೇಡಣ್ಣ।

ಎಂದು ಹೆಣ್ಣಿನ ಸಹಾಸದಿಂದ ದೂರವಿರಬೇಕೆಂದು ಬೋಧಿಸಿದರೂ ಅವಳ ರೂಪವರ್ಣನೆಯನ್ನು ಸೊಗಸಾಗಿ ಮಾಡಿ ಅವಳಿಂದ ದೂರವಿರುವುದು ಸುಲಭವಲ್ಲ ಎಂದು ಸೂಚಿಸಿ ನಗೆಯನ್ನು ಹೊಮ್ಮಿಸಿದ್ದಾರೆ. ಪುರಂದರದಾಸರ ಹಾಡುಗಳಲ್ಲಿ ಹೆಣ್ಣುಗಳೂ ಗಂಡಂದಿರ, ಗಂಡಸರ ಬಗ್ಗೆ ಸಾಕಷ್ಟು ಕುಚೋದ್ಯವನ್ನು ಮಾಡುತ್ತಾರೆ. ಗೊಡ್ಡು ವೈದಿಕ ಗಂಡನ್ನು ಮದುವೆಯಾಗಿದ್ದ ಹೆಣ್ಣುಮಗಳೊಬ್ಬಳು–

ಒಲ್ಲೆನೆ ವೈದಿಕ ಗಂಡನ ನಾ
ಎಲ್ಲಾದರು ನೀರ ಧುಮುಕುವೆನಮ್ಮ।
ಉಟ್ಟನೆಂದರೆ ಇಲ್ಲ ತೊಟ್ಟೆನೆಂದರೆ ಇಲ್ಲ
ಕೆಟ್ಟ ಸೀರೆಯ ನಾನುಡಲಾರೆನೆ।
ಹಿಟ್ಟು ತೊಳಿಸಿ ಎನ್ನ ರಟ್ಟೆಲ್ಲ ನೊಂದವು
ಎಷ್ಟೆಂತ ಹೇಳಲಿ ಕಷ್ಟದ ಒಗೆತನ।

ಕೃಷ್ಣಾಜಿನವನ್ನು ರಟ್ಟೇಲಿ ಹಾಕಿಕೊಂಡು
ಬೆಟ್ಟಲ್ಲಿ ಗಿಂಡೀಯ ಹಿಡಿದಿಹನೆ।
ದಿಟ್ಟತನದಿ ನಾನೆದುರಿಗೆ ಹೋದರೆ
ದೃಷ್ಟಿಯಿಂದಲಿ ಎನ್ನ ನೋಡನಮ್ಮ।

ನಿನ್ನಾಣೆ ಹುಸಿಯಲ್ಲ ಬಿನ್ನಾಣ ಮಾತಿಲ್ಲ
ಕಣ್ಣೂಸನ್ನೆಯಂತು ಮೊದಲೇ ಇಲ್ಲ।
ಮುನ್ನಿನ ಜನ್ಮದಲಿ ಪುರಂದರವಿಠಲನ
ಚೆನ್ನಾಗಿ ಪೂಜೆಯ ಮಾಡಲಿಲ್ಲಮ್ಮ।

ಇಂತಹ ಅರಸಿಕ ಗಂಡನನ್ನು ಕಟ್ಟಿಕೊಂಡು ಆ ಹೆಣ್ಣು ಏನು ಮಾಡಬೇಕು? ಇನ್ನೊಬ್ಬಳ ಗಂಡ ಮುದುಕ. ಅವಳ ಪಾಡು ಆ ದೇವರಿಗೇ ಪ್ರೀತಿ. ಓದಿ ನೋಡಿ:

ಮುಪ್ಪಿನ ಗಂಡನ ಒಲ್ಲೆನು ನಾನು
ತಪ್ಪದೆ ಪಡಿಪಾಟ ಪಡಲಾರೆನಕ್ಕ।

ಉದಯದಲ್ಲೇಳಬೇಕು ಉದಕ ಕಾಸಲು ಬೇಕು
ಬದಿಯಲ್ಲಿ ನಾನಿದ್ದು ಬಜೆ ಅರೆಯಬೇಕು।
ಹದನಾಗಿ ಎಲೆಸುಣ್ಣ ಅಡಕೆ ಕುಟ್ಟಲುಬೇಕು
ಬಿದಿರುಕೋಲನು ಮುಂದೆ ಇಡಬೇಕಕ್ಕ।

ಮೆತ್ತನೆ ರೊಟ್ಟಿ ಮುದ್ದೆ ಮಾಡಲುಬೇಕು
ಒತ್ತಿ ಒದರಿ ಕೂಗಿ ಕರೆಯಲುಬೇಕು।
ವಾಕರಿಕೆಯು ಮೂಗಿನ ಸಿಂಬಳ
ಮತ್ತೆ ವೇಳೆಗೆ ಎದ್ದು ತೊಳೆಯಬೇಕಕ್ಕ।

ಗೋಣಿ ಹಾಸಲುಬೇಕು ಬೆನ್ನು ಗುದ್ದಲುಬೇಕು
ಗೋಣು ಹಿಡಿದು ಮೇಲಕ್ಕೆತ್ತಬೇಕು।
ಶ್ರೀನಿಧಿ ಪುರಂದರ ವಿಠಲನ ನೆನೆಯುತ್ತ
ನಾನೊಂದು ಮೂಲೇಲಿ ಒರಗಬೇಕಕ್ಕ।

ಇದನ್ನು ಕೇಳಿದಾಗ ತನ್ನ ಪರಿಸ್ಥಿತಿಯ ಬಗೆಗಿನ ಅವಳ ವಿವರಣೆ ಬಹಳ ವಿನೋದಮಯವಾಗಿದರೂ ಆ ಹೆಣ್ಣಿನ ಬಗ್ಗೆ ಕನಿಕರ ಉಂಟಾಗುತ್ತದೆ. ಗಂಡನ ಸೇವೆಮಾಡಿ ಬೇಸತ್ತಿದ್ದ ಮತ್ತೊಬ್ಬ ಹೆಣ್ಣು ತಮ್ಮ ಸ್ಥಾನಗಳು ಅದಲುಬದಲಾಗಿ ಅವನೇ ತನಗೆ ಉಪಚಾರ ಮಾಡುವಂತಾದರೇ ಎಂದು ಕನಸು ಕಾಣಲಾರಂಭಿಸುತ್ತಾಳೆ ಈ ಕೆಳಗಿನ ಹಾಡಿನಲ್ಲಿ,

ಬೇನೆ ತಾಳಲಾರೆ ಬಾ ಎನ್ನ ಗಂಡ।ಬೇನೆ ತಾಳಲಾರೆನು।
ಬೇಳೆ ಬೆಲ್ಲವ ತಂದು ಹೋಳಿಗೆಯನು ಮಾಡಿ
ಬಾಳೆಹಣ್ಣುತಂದು ಬದಿಯಲ್ಲಿ ಬಡಿಸಿ
ಹಾಲು ಸಕ್ಕರೆ ಹದಮಾಡಿ ತಂದಿಡು
ಎರಕದ ಗಿಂಡೀಲಿ ನೀರತಾರೋ ಗಂಡ।

ಹಪ್ಪಳ ಕರಿದಿಡು ಸಂಡಿಗೆ ಹುರಿದಿಡು
ತುಪ್ಪದಿ ನಾಲ್ಕು ಚಕ್ಕುಲಿ ಕರಿದು

ಬಟ್ಟಲಲಿ ತುಪ್ಪ ಕೆನೆವೊಸರ ಹಾಕಿದು
ಬಚ್ಚಲಿಗೆ ಬರತೇನೆ ನೀರ ಹದಮಾಡೊ।

ಹೋಳಿಯ ಹುಣ್ಣಿಮೆ ತಣ್ಣನೆ ತಂಗಾಳಿ
ಚಳಿ ಬಹಳ ಗಂಡ ಕದವ ಮುಚ್ಚೊ
ಮಂಚದ ಮೇಲೆ ಮಲಗಿದ್ದೆನ್ನನು
ಸಕಲಾತಿ ಹಚ್ಚಡವ ಬಿಗಿಬಿಗಿದ್ ಹೊಚ್ಚೊ।

ಸದ್ದುಮಾಡದ ಹಾಗೆ ಎದ್ದು ಕದವ ಮುಚ್ಚೊ
ಮುದ್ದು ಸ್ವಾಮಿಯನ್ನೆ ನೆನೆವುತಲಿ
ಮುದ್ದು ಶ್ರೀಪುರಂದರವಿಠಲನ ನೆನೆವುತ
ನೀನೊಂದು ಮೂಲೇಲಿ ಬಿದ್ದುಕೊಳ್ಳೊ ಗಂಡ।

ಗಂಡನ ಮೇಲೆ ದರ್ಬಾರು ಮಾಡಲು ತವಕಿಸ್ಸುತ್ತಿರುವ ಈ ಕನಸುಗಾರ ಹೆಣ್ಣನ್ನು ಕಂಡು ಯಾರಿಗೆ ತಾನೆ ನಗು ಬರುವುದಿಲ್ಲ?

ಅತ್ತೆಯಮನೆಯಲ್ಲಿ ಝಾಂಡಾ ಹೂಡಲೆಣಿಸಿದ್ದ ಅಳಿಯನಿಗೆ ಅಲ್ಲಿ ದೊರಕುವ ಉಪಚಾರವನ್ನು ಕುರಿತು ದಾಸರು ಹೇಗೆ ಗೇಲಿಮಾಡುತ್ತಾರೆ ನೋಡಿ–

ಹೆಣ್ಣು ಕೊಟ್ಟತ್ತೆಮಾವಂದಿರ ಮನೆಯಲ್ಲಿ
ಸೇರಿಯಿರುವರೆ ಎಲೆ ಮನುಜ।

ಬಂದ ಮೊದಲು ಇತ್ತ ಬನ್ನಿ ಕುಳ್ಳಿರೆಂದು ಬಲು ಉಪರಿಚಿಸುವರು
ಅಂದಿನ ಮರುದಿನ ಬಂದ ಸ್ನೇಹಿತರನ್ನ ಕಂಡಂತೆ ಕಾಣುವರೊ।
ಬಂದ ಮೂರರಲ್ಲಿ ಪರದೇಶಿಯ ಕಂಡಂತೆ ಸಡ್ಡೆ ಮಾಡದಿಹರೊ
ಮುದದಿಂದ ನಾಲ್ಕು ದಿವಸ ಇದ್ದರೆ ಮಾನಭಂಗವಮಾಡಿ ಮಾತಾಡುವರೊ

ಐದನೆ ದಿನದಲ್ಲಿ ಆಕಳು ಬರಲಿಲ್ಲ ಅರಸಿತರಬೇಕೆಂಬರೊ
ಇಂದೆಮ್ಮಗೆ ಕಲಗಚ್ಚನಿಕ್ಕದೆ ಎಲ್ಲಿಹೋದರೆಂಬರೊ।
ಬೀದಿಯಲ್ಲಿ ಕಸ ಬೆಟ್ಟದಂತೆ ಬಿದ್ದಿದೆ ಭೇದವೆ ನಿಮಗೆಂಬರೊ
ಹಾದಿಯಲ್ಲಿ ಬೆಳೆದಿರುವ ಹುಲ್ಲುಗಳ ಕಿತ್ತು ತರಬಾರದಿತ್ತೆ ಎಂಬರೊ।

ಷಷ್ಟಿಯ ದಿನದಲ್ಲಿ ಅಟ್ಟಡಿಗೆಯೆಲ್ಲ ಆರಿಹೋಯಿತು ಎಂಬರೊ
ಎಷ್ಟೆಂತ ನಿಮ್ಮ ಭಾನಸ ಏಳಬಾರದೆ ಎಂಬರೋ।
ಅಷ್ಟಮ ಶನಿಯಿದು ಬಿಟ್ಟುಹೋಗದು ನಮಗೆ ಅಳವಿಲ್ಲ ಎಂತೆಂಬರೊ
ಇಷ್ಟು ಬಿಟ್ಟು ಶ್ರೀ ಪುರಂದರವಿಠಲನ ಇಹಪರವಿರಿಸಿಕೊಳ್ಳೊ ಮನುಜ।

ಇದನ್ನು ಕೇಳಿದಮೇಲೆ ಎಂಥ ಭಂಡ ಅಳಿಯನೂ ಅಲ್ಲಿಂದ ಕಂಬಿಕಿತ್ತಾನು ಅಲ್ಲವೆ?

ಮೂರುಹೊತ್ತು ದುಡ್ಡು ದುಡ್ಡು ಎಂದು ಒದ್ದಾಡುವರನ್ನು ದಾಸರು ಚೆನ್ನಾಗಿ ಹಾಸ್ಯ ಮಾಡಿದ್ದಾರೆ.

ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ ಉಡಲಿಲ್ಲ
ಹರಿ ಕೊಡದ ಕಾಲಕ್ಕೆ ಬಾಯಿ ಬಿಡುವೆಯಲ್ಲೊ ಪ್ರಾಣಿ।

ಹತ್ತು ಸಾವಿರ ಹೊನ್ನು ತಿಪ್ಪೇಲಿ ಹೂಳಿಟ್ಟು
ಮತ್ತೆ ಉಪ್ಪಿಲ್ಲದೆ ಉಂಡ್ಯಲ್ಲೊ ಪ್ರಾಣಿ।
ಹತ್ತು ಸಾವಿರ ಹೊನ್ನು ತಿಪ್ಪೇಲಿ ಪೋಪಾಗ
ಮೃತ್ತಿಕೆ ಬಾಯಲ್ಲಿ ಬಿತ್ತಲ್ಲೊ ಪ್ರಾಣಿ।

ಹುಗ್ಗಿಯು ತುಪ್ಪವು ಮನೆಯೊಳಗಿರಲಿಕ್ಕೆ
ಗುಗ್ಗರಿಯನ್ನವ ತಿಂದ್ಯಲ್ಲೊ ಪ್ರಾಣಿ।
ವೆಗ್ಗಳದ ಭಾಗ್ಯ ಗಳಿಗೇಲಿ ಪೋಪಾಗ
ಬುಗ್ಗೆಯ ಹೊಯ್ಕೊಂಡು ಹೋದ್ಯಲ್ಲೊ ಪ್ರಾಣಿ।

'ಮಾಡುವುದೆಲ್ಲ ಅನಾಚಾರ ಮನೆ ಮುಂದೆ ಬೃಂದಾವನ' ಎಂಬಂತೆ ತೋರಿಕೆಗಾಗಿ ಸಂಪ್ರದಾಯ ಶರಣರಾಗಿರುವವರನ್ನು ಕಂಡರೆ ದಾಸರಿಗಿರುವ ಕೋಪ ವಿಡಂಬನೆಯ ರೂಪದಲ್ಲಿ ಕೆಳಗಿನ ಈ ಹಾಡಿನಲ್ಲಿ ಹೊರಹೊಮ್ಮಿದೆ.

ಮಡಿಮಡಿಯೆಂದು ಮೂರ್ಮಾರು ಹಾರುತಿ
ಮಡಿಯೆಲ್ಲಿ ಬಂತೆ ಬಿಕನಾಸಿ।
ಮಡಿಯೂ ನೀನೆ ಮೈಲಿಗೆ ನೀನೆ
ಸುಡಲಿ ನಿನ್ನ ಮಡಿ ಬಿಕನಾಸಿ।

ಹುಟ್ಟೂತ ಸೂತಕ ಸಾಯಲು ಸೂತಕ
ನಟ್ಟನಡುವೆಲ್ಲಿ ಬಂತೆ ಬಿಕನಾಸಿ।
ಪಟ್ಟಣ ಕಾವೇರಿಲಿ ಮುಳುಗಲು ನಿನ್ನ
ಮುಟ್ಟು ಹೋಗುವುದೆ ಬಿಕನಾಸಿ।

ಮತ್ತೊಂದು ಹಾಡು:

ಮಡಿ ಮಡಿ ಮಡಿಯೆಂದು ಅಡಿಗಡಿ ಹಾರುವೆ
ಮಡಿಮಾಡುವ ಬಗೆ ಬೇರುಂಟು

ಬಟ್ಟೆಯ ನೀರೊಳಗದ್ದಿ ಒಣಗಿಸಿ
ಉಟ್ಟುಕೊಂಡರೆ ಅದು ಮಡಿಯಲ್ಲ
ಹೊಟ್ಟೆಯೊಳಗಿನ ಕಾಮ ಕ್ರೋಧ ಮದ ಮತ್ಸರ
ಬಿಟ್ಟು ನಡೆದರೆ ಅದು ಮಡಿಯು।

ಎಂದು ಹಂಗಿಸಿ ತಿಳಿಯಹೇಳುತ್ತಾರೆ. ಬರಿಯ ಸಹವಾಸ ಮತ್ತು ಸಹಯೋಗದಿಂದ ಮಾತ್ರವೇ ಜ್ಞಾನೋದಯವಾಗುವುದಿಲ್ಲ ಎಂಬುದನ್ನು 'ಕತ್ತೆ ಬಲ್ಲುದೇ ಹೊತ್ತ ಕತ್ತುರಿಯ ಪರಿಮಳವ? ಹೇನುಬಲ್ಲುದೇ ಮುಡಿದ ಹೂವಿನ ಪರಿಮಳವ?' ಎಂದು ಹೀಗಳೆದಿದ್ದಾರೆ. ಸದಾ ದೈವಸಾನಿಧ್ಯದಲ್ಲೇ ಇದ್ದೂ ಮನಸ್ಸು ಬೇರೆಲ್ಲೋ ಇರುವ ಮಂದಿಯನ್ನು ಕಂಡು 'ಮಾತಿಗೆಬಾರದ ವಸ್ತು ಬಹಳಿದ್ದರೇನು। ಹೋತನ ಕೊರಳೊಳಗೆ ಮೊಲೆಯಿದ್ದರೇನು?' ಎಂದೂ 'ಹೋಗದೂರಿನ ದಾರಿ ಕೇಳಿ ಮಾಡುವುದೇನು?' ಎಂದೂ ಹಾಸ್ಯ ಮಾಡಿದ್ದಾರೆ.

ದಾಸರ ವಿಡಂಬನೆ ಕೇವಲ ಮನುಷ್ಯರನ್ನು ಮಾತ್ರ ಕುರಿತದ್ದಲ್ಲ. ದೇವರೂ ಅದಕ್ಕೆ ಗುರಿಯಾಗಿದ್ದಾರೆ. ಪುರಾಣ ಕಥೆಗಳನ್ನು ಆಧರಿಸಿ ದೇವರನ್ನೂ ಸಾಕಷ್ಟು ಮೂದಲಿಸಿದ್ದಾರೆ ಪುರಂದರರು. ಕೃಷ್ಣ ವಲ್ಲಭೆಯಾದ ರುಕ್ಮಿಣಿಯನ್ನು ಕುರಿತು,

ಏನು ಮರುಳಾದ್ಯಮ್ಮ ಎಲೆ ರುಕ್ಮಿಣಿ
ಹೀನಕುಲ ಗೊಲ್ಲ ಗೋಪಾಲಕೃಷ್ಣನಿಗಾಗಿ।
ಹಾಸಿಕಿಲ್ಲದೆ ಹಾವಿನ ಮೇಲೆ ಒರಗಿದವ
ಹೇಸಿಕಿಲ್ಲದೆ ಕರಡಿಯ ಕೂಡಿದ

ಗ್ರಾಸಕಿಲ್ಲದೆ ತೊತ್ತಿನ ಮಗನ ಮನೆಲುಂಡ
ದೋಷಕಂಜದೆ ಮಾವನ ಶಿರ ತರಿದವಗೆ।

ಒಬ್ಬರಲಿ ಹುಟ್ಟಿ ಒಬ್ಬರಲಿ ಬೆಳೆದ
ಒಬ್ಬರಿಗೆ ಮಗನಲ್ಲ ಜಗದೊಳಗೆಲ್ಲ
ಅಬ್ಬರದ ದೈವ ಶ್ರೀಪುರಂದರವಿಠಲನ
ಉಬ್ಬುಬ್ಬಿ ಮದುವ್ಯಾದೆ ಉತ್ಸಾಹದಿಂದ।

ಎಂದು ಪರಿಹಾಸ್ಯ ಮಾಡುತ್ತಾರೆ. ಶ್ರೀಪಾದರಾಜರೂ ಸಹ ಒಂದು ಹಾಡಿನಲ್ಲಿ ಲಕ್ಷ್ಮಿಯನ್ನು ಕುರಿತು,

ಒಲಿದೆ ಯಾಕಮ್ಮ ಲಕುಮಿ
ವಾಸುದೇವಗೆ
ಶುದ್ಧ ನೀಲವರ್ಣದ ಮೈಯ
ಕಪ್ಪಿನವನಿಗೆ ಹ್ಯಾಗೆ।

ಎಂದು ವಾಸುದೇವನನ್ನು ಹಾಸ್ಯ ಮಾಡಿದ್ದಾರೆ. ಅಷ್ಟೇ ಅಲ್ಲ ಪುರಂದರದಾಸರು ಶಿವನಿಗೆ ಮಗಳನ್ನು ಕೊಟ್ಟ ಗಿರಿರಾಜನನ್ನು ಕುರಿತು,

ಎಂಥಾ ಚೆಲುವನಿಗೆ ಮಗಳನ್ನು ಕೊಟ್ಟರು। ಗಿರಿರಾಜನನು ನೋಡಮ್ಮಮ್ಮ
ಕಂತುಹರ ಶಿವ ಚೆಲುವನೆನ್ನುತ। ಮೆಚ್ಚಿದನು ನೋಡಮ್ಮಮ್ಮ।
ಮೋರೆ ಐದು ಮೂರು ಕಣ್ಣಾ। ವಿಪರೀತವ ನೋಡಮ್ಮ
ಕೊರಳೊಲು ರುಂಡಮಾಲೆಯ ಧರಿಸಿದ।ಉರಗಭೂಷಣನ ನೋಡಮ್ಮ।
ಮನೆಯೆಂಬುದು ಶ್ಮಶಾನವು ನೋಡೆ। ಗಜಚರ್ಮಂಬರವಮ್ಮಮ್ಮ।
ಹಣವೊಂದಾದರು ಕೈಯೊಳಗಿಲ್ಲ। ಕಪ್ಪರವನು ನೋಡಮ್ಮಮ್ಮ।

ಹರನ ವರ್ಣನೆಯನ್ನು ಇದಕ್ಕಿಂತಾ ಹಾಸ್ಯಾಸ್ಪದವಾಗಿ ಮಾಡಲು ಸಾಧ್ಯವೇ?! ಇಂಥಹವನಿಗೆ ಹೆಣ್ಣುಕೊಟ್ಟವ ಎಂಥಹವನಿರಬೇಕು? ಇಂತಹದ್ದೇ ಮತ್ತೊಂದು ಸೊಗಸಾದ ವಿಡಂಬನೆಯನ್ನು ಶ್ರೀ ವಾದಿರಾಜರ 'ಹ್ಯಾಂಗೆ ಕೊಟ್ಟನು ವರನ ಸಾಗರನು ಈವರಗೆ' ಎಂಬ ಹಾಡಿನಲ್ಲಿ ನಾವು ನೋಡಬಹುದು.

ಹ್ಯಾಂಗೆ ಕೊಟ್ಟನು ಹೆಣ್ಣ ಸಾಗರನು ಈ ವರಗೆ
ಶೃಂಗಾರಪುರುಷರು ಬಹುಮಂದಿಯಿರಲು।

ಗುಪ್ಪವ್ಯೆಯ ಕಂಪು ನಟ್ಟದಾತನ ಕಣ್ಣು
ಮುಟ್ಟಿನೋಡಿದರೆ ವ್ಯೆಯತಿ ಕಠಿಣವು
ಸೊಟ್ಟಮೋರೆಯು ಇವಗೆ ಎಷ್ಟುದ್ದ ಹಲ್ಲುಗಳು
ಇಷ್ಟು ಘೋರದ ಅಳಿಯ ಎಲ್ಲಿದೊರಕಿದನೋ।
ಕಾಡುವ ಭಿಕ್ಷಕನು ಮಾಡದುದ ಮಾಡುವನು
ನೋಡಿದರೆ ತಲೆಯು ಜಡೆ ಕಟ್ಟಿಹುದು
ಓಡೋಡುತಲಿ ಕಳುವ ಬೆಡಗು ನುಡಿಗಾರನಿಗೆ
ನೋಡಿ ನೋಡಿ ಹೆಣ್ಣು ಹೇಗೆ ಕೊಟ್ಟನೊ ಇನ್ನು।

ಕಂಡವರ ಕೂಡೆಲ್ಲ ಕಾಳಗವ ಕೊಂಡು ಭೂ
ಮಂಡಲದೊಳಾಗೆ ಉದ್ದಂಡನಿವನು
ಅಂಡವಾಹನಗೆ ಯೋಗ್ಯವಾದ ಹೆಣ್ಣ
ಕಂಡು ಕಂಡೀ ಹಯವದನರಾಯನಿಗೆ।

ಇನ್ನು ಭಕ್ತರ ಕೈಯಲ್ಲಿ ಸಿಕ್ಕಿಹಾಕಿ ಕೊಂಡಿರುವ ಹರಿ, ಹರರಪಾಡು ಹೇಳುವಂತಿಲ್ಲ. ಪುರಂದರದಾಸರು ಹೇಳುತ್ತಾರೆ:

ಆರು ಬದುಕಿದರಯ್ಯ ಹರಿ ನಿನ್ನ ನಂಬಿ
ತೋರು ಈ ಜಗದೊಳಗೆ ಒಬ್ಬರನು ಕಾಣೆ।

ಕರಪತ್ರದಿಂದ ತಾಮ್ರಧ್ವಜನ ತಂದೆಯ
ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ।
ಮರುಳನಂದದಿ ಪೋಗಿ ಭೃಗುಮುನಿಯ ಕಣ್ಣೊಡೆದೆ
ಅರಿತು ತ್ರಿಪುರಾಸುರನ ಹೆಂಡಿರನು ಬೆರೆದೆ।

ಕಲಹ ಬಾರದ ಹಾಗೆ ಕರ್ಣನನು ನೀ ಕೊಂದೆ
ಸುಲಭದಲಿ ಕೌರವನ ಮನೆಯ ಮುರಿದೆ।

ನೆಲನ ಬೇಡುತ ಪೋಗಿ ಬಲಿಯ ತನುವನು ತುಳಿದೆ
ಮೊಲೆಯನುಣಿಸಲು ಬಂದ ಪೂತನಿಯ ಕೊಂದೆ।

ತಿರಿದುಂಬ ದಾಸರ ಕೈಲಿ ಕಪ್ಪವ ಕೊಂಬೆ
ಗರುಡವಾಹನ ನಿನ್ನ ಚರಿಯವರಿಯೆ।
ದೊರೆ ಪುರಂದರವಿಠಲ ನಿನ್ನನ್ನು ನಂಬಿದರೆ
ತಿರುಪೆಯೂ ಹುಟ್ಟಲೊಲ್ಲದು ಕೇಳೋ ಹರಿಯೆ।

ದಾಸರ ವ್ಯಂಗ್ಯದ ಚುರುಕು ದೇವರನ್ನೂ ಬಿಡಲಿಲ್ಲ! ವ್ಯಾಸರಾಯರು ಒಂದೆಡೆಯಲ್ಲಿ 'ಬೇರೆ ಯಾರೂ ಗತಿಯಿಲ್ಲದುದರಿಂದ ನಿನಗೆ ಶರಣಾಗಿದ್ದೇನೆ' ಎಂದು ದೇವರನ್ನು ಮೂದಲಿಸಿ ಹಾಸ್ಯ ಮಾಡಿದ್ದಾರೆ,

ನಿನಗಾರು ಸರಿಯಿಲ್ಲ ಎನಗನ್ಯ ಗತಿಯಿಲ್ಲ
ನಿನಗೂ ನನಗೂ ನ್ಯಾಯ ಪೇಳುವರಿಲ್ಲ।

ಪರಸತಿಗಳಗಳುಪಲು ಪರಮಪಾತಕಿ ಎಂದು
ಪರಿಪರಿ ನರಕಕ್ಕೆ ಗುರಿಮಾಡುವಿ
ಪರಸತಿಯರ ಒಲುಮೆ ನಿನಗೊಪ್ಪಿತೆಲೊ ಕೃಷ್ಣ
ದೊರೆತನಕಂಜಿ ನಾ ಶರಣೆಂಬೆನಲ್ಲದೆ।

ಸಾತ್ವಿಕಭಕ್ತಿ ಇದ್ದರೆ ಮಾತ್ರ ದೇವರನ್ನು ಇಂತಹ ವಿಡಂಬನೆಗೆ ಗುರಿಮಾಡಲು ಸಾಧ್ಯ! ಪ್ರಪಂಚವನ್ನು ನಗೆಯ ಕನ್ನಡಕದ ಮೂಲಕ ನೋಡಿದ ಪುರಂದರದಾಸರಿಗೆ ಎಲ್ಲವೂ ನಗು ತರುತಿತ್ತು. ಲಂಗೋಟಿಯ ಬಗ್ಗೆ ಅವರು ಬರೆದಿರುವ ಹಾಡು ಹಾಸ್ಯ ಮತ್ತು ತತ್ವಜ್ಞಾನಗಳ ರಸಾಯನದಂತಿದೆ.

ಲಂಗೋಟಿ ಬಲು ಒಳ್ಳೇದಣ್ಣ
ಹಂಗಿಲ್ಲದೆ ಮಡಿಗೆ ಒದಗುವುದಣ್ಣ।

ಬಡವರಿಗಾದಾರವಣ್ಣ ಈ ಲಂಗೊಟಿ
ಬೈರಾಗಿಗಳ ಭಾಗ್ಯವಣ್ಣ
ಕಡು ಕಳ್ಳರಿಗೆ ಗಂಡ ಮಡಿಧೋತ್ರಗಳ ಮಿಂಡ
ನಡುಗುವ ಸಮಯಕ್ಕೆ ಮಡಿಗೆ ಒದಗುವಂಥ

ದುಡ್ಡು ಮುಟ್ಟದಂತೆ ದೊರಕುವ ವಸ್ತುವು
ದೊಡ್ಡ ಅರಣ್ಯದಿ ಭಯವಿಲ್ಲವು
ಹೆಡ್ಡರೆಂಬುವರೇನೊ ಲಂಗೋಟಿ ಜನರನ್ನು
ದೊಡ್ಡವರೆಂದು ವಂದಿಸುವರು ಯತಿಗಳ

ಮೋಕ್ಷಮಾರ್ಗಕ್ಕೆ ಕಲ್ಪವೃಕ್ಷವೀ ಲಂಗೊಟಿ
ಭಿಕ್ಷೆಗಾರರಿಗೆಲ್ಲ ಅನುಕೂಲವು
ತತ್ ಕ್ಷಣದೊಳಗೆ ಕಾರ್ಯಗಳ ತೂಗಿಸಿ ಮಾನ
ರಕ್ಷಣೆಗೆ ಬಹು ರಮ್ಯವಾಗಿರುವಂಥ

ಮಡಿವಾಳರಿಗೆ ಶತ್ರು ಮಠದಯ್ಯಗಳ ಮಿತ್ರ
ಪೊಡವಿಯೊಳ್ ಯಾಚಕರಿಗೆ ನೆರವು
ದೃಢಭಕ್ತ ಬಲಿಚಕ್ರವರ್ತಿಗೋಸ್ಕರ ನಮ್ಮ
ಒಡೆಯ ಶ್ರೀಪುರಂದರವಿಠಲ ಧರಿಸಿದಂಥ। ಲಂಗೋಟಿ ಬಲು
–ಒಳ್ಳೇದಣ್ಣ।

ಈ ಹಾಡು ಯಾರ ಮೊಗದಲ್ಲಿ ನಗೆಯನ್ನು ಮೂಡಿಸದಿರದು? ಜನರ ನಡತೆಯ ವಿಪರ್ಯಾಸ ಪುರಂದರದಾಸರಿಗೆ ಬಹಳ ಮೋಜುತರುವ ವಿಷಯುವಾಗಿತ್ತು. ವಿನೋದವಾಗಿ ತೋರುತ್ತಿತ್ತು. ಜನರ ಡಂಬಾಚಾರಗಳನ್ನು ಕಂಡು ಕೋಪಗೊಳ್ಳದೆ ಮಾರ್ಮಿಕನಗೆ ನಗುತ್ತ ವಿಡಂಬನೆಯ ಮೂಲಕ ಅವರನ್ನು ತಿದ್ದಲು ಪ್ರಯತ್ನಿಸಿ ಸಮಾಜವನ್ನು ಸುಧಾರಿಸಲೆತ್ನಿಸಿದ ದಾಸವರೇಣ್ಯರವರು. ಅವರೇ ಒಂದು ಹಾಡಿನಲ್ಲಿ ಹೇಳಿರುವಂತೆ

ನಗೆಯು ಬರುತಿದೆ ಎನಗೆ ನಗೆಯು ಬರುತಿದೆ
ಜಗದೊಳಿರುವ ಮನುಜರ ಹಗರಣವ ಕಂಡು।

ಹೀಗೆ ವಿಡಂಬನೆಯ ಚಾವಟಿಯ ಚುರುಕು ಮುಟ್ಟಿಸಿ ನಮ್ಮ ಮನದಲ್ಲಿ ಜ್ಞಾನದೀವಿಗೆಯನ್ನು ಬೆಳಗಿದ ಪುರಂದರದಾಸ ಸಾಹಿತ್ಯದಲ್ಲಿ ಇಂತಹ ನಗೆಯ ಬುಗ್ಗೆಗಳು ಹಲವಾರು ದೊರಕುತ್ತವೆ. ಅವರು ಬರೆದಿದ್ದ ಹಾಡುಗಳೆಲ್ಲವೂ ದೊರಕಿದ್ದರೆ ಇನ್ನೆಷ್ಟು ಇಂಥಹ ನಗೆವಾಡುಗಳು ನಮಗೆ ದೊರಕುತ್ತಿದ್ದುವೋ? ಬದುಕಿನ ಸಾರಸರ್ವಸ್ವವನ್ನು ನಗೆಯ ಮೂಲಕ ನಮಗೆಲ್ಲ ಹಂಚಿದ ದಾಸಶ್ರೇಷ್ಠರಿಗೆ ಕನ್ನಡ ಸಾರಸ್ವತಲೋಕ ಚಿರಋಣಿಯಾಗಿದೆ.

ಗ್ರಂಥ ಋಣ:

೧. ಪುರಂದರ ಸಾಹಿತ್ಯ ದರ್ಶನ (೪ ಸಂಪುಟಗಳು), ಪ್ರೊ. ಸಾ.ಕೃ. ರಾಮಚಂದ್ರರಾವ್.

೨. ಸಾವಿರಾರು ಕೀರ್ತನೆಗಳು, ಪ್ರೊ. ಪಿ.ಪಿ. ನಾವಡ ಮತ್ತು ಡಾ. ಗಾಯತ್ರಿ ನಾವಡ.

೩. ಕನ್ನಡ ಸಾಹಿತ್ಯದಲ್ಲಿ ಹಾಸ್ಯ, ಡಾ. ಎಂ.ಎಸ್. ಸುಂಕಾಪುರ

೪. ಪುರಂದರದಾಸರ ಕೆಲವು ನಗೆವಾಡಗಳು, ಸಮಗ್ರ ಗದ್ಯ ಸಂಪುಟ, ಡಾ. ಪುತಿನ.

೫. ಪುರಂದರ ಸಾಹಿತ್ಯ, ಡಾ. ಅರಳು ಮಲ್ಲಿಗೆ ಪಾರ್ಥಸಾರಥಿ

೬. ಪುರಂದರದಾಸರ ಕೀರ್ತನೆಗಳು, ದಿ. ಪಾವಂಜೆ ಗುರುರಾಯರು



## 'ಗೊಬ್ಬಾರ ಗುಂಡಿಯಲ್ಲಿ ಕೆಂಬಾರಿ ಸೊಪ್ಪ್ ಹುಟ್ಟಿ.....'

**ಆಹಿತಾನಲ**

ಗೊಬ್ಬಾರ ಗುಂಡಿಯಲ್ಲಿ
ಕೆಂಬಾರಿ ಸೊಪ್ಪ್ ಹುಟ್ಟಿ
ಕೈಲೂತಿ ತಿಂದು ಕರು ತಿಂದು
ಕೊಲೇ ಕೋಲು ಕೋಲೆನ್ನಿರೇ
ಲೂಗಿನಾ ಕೋಲು ಕೋಲೆ
ಕೈಲೂತಿ ತಿಂದು ಕರು ತಿಂದು ನೊರಿಹಾಲು
ಕೌಳಿಗ್ಲಿ ತುಂಬಿ ಚೆಂಬ್ ತುಂಬಿ
ಕೊಲೇ ಕೋಲು ಕೋಲೆನ್ನಿರೇ
ಲೂಗಿನಾ ಕೋಲು ಕೋಲೆ

ನನ್ನ ಹುಟ್ಟೂರು, ಈಗಿನ ಉಡುಪಿ ಜಿಲ್ಲೆಯ ಕೋಟದ ಸುತ್ತುಮುತ್ತಲಿನ ಹಳ್ಳಿಯ ಮುಗ್ಧರು ಆಡುವ ಮಾತು ತೀರ ಗ್ರಾಮ್ಯ. ಮೇಲಿನ ಜನಪದ ಗೀತ, 'ಕೋಲು ಹೊಯ್ಯು'ವ ನಮ್ಮೂರ 'ಜನಪದ ಸಾಹಿತಿ'ಗಳಿಂದ ಕೇಳಿ ಬಂದುದು. ಅತಿ ಸರಳವಾದ ಈ ಹಾಡು ನನ್ನನ್ನು ಬಹುವಾಗಿ ಆಕರ್ಷಿಸಿದೆ. ಗೊಬ್ಬರದ ಹೊಂಡದಲ್ಲಿ ಹರಿವೆ ಸೊಪ್ಪಿನ ಗಿಡ ಹುಟ್ಟಿ, ಅದನ್ನು ಒಂದು ಹಸು ಮತ್ತು ಕರು ತಿಂದು, ತಂಬಿಗೆ ತುಂಬ

ಹಾಲು ಕೊಟ್ಟಿತು–ಇಷ್ಟೇ ಈ ಹಾಡಿನ ಸಾರಾಂಶ. ಆದರೆ, ಇದನ್ನು ಹೇಳುವ ವೈಖರಿ, ಕೋಲು ಬಡಿಯುತ್ತ, ಲಯಬದ್ಧವಾಗಿ ಹಾಡುತ್ತ, 'ಕೋಲೇ ಕೋಲು ಕೋಲೆನ್ನಿರೇ' ಎಂಬ ಅನುಪಲ್ಲವಿ, ಹಾಡಿಗೆ ವಿಶಿಷ್ಟತೆಯನ್ನು ಕೊಟ್ಟಿದೆ. ಅದನ್ನು ಕೇಳುತ್ತಿದ್ದರೆ ಅದರಲ್ಲಡಗಿರುವ ತಿಳಿಹಾಸ್ಯ ಈಗಲೂ ನನಗೆ ಅದೊಂದು ಬಗೆಯ ಖುಷಿ ಕೊಡುತ್ತಿದೆ. ಅದು ಇಂತಹ ಹಾಡಿನ ವಿಶಿಷ್ಟ ವೈಖರಿ. ಇಂಥ ಹಾಡುಗಾರ್ತಿಯರು ಅನಕ್ಷರಸ್ಥರಾಗಿರಬಹುದು; ಆದರೆ ಖಂಡಿತ ಅವಿದ್ಯಾವಂತರಲ್ಲ ಎಂಬುದನ್ನು ಅವರು ಹಾಡುವ ಗೀತಗಳು ಸಾರುತ್ತವೆ. ಬೆಳೆಗೆ ಗೊಬ್ಬರ ಸಾರ ಕೊಡುತ್ತದೆ. ಅಂತೆಯೇ, ಜನಪದದಲ್ಲಿರುವ ಸಾರ, ಸಾಹಿತ್ಯ ಬೆಳೆಗೆ, ಬೆಳೆವಣಿಗೆಗೆ ಅತಿ ಮುಖ್ಯವಾದುದು. ಅಲ್ಲಿ ಬೆಳೆದ 'ಕೆಂಬಾರಿ ಸೊಪ್ಪು'ಗಳನ್ನು ಈ ಲೇಖನದಲ್ಲಿ ಪ್ರಸ್ತುತಪಡಿಸುತ್ತಿದ್ದೇನೆ. ಈ ಹಾಡುಗಳು ಹಲವರಿಗೆ ಅರ್ಥವಾಗದಿರಬಹುದು. ಕಾರಣ ಅದು ನಮ್ಮೂರ ತೀರ ಪ್ರಾದೇಶಿಕ ಗ್ರಾಮ್ಯದಲ್ಲಿದೆ. 'ಕೆಂಬಾರಿ ಸೊಪ್ಪ್' ಅಂದರೆ ಕೆಂಪು ಹರಿವೆ ಸೊಪ್ಪು. ಕಪಿಲೆ ಇಲ್ಲಿ ಕೈಲಿತಿಯಾಗಿ ಇನ್ನೂ ಗ್ರಾಮ್ಯ ರೂಪ 'ಕೈಲೂತಿ' ಎಂದಾಗಿದೆ. ಹೂವಿನಕೋಲು ಹೂಗಿನಕೋಲಾಗಿ, ಇನ್ನಷ್ಟು ಗ್ರಾಮ್ಯ ರೂಪ ತಾಳಿ, 'ಲೂಗಿನಾ ಕೋಲು' ಆಗಿದೆ. ಈ ಕೋಲು ಹೊಯ್ಯುವ ಮಹಿಳೆಯರು ಇಂಥ ಹಲವಾರು ಗೀತಗಳನ್ನು ಹಾಡಿ ತಾವೂ ಮನರಂಜನೆ ಪಡೆದು, ಸುತ್ತಲಿನವರಿಗೂ ಮನರಂಜನೆ ನೀಡುತ್ತಾರೆ. ಈ ಹಾಡಿನಿಂದ ಹೊರಹೊಮ್ಮುವ ಲಘು ಹಾಸ್ಯ ಕೇಳುಗರ ಮನ ಸೂರೆಗೊಳ್ಳುವುದರಲ್ಲಿ ಸಂಶಯವಿಲ್ಲ. ಈ ಲೇಖನದ ಉದ್ದೇಶ ನಮ್ಮೂರ ಹಳ್ಳಿಗರು ಹಾಡುತ್ತಿದ್ದ ಗೀತಗಳನ್ನು ವಿಶ್ಲೇಷಿಸಿ, ಅವುಗಳಿಂದ ಹರಿದು ಬರುವ ತಿಳಿ ಹಾಸ್ಯವನ್ನು ಗುರುತಿಸುವುದು.

ಪದಗಳ ವಿಂಗಡನೆ ಮಾಡಿದಲ್ಲಿ ನಮ್ಮೂರ ಗ್ರಾಮ್ಯದ ಹಲವು ನುಡಿಗಳನ್ನು ಅರ್ಥಮಾಡಿಕೊಳ್ಳಬಹುದು. ಉದಾಹರಣೆಗೆ: 'ಎಣ್ಣಿಕೂಳ್ಲೆ ಆಯ್ಕಂಬ್ರು' ಎಂಬುದನ್ನು ಸ್ವಲ್ಪ ಸೂಕ್ಷ್ಮವಾಗಿ ವಿಂಗಡಿಸಿದರೆ ಈ ಮಾತಿನ ಅರ್ಥ ಹೊಳೆಯುತ್ತದೆ. 'ಎಣ್ಣಿದ' ಎಂದರೆ, ಎಣಿಸಿದ; ಕೂಳ್ಲೆ ಅಂದರೆ ಕೂಡಲೆ; ಆಗಬೇಕು ಎಂಬರು 'ಆಯ್ಕಂಬ್ರು' ಎಂತಾಗುತ್ತದೆ. ಆಗಬೇಕು, 'ಆಯ್ಕು' ಎಂದಾಗಿ, ಹೇಳುವರು ಎಂಬುದು ಅಂಬ್ರು (ಅಂಬರು) ಎಂಬ ರೂಪ ತಳೆಯುತ್ತದೆ. ಹೀಗೆ, ಒಮ್ಮೆ ಪದವಿಂಗಡಣೆ ಮಾಡಿದಲ್ಲಿ ಈ ಹಳ್ಳಿ ಭಾಷೆಯನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಾಗಲಾರದೆಂದು ನನ್ನ ಅನಿಸಿಕೆ. ಈ ಲೇಖನದಲ್ಲಿ ಕಾಣಿಸಿದ ತ್ರಿಪದಿಗಳಲ್ಲಿ ಬರುವ ಕೆಲವು ಕ್ಲಿಷ್ಟ ಪದಗಳಿಗೆ ತ್ರಿಪದಿಗಳ ಕೆಳಗೆ ಅರ್ಥವನ್ನು ಕೊಟ್ಟಿರುತ್ತೇನೆ. ಹಾಗಾಗಿ ಅವುಗಳನ್ನು ಅರ್ಥಮಾಡಿಕೊಳ್ಳುವುದು ಸುಲಭವಾಗಬಹುದು. ನಮ್ಮೂರ ಹಳ್ಳಿಗರು ಹೆಚ್ಚಾಗಿ 'ಎ' ಗೆ ಬದಲಾಗಿ 'ಇ' ಯನ್ನು ಶಬ್ದಗಳಲ್ಲಿ ಬಳಸುತ್ತಾರೆ. ಉದಾಹರಣೆಗೆ: ಹೊಳೆ ನಮ್ಮೂರ ಭಾಷೆಯಲ್ಲಿ 'ಹೊಳಿ' ಆಗುತ್ತದೆ. ಹಾಗೆ ಮಳೆ 'ಮಳಿ'ಯಾಗುತ್ತದೆ; ಕತ್ತೆ 'ಕತ್ತಿ' ಯಾಗುತ್ತದೆ. ಹಲವೆಡೆ

'ಅ' ಕಾರವು 'ಎ' ಕಾರವಾಗುವುದನ್ನೂ ಗಮನಿಸಬಹುದು. ಉದಾಹರಣೆಗೆ: ಇಲ್ಲ ಎಂಬುದು 'ಇಲ್ಲೆ'ಯಾಗುತ್ತದೆ. 'ಅಕ್' ಎಂಬುದು ಆಗಬಹುದು ಎಂಬುದರ ಗ್ರಾಮೀಣ ಚುಟುಕು ಶಬ್ದ; ಇತ್ಯಾದಿ, ಇತ್ಯಾದಿ.

### ದುಃಖ ನಿವೇದನೆಯ ಮೂಲಕ ಮನಸ್ಸು ಹಗುರ:

ಸುಖ-ದುಃಖ ಇವೆರಡೂ ಒಂದಕ್ಕೊಂದು ಅಂಟಿಕೊಂಡೇ ಬದುಕು ಸಾಗುತ್ತಿರುತ್ತದೆ. ಈ ಪ್ರಕೃತಿಯ ನಿಯಮವನ್ನು ನಮ್ಮೂರ ಮುಗ್ಧ ಹಳ್ಳಿಗರು ಅರಿತು, ಹೇಗೆ ಅನುಭವಿಸಿಕೊಂಡು ಬರುತ್ತಾರೆಂಬುದನ್ನು ಇಲ್ಲಿ ಕೆಲವು ತ್ರಿಪದಿಗಳ ಮೂಲಕ ನಿಮ್ಮಲ್ಲಿ ಹಂಚಿಕೊಳ್ಳುತ್ತಿದ್ದೇನೆ. ಹಾಸ್ಯಪ್ರಜ್ಞೆ ಮನಸ್ಸನ್ನು ಹಗುರಪಡಿದಿಸಿಕೊಳ್ಳುವ ಒಂದು ಸಾಧನ. ಮೇಲೆ ತಿಳಿಸಿದಂತೆ ಬದುಕು ಸುಖ-ದುಃಖಗಳ ಮಿಶ್ರಣ. ಹಳ್ಳಿಗರು ತಮ್ಮ ಎಲ್ಲ ಸುಖ-ದುಃಖಾನುಭವಗಳನ್ನೂ ಹಾಡುಗಳ ಮೂಲಕ ಹೊರಗೆಡವಿ ಮನಸ್ಸನ್ನು ಹಗುರ ಮಾಡಿಕೊಳ್ಳುತ್ತಾರೆ. ಇವರು ಹೆಚ್ಚಾಗಿ ಭತ್ತ ಕುಟ್ಟುವಾಗಲೋ, ಧಾನ್ಯ ಬೀಸುತ್ತಿರುವಾಗಲೋ, ದಣಿವಾರಿಸಿಕೊಳ್ಳಲು ಹಾಡುಗಳನ್ನು ಹಾಡಿಕೊಳ್ಳುತ್ತಾರೆ. ಭತ್ತ ಕುಟ್ಟುವಾಗ,

ಸುಮ್ಮನೆ ತೊಳದರೆ ಗುಮ್ಹಕ್ಕಿ ಹಾಡ್ದ್ಹಂಗೆ
ಹಾಡ್ಹೇಳಿ ಬತ್ತು ತೊಳದರೆ ಎಲೆ ನಾರಿ
ಬ್ಯಾಸರೋ ಬೆನ್ಹಾಕಿ ನಡೆವುದು

(ತೋಳದರೆ=ಒರಳಿಗೆ ಭತ್ತವನ್ನು ಕಾಲಿನಿಂದ ತಳ್ಳುತ್ತ ಭತ್ತ ಕುಟ್ಟುವಾಗ; ಗುಮ್ಹಕ್ಕಿ=ಗೂಬೆ)

ಈಗ ಕೆಲವು ದುಃಖ ನಿವೇದನೆಯ ಹಾಡುಗಳನ್ನು ಪ್ರಸ್ತುತಪಡಿಸುತ್ತೇನೆ. ಆ ಹಾಡುಗಳ ಉದ್ದೇಶವೂ ಮನಸ್ಸನ್ನು ಹಗುರ ಮಾಡಿಕೊಳ್ಳುವುದು ಎಂದು ನಾನಿಲ್ಲಿ ಒತ್ತಿ ಹೇಳುತ್ತಿದ್ದೇನೆ.

ಬಡವರು ಸತ್ತರೆ ಸುಡುಕೂ ಸೌದಿಲ್ಲೆ
ಒಡ್ಲ ಕಿಚ್ಚೀಲಿ ಹೆಣ ಬೆಂದೊ ಬಗವಂತ
ಬಡವಗೆ ಸಾವ ಕೊಡಬ್ಯಾಡ

(ಸುಡುಕೂ=ಸುಡಲಿಕ್ಕೂ; ಸೌದಿಲ್ಲೆ=ಸೌದೆ ಇಲ್ಲ; ಒಡ್ಲ=ಒಡಲು; ಕಿಚ್ಚೀಲಿ=ಕಿಚ್ಚಿನಲ್ಲಿ, ಬೆಂಕಿಯಲ್ಲಿ)

ಏಕಾದಸಿಯೆಂದ್ ಯಾಕ್ಮಾಡೀರ್ ಸ್ವಾಮೀ
ಮೂರ್ಹೊತ್ತು ಉಂಬ ದೊಡ್ಡವ್ರಿಗ್ ನಮ್ಮಂತ
ಪಾಪಿಗ್ಳಿಗ್ ಅನುದಿನೋ ಉಪವಾಸೊ

(ಯಾಕ್ಮಾಡೀರ್=ಯಾಕೆ ಮಾಡಿದ್ದೀರಾ;ದೊಡ್ಡವ್ರಿಗ್=ದೊಡ್ಡವರಿಗೆ, ಧನಿಕರಿಗೆ)

ಎಡಿತ್ತಿಲ್ಲೆ ಅಂದ್ಹೇಳಿ ಯಾರ್ಹತ್ರ ಹೇಳೂದು
ಎಡಿತ್ತಿಲ್ಲೆ ಜೀವ ಮುಡಿತ್ತಿಲ್ಲೆ ಬಗವಂತ
ಕಡಿಗೊಳ್ಳಿ ದಿನಕಂಡ್ ಕರ್ಕಣ್ಣಿ

(ಎಡಿತ್ತಿಲ್ಲೆ=ಕೂಡುವುದಿಲ್ಲ; ಮುಡಿತ್ತಿಲ್ಲೆ=ಪ್ರಯೋಜನವಿಲ್ಲ; ಕಡಿಕೊಳ್ಳಿ=ಕಡೆಗೆ ಒಳ್ಳೆಯ; ಕರ್ಕಣ್ಣಿ=ಕರೆದುಕೊಳ್ಳಿ)

ಕೂಕಣಿ ನಂಟರೆ ಕೂಳಿಗೆ ಅಕ್ಕಿಲ್ಲೆ
ನಾ ಕುಟ್ಟು ಬತ್ತು ನಂದಲ್ಲ ನಂಟರೆ
ಬೇಕಾರೆ ಹೋಯಿ ಹೊಳಿ ಹಾರಿ

(ಕೂಕಣಿ=ಕುಳಿತುಕೊಳ್ಳಿ; ಬತ್ತು=ಭತ್ತ; ಬೇಕಾರೆ=ಬೇಕಾದರೆ; ಹೋಯಿ=ಹೋಗಿ; ಹೊಳಿ=ಹೊಳೆ)

ಅಪ್ಪಯ್ಯ ಕೊಟ್ಟಿರ್ ಬಾಳಿಪಟ್ಟಿಯ ಸೀರಿ
ಮ್ಯಾದ್ಲಿಗೂ ಬಾರ ನೆರಿಬಾರ ಅಪ್ಪಯ್ಯ
ಮಾರ್ಕಣ್ಣಿ ನಿಮ್ಗೆ ಹಣಬಕ್

(ಕೊಟ್ಟಿರ್=ಕೊಟ್ಟಿದ್ದಾರೆ; ಬಾಳಿಪಟ್ಟಿ=ಬಾಳೆಪಟ್ಟೆ; ಸೀರಿ=ಸೀರೆ; ಮ್ಯಾದ್ಲಿ=ಸೆರಗು; ನೆರಿ=ನೆರಿಗೆ; ಮಾರ್ಕಣ್ಣಿ=ಮಾರಿಕೊಳ್ಳಿ; ಹಣಬಕ್=ಹಣ ಬರಬಹುದು, ಬಕ್ ಅಂದರೆ ಬರಬಹುದು ಎಂದು)

ಹಳ್ಳಿಯವರ ಬಡ ಬದುಕನ್ನು ವರ್ಣಿಸುವ ಮೇಲಿನ ಹಾಡುಗಳು ನಮ್ಮ ಹೃದಯ ತಟ್ಟದೇ ಇರುವುದಿಲ್ಲ. ಹಾಡಿನ ಮೂಲಕ ತಮ್ಮ ಸಂಕಟಗಳನ್ನು ಹೀಗೆ ಹೊರಗೆಡವಿ, ದಣಿವಾರಿಸಿಕೊಳ್ಳುವುದರ ಜೊತೆಗೆ ತಮ್ಮ ಹೃದಯವನ್ನೂ ಹಗುರ ಮಾಡಿಕೊಳ್ಳುತ್ತಾರೆ. ಕೂಳಿಗೇ ಕಷ್ಟವಾಗಿರುವ ಕಾಲದಲ್ಲಿ ಮನೆಗೆ ಬಂದ ನೆಂಟರನ್ನು 'ಬೇಕಾರೆ ಹೋಯಿ ಹೊಳಿ ಹಾರಿ', ಮತ್ತು ಸಾಲದ ಹೊರೆಯಲ್ಲೆ ಅಪ್ಪ ಕೊಟ್ಟ 'ಬಾಳೆಪಟ್ಟೆ' ಸೆರಗು ನೆರಿಗೆಗೇ ಬಾರದಾಗ, ಅದನ್ನು ನೀವೇ 'ಮಾರ್ಕಣ್ಣಿ ಹಣ ಬಕ್' ಎಂದು ಹೇಳುವಾಗ,

ತಮ್ಮ ದುಃಖದ ಮಧ್ಯೆಯಲ್ಲೂ ತಿಳಿ ಹಾಸ್ಯವನ್ನು ರೂಢಿಸಿಕೊಂಡ ಇಂಥ ಹಳ್ಳಿಗರ ಬದುಕು ನಮ್ಮನ್ನು ಸೋಜಿಗಕ್ಕೆ ಗುರಿಪಡಿಸುತ್ತದೆ.

ಹಾಗೆಂದು ಇಂಥವರು ಸದಾ ಅಳುತ್ತಲೇ ಕುಳಿತಿರುವುದಿಲ್ಲ. ಅವರ ಬದುಕಿನಲ್ಲಿ ಆಗೊಂದು–ಈಗೊಂದು, ಅಲ್ಲೊಂದು–ಇಲ್ಲೊಂದು ಹಾಸ್ಯ ಪ್ರಸಂಗಗಳು ಜರುಗುತ್ತಲೇ ಇರುತ್ತವೆ. ಆಗ ಈ ಕೆಳಗಿನಂಥ ಹಾಡುಗಳನ್ನು ಹಾಡಿಕೊಂಡಾಗ, ಅವರ ಮನಸ್ಸು ಇನ್ನಷ್ಟು ಹಗುರವಾಗಲು ಸಹಾಯವಾಗುತ್ತದೆ. ಕೆಳಗಿನ ಮೂರು ಗೀತಗಳು ಹಳ್ಳಿಯವರ ವಿಶಿಷ್ಟ ಹಾಸ್ಯಪ್ರಜ್ಞೆಯನ್ನು ವ್ಯಕ್ತಪಡಿಸುತ್ತದೆ.

೧.ಅರೆಸೋಂಕ್ಹೆಣ್ಣಿನ ಗಂಡ ದೇಶಾಂತ್ರಕ್ಹೋದನೇ
ಆರ್ಹೆತ್ತ ಮೇಲೆ ಅಂವ ಬಂದು ಕೇಳಿದನೆ
ನಾರೀ ನಿನ್ಮಕ್ಳಾ ಹೆಸರೇನು

೨.ಗಂಗಯ್ಯ ತುಂಗಯ್ಯ ಈರಬದ್ರಯ್ಯನೇ
ಬಿಂಗಯ್ಯ ಬಿರುಮ ಬಸವಯ್ಯ ಮಕ್ಕಳೇ
ಹೋಯಿ ನಿಮ್ಮಪ್ಪಯ್ನಿಗ್ ಶರಣೆನ್ನಿ

೩. ಯಾರೀಗ್ಹುಟ್ಟಿದ್ಮಕ್ಳು ಯಾರಿಗೆ ಶರಣೆಂಗ್
ಆನೀ ಮೇಲ್ಬಪ್ಪ ಅರಸಂಗೆ ಶರಣೆಂದ್ರೆ
ಹಾನ್ಯಾಲಿ ಹೊನ್ನ ಅಳೆಸುವ

(ಅರೆಸೋಂಕು=ಅರ್ಧ ಸುತ್ತು ಕಮ್ಮಿಯಾದ; ದೇಶಾಂತ್ರಕ್ಕೆ ಹೋದವನು ಆರು ಹೆತ್ತ ಮೇಲೆ ಬಂದ. ನಿಮ್ಮಪ್ಪಯ್ನಿಗ್ = ನಿಮ್ಮ ಅಪ್ಪನಿಗೆ; ಶರಣೆಂಗ್=ಶ್ರಣು ಎನ್ನುತ್ತವೆ; ಆನಿ=ಆನೆ; ಮೇಲ್ಬಪ್ಪ = ಮೇಲೆ ಬರುವ, ಬಪ್ಪ ಅಂದರೆ ಬರುವ ಎಂದರ್ಥ; ಹಾನ್ಯಾಲಿ = (ಒಂದುತರಹ ಅಳತೆ ಮಾಡುವ) ಅಳತೆ ಪಾತ್ರದಲ್ಲಿ)

ಹಳ್ಳಿಗಳಲ್ಲಿ, ಭತ್ತ ಕುಟ್ಟುವಾಗ ಬೇಸರ ಕಳೆಯಲೆಂದು ಹೆಂಗಳೆಯರು ಹಾಡುವುದು ಸರ್ವೆಸಾಮಾನ್ಯ. ಹಾಗೆ ಅರಳಿಬಂದ ಒಂದೆರಡು ಹಾಡುಗಳನ್ನು ಕೇಳಿ:

ಬತ್ತು ಕುಟ್ವವ್ಳ್ ಕೈಗೆ ಬಯ್ನಿ ಮುಳ್ ಹೆಟ್ಟಿತು
ಮದ್ದಿಗ್ಹೋದಣ್ಣಯ್ಯ ಬರ್ಲಿಲ್ಲೆ ಬಸ್ರೂರ
ಸೂಳಿ ಕಂಡಲ್ಲೇ ಒರ್ಗಿದ॥

(ಬಯ್ನಿ=ಬತ್ತ ಕುಟ್ಟುವ ಒನಕೆಗಳನ್ನು ತಯಾರಿಸಲು ಉಪಯೋಗಿಸುವ ಒಂದು ಜಾತಿಯ ಮರ; (ಮದ್ವಿಗೆ ಹೋದ ಅಣ್ಣಯ್ಯ) ಬರಲಿಲ್ಲೆ= ಬರಲಿಲ್ಲ; ಬಸ್ರೂರು = ವೈಶ್ಯೆಯರು ವಾಸಮಾಡುವ ಕೋಟದ ಸಮೀಪದಲ್ಲಿರುವ ಒಂದು ಊರು)

ಬತ್ತು ತೊಳಿಯೆಂದರೆ ಕತ್ ನೋಯುತ್ತೆಂಬಾಳು
ತಂಗಳ್ ಕೂಳ್ ತನು ಮಸ್ರ ಇಕ್ಕಿಕಿ
ಈಗಳ್ ಕಾಣ್ ಅವ್ವಾ ಕೈಬಾಯ॥

(ತೊಳಿ=ಕುಟ್ಟು; ಮಸ್ರ=ಮೊಸರು; ಇಕ್ಕಿಕಿ=ಹಾಕಿ; ಈಗಳ್ ಕಾಣ್=ಈಗ ನೋಡು)

ಕೆಳಗಿನ ಹಾಡನ್ನು ನನ್ನ ಮುಂದೇಯೇ ಹಾಡಿದ್ದು. ಒಬ್ಬ ದೊಡ್ಡ ಗಾತ್ರದ, ಅಂದರೆ ಅಗಾಧ ಗಾತ್ರದ ಹೆಂಗಸೊಬ್ಬಳು ಬಂದಾಗ ಹಾಡಿದ ಹಾಡಿದು. ಅವಳ ಹೆಸರು ಮಂದಾಕಿಣಿಯಮ್ಮ ಎಂದು. ಈ ಹಳ್ಳಿಗರು ಅವಳ ಗಾತ್ರವನ್ನೂ ಹೆಸರನ್ನೂ ಜೋಡಿಸಿ ಹಾಡಿದ ಪರಿ ಗಮನಿಸಿ:

ಅಮ್ಮ ನಿಮ್ಕುಂಡಿ ಮಂದರು ಪರ್ವತೊ
ಅಮ್ಮಾ ಹ್ಯಾಂಗ್ಬಂದ್ರೀ ನೆಡ್ಕಂಡ್ ಮಣುಬಾರೋ
ನಿಮ್ಮ ಆ ಕುಂಡೀ ಹೊತ್ಕಂಡ್॥

ಮೇಲಿಂದ ಈ ಹಾಡಿನಲ್ಲಿ ಅಶ್ಲೀಲತೆ ಕಂಡುಬಂದರೂ, ಹಳ್ಳಿಯವರ ಮುಗ್ಧತೆ ಅದನ್ನು ಮರೆಮಾಡಿ, ನಮ್ಮಲ್ಲಿ ಹಾಸ್ಯಪ್ರಜ್ಞೆ ಮೂಡಿಸಿಸುವುದರಲ್ಲಿ ಸಫಲವಾಗಿದೆ. ಈ ಕೆಳಗಿನ ಗರ್ಭಿಣಿ ನಡೆಯುವ ವಿವರಣೆಯನ್ನು ಗಮನಿಸಿ:

ಹಸ್ರ್ ಕೆಂಪಿನೊಳಗೆ ಹಸ್ರ್ ಕೆಂಪಿನ ಕೆಂಚಮ್ಮ
ಬಸ್ರ್ ಬಂದ್ರೆ ಹ್ಯಾಂಗೆ ನೆಡಿವಳು ಸುಗ್ಗಿಯ
ಕೆಸ್ರ್ ಗೆದ್ದಿಲ್ ಬಸವ ನಡಿದ್ಹಾಂಗೆ

ಈ ತರುಣಿಯ ಬಸಿರು ಹೊಚ್ಚ ಹೊಸದು. ಅವಳ ಮುಖದಲ್ಲಿ ಕಾಣಿಸುವ ಕಳೆ ಹೊಚ್ಚ ಹಸಿರಿನ ಹಾಗೆ. ಅಂಥ ಕೆಂಪಿನ ಕೆಂಚಮ್ಮ ನಡೆದು ಬರುತ್ತಿದ್ದಲ್ಲಿ ಅದು ಸುಗ್ಗಿ ಗದ್ದೆಯಲ್ಲಿ ಕದಡಿದ ಕೆಸರಿನ ರಾಡಿಯ ಮಧ್ಯೆ ಬಸವ ನಡೆದು ಬಂದಂತೆ. ಅಥವಾ ಈ ಕೆಳಗಿನ ಗರ್ಭಿಣಿಯನ್ನು ಗುರುತಿಸುವ ಹಾಡ ನಿಜಕ್ಕೂ ನಕ್ಕು ನಗಿಸುವಂತಾಗುತ್ತದೆ:

ಎಳ್ಳಿನ್ ಕಾಳಷ್ಟು ಎಳಿಬಸ್ರಿ ನಮ್ಮಕ್ಕ
ಹಳ್ಳ ದಾಂಟಲಿಕೆ ಅಳುಕುವಳು ಪುರುಸನು
ಮೆಲ್ಲಗೆ ನಾಚಿಕಿ ತೆಗೆಯೆಂಬ

'ಎಳ್ಳಿನ್ ಕಾಳಷ್ಟು ಎಳಿಬಸ್ರಿ' ಎಂಬಲ್ಲಿ ಈಕೆಯು ಬಸಿರು ತಿಂಗಳೂ ಕಳೆದಿರಲಾರದೆಂಬ ಅನಿಸಿಕೆಯನ್ನು ಮೂಡಿಸುತ್ತದೆ. ಅವಳಿಗೆ ತನ್ನ ಬಸಿರಿನ ಅರಿವು ಇದ್ದು, ಅದನ್ನು ಎಲ್ಲರೂ ಗಮನಿಸುವುರೆಂಬ ಸಂಭ್ರಮದ ಅಭಿಮಾನವಿದೆ. ಹಾಗಾಗಿ ಗಂಡನೊಡನೆ ಹೊಳೆ ದಾಟುವಾಗ, ಉಟ್ಟ ತೊಡಿಗೆ ಒದ್ದೆಯಾಗಬಾರದೆಂದು ಉಡಿಗೆಯನ್ನು ಮೇಲಕ್ಕೆತ್ತಲು ಅವಳಿಗೆ ನಾಚಿಕೆ. ಆದರೆ, ಅವಳ ಗಂಡ ಆ ನಟನೆಯ ನಾಚಿಕೆಯ ಬಗ್ಗೆ ಮಾಡಿದ ಹಾಸ್ಯ ನಮ್ಮಲ್ಲಿಯೂ ಹಾಸ್ಯ ಪ್ರಜ್ಞೆ ಮೂಡಿಸುತ್ತದೆ.

ಒಬ್ಬ ಬ್ರಾಹ್ಮಣ ಮಡಿ–ಮಡಿ ಎಂದು ಚಡಪಡಿಸುತ್ತಿದ್ದ. ಅವನನ್ನು ಈ ಹೆಂಗಳೆಯರು ಹೇಗೆ ಹಾಸ್ಯ ಮಾಡುತ್ತಾರೆಂಬುದು ಈ ಹಾಡಿನಲ್ಲಿ ವ್ಯಕ್ತವಾಗಿದೆ.

ಕೊರಕಲು ಹಣ್ಣು ಗಡ್ಡದವ ಅವನಾಗಿದ್ದ:  
ಚಳಿ–ಚಳಿ ಆಯ್ತೆಂದ್ ಒಲಿ ಮುಂದೆ ಕೂತ್ಕಂಡ್  
ಹಳಿ ಮ್ಯೆನಾ ಕಾಯ್ಸ್ತಿಪ್ಪಂಗೆ ಆ ಬಿರಾಮ್ಣಾ  
ಬಿಳಿ ನೊರಿ ಗಡ್ಡೂನಾ ಸುಟ್ಕಂಡ॥

(ಹಳಿ=ಹಳೆ; ಕಾಯ್ಸ್ತಿಪ್ಪಂಗೆ = (ಒಲೆ ಬೆಂಕಿಯ ಮುಂದೆ) ಕಾಯಿಸುತ್ತ ಇರುವಾಗ (ಇಪ್ಪಂಗೆ); ಬಿರಾಮ್ಣಾ=ಬ್ರಾಹ್ಮಣ; ನೊರಿ ಗಡ್ಡೂನಾ=ನೊರೆ ಗಡ್ಡವನ್ನು)

## ಅತ್ತೆ–ಸೊಸೆಯರೊಳಗಿನ ಸಂಬಂಧ:

ಅತ್ತೆ (ಅತ್ತಿ) ತೀರಿಕೊಂಡಾಗ ಈ ಕೆಳಗಿನ ಹಾಡಲ್ಲಿ ಬರುವ ಒಬ್ಬ ಸೊಸೆಯ ಪ್ರತಿಕ್ರಯೆ ಯಾರಲ್ಲಾದರೂ ನಗು ತರಲೇ ಬೇಕು:

ಅತ್ತಿ ಸತ್ತರೆ ಸೊಸಿ ಏನೆಂದು ಮರ್ರ್ಕಳು  
ಹಿತ್ತಿಲ ಕದವಾ ಬಡ್ಕೊಂಡು ಈ ಮನಿಯಾ  
ಮೃತ್ಯು ದೇವತೆ ತೊಲ್ಗೀ ಹೋಯ್ತೆಂಬ್ಳು॥

(ಸೊಸಿ= ಸೊಸೆ; ಮರ್ರ್ಕಳು=ಮರುಗುವಳು, ಅಳುವಳು; ತೊಲ್ಗೀಹೋಯ್ತೆಂಬ್ಳು =ತೊಲಗಿ ಹೋಯ್ತು ಎಂಬಳು.)

ಅಥವಾ

ಹಿತ್ಲಾ ಬಾಗ್ಲಾ ಹಿಡ್ಕಂಡ್ ಆಸೊಸಿ  
ಕತ್ತಿ ಸತ್ತ್ಹೋಯ್ತೆಂಬ್ಳು ಎಳ್ದಾಕಿ  
(ಕತ್ತಿ = ಕತ್ತೆ)

ಇಲ್ಲಿ 'ಅತ್ತಿ' ಮತ್ತು 'ಕತ್ತಿ' ಇವೆರಡು ಶಬ್ದಗಳ ಪ್ರಾಸ ಗಮನಿಸುವಂಥದು. ಯಾರು ಹೇಳಿದರು ಈ ಹಳ್ಳಿಗರು ಸಾಹಿತಿಗಳಲ್ಲವೆಂದು?

ಸೊಸೆಯ ಮೇಲೆ ಎಲ್ಲ ಅತ್ತೆಯರಿಗೂ ಸಾಮಾನ್ಯವಾಗಿ ತಾತ್ಸಾರವಿರುತ್ತದೆ. ಹಾಗೆಯೇ ಒಬ್ಬ ಅತ್ತೆ ತನ್ನ ಸೊಸೆಯ ಮೇಲೆ ಮಗನಿಗೆ ದೂರು ಕೊಟ್ಟಿರಬೇಕು. ಮಗ ಅಂತಯ್ಯನಿಗೆ ಕೋಪಬಂದಿತ್ತು. ಅದು ತಾಯಿಯನ್ನು ಒಲಿಸಲು ಬಂದ ಹುಸಿಕೋಪವಿದ್ದರೂ ಇರಬಹುದು. ಹಾಗೆಂದು, ಅವನು ಹೆಂಡತಿಯನ್ನು ಹೊಡೆಯಲು ಬೆತ್ತಕ್ಕಾಗಿ ಹುಡುಕುತ್ತಾನೆ. ಆದರೆ ಎಲ್ಲೂ ಸಿಗಲಾರದೆ, ಮಂದರ್ತಿ ಎಂಬ ಊರಿನ ಕಾಡಿಗೆ (ಕಾನು) ಬೆತ್ತ ತರಲು ಹೊರಡುತ್ತಾನೆ. ಅದನ್ನು ತರುವಷ್ಟರಲ್ಲಿ ಮನೆಯಲ್ಲಿ ತಿರುಗಿ ಶಾಂತಿ ಬಂದಿರುತ್ತದೆ. ಹೀಗೆ ಆ ಪತಿ ಹೆಂಡತಿಯನ್ನು ಹೊಡೆಯದೆ ತನ್ನ ತಾಯಿಯನ್ನು ತೃಪ್ತಿಗೊಳಿಸುತ್ತಾನೆ, ಹಾವೂ ಸಾಯಬಾರದು, ಕೋಲೂ ಮುರಿಯಬಾರದು ಎಂಬ ಗಾದೆಯಲ್ಲಿದ್ದಂತೆ. ಇವನ ನಿಪುಣತೆಗೆ ತಲೆಬಾಗಬೇಕು:

ಮಡದಿಯ ಹೊಡಿಲಿಕೆ ಇಲ್ಲೆಲ್ಲೂ ಕೋಲಿಲ್ದೆ
ಮಂದರ್ತಿ ಕಾನ ಎಳಿಬೆತ್ತೊ  ಬಪ್ಪಲ್‌ಗಂಟೆ
ಅಂತಯ್ಯ ನಿನ್ ಸಿಟ್ ಹಿರಿದವು
(ಬಪ್ಪಲ್‌ಗಂಟೆ=ಬರುವ ತನಕ)

ಅತ್ತೆ–ಅಳಿಯರ ಸಂಬಂಧ:

ಅತ್ತೆಯರಿಗೆ ಶ್ರೀಮಂತ ಅಳಿಯಂದಿರನ್ನು ನೋಡಿದರೆ ವಾತ್ಸಲ್ಯ ಹೆಚ್ಚು:
ಹಣವಿದ್ದಳಿ ಬಂದ್ರೆ ಕೋಳಿಯ ಕೊಲ್ಕೆಂಬ್ಳ್
ಹಣವಿಲ್ಲದೆ ಬರಿ ಕಿಸಿಯಳಿಯನು  ಬಂದರೆ
ಕೀಳೆಂಬ್ಳ್ ಗರನ ಹರಗಿಯ

(ಕೊಲ್ಕೆಂಬ್ಳ್=ಕೊಲ್ಲಬೇಕು ಎನ್ನುವಳು; ಬರಿ ಕಿಸಿ=ಖಾಲಿ ಕಿಸೆ; ಗರನ ಹರಗಿಯ=ಮಡಿ ಮಾಡಿ ನೆಟ್ಟ ಹರಿವೆ. ಇಲ್ಲಿ ಮಡಿ ಎಂದರೆ ಹರಿವೆ ಸಸಿಗಳಂಥ ಸಣ್ಣ ನೆಡುವ ಗಿಡಗಳನ್ನು ಚೌಕಾಕಾರದ ಜಾಗ ಅಥವಾ plot )

ಕೆಳಗಿನ ಉಪಚಾರ ಎಂಥ ಅಳಿಯನಿಗೂ ಕೋಪ ಬರುವಂಥದೇ:

ವೊನ್ನಿ ಮಾಡಿದ್ ಅಡ್ಗಿ ನಿನ್ನಿ ಕಾಸಿದ್ ತುಪ್ಪ
ಉಣ್ಣು ಉಣ್ಣೆಂದು ಉಪಚಾರು ತಂಗಿ ಗಂಡ
ಉಣ್ಣದೆ ಹೋದ ಬಿಸಿಲಲ್ಲಿ

(ಮೊನ್ನಿ, ನಿನ್ನಿ=ಮೊನ್ನೆ, ನಿನ್ನೆ; ತುಪ್ಪು=ತುಪ್ಪ)

ಆದರೆ, ಎಪ್ಪತ್ತು ದೋಸೆ ಕಬಳಿಸಿದ ಅಳಿಯ ನಿಜಕ್ಕೂ ಹೊಟ್ಟೆಬಾಕನೇ ಸರಿ:

ಅತ್ತಿಯ ಮನಿದ್ವಾಸಿ ಹತ್ತಿಯ ಹೂಗಿನ್ಹಾಂಗೆ
ಎಪ್ಪತ್ತು ತಿಂದ ಮದುಮಗನ ಹೊಟ್ಟಿಲಿ
ನೆಗಳುಂಟೋ ಏನೋ ಶಿವಬಲ್ಲ

(ಅತ್ತಿಯ ಮನಿದ್ವಾಸಿ=ಅತ್ತೆ ಮನೆಯ ದೋಸೆ; ಹೂಗಿನ್ಹಾಂಗೆ=ಹೂವಿದ್ದ ಹಾಗೆ; ನೆಗಳ=ಮೊಸಳೆ)

ಈ ಅಳಿಯನ ಹೊಟ್ಟೆಯಲ್ಲಿ ಹತ್ತಾರು ಮೊಸಳೆಗಳೇ ಇದ್ದಿರಬೇಕೆಂದು ಅತ್ತೆ ಎಣಿಸಿದಲ್ಲಿ ಆಶ್ಚರ್ಯವಿಲ್ಲ!

**ಸೋದರ, ಸೋದರಿ ಮತ್ತು ಬಾವಂದಿರೊಳಗಿನ ಹಾಸ್ಯ ಪ್ರಸಂಗಗಳು:**

ಸೋದರಿಯರು ಅಣ್ಣನನ್ನು ಪರಿಹಾಸ ಮಾಡುವ ಹಲವು ಗೀತಗಳು ಇವೆ. ಅಣ್ಣಂದಿರು ಬೇರೆ ಬೇರೆ ತರುಣಿಯರ ಮೇಲೆ ಕಣ್ಣಿಟ್ಟಿರುವುದು ತಂಗಿಯರಿಗೆ ಕುಚೋದ್ಯ ಮಾಡಲು ಒಳ್ಳೆಯ ಅವಕಾಶ ನೀಡುತ್ತದೆ:

ಮುದ್ದು ಹುಡ್ಗಿರ್ನ್ ಕಂಡ್ ಕದ್ದು ಗಾಡಿಯ ಬಿಟ್ಟ
ಬಿದ್ದು ಮುಂಗಾಲ್ನ ಮುರ್ಕಂಡ ತಿಮ್ಮಣ್ಣ
ಇದ್ದ ಮರ್ವಾದಿನ್ ಕಳ್ಕಂಡ

ಇದ್ದ ಹುಡುಗಿಯರ ಮೇಲಿನ ವ್ಯಾಮೋಹದಿಂದ ದೂರದ ಊರಿಗೆ ಗಾಡಿ ಕಟ್ಟಿಕೊಂಡು ಹೋಗಿ ಅಲ್ಲಿ ಮುಂಗಾಲನ್ನು ಮುರಿದುಕೊಂಡು ಬಂದ ಅಣ್ಣ ಇದ್ದ ಮರ್ಯಾದೆಯನ್ನೂ ಕಳೆದುಕೊಂಡನಂತೆ.

ಹರ್ಗನ ಬ್ಯಾಟಿ ಹಗ್ಲಿಗೆ ಮುರುಗನ ಬ್ಯಾಟಿ ದಾತ್ರಿಗೆ
ಸಾರಂಗ್ದ ಬ್ಯಾಟಿ ಸನಿವಾರೊ ಅಣ್ಣಪ್ಗೆ
ನೆರಿಮನಿ ಬ್ಯಾಟಿ ಅನುದಿನೋ

(ಮುರುಗ=ಮೃಗ; ದಾತ್ರಿಗೆ=ರಾತ್ರಿಗೆ; ನೆರಿಮನಿ=ನೆರೆಮನೆ. ಇಲ್ಲಿ ಹರ್ಗ ಎಂದರೆ ಹಲ್ಲಿಗಿಂತ ಸ್ವಲ್ಪ ದೊಡ್ಡ ಗಾತ್ರದ ಹರೆಯುವ ಒಂದು ಪ್ರಾಣಿ ಇದ್ದಿರಬಹುದು.)

ಇಲ್ಲಿ 'ಬ್ಯಾಟಿ' ಎಂಬ ಶಬ್ದಕ್ಕೆ ಬೇಟೆ ಮತ್ತು ಭೇಟಿ ಎಂಬ ಎರಡೂ ಅರ್ಥ

ಮೂಡಿರುವುದನ್ನು ಗಮನಿಸಬಹುದು. ಇದು ನಮ್ಮ ಹಳ್ಳಿಯ ಜನಪದ ಸಾಹಿತಿಗಳ ಚಾತುರ್ಯವನ್ನು ವ್ಯಕ್ತಪಡಿಸುತ್ತದೆ. ಈ ಅಣ್ಣಪ್ಪನಿಗೆ ನೆರೆಮನೆಯ ತರುಣಿಯ ಮೇಲೆ ವ್ಯಾಮೋಹ ಬಿದ್ದಿದ್ದುದು ತಂಗಿಯ ಕುಹಕಕ್ಕೆ ಎಡೆಮಾಡಿ ಕೊಡುತ್ತದೆ.

ಅಣ್ಣನ ಹೆಂಡತಿಯನ್ನು ಹಾಸ್ಯ ಮಾಡುವ ತಂಗಿಯರ ಹಾಡುಗಳು ಹಲವಿವೆ. ಇಲ್ಲಿ ಒಂದೆರಡು ಹಾಡುಗಳನ್ನು ಪ್ರಸ್ತುತಪಡಿಸುತ್ತಿದ್ದೇನೆ:

ಹೆಡ್ಡ ಅಣ್ಣಯ್ಯನಿಂಗೆ ದೊಡ್ಡೋರ್ಮನಿ ಹೆಣ್ಣ್ಯಾಕೆ
ಹೆಡ್ಡನ ಹೆರಗೆ ಮನಿಸಿಕಿ ಆ ಹೆಣ್ಣು
ದಡ್ಡನ ತೋಳ್ಗೇ ಒರಗಿದ್ಳು

(ದೊಡ್ಡೋರ್ಮನಿ=ಶ್ರೀಮತರ ಮನೆಯ; ಹೆರಗೆ ಮನಿಸಿಕಿ=ಹೊರಗೆ ಮಲಗಿಸಿ)

ಈ ಹೆಣ್ಣಿಗೆ ದಡ್ಡನಾದರೂ ದುಡ್ಡಿದ್ದವನ ಮೇಲೇ ವ್ಯಾಮೋಹ. ಹಾಗೆಂದು ಈಕೆ ತನ್ನ ಹೆಡ್ಡ ಗಂಡನನ್ನು ಹೊರಗೇ ಮಲಗಿಸಿ ನಲ್ಲನೊಡನೆ ಮೆರೆಯುತ್ತಿರುತ್ತಾಳೆ. ಆ ಹೆಂಡತಿಯ ಸಂಚನ್ನು ಅರ್ಥ ಮಾಡಿಕೊಳ್ಳಲಾರದಷ್ಟು ಹೆಡ್ಡನಿರಬೇಕು ಆ ಗಂಡ.

ಕಾಡಿಗಿ ಹಚ್ಚೆಂದ್ರೆ ಓಡಿನ ಮಸಿಯೆಂಗ್
ಮುಡಿಯೆಂದ್ರೆ ಕ್ಯಾದ್ಗಿ ಮುಳ್ಳೆಂಗ್ ಕೆಂಪಣ್ಣ
ಕ್ವಾಡಂಗಿ ನಿನಗೆಲ್ಲಿ ದೊರಕೀತು

(ಓಡಿನ ಮಸಿ= ಚೂರಾದ ಮಡಕೆ ಸುಟ್ಟ ಮಸಿ; ಎಂಗ್=ಎನ್ನುವುದು; ಕ್ವಾಡಂಗಿ=ಕೋಡಂಗಿ)

ಕಾಡಿಗೆಯನ್ನು ಮಡಕೆ ಸುಟ್ಟ ಮಸಿಯೆಂದೂ, ಕೇದಿಗೆ ಹೂವನ್ನು ಮುಳ್ಳೆಂದೂ ಹೇಳುವ ಕೋಡಂಗಿಯಂಥ ಹೆಣ್ಣನ್ನು ಎಲ್ಲಿಂದ ತಂದೆ ಅಣ್ಣ, ಕೆಂಪಣ್ಣ? ಎಂದು ಒಬ್ಬ ತಂಗಿ ಕುಚೋದ್ಯ ಮಾಡುತ್ತಾಳೆ. ಇಲ್ಲಿ ‘ಮಸಿಯೆಂಗ್’, ‘ಮುಳ್ಳೆಂಗ್’ ಎಂಬ ನಪುಂಸಕ ಶಬ್ದವನ್ನು ಉಪಯೋಗಿಸಿದುದನ್ನು ಗಮನಿಸಬಹುದು. ಇದು ಕೋಡಂಗಿ ಎಂಬ ಶಬ್ದ ಪ್ರಯೋಗವನ್ನು ಸಮರ್ಥಿಸುತ್ತದೆ.

ಪದೆ-ಪದೆ ಮಾವನ ಮನೆಗೆ ಹಣಕ್ಕಾಗಿ ಬರುತ್ತಿರುವ ಬಾವನನ್ನು ಒಬ್ಬ ನಂಟ ಪರಿಹಾಸ ಮಾಡುವುದನ್ನು ಗಮನಿಸಿ:

ಅಕ್ಕನ್ನ ಕೊಟ್ಟಿತ್ತ್ ಮಕ್ಕಿನ ಬಿಟ್ಟಿತ್ತ್
ಹೊಟ್ಕಣ್ಣೆಮ್ಮಿ ಬಳುವಳಿ ಕೊಟ್ಟರೂ
ಯಾಕ್ ಮತ್ತ್ಯಾ ಬಂದಿ ಮರ್‍ಲ್ ಬಾವಾ

(ಮಕ್ಕಿ=ಬೆಟ್ಟದ ಮೇಲಿನ ಗದ್ದೆ, ಇದು ಹೆಚ್ಚಿನ ಫಸಲು ಕೊಡಲೊಲ್ಲದು; ಹೊಟ್ಕಣ್ಣೆಮ್ಮಿ=ಕುರುಡು ಕಣ್ಣಿನ ಬರಡು ಎಮ್ಮೆ; ಬಂದಿ=ಬಂದೆ)

ಇಲ್ಲಿ ಬಳಸಿರುವ ಶಬ್ದಗಳು: 'ಹೊಟ್ಕಣ್ಣೆಮ್ಮಿ', 'ಮಕ್ಕಿ' – ಆ ಬಾವ ನಿಜಕ್ಕೂ 'ಮರ್ಲ್ ಬಾವ' ಎಂಬುದನ್ನು ಸಾರ್ಥಿಸುತ್ತದೆ. ಕೊಟ್ಟ ಅಕ್ಕನೂ ಕುರುಡಾಗಿದ್ದರೆ ಆಶ್ಚರ್ಯವಿಲ್ಲವೆನ್ನಿ!

### ಅಜ್ಜ-ಅಜ್ಜಿಯರ ಮೇಲಿನ ಹಾಸ್ಯ:

ಮಡಿ-ಮಡಿಯೆಂದು ಹಲುಬುತ್ತಿರುವ ಮುದುಕ ಬ್ರಾಹ್ಮಣ ತನ್ನ ಗಡ್ಡ ಸುಟ್ಟುಕೊಂಡ ಹಾಸ್ಯ ಪ್ರಸಂಗವನ್ನು ಮೇಲೊಂದು ಗೀತದಲ್ಲಿ ಓದಿದ್ದೀರಿ. ಈ ಕೆಳಗೆ ಇನ್ನೂ ಒಂದೆರಡು ಮಾದರಿ ಹಾಡುಗಳನ್ನು ಪ್ರಸ್ತುತಪಡಿಸುತ್ತಿದ್ದೇನೆ:

ಮುದ್ಕಿ ಮದಿಯಾಯ್ಕೆಂದ್ ತುದಿಕಾಲ್ಕುಣಿದಳು
ಚಾವ್ಡಿ ಮೇಲ್ಕೂತ ಚೆಲುವನೆ ಆಯ್ಕೆಂದ್
ಮುದ್ಕಿ ಸ್ವಾಮ್ವಾರ ಹಿಡಿದಳು

(ಮದಿಯಾಯ್ಕೆಂದ್=ಮದುವೆಯಾಗಬೇಕೆಂದು, ಆಯ್ಕು ಅಂದರೆ ಆಗಬೇಕು ಸ್ವಾಮ್ವಾರ=ಸೋಮವಾರ ವ್ರತ)

ಮುಂಡ್ಕನ ಹಳಿನಡ್ಡೆ ಮುದ್ಕಿ ಮಿಂಡನ ಕೂಡಿ
ಸರ್ಕಾರ ಬಂದು ತನ್ಕಿಯು ಏನೆಂದ್ರು
ಮುದ್ಕಿಗೀ ಕೆಲ್ಸ ತರವಲ್ಲ

(ಮುಂಡ್ಕನ ಹಳಿನಡ್ಡೆ=ಕಾಡು ಕೇದಿಕೆಯ ತೋಪಿನ ಅಡ್ಡ, ಮರೆಯಲ್ಲಿ; ತನ್ಕಿಯು=ತನಿಕೆಯು)

ಮುದುಕಿಯ ಈ ವರ್ತನೆ ಅವಳ ವಯಸ್ಸಿಗೇ ತರವಲ್ಲವೆಂದು ಸರಕಾರವೇ ತೀರ್ಪು ಕೊಟ್ಟಿತಂತೆ!

ಮುದುಕಿಯೊಬ್ಬಳು ಮದುವೆ ಹಾಡು ಹೇಳಹೊರಟಾಗ ತರುಣಿಯರು ಹಾಡುವ ಹಾಸ್ಯದ ಪರಿ ನೋಡಿ:

ತೊಂಡೆಕಾಯ್ ಕೊಯ್ಅಜ್ಜಿ ಬೆಂಡೆಕಾಯ್ ಕತ್ತರ್ಸಜ್ಜಿ
ಕಾಯ್ನಾಸ್ಮಿನಾದ್ರೂ ಅರಿಯಜ್ಜಿ ಆದರೆ
ಮಂಟಪದ ಹಾಡು ತರವಲ್ಲ

(ಇಲ್ಲಿ ಕೊಯ್ ಅಂದರೆ ಕತ್ತರಿಸುವುದು, ಹೆಚ್ಚುವುದು ಎಂದಾಗುತ್ತದೆ; ಕಯ್‌ಸಾಸ್ಮಿ=ಕಾಯಿ ಸಾಸುವೆ; ಅರಿ=ಅರೆಯುವುದು)

ಅಜ್ಜಿಗರುಸಿನವ್ಯಾಕೆ ಕಬ್ಬ್ಯಾಕೆ ಬೋಡಂಗೆ
ದಿಬ್ಬಣುವ್ಯಾಕೆ ಮುದುಕಂಗೆ   ಗಾಣಿಗ
ನಿನ್ನಪ್ಪಂಗ್ಯಾಕೆ ಸೆಳಿಮಂಚೊ

ಅಜ್ಜಿಗೆ ಅರಶಿನ, ಹಲ್ಲಿಲ್ಲದವಗೆ (ಬೋಡಂಗೆ) ಕಬ್ಬು, ಮುದುಕನಿಗೆ ದಿಬ್ಬಣ – ಎಲ್ಲವೂ ಅನಗತ್ಯ. ಹಾಗೆಯೇ ಒಬ್ಬ ಗಾಣಿಗನ (ಅಂದರೆ ಎಣ್ಣೆ ತಯಾರಿಸುವವನು) ತಂದೆಗೆ ಬೆತ್ತದಿಂದ ತಯಾರಿಸಿದ ಮಂಚದ ಅವಶ್ಯವೇನು? ಎಂದು ಈ ಹಾಡುಗಾರ್ತಿ ಪ್ರಶ್ನಿಸುತ್ತಾಳೆ.

**ಇನ್ನಷ್ಟು ತಿಳಿಹಾಸ್ಯ:**

ಸ್ವಾದ್ರಾ ಮ್ರವನ ಮಗನೆ ಸೋತಿ ನನ್ ಕೈಯಲ್ಲಿ
ಜೋತ್ರ ನನ್ ಕೈಲಿ ಉಳಿದ್ಹೋದೊ   ಇಲ್ಕೇಣ್
ಸೋತೆ ಎಂದ್ಹೇಳು ಕೊಡುವೆನು

(ಇಲ್ಕೇಣ್=ಇಲ್ಲಿ ಕೇಳು)

ಹುಡುಗಿಯರು ತಮ್ಮ ಸೋದರ ಮಾವನ ಮಗನನ್ನೇ ಮದುವೆಯಾಗುವ ಒಂದು ಸಂಪ್ರದಾಯವಿದೆಯಷ್ಟೆ! ಅಂಥ ಜೋಡಿಯರೊಳಗಿನ ಪಂದ್ಯದಲ್ಲಿ ಹುಡುಗಿ ತನ್ನ ಸೋದರಮಾವನ ಮಗನ ಧೋತ್ರವನ್ನು (ಜೋತ್ರ) ಎಳೆದು ತನ್ನಲ್ಲಿಟ್ಟುಕೊಂಡಿದ್ದಾಳೆ. ಸೋತೆನೆಂದು ಹೇಳದೆ ಆ ಧೋತ್ರವನ್ನು ಅವನಿಗೆ ಮರಳಿ ಕೊಡುವುದಿಲ್ಲ ಎಂಬ ಆಕೆಯ ಸವಾಲು ನಗು ಬರಿಸದಿರಲು ಸಾಧ್ಯವೇ?

ಅಕ್ಕಿಪುಕುರಿಯ ಕೈಲಿ ಅಡ್ಗಿ ಮಾಡೆಂದ್ಹೇಳಿ
ಮುಕ್ತ ಕೂತಿದ್ಲ್ ಒಲಿಮುಂದೆ   ಅಪ್ಪಯ್ಯ
ಬೆಕ್ಕಿನ್ಮರಿಯೆಂದ್ ಒಳ್ಗ್ ದೂಕ್ದಿ

(ಅಕ್ಕಿಪುಕುಕುರಿ=ಹಸಿ ಅಕ್ಕಿಯನ್ನು ತಿಂದು ಕಾಮಾಲೆ ರೋಗ ಪೀಡಿತಳಾದವಳು; ಅಡ್ಗಿ=ಅಡುಗೆ; ಮುಕ್ತ=ಮುಕ್ಕುತ್ತ)

ಬಹುಶಃ ಆ 'ಪುಕುರಿ' ಚಿಕ್ಕ ಗಾತ್ರದವಳಾಗಿದ್ದಿರಬಹುದು. ಆದರೂ, ಅವಳನ್ನು ಬೆಕ್ಕಿನ ಮರಿಯೆಂದು ಒಲೆಯ ಒಳಗೆ ನೂಕುವುದು ಅಸಂಬದ್ಧವಾಗಿ ತೋರಿದರೂ

ಅದು ನಮ್ಮ ತುಟಿಯ ಮೇಲೊಂದು ನಗೆ ಹನಿ ಮೂಡಿಸುವುದಂತು ನಿಜ!

ಹಾಗೆಯೇ ಈ ಕೆಳಗಿನ ಅಸಂಬದ್ಧ ಸನ್ನಿವೇಶವೂ ನಗು ತರುತ್ತದೆ:

ಗುಡ್ಡಿ ಗುಡ್ಡಿಯ ನುಂಗಿ ಗುಡ್ಡಿ ಹೆಗ್ಗುಳ ನುಂಗಿ
ಗುಡ್ಡಿಗ್ಹೋದವಳ ಮೊಲ ನುಂಗಿ   ಆ ಮನಿ
ದೊಡ್ಡ ತುತ್ತನ್ನೇ ನೆಳ ನುಂಗಿ

(ಗುಡ್ಡಿ=ಗುಡ್ಡ; ಹೆಗ್ಗುಳ=ಹೆಗ್ಗಣ; ನೆಳ=ನೊಣ)

ಈ ಹಾಡು ಶಿಶುನಾಳ ಶರೀಫ಼ರ 'ಕೋಡಗನ ಕೋಳಿ ನುಂಗಿತ್ತ....' ಎಂಬ ಗೀತವನ್ನು ನೆನಪಿಗೆ ತರುತ್ತದೆ.

**ಮುಕ್ತಾಯ:**

ಹೀಗೆ ನಮ್ಮೂರ ಹಳ್ಳಿಗರು ತಮ್ಮ ಬದುಕಿನಲ್ಲಿ ಎದುರಿಸುವ ಹಲವಾರು ರಸಮಯ ಸನ್ನಿವೇಶಗಳನ್ನು ಹಾಸ್ಯಪ್ರಜ್ಞೆಯಿಂದ ನೋಡಿ ತಮ್ಮ ಮನಸ್ಸನ್ನು ಹಗುರಪಡಿಸಿಕೊಳ್ಳುತ್ತಾರೆ. ಅವರು ಬದುಕನ್ನು ನೋಡುವ ಪರಿ ಎಂಥವರನ್ನೂ ಬೆರಗುಗೊಳಿಸುತ್ತದೆ ಹಾಗೂ ತಲೆದೂಗುವಂತೆ ಮಾಡುತ್ತದೆ. ಇಲ್ಲಿ ಪ್ರಸ್ತುತಪಡಿಸಿದ ಹಾಡುಗಳು ಬಾಯಿಂದ ಬಾಯಿಗೆ ಮೌಕಿಕವಾಗಿ ಹರಿದು ಬಂದಂಥವುಗಳು. ಹೇಗೆ ವೇದಗಳು ಮೌಖಿಕವಾಗಿ ಹರಿದು ಉಳಿದು ಬಂದಿದೆಯೋ, ಅಂತೆಯೇ ಈ ಹಳ್ಳಿಗರು ನಮ್ಮ ಸಾಹಿತ್ಯವನ್ನು ಮೌಖಿಕವಾಗಿ ಉಳಿಸಿಕೊಂಡು ಬಂದು ಅದನ್ನು ಶ್ರೀಮಂತಗೊಳಿಸಿದ್ದಾರೆ.

ಇಲ್ಲಿ ಕಾಣಿಸಿದ ಹಲವು ಹಾಡುಗಳನ್ನು ನನ್ನ ತಾಯಿ ಕೆಲಸಗಳ ಮಧ್ಯೆ ಆಗಾಗ ಹಾಡಿತ್ತಿದ್ದು ಅವುಗಳನ್ನು ನನ್ನ ತಂಗಿಯರಾದ(ದಿ)ಜಾಹ್ನವಿ, ಜಾನಕಿ ಮತ್ತು ಯಶೋದೆಯರು ಸಂಗ್ರಹಿಸಿ ನನ್ನ ಕೆಲಸವನ್ನು ಸುಲಭ ಮಾಡಿಕೊಟ್ಟಿರುತ್ತಾರೆ. ಅಲ್ಲದೆ ಈ ಲೇಖನ ಬರೆಯುವಲ್ಲಿ ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳರ 'ಮದ್ದುಂಟೇ ಜನನ ಮರಣಕ್ಕೆ' ಎಂಬ ನಮ್ಮೂರಿನ ಜನಪದ ತುಂಬಿದ ಗ್ರಂಥವನ್ನು ಸಾಕಷ್ಟು ಬಳಸಿಕೊಂಡಿದ್ದೇನೆ. ಅವರೆಲ್ಲರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಬಲು ಮುಖ್ಯವಾಗಿ ಈ ಹಾಡುಗಳನ್ನು ಭತ್ತ ಕುಟ್ಟುವಾಗಲೋ, ಧಾನ್ಯ ಬೀಸುವಾಗಲೋ ಹಾಡಿದ ನಮ್ಮೂರ ಜನಪದ ಕಲಾವಿದರು–ಮಾಚಿ, ಬಚ್ಚಿ, ಮಿಣ್ಣು ಲಚ್ಚಿ, ಸುಕ್ರಿ ಮುಂತಾದವರು (ಈ ಹೆಸರುಗಳು ತೀರ ಪ್ರಾದೇಶಿಕವಾದವುಗಳು) – ಹಾಡಿದ ಫಲವೇ ಈ ಲೇಖನದ ಜೀವಾಳ. ಅವರಿಗೆಲ್ಲ ಧನ್ಯವಾದಗಳನ್ನು ಎಷ್ಟು ಸಲ್ಲಿಸಿದರೂ ಸಾಲದು.

ಆದರೆ, ಈಗ ಅವರೆಲ್ಲ ಕಣ್ಮರೆಯಾಗಿದ್ದಾರೆ. ನಮ್ಮೂರಲ್ಲಿ ಈಗ ಇಂಥ ಹಾಡುಗಳನ್ನು ಹಾಡುವವರಿಲ್ಲ. ಸಿನೆಮ, ಟಿವಿಗಳ ಧಾಳಿಯಿಂದಾಗಿ ಅಂಥ ಕಲಾವಿದರೇ ಕಾಣೆಯಾಗಿದ್ದಾರೆ. ಅಲ್ಲದೆ ಇಂದಿನ ಮೆಶಿನ್ ಯುಗದ ಫಲವಾಗಿ ಭತ್ತ ಕುಟ್ಟುವ, ಬೇಳೆ ಬೀಸುವ ಸಂಪ್ರದಾಯವೇ ನಿಂತು ಹೋಗಿದೆ. 'ಹೂಕೋಲು' ಹುಯ್ಯುವ ಹೆಂಗಳೆಯರನ್ನು ಹುಡುಕಿದರೂ ಸಿಗಲೊಲ್ಲರು. ಮೇಲೆ ಕಾಣಿಸಿದ 'ಗೊಬ್ಬರ ಗುಂಡಿಯಲ್ಲಿ.......' ಹಾಡು ಒಂದು ಕತೆ ಹೇಳುವ ಹಾಡುಗುಚ್ಛದ ಒಂದು ತುಣುಕು ಅಷ್ಟೆ! ಪೂರ್ತಿ ಹಾಡನ್ನು ಸಂಗ್ರಹಿಸುವ ನನ್ನ ಎಲ್ಲ ಪ್ರಯತ್ನ ಅಂಥ ಹಾಡುಗಾರರು ಹುಡುಕಿದರೂ ಸಿಗದೆ ವಿಫಲವಾಗಿದೆ. 'ಸುಧಾರೀಕರಣ'ದ ಫಲವಾಗಿ ಜನಪದದ ಕೊಲೆಯಾಗುತ್ತಿದೆಯೇ ಎಂಬ ಅನುಮಾನ ನನ್ನನ್ನೀಗ ಕಾಡುತ್ತಿದೆ. ಅದು ನಿಜವಾದಲ್ಲಿ ಇದೊಂದು ವಿಷಾಧದ ಸಂಗತಿ!

ಇಲ್ಲಿ ಕಾಣಿಸಿದ ಹಾಡುಗಳು ಪ್ರಾದೇಶಿಕವಾಗಿದ್ದು, ಸಾಹಿತ್ಯದಲ್ಲಿ ಪ್ರಾದೇಶಿಕ ಭಾಷೆಯ ಮಹತ್ವವನ್ನು ಎತ್ತಿ ತೋರಿಸುತ್ತದೆ. ಪ್ರಾದೇಶಿಕ ಭಾಷೆಯ ಸೊಡಗು ಜನಪದ ಸಾಹಿತ್ಯಕ್ಕೆ ಒಂದು ವಿಶೇಷ ಮೆರುಗನ್ನು ಕೊಟ್ಟಿದೆ. ಅಂಥ ಹಾಡುಗಳನ್ನು ಶುದ್ಧ ಕನ್ನಡಕ್ಕಾಗಲೀ, ಬೇರೊಂದು ಪ್ರಾದೇಶಿಕ ಭಾಷೆಗಾಗಲೀ ತರ್ಜುಮೆ ಮಾಡಿದಲ್ಲಿ ಆ ಹಾಡಿನ ಸೊಗಸನ್ನೇ ಮರೆಮಾಡುತ್ತದೆ. ಉದಾಹರಣೆಗೆ ಮೇಲೆ ಉದ್ಧರಿಸಿದ 'ಮುದ್ಕಿ ಮದಿಯಾಯ್ಕೆಂದ್.....' ಎಂಬ ತ್ರಿಪದಿಯನ್ನು ಅಚ್ಚಗನ್ನಡಕ್ಕೆ ಈ ರೀತಿ ಬದಲಾಯಿಸಿದಲ್ಲಿ ಮೂಲ ತ್ರಿಪದಿಯಲ್ಲಿದ್ದ ಸ್ವಾರಸ್ಯ ಆ ತರ್ಜುಮೆ ಮಾಡಿದ ಹಾಡಿನಲ್ಲಿ ಮೂಡಿ ಬರುವುದಿಲ್ಲ:

ಮದುವೆಯಾಗಲು ಮುದುಕಿ ತುದಿಯ ಕಾಲಲಿ ಕುಣಿದು
ಚಾವಡಿಯಲಿ ಕುಳಿತವನೆ ಆಗಲೆಂದು ಆ ಮುದುಕಿ
ಹಿಡಿದಳೇ ಸೋಮವಾರದ ವ್ರತವನ್ನೆ

ಬೇರೆ ಪ್ರಾದೇಶಿಕ ಭಾಷೆಗೆ ತರ್ಜುಮೆ ಮಾಡಿದಲ್ಲೂ ನಮ್ಮೂರ ಕೋಟದ ಭಾಷೆಯಲ್ಲಿದ್ದ ಸೊಗಸು ಬರಲಾರದೆಂಬುದು ನನ್ನ ದೃಡ ನಂಬಿಕೆ. ಇದಕ್ಕೆ ನನ್ನ ಪೂರ್ವಗ್ರಹಿತ ಭಾವನೆ ಮತ್ತು ನನ್ನ ಅತಿಯಾದ ಭಾಷಾಭಿಮಾನವೂ ಕಾರಣವಾಗಿದ್ದಿರಬಹುದು. ಆದಾಗ್ಯೂ, ಅದು ಸತ್ಯದಿಂದ ಅತಿ ದೂರವಿದ್ದಿರಲಾರದೆಂಬ ಅನಿಸಿಕೆ ನನ್ನದು.

ಇವುಗಳನ್ನು ಓದಿದ ಓದುಗರ ತುಟಿಯ ಮೇಲೊಂದು ನಗೆಮಿಂಚು ಮೂಡಿಬಂದಲ್ಲಿ, ಲೇಖನ ಬರೆದುದು ಸಾರ್ಥಕವೆಂದೆಣಿಸುತ್ತೇನೆ.



# ಮುದಿ ಜಂಗಮನ ಮದುವೆ ಮತ್ತಿತರ ಪ್ರಸಂಗಗಳು

ವಿಮಲ ರಾಜಗೋಪಾಲ್

ಮಲೆನಾಡ ಸೆರಗಿನಲ್ಲಿರುವ ಹಳೇಬೀಡು ಪ್ರಾಂತದ ಮತಿಘಟ್ಟಕ್ಕೆ ಮದುವೆಯೊಂದಕ್ಕೆ ಹೋಗಿದ್ದಾಗ ನಾನಿನ್ನೂ ಬಹಳ ಚಿಕ್ಕವಳು. ಆ ಮದುವೆ ಮನೆಯಲ್ಲಿ ನಡೆದ ಎಲ್ಲಾ ಕಲಾಪಗಳೂ ಬೆಂಗಳೂರಿನಲ್ಲಿ ಬೆಳೆದ ನನ್ನ ಕಣ್ಣಿಗೆ ವಿನೂತನವಾಗಿ ಸೋಜಿಗಕರವಾಗಿ ಸ್ವಾರಸ್ಯಕರವಾಗಿ ಕಂಡಿದ್ದವು.

ಬೆಂಗಳೂರಿನಿಂದ ರೈಲಲ್ಲಿ ಹೊರಟು ಅರಸೀಕೆರೆಯಲ್ಲಿ ಅರ್ಧರಾತ್ರಿ ಕಳೆದು, ಹಾಸನದ ಬಂಧು-ಮಿತ್ರರ ಭಾರಿ ಸಮೂಹದೊಡನೆ ಬಸ್ಸಿನಲ್ಲಿ ಬೇಲೂರು ತಲುಪಿ, ಅಲ್ಲಿನ ಬಳಗವನ್ನೊಳಗೊಂಡು ಅಜ್ಜಯ್ಯ ಕಳಿಸಿದ್ದ ಎತ್ತಿನ ಗಾಡಿಯಲ್ಲಿ 'ಮಲ್ಲಯ್ಯ ಕಾಣೆ ಮನೆ ಸ್ವಾಮಿ' ಎಂದು ನಮ್ಮ ಹೆಂಗೆಳೆಯರು ಹಾಡುವ ಮತಿಘಟ್ಟ ತಲುಪಿದಾಗ ಮಲೆನಾಡ ಮಾಯಾಲೋಕ ನನ್ನೆದುರು ನಿಂತಿತ್ತು.

ಬಾಣಾವರ, ಬೆಳವಾಡಿ, ಬೇಲೂರುಗಳಿಂದ ಬಂದಿದ್ದ ಅಸಂಖ್ಯಾತ ಅತ್ತೆಯರು, ಚಿಕ್ಕಮಗಳೂರಿಂದ ಬಂದು ಚಿಲಿಪಿಲಿಗುಟ್ಟುತ್ತಿದ್ದ ಚಿಕ್ಕಚಿಕ್ಕ ಮಕ್ಕಳು ಎಲ್ಲಾ ಸೇರಿ ಮದುವೆ ಮನೆ ಸಂಭ್ರಮದಿಂದ ಗಿಜಗುಟ್ಟುತ್ತಿತ್ತು.

ಮದುವೆಯ ಮೊದಲ ದಿನ ಅಮ್ಮ, ಚಿಕ್ಕಮ್ಮ, ಅಜ್ಜಿ, ಅತ್ತೆ ಮತ್ತಿತರ ಹೆಂಗಸರೆಲ್ಲಾ ಕೂಡಿ ಹಾಡುತ್ತಾ ಊರ ಮುಂದಣ ಕೆರೆಗೆ ಗಂಗೆಪೂಜೆಗೆಂದು ಹೋದಾಗ ಗುಡ್ಡದ

ಪಕ್ಕದ ಆ ಕೆರೆಯ ಬಾಗು, ಅದರಲ್ಲಿ ಮುಳುಗುತ್ತಾ, ತೇಲುತ್ತಾ ಆಡುತ್ತಿದ್ದ 'ಗುಂಡು ಮುಳುಗನ ಹಕ್ಕಿಗಳು–ಇವೆಲ್ಲ ಮನಸ್ಸಿಗೆ ಮುದವನ್ನು ತಂದುವು.

ಅಂದು ಆ ಕೆರೆಯ ದಂಡೆಯಲ್ಲಿ ಕೇಳಿಬಂದ ಹಾಡುಗಳು, ವಾರವಿಡೀ ಮದುವೆಯುದ್ದಕ್ಕೂ ಕೇಳಿಬಂದ ಹಳ್ಳಿಯ ಹಾಡುಗಳ ಹಾಸ್ಯವೈಖರಿ ಎಂದೆಂದೂ ಮರೆಯುವಂಥದಲ್ಲ, ತಿಳಿಹಾಸ್ಯದ ಮನೋಹರ ಉದಾಹರಣೆಗಳನ್ನು ಈ ಮದುವೆ ಹಾಡುಗಳಲ್ಲಿ ಕಾಣಬಹುದು.

ಹಳ್ಳಿಯ ಅಜ್ಞಾತ ಕವಿಗಳ ಕವಯಿತ್ರಿಯರ ಹೃದಯದಿಂದ ಹೊರಹೊಮ್ಮಿದ ಹಳ್ಳಿಯ ಹಾಡುಗಳಲ್ಲಿ, ಅವರ ದಿನ ನಿತ್ಯದ ವೈಯುಕ್ತಿಕ ಅನುಭವಗಳು, ಅವರ ಜೀವನದ ವಿಶೇಷ ಸಂಗತಿಗಳೂ ವಿಶ್ವವ್ಯಾಪಕತೆ ಪಡೆಯುತ್ತವೆ. ತಿಳಿನಗೆ ಚೆಲ್ಲುವ, ತಿಳಿಹಾಸ್ಯದಿಂದ ಬೆಳಗುವ ಈ ಹಾಡುಗಳಲ್ಲಿ ಕೇಳಿಬರುವ ಹಾಸ್ಯದ ನುಡಿಗಳು ಕೇಳುವವರನ್ನು ಗಹಗಹಿಸಿ ನಗುವಂತೆ ಮಾಡದಿರಬಹುದು. ಆದರೆ ಅವುಗಳಲ್ಲಿ ಕೇಳಿಬರುವ ಚುರುಕು ಸಂಭಾಷಣೆಗಳು ಮಾತಿನ ಸೂಕ್ಷ್ಮಾರ್ಥಗಳು ಕೇಳುವವರ ಮುಖದಲ್ಲಿ ಅರ್ಥಪುರ್ಣ ಮಂದಹಾಸ ಮಿಂಚಿಹೋಗುವಂತೆ ಮಾಡುವ ಶಕ್ತಿಯುಳ್ಳವು.

*

ಅಂದಲ (ಪಲ್ಲಕ್ಕಿ) ಏರಿ ಅಕ್ಕ ತಮ್ಮನ ಮನೆಗೆ ವೈಭವದಿಂದ ಬರುತ್ತಾಳೆ. ಅವಳು ಬರುವುದು ತಮ್ಮಯ್ಯನಿಗೆ ಗೊತ್ತಿಲ್ಲ. ಅಕ್ಕನನ್ನು ನಡುಮನೆಯಲ್ಲೇ ನಿಲ್ಲ ಹೇಳಿ ತಾನು ಒಳಗಿರುವ ತನ್ನ ಹೆಂಡತಿಯನ್ನು ಅಂಜುತ್ತಾ ಅಳುಕುತ್ತಾ 'ನಿನ್ನ ಅತ್ತಿಗೆಯನ್ನು ಒಳಗೆ ಕರಿ' ಎಂದು ಬೇಡಿಕೊಳ್ಳುತ್ತಾನೆ. ಕಿಂಚಿತ್ತಾದರೂ ದಾಕ್ಷಿಣ್ಯ ತೋರದ ಆ ಸೊಕ್ಕಿನ ಮಡದಿಯ ಮುಂದೆ ಅಂಗಲಾಚಲೂ ಈ ತಮ್ಮನಿಗೆ ಸಾಕಷ್ಟು ಧೈರ್ಯವಿಲ್ಲ.

ಏನನ್ನ ಚಿನ್ನವೇ, ಏನನ್ನ ರನ್ನವೇ
ಏನನ್ನ ಕೊರಳ ಪದಕವೇ ಪಟ್ಟದ ರಾಣಿ

–ಎಂದು ನಾನಾ ವಿಧವಾಗಿ ಅವಳನ್ನು ಓಲೈಸಿ 'ನಿನ್ನ ಅತ್ತಿಗೆಯ ಒಳಗೆ ಕರಿ ಹೋಗೆ' ಎಂದು ಮತ್ತೆ ಬೇಡಿಕೊಳ್ಳುತ್ತಾನೆ. 'ನನ್ನಕ್ಕ ಬಂದಿದ್ದಾಳೆ' ಎಂದು ಹೇಳಿಕೊಳ್ಳುವಷ್ಟು ಧೈರ್ಯ ಕೂಡ ಇಲ್ಲ ಈ ಬಡ ಗಂಡಸಿಗೆ. ಆ ಪಟ್ಟದ ರಾಣಿ ಮನೆಯೊಡತಿ:

(ನಿಮ್ಮಕ್ಕ) ಹಿಂದಿನ ಕಾಲದಾಗೆ ಅಂದಿದ್ದು ಆಡಿದ್ದು
ಭಂಗ ಪಡಿಸಿದ್ದು ಬೈದಿದ್ದು

ಇತ್ಯಾದಿ ಯಾವುದೋ ಬಹಳ ಹಿಂದಿನ ಕಹಿ ಪ್ರಸಂಗವೊಂದರ ನೆಪ ಒಡ್ಡಿ

ಹಂಗೇನು ಆಚೆ ಇರಹೇಳಿ

ಎನ್ನುತ್ತಾಳೆ. ತಮ್ಮನಿಗೀಗ ಉಭಸಂಕಟ.

ಪಾಪಿ ತಮ್ಮನ ಮನೆಗೆ ಯಾಕ್ ಬಂದ್ಯೇ ಅಕ್ಕಯ್ಯ
ತಾಟಗಿತ್ಯವಳೆ ತೌರಾಗೆ

ಎಂದು ಹೆಂಡತಿಯನ್ನು ದೂರಿ,

(ನೀ) ಕೋಟೆಯ ನೋಡಿ ತಿರುಗಮ್ಮ

ಅಂದರೆ, ಈ ಊರ ಕೋಟೆ ನೋಡಿಕೊಂಡು ನಿನ್ನೂರಿಗೆ ನೀನು ಹಿಂತಿರುಗು, ಎಂಬ ಅರ್ಥವಿಲ್ಲದ ಅಮೂಲ್ಯ ಸಲಹೆಯಿತ್ತು ಜಾರಿಕೊಳ್ಳಲು ಪ್ರಯತ್ನಿಸುತ್ತಾನೆ.

ಸ್ವಾಭಿಮಾನಿ ಅಕ್ಕ ತನಗಾದ ನಿರಾಶೆಯನ್ನು ತನ್ನಲ್ಲೇ ಇಟ್ಟುಕೊಂಡು ಬೆನ್ನೆಲುಬಿಲ್ಲದ ತಮ್ಮನಿಗೆ ಹೀಗೆ ಚುರುಕು ಮುಟ್ಟಿಸುತ್ತಾಳೆ:

ಕೋಟೆಯ ನೋಡಿದೆ ಕೊತ್ತಳವಾ ನೋಡಿದೆ
ನೋಡಿದೆ ತಮ್ಮನೆದೆಭುಜವ, ತಮ್ಮಯ್ಯ
ಮಡದಿಗಂಜೋನೆ ಸುಖಿ ಬಾಳೋ

ಅತಿ ಸುಂದರ ಜಾನಪದ ರಾಗ ಶೈಲಿಯಲ್ಲಿರುವ ಬಿಕ್ಕಟ್ಟಿನ ತಾಳದ ನಡೆಯಿರುವ (ಇದೊಂದು ಕೋಲಾಟದ ಹಾಡು) ಈ ತ್ರಿಪದಿಯಲ್ಲಿ ಕೇಳಿಬರುವ ಅಕ್ಕನ ವ್ಯಂಗ್ಯೋಕ್ತಿಗಳು ಕೇಳುವವರ ಮುಖದಲ್ಲಿ ಮಂದಹಾಸ ಮೂಡಿಸುತ್ತವೆ.

ನೀರಿಗೆ ಹೊರಟ ಊರಗೌಡನ ಮಗಳಲ್ಲಿ ಮೋಹಗೊಂಡ ಹುಡುಗ ಅವಳು ಬಾವಿಯ ನೀರಿಗೆ ಬರುವುದನ್ನೇ ಕಾಯುತ್ತ ಕಟ್ಟೆಕಲ್ಲಾಗಿ (ತೋಟದಲ್ಲಿರುವ ಚೌಕದ ಭಾವಿಯ ಸುತ್ತ ಇರುವ ಸೋಪಾನದ ಕಲ್ಲು) ಬಂದು ಅಡಗಿ ಕೂತಿರುತ್ತಾನೆ. ಎಡಬಿಡದೆ ತನ್ನನ್ನು ಹಿಂಬಾಲಿಸುವ ಈ ಹುಡುಗನ ಒಲವಿನಾಕ್ರಮಣದಿಂದ ಪದೇಪದೇ ತಪ್ಪಿಸಿಕೊಂಡು, ಅದರೆ ಅದರ ಜೊತೆಯಲ್ಲೇ ಪರಿಪರಿಯಾಗಿ ಅವನನ್ನು ಆಕರ್ಷಿಸುತ್ತಾ, ಸತಾಯಿಸುತ್ತಾ, ಕಾಡುವ-ಕೆಣಕುವ ಈ ಹಳ್ಳಿಯ ಮುಗ್ಧೆಯ (?) ಚಬುಕು, ಚುರುಕು 'ಕುಂಜರದ ಬೊಂಬೆ ಕೇಳೆ' ಹಾಡಿನಲ್ಲಿ ವರ್ಣರಂಜಿತವಾಗಿ ಚಿತ್ರಿತವಾಗಿದೆ.

ಈ ಪ್ರಣಯ ಪ್ರಸಂಗದ ವಿನೋದ ತುಂಬಿದ ಕಾರ್ಯಾಚರಣೆಯನ್ನು ನೋಡಿ:

ಕುಂಜರದ ಬೊಂಬೆ ಕೇಳೆ ಎಲ್ಲರ ಜಾಣೆ
ಕುಶಲದ ಬೊಂಬೆ ಕೇಳೆ

ಈ ವೂರ್ ಗೌಡನ್ ಮಗಳು ನೀರಿಗೆ ಹೋಗುವಾಗ
ಕಟ್ಟೇ ಕಲ್ಲಾಗ್ಬಂದಡಗಿದ್ನನ್ ಹುಡುಗ-ಕುಂಜರದ
...
ಅಡ್ಡೇರಿನಾಗ್ ಬಂದ್ ತಡೆದೀರೋ ಹೊತ್ತಿಗೆ
ಬಾಳೇಮೀನಾಗಿ ಮಿಂಚಿದ್ದಳ್ ಹುಡುಗಿ

ಬಾಳೇ ಮೀನಾಗಿ ಮಿಂಚಿರೋ ಹೊತ್ತಿಗೆ
ಚಿನ್ನದ್ ಗಾಳ ಹಾಕಿ ಹಿಡಿದಿದ್ದನ್ ಹುಡುಗ

ಹುಡುಗ ಹೀಗೆ ಅವಳನ್ನು ಹಿಡಿಯಲು ಯತ್ನಿಸುವುದು, ಅವಳು ತಪ್ಪಿಸಿಕೊಳ್ಳುವುದು ಸಾಗುತ್ತದೆ. ಕಡೆಗೆ ಹುಡುಗಿ ಹೆಬ್ಬುಲಿಯಾಗಿ ನಿಂತಾಗ

ಹೆಬ್ಬುಲಿನಾಗಿ ನಿಂತಿರೋ ಹೊತ್ತಿಗೆ
ಬೆಳ್ಳೀಕಟ್ಟಿನ ಕೋವಿ ಹಿಡಿದಿದ್ದನ್ ಹುಡುಗ

ಬೆಳ್ಳಿಕಟ್ಟಿನ ಕೋವಿ ಹಿಡಿದಿರೋ ಹೊತ್ತಿಗೆ
ಮುತ್ತಿನ ಸೆರಗೊಡ್ಡಿ ಬೇಡಿದ್ದಳ್ ಹುಡುಗಿ

*

ದಾಂಪತ್ಯದೊಲವಿನ ಮೊದಲ ಹಂತದ ತೀವ್ರತೆಯನ್ನು ಅನುಭವಿಸಿ ಸುಖಿಸಲು ಕಾತರಿಸುತ್ತಿದ್ದ ತುಂಬು ಹರೆಯದ ಹೆಣ್ಣು ಅವಳಾಸೆ ಕೈಗೂಡುವ ಮೊದಲೇ ಒಂದರ ಮೇಲೊಂದು ಮಕ್ಕಳನ್ನು ಹಡೆದು

ಹತ್ತಿ ಬಿತ್ತಿ ಬತ್ತಿ ಕಾಣೆ
ಜೋಳ ಬಿತ್ತಿ ಬಾನ ಕಾಣೆ
ಮನೆ ತುಂಬಾ ಮಕ್ಕಳ ಹಡೆದು
ಗಂಡನ ಸುಖಾ ಕಾಣೆ

ಎಂದು ತನ್ನ ನಿರಾಸೆಯ ಬಗ್ಗೆ ಹೇಳಿಕೊಳ್ಳುತ್ತಾಳೆ. ಅವಳ ಬಾಯಿಂದ ಬರುವ ಈ ನೇರ ಮಾತುಗಳಲ್ಲಿ ಪ್ರಕಟವಾಗುವುದು ಅವಳ ವೈಯುಕ್ತಿಕ ಜೀವನದ ವಿರೋದಾಭಾಸ. ಈ ಕಟು ಸತ್ಯವನ್ನು ವ್ಯಕ್ತಪಡಿಸಲು ಅವಳು ಬಳಸುವ ಮಾತುಗಳಲ್ಲಿ ಕೇಳಿಬರುವುದು ಅವಳ ಕಟಕಿ ಹಾಸ್ಯಪ್ರಜ್ಞೆ. ತನ್ನ ಸರಸರಹಿತ ದಾಂಪತ್ಯದ ನಿರಾಸೆ ಮನಸ್ಸನ್ನು

ಕವಿದಿದ್ದರೂ, ತನ್ನ ಕಟಕಿ ತುಂಬಿದ ಈ ಬಾಳಲ್ಲೂ ಅಷ್ಟೋ ಇಷ್ಟೋ ಸಿಹಿ ಕಾಣುವ ಆಸೆ ಈ ಹೆಣ್ಣಿನದು.

ಕೋಲುಕೋಲಿನ ವಲ್ಲಿವನ
ಸಂಗ ಲೀಲಾ ಲೀಲಾ

ಎಂದು ಹಾಡು ಮುಂದುವರೆಸುತ್ತಾ ಈ ಚೆಲುವೆ ಹೆಮ್ಮೆಯಿಂದ ತನ್ನ ಆತ್ಮಪ್ರವರ ಹೇಳಿಕೊಳ್ಳುತ್ತಾಳೆ:

ಮಾವನ ಹೆಸರು ಮಂಚದ್ಕಾಲ
ಅತ್ತೇ ಹೆಸರು ಚಾಪೆಕಟಕ
ಗಂಡನ ಹೆಸರು ಟಂಗೇಟುಂಗೆ
ನನ್ನ ಹೆಸರು ಮುತ್ತಿನ ಚೆಂಡು...

ಸರಸವಿಲ್ಲದ ಈ ಒರಟು ಜನಗಳ ಮಧ್ಯೆ ಮುತ್ತಿನ ಚೆಂಡಿನಂಥ ತಾನು ಹೇಗೆ ಸಿಕ್ಕಿಬಿದ್ದೆ ಎಂದು ಪರಿತಪಿಸುವ ಅವಳ ಮಾತಿನಲ್ಲಿ ವಿಷಾದ ತುಂಬಿದ ವ್ಯಂಗ್ಯವಿದೆ.

*

ಶಿವ-ಪಾರ್ವತಿಯರ ಅಸದೃಶ ಪ್ರೇಮದ ಕಥೆಯನ್ನು ನಿರೂಪಿಸುವ ಬಗೆಬಗೆಯ ಹಾಡುಗಳನ್ನು ಹಳ್ಳಿಗರು ಹಾಡುತ್ತಾರೆ. ನಂಜುಂಡ-ಚಾಮುಂಡಿಯರ ಪ್ರಣಯ ಪ್ರಸಂಗವನ್ನು ಸ್ವಾರಸ್ಯಕರವಾಗಿ ವಿನೋದಪೂರ್ಣವಾಗಿ ಚಿತ್ರಿಸುವ ಹಾಡುಗಳನ್ನು ನಮ್ಮ ಹಳ್ಳಿಗರು ರಚಿಸಿ ಹಾಡಿದ್ದಾರೆ.

'ಹುಟ್ಟಿದಳೆ ಗೌರಮ್ಮ ಭೂಲೋಕದಲ್ಲಿ' ಎಂದು ಮೊದಲಾಗುವ ಇಂಥ ಒಂದು ಹಾಡು ಗೌರಿಯ ಮದುವೆಯ ಕಥೆಯನ್ನು ಬಹಳ ವಿನೋದಪೂರ್ಣವಾಗಿ ಚಿತ್ರಿಸುತ್ತದೆ:

ಅಷ್ಟಾಗಿ ಇಷ್ಟಾಗಿ ತಾ ದೊಡ್ಡೋಳಾಗಿ
ಹನ್ನೆರಡು ವರ್ಷವೆ ತುಂಬಿತು ಗೌರಿ
ಗೌರೀ ತಾಯಿತಂದೆ ಏನೆಂದರಾಗ
ಗೌರಮ್ಮ ಹುಟ್ಟಿದಳ್ಯಾರಿಗೆ ಕೊಡಲಿ?

ಲೋಕೋತ್ತರಳಾದ ತಮ್ಮ ಈ ಮುದ್ದು ಮಗಳ ಮದುವೆಯ ಚಿಂತೆ ನಡಸುತ್ತಿದ್ದಾರೆ ಅವಳ ತಾಯಿತಂದೆ-ಹಳ್ಳಿಯ ಸಾಮಾನ್ಯ ರೈತಕುಟುಂಬದ ಸಂಸಾರಸ್ಥರಂತೆ! ಇವರು ಸಜ್ಜನರು. ಗೌರಿಯ ಇಷ್ಟದಂತೆ, ಅವಳು ಒಪ್ಪಿದ ವರನಿಗೇ ಅವಳನ್ನು ಮದುವೆ ಮಾಡಿಕೊಡಲು ಉದ್ಯುಕ್ತರಾಗಿದ್ದಾರೆ.

ಅನುರೂಪ ವರನ ಆಯ್ಕೆಯ ಜವಾಬ್ದಾರಿಯನ್ನು ಅತಿಸ್ವತಂತ್ರ ಮನೋಭಾವದ ಮಗಳಿಗೆ ಬಿಟ್ಟದ್ದೇ ತಾಪತ್ರಯಕ್ಕಿಟ್ಟುಕೊಂಡಿತು ಈ ಬಡಪಾಯಿ ತಾಯ್ತಂದೆಯರಿಗೆ.

'ಬ್ರಾಂಬರಿಗೆ ಕೊಡಲೇನೇ ಮಗಳೆ ಸಿರಿಗೌರಿ?' ಎಂದವರು ಕೇಳಿದಾಗ ಗೌರಿ ಮುಲಾಜಿಲ್ಲದೆ ಹೇಳುತ್ತಾಳೆ:

ಬ್ರಾಂಬರ ಸಾವಾಸ...
ಬ್ರಾಂಬರ ವೇದವು ಆ ಬ್ರಹ್ಮ ವೇದ
ಅಂಥ ಬ್ರಾಂಬರ ವೇದ ನಾ ಓದಲಾರೆ
ನಿತ್ಯ ತಣ್ಣೀರಲ್ಲಿ ನಾ ಬೀಳಲಾರೆ
ದಿನಕೊಂದು ಮಡಿಸೀರೆ ನಾ ಉಡಲಾರೆ
ಹೊತ್ತಿಗೆ ಒಪ್ಪತ್ತು ನಾ ಉಣ್ಣಲಾರೆ
ಬ್ರಂಬರ ಸಾವಾಸ ಬೇಕಿಲ್ಲ ತಂದೆ...

'ಶಿವ ಭಕ್ತ್ರಿಗ್ ಕೊಡಲೇನೆ ಶ್ರೀ ಮುದ್ದುಗೌರಿ?' ಎಂದು ಕೇಳಿದ ತಂದೆತಾಯಿಗಳಿಗೆ ಅವಳಿಂದ ಸಿಗುವ ಉತ್ತರ ಇದು:

ಶಿವಭಕ್ತ ಶಿವಪೂಜೆ ನಾ ಮಾಡಲಾರೆ
ಜಂಗಮಗೆ ಭಿಕ್ಷವ ನಾ ನೀಡಲಾರೆ
ಜಂಗಮರ ಕಾಲಿಗೆ ನಾ ಬೀಳಲಾರೆ
ಶಿವಭಕ್ತ್ರ ಸಾವಾಸ ಬೇಡವೋ ತಂದೆ...

'ಒಕ್ಕಲಿಗರಿಗ್ ಕೊಡಲೇನೆ ಅಕ್ಕಯ್ಯ ನಿನ್ನ?' ಎಂದು ಕೇಳಿದಾಗ,

ಒಕ್ಕಲಿಗರ್ ಹೊಲಗದ್ದೆ ನಾ ಗೆಯ್ಯಲಾರೆ
ಒಕ್ಕಲಿಗರ ಕಳೆಶತ್ತೆ ನಾ ಕೀಳಲಾರೆ
ಒಕ್ಕಲರ ಮೂರು ಮುದ್ದೆ ನಾ ತ್ನಿನ್ನಲಾರೆ
ದಿನಕೆ ಮೂರು ಸಾರಿ ನಾ ಉಣ್ಣಲಾರೆ
ಒಕ್ಕಲರ್ ಸಾವಾಸ ಬೇಡವೋ ತಂದೆ...

ಎಂದು ಹೇಳಿ ಒಕ್ಕಲಿಗರ ಸಂಬಂಧವನ್ನು ನಿರಾಕರಿಸುತ್ತಾಳೆ.

ಬ್ಯಾಡರ ಬಿಲ್ಲಂಬು ನಾನ್ ಹಿಡಿಯಲಾರೆ

ಬ್ಯಾಡರ ಕಾಯ್ ಸೊಪ್ಪು ನಾ ತಿನ್ನಲಾರೆ
ಬ್ಯಾಡರ ಸಾವಾಸ ಬೇಕಿಲ್ಲ ತಂದೆ

ಎನ್ನುತ್ತಾಳೆ.

'ಕುರುಬರಿಗೆ ಕೊಡಲೇನೆ ಗೌರಮ್ಮ ನಿನ್ನ?' ಎಂದು ಕೇಳಿದ್ದಕ್ಕೆ:
ಕುರುಬರ ಕುರಿಬಣ್ಣ ನಾ ಉಡಲಾರೆ
ಕಂಬ್ಳಿಗೆ ಸರಿಗಂಜಿ ನಾ ಕಾಸಲಾರೆ

ಎಂದುಬಿಡುತ್ತಾಳೆ.

'ಕೋಮಟಿಗರಿಗ್ ಕೊಡಲೇನೆ ಕೋಟಿ ಮಾಗೌರಿ?' ಎಂಬ ಪ್ರಶ್ನೆಗೆ ಅವಳ ಉತ್ತರ:

ಕೋಮಟಿಗರ ಯಾಪಾರ ಜೂಜಿನ್ಯಾಪಾರ
ತರಗೆಲೆ ಗೋಟಡಿಕೆ ನಾ ಮಾರಲಾರೆ
ಕಾಸಿಕ್ಕಾಸಿಗೆ ತಕ್ಡಿ ನಾ ತೂಗಲಾರೆ...

ಕೋಮ್ಟಿಗರ ಸಾವಾಸ ಬ್ಯಾಡ ನನತಂದೆ

ಹೀಗೆ ಮುಂದುವರೆದು, ಗೊಲ್ಲರ ಕುರಿಹಿಂಡನ್ನು ಕಾಯಲಾರೆ, ಅವರ ಒಣರೊಟ್ಟಿ ತಿನ್ನಲಾರೆ, ಎನ್ನುತ್ತಾ ಗೊಲ್ಲರ ಸಾವಾಸ ಬೇಡ ಎನ್ನುತ್ತಾಳೆ.

ಹೀಗೆ ಹದಿನೇಳು ಹತ್ತು ಜಾತಿ ಹೆಸರು ಹೇಳಿ,
'ಕುರಿಯಮ್ಮ ಎಲೆ ಗೌರಿ ಯಾರ್ನ ಕುರುತೀಯೋ'

ಎಂದಾಗ ಗೌರಿ ಹಿಗ್ಗುತ್ತಾ ಕೇಳಿಕೊಂಡದ್ದು:

ಸಿದ್ಧ ಪಟ್ಟಣತ್ತಾವ ಶಿವಗಂಗೆ ಮೊದಲು
ಶಿವಗಂಗೆ ಮೊದಲಲ್ಲಿ ಸಂನ್ಯಾಸಿ ಮಠವು
ಸಂನ್ಯಾಸಿ ಮಠದಲ್ಲಿ ಜಂಗಮಿದ್ದಾನೆ
ಜಂಗಮಗೆ ಕೊಡುಸಯ್ಯ ಜಾಣ ನನ ತಂದೆ

ಆದರೆ ಇದನ್ನು ಕೇಳಿ ಆ ತಾಯ್ತಂದೆಯರಿಗೆ ದೊಡ್ಡ ಆಘಾತವೇ ಆಗುತ್ತದೆ. ಊಟಕ್ಕೆ ಮಣ್ಣುಪಾತ್ರೆ, ಏರಲು ಮುದಿ ಎತ್ತು, 'ಧರಿಸೋಕೆ ಗಂಧವಿಲ್ಲ ಕಾಡು ಈಬೂತಿ'–ಇಂಥ ದಟ್ಟ ದರಿದ್ರ ಜಂಗಮನನ್ನು ಮಗಳು ಮೆಚ್ಚಿದಳೆಂದು ತಂದೆ ತಾಯಿಗಳಿಗೆ ಪೆಚ್ಚಾಗಿ, ಕೋಪ ಬಂದು ಗೌರಿಯನ್ನವರು 'ಹೋಗೆಲೆ ಎಲೆ ಗೌರಿ

ಎಲ್ಲಾದರ್ಹೋಗೆ' ಎಂದು ಕಣ್ಣಿಗೆ ಬಟ್ಟೆ ಕಟ್ಟಿ ಕಾಡಿಗೆ ಬಿಡುತ್ತಾರೆ. ಆಗ ಗೌರಿ ಶಿವ ಶಿವ ಎಂದು ಘೋರ ತಪಸ್ಸಿಗೆ ತೊಡಗುತ್ತಾಳೆ. ಅದು ಎಂಥ ತಪಸ್ಸು?

ಶಿವಗಂಗೆ ಮಠದಲ್ಲಿ ರುದ್ರಾಕ್ಷಿ ವನವು
ರುದ್ರಾಕ್ಷಿ ವನದಲ್ಲಿ ಭದ್ರಾಕ್ಷಿ ಮರವು
ಭದ್ರಾಕ್ಷಿ ಮರದಲ್ಲಿ ಸೂಜಿಯಕಲ್ಲು
ಸೂಜಿ ಕಲ್ಲಿನಮೇಲೆ ಸೂಜಿಗಳ ನಿಲಿಸಿ
ಏಳು ಸೂಜಿಯ ಮೇಲೆ ದಬ್ಬಳವ ನಿಲಿಸಿ
ದಬ್ಬಳದ ಕೊನೆಗೊಂದು ನಿಂಬ್‌ಹ್ಯಣ್ಣ ಮಡಗಿ
ನಿಂಬೆ ಹಣ್ಣಿನ ಮೇಲೆ ತಪಸಿಗೆ ಕುಳಿತು
ಶಿರಸೊಂದ ಕೆಳಗ್ಮಾಡಿ ಶ್ರೀಪಾದ ಮೇಲೆ...

ಅವಳ ತಪಸ್ಸಿಗೆ ಮೆಚ್ಚಿ ಶಿವ ಮುದಿ ಮುದಿ ಜಂಗಮನಾಗಿ ಭಿಕ್ಷಕ್ಕೆ ಬರುತ್ತಾನೆ. ಇಷ್ಟವಳು ಅವನಿಗಾಗಿ ತಲೆಕೆಳಗಾದರೆ, ಆ ಕಿಲಾಡಿಶಿವ ಬರುವುದು ಮುದು ಮುದಿ ಜಂಗಮನಾಗಿ:

ಮುದಿಮುದಿ ಜಂಗಮನು ಆದ ಸ್ವಾಮಿ
ಮುಂಗೈಲಿ ಜೋಳಿಗೆ ಹಾಕಿದ ಸ್ವಾಮಿ
ನಾಗರ್ಹಾವನು ಹಿಡಿದು ನಡುಕಟ್ಟು ಕಟ್ಟಿ
ಕ್ಯಾರೆ ಹಾವನು ಹಿಡಿದು ಜನಿವಾರ ಹಾಕಿ
ಹೆಬ್ಬೆ ಹಾವನು ಹಿಡಿದು ತಲೆಪಾಗ ಸುತ್ತಿ
ಚಿಕ್ಕ ಚಿಕ್ಕ ಹಾವೆಲ್ಲಾ ಶಿರದಲ್ಲಿ ಮಡಗಿ
ಗೌರಿದ್ದ ಬಳಿಗಾಗ ಬಂದನು ಸ್ವಾಮಿ

ಗೌರಿ ಕೊಟ್ಟ ಯಾವ ಭಿಕ್ಷವನ್ನೂ ಒಲ್ಲದ ಜಂಗಮನನ್ನು 'ಏನು ಕೊಟ್ಟರೂ ಸ್ವಾಮಿ ಒಲ್ಲೆನೆಂದೀಯ' ಎಂದು ಕೇಳಿದ ಗೌರಿಗೆ ಜಂಗಮ,

ನೀ ಕೊಡೋ ವಡವ್ಯಲ್ಲ ನನಗೇನು ಬೇಕೇ?
ಕನ್ಯಾದಾನವನು ನನಗೆ ಕೊಡಬೇಕೆ ಗೌರಿ

ಎಂದು ನಿಸೂರಾಗಿ ಕೇಳುತ್ತಾನೆ. ಆಗ ತನ್ನ ಮನದನ್ನ ಶಿವನೇ ಈತನೆಂದು ಗುರುತಿಸಿದ ಗೌರಿ:

ಪನ್ನೀರ ತಂದು ಪಾದ ತೊಳೆದು
ಈತನೇ ನನ ಗಂಡ

ಎಂದು ಕೈಮುಗಿದು ನಿಂತಾಗ ಎಲ್ಲಿದ್ದರೋ ಪಾಪ ಆ ಹಿರಿಯ ದಂಪತಿಗಳು ಓಡಿ ಬರುತ್ತಾರೆ. ಏಕೆಂದರೆ ಈ ಶಿವ 'ಬಾರೆ ಮಠಕೆ ಹೋಗಾನ' ಎಂದು ಅವಳನ್ನು ತನ್ನೊಡನೆ ಕರೆದೊಯ್ಯಲು ಸಿದ್ಧನಾಗಿ ನಿಂತಿದ್ದಾನೆ! ಮದುವೆ ಮಾಡದೆ ಮಗಳನ್ನು ಕಳಿಸಲು ಉಂಟೆ? ಬೇಗಬೇಗ ಗಡಬಡಿಸಿ,

ಆಕಾಶವೇನುಂಟು ಚಪ್ಪರನ ಹಾಕಿ
ಭೂಮಿ ಅದ್ದಗಲಕೆ ಹಸೆಗೆಲ್ಲ ಬರೆದು
ಬ್ರಾಂಬರನೆಲ್ಲ ಕರೆಸಿ...

ಗೌರಿಗೂ ಶಿವನಿಗೂ ಲಗ್ನವಮಾಡುತ್ತಾರೆ. ಗೌರಿಯು ಕೈಲಿ ಇಷ್ಟೆಲ್ಲಾ ಬೈಸಿಕೊಂಡಿದ್ದರೂ, ಆ ಬ್ರಾಂಬರು ಬಿಡಬೇಕಲ್ಲ, ಗೌರಿ ಮದುವೆಗೆ ಹೋಗೇ ಹೋದರು, ವೇದಘೋಷ ಮಾಡಿಯೇ ಮಾಡಿದರು, ಮದುವೆಯೂಟ ಗಿಟ್ಟಿಸಿಯೇ ಗಿಟ್ಟಿಸಿದರು!

*

ಇನ್ನು ಮುಂದೆ 'ಗೌರಿ ತವರಿಗೆ ಹೋಗಿಬಂದದ್ದು' ಶಿವ-ಪಾರ್ವತಿಯರ ಸರಸ ದಾಂಪತ್ಯದ ಒಂದು ಸುಂದರ ಚಿತ್ರಣ. ಮದುವೆಯಾಗಿ ಗೌರಿ ಸಂತೋಷದಿಂದ ಹರನೊಡನೆ ಸಂಸಾರ ಮಾಡುತ್ತಿದ್ದವಳು ಒಮ್ಮೆ ಅವನಿಗೆ ಹೇಳುತ್ತಾಳೆ: 'ಅರಸರೇ, ನಾಳೆ ವರಭಾದ್ರಪದ ಶುದ್ಧ ತದಿಗೆ. ನನ್ನ ತೌರಿಗೆ ಹೋಗಿ ಬರುತ್ತೇನೆ'.

ಇಲ್ಲಿಂದ ಹೋದರೆ ಅಲ್ಲಿ ನಿನಗ್ಯಾರುಂಟು
ಚಲ್ಲೆಗಂಗಳ ಚೆಲುವೆ ತಿಳಿದು ಹೇಳೆ

ಎಂದ ಶಿವನಿಗೆ 'ಎಲ್ಲಯರ್ಾತಕೆ ಸ್ವಾಮಿ ಮೂರುದಿನವಿದ್ದು' ನಿಮ್ಮ ಸೇವೆಗೆ ಹಿಂತಿರುಗಿ ಬಂದುಬಿಡುತ್ತೇನೆ ಎಂದು ಸಮಾಧಾನವಾಗಿ ಉತ್ತರ ಕೊಡುತ್ತಾಳೆ.

ಮೂರು ದಿನ  ಐದು ದಿನ ಮೀರಿದರೆ ಏಳು ದಿನ
ದಾರಿ ನೋಡುತಲಿರುವೆ ದೇವಿ ಕೇಳೆ
ಬಾರದಿದ್ದರೆ ನೀನು ಮೀರಿದೋಳು ಎನಗೆ
ನೀರೆ ನೀ ಪೋಗೆಂದ ಹರನು

ಆವನಿಗೆ ಪಾರ್ವತಿಯನ್ನು ತವರಿಗೆ ಕಳಿಸಲು ಇಷ್ಟವಿಲ್ಲ. ಇವಳನ್ನು ಕಳಿಸಿಕೊಟ್ಟರೆ ತನ್ನ ಊಟದ ಗತಿಯೇನು ಎಂಬ ಚಿಂತೆ ಅವನಿಗೆ.

ಕರಿಮುಖನ ಒಡಗೊಂಡು ಕರೆವುದಕೆ ನಾ ಬರುವೆ

ಎಂದು ಅವಳನ್ನು ಬೆದರಿಸಿ (blackmail ಮಾಡಿ!) ಹೇಳುತ್ತಾನೆ. ಶಿವನ ಮಾತು ಕೇಳಿ ನಸುನಗುತ್ತಾ ಪಾರ್ವತಿ

ತಿರಿದುಂಬರೇ ಮೂರುಲೋಕವಿಲ್ಲವೆ ಸ್ವಾಮಿ

ಎನ್ನುತ್ತಾಳೆ. (ಅಂದರೆ, ಭಿಕ್ಷೆ ಬೇಡಿ ತಿನ್ನಲು ಮೂರು ಲೋಕಗಳಿವೆಯಲ್ಲ, ಇನ್ನೇನು ಕಷ್ಟ ಎಂದು ಜ್ಞಾಪಿಸುತ್ತಾಳೆ.) 'ಮಡದಿ ಆಡಿದ ಮಾತಿಗೆ ಮೃಡ ನಸುನಕ್ಕು ಗೌರಿಯನ್ನು ಪೊಡವಿಗೆ'(ತೌರುಮನೆಗೆ) ಕಳಿಸಿಕೊಡುತ್ತಾನೆ.

ಬಡತನವ ಬಿಡಿಸಿ ಬಹಳೈಶ್ವರ್ಯ ಕೊಟ್ಟರೆ
ಸಡಗರದಿ ಓಲಾಡಿ ಬೇಗ ಬರುವೆ

ಎಂದು ಹೇಳಿ ಶಿವನಿಂದ ಬೀಳ್ಕೊಂಡು ಗೌರಿ ತೌರೂರಲ್ಲಿ ಕೊಂಚ ದಿನವಿದ್ದು ಹಿಂದಿರುಗುತ್ತಾಳೆ.

ತೌರೂರಿನಿಂದ ಹಿಂತಿರುಗಿದ ಗೌರಿ ಶಿವನ ಕಣ್ಣಿಗೆ ಹೀಗೆ ಕಂಡಳು:
ನಂಜ ಬಟ್ಟಲ ದಂಡೆ ದುಂಡು ಮಲ್ಲಿಗೆ ಹೂವು
ಚಂದಿರದ ಬೈತಲೆಗೆ ಮುತ್ತ ತುಂಬಿ
ರಂಭೆಯಂತೆ ಕುಡಿಹುಬ್ಬು ಕಂಗಳದಿ ಹೊಳೆಯುತಿರೆ
ನಿಂಬೆಯ ಹಣ್ಣಂತೆ ಮುಖದ ಕಾಂತಿ
ಗೌರಿಯನ್ನು ಕಂಡು ಸಂತೋಷಿಸಿದ ನಾಗಭೂಷಣ ತಾನು ನಗುತ
ಹೋಗಿಬಂದ್ಯಾ ನಿನ್ನ ತೌರೂರಿಗೆ
ಈಗೇನು ಕೊಟ್ಟರು ಇನ್ನೇನ ಕೊಡುವರು
ಬೇಗದಲಿ ಹೇಳು ಹೇಳೆಂದ ...

ತೌರೂರಿನಿಂದ ಸಂತೋಷದಿಂದ ಹಿಂದಿರುಗಿದ ಪಾರ್ವತಿಯನ್ನು ಕಂಡು ಶಿವನಿಗೆ ಸ್ವಲ್ಪ ಅಸೂಯೆಯಾಗಿದ್ದರೂ ಆಗಿದ್ದಿರಬಹುದು ಅಥವಾ ತಮಾಷೆಗೆ ಅವಳನ್ನು ಸ್ವಲ್ಪ ರೇಗಿಸಿ ಕೆಣಕೋಣ ಎಂದೂ ಅನ್ನಿಸಿರಬಹುದು. ಗೌರಿ ಮಹಾ ಚತುರೆ. ಅವಳೂ ಹಾಸ್ಯಪ್ರಿಯಳು.

ಗೌರಿ ಒಂದು ಮಾತಂದಳು–
ನಂ ಬಂಧುಬಳಗವೆಲ್ಲ ಸುಖದೊಳಿಹರು
ತಂದೆ ಗಿರಿರಾಯನು ಬಹಳ ಬಡವನು ಮುದುಕ

ಎಂದು ಹೇಳಿ ಅನಿರೀಕ್ಷಿತ ದೀರ್ಘ ಸುಂದರ ವರದಿಯೊಂದನ್ನು ಕೊಡುತ್ತಾಳೆ:

ಅಲ್ಪಸ್ವಲ್ಪವೆಂದು ಕೊಪ್ಪರಿಗೆ ಹಣವಿತ್ತು
ಒಪ್ಪದಲಿ ಬಳಸೆಂದು ಹೊನ್ನು ಕಳಶವನಿತ್ತು
ನಮ್ಮೋರು ಬಡವರಿನ್ನೇನೀವರು
ಆರ್ ಹೇರು ಸಣ್ಣಕ್ಕಿ ಆರ್ ಹೇರು ಅರಿಸಿನ
ಆರ್ ಹೇರಿ ಅಡಿಕೆ ಒಂದಡಿಗೆ ಬೆಲ್ಲ
ಆರು ಕೊಳಗ ಮೆಣಸು ನೂರು ಕಾಯಿತ್ತರು
ನಮ್ಮೋರು ಬಡವರಿನ್ನೇನೀವರು

ಅಲ್ಲದೆ, ಐದು ಪಟ್ಟೆ ಸೀರೆ, ಐದು ಬಣ್ಣದ ಸೀರೆ, ಐದು ಸಕಲಾತಿ, ಐದು ಶಾಲು, ಐದು ರತ್ನಗಂಬಳಿಗಳು, ಆರು ಮಂಚಗಳು, ಕಸ್ತೂರಿ, ಕುಂಕುಮ, ಹಸು, ಗಿಣಿ, ಕಾಲಾಳುಗಳು, ಇತ್ಯಾದಿ, ಇತ್ಯಾದಿ, ಸಕಲೈಶ್ವೈರ್ಯದ ಪಟ್ಟಿಮಾಡಿ ವರದಿ ಒಪ್ಪಿಸಿ, ಮಧ್ಯೆಮಧ್ಯೆ 'ನಮ್ಮೋರು ಬಡವರಿನ್ನೇನಿವರು' ಎಂದೂ ಹೇಳುತ್ತ ಶಿವನನ್ನೇ ಸುಸ್ತು ಹೊಡೆಸುತ್ತಾಳೆ. ಜಟ್ಟಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲವೆಂಬಂತೆ ಶಿವ ಹೇಗಾದರೂ ಮಾಡಿ ಅವಳನ್ನು ಸೋಲಿಸಬೇಕೆಂದು ಕಡೆಯ ಮಾತಾಗಿ ಅವಳನ್ನು ಕೇಳುತ್ತಾನೆ:

ಇಷ್ಟದ ಮಗಳೆಂದು ಇಷ್ಟನೂ ನಿನಗಿತ್ತು ಎ
ಳ್ಳಷ್ಟನಾದರು ಎನಗೆ ಕೊಡಲಿಲ್ಲವೆ?
ತಡೆಯಿಲ್ಲದೆ ಪಾರ್ವತಿ ಥಕ್ಕನೆ ಉತ್ತರಿಸುತ್ತಾಳೆ:
ಇಷ್ಟನೂ ನನಗಿತ್ತು ಎನ್ನನೇ ನಿನಗಿತ್ತು
ಸೃಷ್ಟಿಗೊಡೆಯನೆ ಕೇಳೆಂದಳಾಕೆ.

ಗೌರಿ ಹಬ್ಬದ ಸಮಯದಲ್ಲಿ ಹಿಂದೆ ಎಷ್ಟೋ ಬಾರಿ ಈ ಹಾಡನ್ನು ಕೇಳಿದ್ದುಂಟು. ಆ ಸಂದರ್ಭದಲ್ಲಿ ಪ್ರತಿ ಸಾಲಿಗೂ 'ಜಯ ಮಂಗಳಾ ನಿತ್ಯ ಶುಭ ಮಂಗಳಾ' ಎಂಬ ಪಲ್ಲವಿ ಬರುತ್ತಿದ್ದು ಈ ಹಾಡಿನಲ್ಲಿನ ಹಾಸ್ಯ ಅಷ್ಟು ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ. ಈಗ ಅದನ್ನು ಕೇಳಿದರೆ ಗೊತ್ತಾಗುತ್ತದೆ ಅದರಲ್ಲಿನ ಭರ್ಜರಿ ಹಾಸ್ಯ!

*

ಶಿವಶಕ್ತಿಯರ ದಿವ್ಯ ಸಂಗಮದ ಬಗ್ಗೆ ಜನಪದ ಸಾಹಿತ್ಯದಲ್ಲಿ ಅನೇಕಾನೇಕ ಕತೆಗಳು ಹಾಡುಗಳು ಇವೆ. ನಂಜುಂಡ ಜೋಗಿಯ ಹಾಡು ಅಂಥ ಒಂದು ಹಾಡು. ಮೇಲಿನ ಕತೆ ಕೈಲಾಸದಲ್ಲಿ ನಡೆದುದಾದರೆ ನಂಜಪ್ಪನ ಕತೆ ಇಲ್ಲೇ ನಮ್ಮ ಸುತ್ತಮುತ್ತಲಿನ ಮೈಸೂರು ನಂಜನಗೂಡುಗಳಲ್ಲೇ ನಡೆಯುತ್ತದೆ. ನಂಜಪ್ಪ, ಚಾಮುಂಡಿಯರ ಪ್ರಣಯ ಪ್ರಸಂಗ ಅದರ ಕತೆ. ಚಾಮುಂಡಿಯೂ, ಸುತ್ತಮುತ್ತಲಿನ ಹಲವಾರು ಗ್ರಾಮದೇವತೆಗಳೂ–ಸಪ್ತಮಾತೃಕೆಯರು–ಶಕ್ತಿಯ ಅಂಶಗಳೇ. (ಇವರನ್ನೆಲ್ಲ ಒಳಗೊಂಡ ಸ್ವಾರಸ್ಯವಾದ ಕತೆಗಳನ್ನು ಕಂಸಾಲೆ ಪದಗಳಲ್ಲಿ ನೋಡಬಹುದು.) ಚಾಮುಂಡಿ ದೇವಿಯ ಇನ್ನೊಂದು ರೂಪವೇ ಎಂಬುದು ಜನರ ನಂಬಿಕೆ. ಆದರೆ ಇಲ್ಲಿ ಪಾರ್ವತಿಯೂ ಚಾಮುಂಡಿಯೂ ಬೇರೆ ವ್ಯಕ್ತಿಗಳೆಂಬಂತೆ, ಆದರೆ ಇಬ್ಬರಿಗೂ ಶಿವ ಒಲಿದಿದ್ದಾನೆ ಎಂಬಂತೆ ಚಿತ್ರಿಸಿದೆ.

ಈ ನಂಜಪ್ಪ ಯಾರು?

ನಂಜಪ್ಪ ಬೆಳುದನೆ ನಂಜುಬಟ್ಟಲದ್‌ಹೂವ
ಮಲ್ಲಯ್ಯೆಬೆಳೆದಾನೆ ಮರುಗಾವ
ಮಲ್ಲಯ್ಯೆಬೆಳೆದನೆ ಮರುಗವ ಮೇಲುಕೋಟೆ
ಚೆಲುವಯ್ಯೆಬೆಳೆದಾನೆ ದವನವ– ದವನವ

ಇಲ್ಲಿ ನಂಜಪ್ಪ ನಂಜನಗೂಡಿನವನು, ಮಲ್ಲಯ್ಯ ಮತಿಘಟ್ಟದವನು, ಚೆಲುವಯ್ಯ ಮೇಲುಕೋಟೆಯವನು. ಈ ಹಾಡಿನ ಪ್ರಸಂಗದಲ್ಲಿ ಒಂದು ದಿನ ನಂಜುಂಡ ಚಾಮುಂಡಿಯ ಅರಮನೆಗೆ ಬಂದಿದ್ದಾನೆ. ಚಾಮುಂಡಿ ತನ್ನ ಹತ್ತಂಕಣದರಮನೆಯಲ್ಲಿ ಪಟ್ಟೆ ಕೊಡವ್ಹಾಸಿ, ಸುತ್ತ ದೀವಿಗೆ ರಚಿಸಿಟ್ಟು, ದಾಯಪಗಡೆ ತಂದಿಟ್ಟು ಆಡುವಾಗ

ನಂಜಯ್ಯ ಸೋತನು ಚಾಮುಂಡಿ ಗೆದ್ದಳು.

ಆಗ ಆಕೆ,

ಕೊಡಿರಿ ನಂಜಯ್ಯ ವೀಳ್ಯವ

ಎಂದು ಸವಾಲೆಸೆಯುತ್ತಾಳೆ.

ವೀಳ್ಯವ ಕೊಟ್ಟರೆ ಹೀನಾಯ ಚಾಮುಂಡಿ
ನಾನು ವೀಳ್ಯವ ಕೊಡಲಾರೆ

ಎನ್ನುತ್ತ ನಂಜಯ್ಯ ತನ್ನ ಅರಮನೆಗೆ ಹೋಗುತ್ತಾನೆ. ಆದರೆ ಚಾಮುಂಡಿ ಅವನನ್ನು

ಬಹಳ ಕಾಲ ಬಿಟ್ಟಿರಲಾರಳು. 'ಸ್ವಾಮಿ ನಮ್ಮೊರಕೆ ದಯವಾಗೋ' ಎಂದು ನಂಜುಂಡನನ್ನು ಬೇಡಿಕೊಳ್ಳುತ್ತಾಳೆ. ಅದರಂತೆ

ನಂಜಪ್ಪ ಬಂದನು ಬಾಗಿಲಾಗೆ ನಿಂದನು.

ಆಗ,

ಗಿಲಿಗಿಲಿ ಮಂಚ ಕೊಡವ್ಹಾಸಿ ಚಾಮುಂಡಿ
ಹಾಲು ಸಕ್ಕರೆ ಎಡೆಮಾಡಿ ಚಾಮುಂಡಿ
ತಟ್ಟೇಲಿಲ್ಯಾವ ಹಿಡಿದಾಳೆ (ಹಿಡಿದು) ಏನೆಂದಾಳೆ

ನಂಜಪ್ಪಗೂ ನಮಗು ಇಲವಂಗ–ಇಲವಂಗ
ನಂಜಪ್ಪ ಚಾಮುಂಡಿ ಇಲವಂಗನಾಡುವಾಗ
ದೇವೀರು (ಪಾರ್ವತಿ) ಕೇಳ್ಯಾರು ಶಕುನವ
ತಾವರೆ ಮೈನೋಳೆ ವಜ್ರಭೂಷಣದೋಳೆ
ಸಣ್ಣಕ್ಕಿಯಂಥ ಸುಳಿಪಲ್ಲ ಚಾಮುಂಡಿ
ತಿಂಗ್ಳಾರ ನಂ ಕೂಟೆ ಬರಬೇಕು

ಎಂದು ನಂಜುಂಡ ಚಾಮುಂಡಿಯನ್ನು ತನ್ನೊಡನೆ ಬರಬೇಕೆಂದು ಕರೆಯುತ್ತಾನೆ. ಅದನ್ನು ಕೇಳಿದ ಚಾಮುಂಡಿ ನಂಜುಂಡನಿಗೆ–

ನಿಮಕೂಟೆ ಬಂದರೆ ದೇವೀರೇನೆಂದಾರು
ಕಂಚಿನಗಾಲಿ ಬೆಳೆಗೆಂದು ದೇವೀರು
ಎಮ್ಮೆ ಸಗಣಿಯ ಹೊರೆ ಎಂದು ದೇವೀರು
ಬಾಗಿಲ ಕಸವ ಹೊಡಿ ಎಂದು ದೇವೀರು
ಉಟ್ಟಿದ್ದ ಸೀರೆ ಒಗ್ಸ್ಯಾಳು ನಂಜಪ್ಪ
ಜಾಣ ಜಂಗಮ ದಯವಾಗೋ ದಯವಾಗೋ

ಎಂದು ನಂಜಪ್ಪನನ್ನು ಜಾಣತನದಿಂದ ಕಳಿಸಿಕೊಡುತ್ತಾಳೆ.

*

ಹಳೆಯ ಕಾಲದ ಹಳ್ಳಿಯ ಮದುವೆಗಳಲ್ಲಿ ವಧೂವರರ ಅತಿ ಹತ್ತಿರದ ಸಂಬಂಧದ ಮನೆಮಂದಿಯಲ್ಲದೆ ಇಡೀ ಹಳ್ಳಿಯ ಬಂಧು ಬಾಂಧವರು ಸೇರಿರುತ್ತಿದ್ದರು. ದಿನಗಟ್ಟಲೆ ನಡೆಯುತ್ತಿದ್ದ ಆ ಮದುವೆಗಳಲ್ಲಿ ಹಾಸ್ಯದ, ಹರ್ಷದ ಹೊನಲು ಹಾಡಾಗಿ ಹರಿಯುತ್ತಿತ್ತು. ಮದುವೆಯ ಮೊದಲ ಹಂತದಲ್ಲಿ ಸೋಬಾನೆ ಪದಗಳ ಹರ್ಷೋಲ್ಲಾಸ ಉಕ್ಕಿಸುವ ನುಡಿಗಳು ಗೆಲುವಿನ ಕಳಕಳಿಯ ವಾತವರಣವನ್ನೇರ್ಪಡಿಸುತ್ತಿದ್ದವು.

ಎರಡೂ ಕಡೆಯ ಬೀಗರು ಒಬ್ಬರನ್ನೊಬ್ಬರು ಗೇಲಿಮಾಡಿ ಕುಚೇಷ್ಟೆಮಾಡುವ ಹಾಡುಗಳು ಮದುವೆಯ ಕಡೆಯ ಹಂತದಲ್ಲಿ ಕೇಳಿಬರುತ್ತಿದ್ದವು. ಮದುವೆ ಮನೆಯ ಪ್ರಮುಖ ಆಕರ್ಷಣೆಯ ಕಾರ್ಯಕ್ರಮ ಗಂಡು ಹೆಣ್ಣಿನ ಕಡೆಯವರು ಪಂಥ ಕಟ್ಟಿ ಹಾಡುತ್ತಿದ್ದ ಬೀಗರ ಹಾಡುಗಳು. ಇಂಥ ಒಂದು ಸೋಬಾನೆ ಪದದಲ್ಲಿ ಹೆಣ್ಣಿನ ಕಡೆಯವರು ತಮ್ಮ ಚೆಲುವೆ ಮಗಳಿಗೆ ಎಂಥ ಗಂಡ ದೊರಕಿದ ಎಂದು ಅವನನ್ನು ಗೇಲಿ ಮಾಡುತ್ತಾರೆ:

ಕುದುರೆ ಮೇಲ್ ಬರುವೋನು ಚದುರನೆಂಬುತಲಿದ್ದೆ
ಕದುರುಗಾಲಿನ ಮದುವಣ್ಣ–ಸೋಬಾನವೇ
ಕದುರುಗಾಲಿನ ಮದುವಣ್ಣ ನಮ್ಮನೇ
ಚದುರೆಗೆ ನೀನೆಲ್ಲಿ ದೊರಕಿದೋ – ಸೋಬಾನವೇ
ಒಂಟೇ ಮೇಲ್ ಬರುವೋನು ಬಂಟನೆಂಬುತಲಿದ್ದೆ
ಗಂಟುಗಾಲಿನ ಮದುವಣ್ಣ – ಸೋಬಾನವೇ
ಗಂಟುಗಾಲಿನ ಮದುವಣ್ಣ ನಮ್ಮನೇ
ಬಂಟೆಗೆ ನೀನೆಲ್ಲಿ ದೊರಕಿದೋ – ಸೋಬಾನವೇ

ವರನನ್ನು ಗೇಲಿ ಮಾಡುವ ಇನ್ನೊಂದು ಹಾಡಿನ ಪಲ್ಲವಿ ಹೀಗಿದೆ:

ಎಲ್ಲಿಂದಾರಿಸಿ ತಂದಿರಿ ಇವನ
ಜೊಲ್ಲು ಬಾಯಿ ವರನ

ಬೀಗಿತ್ತಿಯನ್ನು ಹಸೆಗೆ ಕರೆಯುವ ಹಾಡೊಂದರಲ್ಲಿ ಅವಳನ್ನು ವರ್ಣಿಸುವ ಬಗೆ ನೋಡಿ:

ಉದ್ದಿನ ಮೂಟೆಯಂದದಲಿ
ಹಿಗ್ಗಿ ಹಾಕಿದ ನಿನ್ನ ರೂಪು

ಎಡವಿ ಬಿದ್ದಳೆ ಗಿರಿಯಂದದಿ ಕಾಂತೆ
ದುರ್ಜನ ರಕ್ಷಕಿ ಸಜ್ಜನ ಶಿಕ್ಷಕಿ
ಎದ್ದುಬಾ ಹಸೆಯಾ ಜಗುಲೀಗೆ

ಇಂಥ ಹಾಡುಗಳಲ್ಲಿ ನಮ್ಮ ತಾಯಿ ಹೇಳುತ್ತಿದ್ದಂತೆ 'ತಮಾಷೆ ಹೋಗಿ ಅಮಾಸೆ ಆಗುತ್ತೆ' ಅಂದರೆ ಬೀಗರ ನಡುವೆ ಮನಸ್ತಾಪಕ್ಕೆ ಎಡೆ ಆಗುವ ಅಪಾಯವಿದೆ. ಈ ಕಾರಣಕ್ಕಾಗಿ ನಮ್ಮಲ್ಲಿ ಈಚೆಗೆ ಇದರ ಬಳಕೆ ಬಹಳ ಕಡಿಮೆಯಾಗಿದೆ.

*

ಜಾನಪದ ಕಬ್ಬಿಗರ ಕವಯಿತ್ರಿಯರ ಕವನ-ಕಥನ-ಕಲಾಕೌಶಲ ನಾನಾ ಪ್ರಕಾರಗಳಲ್ಲಿ ಹರಿದಿದೆ. ಅವರ ಕಥನ-ಕವನಗಳಲ್ಲಿ ಬರುವ ಸಂಭಾಷಣೆಗಳಲ್ಲಿ ಇಣುಕುವ ವ್ಯಂಗ್ಯೋಕ್ತಿ, ಚತುರೋಕ್ತಿಗಳು – ಅವುಗಳ ಚಮತ್ಕಾರ, ಚುಟುಕು ಝಗ್ಗೆಂದು ದೀವಟಿಗೆ ಹಚ್ಚಿದಂತೆ ಜ್ವಾಜ್ವಲ್ಯಮಾನ! ಕನ್ನಡ ಜನಪದ ಸಂಗೀತ ಸಾಹಿತ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿರುವ, ಹಲವಾರು ಪ್ರಾಂತಗಳಲ್ಲಿ ಗೀತೆಗಳನ್ನು ಸಂಗ್ರಹಿಸಿರುವ ನನ್ನ ಸೋದರಿ ಡಾ. ಎಲ್.ಜಿ. ಸುಮಿತ್ರ ಒಂದು ಸಂಗತಿ ತಿಳಿಸಿದರು. ಈಗ್ಗೆ ಕೆಲವು ವರ್ಷಗಳ ಹಿಂದೆ ಬೇಲೂರು ಪ್ರಾಂತದಲ್ಲಿ ಅವರು ಸಂಗ್ರಹಣೆ ನಡೆಸುತ್ತಿದ್ದಾಗ ಹರಿಜನಕೇರಿಯಲ್ಲಿ ಹೆಂಗಸರನ್ನೆಲ್ಲ ಸೇರಿಸಿ ಅವರಿಂದ ಹಾಡಿಸಲು ಪ್ರಯತ್ನಿಸುತ್ತಿದ್ದರು. ಮುದುಕಿಯೊಬ್ಬಳು ಇತರ ಹೆಂಗಸರನ್ನು ಹಾಡಲು ಒತ್ತಾಯ ಮಾಡುತ್ತಿದ್ದಳು. ಆದರೆ ಆಗ ತಾನೆ ಅವಳ ಮೊಮ್ಮಗಳನ್ನು ಮದುವೆಯಾಗಿದ್ದ ಮದುಮಗ ತನ್ನ ಹೊಸ ಹೆಂಡತಿಯನ್ನು ಅಲ್ಲಿಂದ ಎಬ್ಬಿಸಿ ತನ್ನೊಡನೆ ಕರೆದುಕೊಂಡುಹೋಗಲು ಆತುರಪಡಿಸಿದಾಗ ಮುದುಕಿಗೆ ಅಸಾಧ್ಯ ಕೋಪ ಬಂದು ಅವನ ಮೇಲೆ ಅಲ್ಲೇ ಈ ಆಶುಕವಿತೆ ಕಟ್ಟಿ ಹಾಡಿದಳಂತೆ:

ಹಲ್ಲ ಹಲ್ಲ ನೋಡು ಹಲ್ಲ ಚಂದಾ ನೋಡು
ಹಲ್ಲೀನ ಒಳಗೊಂದು ಮರೀ ಮಾಡಿ
ಹಲ್ಲೀನ ಒಳಗೊಂದು ಮರಿಮಾಡಿ ಸೀತವ್ನೋರೆ
ಕಳ್ಳ ಬಂದಾನೆ ಮದುವೀಗೆ

ಹೀಗೆ ಮಾತಿನ ಚುರುಕು, ಹಾಡುಕಟ್ಟುವ ಸಾಮರ್ಥ್ಯಗಳನ್ನು ಈಗಲೂ ಕಾಣಬಹುದು.

ಈ ಕವನ ರಚನೆಗಳಲ್ಲಿ ಕವಿಗಳು ಅಳವಡಿಸಿರುವ ತಿಳಿಹಾಸ್ಯದ ಮಾತುಗಳು ಸಾಂಸಾರಿಕ ಜೀವನದ ಎಲ್ಲಾ ಮಜಲುಗಳಲ್ಲೂ ಎಲ್ಲಾ ಸನ್ನಿವೇಶಗಳಿಗೂ ಪಸರಿಸಿವೆ. ಹಾಸ್ಯದ ಮುಖವಾಡವಿಟ್ಟು ಅವರು ಚಿತ್ರಿಸುವ ರೂಪಗಳು ಮಾರ್ಮಿಕವಾಗಿವೆ.

**ಕೃತಜ್ಞತೆ:**

ಈ ಲೇಖನ ಸಿದ್ಧಪಡಿಸುವಲ್ಲಿ ನನ್ನ ಅಕ್ಕ ಡಾ. ಎಲ್.ಜಿ. ಸುಮಿತ್ರ ಹಲವಾರು ಅಮೂಲ್ಯ ಸಲಹೆಗಳನ್ನಿತ್ತಿದ್ದಾರೆ. ಅವರಿಗೆ ನನ್ನ ಒಲವಿನ ಕೃತಜ್ಞತೆಗಳು ಸಲ್ಲುತ್ತವೆ.

ಗ್ರಂಥಋಣ

೧.ಎಲ್. ಗುಂಡಪ್ಪ: ಸಂಪಾದಕರು ಮತ್ತು ಪ್ರಕಾಶಕರು, ನಾಡಪದಗಳು, ಬೆಂಗಳೂರು, ೧೯೪೫

೨.ಎಲ್. ಗುಂಡಪ್ಪ: ಕನ್ನಡಿ ಸೇವೆ, ಜ್ಯೋತಿ ಗ್ರಂಥಮಾಲೆ, ಬೆಂಗಳೂರು, ೧೯೮೬

೩.ಎಲ್.ಜಿ. ಸುಮಿತ್ರ: ಕರ್ನಾಟಕ ಜಾನಪದ ಗೀತೆಗಳು–ಸಂಗೀತ ಹಾಗೂ ಸಾಹಿತ್ಯ ಮೌಲ್ಯಗಳ ಅಧ್ಯಯನ, ಬೆಂಗಳೂರು ವಿಶ್ವವಿದ್ಯಾನಿಲಯದ ಪಿ.ಎಚ್‌ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ, ೧೯೭೬ (ಅಪ್ರಕಟಿತ)

೪.ಮತಿಘಟ್ಟ ಕೃಷ್ಣಮೂರ್ತಿ, ಸಂಗ್ರಾಹಕ, ಸಂಪಾದಕ ಮತ್ತು ಪ್ರಕಾಶಕ, ಗೃಹಿಣೀ ಗೀತೆಗಳು, ಕನ್ನಡ ಜನಪದ ಸಾಹಿತ್ಯ ಭಂಡಾರ, ಸಂಪುಟ ೨, ಬೆಂಗಳೂರು, ೧೯೮೨



# ವ್ಯವಸ್ಥೆಯೋ? ಅವ್ಯವಸ್ಥೆಯೋ?

ವಲ್ಲೀಶ ಶಾಸ್ತ್ರಿ

ಇದೊಂದು ಕಾಡು ಹರಟೆ. ಒಂದು ದಿವಸ ಎಲ್ಲಾ ಸ್ನೇಹಿತರು ಕೂತು ಹರಟೆ ಹೊಡೆಯುತಿದ್ದರು. ಹರಟೆ ಅಂದರೆ ಗೊತ್ತಾಯ್ತಲ್ಲ. ವಿಷಯ ಗೊತ್ತು ಗುರಿ ಇಲ್ಲದೇ ಹೋಗ್ತಾ ಇರುತ್ತೆ. ಒಂದು ದಿನ ಎರಡು ಮನೆಗಳ ತಾಳೆ. ಶಾಸ್ತ್ರಿ ಮತ್ತು ಐಂಗಾರ್ ಮನೆಗಳು. ಮನೆಗಳ ಪರಿಚಯ ಹೀಗೆ. ಶಾಸ್ತ್ರಿ ಹೆಂಡತಿ ಸ್ವಲ್ಪ ಅವ್ಯವಸ್ಥಿತ ಮಹಿಳೆ. ಐಂಗಾರಿ ಹೆಂಡತಿ ವ್ಯವಸ್ಥಿತೆ ಮಹಿಳೆ. ಅದಕ್ಕೆ ಕಾರಣವೂ ಇದೆ. ಶಾಸ್ತ್ರಿ ಹೆಂಡತಿ ಬೆಳೆದಿದ್ದು ದೊಡ್ಡ ದೊಡ್ಡ ರೈಲ್ವೇ ಬಂಗಲೆಗಳಲ್ಲಿ, ಯಾಕೆಂದರೆ ಅವರಪ್ಪನ ಕೆಲಸ ರೈಲ್ವೇನಲ್ಲಿ ಇಂಜಿನಿಯರ್. ಅದೇ ಐಂಗಾರ್ ಹೆಂಡತಿ ಬೆಳದಿದ್ದು ಇಂಗ್ಲೆಂಡ್‌ನಲ್ಲಿ. ಅವರಪ್ಪನ ಕೆಲಸ ಲಂಡನ್‌ನಲ್ಲಿ. ಆದರೆ ಇಬ್ಬರೂ ಮದುವೆ ಅಗಿರೋದು ಮಾತ್ರ ಬೆಂಗಳೂರಿನ ಭೂಪರನ್ನ. ವ್ಯವಸ್ಥೆ ವಿಷಯದಲ್ಲಿ ಇಬ್ಬರೂ ತಕ್ಕಡೀಲಿ ಹಾಕಿದರೆ ಒಂದೇ. ಇವತ್ತಿನ ಹರಟೇಲಿ ಇಬ್ಬರು ಕಳ್ಳರು ಬಂದು, ಒಬ್ಬ ಐಂಗಾರಿ ಮನೆಗೆ, ಇನ್ನೊಬ್ಬ ಶಾಸ್ತ್ರಿ ಮನೆಗೆ ಹೋದರೆ ಹೇಗಿರುತ್ತೆ ಅಂಬುದೇ ಚರ್ಚೆ.

ಶಾಸ್ತ್ರಿ ಮನೆಗೆ ಕಳ್ಳ ಬಂದು ಬಾಗಿಲು ತೆಗೆದರೆ ಕಾಣಿಸೋದು ಕರ್ನಾಟಕದ ಕಾವೇರಿ ಕುರ್ಚಿಗಳು, ಡೈನಿಂಗ್ ಟೇಬಲ್‌ಗಳು ಎಲ್ಲಾ ಒಂದಲ್ಲ ಒಂದ್ ಕಡೆ ಬಿರಕು ಬಿಟ್ಟಿದೆ ಅಥವಾ ಚಿಪ್ ಎದ್ದು ಬಂದಿದೆ. ಆಯ್ತು, first impression itself is bad impression. ಅದನ್ನೇದಾರೂ ಎತ್ತ್ಕೋಣ ಅಂದರೆ ಹೆಣ ಭಾರ. ಆಗದ ಕೆಲಸ. ಮುಂಚೇನಾದರೂ ಆಗಿದ್ರೆ ಇನ್‌ಲೇ ಆರ್ಟ್‌ನಲ್ಲಿ ಜಿಂಕೆ ಕೊಂಬು ಏನೋ ಹಾಕ್ತಿದ್ರಂತೆ, ಅದಾರು ಆಗಿದ್ರೆ ಸ್ವಲ್ಪ ಬೆಲೆ ಇರ್ತಾ ಇತ್ತು. ಈಗ ಬರೇ ಪ್ಲ್ಯಾಸ್ಟಿಕ್. ಏನ್ ಬೆಲೇನೆ ಇಲ್ಲ. ಅದೂ rejected.

ಈ ಕಡೇ ಐಂಗಾರಿ ಮನೇಲಿ ಬಂದ ಕಳ್ಳ ಮನೆ ಬಾಗಿಲು ತೆಗೆದರೆ ತಕ್ಷಣ ಆಗ ತಾನೆ vacuum ಮಾಡಿರೋ ಅಂತಹ carpet. ಒಳ್ಳೆ ಇಂಗ್ಲೆಂಡ್‌ನ ಕ್ರಿಕೆಟ್ ಮೈದಾನ ಇದ್ದ ಹಾಗೆ ಇರುತ್ತೆ. ಇನ್ನು ಕುರ್ಚಿಗಳು, ಡೈನಿಂಗ್ ಟೇಬಲ್ ಏನೂ ಹೇಳಸ್ಕೊಳ್ಳೋ ಹಾಗೆ ಇಲ್ದೇ ಇದ್ರೂ ಒಳ್ಳೆ ಮುಟ್ಟಿ ಕೈ ತೊಳೆಯೋ ತರ ಇಟ್ಟಿರ್ತಾರೆ. first impression is good impression. ಇನ್ನು ಸೋಫಾ ಎಲ್ಲಾ pure leather. ಈ ಮನೇಲಿ ಏನಾರು ಸಿಕ್ಕೀತು ಅಂದ್ಕೊಂಡಿರ್ತಾನೆ.

ಇತ್ತ ಶಾಸ್ತ್ರಿ ಮನೇಗೆ ಬಂದ ಕಳ್ಳ ಹೋಗಲಿ ಪಕ್ಕದಲ್ಲಿ ಇರೋ ರೂಮಿನಲ್ಲಿ ಏನಿದೆ ಅಂತ ನೋಡೋಕ್ಕೆ ಹೋದರೆ, ಬಾಗಿಲು ತೆಗೆದರೆ ಅದು ಶಾಸ್ತ್ರಿ ಆಫೀಸ್ ರೂಮು. ನೋಡಿದರೆ ಅವನಗೆ ಅರ್ಥಾನೆ ಆಗಿರೋಲ್ಲ. ಆಫೀಸ್ ರೂಮ್ನಲ್ಲಿ ನಾಟಕದ ಸಾಮಾನು ಒಂದ್ ಕಡೆ, ಪುಸ್ತಕಗಳೆಲ್ಲಾ ಒಂದ್ ಕಡೆ ಚೆಲ್ಲಾಪಿಲ್ಲಿಯಾಗಿ ಬಿದ್ದಿರುತ್ತೆ. ಎಲ್ಲೋ ನನಗಿಂತ ಮುಂಚೆ ಒಬ್ಬ ಕಳ್ಳ ಬಂದಿದ್ನೇನೋ ಅಂತ ಅನುಮಾನ ಬಂದ್ಬಿಡುತ್ತೆ ಕಳ್ಳಂಗೆ. ಯಾಕೋ ಒಂದ್ ತರಹ ಭಯ ಶುರುವಾದ್ರೂ ಆಗಬಹುದು. ಆದರೆ ಅವ್ನಗೇನು ಗೊತ್ತು ಶಾಸ್ತ್ರಿ ಆಫೀಸ್ ರೂಮು ಯಾವಾಗ್ಲೂ ಹಾಗೆ ಇರುತ್ತೇ ಅಂತ. ಇನ್ನು ಕಣ್ಣಿಗೆ ಕಾಣೋ ಹಾಗೆ ಇರೋದು ಕಂಪ್ಯೂಟರ್. ಅದನ್ನೇ ತಗೊಳ್ಳೋಣ ಅಂತ ಅವನೇನಾರ ಕೈ ಹಾಕಿದರೆ. ಅಲ್ಲಿ ಬಿದ್ದಿರೋ ವೈರ್‌ಗಳನ್ನ ನೋಡೀ ಎಲ್ಲೋ ಬೂಬಿ ಟ್ರ್ಯಾಪ್ ಮಾಡಿದಾರೇನೋ ಅನ್ನೋ ಭಯದಿಂದ ಅದನ್ನೂ ಹಾಗೇ ಬಿಟ್ಟ ಓಡ್ಬಿಡ್ತಾನೆ ಅಷ್ಟೆ. ಅಲ್ಲಿ ಏನೋ ಇದೇ ಅಂತ ನೋಡೋದಿರ್ಲಿ, ತಿರಗಿ ಸಹಿತ ನೋಡ್ದೇ ಬಾಗಿಲನ್ನ ಹಾಗೇ ಹಾಕ್ಬಿಡ್ತಾನೆ. ಬೇರೆ ಸಾಮಾನು ನೋಡಿದರೆ, ಅಲ್ಲಿರೋದೆಲ್ಲಾ ನಾಟಕದ ನಕಲಿ ಒಡವೆಗಳು. ಶಾಸ್ತ್ರಿ ಮನೇಲಿ ಯಾವಾಗಲೂ ಒಂದಲ್ಲ ಒಂದು ಒಡವೆ ಪೆಟ್ಟಿಗೆ ಇದ್ದೇ ಇರುತ್ತೆ ಕಂಪ್ಯೂಟರ್ ರೂಮಲ್ಲಿ. ಅದೂ ಅವನದ್ದಲ್ಲ. ಯಾರೋ ಸ್ನೇಹಿತರು ರಜಕ್ಕೆ ಇಂಡಿಯಾಕ್ಕೆ ಹೋಗೋಕೆ ಮುಂಚೆ 'ನಮ್ಮ ಮನೇಲಿ ಯಾರೂ ಇರೋಲ್ಲ. ನಾವು ಬರೋ ತನಕ ನಿಮ್ಮ ಮನೇಲೆ ಇರಲಿ' ಅಂತ ಪಾಪ ಒಡವೆಗಳನ್ನೆಲ್ಲಾ ಒಂದು ಪೆಟ್ಟಗೇಲಿ ಕೊಟ್ಟು ಹೋಗೋದು ರೂಡಿ. ಅಂತಹ ಪೆಟ್ಟಿಗೆ ಅಸಲಿ ಒಡವೆ ಇದ್ರೂ ಅವನು ಅದೂ ಎಲ್ಲೋ ನಾಟಕದ ಒಡವೆ ಇರಬೇಕು, ನಿಜವಾದ ಒಡವೆ ಆಗಿದ್ರೆ ಇಲ್ಲಿ ನಾಟಕದ ಒಡವೆ ಜೊತೆ ಯಾಕಿಟ್ಟಿರ್ತಿದ್ರು ಅಂತ ಅದಕ್ಕೆ ಕೈಯೇ ಹಾಕೊಲ್ಲ.

ಇನ್ನು ಐಂಗಾರಿ ಮನೇಲೂ ಒಂದು ಆಫೀಸ್ ರೂಮು. ಅದೇ ರೂಮಿಗೆ ಕಳ್ಳ ಹೋದರೆ, ಒಳ್ಳೆ ಯಾವುದೋ white house officeಗೆ ಬಂದ ಹಾಗೆ ಇರುತ್ತೆ ಕಳ್ಳಂಗೆ. ಬಾಗಿಲು ತೆಗೆದ ತಕ್ಷಣ ಒಂದು index card ಇರುತ್ತೆ. ಅದರಲ್ಲಿ ಎಲ್ಲಾ ವಿವರಗಳು... ಯಾವ ಯಾವ ಪುಸ್ತಕ, ಫೈಲು, ಎಲ್ಲೆಲ್ಲಿದೆ ಅಂತ. ಅಬ್ಬಾ ಒಳ್ಳೆ ಜಾಗಕ್ಕೇ ಬಂದಿದೀನಿ ಅಂತ ಖುಷಿಯಾದ ಕಳ್ಳ. ಹಾಗೆ index card ಮೇಲೆ ಕಣ್ಣು

ಹಾಯಿಸುತ್ತಾನೆ. ನೋಡಿದರೆ ಎಲ್ಲಾ ರೂಮಿನ ಹೆಸರುಗಳು ಇರುತ್ತೆ. ಆಫೀಸ್ ರೂಮಿನ ವಿವರ ಇರೋ page ತೆಗೆದು ನೋಡಿದರೆ ಎಲ್ಲಾ ನೀಟಾಗಿ, ಟ್ಯಾಕ್ಸ್ ಪೇಪರ್ ಎಲ್ಲಿದೆ, ಇನ್ಷೂರೆನ್ಸ್ ಪೇಪರ್ ಎಲ್ಲಿದೆ ಅಂತ ಎಲ್ಲಾ ವಿವರಗಳೂ ಇವೆ. ಹಾಗೆ ಮುಂದೆ ನೋಡ್ತಾ ಹೋಗ್ತಾನೆ. ಬೆಡ್ ರೂಮಿನ ವಿವರಗಳು ಎಲ್ಲಾ ಇರುತ್ತೆ. ಮೆತ್ತಗೆ ಹಾಗೆ ತೆಗೆದು ನೋಡಿದರೆ ಯಾರ್ಯಾರ್ ಬಟ್ಟೆ ಎಲ್ಲೆಲ್ಲಿದೆ ಅಂತಾನೂ ಇರುತ್ತೆ. ಅದೂ ಅಲ್ಲದೆ ಹೊಸಾದು ಯಾವ್ದು? ಹಳೇದು ಯಾವ್ದೂ? ಅಂತಾನೂ ಇರುತ್ತೆ. ಕಳ್ಳಂಗೆ ಖುಷಿಯೋ ಖುಷಿ. ಹಾಗೆ ಇನ್ನೂ ಎಲ್ಲಾ ನೋಡ್ತಾ ಇದ್ದರೆ, ಅಡುಗೆ ಮನೆ, ದೇವರ ಮನೆ, ಅಷ್ಟೇ ಅಲ್ಲ ಸೇಫ್ಟ್ ಡಿಪಾಸಿಟ್ ಲಾಕರ್ ಬಗ್ಗೆ ಸಹ ವಿವರ ಸಿಕ್ತು. ಇನ್ನೇನು ಸ್ವರ್ಗಕ್ಕೆ ಮೂರೇ ಗೇಣು.

ಇತ್ತ ಶಾಸ್ತ್ರಿ ಮನೆ ಕಳ್ಳ ಅಡುಗೆ ಮನೆ, ದೇವರ ಮನೆ ಹುಡಕ್ತಾ ಹೋದರೆ. ಅಡುಗೆ ಮನೇಲಿ ಒಂದು ಪ್ಯಾಂಟ್ರಿ ಬಾಗಿಲು ತೆಗೆದರೆ ಎಲ್ಲಾ ಅವನ ಮೇಲೆ ಬೀಳುತ್ತೆ. ಪಾಪ ಅವನ್ಗೇನ್ ಗೊತ್ತು ಎಲ್ಲರ ಮನೇಲೂ Open the door to see up what is there ಅಂತ ಇದ್ರೆ, ಶಾಸ್ತ್ರಿ ಮನೆ ಪ್ಯಾಂಟ್ರೀಲಿ Open the door to see what is down there ಅಂತ ಇರುತ್ತೆ. ಯಾಕೆ ಅಂದ್ರೆ ಪ್ಯಾಂಟ್ರಿ ಒಳಗೆ ಅಷ್ಟು ತುಂಬಿರ್ತಾರೆ, ಬಾಗಿಲು ತೆಗೆದರೆ ಸಾಕು ಬೇಳೆ, ಹಿಟ್ಟು, ಸಕ್ಕರೆ, ಕಾಫಿ ಪುಡಿ ಎಲ್ಲಾ ಪೊಟ್ಟಣಗಳು ಬಿದ್ದಮೇಲೆ, ಬಿದ್ದಿದ್ದರಲ್ಲಿ ಆರಿಸ್ಕೊಂಡು ಮತ್ತೆ ತುರ್ಕಿ ಬಾಗಿಲು ಹಾಕ್ಬೇಕು. ಇಂತ ಮನೇಗೆ ಹೋಗಿ ಬಾಗಿಲು ತೆಗೆದರೆ ಪಾಪ, ಕಳ್ಳನ ಗತಿಏನು?

ಐಂಗಾರಿ ಮನೆ ಕಳ್ಳ ಅಡುಗೆ ಮನೆಗೆ ಹೋದರೆ, ಬಾಗಿಲು ತೆಗೆದರೆ ಸಾಲಾಗಿ ಪೊಟ್ಟಣಗಳು, ಬೇರೆ ಬೇರೆ ಬಣ್ಣದ್ದು. ಇನ್ನು ಸೀರಿಯಲ್‌ಗಳಂತೂ expiry date ಪ್ರಕಾರ arrange ಆಗಿದೆ, expiry dateನಲ್ಲಿ latest date ನೋಡಿ ಒಂದು ಸೀರಿಯಲ್ ಬೌಲ್‌ನಲ್ಲಿ ಹಾಕ್ಕೊಂಡು, ಫ್ರಿಡ್ಜ್ ಬಾಗಿಲು ತೆಗೀತಾನೆ–ಹಾಲು ಹಾಕ್ಕೊಳ್ಳೋಣ ಅಂತ. ಫ್ರಿಡ್ಜ್‌ನ arrangement ನೋಡೇ ಸುಸ್ತಾಗಿಬಿಡ್ತಾನೆ. Fresh ಆಗಿ ಹಾಲು ಹಾಕ್ಕೊಂಡು, ಸಿರಿಯಲ್ ತಿನ್ಕೊಂಡು. ಇನ್ನು ಮುಂದಿನ ಕೆಲ್ಸ ಶುರುಮಾಡ್ತಾನೆ. ದೇವರ ಮನೇಲಿ ಏನೇನು ದೇವರು ಇದೆ ಅಂತ ಅವನೇನು ಎಲ್ಲಾ ನೋಡ್ಲೇ ಬೇಕಾಗಿಲ್ಲ. ತನ್ನ index ನೋಡ್ಕೊಂಡು ಚಿನ್ನದ್ದು ಯಾವುದು, ಬೆಳ್ಳೀದು ಯಾವುದು ಅಂತ ಎಲ್ಲಾ ತನ್ನ ಬ್ಯಾಗ್‌ಗೆ ಇಳಿಸ್ತಾನೆ.

ಶಾಸ್ತ್ರಿ ಮನೆ ಕಳ್ಳ ದೇವರ ಮನೆ ಬಾಗಿಲು ತೆಗೆದ. ಶಾಸ್ತ್ರಿ ಮನೆ ಅಂದ್ರೆ ಕೇಳ್ಬೇಕೆ. ದೇವರ ಮನೆ ಚೆನ್ನಾಗೇ ಇಟ್ಟಿರಬೇಕು ಅಂತ ಅವನ ಅನಿಸಿಕೆ. ಪಾಪ ಅಲ್ಲೂ ಅವನಿಗೆ ಕಾದಿರುತ್ತೆ ನಿರಾಸೆ. ದೇವರ ಹಾರ ಎಲ್ಲಾ ಲಾಸ್ ವೇಗಾಸ್‌ನಲ್ಲಿ ಸಿಗುತ್ತಲ್ಲ ಅಂಥ ನಕಲಿ ಹಾರಗಳೇ. ಬೆಳ್ಳಗಿರೋ ವಿಗ್ರಹಾನೂ ಕಪ್ಪಗೆ ಕರೆ ತುಂಬಿ ಬೆಳ್ಳೀದೂ ಅಂತ

ಸಂಬೋಕೆ ಆಗೋಲ್ಲ. ಇನ್ನು ಚಿನ್ನದ ವಿಗ್ರಹ ಕಳ್ಳಂಗೆ ಚಿನ್ನ ಅಂತ ಅನುಮಾನವೂ ಬರೊಲ್ಲ ಅಂದ್ರೆ ಹ್ಯಾಗಿರುತ್ತೆ ಅಂತ ನೀವೇ ಊಹಿಸ್ಕೋಬಹುದು.

ಐಂಗಾರಿ ಮನೆ ಕಳ್ಳ index ಹಿಡ್ಕೊಂಡು ಬೆಡ್ ರೂಮಿಗೆ ಹೋದರೆ. ಅಲ್ಲಿ ಎರಡು closetಗಳಿವೆ. ಒಂದರ ಬಾಗಿಲು ತೆಗೆದರೆ, room freshnerನ ಗಮ ಗಮ ವಾಸನೆ ಬರ್ತಾ ಇರುತ್ತೆ. shelfಗಳು. ಅದ್ರ ಮೇಲೇಲ್ಲಾ Sun, Mon, Tue .. ಅಂತ ವಾರದ ಹೆಸರೆಲ್ಲಾ ಬರೆದಿರುತ್ತೆ. ಕುತೂಹಲಕ್ಕೆ ಒಂದು ವಾರದ shelf ತೆಗಿದರೆ, ಅಲ್ಲಿ ಜೋಡಿಸಿಟ್ಟ ಪ್ಯಾಂಟ್‌ಗಳು, ಸೀರೆಗಳು, ಬಟ್ಟೆಗಳು ಎಲ್ಲಾ ಇರುತ್ವೆ. ಹಾಗೇ ಕಣ್ಣು ಹಾಯಿಸಿದರೆ. ಅಲ್ಲಿ ವಾರದ ಹೆಸರು ಬರೀದೆ ಇರೋ ಒಂದು shelf ಇರುತ್ತೆ. ನೋಡ್ತಾನೆ, ಅದು safe deposit locker. ಇನ್ನು ಅದು ತೆಗೆಯೋದು ಕಷ್ಟಾನೆ. index ನಲ್ಲಿ key ಎಲ್ಲಾ ಇರುತ್ತೆ. ಆರಾಮವಾಗಿ ಎಲ್ಲಾ ತೆಗೆದು ತನ್ನ ಬ್ಯಾಗಿಗೆ ಇಳಿಸ್ತಾನೆ.

ಶಾಸ್ತ್ರಿ ಮನೆ ಕಳ್ಳ ಬೆಡ್ ರೂಮಿಗೆ ಬಂದ್ರೆ, ಅಲ್ಲೂ ಎರಡು closetಗಳಿರುತ್ತೆ. Closetನ ಹಾಗೆ ತೆಗೆದರೆ ಲಾಂಡ್ರಿ ರೂಮೋ ಕ್ಲಾಸೆಟ್ಟೋ ಅನುಮಾನ ಬರುತ್ತೆ. ನೋಡಿದ್ರೆ Kohls, Macy's ಬ್ಯಾಗುಗಳು. ಹೊಸ ಬಟ್ಟೆಗಳು ಎಲ್ಲಾ ಬ್ಯಾಗಲ್ಲೇ ಇರುತ್ತೆ. ಕಳ್ಳಂಗೋ, ನಾನೇನು ಇನ್ನೊಬ್ಬ ಕಳ್ಳನ ಮನೇಗೆ ಬಂದಿದೀನೋ ಅಥವಾ ಕಳ್ಳತನ ಮಾಡೋಕೆ ಬಂದಿದೀನೋ ಅಂತ ಅನುಮಾನ ಬರುತ್ತೆ. ಇವರು ಎಲ್ಲಾ ಕಳ್ರೇ ಇರ್ಬೇಕು, ನಾವೆಲ್ಲಾ ಮನೇಲಿ ಕದ್ರೆ ಇವರೇನಪ್ಪ ಅಂಗಡಿಂದ ಹೊಸ ಹೊಸ ಬಟ್ಟೇನೆ ಕದೀತಾರಲ್ಲ ಅನ್ಕೋತಾನೆ. ಹೊಸ ಬಟ್ಟೇ ಎಲ್ಲಾ ತಗೋತಾನೆ. ಬಂದಿದ್ದಕ್ಕೆ ಅದೇ ಲಾಭ ಅನ್ಕೋತಾನೆ. ಇವರ ಮನೇಲಿ ಏನೂ ಚಿನ್ನದ ಸಾಮಾನೇ ಸಿಗಲಿಲ್ಲವಲ್ಲ ಅಂತ ಪಾಪ ಬಹಳ disappoint ಆಗಿ ಅವನೇ ಇನ್ನೊಂದು ಮನೇಲಿ ಕದ್ದಿದ್ದ ಒಂದು ಚಿನ್ನದ ಉಂಗುರ ಇಟ್ಬಿಟ್ಟು, ಒಂದು ಚೀಟೀಲಿ 'ಚಿನ್ನ ಅಂದ್ರೆ ಹೀಗಿರುತ್ತೆ' ಅಂತ ಬರೆದಿಡ್ತಾನೆ. ಶಾಸ್ತ್ರಿ ಮನೆ ಒಡವೆಗಳೆಲ್ಲಾ ಆ closet ಹಡಪದ ಸಂದಿಯಲ್ಲಿ ಎಲ್ಲೋ safe ಆಗಿ ಇರುತ್ತೆ.

ಇನ್ನು ಕಳ್ಳತನ ಆಗಿದೆ ಅಂತ ಗೊತ್ತಾಗ್ಬೇಕಲ್ಲ. ಐಂಗಾರಿ ಮನೇಲಿ, ಐಂಗಾರಿ ಹೆಂಡ್ತಿ ಮನೇಗೆ ಬಂದ ತಕ್ಷಣ ನೋಡ್ತಾಳೆ index missing. ತಕ್ಷಣ ಪೋಲೀಸ್ನೋರ್ಗೆ ಕರೆದು ಹೇಳ್ತಾರೆ, ಏನೇನು ಕಳ್ಳತನ ಆಗಿದೆ ಅಂತ duplicate indexನಿಂದ ಎಲ್ಲಾ ಕರೆಕ್ಟಾಗಿ ಕೊಡ್ತಾರೆ.

ಶಾಸ್ತ್ರಿ ಮನೇಲಿ ಕಳ್ಳ ಬಂದು ಹೋಗಿರೋದೆ ಗೊತ್ತಾಗೊಲ್ಲ. ಹೆಂಡ್ತಿ ಎಲ್ಲಿ ಆ kohl's Bag ಅಥವ Macy's bag ಅಂದ್ರೂ ಎಲ್ಲೋ ಅಲ್ಲೇ ಇರ್ಬೇಕು ಹುಡ್ಕು ಅಂತ ಶಾಸ್ತ್ರಿ ಹೇಳಿ ಸುಮ್ನಾಗ್ತಾರೆ. ಪಾಪ ಪೊಲೀಸ್ ಕಂಪ್ಲೇಂಟ್‌ಗೆ ಸಹ ಹೋಗೋಲ್ಲ.



# ಬೀಡು ಗೂಡು ಮಾಡು

## ವೈ.ಶ್ರೀ. ನಟರಾಜ

### ನಾಡಿನಿಂದ ನಾಡಿಗೆ

ಮುಂಬೈನಿಂದ ಹೊರಟು, ಆಂಸ್ಟರ್ಡ್ಯಾಂ, ನಗರವನ್ನು ಹಾದು ನ್ಯೂಯಾರ್ಕಿನಲ್ಲಿ ಇಳಿದಾಗ ನನ್ನ ಸೂಟ್‌ಕೇಸ್ ಇನ್ನೂ ಬಂದು ತಲುಪಿಲ್ಲವೆಂದು ತಿಳಿದು ಪೆಚ್ಚಾಯಿತು. ಇಮ್ಮಿಗ್ರೇಷನ್ ದಾಟಿ ವಿಮಾನ ಬದಲಿಸಿ ಪಿಟ್ಸ್‌ಬರ್ಗಿಗೆ ಹೋಗಬೇಕಿತ್ತು. 'ಏನಿದು ವಾಸನೆ?' ಎಂದು ಕೇಳಿದ ಇಮ್ಮಿಗ್ರೇಷನ್ ಆಫೀಸರ್. ಮುಂಬೈ ವಿಮಾನ ನಿಲ್ದಾಣದಲ್ಲಿ ಮಿತ್ರರು ಕತ್ತಿಗೇರಿಸಿದ್ದ ಹೂಮಾಲೆಯನ್ನು ಎಸೆಯಲಾಗದೇ ಕೈಚೀಲದಲ್ಲಿ ತುಂಬಿಟ್ಟುಕೊಂಡಿದ್ದೆ. ಸ್ವಲ್ಪ ಬಾಡಿದ್ದರೂ ಹೂವಿನ ವಾಸನೆ ಇನ್ನೂ ಘಂ ಎನ್ನುತ್ತಿತ್ತು. ತೆಗೆದು ಬಿಸಾಡು, ಇದನ್ನು ಹೇಗೆ ಜೊತೆಯಲ್ಲಿ ತರಲು ಬಿಟ್ಟರು ಎಂದು ಗೊಣಗಿದ. 'ಎಲ್ಲಿ ನಿನ್ನ ಲಗೇಜು' ಎಂದು ಕಸ್ಟಮ್ ಆಫೀಸರ್ ಕೇಳಿದ. 'ಇನ್ನೂ ಬಂದಿಲ್ಲ'ವೆಂದೆ. ಕೈಯಲ್ಲಿ ಎದೆಯ ಎಕ್ಸ್‌ರೇ ಮತ್ತು ಹೆಗಲಮೇಲೊಂದು ತೂಗುಚೀಲವನ್ನುಳಿದು ಬೇರೇನೂ ಇಲ್ಲ. 'ಮುಂದೆಲ್ಲಿಗೆ ಪಯಣ?' ಎಂದು ವಿಚಾರಿಸಿ ನನ್ನನ್ನು ಕಳಿಸಿಕೊಟ್ಟ. ಅಂದಕಾಲತ್ತಿಲೆ, ಮೊದಲಬಾರಿ ದೇಶ ಬಿಟ್ಟು ಉನ್ನತ ಶಿಕ್ಷಣಕ್ಕಾಗಿ ಪರದೇಶಯಾನ ಮಾಡುವ ಎಲ್ಲರಂತೆ ನಾನೂ ಸೂಟು-ಬೂಟು ಧರಿಸಿದ್ದೆ. ವಿಮಾನಕ್ಕೆ ತಡವಾಗಿತ್ತಾದುದರಿಂದ ನನ್ನ ಗೇಟಿಗೆ ಓಡಿದೆ. ಅಲ್ಲಿಂದ ಪಿಟ್ಸ್‌ಬರ್ಗು ಒಂದೇ ಘಂಟೆ. ಅಲ್ಲಿ, ನನ್ನ ಮಿತ್ರನ-ಮಿತ್ರನ-ಮಿತ್ರ ಒಬ್ಬ (ಇದು ನಮ್ಮ ಐ.ಐ.ಟಿ ಕನೆಕ್ಷನ್ ಎಂದು ಬೇರೆ ಹೇಳಬೇಕಿಲ್ಲವಷ್ಟೆ!) ಬಂದು ನನಗಾಗಿ ಕಾದು ಕಾದು ಸುಸ್ತಾಗಿ ಹಿಂದಿರುಗಿದ್ದ. ಲಗೇಜಿನ ಬಗ್ಗೆ ವಿಚಾರಿಸಿದ್ದಕ್ಕೆ ಟಿಡಬ್ಲ್ಯುಎ ವಿಮಾನ ಸಂಸ್ಥೆಯವ ಹೇಳಿದ: 'ನಿನ್ನ ವಿಳಾಸ ಕೊಟ್ಟು ಹೋಗು, ಲಗೇಜು ಬಂದೊಡನೆ ತಲುಪಿಸುತ್ತೇವೆ' ಎಂದು. ಅವನ ಮಾತನ್ನು ನಂಬಲು ನಾನು ತಯಾರಿರಲಿಲ್ಲ. ಆ ಸೂಟ್‌ಕೇಸಿನಲ್ಲಿ ಒಂದು ಎಕ್ಸ್‌ಟ್ರ

ಫೇರ್ ಅಂಬ್ಯಾಸಿಡರ್ ಬಾಟಾ ಷೂಗಳಿವೆ. ಹೇಗೆತಾನೇ ಬಿಟ್ಟುಹೋಗಲಿ? ಬೇರೆ ವಿಧಿ ಇರಲಿಲ್ಲ.

ಸರಿ, ವಿಮಾನ ನಿಲ್ದಾಣದಿಂದ ಒಕ್ಲೆಂಡ್ ತಲುಪುವುದು ಹೇಗೆ? ಅತ್ತಿತ್ತ ನೋಡುತ್ತ ಅಡ್ಡಾಡುತ್ತಿದ್ದಾಗ, ಯಾರನ್ನೋ ಕಳಿಸಿಕೊಡಲು ವಿಮಾನ ನಿಲ್ದಾಣಕ್ಕೆ ಬಂದಿದ್ದ ದೇಸೀ ಭಾಯಿ ಒಬ್ಬನಿಗೆ ಹಲ್ಲುಗಿರುದು ದೊಗ್ಗು ಸಲಾಮು ಹೊಡೆದು ಒಕ್ಲೆಂಡಿನಲ್ಲಿ ಮಿತ್ರನ ಮನೆಗೆ ಕರೆದೊಯ್ಯುವಿರಾ ಎಂದು ಕೇಳಿಕೊಂಡೆ. ಆತ ಒಳ್ಳೆಯವನಂತೆ ಕಂಡ. ನನ್ನ ಹೆಸರು, ಕುಲ, ಗೋತ್ರ ಎಲ್ಲ ವಿಚಾರಿಸಿಕೊಂಡಮೇಲೆ, ಆತ ಕೂಡ ನಾನು ಹೋಗಬೇಕಾಗಿದ್ದ ಸ್ಥಳಕ್ಕೇ ಹೋಗುತ್ತಿರುವುದಾಗಿ ತಿಳಿಸಿ ಮೊದಲು ತನ್ನ ಮನೆಗೆ ಕರೆದೊಯ್ದ. ಅವ ಹೈದರಾಬಾದಿನವ, ಬೆಂಗಳೂರಿನ ಟಾಟಾ ಇನ್ಸ್‌ಟಿಟ್ಯೂಟಿನಲ್ಲಿ ಓದಿದ್ದನಂತೆ. 'ಊಟ ಆಗಿದೆಯೇ?' ಎಂದು ವಿಚಾರಿಸಿದ. ಅಡ್ಡಡ್ಡಕ್ಕೆ ಅಲ್ಲಾಡಿಸುತ್ತ ತಲೆ ತಗ್ಗಿಸಿದೆ. ಮಿಕ್ಕಿದ್ದ ತಂಗಳನ್ನಕ್ಕೆ ಮೊಸರನ್ನು(ಅದರ ಹೆಸರು ಯೋಗರ್ಟ್ ಎಂದು ನಂತರ ತಿಳಿಯಿತು) ಸೇರಿಸಿ ಕಲಸಿ ಒಂದಿಷ್ಟು ಬೆಡೇಕರ್ ನಿಂಬೇ ಉಪ್ಪಿನಕಾಯಿನ ಜೊತೆ ಸೀರಿಯಲ್ ಬೌಲಿನಲ್ಲಿ ಬಡಿಸಿಕೊಟ್ಟ. ಮುಂಬೈ ಬಿಟ್ಟು ಮೂರು ದಿನಗಳೇ ಆಗಿತ್ತು, ಆಗಸ್ಟಿನ ಬೇಸಿಗೆ ದಿನದಲ್ಲಿ ಆ ತಂಗಳನ್ನ ಮತ್ತು ಮೊಸರು ನನಗೆ ಸ್ವರ್ಗ ಸುಖವನ್ನೇ ಕೊಟ್ಟಿತು. ಸರಿ, ನನ್ನ ಅಪರಚಿತ ಮಿತ್ರ ಎಷ್ಟೋ ಯುಗಗಳ ನೆಂಟು ಎನಿಸುವಷ್ಟು ಹತ್ತಿರ ಎನಿಸಿಬಿಟ್ಟ. ನನ್ನನ್ನು ನನ್ನ ಮಿತ್ರನ-ಮಿತ್ರನ-ಮಿತ್ರನ ಮನೆಗೆ ಒಯ್ದು ನನಗೆ ವಿದಾಯ ಹೇಳಿದ. ಮಧ್ಯರಾತ್ರಿಯಲ್ಲಿ ನನ್ನ ಲಗೇಜು ನನಗೆ ಬಂದು ತಲುಪಿದಾಗ ದಂಗಾಗಿದ್ದೆ! 'ಎಲಾ ದೇಶವೇ, ಪರವಾಗಿಲ್ಲ!' ಎನ್ನಿಸಿತು. ಸದ್ಯ, ನಾಳೆ ಬಟ್ಟೆ ಬದಲಾಯಿಸಿಕೊಳ್ಳಬಹುದು ಎನ್ನಿಸಿ ನಿಟ್ಟುಸಿರು ಬಿಟ್ಟೆ.

ಸರಿ ತರಗತಿ ಶುರುವಾಗುವುದಕ್ಕೆ ಇನ್ನೂ ಎರಡು-ಮೂರು ದಿನಗಳಿದ್ದವು. ಅಷ್ಟರಲ್ಲಿ ಇರಲು ಒಂದು ಜಾಗ ಹುಡುಕಬೇಕಿತ್ತು. ವಿಶ್ವವಿದ್ಯಾನಿಲಯದ ಫಾರಿನ್ ಸ್ಟೂಡೆಂಟ್ ಆಫೀಸಿನವರು ಕಳಿಸಿದ್ದ ಎಲ್ಲಾ ವಿಳಾಸಗಳನ್ನೂ ವೀಕ್ಷಿಸಿ ಯಾವ್ಯಾವುದು ಇಂಜಿನಿಯರಿಂಗ್ ಕಾಲೇಜಿಗೆ ಹತ್ತಿರವಾಗುತ್ತವೋ ಅವುಗಳನ್ನು ನನ್ನ ಮಿತ್ರನ-ಮಿತ್ರನ-ಮಿತ್ರ ಗುರುತು ಹಾಕಿಕೊಟ್ಟಿದ್ದ. ಆ ವಿಳಾಸಗಳ ಜೊತೆಗಿದ್ದ ಟೆಲಿಫೋನ್ ನಂಬರನ್ನು ಡಯಲಿಸಿ ಡಯಲಿಸಿ ತೋರ್ಬೆರಳು ಊದಿಕೊಂಡಿತು. (ಗಿರ್ ಗಿರ್ ಎಂದು ತಿರುಗಿಸುವ ಟೆಲಿಫೋನುಗಳ ಕಾಲವೂ ಒಂದಿತ್ತು ಎಂದರೆ ಈಗಿನ ಮಕ್ಕಳು ನಂಬುತ್ತಾರೋ ಇಲ್ಲವೋ, ನಾಕಾಣೆ.) ಹೆಚ್ಚು ಕಮ್ಮಿ ಎಲ್ಲರದೂ ಒಂದೇ ಉತ್ತರ 'ಮನೆ ಖಾಲಿಯಿಲ್ಲ'. ಇನ್ನು ಕೆಲವರೊಂದಿಗೆ ನಾನು ಮಾತನಾಡುವಾಗ ಅವರೂ ಎತ್ತುಚ್ಚೆ ಹುಯ್ದಂತೆ ಮಾತಾಡುತ್ತಲೇ ಇದ್ದರು. ನನ್ನ ಮಾತಿಗೆ ಅವಕಾಶವನ್ನೇ ಕೊಡದೇ ಮುಂದುವರೆಸುತ್ತಿದ್ದ

ಆ ಪಕ್ಕದ ಧ್ವನಿ, ಸಜೀವವಲ್ಲ, ರೆಕಾರ್ಡೆಡ್ ಮೆಸೇಜ್ ಎಂಬುದನ್ನು ತಿಳಿಯಲು ಸಾಕಷ್ಟು ಸಮಯ ಹಿಡಿಯಿತು. ನನ್ನ ಮಿತ್ರನ–ಮಿತ್ರನ– (ಸುಮ್ಮನೆ ಯಾಕೆ ಬೋರು, ಇನ್ನು ಮೇಲೆ ಮಿತ್ರ ಎಂದು ಹೇಳಿದರೆ, ನೀವೇ ಅದನ್ನು ಮಿತ್ರನ–ಮಿತ್ರನ–ಮಿತ್ರ ಎಂದು ತಿಳಿದುಕೊಳ್ಳಿ) ನಾನು ರೆಕಾರ್ಡೆಡ್ ಮೆಸೇಜಿನೊಂದಿಗೆ ಮಾತಾಡುತ್ತಿದ್ದೇನೆಂದು ತಿಳಿದಮೇಲೆ ಚೆನ್ನಾಗಿ ನಕ್ಕ– ನನಗೆ ಪೆಚ್ಚಾಗುವಷ್ಟು ನಕ್ಕ. (ಆ ಮರಾಠೀ ಬಡ್ಡೀಮಗ, ಈ ದೇಶಕ್ಕೆ ನನಗಿಂತ ಒಂದು ವರ್ಷ ಮುಂಚೆ ಬಂದಿದ್ದನೆಂಬುದನ್ನು ಬಿಟ್ಟರೆ, ಅವನದೇನೂ ಹೆಚ್ಚುಗಾರಿಕೆ ಇರಲಿಲ್ಲ, ಆದರೆ ನನಗೆ ಅವನ ಸಹಾಯ ಅಗತ್ಯವಾಗಿತ್ತಾದ್ದರಿಂದ ಸಹಿಸಿಕೊಳ್ಳದೇ ಬೇರೆ ಗತಿಯಿರಲಿಲ್ಲ) ಕೊನೆಗೂ ಅವನು ರಹಸ್ಯವನ್ನು ಬಿಚ್ಚಿದ.

'ಎಲೈ ಮಿತ್ರನೇ (ಮಿತ್ರನ–ಮಿತ್ರನ–ಮಿತ್ರನೇ ಎಂದರ್ಥ ಮಾಡಿಕೊಂಡಿರಷ್ಟೇ?) ಕೇಳುವಂಥವನಾಗು. ಹಿಂದೆ ಶೌನಕ ಮಹರ್ಷಿಗಳು ನೈಮಿಶಾರಣ್ಯದಲ್ಲೋ ಅಥವಾ ದಂಡಕಾರಣ್ಯದಲ್ಲೋ, ಸರಿಯಾಗಿ ನೆನಪಿಲ್ಲ, ಇರಲಿ, ಜನಮೇಜಯನಿಗೆ ತಿಳಿಸಿದ ರಹಸ್ಯವೊಂದನ್ನು ಹೇಳುವೆನು. ಆಗಸ್ಟ್ ತಿಂಗಳ ಕೊನೆಯ ವಾರದಲ್ಲಿ ಪಿಟ್ಸ್‌ಬರ್ಗಿಗೆ ಬಂದು, ಅಂದರೆ ವಿಶ್ವವಿದ್ಯಾಲಯದ ಬೇಸಿಗೆ ರಜಾ ಕಳೆದು ಫಾಲ್ ಸೆಮೆಸ್ಟರಿಗೆ ತೆರೆಯುವ ಒಂದು ವಾರ ಮುಂಚೆ ಬಂದು ಇರಲು ಒಂದು ಮನೆ ಸಿಕ್ಕಬೇಕು ಎಂದು ಬಯಸುವ ನಿನ್ನಂಥ ಪರದೇಶಿಗಳಿಗೋಸುಗವೇ ಭಗವಂತನು ಒಂದು 'ಬಂಗಲೆ'ಯನ್ನು ಸೃಷ್ಟಿಸಿದ್ದಾನೆ. ಆ ಬಂಗಲೆಯ ವೈಶಿಷ್ಟ್ಯವೇನೆಂದರೆ, ಅದು ಪುಷ್ಪಕವಿಮಾನದಂತೆ, ಎಷ್ಟು ಜನರು ಬಂದರೂ ಮತ್ತಷ್ಟು ಜನರಿಗೆ ಅಲ್ಲಿ ಸ್ಥಳಾವಕಾಶವಿದ್ದೇ ಇರುತ್ತದೆ. ಭಾರತ, ಚೈನಾ ಮುಂತಾದ ಬಡರಾಷ್ಟ್ರಗಳಿಂದ ತಡವಾಗಿ ಬರುವ ನಿನ್ನಂಥ (ಈ ರೀತಿ 'ನಿನ್ನಂಥ' ಎನ್ನುವಾಗ ಅವನ ಅಟ್ಟಹಾಸದ ಶೈಲಿಯಿಂದ ನನಗೆ ವಿಪರೀತ ಕೋಪ ಬರುತ್ತಿತ್ತು, ಆದರೂ ವಿಧಿಯಿಲ್ಲ, ಮೊದಲೇ ಹೇಳಿದಂತೆ ಅವನು ನನಗಿಂತ ಒಂದು ವರ್ಷ ಮೊದಲೇ ಬಂದಿದ್ದ) ಪರದೇಶಿಗಳಿಗಾಗಿಯೇ ಈ ಬಂಗಲೆ ಇರುವುದು. ಅಲ್ಲಿ ಹೋಗು, ನಿನಗೆ ಅಪಾರ್ಟ್‌ಮೆಂಟ್ ಸಿಕ್ಕಿಯೇ ಸಿಕ್ಕುತ್ತದೆ. ಬೇಕಾದರೆ, ನಾಳೆ ಬೆಳಿಗ್ಗೆ ನನ್ನ ಕಾರಿನಲ್ಲಿ ನಿನ್ನ ಸಾಮಾನನ್ನು ನಾನೇ ಅಲ್ಲಿಗೆ ಸಾಗಿಸಿಕೊಡುತ್ತೇನೆ, ಮುಂಗಡವಾಗಿ ಕರೆಯುವ ಗೋಜಿಗೆ ಹೋಗಬೇಡ. ನೇರ ಹೋಗೋಣ. ಆ ಲ್ಯಾಂಡ್ ಲೇಡಿ ನನಗೆ ಚೆನ್ನಾಗಿ ಗೊತ್ತು. ಯೋಚಿಸಬೇಡ ಎಂದು ಆಶ್ವಾಸನೆ ಇತ್ತಮೇಲೆ, ನಾನು ಮಲಗಿ ಸುಖವಾಗಿ ನಿದ್ರಿಸಿದೆ.

ಮಾರನೆಯ ದಿನ ನಾನು ಏಳುವ ಹೊತ್ತಿಗೆ ನನ್ನ ಮಿತ್ರನ–ಮಿತ್ ಕ್ಷಮಿಸಿ, ನನ್ನ ಮಿತ್ರ, ಆಗಲೇ ಎದ್ದು ಎಲ್ಲೋ ಮಾಯವಾಗಿದ್ದ. ಸ್ವಲ್ಪ ಹೆಚ್ಚು ಕಮ್ಮಿ ಕ್ಯಾಂಪಸ್

ಸುತ್ತಮುತ್ತಲ ಪ್ರದೇಶ ನನಗೆ ಗೊತ್ತಾಗಿತ್ತು, ಸರಿ ನಾನೇ ಹೋಗಿ ವಿಚಾರಿಸೋಣವೆಂದು ಸ್ನಾನಮಾಡಿ, ಸೀರಿಯಲ್ ಭಕ್ಷಿಸಿ ಮನೆ ಮುಂದೆ ಇದ್ದ ಬಸ್ ಸ್ಟಾಪಿನಲ್ಲಿ ನಿಂತೆ. ಎರಡು ಮೂರು ಬಸ್ಸುಗಳು ಬಂದರೂ ಒಂದೂ ನಾನು ಹೋಗಬೇಕಾಗಿದ್ದ ಕಡೆಗೆ ಹೋಗುವ ಬಸ್ ಆಗಿರಲಿಲ್ಲ. ಅರೆ, ಇದೇನು? ಓಕ್ಲೆಂಡ್ ಕಡೆ ಹೋಗುವ ಬಸ್ಸುಗಳೆಲ್ಲ ನನ್ನ ಸ್ಟಾಪಿನ ವಿರುದ್ಧ ದಿಕ್ಕಿನಲ್ಲಿ ಹೋಗುತ್ತಿವೆ? ತಕ್ಷಣ ತಲೆಯಲ್ಲಿ ಮಿಂಚಿನ ಸಂಚಾರವಾಯಿತು. ನಾನಿರುವುದು ಅಮೆರಿಕದಲ್ಲಿ, ವಾಹನಗಳು ಸಂಚರಿಸುವುದು ರಸ್ತೆಯ ಬಲಗಡೆಯಲ್ಲಿ. ನಾನೆಷ್ಟು ದಡ್ಡನೆಂದರೆ, ಮೂರು ಬಸ್ಸುಗಳನ್ನು ಮಿಸ್ ಮಾಡಿಕೊಂಡ ಕತೆಯನ್ನು ನನ್ನ ಮರಾಠೀ ಮಿತ್ರನಿಗೆ ಹೇಳಿ ಮತ್ತೆ ಅವನ ಗೇಲಿಗೆ ಒಳಗಾದೆ. ಏನು ಮಾಡಲಿ, ಅವನು ನನಗಿಂತ ಒಂದು ವರ್ಷ ಮುಂಚೆ ಬಂದುಬಿಟ್ಟಿದ್ದ.

## ನಾಡಿನಿಂದ ಬೀಡಿಗೆ

ಸರಿ, ನನ್ನ ಮಿತ್ರ ಹೇಳಿದ ಬಂಗಲೆ ನಿಜಕ್ಕೂ ಬೃಹದಾಕಾರದ ಬಂಗಲೆ. ಅದಕ್ಕೇ ಅದರಲ್ಲಿ ಅಷ್ಟೊಂದು ಅಪಾರ್ಟ್‌ಮೆಂಟುಗಳು. ರೆಂಟಲ್ ಆಫೀಸಿನಲ್ಲಿ ಒಂದು ಮುದುಕಿ ಕೂತಿತ್ತು. ನಾನು ಹೋದೊಡನೆಯೇ ಒಂದು ಅಪ್ಲಿಕೇಷನ್ ಫಾರಮ್ಮನ್ನು ಹೊರತೆಗೆದು 'ಒಂದು ರೂಮೋ, ಎರಡು ರೂಮೋ' ಎಂದು ಕೇಳುತ್ತ 'ಭರ್ತಿಮಾಡು' ಎಂದಿತು. ಅಲ್ಲಿ ನೋಡಿದರೆ, ಏಷ್ಯಾ ಮತ್ತು ಆಫ್ರಿಕಾ ಖಂಡಗಳ ಬೇರೆ ಬೇರೆ ದೇಶಗಳ ಅನೇಕ ವಿದ್ಯಾರ್ಥಿಗಳು ಅರ್ಜಿ ತುಂಬುತ್ತಾ ಕೂತಿದ್ದರು. ಆಗಸ್ಟ್ ಕೊನೆಯವಾರದಲ್ಲಿ ಬಂದಿಳಿಯುವ ಹಲವಾರು ಪರದೇಶಿಗಳನ್ನು ಕಂಡು ನನ್ನ ಮನಸ್ಸಿನಲ್ಲಿ ಕೊಂಚ ಧೈರ್ಯಬಂತು. ಮಿಸಸ್ ಮಿಲ್ಲರ್ ಹೇಳಿದ ಪ್ರಕಾರ, ಒಬ್ಬರೇ ಇರುವಂಥ 'ಎಫಿಷಿಯನ್ಸಿ'ಗಳು ಯಾವುದೂ ಖಾಲಿ ಇರಲಿಲ್ಲ, ಒಂದು ಮತ್ತು ಎರಡು ಬೆಡ್‌ರೂಮುಗಳ ಅಪಾರ್ಟ್‌ಮೆಂಟುಗಳು ಸಾಕಷ್ಟು ಖಾಲಿ ಇದ್ದವು. ಮಿಸಸ್ ಮಿಲ್ಲರ್ ಒಂದು ಉತ್ತಮ ಸಲಹೆ ಕೊಟ್ಟಳು. 'ಹುಡುಗಾ, ಕೇಳಿಲ್ಲಿ, ನಾಳೆ ಪರದೇಶೀ ವಿದ್ಯಾರ್ಥಿಗಳಿಗೆಲ್ಲ ಓರಿಯಂಟೇಷನ್ ಇದೆ (ಯಾವ ಮಾಯದಲ್ಲಿ ಎಲ್ಲ ವಿವರಗಳನ್ನು ಅವಳು ತಿಳಿದುಕೊಂಡಿದ್ದಳೋ, ದೇವರೇ ಬಲ್ಲ), ಅಲ್ಲಿ ನಿಮ್ಮ ದೇಶದ ಅನೇಕ ವಿದ್ಯಾರ್ಥಿಗಳು ಸಿಕ್ಕುತ್ತಾರೆ. ಅವರಲ್ಲಿ ಯಾರು ಯಾರು ಈ ಬಂಗಲೆಗೆ ಅರ್ಜಿ ತುಂಬಿದ್ದಾರೋ ತಿಳಿದುಕೊ ಒಬ್ಬ ಅಥವಾ ಇಬ್ಬರು ಜೊತೆಗಾರರನ್ನು ಗೊತ್ತುಮಾಡಿಕೊಂಡು ಇಲ್ಲಿ ಬಾ. ನಿಮಗೆ ಸರಿಹೋಗುವ ಅಪಾರ್ಟ್‌ಮೆಂಟ್ ಒಂದನ್ನು ನಿಮಗಾಗಿ ಕಾದಿರುಸುತ್ತೇನೆ' ಎನ್ನುತ್ತ ಹತ್ತಿರ ಬಂದು ಕಿವಿಯಲ್ಲಿ ಏನೋ ಮೆಲ್ಲಗೆ ಉಸುರಿದಳು. 'ಕೇಳು, ಹುಡುಗಾ, ಭಾರತೀಯ ವಿದ್ಯಾರ್ಥಿಗಳೆಂದರೆ ನನಗೆ ಬಲು ಇಷ್ಟ, ಅವರಷ್ಟಿಗೆ ಅವರು ಓದಿಕೊಂಡು ಶಾಲೆಗೆ ಹೋಗ್ತಿರ್ತಾರೆ, ಕಾಲಕಾಲಕ್ಕೆ ಬಾಡಿಗೆ

ತೆರುತ್ತಾರೆ, ಮನೆಯನ್ನು ಕೊಂಚ ಗಲೀಜು ಮಾಡುತ್ತಾರೆ ಅನ್ನುವುದನ್ನು ಬಿಟ್ಟರೆ, ಪಾರ್ಟೀ-ಗೀರ್ಟೀ ಅಂತ ಗಲಾಟೆ ಮಾಡುವುದಿಲ್ಲ. ಆದ್ದರಿಂದ ನಿನಗೇ ಒಂದು ಅಪಾರ್ಟ್‌ಮೆಂಟನ್ನು ಕಾದಿರುಸುತ್ತೇನೆ' ಎಂದು ಗುಟ್ಟಾಗಿ ಹೇಳಿ ಇತರರಿಗೆ ಕೇಳಿತೋ ಇಲ್ಲವೋ ಎಂಬಂತೆ ಅತ್ತಿತ್ತ ನೋಡಿದಳು. (ಆಕೆ ಎಲ್ಲ ದೇಶದವರಿಗೂ ಅದೇ ಮಾತುಗಳನ್ನಾಡುತ್ತಿದ್ದಳು ಎಂಬುದು ನಂತರ ತಿಳಿಯಿತು, ಬಿಡಿ.)

ಮಿಸಸ್ ಮಿಲ್ಲರ್ ಹೇಳಿದ್ದು ನಿಜವಾಯ್ತು, ಓರಿಯೆಂಟೇಷನ್ನಿನಲ್ಲಿ ನನಗಿಬ್ಬರು ಭಾರತೀಯ ವಿದ್ಯಾರ್ಥಿಗಳು ಜೊತೆಗೆ ಸಿಕ್ಕರು, ಅವರಲ್ಲೊಬ್ಬ ಯಥಾಪ್ರಕಾರ ಐ.ಐ.ಟಿ ಕನೆಕ್ಷನ್ನು! ಓರಿಯೆಂಟೇಶನ್ನಿನಲ್ಲಿದ್ದ ಎಲ್ಲ ಪರದೇಶಿಗಳಿಗೂ ಆಗಲೇ ನಮ್ಮ 'ಬಂಗಲೆ'ಯ ಬಗ್ಗೆ ಗೊತ್ತಿದ್ದನ್ನು ಕೇಳಿ ನನಗೆ ಕೊಂಚ ಆಶ್ಚರ್ಯವಾಯಿತು. ಆದರೆ ಅವರೆಲ್ಲ ಒಂದು ಗುಣವಾಚಕವನ್ನು ಉಪಯೋಗಿಸುವುದರ ಮೂಲಕ ಒಂದು ಸಣ್ಣ ಕರೆಕ್ಷನ್ ಮಾಡಿದ್ದರು. ಮಿಸಸ್ ಮಿಲ್ಲರ್ ಲ್ಯಾಂಡ್ ಲೇಡಿಯಾಗಿದ್ದ ಆ ಬೃಹತ್ ಬಂಗಲೆಯನ್ನು ಎಲ್ಲರೂ 'ಭೂತ್‌ಬಂಗ್ಲಾ' ಎಂಬ ಹೆಸರಿನಿಂದ ಗುರುತಿಸುತ್ತಿದ್ದರು. ನಮ್ಮ ಸೂಟ್‌ಕೇಸುಗಳನ್ನು ಲಿಫ್ಟ್‌ನಲ್ಲಿ ಇಟ್ಟಕೂಡಲೇ ಅರಿವಾಯಿತು, ಆ ಹೆಸರು ಎಷ್ಟು ಅನ್ವರ್ಥನಾಮ ಎಂದು. ಐದನೇ ಮಾಡಿ ಸೇರುವಹೊತ್ತಿಗೆ ಉಸಿರು ಕಟ್ಟುವಂಥ ಗಬ್ಬು ವಾಸನೆ, ಧಡ ಧಡ ಸದ್ದು ಮಾಡುತ್ತ ಕುಂಟುತ್ತ ಮೇಲೇರಿದ ಎಲಿವೇಟರ್ ತನ್ನ ಜೀವನದಲ್ಲಿ ಎಷ್ಟು ಬಾರಿ ದುರಸ್ತಿಯಾಗಿ ಇನ್ನೂ ಉಸಿರಾಡುತ್ತಿತ್ತೋ ದೇವರೇ ಬಲ್ಲ. ಎಲಿವೇಟರ್‌ನಿಂದ ಹೊರಬಂದೊಡನೆಯೇ ಅಪಾರ್ಟ್‌ಮೆಂಟುಗಳಿಂದ ಘಮಘಮ ಈರುಳ್ಳಿ, ಬೆಳ್ಳುಳ್ಳಿ, ಸೋಯ್ ಸಾಸ್, ಹಳೇ ಉಪ್ಪಿನಕಾಯಿ, ಮುಗ್ಗಲು ತೆಂಗಿನಕಾಯಿ ಮುಂತಾದ ಪರಿಚಿತ, ಮತ್ತೆಷ್ಟೋ ಅಪರಿಚಿತ ವಾಸನೆಗಳ ಕಮಟು, ಘಾಟುಗಳಿಂದ ತಲೆ ಸುತ್ತುವ ಅನುಭವ. 'ಸ್ವಾಮೀ ಭಗವಂತ ಕಾಪಾಡೋ' ಎಂದು ನಮಗೆ ದೊರೆತ ಅಪಾರ್ಟ್‌ಮೆಂಟನ್ನು ಪ್ರವೇಶಿಸಿದರೆ, ಎಲ್ಲಿ ನೋಡಿದರೂ ಧೂಳು. ಬಾಥ್ ರೂಂ ನೋಡಿದರೆ, ಸಿಂಕು ಟಬ್ಬುಗಳೆಲ್ಲ ಹಳದಿ ಬಣ್ಣ. ಹಾಸಿಗೆಗಳೋ ಅದನ್ನು ಬಣ್ಣಿಸದಿರುವುದೇ ಮೇಲು. ಮೂವರೂ ಕೂಡಿ ಕೈಲಾದಷ್ಟು ಶುಚಿಮಾಡಿಕೊಂಡು, ಹತ್ತಿರದಲ್ಲೇ ಇದ್ದ ಒಂದು ಅಂಗಡಿಯಿಂದ ಒಂದಿಷ್ಟು ಸುಗಂಧದ ತುಂತುರನ್ನು ಎರಚುವ ಸಾಧನಗಳನ್ನು ತಂದು ಮನೆಯ ತುಂಬಾ ಸಿಂಪಡಿಸಿ ಪುಣ್ಯಾಹ ಮಾಡಿದ್ದಾಯಿತು. ಎಲ್ಲಕ್ಕಿಂತ ಮುಖ್ಯವಾಗಿ ಹಾಸಿಗೆಗಳು ನಮ್ಮ ಚರ್ಮಗಳನ್ನು ಎಂದೆಂದಿಗೂ ಸೋಂಕದಂತೆ, ಪ್ಲ್ಯಾಸ್ಟಿಕ್ ಹಚ್ಚಡಗಳನ್ನು ತಂದು ಮ್ಯಾಟ್ರೆಸ್‌ಗಳ ಸುತ್ತಲೂ ಹೊದಿಸಿ ಸಿಕ್ಕಿಸಿ, ಸ್ಕಾಚ್ ಟೇಪಿನಿಂದ ಅಂಟಿಸಿ ಅದರ ಮೇಲೆ ಬೆಡ್‌ಶೀಟ್ ಹಾಕಿ ಭಗವಂತನನ್ನು ಪ್ರಾರ್ಥಿಸುತ್ತ ರಾಮಸ್ಕಂದಂ ಹೇಳಿ ಮಲಗಿದ ಎಷ್ಟೋ ಹೊತ್ತಿನ ಮೇಲೆ ಮೈಮೇಲೆಲ್ಲ ಏನೋ ಜುಳು ಜುಳು ಹರಿದಂತೆ ಭಾಸವಾಗಿ ಝಗ್ಗನೆದ್ದು ನೋಡಿದರೆ, ಆಗಲೇ

ಕತ್ತಲು ಹರಿದು ಕಿಟಕಿಯಿಂದ ಬಿಸಿಲು. ನಾನೆಲ್ಲಿ ಮಲಗಿದ್ದೇನೆ ಎಂಬ ಪ್ರಶ್ನೆ. ಹಾಸನವೇ, ಬೆಂಗಳೂರೇ, ಮುಂಬೈಯೇ? ಅಲ್ಲ, ಪಿಟ್ಸ್‌ಬರ್ಗ್ ಎಂದು ನಂಬಲು ಸ್ವಲ್ಪ ಹೊತ್ತಾಯಿತು!

ಮಾರನೆಯ ದಿನ ನನ್ನನ್ನು ನೋಡಲು ಬಂದ ನನ್ನ ಮಿತ್ರನ-ಮಿತ್ ಕ್ಷಮಿಸಿ, ನನಗೂ ನನ್ನ ಕೊಠಡಿ ಸಂಗಾತಿಗಳಿಗೂ ಶಹಭಾಸ್‌ಗಿರಿ ಕೊಟ್ಟ. 'ಹೆ ಗೈಸ್, ದಿಸ್ ಪ್ಲೇಸ್ ಇಸ್ ನಾಟ್ ಸೋ ಬ್ಯಾಡ್ ಆಫ್ಟರ್ ಆಲ್, ಯೂ ಷುಡ್ ಹ್ಯಾವ್ ಸೀನ್ ವ್ಹೇರ್ ಐ ಹ್ಯಾಡ್ ಟು ಸ್ಪೆಂಡ್ ಮೈ ಫಸ್ಟ್ ಸೆಮೆಸ್ಟರ್' ಎಂದು ಸಮಾಧಾನಪಡಿಸಿದ. ಆಗ ನಮಗೆ ತಿಳಿಯಿತು, ಅಂದಿನಿಂದಲೇ ನಾವು ಬೇರೊಂದು ಸ್ಥಳವನ್ನು ಹುಡುಕಲು ಶುರುಮಾಡಬೇಕೆಂದು. ಬಡದೇಶದ ಬಡಪಾಯಿ ಪರದೇಸಿ ವಿದ್ಯಾರ್ಥಿಗಳು ತೆರಬೇಕಾದ ಕರಗಳಲ್ಲಿ ಇದೂ ಒಂದು ಭೂತಬಂಗಲೆಯ ವಾಸ. ಇದು ಮೂರು ತಿಂಗಳೋ, ಆರು ತಿಂಗಳೋ ಅನ್ನುವುದು ಅವರವರ ಕರ್ಮಾವಶೇಷವನ್ನು ಅವಲಂಬಿಸಿರುತ್ತದೆ. ಆದ್ದರಿಂದ ಇದು ಬೀಡು ಅಂದರೆ ತಾತ್ಕಾಲಿಕವಾಗಿ ತಂಗಬೇಕಾದ ನಿವಾಸ.

ಕೆಲವೇ ದಿನಗಳಲ್ಲಿ ನಮ್ಮ ಮೂಗುಗಳು ಭಂಡಮೂಗುಗಳಾದವು, ಕಾರಿಡಾರುಗಳಲ್ಲಿ ಈರುಳ್ಳಿ-ಬೆಳ್ಳುಳ್ಳಿ, ಸಿಗರೇಟು, ರಾತ್ರಿಯ ಹೊತ್ತು ಅಮಲೇರಿದವರು ಮಾಡಿದ ವಾಂತಿ ಒಣಗಿ ಉಂಟಾದ ಹುಳಿವಾಸನೆಯೇ ಮುಂತಾದ ದುರ್ಗಂಧಗಳನ್ನು ಕಡೆಗಣಿಸುವಷ್ಟು ಭಂಡಗೆಟ್ಟೆವೋ ಅಥವಾ ಸಹಿಸಿಕೊಳ್ಳುವಷ್ಟು ಶಕ್ತಿಶಾಲಿಗಳಾದೆವೋ, ಅಂತು ನಮ್ಮ ಕರ್ಮಾವಶೇಷ ಕಳೆದು, ನಾವು ಮೂವರೂ ಬೇರೆ ಬೇರೆ ನಿವಾಸಗಳನ್ನು ಕಂಡುಕೊಂಡೆವು. ಋಣಾನುಬಂಧರೂಪೇಣ ಪಶು ಪತ್ನಿ ಸುತಾಲಯಾಃ, ಅಷ್ಟೇ ಅಲ್ಲಾ, ಅಪಾರ್ಟ್‌ಮೆಂಟಾಃ, ರೂಂ ಮೇಟಾಃ!

## ಬೀಡಿನಿಂದ ಗೂಡಿಗೆ

ನನಗೆ 'ಬೀಡಿ'ನಿಂದ 'ಗೂಡಿಗೆ' ಬಡ್ತಿಯೊಂದಿಗೆ ವರ್ಗಾವಣೆ ಆಯಿತು. ನನ್ನ ಕನ್ನಡ ಮಿತ್ರರೊಬ್ಬರು ಬಾಡಿಗೆಗಿದ್ದ ಕಟ್ಟಡದ-ಅದು, ಕೇವಲ ಆರು ಅಪಾರ್ಟ್‌ಮೆಂಟುಗಳಿರುವ ಹಳೆಯ ಮನೆ- ಅಲ್ಲಿ ಮೂರನೆಯಮಹಡಿಯಮೇಲೆ ನನಗೊಂದು ಪುಟ್ಟ ಮನೆ ಸಿಕ್ಕಿತ್ತು. ಅಲ್ಲಿ ನಾನು ಸರ್ವತಂತ್ರ-ಸ್ವತಂತ್ರ. ಮನೆಯ ಮಧ್ಯಭಾಗವನ್ನು ಬಿಟ್ಟರೆ ನನ್ನಂಥ ಹೆಚ್ಚು ಎತ್ತರವಿಲ್ಲದವರೂ ತಲೆತಗ್ಗಿಸಿಕೊಂಡೇ ನಡೆಯಬೇಕಾದಷ್ಟು ತಗ್ಗಿನಲ್ಲಿತ್ತು ಆ ಗೂಡಿನ ಮಾಡು, ತಲೆಯ ಮ್ಯಾಗಿನ ಸೂರು. ಅರೆ, ಇದೇನು, ಹಾಸಿಗೆ ಎಲ್ಲಿ? ಎಂದು ನೋಡಿದರೆ, ಅದು ಗುಪ್ತವಾಗಿತ್ತು. ಗೋಡೆಯೊಳಗೊಂದು ಬೀರುವಿನ ಹಾಗಿರುವ ಒಂದು ಸ್ಥಳದಲ್ಲಿ ಇಡೀ ಮಂಚವನ್ನೇ ಅನಾಮತ್ತಾಗಿ ಮೇಲೆತ್ತಿ ಗೋಡೆಯೊಳಕ್ಕೆ ನೂಕಿ ಬೀರುವಿನ ಬಾಗಿಲನ್ನು ಮುಚ್ಚಿಬಿಟ್ಟರೆ

ಹಾಸಿಗೆ ಮಾಯ! ಕೊಠಡಿಯ ಮಧ್ಯಭಾಗದಲ್ಲಿ ಎಷ್ಟೊಂದು ಸ್ಥಳವಿದೆ ಎನಿಸುವಷ್ಟು ವಿಸ್ತಾರ! ಭಲೆ ಭಲೆ. ಓಹೋ ಅಡುಗೆ ಮನೆ? ಅದೇನೂ ಬೇರೆಯಾಗಿರಲಿಲ್ಲ. ಒಂದು ಗೂಡು, ಅದರೊಳಗೆ ಎರಡು ಸಣ್ಣ ಗ್ಯಾಸಿನ ಒಲೆ, ಗಾಳಿಯನ್ನು ಹೊರದಬ್ಬುವ ಒಂದು ಫ್ಲ್ಯಾನು, ಒಲೆಯ ಪಕ್ಕ ಸಣ್ಣದಾದ ಒಂದು ಸಿಂಕು. ಬಾಗಿಲನ್ನು ಎಳೆದುಕೊಂಡರೆ, ಎಲ್ಲವನ್ನೂ ಮುಚ್ಚಿ ಅಡುಗೆ ಮನೆಯನ್ನೂ ಮಾಯಮಾಡಿಬಿಡಬಹುದು. ಸರಿ, ಬಚ್ಚಲು ಮನೆ? ಇದೊಂದು ಅದ್ಭುತ. ಒಬ್ಬ ತೆಳ್ಳನೆಯ ವ್ಯಕ್ತಿ ಮಾತ್ರ ಒಳಕ್ಕೆ ಪ್ರವೇಶಿಸಬಹುದು. ಸ್ವಲ್ಪ ರಭಸದಿಂದ ತಿರುಗಿದರೆ ಸಿಂಕಿಗೋ, ಕಮೋಡಿಗೋ ಅಥವಾ ಟಬ್ಬಿಗೋ ಡಿಕ್ಕಿ ಆಗುವುದು ಖಂಡಿತ. ಸೂರಿನ ಇಳಿಜಾರಿನಿಂದಾಗಿ ಬಚ್ಚಲುಮನೆಯಲ್ಲಿ ಎಲ್ಲಾ ಭಾಗದಲ್ಲೂ ತಲೆ ಎತ್ತಿ ನಿಲ್ಲುವಂತಿಲ್ಲ. ಸಿಂಕು, ಬೊಂಬೇ ಆಟದ ಸಿಂಕಿನಂತೆ ಪುಟ್ಟದಾಗಿತ್ತು. ಸ್ವಲ್ಪ ಹೆಚ್ಚುಕಮ್ಮಿ ಆದರೆ ಮುಕ್ಕಳಿಸಿ ಉಗಿದ ನೀರು ಸಿಂಕಿನಿಂದ ಹೊರಗೆ. ಆದರೆ ಈ ಬಚ್ಚಲಿನಲ್ಲೂ ಒಂದು ತುಂಬ ದೊಡ್ಡ ಅನುಕೂಲವಿತ್ತು. ಅದೇನೆಂದರೆ, ಕಮೋಡಿನ ಮೇಲೆ ಕುಳಿತರೆ ಎದುರಿಗೇ ಕನ್ನಡಿ ಮತ್ತು ಸಿಂಕು ಇದ್ದದ್ದರಿಂದ, ವಿಸರ್ಜನೆ, ದಂತಧಾವನ ಮತ್ತು ಮುಖಕ್ಷೌರ ಈ ಮೂರು ಕ್ರಿಯೆಗಳಲ್ಲಿ ಕೊನೆಯಪಕ್ಷ ಎರಡೆರಡನ್ನು ಏಕಕಾಲದಲ್ಲಿ ಮಾಡಿ ಸಮಯವನ್ನು ಮಿಗಿಸಿ ಅಲ್ಲಿಂದ ಟಬ್ಬಿನೊಳಕ್ಕೆ (ಜೋಪಾನವಾಗಿ) ಜಿಗಿದು, ಜಳಕವನ್ನೂ ಮಾಡಿಬಿಟ್ಟರೆ, ಬಚ್ಚಲುಮನೆಯ ಬಾಗಿಲನ್ನು ಮುಚ್ಚಿ, ಹೊರಗಿನ ವಿಶಾಲಪ್ರದೇಶವನ್ನು ಪ್ರವೇಶಿಸಿ ಹಾಸಿಗೆಯನ್ನು ಮಾಯಮಾಡಿದ ಸ್ಥಳದಲ್ಲಿ ಕುಳಿತು ಸಂಧ್ಯಾವಂದನೆ ಅಥವಾ ಯೋಗ ಮಾಡಲು ಮಹದಾನಂದಕರವಾದ ವಾತಾವರಣವಿತ್ತು ಆ ನನ್ನ ಪುಟ್ಟ ಗೂಡಿನಲ್ಲಿ! ಹೌದು, ಬೀಡಿನಿಂದ ಬಿಡುಗಡೆಯಾದಮೇಲೆ ನನಗೆ ದೊರೆತ ಗೂಡು ಅದು. ಆ ಗೂಡನ್ನು, ಅದರ ಮಾಡನ್ನೂ ನೋಡಿದಮೇಲೆಯೇ ನಮ್ಮ ದಾಸರು ಬರೆದಿರಬೇಕು, 'ಮಾಡು ಚಿಕ್ಕದಲ್ಲ ಮಾಡಿನ ಗೂಡು ಚಿಕ್ಕದಲ್ಲ' ಎಂಬ ಅರ್ಥಪೂರ್ಣವಾದ ದೇವರನಾಮವನ್ನು!

## ಬೀಡಾಯಿತು ಗೂಡಾಯಿತು ಉಸಿರಾಡು

ಸುಮಾರು ಆರು ತಿಂಗಳು ಕಳೆಯುವುದೂ ಬಹು ಕಷ್ಟವೆನಿಸಿತು ಆ ಗೂಡಿನಲ್ಲಿ. ಅಲ್ಲಿಂದ ಮುಂದೆ ನಾನು, ಮಲಗುವ ಕೋಣೆ ಇರುವ ಎರಡನೆಯ ಮಹಡಿಯಲ್ಲಿದ್ದ ಒಂದು ಅಪಾರ್ಟ್‌ಮೆಂಟನ್ನು ಮತ್ತೊಬ್ಬ ಮಿತ್ರನ-ಮಿತ್ರನೊಂದಿಗೆ ಸೇರಿಕೊಂಡೆ. (ಏಕೆ ಸ್ವಾಮಿ, ನಿಮಗೆ ನೇರವಾದ ಮಿತ್ರರು ಯಾರೂ ಇಲ್ಲವೇ, ಯಾವಾಗಲೂ ಮಿತ್ರನ-ಮಿತ್ರ ಅಥವಾ ಮಿತ್ರನ-ಮಿತ್ರ-ಮಿತ್ರ ಎಂದೇ ಹೇಳುತ್ತೀರಲ್ಲ, ಎನ್ನುತ್ತೀರೋ? ಧಾರಾಳವಾಗಿ ಅನ್ನಿ. ಇದೂ ಕೂಡ ನಮ್ಮ ಐ.ಐ.ಟಿ ಕನೆಕ್ಷನ್ನು. ಏನು ಮಾಡುವುದು, ಮಿತ್ರರೊಂದಿಗೆ ಮನೆ ಮಾಡಿದರೆ ಅವರು ಹೆಚ್ಚು ದಿನ ಮಿತ್ರರಾಗಿ ಉಳಿಯಲಾರರು. ಆದ್ದರಿಂದ ಮಿತ್ರರ-ಮಿತ್ರರಾದರೆ, ಅವರು ಮಿತ್ರರಾಗಿ ಉಳಿಯದಿದ್ದರೂ ಅಡ್ಡಿಯಿಲ್ಲ ಎಂಬುದು ನನ್ನ ತರ್ಕ!) ಈ ಮನೆಯಲ್ಲಿ ಎಲ್ಲಾ ಕೋಣೆಗಳೂ ವಿಶಾಲವಾಗಿದ್ದವು,

ಗಾಳಿ ಬೆಳಕಿಗೆ ಯಾವ ತೊಂದರೆಯೂ ಇರಲಿಲ್ಲ. ಆಹ, ಎಂಥ ಚೆಂದದ ಮನೆ ಎಂದು ಆಗಾಗ್ಗೆ ಮಿತ್ರರನ್ನೆಲ್ಲ ಕರೆದು ಗುಂಪುಭೋಜನ ಮಾಡುವ ದುರಭ್ಯಾಸ ಶುರುವಾಯಿತು. ಇದ್ದಕ್ಕಿದ್ದಂತೆ ವಾರಾಸ್ನದ ಮಿತ್ರರ ಸಂಖ್ಯೆ ಬೆಳೆಯುತ್ತಾ ಹೋಯಿತು!

ಎಲ್ಲ ಒಳ್ಳೆಯದರ ಜೊತೆ ಜೊತೆಗೇ ಕೆಲವು ಕೆಟ್ಟ ಫಲಿತಾಂಶಗಳೂ ಇರುತ್ತವಂತೆ. ಈ ಮನೆ ಕೊಂಚ ವಿಶಾಲವಾಗಿದ್ದುದು ನಮ್ಮ ಪ್ರಾಣಕ್ಕೇ ಬಂತು. ಯಾವಾಗ ನೋಡಿದರೂ ಒಂದಿಬ್ಬರು, ಕೆಲವೊಮ್ಮೆ ಮೂರು ನಾಲ್ಕು ಜನ, ಕೆಲಸ ಹುಡುಕುವ ನೆವದಲ್ಲಿ ಇತರರ ಮನೆಯಲ್ಲಿ ಝಾಂಡ ಹಾಕುವ ಅಥವಾ ಓದು ಮುಗಿದು ಉಂಡಾಡಿಗಳಂತೆ ಕಾಲಹರಣ ಮಾಡುತ್ತಿರುವ, ನಮ್ಮೂರಿನ ಮತ್ತು ಪರವೂರಿನ ಭಾರತೀಯ ವಿದ್ಯಾರ್ಥಿಗಳ ಕಾಟ ಶುರುವಾಯಿತು. ಅದರಲ್ಲಿ ಕೆಲವರು, ಮದುವೆ ಆದ ದಂಪತಿಗಳ ಒಬ್ಬಂಟಿ ಗೆಳೆಯರು ಮತ್ತು ತಮ್ಮೊಂದಿಗೆ ಇಟ್ಟುಕೊಳ್ಳಲು ಇಷ್ಟ ಪಡದೇ ತಮ್ಮ ಅಪಾರ್ಟ್‌ಮೆಂಟಿನಲ್ಲಿ ಜಾಗ ಕಮ್ಮಿ ಎಂಬ ಕಾರಣಕ್ಕಾಗಿ ಇತರರಿಂದ ಜಾರಿಸಲ್ಪಟ್ಟ ಅನಾಹ್ವಾನಿತ ಅತಿಥಿಗಳು. ಹೀಗೆ ಉಂಡಾಡಿಗಳು ಬಂದು ಝಾಂಡಾ ಊರಲು ಶುರುಮಾಡಿದ್ದಷ್ಟೇ ಅಲ್ಲ, ಅವರಿಂದ ನಾವು ಬಚ್ಚಲಿಗೆ ಕಾಯಬೇಕಾದ ಪರಿಸ್ಥಿತಿ ಬಂತು. (ಇದೂ ಕೂಡ ಐ.ಐ.ಟಿ ಕನೆಕ್ಷನ್ನೇ ಎಂಬುದನ್ನು ವಿಷಾದದೊಂದಿಗೆ ತಿಳಿಸಬೇಕಾಗಿದೆ.) ಇಂಥ ವ್ಯವಸ್ಥೆ ನಮ್ಮ ಓದಿಗೆ ಅಡ್ಡಿಬರುವಷ್ಟರವಟ್ಟಿಗೆ ಮುಂದುವರೆಯಿತು.

## ಬೀಡೂ ಬೇಡ ಗೂಡೂ ಬೇಡ ಜೋಡಿಯಾಗೋಣ!

ಆ ಕೂಡಲೇ, ನಾನು ಮತ್ತು ನನ್ನ ಕೊಠಡಿ–ಸಂಗಾತಿ, ಅದೇ ಮಿತ್ರನ–ಮಿತ್ರ ಒಂದು ನಿರ್ಧಾರಕ್ಕೆ ಬಂದೆವು. ನಾವಿಬ್ಬರೂ ಆದಷ್ಟು ಬೇಗ ಮದುವೆ ಆಗತಕ್ಕದ್ದು. (ಅಂದರೆ ನಮ್ಮಿಬ್ಬರಿಗೇ ಒಬ್ಬರನ್ನು ಮತ್ತೊಬ್ಬರಿಗೆ ಕೊಟ್ಟು ಮದುವೆ ಎಂಬ ಅಪಾರ್ಥ ಮಾಡಿಬಿಡಬೇಡಿ, ಸದ್ಯ! ಅವನು ಒಂದು ಹುಡುಗಿಯನ್ನು, ನಾನು ಮತ್ತೊಂದು ಹುಡುಗಿಯನ್ನು ಮದುವೆ ಆಗುವುದು ಎಂಬರ್ಥದಲ್ಲಿ ನಾನು ಹೇಳಿದ್ದು.) ಯಾರ್ಯಾರನ್ನೋ ಸಾಕುವ ಬದಲು ಹೆಂಡಂದಿರನ್ನೇ ಏಕೆ ಸಾಕಬಾರದು? ಹೆಂಡತಿಯಾದರೋ ಜೊತೆಗಾರಳು, ಒಳ್ಳೇ ಅಡುಗೆ ಮಾಡಿ ಬಡಿಸಲೂಬಹುದು, ಅವಳಿಗೆ ಅಡುಗೆ ಬಾರದಿದ್ದರೆ, ನಾವೇ ಕಲಿಸಬಹುದು. ಹೆಂಡತಿಯೊಬ್ಬಳು ಜೊತೆಯೊಳಗಿದ್ದರೆ ಎಂದು ಮನಸ್ಸಿನಲ್ಲೇ ಹಾಡಿಕೊಳ್ಳುತ್ತ, ಬಾಳಗೆಳತಿಯೊಬ್ಬಳು ಕಷ್ಟ ಸುಖಕ್ಕೆ ಭಾಗಿಯಾಗುತ್ತಾಳೆ ಮುಂತಾಗಿ ಯೋಚಿಸಿ ಇಬ್ಬರೂ ದಿಢೀರ್ ಎಂದು ಮದುವೆ ಆದೆವು (ಅದೇ, ಬೇರೆ ಬೇರೆ ಹುಡುಗಿಯರನ್ನು). ನಾನು ಭಾರತಕ್ಕೆ ಹೋಗಿ ಮಾಡಿದ ಕೆಲಸವನ್ನು ಅವನು ಇಲ್ಲೇ ಇದ್ದುಕೊಂಡು ಸಾಧಿಸಿದ.

ಹಾಗಾದರೆ, ನಾವೀಗ ಇರುವ ಮನೆ ಯಾರಿಗೆ ಎಂಬ ಪ್ರಶ್ನೆ ಬಂತು. ಯಾರ ಹೆಂಡತಿ ಮೊದಲು ಪಿಟ್ಸ್‌ಬರ್ಗಿಗೆ ಬರುತ್ತಾಳೋ ಅವರಿಗೆ ಈ ಮನೆ ಎಂದು ನಿರ್ಧಾರವಾಯಿತು. ಆ ಸಂದರ್ಭದಲ್ಲಿ ನನ್ನ ಮಿತ್ರನ–ಮಿತ್ರನ ಹೆಂಡತಿ ಬೇರೆ ಊರಿನಲ್ಲಿ ಪಿಎಚ್.ಡಿ, ಮಾಡುತ್ತಿದ್ದುದ್ದರಿಂದ ಅವಳು ನನ್ನ ಮಡದಿಗಿಂತ ಮುಂಚೆ ಬರುವುದು ಸಾಧ್ಯವಿರಲಿಲ್ಲ ಎಂಬ ಮಾತು ನನಗೆ ಮೊದಲೇ ಗೊತ್ತಿತ್ತು. ನನ್ನ ಮಡದಿ ಬಂದೇ ಬಂದಳು, ನನಗೇ ಮನೆ ಸಿಕ್ಕಿಯೂ ಬಿಟ್ಟಿತು, ನಾನು ಸಂಸಾರಿಯಾಗಿಬಿಟ್ಟೆ.

ಇದು, ನಾನು ನಾಡು ಬಿಟ್ಟುಬಂದು ಈ ನಾಡಿನಲ್ಲಿ ಮೊದಲು (ತಾತ್ಕಾಲಿಕವಾಗಿ) ಭೂತ್‌ಬಂಗಲೆಯಲ್ಲಿ ಬೀಡು ಬಿಟ್ಟು, ಅಲ್ಲಿಂದ ಮತ್ತೊಂದು ಗೂಡು ಸೇರಿ, ಆ ಗೂಡಿನಿಂದ ಮಾಡು ಸೇರಿ ಮದುವೆಯಾಗಿ ಹೆಂಡತಿಯೊಂದಿಗೆ ಜೋಡಿಯಾಗಿ ಲಿವ್ಡ್ ಹ್ಯಾಪ್ಪಿಲಿ ಎವರ್ ಆಫ್ಟರ್ ಮಾಡಿದ ಕಥೆ. ಮುಂದಿನ ಕಥೆ ಇನ್ಯಾವಾಗಲಾದರೋ ಹೇಳೋಣ. ನಾನಿನ್ನು ಬರಲಾ?



# ಜಗಳವೇ ದಾಂಪತ್ಯಕ್ಕೆ ಭೂಷಣಂ

## ನಳಿನಿ ಮೈಯ

ರವಿಯಾಕಾಶಕೆ ಭೂಷಣಂ
ರಜನಿಗಾ ಚಂದ್ರ ಭೂಷಣಂ
ಜಗಳವಿಲ್ಲದ ದಾಂಪತ್ಯ ಯಾರಿಗೆ ಭೂಷಣಂ
ಹರಹರಾ ಶ್ರೀ ಚನ್ನ ಸೋಮೇಶ್ವರ

ನೀವೇನೇ ಹೇಳಿ. ಎಲ್ಲರ ಮನೆಯ ದೋಸೆಯೂ ತೂತೇ. ಜಗಳವಾಡದ ದಂಪತಿಗಳೂ ಇದ್ದಾರೇಂದ್ರೆ ಅವರಲ್ಲಿ ಒಂದು ಗಂಡ ಹೆಣ್ಣು ಪೆಕ್ರು, ಇಲ್ಲ ಹೆಂಡತಿ ಬಾಯಿಗೆ ಬೀಗ ಹಾಕ್ಕೊಂಡು ಅನುಭವಿಸೋಳು. ಅಲ್ಲ ತೂತಿಲ್ಲದ ದೋಸೆ ಏನು ಚೆನ್ನ! ಅದಕ್ಕೇ ಹಿರಿಯರು ಹೇಳೋದು ಊಟಕ್ಕೆ ಉಪ್ಪಿನ ಕಾಯಿ ಇರೋಹಾಗೆ, ಚೆಲುವೆಯ ಮುಖದಲ್ಲಿ ದೃಷ್ಟಿ ಬೊಟ್ಟು ಇರೋ ಹಾಗೆ ದಾಂಪತ್ಯದಲ್ಲಿ ಅಷ್ಟಿಷ್ಟು ಜಗಳ ಇದ್ದರೇ ಚನ್ನ.

ಹಾಗೇ ನಮ್ಮ ದಾಂಪತ್ಯದಲ್ಲಿ ಊಟ, ಉಪ್ಪಿನ ಕಾಯಿ ಎರಡೂ ಇವೆ. ಆದರೆ ಒಂದೇ ಒಂದು ಎಡವಟ್ಟು. ನಮ್ಮ ಮನೆಯಲ್ಲಿ ಜಗಳವೇ ಊಟ; ಶಾಂತಿ, ಸೌಹಾರ್ದ ಅನ್ನೋದು ಉಪ್ಪಿನಕಾಯಿ! ನನ್ನವರು ಮದುವೆಯಾದಾಗಿಂದ್ಲೂ ಹೆಂಡತಿಯನ್ನು ಸತಾಯಿಸೋದೇ ನಿನ್ನ ಜೀವನದ ಪರಮೋದ್ದೇಶ ಅಂತ ದೇವರು ಕನಸಿನಲ್ಲಿ ಬಂದು ಹೇಳಿದ ಅನ್ನೋ ತರಾ ತಮ್ಮ ಕೈಲಾದಷ್ಟು ನನ್ನನ್ನು ಛೇಡಿಸುತ್ತಲೇ ಬಂದಿದ್ದಾರೆ. ನಾನೂ ಏನು ಕಡಿಮೆ ಇಲ್ಲ ಅನ್ನಿ. ನಮ್ಮ ತವರು ಮನೆಯಲ್ಲಿ ನಾನೇ ಹಿರಿಯಕ್ಕ. ತಂಗಿ, ತಮ್ಮಂದಿರ ಮೇಲೆಲ್ಲ ಹುಕುಂ ಚಲಾಯಿಸಿಕೊಂಡು ಬೆಳೆದವಳಿಗೆ ವೈಯಾರವಾಗಿ ಗಂಡ ಹೇಳಿದ್ದಕ್ಕೆಲ್ಲ ಮುಗುಳ್ನಗುತ್ತಾ ತಲೆದೂಗಿಸು ಅಂದ್ರೆ ಎಲ್ಲಾಗುತ್ತೆ?

ನಾವು ಸಂಸಾರ ಹೂಡಿದ ಹೊಸದರಲ್ಲೇ ಶುರುವಾಯಿತು ಇವರ ಛುಡಾವಣೆ. ಮನೆ ಎಲ್ಲ ಹರಡಿಕೊಂಡು ರಾಶಿ ರಾಶಿಯಾಗಿ ಬಿದ್ದ ಪುಸ್ತಕಗಳ ಸಂತೆ, ಬಟ್ಟೆಗಳು, ಪೇಪರ್ ಎಲ್ಲವನ್ನೂ ಕಣ್ಣರಳಿಸಿ ನೋಡುತ್ತಾ 'ನಳಿನಿ, ನೀನು ಕಾಲೇಜಿನಲ್ಲಿ ಯಾವ ಸಬ್ಜೆಕ್ಟ್ ಓದಿದ್ದು?' ಅಂತ ಏನೂ ಗೊತ್ತಿಲ್ಲದವರ ಹಾಗೆ ಪ್ರಶ್ನೆ ಹಾಕ್ತಾ ಇದ್ದರು. ನನಗೆ ಹೇಳ್ಕೊಳ್ಳೋಕೂ ಅವಮಾನ–'ನಾನು ಕಾಲೇಜಲ್ಲಿ ಹೋಮ್ ಸೈನ್ಸ್ ಓದಿದ್ದೂ' ಅಂತ. ಆದ್ರೆ ನೀವೇ ಹೇಳಿ. ಕಾಲೇಜಲ್ಲಿ ಓದಿದ್ದೆಲ್ಲ ವೇದ ವಾಕ್ಯ ಅಂತ ಯಾರು ತಾನೆ ಹೇಳ್ತಾರೆ? ಮೆಡಿಕಲ್ ಕಾಲೇಜಿಗೆ ಮಣ್ಣು ಹೊತ್ತು ಡಾಕ್ಟರಾದೋರು ತಮ್ಮ ದೊಡ್ಡ ಹೊಟ್ಟೆಯ ಮೇಲೆ ಕೈಯಾಡಿಸುತ್ತ 'ನೀವು ತೂಕ ಇಳಿಸಬೇಕು' ಅಂತ ರೋಗಿಗಳಿಗೆ ಬುದ್ಧಿವಾದ ಹೇಳಲ್ವಾ? ಹಾಗೇ ಇದೂ.

ಹೊಸ ಹೆಂಡತಿ ನಾನು ಕಷ್ಟ ಪಟ್ಟು ಅಡುಗೆ ಪುಸ್ತಕ ಓದ್ಕೊಂಡು ಬೆವರಿಳಿಸಿ ಅಡುಗೆ ಅಂತ ಏನೋ ಮಾಡ್‌ಹಾಕಿ, 'ರೀ, ಅಡುಗೆ ರೆಡಿ. ಈಗ್ಲೇ ಊಟ ಮಾಡೋಣ್ವಾ ಅಥವಾ ಸ್ವಲ್ಪ ತಡೀಬೇಕಾ?' ಅಂತ ಹೆಮ್ಮೆಯಿಂದ ಹೇಳಿದ್ರೆ ಇವರು ಏನು ಮಾಡ್ತಾ ಇದ್ದರು ಗೊತ್ತಾ? ಯಾವುದೋ ಪುಸ್ತಕದಲ್ಲಿ ಮುಖ ಹುದುಗಿಸಿ ಕೂತಿದ್ದವರು ಪುಸ್ತಕ ಮುಚ್ಚಿ ಅಡುಗೆ ಮನೆಯವರೆಗೂ ಸಿಂಹ ಗಾಂಭೀರ್ಯದಿಂದ ನಡೆದು ಬಂದು ಪಾತ್ರೆಗಳ ಮುಚ್ಚಳ ತೆರೆದು ಪರೀಕ್ಷಿಸಿ, ವಾಸನೆ ನೋಡಿ 'ಸ್ವಲ್ಪ ಅಲ್ಲ, ತುಂಬ ಹೊತ್ತು ತಡೆದು ಊಟ ಮಾಡ್ತೀನಿ. ಇನ್ನು ಹಸಿವೆ ತಡೆಯೋಕಾಗಲ್ಲ ಅನ್ನೋ ಪರಿಸ್ಥಿತಿ ಬಂದಾಗ ನೋಡೋಣ' ಅಂತ ಹೇಳಿದವರೇ ಜೋರಾಗಿ ನಗೋಕೆ ಶುರು ಮಾಡಿಬಿಡ್ತಾ ಇದ್ದರು. ಅಲ್ಲ ಹೊಸ ಹೆಂಡತಿಗೆ ಪ್ರೋತ್ಸಾಹ ಕೊಡಬೇಕು ಅಂತ ಅಷ್ಟೂ ಗೊತ್ತಾಗಬೇಡ್ವಾ ಇವರಿಗೆ!

ನನಗೋ ಊರೆಲ್ಲ ಫ್ರೆಂಡ್ಸು. ದಿನಾಗ್ಲೂ ಒಂದಷ್ಟು ಫೋನ್ ಕಾಲ್ಸ್ ಬರ್ತಾನೇ ಇರುತ್ತೆ. ಇಲ್ಲಾ ನಾನೇ ಮಾಡ್ತಾ ಇರ್ತೀನಿ. ಸರಿ. ಇವರಿಗೆ ತಮಾಷೆ ಮಾಡೋಕೆ ಇನ್ನೊಂದು ವಿಷಯ ಸಿಕ್ಕಿದ ಹಾಗಾಯ್ತು. ನಾನು ಯಾವಾಗ್ಲೂ ಫೋನ್ ಕೆಳಗಿಡುವಾಗ 'ಐ ವಿಲ್ ಲೆಟ್ ಯು ಗೋ' ಅಂತ ಹೇಳ್ತಾ ಇದ್ದಿದ್ದು ಕೇಳಿಸಿಕೊಂಡಿದ್ದಾರೆ ಇವರು. ಒಂದು ದಿನ ಆಫೀಸಿಂದ ಬಂದವರೇ ಸೀರಿಯಸ್ಸಾಗಿ 'ನಳಿನೀ' ಅಂತ ಕರೆದರು. ನಾನೂ ಏನೋ ಮುಖ್ಯ ಸಮಾಚಾರ ಇರಬಹುದು. ಏನು ಕಾರು ಗುದ್ದಿಸಿಕೊಂಡು ಬಂದರೋ. ಇಲ್ಲ ಇನ್ನೇನು ಎಡವಟ್ಟಾಯ್ತೋ ಅಂತ ಓಡಿ ಬಂದು 'ಏನು?' ಅಂದೆ ಗಾಬರಿಯಿಂದ. ಶ್ರೀಮದ್ಗಾಂಭೀರ್ಯದಿಂದ 'ಹೌ ಮನಿ ಪೀಪಲ್ ಡಿಡ್ ಯು ಲೆಟ್ ಗೋ ಟುಡೇ?' ಅಂತ ಕೇಳಿ ಆಮೇಲೆ ತಮ್ಮ ಜೋಕನ್ನು ತಾವೇ ಮೆಚ್ಚಿ ತುಂಟ ನಗು ನಗ್ತಾ ಇದ್ದಾರಲ್ಲ! ಏನು ಮಾಡ್ಬೇಕು ಇವರಿಗೆ!!! 'ನಿಮಗೆ ಯಾರೂ ಫೋನ್ ಮಾಡಲ್ವಲ್ಲಾ? ಅದಕ್ಕೇ ನಿಮಗೆ ಹೊಟ್ಟೆಕಿಚ್ಚು' ಅಂದೆ.

ನನಗೆ ಇಷ್ಟೆಲ್ಲಾ ತಮಾಷೆ ಮಾಡೋರು ಇವರೇನು ಎಲ್ಲ ದೋಷಗಳಿಂದ ಮುಕ್ತರಲ್ಲ. ನಾನ್ ಹೇಳ್ತೀನಿ ಕೇಳಿ. ಇವರಿಗೆ ಮೈಗೆ ಸ್ವಲ್ಪ ನೋವಾದರೂ ಗಾಬರಿಯೋ ಗಾಬರಿ! ಆದರಲ್ಲೂ ಮುಳ್ಳು ಚುಚ್ಚಿಬಿಟ್ಟರಂತೂ ದೇವರೇ ಗತಿ! ಒಂದ್ಸಾರಿ ಮನೆ ರಿಪೇರಿ ಮಾಡೋನು ಯಾರೋ ಬಂದಿದ್ದ. ಅವನ ಹತ್ತಿರ ಮಾತಾಡ್ತಾ ಹೊರಗೆ ನಿಂತಿದ್ದರು. ನಾನು ಒಳಗೆ ಏನೋ ಕೆಲಸದಲ್ಲಿದ್ದೆ. ಇದ್ದಕ್ಕಿದ್ದಂತೆ ಯಾರೋ ಆರ್ತ ನಾದದಿಂದ 'ನಳಿನೀ....' ಅಂತ ಕೂಗಿದ್ದು ಕೇಳಿ ಬೆಚ್ಚಿ ಬಿದ್ದೆ. ಧಡ ಬಡ ಓಡಿ ಬಂದು ಏನಾಯ್ತಪ್ಪಾ ಅಂತ ನೋಡಿದರೆ ಇವರು ಮನೆಯೊಳಗೆ ಬಂದು ಭಯಭೀತರಾಗಿ ನಿಂತಿದ್ದರು! 'ಏನಾಯ್ತು' ಅಂದೆ. ತಮ್ಮ ಕೈ ನೀಡಿ ನನಗೆ ತೋರಿಸಿದರು. ಎಲ್ಲೋ ಬೆರಳ ಮೂಲೆಯಲ್ಲಿ ಗುಂಡು ಸೂಜಿಯ ಮೊನೆಯಷ್ಟು ರಕ್ತ ಕಂಡ ಹಾಗಾಯಿತು. 'ಮು...ಮು...ಮುಳ್ಳು' ಅಂತ ಹೇಳಿ ಉಗುಳು ನುಂಗಿದರು. ಇಂತಹ ರಕ್ತಪಾತವನ್ನು ತಡೆದುಕೊಂಡು ನಾನು ಬದುಕಿ ಉಳಿದೇನೆ? ಎಂಬ ಪ್ರಶ್ನೆ ನಿಂತಿತ್ತು ಅವರ ಮನಸ್ಸಿನಲ್ಲಿ. 'ದೇವರು ನನಗೆ ಹೀಗೆ ಅನ್ಯಾಯ ಮಾಡಬಹುದೆ?' ಎಂಬ ಭಾವ ಮುಖದಲ್ಲಿ! ನಾನು ಸಮರ ಸನ್ನದ್ಧಳಾಗಿ ಸೂಜಿ ಎಂಬ ಆಯುಧವನ್ನು ತೆಗೆದು ಮುಳ್ಳು ತೆಗೆಯೋಕೆ ಶುರು ಮಾಡಿದೆ. ಇವರು 'ವೀರ ಯೋಧನಂತೆ' ಎದೆ ಸೆಟೆಸಿ, ಕೈ ನೀಡಿ, ಕಣ್ಣು ಮುಚ್ಚಿ, ಅವಡುಗಚ್ಚಿ ನಿಂತಿದ್ದರು. ಹೀಗೇ ಎರಡು ನಿಮಿಷ ಕಳೆದಿರಬಹುದು. ಬಾಗಿಲ ಬೆಲ್ ಶಬ್ದ ಮಾಡಿತು. ನಾನು ನನ್ನ ಘನತರವಾದ ಮಹಾ ಕಾರ್ಯವನ್ನು ಅಲ್ಲಿಗೇ ನಿಲ್ಲಿಸಿ ಹೋಗಿ ಬಾಗಿಲು ತೆಗೆದೆ. ನೋಡಿದರೆ ರಿಪೇರಿಯವನು ಅಲ್ಲೇ ನಿಂತಿದ್ದ! ಮುಳ್ಳು ಚುಚ್ಚಿದಾಕ್ಷಣ ಇವರು ಅವನನ್ನು ನಿಂತಲ್ಲೇ ಬಿಟ್ಟು ಒಳಗೆ ಓಡಿ ಬಂದಿದ್ದರು ಅಂತ ನನಗೆ ಆಗಲೇ ಗೊತ್ತಾಗಿದ್ದು!

'ಸರ್ಜರಿ ಹೇಗೆ ನಡೆಯುತ್ತಿದೆ?' ಅಂತ ಕೇಳಿದ ಅವನ ಮುಖದ ಮೇಲೆ ಮುಗುಳು ನಗೆ ಮಿಂಚುತ್ತಿತ್ತು.

'ಯಾವ ಸರ್ಜರಿ?' ಎಂದೆ.

'ಅದೇ. ಮುಳ್ಳು ತೆಗೆಯುವ ಸರ್ಜರಿ' ಅಂದ!

ಇವರ ಇನ್ನೊಂದು ದೋಷವೆಂದರೆ ಅಡುಗೆ ಮಾಡೋದು. ಇದನ್ನು ಓದಿದ ಹೆಂಗಸರೆಲ್ಲ ಏನು ಅನ್ಕೋತಾ ಇದ್ದಾರೆ ಅಂತ ನಂಗೊತ್ತು. ಅಯ್ಯೋ, ಅದೂ ಒಂದು ದೋಷವೆ? ಅದು ದೊಡ್ಡ ಗುಣ ಅಂತ. ನಾನು ಒಪ್ಪಲ್ಲ. ನನ್ನ ಕೇಳಿದರೆ ಅದೊಂದು ದೋಷವೇ. ಯಾಕೇಂತ ಹೇಳ್ತೀನಿ. ನಾವು ಒಂದು ಪಾರ್ಟಿ ಇಟ್ಕೊಂಡು ನಾಲ್ಕು ಜನರನ್ನ ಊಟಕ್ಕೆ ಕರೆದಾಗ ನಾನು ನನ್ನ ಎವರೆಡಿ ಅಡುಗೆ ಪುಸ್ತಕ ನೋಡಿಕೊಂಡು ಏನಾದರೂ ಒಂದಷ್ಟು ಭಕ್ಷ್ಯ, ಭೋಜ್ಯಗಳ ರಸ ಪಾಕ ಇಳಿಸಿರುತ್ತೀನಿ ಅಂತ ಇಟ್ಕೊಳ್ಳಿ.

ಇನ್ನೇನು ಎಲ್ಲ ಕೆಲಸ ಮುಗೀತು, ಕಿಚನ್ ಕ್ಲೀನ್ ಮಾಡಿದ್ದೂ ಆಯ್ತು ಅಂತ ಆಗುವಾಗ ಇವರು ಬಾಣಸಿಗನ ವೇಷ ಧರಿಸಿ ನುಗ್ಗಿಬಿಡ್ತಾರೆ ಅಡುಗೆ ಮನೆಗೆ. ಬಾಣಸಿಗನ ವೇಷ ಅಂದರೆ ಒಂದು ಹಳೆ ಪಂಚೆ, ಹರಿದ ಬನೀನು. 'ನಾನೂ ಏನಾದ್ರೂ ಮಾಡ್ತೀನಿ' ಅಂತಾರೆ.

'ಬೇಡಾ ರೀ ನಿಮಗೆ ಯಾಕೆ ಸುಮ್ಮನೆ ಕಷ್ಟ. ನಾನು ಎಲ್ಲ ಮಾಡಾಯ್ತು' ಅಂತ ನಾನಂದ್ರೆ 'ಕಷ್ಟ ಏನ್ಬಂತು. ಅಡುಗೆ ನನಗೆ ರಕ್ತಗತವಾಗಿ ಬಂದಿದ್ದು' ಅಂತಾರೆ. (ಉಡುಪಿ ಬ್ರಾಹ್ಮಣ ಎಂಬ ಕ್ವಾಲಿಫಿಕೇಶನ್ ಅಲ್ಲದೆ ಎಮ್. ಟಿ. ಆರ್. ಫ್ಯಾಮಿಲಿ ಎಂಬ ಡಬಲ್ ಕ್ವಾಲಿಫಿಕೇಶನ್ ಇವರಿಗೆ!)




...ತಲೆಗೆ ತೋಚಿದ್ದನ್ನೆಲ್ಲ ಹಾಕಿ ಭಟ್ಟಿ ಇಳಿಸಿದ ರಸಪಾಕ...'

'ಈಗ ತಾನೆ ಅಡಿಗೆ ಮುಗಿಸಿ ಎಲ್ಲ ಕ್ಲೀನ್ ಮಾಡಾಯ್ತು. ಮತ್ತೆ ನೀವು ಅಡುಗೆ ಮಾಡಿದ್ರೆ ಗಲೀಜಾಗುತ್ತೆ' ಅಂತ ಇನ್ನೊಂದು ಸಬೂಬು ಹೇಳ್ತೀನಿ.

'ನಾನು ಏನೇನು ಗಲೀಜು ಮಾಡ್ತೀನೋ ಅದನ್ನೆಲ್ಲ ನಾನೇ ಕ್ಲೀನ್ ಮಾಡ್ತೀನಿ' ಅಂತ ಅದಕ್ಕೂ ಪರಿಹಾರ ಸೂಚಿಸ್ತಾರೆ!

ಅಂತೂ ಇಂತೂ ಹಟ ಹಿಡಿದು ಏನಾದ್ರೂ ನಳಪಾಕ ತಯಾರಿಸಿಬಿಡ್ತಾರೆ. ಕೊನೆಗೆ

ಪಾರ್ಟಿಗೆ ಬಂದು ಊಟ ಮಾಡಿದವರೆಲ್ಲ ಇವರು ಮಾಡಿದ ಅಡುಗೆಯನ್ನ ಹೊಗಳಿದ್ದೇ ಹೊಗಳಿದ್ದು. 'ಇದನ್ನ ಹೇಗೆ ಮಾಡಿದ್ರಿ? ತುಂಬ ಚೆನ್ನಾಗಿದೆ' ಅಂತ ರೆಸಿಪಿ ಬೇರೆ ಕೇಳ್ತಾರೆ. ಅದು ಹೇಗೆ ಮಾಡಿದ್ದು ಅಂತ ನಾನು ಹೇಳೋದಿರಲಿ ಇವರಿಗೂ ಗೊತ್ತಿರಲ್ಲ! ಆ ಸಮಯಕ್ಕೆ ತಲೆಗೆ ತೋಚಿದ್ದನ್ನೆಲ್ಲ ಪಾತ್ರೆಗೆ ಸುರಿದು ಭಟ್ಟಿ ಇಳಿಸಿದ ರಸಪಾಕ ಅದು. ಆದರೂ ಅದು ಹೇಗೋ ಚೆನ್ನಾಗೇ ಬಂದಿರುತ್ತೆ. ಹೀಗೆ ನಂಗೆ ಎಷ್ಟು ಸಾರಿ ಮರ್ಯಾದೆ ಹೋಗಿದೆಯೋ!

ಮಕ್ಕಳಾದ ಮೇಲೆ ನಮ್ಮಿಬ್ಬರಲ್ಲಿ ಇನ್ನೊಂದು ತರಹ ಜಗಳ ಶುರುವಾಯಿತು– ಮಕ್ಕಳಲ್ಲಿ ಒಳ್ಳೆಯದು ಏನಿದ್ದರೂ ಅದು ನನ್ನಿಂದಲೇ ಬಂದಿದ್ದು ಅಂತ. ನಮ್ಮ ಮಗನಿಗೆ ಸಂಗೀತದಲ್ಲಿ ತುಂಬ ಆಸಕ್ತಿ ಹಾಗೂ ಪ್ರತಿಭೆ ಇದೆ. ಗಿಟಾರ್, ಪಿಯಾನೊ ಎಲ್ಲದರಲ್ಲೂ ಕೈಯಾಡಿಸಿ ಜನರ ಕೈಯಲ್ಲಿ 'ಭೇಷ್' ಅನ್ನಿಸಿಕೊಂಡಿದ್ದಾನೆ. ಹಾಗೆ ನಾನೂ ಅಲ್ಪಸ್ವಲ್ಪ ಹಾಡ್ತೀನಿ. ಚಿಕ್ಕಂದಿನಲ್ಲಿ ಸಂಗೀತದ ಮೇಷ್ಟ್ರ ಕೈಯಲ್ಲಿ ಬೈಸಿಕೊಂಡಿದ್ದೂ ಈಗಲೂ ನೆನಪಿದೆ. ಇಷ್ಟೆಲ್ಲಾ ಹಿನ್ನೆಲೆ ಇರುವಾಗ ನನ್ನ ಮಗನ ಸಂಗೀತದ ಪ್ರತಿಭೆ ನನ್ನಿಂದಲೇ ಬಂದಿದ್ದು ಅನ್ನೋದರಲ್ಲಿ ಸಂದೇಹವೇನು? ಆದರೆ ನನ್ನವರು ಕೇಳಬೇಕಲ್ಲ. ಅಲ್ಲವಂತೆ. ಅವನ ಸಂಗೀತದ ಅಭಿರುಚಿ ಅವರ ವಂಶದಿಂದ ಬಂದಿದ್ದಂತೆ. ಇವರು 'ಮಲಹರಿ' ಅಂದರೆ ಆಫ್ರಿಕಾದ ಒಂದು ಮರುಭೂಮಿ ಅಂದುಕೊಂಡಿರುವವರು! ಝುಂಪೆ ತಾಳಕ್ಕೂ ಚಂಪಾಕಲಿಗೂ ವ್ಯತ್ಯಾಸವೇ ಇಲ್ಲ ಅನ್ನುವವರು!

ಅವರ ಅಕ್ಕನ ಗಂಡನ ಕೊನೆಯ ತಮ್ಮನ ಹೆಂಡತಿ ಸಂಗೀತ ಕಲಿತಿದ್ದರಂತೆ! ಅಲ್ಲ, ಇವರ ಅಕ್ಕನ ಗಂಡನ ಕೊನೆಯ ತಮ್ಮನ ಹೆಂಡತಿ ಯಾವುದೋ ಓಬೀರಾಯನ ಕಾಲದಲ್ಲಿ ಸಂಗೀತ ಕಲಿತಿದ್ದಕ್ಕೂ ನಮ್ಮ ಮಗನ ಪ್ರತಿಭೆಗೂ ನಂಟು ಕಲ್ಪಿಸೋಕಾಗುತ್ತಾ? ನೀವೇ ಹೇಳಿ.

ಒಬ್ಬ ಮಗ ಶಾಂತ ಸ್ವಭಾವದವನು. ಅದು ಖಂಡಿತ ನನ್ನ ರಕ್ತದಿಂದ ಬಂದಿದ್ದು ಅಂತ ಹೇಳಿಕೊಳ್ಳೋಕೆ ನನಗಾಸೆ. ಆದರೆ ಹಾಗೆ ಹೇಳಿದರೆ ಇವರು ನಕ್ಕುಬಿಡುತ್ತಾರೆ! ನಾವು ಯಾವಾಗಲೂ ಜಗಳ ಆಡ್ತಾ ಇರೋದರಿಂದ ನಿನಗೆ ಶಾಂತಿ ಅನ್ನೋ ಪದದ ಅರ್ಥವೇ ಗೊತ್ತಿಲ್ಲ ಅಂದುಬಿಟ್ಟರೆ? ಅದಕ್ಕೇ ನಾನು ನಮ್ಮ ತಂದೆಯ ಶಾಂತ ಸ್ವಭಾವ ನನ್ನ ಮಗನಿಗೂ ಬಂದಿದೆ ಅಂತ ಹೇಳಿಕೊಂಡು ಬೀಗುತ್ತಿದ್ದೆ. ತಕ್ಷಣ ಬಂತು ಇವರ ಅಹವಾಲು. 'ಇಲ್ಲ. ಅವನು ಹುಟ್ಟೋಕೆ ಮುಂಚೆ ಒಂದು ವರ್ಷ ನಾನು ಮೆಡಿಟೇಶನ್ ಕ್ಲಾಸಿಗೆ ಹೋಗಿದ್ದೆ. ನೋಡು. ಅದರಿಂದ ಅವನು ಶಾಂತ ಸ್ವಭಾವದವನು' ಅಂದರು. ತಮಾಷೆ ಅಂದರೆ ಆ ಮೆಡಿಟೇಶನ್ ಕ್ಲಾಸು ಇವರ ಸ್ವಭಾವದ ಮೇಲೆ ಯಾವ ಪರಿಣಾಮವನ್ನೂ ಬೀರಿದಂತಿಲ್ಲ!

ಮೊದಲನೇ ಮಗು ಹುಟ್ಟಿದಾಗಂತೂ ಅವನ ಕಣ್ಣು ನನ್ನ ಹಾಗೆ, ಮೂಗು ನನ್ನ ಹಾಗೆ ಅಂತ ಎಷ್ಟು ಜಗಳ ಆಡಿದ್ದೆವೋ! ಈಗ ಮದುವೆಯಾಗಿ ಮೂವತ್ತೈದು ವರ್ಷಗಳ ಮೇಲಾಗಿದೆ. ಇನ್ನೂ ಜಗಳ ಆಡ್ತಾನೇ ಇದ್ದೀವಿ. ಜೀವನದಲ್ಲಿವಿರುದ್ಧಗಳು ಇದ್ದರೇ ಚೆನ್ನ ಅಲ್ಲವೆ? ಜಗಳ ಇರೋದ್ರಿಂದಲೇ ಶಾಂತಿ, ಸೌಹಾರ್ದದ ಬೆಲೆ ಗೊತ್ತಾಗುತ್ತೆ. ನನ್ನ ಅಡುಗೆ ಕೆಟ್ಟದಾಗಿರೋದ್ರಿಂದಲೇ ಇವರ ಅಡುಗೆಯ ರುಚಿಗೆ ಬೆಲೆ.... ಅಯ್ಯೋ, ಏನು? ನಾನೇ ಹಾಗೆಲ್ಲ ನನ್ನ ಅಡುಗೆ ಚೆನ್ನಾಗಿಲ್ಲ ಅಂತ ಹೇಳಿಕೊಂಡುಬಿಟ್ಟೆನಾ! ಛೆ, ಛೆ, ನೀವು ಅದನ್ನು ಮರೆತುಬಿಡಿ. ನಾನು ಹಾಗೆ ಹೇಳಲೇ ಇಲ್ಲ ಅಂದುಕೊಳ್ಳಿ.

ಏನೇ ಆಗಲಿ ನನ್ನ ಜೊತೆ ಇವರು, ಇವರ ಜೊತೆ ನಾನು ಹೀಗೇ ಜಗಳ ಆಡ್ತಾ ಚಿರ ಕಾಲ ಬಾಳುವಂತಾಗಲಿ ಅಂತಲೇ ನಾನು ದೇವರನ್ನು ಬೇಡಿಕೊಳ್ಳೋದು.



## ಚಾತುರ್ಮಾಸ್ಯ ಕಥೆ

ಹಂ. ಕ. ರಾಮಪ್ರಿಯನ್

ಹಲವು ಶತಮಾನಗಳ ಪೂರ್ವದಿ ಸಕಲಕ್ರೈಸ್ತರ ಪೂಜ್ಯಗುರುವರ ಗ್ರೆಗೊರಿನಾಮಕ ಪೋಪನಿದ್ದನು ಕೇಳಿರಾತನ ಕಥೆಯನು ॥೧॥

ನಮ್ಮ ಪಿಂತಣ ಪಂಡಿತರ್ಗಳು ಬರೆದ ಪಂಚಾಂಗಗಳ ತೆರದಲಿ ಗ್ರೆಗೊರಿ ಕ್ಯಾಲೆಂಡರನು ರಚಿಸಿದ ಜಗದೊಳೆಲ್ಲೆಡೆ ಬಳಕೆಗೆ ॥೨॥

ಅವನ ಕ್ಯಾಲೆಂಡರಿನ ವರುಷದ ಕೊನೆಯೊಳಿರುವಹ ನಾಲ್ಕು ತಿಂಗಳ ಹೆಸರುಗಳನವನೆಂತು ಕೊಟ್ಟನು ಎಂಬ ಸುದ್ದಿಯ ಕೇಳಿರೈ ॥೩॥

ಗ್ರೆಗೊರಿ ಸೂರ್ಯನ ನಡೆಯು ನೋಡುತ ರಚಿಸಿ ಕ್ಯಾಲೆಂಡರನು ನಂತರ 'ಮಾಸಗಳನೇನೆಂದು ಕರೆಯಲಿ?' ಎಂದು ಕುಳಿತನು ಚಿಂತೆಯೊಳ್ ॥೪॥

ಚಿಂತೆಯಿಂ ಸೊರಗಿದ್ದ ಗುರುವನು ಕುರಿತು ಶಿಷ್ಯೋತ್ತಮನು ಪೇಳ್ದನು 'ಇದಕೆ ಸುಲಭದ ದಾರಿಯೊಂದಿಹುದಿದ್ದರಪ್ಪಣೆ ಪೇಳ್ವೆನು' ॥೫॥

ಗುರುವಿನಾಣತಿ ಪಡೆದು ಶಿಷ್ಯನು ಮತ್ತೆ ಮಾತನ್ನಿಂತು ನುಡಿದನು 'ಜಗದ ಜೋಯಿಸವಾಕ್ಯಕೋವಿದರೆಲ್ಲರಂ ಕರೆದಿಲ್ಲಿಗೆ' ॥೬॥

ಹಿರಿಯ ಸಮ್ಮೇಳನವ ನಡೆಸಿರಿ, ಚರ್ಚೆಗಳನೇರ್ಪಡಿಸಿ ಹೇಳಿರಿ, 'ಒಳ್ಳೆ ಹೆಸರುಗಳೀವ ಜನರಿಗೆ ಪಾರಿತೋಷಕವೀವೆವು' ॥೭॥

ಶಿಷ್ಯನಾ ಹಿತವಚನ ಕೇಳುತ ಹೆಮ್ಮೆಯಿಂ ಗುರು ಹಿಗ್ಗಿ ಬೀಗುತ ಜಗದಿ ಘೋಷಣೆಮಾಡಿರೆನ್ನುತ ಗ್ರೆಗೊರಿಯಾಣತಿಯಿತ್ತನು ॥೮॥

ಗ್ರೆಗೊರಿಗುರುವಿನ ಶಿಷ್ಯವರ್ಗವು ಹೋಗಿ ಭೂಮಿಯ ಮೂಲೆಮೂಲೆಗು ರೋಮಿನೊಳು ಪಂಚಾಂಗಸಮ್ಮೇಳನವ ನಡೆಸುವೆವೆಂದರು ॥೯॥

'ಜೋಯಿಸರ್ಗಳೆ! ಪಂಡಿತರ್ಗಳೆ! ಬನ್ನಿರೆಲ್ಲರು ರೋಮನಗರಿಗೆ! ಮಾಸನಾಮಗಳನ್ನು ಕೊಡಿರೈ, ಪಡೆಯಿರೈ ಬಹುಮಾನವ!' ॥೧೦॥

ಇಂತು ಬಿಸಿಬಿಸಿಸುದ್ದಿ ಹರಡಿರೆ ಕಿಚ್ಚಿನಂದದಿ ಭುವಿಯೊಳೆಲ್ಲೆಡೆ, ಆಸೆಯಿಂದಲಿ ಪಯಣನಡೆಸುತ ಜನರು ಪೋದರು ರೋಮಿಗೆ ॥೧೧॥

ಅಂತೆಯೇ ಸಿರಿಕನ್ನಡಾಂಬೆಯ ಕುವರ ರಂಗಾಚಾರ್ಯಜೋಯಿಸ ಹಡಗನೇರುತ ಕಡಲದಾಟುತ ಪಯಣಗೈದನು ರೋಮಿಗೆ ॥೧೨॥

ರೋಮಿನೊಳು ಬಲುಜನರು ಕೂಡಿರೆ ತಳಿರುತೋರಣವಲ್ಲಿ ಬೆಳಗಿರೆ ಗ್ರೆಗೊರಿಯುದ್ಘಾಟನೆಯ ಮಾಡುತ ಜನರ ಕುರಿತಿಂತೆಂದನು ॥೧೩॥

'ಜೋಯಿಸರ್ಗಳೆ! ಪಂಡಿತರ್ಗಳೆ! ಭಾಷೆಗಳ ಬಲ್ಲಂಥ ಹಿರಿಯರೆ!! ನಿಮಗೆ ಸುಸ್ವಾಗತವ ಬಯಸುವೆ! ಧನ್ಯವಾದವ ಹೇಳುವೆ! ॥೧೪॥

ಯಾವ ಸಂಕೋಚವನು ಪಡದೆಯೆ ರೋಮ ನಿಮ್ಮಯ ಮನೆಯನಾಗಿಸಿ ಎನ್ನ ಅತಿಥಿಗಳಾಗಿ ಕಳೆಯಿರಿ ಒಂದು ವರುಷದ ಕಾಲವ' ॥೧೫॥

ಇದುವೆ ನಮ್ಮಯ ಚಕ್ರವರ್ತಿಯಗಸ್ಟಸನ ಹೆಸರುಳ್ಳ ತಿಂಗಳು, ಇದಕೆ ನಂತರ ಮಾಸಮಾಸದ ಕೊನೆಗಳಲಿ ಸಂಧಿಸುವೆವು ॥೧೬॥ ಪ್ರತಿ–

ತಿಂಗಳಿಗೆ ಯಾರುತ್ತಮೋತ್ತಮನಾಮಧೇಯವನೀವರೋ, ಅವ– ರೆನ್ನ ಕೈಯಿಂ ಪಾರಿತೋಷಕಗಳಿಸಿ ಕೀರ್ತಿಯ ಪಡೆವರು' ॥೧೭॥

ಇಂತು ಕಿವಿಗಿಂಪಾದ ಮಾತನು ಕೇಳಿ ಜೋಯಿಸಪಂಡಿತರ್ಗಳು ತಮಗೆ ತಂಗಲು ಕೊಟ್ಟ ಮನೆಗಳಲಿದ್ದು ವಿಶ್ರಮಿಸಿದ್ದರು ॥೧೮॥

'ನಮ್ಮಗಸ್ತ್ಯಮಹರ್ಷಿಹೆಸರನೆ ಕೊಟ್ಟರೀ ತಿಂಗಳಿಗೆ' ಎನ್ನುತ ಭಾರತಾಂಬೆಯ ಪುತ್ರಪಂಡಿತರೆಲ್ಲ ಸಂತಸಗೊಂಡರು ॥೧೯॥

ಮತ್ತೆ ಮುಂದಿನ ತಿಂಗಳಂತ್ಯದಿ ಪಂಡಿತರ್ಗಳು ಕೂಡಿ ಕುಳಿತರು, ಚಿಂತಿಸಿದರ್ ಅನ್ವರ್ಥನಾಮವನೆಂತು ಕೊಡುವೆವು ಮಾಸಕೆ ॥೨೦॥

ಇಂತು ಜನ ತಲೆಕೆರೆದು ಕುಳಿತಿರೆ ನಿಂತು ರಂಗಾಚಾರ್ಯಜೋಯಿಸನಿಂತು ಘಂಟಾಘೋಷದಿಂದಲಿ ನುಡಿದನಾ ಹಿರಿಸಭೆಯಲಿ ॥೨೧॥

'ಬೇಸಿಗೆಯು ಮುಗಿದಾಯಿತಾಗಲೆ, ಚಳಿಯು ಹೆಚ್ಚಾಗಿಹುದು ಜನಗಳೆ! ಆರುಬಟ್ಟೆಗಳನ್ನು ತೊಟ್ಟರು ಸಾಲದೆನಗದ ತಡೆಯಲು ॥೨೨॥

ಏಳುಬಟ್ಟೆಗಳನ್ನು ತೊಡುವುದು ಬೇಕು ಎನಗೀ ಚಳಿಯ ತಡೆಯಲು, ಆದ್ದರಿಂದೀ ತಿಂಗಳನು ನಾ ಕರೆವೆನ್ನೈ ಸಪ್ತಾಂಬರ!' ॥೨೩॥

ಇಂತು ರಂಗಾಚಾರ್ಯ ನುಡಿಯಲು ಸಭೆಯ ಜನ ಚಪ್ಪಾಳೆ ತಟ್ಟಲು, ಪೋಪ ಪೀತಾಂಬರವ ಹೊದಿಸುತ ಪಾರಿತೋಷಕವಿತ್ತನು ॥೨೪॥

ಅದರ ಮುಂದಿನ ತಿಂಗಳಲಿ ತಂಗಾಳಿಬೀಸುತಲಿರಲು ದಿನದಿನ, ಮರಗಳಲ್ಲಿದ್ದೆಲೆಗಳೆಲ್ಲವು ಹಸಿರುಬಣ್ಣವ ತೊರೆದವು ॥೨೫॥

ಹಲವು ಹಳದಿಯ ಬಣ್ಣಗೊಂಡಿರೆ, ಹಲವು ಕಿತ್ತಳೆಯಂತೆ ಬೆಳಗಿರೆ, ಹಲವು ರಾರಾಜಿಸುತಲಿದ್ದವು ಕೆಂಪುಬಣ್ಣವ ತಾಳುತ ॥೨೬॥

ತಿಂಗಳಿನ ಕೊನೆಯಲ್ಲಿ ಪಂಡಿತರೆಲ್ಲರೂ ಮತ್ತೊಮ್ಮೆ ಸಭೆಯಲಿ ಚಿಂತೆಯಲಿ ಮುಳುಗಿದ್ದು ಕುಳಿತರು ಹೆಸರ ಕೊಡುವುದಕರಿಯದೆ ॥೨೭॥

ಆಗ ರಂಗಾಚಾರ್ಯನೆಂದನು ಬೇಗ ತನ್ನಯ ದನಿಯನೇರಿಸಿ 'ಜನರೆ! ಸಪ್ತಾಂಬರಕು ಮಿಗಿಲಾಗಿಹುದು ಚಳಿಯೀ ಮಾಸದಿ ॥೨೮॥

ಆದ್ದರಿಂ ನಾನೆಂಟು ಬಟ್ಟೆಗಳನ್ನು ತೊಟ್ಟಿಹೆ ಚಳಿಯ ತಡೆಯಲು, ಇದಕೆ ಅಷ್ಟಾಂಬರವೆ ಒಳ್ಳೆಯ ಹೆಸರು ಎನ್ನುತಲೆಣಿಪೆನು' ॥೨೯॥

ಅದನು ಕೇಳಿದ ಸಭೆಯ ಜನಗಳು 'ಭಲರೆ! ಭಲರೇ!' ಎಂದು ಕೂಗಲು ಗ್ರೆಗೊರಿ ಬಹುಮಾನವನು ಕೊಟ್ಟನು ಮತ್ತೆ ರಂಗಾಚಾರ್ಯಗೆ ॥೩೦॥

ಅದರ ಮುಂದಿನ ತಿಂಗಳಲಿ ಹಿರಿಗಾಳಿಬೀಸುತಲಿರಲು ಮರಗಳ ಬಿಟ್ಟು ಬಿದ್ದವು ಬಣ್ಣಬಣ್ಣದ ಎಲೆಗಳೆಲ್ಲವು ಭೂಮಿಗೆ ॥೩೧॥

ಮತ್ತೆ ತಿಂಗಳಿನಂತ್ಯದಲಿ ಘನ ಪಂಡಿತರ್ಗಳು ಕೂಡಿ ಸಭೆಯಲಿ ನಾಮಕರಣದ ದಾರಿಕಾಣದೆ ಮೌನದಿಂ ಕುಳಿತಿದ್ದರು ॥೩೨॥

ಆಗ ರಂಗಾಚಾರ್ಯನೇಳುತ ಸಭೆಯನುದ್ದೇಶಿಸುತ ನುಡಿದನು 'ಪ್ರಬಲನಾಗಿಹ ಪವನದೇವನು ಚಳಿಯ ಹೆಚ್ಚಿಸುತಿರುವನು ॥೩೩॥

ಆದ್ದರಿಂ ನಾನೆಂಟು ಬಟ್ಟೆಗಳನ್ನು ತೊಟ್ಟರು ಚಳಿಯ ತಾಳೆನು ಅದರ ಮೇಲ್ಮತ್ತೊಂದ ತೊಟ್ಟರೆ ಚಳಿಯ ತಡೆಯಲು ಸಾಧ್ಯವು ॥೩೪॥

ಇಂಥಚಳಿತರುವಂಥ ತಿಂಗಳಿಗೆಂಥ ಹೆಸರನು ಕೊಡುವುದೆನ್ನುವ ಚಿಂತೆಯನು ಬಿಡಿ ಮಾನ್ಯರೇ! ಅದಕಿರಲಿ ನಾಮ ನವಾಂಬರ' ॥೩೫॥

ಮತ್ತೆ ರಂಗಾಚಾರ್ಯನಿಂದನ್ವರ್ಥನಾಮವ ಪಡೆಯೆ ತಿಂಗಳು ಗ್ರೆಗೊರಿ ಬಹುಮಾನವನು ಕೊಡುತಿರೆ ಸಭೆಯ ಜನ ಕೈತಟ್ಟಿದರ್ ॥೩೬॥

ಮತ್ತೆ ಮುಂದಿನ ತಿಂಗಳಲಿ ರವಿ ಮೇಲಕೇರಲು ಕಷ್ಟಪಡುತಿರೆ, ರಾತ್ರಿಯುದ್ದಕೆ ಬೆಳೆಯೆ, ಮರಗಳು ಬರಡುಬರಡಾಗಿದ್ದವು ॥೩೭॥

ವರುಣದೇವನು ಭೂಮಿದೇವಿಗೆ ಕೊಟ್ಟನೈ ಬಿಳಿಸೀರೆಯುಡುಗೆರೆ, ಹಸಿರುಕೆಂಪಿನ ತೋರಣಗಳನು ಕಟ್ಟಿದರು ರೋಮೀಯರು ॥೩೮॥

ಸುತ್ತಮುತ್ತಲ ಬೀದಿಬೀದಿಗು ದೀಪಗಳ ಹಚ್ಚಿಟ್ಟು ಬೆಳಗಿರೆ, ಕ್ರಿಸ್ತದೇವನ ಜನುಮದಿನವದ್ಧೂರಿಯಿಂದಲಿ ನಡೆಯಿತು ॥೩೯॥

ಇಂಥ ಹಬ್ಬದ ನಡುವೆ ಪಂಡಿತರೆಲ್ಲ ಕೂಡೆ ವಿಶೇಷಸಭೆಯಲಿ, ಗ್ರೆಗೊರಿ ಲ್ಯಾಟಿನ್ ಮಂತ್ರಘೋಷಣೆ ಮಾಡಿ ನಂತರ ನುಡಿದನು ॥೪೦॥

'ನಮ್ಮ ದೇವರಿಗೊಬ್ಬನೇ ಸುತನವನು ಹುಟ್ಟಿದ ತಿಂಗಳಿದುವೇ, ಇದಕೆ ಮೆಚ್ಚಿನ ಹೆಸರ ಕೊಡುವುದಕಾರು ಬಯಸುತ ಬರುವಿರಿ?' ॥೪೧॥

ಇಂತು ಗ್ರೆಗೊರಿಯ ಮಾತ ಕೇಳಿ–ಸಭೆಯ ಪಂಡಿತರೆಲ್ಲ ಸುಮ್ಮನೆ ತಿರುಗಿ ರಂಗಾಚಾರ್ಯವರ್ಯನ ಮೊಗವ ನೋಡುತಲಿದ್ದರು ॥೪೨॥

ಮತ್ತೆ ರಂಗಾಚಾರ್ಯನೆದ್ದನು ಸುತ್ತಮುತ್ತಲು ನೋಡಿ ನುಡಿದನು, 'ಅಂದವಾದೀ ಬಿಳಿಹಿಮವ ನಾ ಹಿಂದೆ ಕಂಡದ್ದಿಲ್ಲವು ॥೪೩॥

ತಂದರೂ ಕಣ್ಗಳಿಗೆ ಹಬ್ಬವ ತಾಳೆ ನಾನೀ ತಿಂಗಳಲ್ಲಿಹ ಚಳಿಯ ನವವಸ್ತ್ರಗಳ ಧರಿಸಿಯು, ಬೇಕು ಹತ್ತನೆ ಬಟ್ಟೆಯು ॥೪೪॥

ಹತ್ತು ಬಟ್ಟೆಗಳನ್ನು ತೊಟ್ಟಿರಲಾಗಲೆನ್ನೀ ನಡುಕ ನಿಲುವುದು, ಆದ್ದರಿಂದೀ ತಿಂಗಳಿಗೆ ನಾ ಕೊಡುವ ಹೆಸರು ದಶಾಂಬರ' ॥೪೫॥

ಇಂತು ರಂಗಾಚಾರ್ಯ ನುಡಿದು– ಸುಮ್ಮನಾಗಲು ಸಭೆಯ ಜನರು– ನಿಂತು ಕೈಚಪ್ಪಾಳೆತಟ್ಟುತಲ್ 'ಎಂಥ ಪಂಡಿತನ್' ಎಂದರು ॥೪೬॥

ಗ್ರೆಗೊರಿ ತನ್ನ ವಿಶೇಷಪೀಠವ ತೊರೆದು ರಂಗಾಚಾರ್ಯವರ್ಯನ ಬಳಿಗೆ ಬಂದಾತನಿಗೆ ಹೇಳಿದ 'ಭಲರೆ! ಭಲರೇ! ಭಲೆ! ಭಲೆ!' ॥೪೭॥

'ನಾಲ್ಕು ತಿಂಗಳುಗಳಿಗೆ ಸುಂದರನಾಮಕರಣವ ಮಾಡಿಕೊಟ್ಟಿರಿ, ನಿಮಗೆ ಮಿಗಿಲಾದಂಥ ಪಂಡಿತರನ್ನು ಜಗದೊಳು ಕಾಣೆನು ॥೪೮॥

ಇಂತೆ ನಮ್ಮೂರಲ್ಲೆ ತಂಗಿರಿ, ಬಹಳ ಬಹುಮಾನಗಳ ಪಡೆಯಿರಿ, ಬರುವ ತಿಂಗಳುಗಳಿಗೆ ಹೆಸರುಗಳನ್ನು ಕೊಟ್ಟುಪಕರಿಸಿರಿ' ॥೪೯॥

ಇದನು ರಂಗಾಚಾರ್ಯ ಕೇಳಿ–'ಗ್ರೆಗೊರಿವರ್ಯರೆ! ಧನ್ಯವಾದವು, ಆದರೀ ಪುರಿಯಲ್ಲಿ ಚಳಿಯನು ತಡೆವುದೆನಗತಿಕಷ್ಟವು ॥೫೦॥

ಆದ್ದರಿಂದೆನಗಪ್ಪಣೆಯ ಕೊಡಿ, ಪೋಪರೇ! ಹಿಂದಿರುಗಿ ಪೋಪೆನು, ಚಳಿಯು ಹೆಚ್ಚುತಲಿರಲು ನಿಲ್ಲಲಿ ರೋಮಿನಲಿ ಜನವೀರರು' ॥೫೧॥

ಸಪ್ತಾಂಬರವೂ ಅಷ್ಟಾಂಬರವೂ ಅಂತೆ ನವಾಂಬರ ಮತ್ತೆ ದಶಾಂಬರ
ರಂಗಾಚಾರ್ಯನು ಕೊಟ್ಟ ಹೆಸರುಗಳು ಪ್ರಸಿದ್ಧವಾಗಿವೆ ಜಗದಲ್ಲಿ!
ನದಿಹರಿಯುತಲಿರೆ ಗಿರಿಗಳು ನಿಂತಿರೆ ಕ್ಯಾಲೆಂಡರುಗಳು ಬಳಕೆಯೊಳಿರುತಿರೆ
ಈ ತಿಂಗಳುಗಳ ಹೆಸರುಗಳುಳಿವುವು ದಿನದಿನ ಜನಗಳ ನುಡಿಯಲ್ಲಿ ॥೫೨॥

ಟಿಪ್ಪಣಿಗಳು:

೧. ಭಾರತದಲ್ಲಿ ಹುಟ್ಟಿದ್ದ ಶೇಷಪ್ಪಯ್ಯರ್ ಎನ್ನುವಾತ ಇಂಗ್ಲೆಂಡಿನ ಏವಾನ್ ನದೀತೀರದಲ್ಲಿರುವ ಸ್ಟ್ರಾಟ್ಫರ್ಡ್ ಎಂಬಲ್ಲಿ ನೆಲೆಸಿ, ಜನಪ್ರಿಯವಾದ ಅನೇಕ ನಾಟಕಗಳನ್ನು ರಚಿಸಿ ಜಗದ್ವಿಖ್ಯಾತನಾದ ಶೇಕ್ಸ್‌ಪಿಯರ್ ಕವಿಯಾದಂತೆಯೂ ಮತ್ತು ಕರ್ಣಾಟಕದ ಜಿಗಣಿ ಎಂಬ ಊರಿನಿಂದ ಅಮೆರಿಕಾ ದೇಶಕ್ಕೆ ವಲಸೆ ಹೋಗಿ ನೆಲೆಸಿದ ಚಕ್ರಪಾಣಿ ಎಂಬಾತನು ಅಲ್ಲಿ ಜೆ. ಸಿ. ಪೆನ್ನಿ ಎಂಬ ಹೆಸರಿನ ಅನೇಕ ಹಿರಿಯಂಗಡಿಗಳ ಸರಣಿಯನ್ನು ಬೆಳೆಸಿಬಂದಂತೆಯೂ, ರಂಗಾಚಾರ್ಯನು ರೋಮಿಗೆ ಹೋಗಿದ್ದು ಕ್ಯಾಲೆಂಡರಿನ ತಿಂಗಳುಗಳಿಗೆ ಹೆಸರುಗಳನ್ನು ಕೊಟ್ಟನೆಂದು ಪೂರ್ವಕಥೆ.

೨. ಈ ಕವನದ ಮೊದಲನೆಯ ೫೧ ಪದ್ಯಗಳನ್ನು ಮಿಶ್ರನಡೆ ಆದಿತಾಳದಲ್ಲಿಯೂ ('ಧರಣಿಮಂಡಲಮಧ್ಯದೊಳಗೆ' ಎಂದು ಪ್ರಾರಂಭವಾಗುವ ಗೋವಿನ ಹಾಡಿನ ಧಾಟಿಯಲ್ಲಿ) ಮತ್ತು ೫೨ ನೆಯ ಪದ್ಯವನ್ನು ಚತುರಶ್ರನಡೆ ಆದಿತಾಳದಲ್ಲಿಯೂ (ನನಗಿಂತ ಒಳ್ಳೆಯ ಕಂಠವಿರುವವರು!) ಹಾಡಬಹುದು.

೩.ಜಗತ್ತಿನ ನಾನಾ ದೇಶಗಳಿಂದ ಬಂದ ಜನರಿಗೆಲ್ಲ ಈ ಕನ್ನಡ ಹೇಗೆ ಅರ್ಥವಾಯಿತು? ಗ್ರೆಗೊರಿ ಭಲರೇ! ಎಂದು ಹೇಗೆ ಹೇಳಿದನು? ಎಂದೆಲ್ಲ ಪ್ರಶ್ನೆಗಳು ಓದುಗರ ಮನಸ್ಸಿನಲ್ಲಿ ಬರಬಹುದು. ಇದಕ್ಕೆ ಉತ್ತರ – 'E. T'. ಚಲನಚಿತ್ರದಲ್ಲಿ ಬಾಹ್ಯಾಕಾಶದಿಂದ ಬಂದ E. T.ಗೆ ಇಂಗ್ಲಿಷ್ ಹೇಗೆ ಬರುತ್ತಿತ್ತೋ ಹಾಗೆ.

೪. ೫೨ನೆಯ ಪದ್ಯದಲ್ಲಿರುವ 'ನದಿಹರಿಯುತಲಿರೆ ಗಿರಿಗಳು ನಿಂತಿರೆ' ಎಂಬ ಪದಗುಚ್ಛವನ್ನು ಮಹಾಕವಿ ಶ್ರೀಮದ್ವಾಲ್ಮೀಕಿಯವರಿಗೆ ವಂದನಾಯುತಧನ್ಯವಾದಗಳನ್ನು ಸಮರ್ಪಿಸಿ ಅಳವಡಿಸಿಕೊಂಡಿದ್ದೇನೆ.

೫. ಈ ಕವನವನ್ನು ಮೊದಲು ಸಂಸ್ಕೃತದಲ್ಲಿ ರಚಿಸಿ ನಂತರ ಕನ್ನಡಕ್ಕೆ ಭಾಷಾಂತರಿಸಿದ್ದೇನೆ. ಸಂಸ್ಕೃತದಲ್ಲೇ ಓದಬೇಕೆಂದು ಇಷ್ಟಪಿರುವವರು ramapriyan@verizon.net ಎಂಬ ವಿಳಾಸಕ್ಕೆ e-mail ಅನ್ನು ಕಳುಹಿಸಬಹುದು.



# ನಗೆಗಾರ ನಯಸೇನ

## ಪ್ರಕಾಶ್ ಹೇಮಾವತಿ

ನಗೆ ಹಾಗೂ ವಿಡಂಬನೆ ಮಾನವನ ಸಹಜ ಸ್ವಭಾವಗಳು. ಬೇರೆಯವರ ಲೋಪ ದೋಷಗಳನ್ನು ಗುರುತಿಸಿ ಅವರನ್ನು ಅಪಹಾಸ್ಯ ಮಾಡುವುದು ಮಾನವನ ಹುಟ್ಟುಗುಣ. ತಪ್ಪು ಎಷ್ಟೇ ಪ್ರಮಾಣದ್ದಾದರೂ ಅದನ್ನು ಹಿಗ್ಗಿಸಿ, ಬೃಹದಾಕಾರವಾಗಿ ಚಿತ್ರಿಸಿ, ಆ ತಪ್ಪನ್ನು ಬಯಲಿಗೆಳೆಯುವವನೇ ವಿಡಂಬಕ. ಈ ವಿಡಂಬನೆ ವಿವಿಧ ರೂಪಗಳಲ್ಲಿ ವ್ಯಕ್ತವಾಗಬಹುದು. ಹಾಸ್ಯ, ಜಾಣ್ಮೆ, ನಯ, ಕಠೋರತೆ ಹೀಗೆ. ವಿಡಂಬಕನ ಧ್ಯೇಯ ಉದಾತ್ತವಾಗಿದ್ದರೆ, ಲೋಕದ ಡೊಂಕನ್ನು ತಿದ್ದುವುದೇ ವಿಡಂಬನೆಯ ಪರಮ ಗುರಿಯಾಗುತ್ತದೆ. ಇನ್ನು ವಿಡಂಬಕನು ಮನೋಧೈರ್ಯವಂತನೂ ಆಗಿದ್ದರೆ, ತನ್ನನ್ನೇ ಹಾಸ್ಯಕ್ಕೆ ಗುರಿಮಾಡಿಕೊಂಡು ಸಮಾಜವನ್ನೇ ತಿದ್ದಬಲ್ಲನು. ಇಂತಹ ವಿಡಂಬಕನಿಗೆ ಸಮಾಜದಲ್ಲಿ ಉನ್ನತ ಸ್ಥಾನವೂ ಇರುತ್ತದೆ. ಆತನ ವಿಡಂಬನೆಗೆ ಮನ್ನಣೆಯೂ ಇರುತ್ತದೆ.

ಆದರೆ ನಗೆ ಹಾಗಲ್ಲ. ನಗೆಗೆ ನೂರಾರು ಕಾರಣಗಳಿವೆ. ನಗೆ ನಗೆಗಾರನ ನಗಿಸುವ ಜಾಣ್ಮೆಯನ್ನು ಅವಲಂಬಿಸುತ್ತದೆ. ನಗೆಗಾರ ಪ್ರಪಂಚವನ್ನು ನೋಡುವ ದೃಷ್ಟಿಯೇ ಭಿನ್ನವಾಗಿರುತ್ತದೆ. ಸಾಮಾನ್ಯರಿಗೆ ತೋಚದ ಅನೇಕ ಸಂಗತಿಗಳು, ನಗೆಗಾರನಿಗೆ ಸ್ಫೂರ್ತಿಯಾಗಬಲ್ಲವು. ಮನುಷ್ಯ ಪರಿಪೂರ್ಣನಲ್ಲ. ಅಪೂರ್ಣತೆಯ ಆಗರವೇ ಅವನು. ಅವನು ಸೃಷ್ಟಿಸಿರುವ ಮತಧರ್ಮಗಳೂ ಸಹ ಅವನಂತೆಯೇ ಅಪೂರ್ಣ. ಆತ ತನ್ನ ಮತ ಎಷ್ಟೇ ಪರಿಪೂರ್ಣವೆಂದು ತಿಳಿದುಕೊಂಡಿದ್ದರೂ ಪರಮತೀಯರಿಗೆ ಅದರಲ್ಲಿ ಬಿರುಕು ಕಾಣಿಸುತ್ತದೆ. ಇದೇ ಅವರಿಗೆ ನಗೆ, ವಿಡಂಬನೆಗಳನ್ನು ಚಿಮ್ಮಿಸಲು ಕಾರಣವಾಗುತ್ತದೆ.

ನಯಸೇನನ ಹಾಸ್ಯ ವಿಡಂಬನೆಗಳಿಗೂ ಇದೇ ಜೀವಾಳ. ಜೈನಕವಿಯಾದ ಈತ ತನ್ನ ಮತವೇ ಶ್ರೇಷ್ಠವೆಂದು ಪ್ರತಿಪಾದಿಸುವ ಭರದಲ್ಲಿ ಸ್ವತಃ ಬ್ರಹ್ಮನನ್ನೇ ಗೇಲಿಮಾಡಲೂ ಹಿಂಜರಿಯುವುದಿಲ್ಲ. ಬ್ರಹ್ಮನ ನಾಭಿಯಲ್ಲಿ ಕಮಲ ಜನಿಸುವುದೇ ಆದರೆ ಆ ನಾಭಿಯಲ್ಲಿ ಎಷ್ಟೇಲ್ಲಾ ರಾಡಿ ಇದ್ದಿರಬಹುದೆಂದೂ ಸಹ ಹೇಳಿಬಿಡುತ್ತಾನೆ. ಆತನ ಸ್ವಂತ ವಿಚಾರಗಳು ಏನೇ ಇರಲಿ, ಇಲ್ಲಿ ಅದು ಮುಖ್ಯವಲ್ಲ. ಬದಲಿಗೆ ಹಾಸ್ಯ, ವಿಡಂಬನೆಗಳನ್ನು ಸೃಷ್ಟಿಸಿ, ಅವುಗಳನ್ನು ಸಮಯೋಚಿತವಾಗಿ ಬಳಸಿಕೊಂಡು, ತಾನು ಹೇಳಬೇಕೆಂದಿರುವುದನ್ನು ಎಷ್ಟು ಸ್ವಾರಸ್ಯವಾಗಿ ಹೇಳಿದ್ದಾನೆಂಬುದನ್ನು ಅವಲೋಕಿಸುವುದೇ ಇಲ್ಲಿನ ಉದ್ದೇಶ.

ನಯಸೇನ, ನಯಸೇನ ದೇವ, ನಯಸೇನ ಮುನೀಂದ್ರ, ಎಂದೆಲ್ಲಾ ತನ್ನನ್ನು ಕರೆದುಕೊಂಡಿರುವ ಕವಿ ನಯಸೇನ ಹುಟ್ಟಿ, ಬೆಳೆದು ಬಾಳಿದ ಊರು ಧಾರವಾಡ ಜಿಲ್ಲೆಯ ಮುಳಗುಂದ. ಬಹುಶಃ ಆತ ಸನ್ಯಾಸಿಯಾದದ್ದರಿಂದ ತನ್ನ ಬಂಧುಗಳ ಬಗ್ಗೆ ಏನನ್ನೂ ಹೇಳಿಕೊಂಡಿಲ್ಲ. ಜೈನ ಧರ್ಮ, ಜಿನ ತತ್ವಗಳೊಂದಿಗೆ ತರ್ಕ, ವ್ಯಾಕರಣ, ಛಂದಸ್ಸು ಮುಂತಾದ ವಿಷಯಗಳನ್ನೂ ಆಳವಾಗಿ ಅಭ್ಯಸಿಸಿದ್ದ ನಯಸೇನನಿಗೆ 'ಸುಕವಿನಿಕರಪಿಕಮಾಕಂದ', 'ವಾತ್ಸಲ್ಯರತ್ನಾಕರ', 'ಪದ್ಮನೀರಾಜಹಂಸ' ಮುಂತಾದ ಬಿರುದುಗಳಿದ್ದವು. ತನ್ನ ಗುರುಗಳಾದ ನರೇಂದ್ರಸೇನ ಮುನಿಗಳನ್ನು ಸಿದ್ಧಾಂತದಲ್ಲಿ ಜಿನಸೇನಾಚಾರ್ಯ, ಶಾಸ್ತ್ರ ಪಾಂಡಿತ್ಯದಲ್ಲಿ ಪೂಜ್ಯಪಾದ ಮುನಿ ಹಾಗೂ ಷಟ್ತರ್ಕದಲ್ಲಿ ಸಮಂತ ಭದ್ರ ಮುನಿಗಳಿಗೆ ಬಹಳ ಅಭಿಮಾನದಿಂದ ಹೋಲಿಸಿದ್ದಾನೆ.

ನಯಸೇನನು ತಾನು ಕನ್ನಡದಲ್ಲಿ ವ್ಯಾಕರಣದ ಬಗ್ಗೆ ಬರೆದಿರುವುದಾಗಿ ಹೇಳಿಕೊಂಡಿದ್ದರೂ, ಆ ಕೃತಿ ಲಭ್ಯವಾಗಿಲ್ಲ. ಆತನ ಲಭ್ಯವಾಗಿರುವ ಕೃತಿ 'ಧರ್ಮಾಮೃತ'ವನ್ನು ಶಾಲಿವಾಹನ ಶಕೆ ೧೦೩೭ರಲ್ಲಿ ಮುಗಿಸಿದುದಾಗಿ ಹೇಳಿಕೊಂಡಿರುವುದರಿಂದ ಈತ ಕ್ರಿ. ಶ. ೧೧೧೨ರ ಸುಮಾರಿನಲ್ಲಿ ಬಾಳಿದವನೆಂದು ಹೇಳಬಹುದಾಗಿದೆ. ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಪರಿಣಿತನಾಗಿದ್ದ ಈತ, 'ಕವಿಯಲ್ಲಿ ಸಾಕಷ್ಟು ಪ್ರತಿಭೆಯಿದ್ದರೆ, ಆತನ ಕಾವ್ಯ ಸರಳ, ಸಹಜ ಹಾಗೂ ಸ್ವಾರಸ್ಯವಾಗಿರುತ್ತದೆ. ಬರೀ ಪಾಂಡಿತ್ಯದಿಂದಲೇ ಕಾವ್ಯ ರಚಿಸಿದರೆ ಅದು ಸತ್ಕಾವ್ಯವಾಗಲಾರದು' ಎಂದು ಹೇಳಿದ್ದಾನೆ. ನಯಸೇನನ ಕನ್ನಡಾಭಿಮಾನವೂ ಅಪಾರ. ಸಂಸ್ಕೃತ ಬೆರೆಸಿ ಕನ್ನಡ ಸಾಹಿತ್ಯವನ್ನು ರಚಿಸುವ ಶೈಲಿಯ ಬಗ್ಗೆ ಆತನ ವಿಡಂಬನೆ ಅನನ್ಯವಾಗಿದೆ.

ಪೊಸಗನ್ನಡದಿಮ್ ವ್ಯಾವ
ರ್ಣಿಸುವೆಮ್ ಸತ್ಕೃತಿಯನೆಮ್ದು ಕನ್ನಡಮುಮ್ ಚಿಮ್

ತಿಸಿ ಕೂಡಲಾರ್‌-ಅದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಮ್‌ ಕವಿಯೇ ॥

ಬರೆಯುವುದಾದರೆ ಶುದ್ಧ ಕನ್ನಡದಲ್ಲಿ ಬರೆಯಿರಿ, ಸಂಸ್ಕೃತ ಸೇರಿಸುವುದು ತುಪ್ಪದಲ್ಲಿ ಎಣ್ಣೆ ಬೆರೆಸಿದಂತೆ ಅದು ಬಾಯಿಗೂ ರುಚಿಯಾಗದು, ಹೊಟ್ಟೆಗೂ ಹಿತವಲ್ಲ ಎನ್ನುವುದು ಆತನ ಉಪದೇಶ. ಎಲ್ಲರಿಗೂ ಅರ್ಥವಾಗುವಂತೆ ಅಚ್ಚ ಕನ್ನಡದಲ್ಲಿ ಸಾಧ್ಯವಾದಷ್ಟೂ ದೇಸೀ ಪದ ಬಳಕೆಯೊಡನೆ ತನ್ನ ವಿಚಾರಗಳನ್ನು ಮಂಡಿಸುವುದೇ ಆತನಗುರಿ.

ಈತ ರಚಿಸಿರುವ ಕೃತಿಗಳು ಧರ್ಮಾಮೃತ, ಬ್ರಹ್ಮಶಿವನ, ಸಮಯ ಪರೀಕ್ಷೆ, ವೃತ್ತ ವಿಲಾಸನ ಹಾಗೂ ಧರ್ಮ ಪರೀಕ್ಷೆ. ಜೈನ ಧರ್ಮವೇ ಶ್ರೇಷ್ಠವೆಂದು ಸಾರುವುದೇ ಈ ಎಲ್ಲಾ ಕೃತಿಗಳ ಮುಖ್ಯ ಉದ್ದೇಶ. ಅದರಿಂದಾಗಿ ನಿರ್ಭಯವಾಗಿ ಪರಮತಗಳ ವಿಡಂಬನೆಯನ್ನು ಧಾರಾಳವಾಗಿ ಬಳಸಿದ್ದಾನೆ. ಆ ವಿಡಂಬನೆಗಳ ಆಳದಲ್ಲಿ ಹಾಸ್ಯವೂ ಸೃಷ್ಟಿಯಾಗಿರುವುದು ಈತನ ಕೃತಿಗಳ ವೈಶಿಷ್ಟ್ಯ. ಕುತೂಹಲಕಾರಿ ಕಥೆಗಳನ್ನು ಹೇಳುತ್ತಲೇ ಸ್ವಧರ್ಮ ಪ್ರಶಂಸೆ ಹಾಗೂ ಪರಮತ ದೂಷಣೆಗಳನ್ನು ಲೀಲಾಜಾಲವಾಗಿ ನಿಭಾಯಿಸಿಬಿಡುತ್ತಾನೆ. ಆದರೆ ತನ್ನ ಪರಮತ ನಿಂದನೆಯ ಅಥವಾ ಖಂಡನೆಯ ಕಹಿ ಕಠೋರವಾಗದಂತೆ ಅದಕ್ಕೆ ನಗೆಯ ಲೇಪನ ಮಾಡಿಬಿಡುತ್ತಾನೆ. ಇದರಿಂದಾಗಿ ಈತ ಹೇಳುವುದನ್ನು ನಗೆಯಲ್ಲೇ ಸ್ವೀಕರಿಸಿದರೂ ಅದರ ಒಳಮರ್ಮ ಮನಸ್ಸಿಗೆ ತಟ್ಟದೇ ಇರುವುದಿಲ್ಲ. ಹೀಗೆ ನಗೆಯನ್ನು ಬಳಸಿಕೊಂಡು ತನ್ನ ವಿಚಾರಗಳನ್ನು ಮಂಡಿಸುವ ಈತನ ಕಾವ್ಯ ಅಥವಾ ಕಥನಾ ಶಕ್ತಿ ಅಸಾಧಾರಣವಾದದ್ದು.

ಈತನ ಧರ್ಮಾಮೃತದಲ್ಲಿ ಬರುವ ಉಪಕಥೆಗಳಲ್ಲಿ ಹಲವಾರು ಮಾದರಿಯ ವಿಡಂಬನೆಯ ಪ್ರಕಾರಗಳಿವೆ. ಇಲ್ಲಿ ಬರುವ ಪಾತ್ರಗಳ ವ್ಯಕ್ತಿತ್ವ ಅವರ ನಂಬಿಕೆಗಳೇ ಮುಂದೆ ಬರುವ ವಿಡಂಬನೆಗಳಿಗೆ ಪೀಠಿಕೆಯಾಗುತ್ತವೆ. ಇದರಲ್ಲಿನ ಒಂದು ಕಥೆಯಲ್ಲಿ ಬರುವ ದಯಾಮಿತ್ರ ಸೆಟ್ಟಿ ಎನ್ನುವವನು ದೊಡ್ಡ ವ್ಯಾಪಾರಿ. ಊರಿಂದೂರಿಗೆ ಹೋಗಿ ವ್ಯಾಪಾರ ಮಾಡುವವನು. ಈತ ಜೈನ ಮತೀಯ. ಅವನೊಮ್ಮೆ ಪರವೂರಿಗೆ ವ್ಯಾಪಾರಕ್ಕೆ ಹೋಗಲು ಅಣಿಯಾಗುತ್ತಿರುವಾಗ, ವಸುಭೂತಿ ಎನ್ನುವ ಪುಕ್ಕಲು ಮನಸ್ಸಿನ ಬ್ರಾಹ್ಮಣನಿಗೆ ಒಬ್ಬನೇ ಪ್ರಯಾಣಿಸಲು ಹೆದರಿಕೆ. ಆದರೂ ಹೇಗಾದರೂ ಮಾಡಿ ಗಂಗಾಸ್ನಾನ ಮಾಡಬೇಕೆಂಬ ಅಭೀಷ್ಟೆಯಿಂದ ತನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗುವಂತೆ ದಯಾಮಿತ್ರ ಸೆಟ್ಟಿಯನ್ನು ಕೇಳಿಕೊಳ್ಳುತ್ತಾನೆ. ಇಬ್ಬರೂ ಜೊತೆಯಲ್ಲಿ ಹೊರಡುತ್ತಾರೆ. ವಸುಭೂತಿಯ ಜನಿವಾರ, ಹಣೆಯ ಮೇಲಿರುವ ನಾಮ, ಬೆರಳ ದರ್ಭೆ, ಕೇಶಾಲಂಕಾರಗಳನ್ನು ನೋಡಿ ಸೆಟ್ಟಿಗೆ ಒಳಗೊಳಗೇ ನಗು. ವಸುಭೂತಿಗಾದರೋ

ಸೆಟ್ಟಿಯ 'ಧರ್ಮ ಶ್ರವಣಮಿಲ್ಲದೆ ಊಟ ಮಾಡೆನು' ಎನ್ನುವ ವ್ರತವನ್ನು ಕಂಡು ತಿರಸ್ಕಾರ ಮತ್ತು ಒಳಗೇ ಕುಚೋದ್ಯದ ನಗು. ಒಮ್ಮೆ ತನ್ನ ಕೀಟಲೆಯ ಸ್ವಭಾವದಿಂದಾಗಿ ತಡೆಯಲಾರದೆ ಕೇಳಿಯೇ ಬಿಡುತ್ತಾನೆ 'ಏನು ಸೆಟ್ಟರೆ, ವರ್ತಕರೆಂದರೆ ಜಾಣರೆಂದು ಕೇಳಿದ್ದೇನೆ. ಆದರೆ ನೀವೂ ಶ್ರವಣರ ಮಾತಿಗೆ ಮರುಳಾಗುವುದೇ? ಮಲಬದ್ಧರಾಗಿ, ಹಲ್ಲು ಉಜ್ಜದೆ, ಸ್ನಾನವನ್ನೂ ಸಹ ಮಾಡದ, ಜಾತಿಗೆಟ್ಟ ದಿಗಂಬರ ಜಿನಮುನಿಗಳನ್ನು ಹೇಗೆ ನಂಬುತ್ತೀರಾ?' ಎಂದು ತಿರಸ್ಕಾರದ ನಗೆ ಬೀರುತ್ತಾನೆ. ಸೆಟ್ಟಿ ಕೂಡಲೇ ಉತ್ತರವಿಯುವುದಿಲ್ಲ. ಈ ಬಡಗು ಬ್ರಾಹ್ಮಣನಿಗೆ ಸರಿಯಾಗಿ ಬುದ್ಧಿ ಕಲಿಸುತ್ತೇನೆಂದು ಮನಸ್ಸಿನಲ್ಲೇ ಅಂದುಕೊಳ್ಳುತ್ತಾನೆ.

ಹಲವು ದಿನಗಳಾದಮೇಲೆ ಸೆಟ್ಟಿ ತಾನು ಹೆಣೆಯುತ್ತಿರುವ ಬಲೆಗೆ ವಸುಭೂತಿಯನ್ನು ಸಿಕ್ಕಿಸಲು ಪೀಠಿಕೆಯೆಂಬಂತೆ, ಆತನನ್ನು ಬಹಳವಾಗಿ ಹೊಗಳಿ 'ಸ್ವಾಮಿ, ನನ್ನದೊಂದು ವ್ರತವಿದೆ. ಪ್ರತೀ ವರ್ಷ ನಡೆಸಿಕೊಂಡು ಬಂದಿದ್ದೇನೆ. ಸಾಮಾನ್ಯವಾಗಿ ಜಿನಮುನಿಗಳು ಈ ವ್ರತವನ್ನು ನಡೆಸಿಕೊಡುತ್ತಿದ್ದರು. ಆದರೆ ಈ ದಾರಿಯಲ್ಲಿ ಅವರಾರೂ ಇಲ್ಲ. ಕುಲಶೀಲಗಳಲ್ಲಿ ಮೇಲೆನಿಸಿ, ಭೂಲೋಕದಲ್ಲಿ ಸ್ತುತ್ಯರಾದ ಮಹಾನುಭಾವರಾದ ನೀವು ಜೊತೆಗಿರುವುದರಿಂದ, ನೀವೇ ಈ ವ್ರತವನ್ನು ನಡೆಸಿಕೊಡಬೇಕು. ವ್ರತ ಮುಗಿದ ಮೇಲೆ ನಿಮಗೆ ಸಾಕಷ್ಟು ದಕ್ಷಿಣೆಯನ್ನೂ ಕೊಡುತ್ತೇನೆ' ಎಂದು ಆಸೆ ತೋರಿಸುತ್ತಾನೆ. ಈ ಮಾತುಗಳಿಂದಉಬ್ಬಿಹೋದ ವಸುಭೂತಿ, ಹಣದ ದುರಾಸೆಗೆ, ತನ್ನಲ್ಲಿ ಸೆಟ್ಟಿಯ ಬಗ್ಗೆ ಇದ್ದ ತಿರಸ್ಕಾರ, ಕೀಟಲೆಯ ಮನೋಭಾವಗಳನ್ನು ಮರೆತು, ವ್ರತ ನಡೆಸಿಕೊಡಲು ಸಂತೋಷದಿಂದ ಒಪ್ಪುತ್ತಾನೆ. ಮಿಕ ಬಲೆಗೆ ಬೀಳುತ್ತಿರುವುದನ್ನು ಅರಿತ ಸೆಟ್ಟಿ, ಬಲೆಯನ್ನು ಇನ್ನೂ ಬಿಗಿಮಾಡಲು, ವ್ರತ ನಿಯಮಗಳನ್ನು ಬಹು ನಾಜೂಕಾಗಿ ವಿವರಿಸುತ್ತಾನೆ. 'ಇದೇನು ಅಂತಹ ಕಷ್ಟದ ವ್ರತವಲ್ಲ. ಮೊದಲನೆಯ ದಿನ ನೀವು ತಲೆಕೂದಲನ್ನು ತೆಗೆಸಬೇಕು. ದಿನವೂ ನಾವು ತುಪ್ಪದಲ್ಲಿ ಮಾಡುವ ಅಡುಗೆಯಲ್ಲಿ ಊಟ ಮಾಡಬೇಕು. ಊಟದ ಮಧ್ಯೆ ಏನನ್ನೂ ತಿನ್ನಬಾರದು. ನೀರನ್ನೂ ಸಹ ಕುಡಿಯಬಾರದು. ವ್ರತ ಸಾಂಗವಾಗಿ ಮುಗಿದ ನಂತರ ದಕ್ಷಿಣೆಯಿದೆ. ಮರೆಯಬಾರದು'. ವಸುಭೂತಿಗೆ ಇದನ್ನೆಲ್ಲ ಕೇಳಿ ಇನ್ನೂ ಸಂತೋಷವಾಗುತ್ತದೆ. ತಲೆಕೂದಲನ್ನು ತೆಗೆದರೆ ಏನಂತೆ, ಇಲ್ಲಿ ನನ್ನನ್ನು ಯಾರೂ ನೋಡುವವರಿಲ್ಲ. ದಿನವೂ ತುಪ್ಪದ ಊಟವಂತೆ. ಮಧ್ಯೆ ಏನನ್ನೂ ತಿನ್ನದಿದ್ದರೆ, ನೀರನ್ನು ಕುಡಿಯದಿದ್ದರೆ ಏನಾಯಿತು? ಸ್ವಲ್ಪ ದಿನ ತಾನೆ. ಮತ್ತೆ ದಕ್ಷಿಣೆಯೂ ಸಿಗುತ್ತದೆ, ಎಂದುಕೊಳ್ಳುತ್ತಾ ವ್ರತದ ಎಲ್ಲಾ ಕಟ್ಟಳೆಗಳಿಗೂ ಒಪ್ಪಿಕೊಂಡು ಬಿಡುತ್ತಾನೆ.

ವ್ರತದ ಮೊದಲನೇ ದಿನವೇ ಸೆಟ್ಟಿಯ ಸೇವಕರು ಬಂದು ವಸುಭೂತಿಯ ತಲೆಕೂದಲನ್ನು ಜೈನರ ಸಂಪ್ರದಾಯದನುಸಾರವಾಗಿ, ಸ್ವಲ್ಪ ಸ್ವಲ್ಪವೇ ಕೈಯಲ್ಲಿ

ಕೀಳಲು ಶುರು ಮಾಡುತ್ತಾರೆ. ಈ ಸಂಪ್ರದಾಯದ ಅರಿವಿಲ್ಲದಿದ್ದ ವಸುಭೂತಿಗೆ ಪ್ರಾಣ ಸಂಕಟ. ಒಂದು ಕಡೆ ತುಪ್ಪದ ಊಟದ, ದಕ್ಷಿಣೆಯ ಆಸೆ. ಇನ್ನೊಂದೆಡೆ ಕೈಯಿಂದ ಕೂದಲನ್ನು ಕೀಳುವಾಗ ಆಗುತ್ತಿರುವ ಯಮ ಯಾತನೆ. ಯಾರಿಗೆ ಹೇಳುವುದು. ಇದಾದ ನಂತರ ತುಪ್ಪದ ಊಟ. ಮೊದಲನೆ ದಿನ ಖುಷಿಯಾಗಿಯೇ ಊಟ ಮಾಡಿದ. ಎರಡನೇ ಮೂರನೇ ದಿನವೂ ಅದೇ ಊಟ. ನೀರೂ ಕುಡಿಯುವಂತಿಲ್ಲ. ತುಪ್ಪ ಅಜೀರ್ಣವಾಗುವುದಕ್ಕೆ ಶುರುವಾಯಿತು. ಜಿಡ್ಡಿನ ತೇಗೂ ಸಹ ಓಕರಿಕೆ ಬರಿಸುತ್ತಿದೆ. ಹೊಟ್ಟೆಯಲ್ಲೂ ತಳಮಳ. ವಸುಭೂತಿಯ ಸ್ಥಿತಿ ಚಿಂತಾಜನಕವಾದರೂ ಆತನ ಆಸೆಬುರುಕತನದಿಂದಾಗಿ ತನಗೇ ಸಂಕಷ್ಟ ತಂದುಕೊಂಡ ಆತನ ಬಗ್ಗೆ ಓದುಗರಿಗೆ ನಗೆ ಬರದೇ ಇರುವುದಿಲ್ಲ.

ದಿನ ಕಳೆದಂತೆ ವಸುಭೂತಿಯ ಸ್ಥಿತಿ ಅಸಹನೀಯವಾಗತೊಡಗಿತು. ತುಪ್ಪದ ಅಡುಗೆಯ ಔತಣ ನೆನೆಸಿಕೊಂಡರೇ ಓಕರಿಕೆ ಬರುವಂತಾಯಿತು. ತನಗೆ ಊಟ ಬಡಿಸುವುದೇ ಬೇಡವೆಂದು ಬೇಡಿಕೊಳ್ಳತೊಡಗಿದ. ಸೆಟ್ಟಿ ಇಷ್ಟಕ್ಕೇ ಬಿಡುತ್ತಾನೆಯೇ? 'ತಾವು ಗುಣವಂತರು. ಎಲ್ಲವನ್ನೂ ತಿಳಿದವರು. ವ್ರತವನ್ನು ನಿರಾತಂಕವಾಗಿ ನಡೆಸಿಕೊಡಬೇಕು. ನಮ್ಮಲ್ಲಿರುವ ಸಾಮಾನ್ಯ ಮುನಿಗಳೂ ಸಹ ಎಲ್ಲವನ್ನೂ ಸಹಿಸಿಕೊಳ್ಳುತ್ತಾರೆ. ಸತ್ಕುಲಜರಾದ ತಮ್ಮಂತಹವರಿಗೆ ಇದೇನು ಮಹಾ' ಎಂದು ವಸುಭೂತಿಯನ್ನು ಮಿಸುಕಾಡಲು ಬಿಡುವುದಿಲ್ಲ. ವಸುಭೂತಿಗಾದರೋ ನೀರಡಿಕೆಯನ್ನು ತಡೆಯಲಾಗದು. ನೀರಿಲ್ಲದೆ ದೇಹ ಒಣಗಿ ಇಡೀ ಮೈ ತುರಿಸಿಕೊಳ್ಳುವಂತಾಗುತ್ತದೆ. ಮೈಯನ್ನು ತುರಿಸಿಕೊಳ್ಳಲು ಎರಡೂ ಕೈಗಳು ಸಾಕಾಗದೆ ಕಾಲುಗಳಿಂದಲೂ ತುರಿಸಿಕೊಳ್ಳಲು ಶುರುಮಾಡಿದನಂತೆ! ಸಾಲದುದಕ್ಕೆ ನಾಲಗೆಯೂ ಒಣಗಿದೆ. ಮಾತನಾಡಲೂ ಕಷ್ಟವಾಗುತ್ತಿದೆ. ಬಾಯಾರಿಕೆಯನ್ನು ತಡೆಯಲಾಗದೆ ಬೇಸಿಗೆಯ ಕೋಣನಂತೆ ನಾಲಗೆಯನ್ನು ಹೊರಚಾಚಿ ಬಿದ್ದುಕೊಂಡನಂತೆ. ವಸುಭೂತಿಯ ಈ ಅವಸ್ಥೆಯನ್ನು ಕಂಡು ಓದುಗರಿಗೆ ಮರುಕವುಂಟಾದರೂ ನಗೆಯನ್ನು ತಡೆಯಲಾಗುವುದಿಲ್ಲ. ದಿನ ಕಳೆಯುವುದೇ ವಸುಭೂತಿಗೆ ದುಸ್ತರವಾಗುತ್ತದೆ. 'ಸಿಂಹವನ್ನು ಹಿಡಿದು ಸವಾರಿ ಮಾಡಬಹುದು. ಆದರೆ ಈ ವ್ರತವನ್ನು ತನ್ನಿಂದ ನೆಡೆಸುವುದು ಸಾಧ್ಯವಿಲ್ಲ' ಎಂದು ಅನಿಸುತ್ತದೆ. ಹಾಗೆಂದು ಸೆಟ್ಟಿಗೆ ಹೇಳಿಯೂ ಬಿಡುತ್ತಾನೆ. ಆಗ ಸೆಟ್ಟಿ ನಗುತ್ತಾ 'ಜಿನ ಮಹರ್ಷಿಗಳ ಮನೋಸ್ಥೈರ್ಯ, ಸಂಕಲ್ಪ, ಶಿಸ್ತುಗಳು ಎಲ್ಲರಿಗೂ ಬರುವುದಿಲ್ಲ. ಇಡೀ ಜೀವಮಾನ ಇಂತಹ ವ್ರತಗಳಲ್ಲಿ ತೊಡಗಿರುವವರನ್ನು ಅವಹೇಳನ ಮಾಡಬಾರದು' ಎಂದು ವಸುಭೂತಿಗೆ ತಿಳಿಸಿ ಹೇಳುತ್ತಾನೆ. ವಸುಭೂತಿಗೆ ತಿಳುವಳಿಕೆ ಬಂದು ಜೈನಧರ್ಮ ಸ್ವೀಕರಿಸುತ್ತಾನೆ.

ಈ ಸಣ್ಣ ಕಥೆಯ ಮೂಲಕ ಜೈನ ಮತದರ್ಶನವನ್ನು ಪರಿಚಯ ಮಾಡಿಸುವುದಲ್ಲದೆ, ಆ ಮತದ ಬಗ್ಗೆ ತಿರಸ್ಕಾರ ಇರುವವರ ಮರ್ಮಕ್ಕೇ ದಾಳಿಯಿಡುವ ನಯಸೇನನ ಜಾಣ್ಮೆ, ನಗೆ, ವಿಡಂಬನೆಗಳ ಮೂಲಕ ವ್ಯಕ್ತವಾಗುತ್ತದೆ. ಕೂದಲನ್ನು ಕೀಳುವಾಗಿನ ಪ್ರಸಂಗ, ನೀರಿಲ್ಲದೆ ಒದ್ದಾಡುವ ಸನ್ನಿವೇಶಗಳಂತೂ ಓದುಗರನ್ನು ನಗೆಗಡಲಲ್ಲಿ ಮುಳುಗಿಸಿಬಿಡುತ್ತವೆ. ಆದರೂ ನಯಸೇನನ ನಗೆಯಲ್ಲಿ ನಯವಿದೆ, ವೈವಿಧ್ಯತೆ ಇದೆ ಹಾಗೂ ಉತ್ತಮ ಕವಿಯ ಸಾರವೂ ಇದೆ. ಈತನ ನಗೆಯ ಶೈಲಿಯ ಬಗ್ಗೆ ಪ್ರಾಜ್ಞರು, 'ನಯಸೇನ ಓದುಗರನ್ನು ಎರೆಡು ಸಲ ನಗೆಗಡಲಲ್ಲಿ ಮುಳುಗಿಸಿ, ಒಮ್ಮೆ ಮಾತ್ರ ಮೇಲೆ ಎತ್ತುತ್ತಾನೆ' ಎಂದು ಹೇಳಿದ್ದಾರೆ. ಹೀಗೆಯೇ ಇನ್ನೂ ಹಲವಾರು ಸ್ವಾರಸ್ಯಕರ ಸಣ್ಣ ಕಥೆಗಳ ಮೂಲಕ ನಯಸೇನ ತನ್ನ ನಗೆಯ ಪಾಂಡಿತ್ಯವನ್ನು ಮೆರೆದಿದ್ದಾನೆ. ಈತನ ಬರವಣಿಗೆಯ ಇನ್ನೊಂದು ವಿಶೇಷವೆಂದರೆ, ತನ್ನ ಸುತ್ತಲಿನ ಸಮಾಜದ ಆಗುಹೋಗುಗಳ ಬಗ್ಗೆ ವಿಡಂಬನೆ ಮಾಡುತ್ತಲೇ ಆಗಿನ ಜನಜೀವನ, ಜೀವನದ ಮೌಲ್ಯ, ನಂಬಿಕೆಗಳನ್ನೂ ದಾಖಲಿಸಿದ್ದಾನೆ.

ನಮ್ಮ ಸಮಾಜದಲ್ಲಿ ಎಬಡರಿಗೇನೂ ಕೊರತೆಯಿಲ್ಲ. ನಯಸೇನನ ಕಾಲದಲ್ಲೂ ಅವರ ಹಾವಳಿ ಇದ್ದಿರಬೇಕು. ಅವರನ್ನಂತೂ ನಯಸೇಸ ವಿಧ ವಿಧ ರೀತಿಯಲ್ಲಿ ನಗೆಗೆ ಗುರಿ ಮಾಡುತ್ತಾನೆ. ಅವರ ವರ್ತನೆಯನ್ನು 'ಮಗಳಮ್ ಮಾರಿ ಮದುವೆಯಪ್ಪ, ಮಾ಼ಳಿಗೆಯಮ್ ಸುಟ್ಟು ಸೀತೆನೆಯಮ್ ತಿಮ್ಬ, ನಡುಮನೆಯೊಳ್ ಬಾವಿನಗುಳ್ವ, ತೊರೆಗೆ ನೀರಡಕುವ'ರೆಂದು ವಿಡಂಬಿಸುತ್ತಾನೆ. ನಯಸೇನನ ಹೋಲಿಕೆಗಳೇ ನಗೆಬರಿಸುತ್ತವೆ. ಎಬಡರ ವರ್ತನೆಯನ್ನು ನಯಸೇನ ವರ್ಣಿಸುವ ರೀತಿ ನೋಡಿ:

ಕಡುಮೂರ್ಖರ್ ಮಾಡಿದುದಮ್ ತಡೆಯದೆ ನಾಮ್  
ಮಾಳ್ಪೆನೆಮ್ದು ಮಸಗುವ ಪುರುಷಮ್  
ಕಡುಕಷ್ಟಮ್ ನಾಯ್ ಕಚ್ಚಿದೊ  
ದೊಡಗಚ್ಚಲ್ ಬೊಗುಳೆ ಬೊಗುಳಲೇಮ್ ಬಮ್ದಪುದೇ ॥

ನಗೆಗಾರ ಸ್ವತಃ ವಿಡಂಬಕನೂ ಆದರೆ ನಗೆ ಇನ್ನೂ ಹರಿತವಾಗುತ್ತದೆ. ಇದೇ ನಯಸೇನನ ಕಾವ್ಯದ ವೈಶಿಷ್ಟ್ಯ. ತಪ್ಪು ಎಲ್ಲಿಯೇ ಇರಲಿ ಅದನ್ನು ಬಯಲಿಗೆಳೆದು ನಗೆಯಾಡುವುದೇ ಆತನಪ್ರತಿಭೆ.

ಅನ್ವರ್ಥನಾಮಗಳೂ ಸಹ ನಯಸೇನನ ದೃಷ್ಟಿಯಿಂದ ತಪ್ಪಿಸಿಕೊಂಡಿಲ್ಲ. ದುಡ್ಡು ಕಾಸು ಇಲ್ಲದಿದ್ದರೂ 'ಸಂಪತ್' ಎಂದು ಹೆಸರಿಟ್ಟುಕೊಳ್ಳುವವರನ್ನು 'ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಮ್ಬುಮ್ತೆ, ತೊತ್ತಿನ ಪೆಸರ್ ಸಿರಿದೇವಿಯೆಮ್ಬುಮ್ತೆ, ಎಮ್ಮೆಯ

ಪೆಸರ್ ಮಹಾದೇವಿಯೆಮ್ಬುದ್ ಮಿ' ಎಂದೆಲ್ಲಾ ಹೋಲಿಸುತ್ತಾನೆ. ಈ ಹೋಲಿಕೆಗಳ ಮೊನಚಿನಲ್ಲಿ ನಗೆಯೂ ಇದೆ.

ಅತೀಬುದ್ಧಿವಂತರೆಂದುಕೊಂಡ ತಿಳಿಗೇಡಿಗಳ ಬಗ್ಗೆಯೂ ನಯಸೇನನಲ್ಲಿ ವಿಡಂಬನಾತ್ಮಕ ಹೋಲಿಕೆಗಳಿವೆ. 'ಕಳ್ಳರ ನುಡಿಯಮ್ ನಮ್ಬಿ ತಳಾರನಮ್ ಕೊಲ್ವ ಗ್ರಾಮಣಿಯುಮಮ್, ಮುಗಿಲ ನೀರಮ್ ನಮ್ಬಿ ದೋಣಿಯ ನೀರಮ್ ಕುಳುಮ್ಕುವ ಕೋಡಗಮುಮಮ್, ಸೋರೆಯ ಬಟ್ಟಲವ್ ನಮ್ಬಿ ಕಮ್ಬಿನ ಬಟ್ಟಲನೊಡೆವ ಗೊರವನುಮಮ್' ಎಂದೆಲ್ಲಾ ಅವರನ್ನು ಹೋಲಿಸುತ್ತಾನೆ. ಈ ಹೋಲಿಕೆಗಳಲ್ಲಿ ವಿಡಂಬನೆಯೂ ಇದೆ ಜೊತೆಗೆ ನವಿರಾದ ಹಾಸ್ಯವೂ ಇದೆ. ತಾನು ಹೇಳ ಬೇಕೆಂದಿರುವುದನ್ನೆಲ್ಲಾ ನಿಷ್ಠುರತೆಯಿಂದಾಗಲೀ, ಖಂಡನಾರೂಪದಲ್ಲಾಗಲೀ ಹೇಳದೆ ನವಿರಾದ ಹಾಸ್ಯ, ಮೊನಚಾದ ವಿಡಂಬನೆಗಳಲ್ಲೇ ಹೇಳಿ ಬಿಡುವ ನಯಸೇನನ ಪ್ರತಿಭೆ ಅಸಾಧರಣವಾದದ್ದು.

ಗಾದೆಗಳು ಜನಸಂಪತ್ತಿನ ಅನುಭವಗಳ ಸಾರ. ವೇದ ಸುಳ್ಳಾದರೂ ಗಾದೆ ಸುಳ್ಳಾಗುವುದಿಲ್ಲ ಎಂದೂ ಸಹ ಹೇಳುತ್ತಾರೆ. ತಾವು ಹೇಳಬೇಕೆಂದಿರುವ ಸಂಗತಿಗಳಿಗೆ ಸಾಕ್ಷಿಯಾಗಿಯೋ ಅಥವಾ ಅದಕ್ಕೆ ಗಂಭೀರತೆಯನ್ನು ತರಲೆಂದೋ ಗಾದೆಗಳನ್ನು ಉದ್ಧರಿಸುವುದು ಸಹಜ ಸ್ವಭಾವ. ಕವಿಗಳೂ ಇದಕ್ಕೆ ಹೊರತಾಗಿಲ್ಲ. ನಯಸೇನನೂ ತನ್ನ ಕೃತಿಗಳಲ್ಲಿ ಗಾದೆಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದಾನೆ. ಆದರೆ ಆತ ಬಳಸಿಕೊಂಡಿರುವ ಗಾದೆಗಳ ಅಂತರಾಳದಲ್ಲಿ ನಗೆಯ ಚಿಲುಮೆಯೂ ಇದೆ. ಹಲವು ಗಾದೆಗಳು ಆತನ ಶೈಲಿಗೆ ಎಷ್ಟು ಹೊಂದಿಕೊಳ್ಳುತ್ತವೆಂದರೆ, ಆತನೇ ಅವುಗಳನ್ನು ಸೃಷ್ಟಿಸಿದನೇನೋ ಎಂದೆನಿಸಿಬಿಡುತ್ತದೆ. ನಯಸೇನ ಬಳಸಿಕೊಂಡಿರುವ (ಸೃಷ್ಟಿಸಿರುವ?) ಕೆಲವು ಗಾದೆಗಳ ಉದಾಹರಣೆಯನ್ನು ನೋಡಿ:

ಕನಸಿನ ಬತ್ತಕ್ಕೆಚ್ಚೆತ್ತು ಗೋಣಿಯಾಮ್ತುಮ್ತೆ
ಸೆಟ್ಟಿಯ ಮಾತೊಳ್ಳಿದುವು, ಬಳ್ಳಮ್ ಕಿರಿದು
ಕೆರಪಮ್ ತಲೆಗೇರ್.ಇಸಿಕೊಳ್ವರೆ ಕೂರ್ತೊಡೆ?
ಕಳ್ಳನೊಕ್ಕಲಾದುದಿಲ್ಲ; ನಾಯಿ ಜಮ್ಗುಳಿಯಾದುದಿಲ್ಲ
ಕಡುವೆಸನಮ್ ಮಾಳ್ಪ ಸೊಸೆ ಮಾವನ ಮಮ್ಡೆಯಮ್
ಬೋಳಿಸಿದಳೆಮ್ಬುಮ್ತೆ

ಈ ಗಾದೆಗಳನ್ನು ಓದುತ್ತಿದ್ದಂತೆ ಮುಖದಲ್ಲಿ ನಗೆ ಸುಳಿಯದೆ ಇರದು. ನಯಸೇನ ಬರೆದದ್ದರೆಲ್ಲದರಲ್ಲಿಯೂ ವಿಡಂಬನೆಯ ಅಥವಾ ನಗೆಯ ಮೊನಚು ಇದ್ದೇ ಇರುತ್ತವೆ.

ಅವನು ಕೊಡುವ ಉಪಮಾನಗಳಲ್ಲಿಯೂ ನಗೆಯ ಛಾಯೆ ಇಲ್ಲದಿಲ್ಲ. ಇಲಿ ಹೋದರೆ ಹುಲಿ ಹೋಯಿತೆಂದು ಹೇಳುವ ಜನರ ಬಗ್ಗೆ,'ತವುಡಮ್ ತಿಮ್ದು ತುಯ್ಯಲನು-ಮ್ದಿನೆಮ್ಬರು, ನಾಯನೇರಿ ಕರಿಯನೇರಿದೆನೆಮ್ಬರು, ಬಾಳೆಲೆಯಮ್ ತಿಮ್ದು ಪಣ್ಣಮ್ ತಿಮ್ದೆನೆಮ್ಬರು' ಎಂದು ಹೇಳುವ ನಯಸೇನನು ಅಲ್ಪರ ಮೂಢತೆಯನ್ನು ಹೊರೆ-ಗೆಳೆಯುವಲ್ಲಿ ವಿಡಂಬನೆಯೂ ತಾನಾಗಿ ಮೂಡುತ್ತದೆ. ನಗೆಯ ಬಳುಕುವಿಕೆಯೂ ಚಾಟಿಯೇಟಿನಂತಿದೆ. ಸಮಾಜದ ಎಲ್ಲಾ ಅಂಕುಡೊಂಕುಗಳನ್ನು ಅವುಗಳ ಆದಿ ಆಳ ಅಂತ್ಯಗಳೊಂದಿಗೆ ಅರ್ಥಮಾಡಿಕೊಂಡಿದ್ದೂ ನಗೆಯ ಛಾಪಿನಲ್ಲೇ ಅವುಗಳನ್ನು ಬಯಲಿಗೆಳೆಯುವ ನಯಸೇನನ ಅಂತರಾಳದಲ್ಲಿರುವ ತತ್ವಜ್ಞಾನಿಯ ತಾಳ್ಮೆ ಬೆರಗುಗೊಳಿಸುತ್ತದೆ.

ಕಥೆಗಳ ಸಾಗರದಂತೆಯೇ ಇರುವ ನಯಸೇನನ 'ಧರ್ಮಾಮೃತ' ಕೃತಿ ಪ್ರಾಯಶಃ ಕನ್ನಡದ ಮೊದಲ ಹಾಸ್ಯದ ಕಥಾಸಂಕಲನವಿರಬೇಕು. ಇಲ್ಲಿನ ಕಥಾವಸ್ತುಗಳು ಅಸಾಧಾರಣ ಕಲ್ಪನಾಶಕ್ತಿಯ ಪ್ರತೀಕದಂತಿವೆ, ಅವಕ್ಕೆ ಚಿನ್ನದ ಮೆರುಗಿಟ್ಟಂತೆ ಹಾಸ್ಯ, ವಿಡಂಬನೆಗಳ ಮೂಲಕವೇ ಸ್ವಾರಸ್ಯವಾಗಿ ಆ ಕಥೆಗಳನ್ನು ಹೇಳುವ ನಯಸೇನನ ಕವಿಶಕ್ತಿ ಮೆಚ್ಚುವಂತದ್ದು. ಈತನನ್ನು 'ನಗೆಗಾರ ನಯಸೇನ' ಎಂದು ಕರೆದಿರುವುದು ಸಮರ್ಪಕವಾಗಿಯೇ ಇದೆ.



# ಕನ್ನಡದಲ್ಲಿ ಲಿಮರಿಕ್ಕುಗಳು

ಹಂ. ಕ. ಕೃಷ್ಣಪ್ರಿಯ

೧. ಲಿಮರಿಕ್ಕು ಇಂಗ್ಲೀಷಿನ ಒಂದು ಪದ್ಯ ಪ್ರಕಾರ ಮತ್ತು ಛಂದಸ್ಸು. ಗಂಭೀರವಾದ ವಿಷಯಗಳಿಗೆ ಹೊಂದದೆ, ಹಾಸ್ಯಕ್ಕೇ ಸೀಮಿತವಾದದ್ದು. ಇದರ ಚರಿತ್ರೆಯನ್ನು ಬರೆಯುವವರು, ಈ ಪ್ರಕಾರ ಶೇಕ್ಸ್‌ಪಿಯರನ ನಾಟಕಗಳಲ್ಲಿ ದೊರಕುತ್ತದೆ, ಇನ್ನೂ ಹಿಂದೆಯೇ ಇವನ್ನು ರಚಿಸುತ್ತಿದ್ದರು ಎಂದೆಲ್ಲಾ ಹೇಳುತ್ತಾರೆ. ಆದರೆ ಈಗಿನ ರೂಪದಲ್ಲಿ ಇದು ಬಳಕೆಗೆ ಬಂದಿದ್ದು ಮುಖ್ಯವಾಗಿ 'ಅನರ್ಥ' ಪದ್ಯಗಳ ಕವಿ ಎಡ್ವರ್ಡ್ ಲಿಯರ್ ಮೂಲಕ. ಇವನಲ್ಲದೆ ಇತರ ಇಂಗ್ಲಿಷಿನ ಹಾಸ್ಯಕವಿಗಳು, ಆಗ್ಡೆನ್ ನ್ಯಾಷ್‌ನಂತಹವರು ಲಿಮರಿಕ್ಕುಗಳನ್ನು ಬರೆದಿದ್ದಾರೆ. ಇತರ ಸಂದರ್ಭಗಳಲ್ಲಿ ಗಂಭೀರವಾದ ಪದ್ಯಗಳನ್ನು ಬರೆದು, ತಮ್ಮ ವಿರಾಮದ ವೇಳೆಯಲ್ಲಿ ಲಿಮರಿಕ್ಕುಗಳನ್ನು ಬರೆದಿರುವವರು ಇದ್ದಾರೆ. ಅನಾಮಿಕನ ಕಾಣಿಕೆಯೂ ಈ ಪ್ರಕಾರಕ್ಕೆ ಹೇರಳವಾಗಿದೆ.

ಇಂಗ್ಲಿಷಿನ ಲಿಮರಿಕ್ಕುಗಳಿಗೆ ಉದಾಹರಣೆಯಾಗಿ ಕೆಳಗಿನ ಎರಡು ಲಿಮರಿಕ್ಕುಗಳನ್ನು ನೋಡಿ.

There was an Old Man with a beard
Who said, 'It is just as I feared! -
Two Owls and a Hen,
Four Larks and a Wren,
Have all built their nests in my beard!'

There once was a man from Nantucket
Who kept all his cash in a bucket.

But his daughter, named Nan,
Ran away with a man
And as for the bucket, Nantucket .

ಇವುಗಳಲ್ಲಿ ಮೊದಲನೆಯದು ಎಡ್ವರ್ಡ್ ಲಿಯರನದು. ಎರಡನೆಯದರ ಕರ್ತೃ ಅನಾಮಿಕ. ಲಿಯರನ ಲಿಮರಿಕ್ಕುಗಳು ಮಕ್ಕಳು ಕೇಳಬಹುದಾದ, ಓದಬಹುದಾದ ಮುಗ್ಧ ಪದ್ಯಗಳು. ಇವುಗಳಲ್ಲಿ ಅವನು ಅನೇಕ ಸಲ ಮೊದಲ ಸಾಲಿನಲ್ಲಿ ಬರುವ ಕಡೆಯ ಪದವನ್ನೇ ಕಡೆಯ ಸಾಲಿನ ಕಡೆಯ ಪದವಾಗಿಯೂ ಬಳಸಿಕೊಳ್ಳುತ್ತಾನೆ. ಇವುಗಳ ಸ್ವಾರಸ್ಯ ಇರುವುದು, ಅವನು ಕಲ್ಪಿಸುವ ವಿಚಿತ್ರವಾದ ಚಿತ್ರಗಳಲ್ಲಿ. ಅವನು ತನ್ನ ಲಿಮರಿಕ್ಕುಗಳಿಗೆ ತಾನೇ ರೇಖಾಚಿತ್ರಗಳನ್ನೂ ಬರೆಯುತ್ತಿದ್ದ.

ಎರಡನೆಯದು ವಯಸ್ಕರ ಲಿಮರಿಕ್ಕಿಗೆ ಒಂದು ಉದಾಹರಣೆ ಎಂದು ಹೇಳಬಹುದು. ಈ ಜಾತಿಯ ಲಿಮರಿಕ್ಕುಗಳಲ್ಲಿ ಅನೇಕವು ಅಶ್ಲೀಲವಾದವು. ಇವುಗಳು ಸಾಮಾನ್ಯವಾಗಿ ಒಂದು ಚಿಕ್ಕ ಕತೆ ಹೇಳುತ್ತವೆ. ಮೊದಲ ಸಾಲು ಕತೆಯ ಪಾತ್ರಪರಿಚಯ ಮಾಡಿಕೊಡುತ್ತದೆ. ಎರಡನೆಯ ಸಾಲು ಅದಕ್ಕೆ ಸ್ವಲ್ಪ ವಿವರ ಸೇರಿಸುತ್ತದೆ. ಮೂರನೆಯ ಮತ್ತು ನಾಲ್ಕನೆಯ ಸಾಲುಗಳು ಮೊದಲ ಎರಡು ಸಾಲುಗಳ ಆಧಾರದ ಮೇಲೆ ಕತೆ ಮುಂದುವರೆಸುತ್ತವೆ, ಐದನೆಯ ಸಾಲಿಗಾಗಿ ಆಸಕ್ತಿ ಕೆರಳಿಸುತ್ತವೆ. ಎಲ್ಲಕ್ಕಿಂತ ಮುಖ್ಯವಾದ ಕಡೆಯ ಸಾಲು, ಮತ್ತೆ ಮೊದಲ ಎರಡು ಸಾಲುಗಳಂತೆ ನಡೆದು ಲಿಮರಿಕ್ಕನ್ನು ಸ್ವಾರಸ್ಯಕರವಾದ ರೀತಿಯಲ್ಲಿ ಮುಗಿಸುತ್ತದೆ. ಇತರ ಎಲ್ಲ ಸಾಲುಗಳು ಈ ಸಾಲಿಗೆ ಸಿದ್ಧತೆ ಎಂದಿಟ್ಟುಕೊಳ್ಳಬಹುದು. ಮೇಲಿನ ಎರಡನೆಯ ಲಿಮರಿಕ್ಕಿನಲ್ಲಿ ಕಡೆಯ ಸಾಲಿನ ಶ್ಲೇಷೆ ಮತ್ತು ಒಳಪ್ರಾಸಗಳು ಅದರ ಪರಿಣಾಮಕ್ಕೆ ಮುಖ್ಯ. ಈ ಪರಿಣಾಮಕ್ಕೆ ಇಂಗ್ಲಿಷಿನ ಸ್ಪೆಲಿಂಗಿನ ವೈಚಿತ್ರ್ಯಗಳನ್ನೂ ಬಳಸಿಕೊಳ್ಳಬಹುದು. Nan took it ಎನ್ನುವುದರ ಉಚ್ಚಾರಣೆ, Nantucket ಎಂಬ ಊರಿನ ಹೆಸರಿನ ಉಚ್ಚಾರಣೆ ಹೆಚ್ಚು ಕಮ್ಮಿ ಒಂದೇ ಆಗಿರುವುದರಿಂದ ಕಡೆಯ ಸಾಲಿನ ಕಡೆಯ ಪದವನ್ನು Nantucket ಎಂದೇ ಬರೆಯುವುದು ಈ ಪದ್ಯದಲ್ಲಿ ಬಳಸಿರುವ ಒಂದು ತಂತ್ರ. ಈ ರೀತಿಯ ತಂತ್ರ ಇತರ ಭಾಷೆಗಳಲ್ಲಿ ಅಸಾಧ್ಯ, ಅಥವಾ ಕಷ್ಟಸಾಧ್ಯ ಎಂದು ಹೇಳಬಹುದು.

೨. ಲಿಮರಿಕ್ಕಿನಲ್ಲಿ ಐದು ಸಾಲುಗಳಿರುತ್ತವೆ (ಎಡ್ವರ್ಡ್ ಲಿಯರ್ ಲಿಮರಿಕ್ಕಿನ ಮೂರನೆಯ, ನಾಲ್ಕನೆಯ ಸಾಲನ್ನು ಒಟ್ಟಾಗಿ ಬರೆದು ನಾಲ್ಕು ಸಾಲಿನಲ್ಲೇ ಲಿಮರಿಕ್ಕನ್ನು ಬರೆದರೂ, ಆ ಸಾಲಿನ ಒಳಪ್ರಾಸ ಅದನ್ನು ಎರಡು ಸಾಲುಗಳಾಗಿ ಒಡೆಯಬಹುದಾಗಿರುವಂತೆ ಇರುತ್ತದೆ). ಮೊದಲ, ಎರಡನೆಯ ಮತ್ತು ಐದನೆಯ ಸಾಲುಗಳು ಒಂದು ರೀತಿ, ಮೂರನೆಯ ಮತ್ತು ನಾಲ್ಕನೆಯ ಸಾಲುಗಳು ಇನ್ನೊಂದು

ರೀತಿ ನಡೆಯುತ್ತವೆ. ಮೂರನೆಯ ಮತ್ತು ನಾಲ್ಕನೆಯ ಸಾಲುಗಳು ಇತರ ಸಾಲುಗಳಿಗಿಂತ ಮೊಟಕಾಗಿರುತ್ತವೆ. ೧, ೨, ೫ನೆಯ ಸಾಲುಗಳಿಗೆ, ೩ನೆಯ ಮತ್ತು ೪ನೆಯ ಸಾಲುಗಳಿಗೆ ಅಂತ್ಯಪ್ರಾಸವಿರುತ್ತದೆ. ಇಂಗ್ಲಿಷಿನ ಮಾತಿನ, ಛಂದಸ್ಸಿನ ಗತಿ, ಕನ್ನಡದಂತೆ ಮಾತ್ರೆ, ಅಕ್ಷರಗಳಿಂದ ನಿರ್ಧಾರವಾಗುವುದಿಲ್ಲ. ಅದು ಉಚ್ಚಾರಣೆಯಲ್ಲಿ ಒತ್ತಿ ಹೇಳುವ ಶಬ್ದಾಕ್ಷರಗಳಿಂದ ನಿರ್ಧಾರವಾಗುತ್ತದೆ. ಈ ಒತ್ತಿ ಹೇಳುವ ಶಬ್ದಾಕ್ಷರಗಳು ಒಂದೇ ಅಂತರದಲ್ಲಿ ಬರುತ್ತಿರುತ್ತವೆ. ಲಿಮರಿಕ್ಕುಗಳಲ್ಲಿ ಸಾಮಾನ್ಯವಾಗಿ, ೧, ೨, ೫ನೆಯ ಸಾಲಿನಲ್ಲಿ ಮೂರು ಆಮ್ಫಿಬ್ರಾಕ್ (amphibrach) ಎಂಬ 'ಗಣ'ಗಳು ಬರುತ್ತವೆ. ಇವು ಮಧ್ಯದ ಶಬ್ದಾಕ್ಷರ ಮಾತ್ರ ಒತ್ತಿ ಹೇಳುವ ಮೂರು ಶಬ್ದಾಕ್ಷರಗಳ ಗುಂಪುಗಳು. ೩ ಮತ್ತು ೪ನೆಯ ಸಾಲಿನಲ್ಲಿ ಎರಡೆರಡು ಆಂಫಿಬ್ರಾಕುಗಳಿರುತ್ತವೆ.

೩. ನನಗೆ ತಿಳಿದಂತೆ ಮೊದಲು ಕನ್ನಡದಲ್ಲಿ ಲಿಮರಿಕ್ಕುಗಳನ್ನು ಬರೆದವರು ಜಿ. ಪಿ. ರಾಜರತ್ನಂ. ಅವರ ಮಕ್ಕಳ ಪದ್ಯಗಳಲ್ಲಿ ಕೆಲವನ್ನು ಅವರು 'ಚುಟುಕ'ಗಳು ಎಂದು ಕರೆದು, ಅವುಗಳ ರೂಪವನ್ನು ಎಡ್ವರ್ಡ್ ಲಿಯರ್‌ರಿಂದ ಎರವಲು ತೆಗೆದುಕೊಂಡಿದ್ದಾರೆ. ಹೀಗೆ ತೆಗೆದುಕೊಳ್ಳುವಾಗ ಬೇಕಾದ ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಅವರ ಒಂದು ಚುಟುಕ,

ದೊಡ್ಡ ಪಟ್ಟೆ ಹುಲಿ
ಕಾಡುದಾರಿಯಲಿ
ನಡುಗಿ ನಿಂತು
ಹೇಳಿತಿಂತು:
'ಅಯ್ಯೋ! ಅಪ್ಪ! ಚಳಿ!'

ಇದರಲ್ಲಿ ಶಬ್ದಾಕ್ಷರಗಳ ಸಂಖ್ಯೆ ಇಂಗ್ಲಿಷಿನ ಲಿಮರಿಕ್ಕಿಗಿಂತ ಕಡಿಮೆಯಾಗಿರುವುದನ್ನು ನೋಡಬಹುದು. ಜೊತೆಗೆ ಶಬ್ದಾಕ್ಷರಗಳನ್ನು ಎಣಿಸುವುದರ ಬದಲು ಇಲ್ಲಿ ನಾವು ಮಾತ್ರೆಗಳನ್ನು ಎಣಿಸಬೇಕು. ಮೊದಲ, ಎರಡನೆಯ ಮತ್ತು ಐದನೆಯ ಸಾಲಿನಲ್ಲಿ ಒಂದೊಂದರಲ್ಲೂ ಮೂರು ಮಾತ್ರೆಯ ಮೂರು ಗುಂಪುಗಳಿವೆ. ಮೂರು ಮತ್ತು ನಾಲ್ಕನೆಯ ಸಾಲುಗಳಲ್ಲಿ ಮೂರು ಮಾತ್ರೆಯ ಎರಡು ಗುಂಪುಗಳಿವೆ. ಅಂತ್ಯಪ್ರಾಸ, ಇಂಗ್ಲಿಷಿನ ಲಿಮರಿಕ್ಕುಗಳಂತೆಯೇ ಇದೆ. ಈ ಮಕ್ಕಳ ಲಿಮರಿಕ್ಕಿನಲ್ಲಿ ಎದ್ದುಕಾಣುವುದು ಮೊದಲ ಎರಡು ಸಾಲಿನಲ್ಲಿ ಭಯಂಕರವಾಗಿ ಕಾಣುವ ಹುಲಿಯ ಕತೆ ಅನಿರೀಕ್ಷಿತ ದಿಕ್ಕಿಗೆ ತಿರುಗುವುದು.

ರಾಜರತ್ನಂ ಅವರ ಇನ್ನೊಂದು ಲಿಮರಿಕ್ಕು

ನಕಲಿಯ ರಾಮಾಚಾರಿ
ಓಡುತ ನೆಗೆಯುತ ಹಾರಿ
ಕೋತಿಯ ಹಾಗೆ
ಹಾಕುತ ಲಾಗ
ಧುಡುಮನೆ ಬಿದ್ದನು ಜಾರಿ!

ಇಲ್ಲಿ ಮಾತ್ರೆಗಳ ಗುಂಪುಗಳಲ್ಲಿ (ಪಾದದ ಕಡೆಯ ಲಘುವನ್ನು ಗುರು ಎಂದು ಗಣಿಸಿ) ಮೂರು ಮಾತ್ರೆಗಳ ಬದಲು ನಾಲ್ಕು ಮಾತ್ರೆಗಳಿರುವುದನ್ನು ನೋಡಬಹುದು.

ಳ. ರಾಜರತ್ನಂ ಅವರ ಲಿಮರಿಕ್ಕುಗಳು ಲಿಯರ್‌ನ ದಾರಿ ಅನುಸರಿಸಿದರೆ, ಇನ್ನೊಬ್ಬ ಚತುರ ಲಿಮರಿಕ್ಕಾರರಾದ ಎಚ್. ಎಸ್. ಬಿಳಿಗಿರಿಯವರ ಲಿಮರಿಕ್ಕುಗಳು ವಯಸ್ಕರ ಲಿಮರಿಕ್ಕುಗಳ ಸಂಪ್ರದಾಯದಲ್ಲಿವೆ. ಅವರ ಲಿಮರಿಕ್ಕುಗಳಲ್ಲೊಂದು, ಈ ಲೇಖನದಲ್ಲಿ ಉದ್ಧರಿಸಬಹುದಾದದ್ದು, ಇದು:

ಮೈಸೂರಿನಲ್ಲೊಬ್ಬ ಬಲು ತುಂಟನಿದ್ದ
ಮಲಗಿರುವ ಬೊಜ್ಜರಡಿ ಬಿಡುತಿದ್ದ ಗೊದ್ದ
ಹಾ ಎಂದು ಅರಚುತ್ತ
ಗಾಳಿಯನು ಪರಚುತ್ತ
ಅವರೆಗರಿದೆತ್ತರವನಳೆಯುತ್ತಲಿದ್ದ

ಈ ಲಿಮರಿಕ್ಕುಗಳಲ್ಲಿ ಮೊದಲ, ಎರಡನೆಯ ಮತ್ತು ಐದನೆಯ ಸಾಲುಗಳಲ್ಲಿ ಐದು ಮಾತ್ರೆಯ ಮೂರು ಗುಂಪು ಮತ್ತು ಮೂರು ಮಾತ್ರೆಯ ಕಡೆಯ ಗುಂಪು ಇವೆ. ಮೂರು ಮತ್ತು ನಾಲ್ಕನೆಯ ಸಾಲಿನಲ್ಲಿ ಐದು ಮಾತ್ರೆಯ ಎರಡು ಗುಂಪುಗಳಿವೆ. ಲಿಮರಿಕ್ಕುಗಳಿಗಿರಬೇಕಾದ 'ಅಂತ್ಯಪ್ರಾಸದ' ಲಕ್ಷಣವೂ ಇದೆ. ಬಿಳಿಗಿರಿ ತಮ್ಮ ಲಿಮರಿಕ್ಕುಗಳನ್ನು 'ಐದು ಕಾಲಿನ ವೊಂಡು ಕೊಂಡಿಯು ಚೇಳುಗಳು'ಎಂದು ವರ್ಣಿಸಿಕೊಂಡಿದ್ದಾರೆ. ಚೇಳು ಬಾಲದಿಂದ ತಾನೆ ಕುಟುಕುವುದು. ಅದೇ ರೀತಿ ಕಡೆಯ ಸಾಲಿನಲ್ಲಿ ಸ್ವಾರಸ್ಯ ಇರುವ ಇಂಗ್ಲಿಷ್ ಲಿಮರಿಕ್ಕುಗಳ ಗುಣವನ್ನು ಅವರು ಗಮನಿಸಿ ಉಳಿಸಿಕೊಂಡಿದ್ದಾರೆ.

ಇದೇ ಬಂಧದ ಇನ್ನೆರಡು ಲಿಮರಿಕ್ಕುಗಳಿಗೆ ಉದಾಹರಣೆ ಈಗಿನ ಜಾಗತೀಕರಣದ ಕಾಲಕ್ಕೆ ಅನುಗುಣವಾಗಿ, ಸಂಸ್ಕೃತದ ಸುಭಾಷಿತವೊಂದರ ವಿಷಯವನ್ನು, ಇಂಗ್ಲಿಷಿನ ಛಂದಸ್ಸಾದ ಲಿಮರಿಕ್ಕನ್ನು ಕನ್ನಡದಲ್ಲಿ ಅಳವಡಿಸಿಕೊಂಡು ಬರೆದದ್ದು.

ಉಷ್ಟ್ರಾನಾಂ ಲಗ್ನವೇಲಾಯಾಂ ಗರ್ದಭಾನಾಂ ತು ಗಾಯನಂ।
ಪರಸ್ಪರಂ ಪ್ರಶಂಸಂತಿ ಅಹೋರೂಪಮಹೋಧ್ವನಿಃ॥

ಒಂಟೆಗಳ ಮದುವೆಯಲಿ ಹಾಡಿದವು ಕತ್ತೆ
ಅವುಗಳನು ಒಂಟೆಗಳು ಹೊಗಳಿದುದು ಗೊತ್ತೆ?
ಓ! ಎಂಥ ಗಾನ!
ಮಧುರಮಧುಪಾನ!
ಕೆನೆಯಿರೋ ನೀವೆಲ್ಲ ಒಟ್ಟಾಗಿ ಮತ್ತೆ!
ಕತ್ತೆಗಳು ನೋಡಿದವು ಒಂಟೆಗಳ ಜೋಡಿ
ಹೊಗಳುತ್ತ ಹಾಡಿದವು (ರಾಗವಿದು ತೋಡಿ)
ಓ! ಇಂಥ ರೂಪ!
ಬಹಳ ಅಪರೂಪ!
ನಮ್ಮೊಂಟೆ ಸೌಂದರ್ಯ ಬಂದೆಲ್ಲ ನೋಡಿ!

೫. ಲಿಮರಿಕ್ಕುಗಳ ಬಂಧ ಸ್ವಲ್ಪ ಬಿಗಿಯಾದದ್ದು ಎಂದು ಹೇಳಬಹುದು. ಉದಾಹರಣೆಗೆ ಅವನ್ನು ಬಿಡಿ ಶ್ಲೋಕಗಳನ್ನಾಗಿ ಬಳಸಿ ಬರೆದಿರುವ ಉದ್ದದ ಕವನಗಳು ಕಂಡುಬರುವುದಿಲ್ಲ. ಗಂಭೀರವಾದ ವಿಷಯಗಳಿಗೂ ಈ ಪ್ರಕಾರ ಒಗ್ಗುವಂತೆ ಕಾಣುವುದಿಲ್ಲ. ಪ್ರಾಸದ, ಗತಿಯ ನಿಯಮಗಳನ್ನು ಒಡೆದು ಸ್ವಾರಸ್ಯಕರವಾದ ಲಿಮರಿಕ್ಕುಗಳನ್ನು ಬರೆಯುವುದೂ ಕಷ್ಟ. ಇದಕ್ಕೆ ಉದಾಹರಣೆಯಾಗಿ ಅನೇಕ ಶ್ಲೇಷೆ ಮತ್ತು ಚತುರ ಪ್ರಾಸಗಳನ್ನು ಬಳಸಿ ಹನಿಗವನಗಳನ್ನು ಬರೆದು ಪ್ರಸಿದ್ಧರಾಗಿರುವ ಡುಂಡಿರಾಜ್ ಅವರ ಒಂದು ಲಿಮರಿಕ್ಕು ಹೀಗಿದೆ.

ಹಬ್ಬಕ್ಕೆ ಬಂದಾಗ ಅತಿಥಿಗಳ ಪರಿವಾರ
ಸತ್ಕಾರ ಮಾಡಿದೆವು ಒಂದು ವಾರ
ಕೋರುವಾಗ ವಿದಾಯ
ಭಾರವಾಯಿತು ಹೃದಯ
ಪರ್ಸು ಮಾತ್ರ ಪೂರ್ತಿ ಹಗುರ!

ಈ ಲಿಮರಿಕ್ಕನ್ನು ಎಚ್. ಎಸ್. ಬಿಳಿಗಿರಿಯವರ ಲಿಮರಿಕ್ಕಿಗೆ ಹೋಲಿಸಿ ನೋಡಿ, ಯಾವ ಯಾವ ಛಂದಸ್ಸಿನ ನಿಯಮಗಳನ್ನು ಇಲ್ಲಿ ಮುರಿದಿದೆ, ಅದರ ಪರಿಣಾಮವಾಗಿ ಇದು ಎಷ್ಟು ಸಫಲವಾಗಿದೆ ಎನ್ನುವುದನ್ನು ಓದುಗರು ನಿರ್ಧರಿಕೊಳ್ಳಬಹುದು.

೬. ಆದರೂ ಲಿಮರಿಕ್ಕಿನ ಲಕ್ಷಣಗಳನ್ನು ನಿಯಮಿತವಾಗಿ ಪಾಲಿಸಲೇಬೇಕಿಲ್ಲ. ನಿಯಮವನ್ನು ಒಡೆಯುವುದೇ ಒಂದು ಹಾಸ್ಯದ ಸನ್ನಿವೇಶ ಒದಗಿಸಬಹುದು. ಆದರೆ ಇಲ್ಲಿ ಹಾಸ್ಯ ದೊರಕುವುದು ಓದುಗರಿಗೆ ಛಂದಸ್ಸಿನ ಬಂಧ ಚೆನ್ನಾಗಿ ತಿಳಿದಿದ್ದು, ಅದನ್ನು ಲಿಮರಿಕ್ಕಾರ ಹೇಗೆ ಮುರಿದಿದ್ದಾನೆ ಎನ್ನುವುದರ ಕಡೆಗೇ ಗಮನ ಸೆಳೆಯುವುದರಿಂದ. ಉದಾಹರಣೆಗೆ ಇಂಗ್ಲಿಷಿನ ಈ ಲಿಮರಿಕ್ಕು ನೋಡಿ.

There was a young man of St Bees
Who was stung in the arm by a wasp
They asked, 'Does it hurt?
He replied, 'No it doesn't'
I'm glad that it wasn't a hornet

ಈ ಪದ್ಯದ ಮುಖ್ಯ ಉದ್ದೇಶವೇ ಓದುಗರು ಪ್ರಾಸ ನಿರೀಕ್ಷಿಸುವ ಜಾಗದಲ್ಲಿ ಬೇಕೆಂದೇ ಪ್ರಾಸ ತರದೆ ಇರುವುದು, ಮತ್ತು ಪ್ರಾಸವಿರಬೇಕಾದ ಜಾಗದ ಪದಗಳಿಗೆ ಅರ್ಥಸಾಮ್ಯವಿರುವುದು. ಇದೊಂದು ಬಿಟ್ಟರೆ ಲಿಮರಿಕ್ಕುಗಳ ಇತರ ನಿಯಮಗಳನ್ನು ಪಾಲಿಸಿರುವುದು, ಲಿಮರಿಕ್ಕಿನ ಮೂಲ ಆಕಾರವನ್ನು ಹಿನ್ನೆಲೆಯಲ್ಲಿ ಇರುವಂತೆ ಮಾಡಿ, ಮುರಿದಿರುವ ಒಂದು ನಿಯಮ ಎದ್ದು ಕಾಣುವಂತೆ ಮಾಡುತ್ತದೆ. ಕನ್ನಡದಲ್ಲಿ ಈ ರೀತಿಯ ಒಂದು ಉದಾಹರಣೆ

ಸ್ಟ್ರೆಚ್ ಲಿಮರಿಕ್ಕಿನಲ್ಲಿ 'ಪಾನ್'ಆಸಕ್ತ ರಂಗಣ್ಣ
ಊಟವನು ಮುಗಿಸೆದ್ದ ನಮ್ಮ ರಂಗಣ್ಣ
ತಂದಿಟ್ಟರವನೆದುರು ಎಲೆ ಅಡಕೆ ಸುಣ್ಣ
ಎಲೆಯನ್ನು ತೀಡುತ್ತ
ಸುಣ್ಣವನು ಸವರುತ್ತ
ಅಗಿದಾಗ ಜಗಿದಾಗ
ಲಿಪ್ಸ್ಟಿಕ್ಕು ಗಿಪ್ಸ್ಟಿಕ್ಕು
ಇಲ್ಲದೆಯೆ ತುಟಿಯಾಯ್ತು ಕಡುಕೆಂಪು ಬಣ್ಣ

ಇಲ್ಲಿ ಲಿಮರಿಕ್ಕಿನ ಐದು ಸಾಲುಗಳು ಇರಬೇಕೆಂಬ ಒಂದೇ ನಿಯಮವನ್ನು ಒಡೆದಿದೆ. ಅದು ಬೇಕೆಂದೇ ಮಾಡಿರುವ ಕೆಲಸ ಎನ್ನುವುದನ್ನು ಪದ್ಯದ ಹೆಸರಿನ ಎರಡು ಶ್ಲೇಷೆಗಳಲ್ಲಿ ಒಂದರಲ್ಲಿ ಸೂಚಿಸಿರುವುದರಿಂದಲೂ ತಿಳಿಯಬಹುದು.

೬. ಇಂಗ್ಲೀಷಿನಲ್ಲಿ ಸೊಂಪಾಗಿ ಬೆಳೆದಿರುವ ಈ ಪ್ರಕಾರದಲ್ಲಿ ಕನ್ನಡದ ರಚನೆಗಳು ವಿರಳ. ಇತರ ಕೆಲವು ಉದಾಹರಣೆಗಳಿಗಾಗಿ ನಾನು ಮೇಲೆ ಉದ್ಧರಿಸಿರುವ ಕವಿಗಳ ಪುಸ್ತಕಗಳನ್ನು ನೋಡಬಹುದು. ಇವರದು ಎಂದು ಹೇಳದಿರುವ ಕನ್ನಡ ಲಿಮರಿಕ್ಕುಗಳು ನಾನು ರಚಿಸಿದವು.



# ಆಂಬೊಡೆ ದಿಂಬು

## ಮಾಲಾ ರಾವ್

ಹಿಂದಿನ ಕಾಲದ ಅಜ್ಜಿಗಳು ಮಾಡುತ್ತಿದ್ದ ಚಕ್ಕುಲಿ, ನಿಪ್ಪಟ್ಟು, ಕೋಡುಬಳೆ, ತೇಂಗೊಳಲು.. ಆಹಾ! ಏನು ರುಚಿ! ಸಜ್ಜಪ್ಪ, ಅತ್ರಸ, ಗಾರಿಗೆ, ಕಡುಬು, ಹೋಳಿಗೆ,.. ಆಹಾಹಾ! ಈ ಹೆಸರುಗಳನ್ನು ಓದುತ್ತಿದ್ದರೇ ಬಾಯಲ್ಲಿ ನೀರು ಬರುತ್ತೆ ಅಲ್ವಾ? ಇದೇ ಸಾಲಿನಲ್ಲಿ ಲೇಖನದ ತಲೆಬರಹದ 'ಆಂಬೊಡೆ ದಿಂಬನ್ನೂ' ಕಲ್ಪಿಸಿಕೊಂಡು 'ಏನಿದು ಆಂಬೊಡೆ ದಿಂಬು? ಅದನ್ನು ತಯಾರಿಸುವ ಬಗೆ ಹೇಗೆ?' ಎಂದೆಲ್ಲ ಯೋಚಿಸಿ ನೀವು ವಿಪರೀತ ಕುತೂಹಲಿಗಳಾಗಿ ಬಾಯಲ್ಲಿ ಲೀಟರ್‌ಗಟ್ಟಲೇ ನೀರು ಸುರಿಸುತ್ತಿದ್ದೀರಿ ಅಂತ ನನಗೆ ನಮ್ಮಜ್ಜಿ ಆಣೆಗೂ ಗೊತ್ತು. ಆಂಬೊಡೆ ದಿಂಬೆಂದರೆ ಏನು ಅಂತ ಸ್ಥೂಲವಾಗಿ ಪರಿಚಯ ಮಾಡಿಕೊಡಲಷ್ಟೇ ನಾನು ಸಮರ್ಥಳು. ಅದನ್ನು ತಯಾರಿಸುವ ಬಗೆ ಕಲಿಯಬೇಕಾದಲ್ಲಿ ನೀವು ನಮ್ಮಜ್ಜಿ ಹತ್ತಿರವೇ 'ಶಿಷ್ಯವೃತ್ತಿ' ಕೈಗೊಳ್ಳ ಬೇಕಾಗಬಹುದು. ಏಕೆಂದರೆ 'ಆಂಬೊಡೆ ದಿಂಬ'ನ್ನು ಏಕಮೇವ ಅದ್ವಿತೀಯವಾಗಿ ತಯಾರಿಸುವ ಕುಶಲತೆ ಅವರೊಬ್ಬರಿಗೇ ಇದ್ದುದು. ಮತ್ತು ಸದರಿ ಕೌಶಲ್ಯ ನನ್ನ (ಅಲ್ಪ-ಸ್ವಲ್ಪ) ಜ್ಞಾನದ ಪರಿಧಿಯಿಂದ ಬಹುದೂರ ಇರುವಂಥದ್ದು.

'ಆಂಬೊಡೆ ದಿಂಬು' ಅಂದರೆ ಏನೆಂದು ಅನುಭವ ಪಡೆಯಲು ನೀವೊಂದು ಪ್ರಯೋಗ ಮಾಡಬೇಕು ಮತ್ತು ಅದು ಹೀಗೆ:

ಬೇಕಾದ ಸಾಮಾಗ್ರಿಗಳು:

ಹಿಂದಿನ ದಿನ ಮಾಡಿದ ಕೆಲವು ಆಂಬೊಡೆಗಳು, ನಿಮ್ಮ ಹೆಬ್ಬೆರಳು ಮತ್ತು ತೋರು ಬೆರಳು, ಕೆಲವು ನ್ಯೂಸ್ ಪೇಪರ್ ಹಾಳೆಗಳು.

ವಿಧಾನ:

ಆಂಬೊಡೆಗಳನ್ನು ಒಂದೊಂದಾಗಿ ನಿಮ್ಮ ಹೆಬ್ಬೆರಳು ಮತ್ತು ತೋರು ಬೆರಳ

ನಡುವೆ ಹಿಡಿದು ಸಮವಾದ ಒತ್ತಡದಿಂದ ಅದುಮಿರಿ. ಜಿಗಿ-ಜಿಗಿ ಎಂದು ಎಣ್ಣೆ ಒಸರಿ ಕೈಯೆಲ್ಲಾ ಎಣ್ಣೆಯಾಗಿ ಕಮಟು ವಾಸನೆ ಹೊಡೆಯತೊಡಗಿತೇ? ಚಿಂತೆಯಿಲ್ಲ. ಈಗ ನ್ಯೂಸ್ ಪೇಪರ್ ಹಾಳೆಗಳಿಂದ ಕೈಗಳನ್ನು ಶುದ್ಧವಾಗಿ ಒರೆಸಿಕೊಳ್ಳಿ, ಅಷ್ಟೇ... ನೀವೀಗ ಸಂಪಾದಿಸಿದ ಜ್ಞಾನ ಖಂಡಿತವಾಗಿಯೂ ವ್ಯರ್ಥವಲ್ಲ, ಯಾಕೆಂದರೆ....

*

ನಾನೂ ನನ್ನ ತಂಗಿಯೂ ತುಂಬಾ ಚಿಕ್ಕವರಿದ್ದಾಗ ನಮ್ಮಜ್ಜಿ ನಮ್ಮಿಬ್ಬರನ್ನೂ ಕೂರಿಸಿಕೊಂಡು ತಲೆಗೆ ಚೆನ್ನಾಗಿ ಎಣ್ಣೆ ಹಚ್ಚಿ ಬಾಚಿ, ಟೈಟಾಗಿ ಜಡೆ ಹೆಣೆದು, ಹೂದಂಡೆ ಮುಡಿಸಿ, ಹಣೆಗೆ ತಿಲಕವಿಟ್ಟು, ಕಣ್ಣಿಗೆ (ಅವರೇ ಸ್ವತಃ ಮನೆಯಲ್ಲಿ ಮಾಡಿದ) ನಂದಬಟ್ಟಲು ಹೂವಿನ ಕಾಡಿಗೆ ತಿದ್ದಿ 'ಒಳ್ಳೆ ಪುಟ್ಟ್ ಲಕ್ಷ್ಮೀ ತರ ಕಾಣ್ತೀಯಲ್ಲೇ' ಅಂತ ನೆಟಿಕೆ ಮುರೀತಿದ್ರು. ನಾವುಗಳೂ ಪೆದ್ದು ಪೆದ್ದಾಗಿ 'ಪುಟ್ಟ್ ಲಕ್ಷ್ಮೀ' ಅನ್ನೋದು ಏನೋ 'ಪದ್ಮಶ್ರೀ' ಥರ ಬಹುದೊಡ್ಡ ಟೈಟಲ್ಲು ಅಂತ ಉಬ್ಬಿಕೊಂಡು 'ಹೌದೇನಜ್ಜೀ...' ಅಂತ ಸಂಭ್ರಮ ಪಡುತ್ತಿದ್ದೆವು.

ನಾವಿಬ್ಬರೂ 'ದೊಡ್ಡ್ ಲಕ್ಷ್ಮಿ'ಯರಾಗಿ ಕಾಲೇಜಿಗೆ ಹೋಗಲು ಶುರು ಮಾಡಿದ ಮೇಲೂ ನಮ್ಮಜ್ಜಿ 'ಸೇಮ್ ಓಲ್ಡ್ ಪುಟ್ಟ್ ಲಕ್ಷ್ಮಿ' ತರಾ ಅಲಂಕಾರ ಮಾಡ್ಕೊಳ್ಳಿ ಅಂತ ಫ್ಲೋರ್ಸ್ ಮಾಡಿದ್ರೆ 'ಅನ್‌ಫೇರ್' ತಾನೇ? ನಾವುಗಳೋ ಟಿ.ವಿ.ಯಲ್ಲಿ ಬರುವ ಹೊಸ ಶ್ಯಾಂಪೂ ಆಡ್‌ನವಳ 'ಸ್ಯಾಟಿನ್ ರಿನ್ಸ್... ಝುಲ್ ಫೇ...' ಥರ ಕೂದಲು ಹಾರಿಸಲು ಟ್ರೈ ಮಾಡುತ್ತಿರುತ್ತಿದ್ದೆವು. ನನ್ನ ತಂಗಿಯಂತೂ ಯೂ ಕಟ್, ವಿ ಕಟ್, ಎಸ್ ಕಟ್ ಅಂತ ಇಂಗ್ಲಿಷ್ ವರ್ಣಮಾಲೆಯ ಎಲ್ಲಾ ಇಪ್ಪತ್ತಾರು ಕಟ್‌ಗಳ ಸ್ವಯಂ ಪ್ರಯೋಗ ಮಾಡಿಕೊಳ್ಳುತ್ತಿದ್ದಳು

ಹಾಗೆ ಒಮ್ಮೆ ಏನೋ ಹೊಸ ಪ್ರಯೋಗ ಮಾಡಿಕೊಂಡವಳನ್ನು ನೋಡಿ ಅಜ್ಜಿಗೆ ತಮ್ಮ ಪ್ರೀತಿಯ ಮೊಮ್ಮಗಳ ಮೇಲೆ ಒಮ್ಮೆಲೇ ಮಮತೆ, ಮರುಕ ಎರಡೂ ಒಟ್ಟೊಟ್ಟಿಗೆ ಉಕ್ಕಿಬಂದು 'ಅಯ್ಯೊ ಮಗು... ನೋಡೇ... ತಲೆಗೆ ಎಣ್ಣೆ ಇಲ್ಲದೆ ಹ್ಯಾಗೆ ಸೊರಗಿ ಹೋಗಿದೆ ನಿನ್ನ ಮುಖ... ಬಾ... ಚೆನ್ನಾಗಿ ಎಣ್ಣೆ ಹಚ್ಚಿ ಜಡೆ ಹೆಣೀತೀನಿ' ಅಂತ ಅಂದುಬಿಟ್ಟರು. ತಲೆಗೆ ಎಣ್ಣೆ ಇಲ್ಲದಿರುವುದಕ್ಕೂ ಮುಖ ಸೊರಗುವುದಕ್ಕೂ ಏನು ಕನೆಕ್ಷನ್ನೋ ಪರಮಾತ್ಮನೇ ಬಲ್ಲ, ಇರಲಿ. ಇಂಗ್ಲಿಷಿನ ಯಾವುದೋ ತರಲೆ 'ಆಲ್ಫಬೆಟ್' ಕೈ ಕೊಟ್ಟ ಕಾರಣ ಅವಳ 'ಲೇಟೆಸ್ಟ್ ಕಟ್' ಬೇರೆ ಸರಿಯಾಗಿ ಬಂದಿರಲಿಲ್ಲ. ಜೊತೆಗೆ ಅಜ್ಜಿಯ 'ಎಣ್ಣೆ ಸೇವೆ + ಟೈಟ್ ಜಡೆ'ಯ ಇನ್ವಿಟೇಶನ್ ಬೇರೆ... ಅವಳಿಗೆ ಭಯಂಕರ ಸಿಟ್ಟು ಏರಿ ಹೋಯಿತು! ಅಲ್ಲಾ... ಕ್ಲಾಸಿನಲ್ಲಿ ಇವಳ ಇಮೇಜ್ ಏನಾಗಬೇಡಾ? ಈ ಅಜ್ಜಿಯ ತಲೆಯಲ್ಲಿ ಒಂದು ಮಿಲಿಗ್ರಾಂನಷ್ಟಾದರೂ ಬುದ್ಧಿ ಇದೆಯಾ...?

'ನನ್ನ ತಲೆಗೆ ನೀನು ಎಣ್ಣೆ ಸೇವೆ ಮಾಡುವುದು ಹಾಗಿರ್ಲಿ... ಮೊದಲು ಆಂಬೊಡೆ ತರ ಇರೋ ನಿನ್ನ ದಿಂಬು ನೋಡಿಕೋ' ಎಂದು ರೇಗಿಬಿಟ್ಟಳು.

'ಆಂಬೊಡೆ? ದಿಂಬು?' ಅಜ್ಜಿಗೆ ಏನೂ ಅರ್ಥವಾಗಲಿಲ್ಲ. ಪಿಳಿ ಪಿಳಿ ಕಣ್ಣು ಬಿಟ್ಟರು. ತುಂಬಾ ದಿನಗಳಿಂದ ತಲೆಗೆ ಸರಿಯಾಗಿ ಎಣ್ಣೆ ಹಚ್ಚಿಕೊಳ್ಳದೆ ವಾತವೋ, ಪಿತ್ಥವೋ ಯಾವುದೋ ಒಂದು ನೆತ್ತಿಗೇರಿ ಮೊಮ್ಮಗಳ ಬುದ್ಧಿ ಭ್ರಮಣೆಯಾಗಲು ಶುರುವಾಗಿಬಿಟ್ಟಿದೆಯೆಂದು ಅಜ್ಜಿಗೆ ಖಾತ್ರಿಯಾಗಿಬಿಟ್ಟಿತು. 'ಇಲ್ಲದಿದ್ದರೆ ದಿನಕ್ಕೊಂದು ಬಗೆಯಲ್ಲಿ ಕೂದಲು ಕತ್ತರಿಸಿಕೊಳ್ಳುತ್ತಾ ಕನ್ನಡಿ ಮುಂದೆ ನಿಂತಿರುತ್ತಿದ್ದಳೇ ನನ್ನ ಪುಟ್ಟ ಲಕ್ಷ್ಮೀಯಂಥ ಮೊಮ್ಮಗಳು?' ಎಂದು ಯೋಚಿಸತೊಡಗಿದರು. 'ಅವಳಿಗೆ ಏನು ತಿನ್ನಬೇಕೆಂದು ಅನ್ನಿಸುತ್ತಿದೆ ಎಂದೂ ಸ್ಪಷ್ಟವಾಗಿ ಹೇಳಲು ಆಗದಿರೋವಷ್ಟು ಬುದ್ಧಿ ಕೆಟ್ಟು ಹೋಗಿದೆಯೇ? ಎಂದು ಮರುಕ ಪಟ್ಟರು. 'ದಿಂಬು ಯಾಕೆ ತಿನ್ನುತ್ತೀಯೇ ಪುಟ್ಟಾ... ನಿಂಗೆ ಆಂಬೊಡೆ ತಾನೆ ಬೇಕೂ... ಸಂಜೆ ಬಿಸಿ ಬಿಸಿಯಾಗಿ ಮಾಡಿಕೊಡ್ತೀನಿ... ಕಾಫಿ ಜೊತೆ ತಿನ್ನುವಂತೆ... ಈಗ ಬಾ... ಚೆನ್ನಾಗಿ ಎಣ್ಣೆ ಹಚ್ಚಿ ತಲೆ ಬಾಚುತೀನಿ... ನೀನು ಈಚೀಚೆಗೆ ತಲೆಗೆ ಸರಿಯಾಗಿ ಎರೆದುಕೊಳ್ತಾ ಇಲ್ಲಾ... ಅದಕ್ಕೇ ನಿಂಗೆ ಹೇಗ್ ಹೇಗೋ ಆಗ್ತಿರೋದು... ಇನ್ ಮೇಲಿಂದ ವಾರಕ್ಕೆರಡು ಸಾರಿ ನಾನೇ ನಿಂಗೆ ಹರಳೆಣ್ಣೆ ಹಚ್ಚಿ ಎರೀತೀನಿ... ಎಲ್ಲಾ ಸರಿ ಹೋಗುತ್ತೆ. ನೀನೇನೂ ಯೋಚ್ನೆ ಮಾಡಬೇಡಾ, ಬಾ...' ಅಂತ ಅವಳ ತಲೆ ಸವರಲು ಬಂದರು.

'ನೋ...ನೋ..ನೋ... ನನ್ ತಲೆ ತಂಟೆಗೆ ನೀನ್ ಬರಬೇಡಾ... ನಿನ್ ಕೈಲಿ ಒಂದು ಡಬ್ಬ ಪೂರ್ತಿ ಎಣ್ಣೆ ಹಚ್ಚಿಸಿಕೊಂಡು ಟೈಟಾಗಿ ಜಡೆ ಹೆಣೆಸಿಕೊಂಡು ಕ್ಲಾಸಿಗೆ ಹೋದರೆ ಹೇಗೆ ಕಾಣ್ತೀನಿ ಗೊತ್ತಾ...? ಶೂರ್ಪನಖಿ...! ಒಳ್ಳೇ ಶೂರ್ಪನಖಿ ಥರ ಕಾಣಿಸ್ತೀನಿ ಅಷ್ಟೇ...' ಅಂತಾ ಅವಳು ಸರಸರ ಹೊರಟೇ ಹೋದಳು. 'ಶೂರ್ಪನಖಿ ಅಂತೇ... ಅಂತೂ ನಿಂ ತಾತ ನಿಮ್ಮಗಳಿಗೆ ರಾಮಾಯಣದ ಕಥೆ ಹೇಳಿದ್ದು ಇವತ್ತಿಗೆ ಸಾರ್ಥಕವಾಯಿತು!' ಅಂತ ಅಜ್ಜಿ ತಮ್ಮ ಎರಡೂ ಕೈ ಎತ್ತಿ ಆಕಾಶಕ್ಕೆ ಕೈ ಮುಗಿಯುತ್ತಾ 'ಕೇಳಿಸ್ತೇನ್ರೀ... ನಿಮ್ ಮೊಮ್ಮಗಳ ಮಾತೂ...' ಎಂದು ಸ್ವರ್ಗದಲ್ಲಿ ಅಪ್ಸರೆಯರಿಂದ ಸೇವೆಗೊಳ್ಳುತ್ತಾ ಇರಬಹುದಾದಂಥ ತಾತನಿಗೆ ಡಿಸ್ಟರ್ಬ್ ಮಾಡಲೆತ್ನಿಸಿದರು. ತಾತನ್ನ ನೆನೆಸಿಕೊಂಡು ಸೆರಗಲ್ಲಿ ಕಣ್ಣೊರಸಿಕೊಳ್ಳುತ್ತಾ ಜೊತೆಗೆ ಬೊಚ್ಚು ಬಾಯಲ್ಲಿ ನಗುತ್ತಾ, 'ಶೂರ್ಪನಖಿ ಅಂತೇ... ಈಗೇನು ಕಡಿಮೆ ಶೂರ್ಪನಖಿ ಥರ ಕಾಣ್ತಿರೋದು? ಹುಚ್ಚುಕುಪ್ಪೀ...' ಅಂತ ಗೊಣಗಿಕೊಳ್ಳುತ್ತಾ ಒಳಗೆ ಹೋದರು ಅಜ್ಜಿ.

ವಾರಕ್ಕೆರಡು ಬಾರಿ ಚೆನ್ನಾಗಿ ಹರಳೆಣ್ಣೆ ಹಚ್ಚಿಕೊಂಡು ಎರೆದುಕೊಂಡರೆ ಮತ್ತು ಪ್ರತಿ ದಿನವೂ ತಲೆಗೆ ಡಬ್ಬಗಟ್ಟಲೇ ಕೊಬ್ಬರಿ ಎಣ್ಣೆ ಹಚ್ಚಿಕೊಂಡರೆ ದೀರ್ಘಾಯುಸ್ಸು, ಚಿರಯೌವ್ವನ, ಅನುಪಮ ಸೌಂದರ್ಯ, ಮಿರುಗುವ ತ್ವಚೆ... ಎಂದೆಲ್ಲಾ ಯಾವ

ಧನ್ವಂತರಿ ವಂಶಸ್ಥ ಅಜ್ಜಿಗೆ ಹೇಳಿದ್ದನೋ ಗೊತ್ತಿಲ್ಲ. ಅವರಂತೂ ಹಾಗೆಂದು ದೃಢವಾಗಿ ನಂಬಿಕೊಂಡಿದ್ದರು. ಅಲ್ಲದೆ ರಿಲಿಜಿಯಸ್ಸಾಗಿ ಅದನ್ನು ಪಾಲಿಸುತ್ತಿದ್ದರು ಕೂಡಾ. ನಮ್ಮಿಬ್ಬರಿಗೆ ಬುದ್ಧಿ ಬಲಿಯುವ ಮುಂಚೆ ನಮ್ಮಗಳ ಮೇಲೂ ರೆಗ್ಯುಲರ್ ಆಗಿ ಪ್ರಯೋಗಿಸಿ ಖುಷಿ ಪಟ್ಟುಕೊಂಡಿದ್ದರು. ನಮಗೆ ಬುದ್ಧಿ ಬಂದ ಮೇಲೂ (ಅದು ಬಂದಿದೆ ಅಂತ ನಮ್ಮಜ್ಜಿಗೆ ನಂಬಿಕೆ ಹುಟ್ಟಿಲ್ಲದ್ದರಿಂದ) ಅವರ ಮೆಚ್ಚಿನ 'ಎಣ್ಣೆ ದರ್ಬಾರು' ನಡೆಸಲು ಅವರು ಹೊರಟಾಗಲೆಲ್ಲಾ ನಮ್ಮಗಳ ನಡುವೆ ಈ ರೀತಿಯ ಚಕಮಕಿಗಳು ನಡೆಯುತ್ತಿದ್ದವು.

*

ಆದರೆ ಅಂದು ನನ್ನ ತಂಗಿಗೆ ಭಯಂಕರ ಸಿಟ್ಟು ಬರಿಸಿದ ಕ್ರೆಡಿಟ್ ಪೂರ್ಣವಾಗಿ ಸಲ್ಲಬೇಕಾದ್ದು 'ಆಂಬೊಡೆ ದಿಂಬಿಗೆ' ಮತ್ತು ಸದರಿ ದಿಂಬಿನ ಪ್ರವರ ಹೀಗೆ:

ನಮ್ಮಜ್ಜಿಯ 'ಎಣ್ಣೆ ಪ್ರೇಮ'ದ ಬಗ್ಗೆ ನೀವೀಗಲೇ ಒಂದಿಷ್ಟು ಜ್ಞಾನ ಸಂಪಾದಿಸಿದ್ದೀರಿ. ಈಗ ಇನ್ನೊಂದಷ್ಟು ವಿವರ ತಿಳಿಯುವಂಥವರಾಗಿ... ಅಜ್ಜಿ ದಿನವೂ ಡಬ್ಬಗಟ್ಟಲೇ ಎಣ್ಣೆಯನ್ನು ತಮ್ಮ ತಲೆಗೆ ಹಚ್ಚಿಕೊಳ್ಳುತ್ತಿದ್ದರು. ಕೇಸರಿ ಬಣ್ಣದ ತಗಡಿನ ಡಬ್ಬದಲ್ಲಿ ಬರುತ್ತಿದ್ದ ಆ ಎಣ್ಣೆ ಅದ್ಯಾವ ಬ್ರ್ಯಾಂಡೋ ನನಗೆ ಈಗ ನೆನಪಿಲ್ಲ. ಡಬ್ಬದ ಮೇಲೆ ನೀಳ ಕೇಶ ರಾಶಿಯ ಸುಂದರಿಯೊಬ್ಬಳ ಚಿತ್ರವಿರುತ್ತಿತ್ತು. ಆ ಎಣ್ಣೆ ಕಂಪನಿ ಏನಾದರೂ ಉದ್ಧಾರವಾಗಿದ್ದರೆ ಅದು ನಮ್ಮಜ್ಜಿಯಿಂದಲೇ ಎಂಬುದು ನಿರ್ವಿವಾದ. ಆ ಕಂಪನಿಯವರು ತಮ್ಮ 'ಬೆಸ್ಟ್ ಕನ್ಸ್ಯೂಮರ್ ಅವಾರ್ಡ್' ಕೊಡಬಹುದಾಗಿತ್ತು ನಮ್ಮ ಅಜ್ಜಿಗೆ. ಆದರೆ ಆ ಕಾಲದಲ್ಲಿ ಹಾಗೆಲ್ಲಾ ಅವಾರ್ಡ್ ಕೊಡುವ ಸಂಪ್ರದಾಯ ಇರಲಿಲ್ಲವಾದ್ದರಿಂದ ಅಜ್ಜಿಗೆ ಅವಾರ್ಡ್ ತಪ್ಪಿ ಹೋಯಿತು. ಇರಲಿ, ಪರವಾಗಿಲ್ಲ. (ಈಗೇನಾದರೂ ನಮ್ಮಜ್ಜಿಗೆ ಪಾಸ್ಥ್ಯುಮಸ್ಸಾಗಿ ಅವಾರ್ಡ್ ಕೊಟ್ಟರೆ ಅವರ ಪರವಾಗಿ ನಾನು ಪ್ರಶಸ್ತಿ ಸ್ವೀಕರಿಸಲು ಸಿದ್ಧ ಎಂದು ಈ ಮೂಲಕ ಹೇಳಲಿಚ್ಛಿಸುತ್ತೇನೆ.)

ಅಜ್ಜಿ ಹೀಗೆ ಎಣ್ಣೆ ಹಚ್ಚಿಕೊಂಡು ರಾತ್ರಿ ಸುಮಾರು ಏಳು ಘಂಟೆಗಳ ಕಾಲ, ಮಧ್ಯಾಹ್ನ ಸುಮಾರು ಎರಡು ಘಂಟೆಗಳ ಕಾಲ, ಹೀಗೆ ದಿನಕ್ಕೆ ಸರಾಸರಿ ಒಂಬತ್ತು ಘಂಟೆ ಮಲಗುತ್ತಿದ್ದರು (ಅಥ್ವಾ ಮಲಗಲು ಪ್ರಯತ್ನಿಸುತ್ತಾ ಇರುತ್ತಿದ್ದರು). ಆದ್ದರಿಂದ ಅಜ್ಜಿಯ ತಲೆಯೂ, ಮತ್ತವರು ಉಪಯೋಗಿಸುತ್ತಿದ್ದ ದಿಂಬೂ ಒಳ್ಳೆಯ ಸ್ನೇಹಿತರಾಗಿಬಿಟ್ಟಿದ್ದವು.

ನಾನೂ ಪಮ್ಮಿಯೂ ಚಿಕ್ಕಂದಿನಿಂದ 'ನಿನ್ನ ಹತ್ರ ಇದ್ರೇನು, ನನ್ನ ಹತ್ರ ಇದ್ದ ಹಾಗೇ' ಅಂತ ಹೇಳಿಕೊಳ್ಳುತ್ತಾ ಬಳಪ, ಕಳ್ಳೆಪಪ್ಪುವಿನಿಂದ ಆರಂಭಿಸಿ ಈಗ

ಚೂಡೀದಾರಗಳನ್ನೂ, ಟೀ-ಶರ್ಟುಗಳನ್ನೂ ಒಬ್ಬರದಿನ್ನೊಬ್ಬರ ಹತ್ರ ಬಿಟ್ಟಿರುತ್ತೇವಲ್ಲಾ ಥೇಟ್ ಅದೇ ರೀತಿ ಯೋಚಿಸಿಕೊಂಡಿರಬೇಕು ಅಜ್ಜಿ ತಲೆ ಅಂಡ್ ಅಜ್ಜಿ ದಿಂಬು! ಆದ್ದರಿಂದ ಅಜ್ಜಿ ತಲೆ ತನ್ನ ಎಣ್ಣೆ ಜಿಡ್ಡನ್ನೆಲ್ಲಾ 'ದಿಂಬು ಗೆಳತಿಯ' ಹತ್ತಿರ ಡಿಪಾಸಿಟ್ ಮಾಡಿತ್ತು. ಅಜ್ಜಿ ಸುಮ್ಮನಿರುತ್ತಾರೆಯೇ? ತಮ್ಮ ತಲೆಗೆ ಇನ್ನಷ್ಟು ಎಣ್ಣೆ ಬಳಿಯುತ್ತಿದ್ದರು. ಅದು ಪುನಹ ಡೈರೆಕ್ಟ್‌ಲೀ ಡೆಪಾಸಿಟೆಡ್ ಇನ್ ಟು ದಿಂಬು ಗೆಳತಿಯ ಅಕೌಂಟು! ಮತ್ತೆ ಸೇಮ್ ಪ್ರೋಸಸ್ ವೆಂಟ್ ಆನ್ ಅಂಡ್ ಆನ್... ಇದೇ ಪ್ರಕಾರವಾಗಿ ಕಂಬಳಿ ಹುಳ ಸುಂದರ ಚಿಟ್ಟೆಯಾಗಿ ಮಾರ್ಪಡುವಂತೆ, ತರಕಲಾಂಟಿ ಹತ್ತಿ ದಿಂಬು ಆಂಬೊಡೆ ದಿಂಬಾಗಿ ಮಾರ್ಪಟ್ಟಿತ್ತು! ಬೆರಳಿನಿಂದ ಅದುಮಿದರೆ ಥೇಟ್ ಆಂಬೊಡೆ ಅದುಮಿದಾಗ ಬರುವಷ್ಟೇ ಕಮಟು (ಸು)ವಾಸನಾಯುಕ್ತ ಎಣ್ಣೆ ಸೂಸುತ್ತಿತ್ತು.

ಅಷ್ಟೇ ಆಗಿದ್ದಿದ್ದರೆ ಪರವಾಗಿರಲಿಲ್ಲ. ಆದರೆ, ಅಜ್ಜಿಯ ಈ ಆಂಬೊಡೆ ದಿಂಬಿಗೆ ತನ್ನ 'ಫ್ರೆಂಡ್ ಸರ್ಕಲ್' ವಿಸ್ತರಿಸಿಕೊಳ್ಳಬೇಕೆಂಬ ಹೆಬ್ಬಯಕೆ ಮೂಡಿ ಮನೆಯಲ್ಲಿನ ಇತರ ದಿಂಬುಗಳೊಂದಿಗೆ ಗೆಳೆತನ ಶುರುವಿಟ್ಟುಕೊಂಡಿತು. ದೂರ ದೂರಕ್ಕೆ... ಸ್ವಲ್ಪ ಹಾಗಾಗೇ... ಸ್ನೇಹಿತರಾಗಿ ಇದ್ದಿದ್ದರೆ ಓ.ಕೇ... ಆದರೆ ಅಜ್ಜಿಯ ಆಂಬೊಡೆ ದಿಂಬು ವಿಪರೀತ ತುಂಟಿಯಾಗಿ ಇತರ ದಿಂಬುಗಳಿಗೆ 'ಮುತ್ತು ಮುದ್ರೆ' ಹಾಕಲೂ ಶುರುಮಾಡಿ ಬಿಟ್ಟಿತ್ತು! ಹಾಗೆ ಅಜ್ಜಿ ದಿಂಬು 'ಗಲ್ತೀಸೆ' ಅಂದು ಮುತ್ತಿಟ್ಟಿದ್ದು ನನ್ನ ತಂಗಿಯ ದಿಂಬಿಗೆ! ಅದಕ್ಕೇ ಅವಳ ಕೋಪ ನೆತ್ತಿಗೇರಿ 'ಮೊದಲು ನಿನ್ನ ಆಂಬೊಡೆ ದಿಂಬು ನೋಡಿಕೋ' ಅಂದಿದ್ದು!!

*

ಸಾಮಾನ್ಯವಾಗಿ ನಮ್ಮ ನಿಮ್ಮಗಳ ಅಜ್ಜಿಯರೆಲ್ಲಾ ರುಚಿ ರುಚಿಯಾಗಿ 'ಆ್ಯಂಟಿಕ್' ಅಡುಗೆಗಳನ್ನು ಮಾಡುವವರಾದ್ದರಿಂದ ನಾನು 'ಆಂಬೊಡೆ ದಿಂಬು' ಅಂದೊಡನೆ ನಿಮ್ಮ ಬಾಯಲ್ಲಿ ಸ್ವಲ್ಪ ನೀರು ಬಂದಿದ್ದರೆ ಅದು ಸಹಜವೇ... ಆದರೆ ಆಂಬೊಡೆ ದಿಂಬಿನ ಹೆಸರು ಕೇಳಿದಾಕ್ಷಣ ನೀವು ಬಾಯಲ್ಲಿ ಲೀಟರ್‌ಗಟ್ಟಲೇ ನೀರು ಬರಿಸಿಕೊಳ್ಳುವ ಅಗತ್ಯವಿರಲಿಲ್ಲ. ಮೈಸೂರು ಪಾಕಿನಲ್ಲಿ ಹೇಗೆ ಮೈಸೂರು ಇಲ್ಲವೋ ಹಾಗೆ ಆಂಬೊಡೆ ದಿಂಬಿನಲ್ಲಿ 'ನೋ ಆಂಬೊಡೆ!' ನಮ್ಮ ಮಲೆಯಾಳಿ ಮಣಿ ಹೇಳುವಂತೆ 'ಇಟ್ಸ್ ವೆರಿ ಸಿಂಬಳ್!' ನೀವಂದುಕೊಂಡಂತೆ ಆಕಸ್ಮಾತ್ ದಿಂಬಿನ ತುಂಬಾ ಆಂಬೊಡೆ ಏನಾದರೂ ತುಂಬಿದ್ದಿದ್ದರೆ ಹೀಗೆಲ್ಲಾ ನಿಮಗೆ ಆಂಬೊಡೆ ದಿಂಬಿನ ಬಗ್ಗೆ ಡಂಗೂರ ಸಾರದೆ, ನಾನೂ ನನ್ನ ತಂಗಿಯೂ ಗಪ್‌ಚುಪ್ಪಾಗಿ ದಿಂಬು ಸಮೇತ ಆಂಬೊಡೆಗಳನ್ನೋ, ಆಂಬೊಡೆ ಸಮೇತ ದಿಂಬನ್ನೋ ನಮ್ಮ ಕ್ಲಾಸ್ ರೂಮಿಗೆ ಸಾಗಿಸಿ, ಸೈಲೆಂಟಾಗಿ ಖಾಲಿ ಮಾಡಿ, ಮೂತಿ ಒರೆಸಿಕೊಂಡಿರುತ್ತಿದ್ದೆವು!

# ವಾಕಿಂಗ್ ಪ್ರಪಂಚ

## ಮೈಸೂರು ಶಿವರಾಮ್

ಇತ್ತೀಚೆಗೆ ಇಂಡಿಯಾದಲ್ಲಿ ಒಂದು ಹೊಸ ಕಲ್ಚರ್ ಶುರುವಾಗಿದೆ. ಅದು ಬೆಳಗಿನ ವಾಕಿಂಗ್ ಕಲ್ಚರ್. ಸೂರ್ಯೋದಯಕ್ಕೆ ಮುಂಚೆ ಅಂದರೆ ಐದು ಗಂಟೆಗೇ ವಾಕಿಂಗ್ ಮಾಡುವ ಜನ ಸಮೂಹ ನೋಡಿದರೆ ನಿಮಗೆ ಬಹಳ ಆಶ್ಚರ್ಯಾನೇ ಆಗುತ್ತೆ–ಅರೆ, ಇದು ನಾನು ಹುಟ್ಟಿದ ಭಾರತ ದೇಶವೇ? ಅಂತ.

ನಾವು–ಅಂದರೆ ಇನ್ಯಾರೂ ಅಲ್ಲ ನಾನು ಮತ್ತು ನನ್ನಾಕೆ–ಪ್ರತಿ ವರ್ಷ ಮೈಸೂರಿಗೆ ಹೋದಾಗ ಏನೇ ತಪ್ಪಿಸಿದರೂ ಬೆಳಗಿನ ಜಾವದ ವಾಕಿಂಗ್ ಮಾತ್ರ ತಪ್ಪಿಸುವುದಿಲ್ಲ. ಹಕ್ಕಿಗಳ ಚಿಲಿಪಿಲಿ ಶಬ್ದಕ್ಕೆ ಬೆಳಿಗ್ಗೆ ೪:೩೦ಕ್ಕೆ ಎಚ್ಚರವಾಗುತ್ತೆ. ನಾವಿಬ್ಬರೂ ಒಂದು ಡೋಸ್ ಕಾಫಿ ಕುಡಿದು ವಾಕಿಂಗ್ ಹೊರಡ್ತೀವಿ. ವಿವಿಧ ವೇಷಗಳಲ್ಲಿ, ವಿವಿಧ ಭಂಗಿಗಳಲ್ಲಿ ವಾಕಿಂಗ್ ಮಾಡ್ತಿರೋ ಜನರನ್ನು ನೋಡೋಕೆ ಎಷ್ಟು ಮನೋರಂಜಕವಾಗಿರುತ್ತೆ ಅಂತ ವರ್ಣಿಸೋಕೆ ಸಾಧ್ಯವಿಲ್ಲ. ಈ ದೃಶ್ಯವನ್ನು ನೀವು ಅರುಣೋದಯಕ್ಕೆ ಮುಂಚಿನ ವಾಕಿಂಗ್ ಮಾಡಿದರೆ ಮಾತ್ರ ಅನುಭವಿಸುತ್ತೀರಿ. ನೀವು ಮುಂದಿನ ಸಾರಿ ಇಂಡಿಯಾಗೆ ಹೋದಾಗ ವಾಕಿಂಗ್ ಪ್ರಪಂಚದ ವಿನೋದವನ್ನು ಸವಿಯಬೇಕಾದರೆ ಕೆಲವು ದಿನಗಳಾದರೂ early morning walking ಮಾಡಲೇಬೇಕು. ಮೀಟಿಂಗ್ ಮಾಡಿದಾಗ ಈಟಿಂಗ್ ಹೇಗೆ ಮುಖ್ಯಾನೋ ಹಾಗೇ ವಾಕಿಂಗ್ ಮಾಡೋವಾಗ ಟಾಕಿಂಗ್ ಇರದಿದ್ದರೆ ಆಗುತ್ಯೆ? ಈ 'ಟಾಕಿಂಗ್ ವೈಲ್ ವಾಕಿಂಗ್' ಇದೆಯಲ್ಲ, ಇದನ್ನು ಕದ್ದು ಕೇಳಿಸಿಕೊಂಡಾಗ ಇರೋ ಮಜವನ್ನು ನೀವು ವಾಕಿಂಗ್ ಹೋದಾಗ ಮಾತ್ರ ಅನುಭವಿಸುತ್ತೀರಾ.

ನಾನು ವಾಕಿಂಗ್ ಹೋಗೋ ಪದ್ದತಿ ಹೇಗೆ ಶುರು ಆಯ್ತು ಅಂತ ಗೊತ್ತೆ? ನನಗೆ ಶುಗರ್ ಪ್ರಾಬ್ಲಮ್ ಇದೆ ಅಂತ ಡಾಕ್ಟರ್ ಹೇಳಿದಾಗ ನನ್ನಾಕೆ ಮಾರ್ನಿಂಗ್

ವಾಕಿಂಗ್ ಹೋಗ್ಲೇಬೇಕು ಅಂತ ಆರ್ಡರ್ ಮಾಡಿದಳು. ಬೆಳಿಗ್ಗೆ ವಾಕ್ ಮಾಡಿದರೆ ೫ ಗಂಟೆಗೆ ಫಸ್ಟ್ ಡೋಸ್ ಕಾಫಿ ಕೊಡುವ ಆಮಿಷ ಕೂಡಾ ಒಡ್ಡಿದಳು! ಅರೆ, ವಾಕಿಂಗ್ ಹೊರಟರೆ ಬೆಡ್ ಕಾಫಿ ಸಿಕ್ಕುತ್ತಲ್ಲ! ಅನ್ನೋ ಸಂತಸ ಒಂದು ಕಡೆಯಾದರೆ ಆ ಹಾಳು ಕಾಫಿ ಶುಗರ್ ಲೆಸ್ ಅನ್ನೋದನ್ನ ನೆನೆಸಿಕೊಂಡರೆ ನನ್ನ ನಾಲಿಗೆ ಒಣಗೇ ಹೋಗುತ್ತೆ.

ಕೆಲವು ರೋಗಿಷ್ಠರಿಗೆ ಬೆಡ್ ಕಾಫಿ ಅಗತ್ಯ ಅಂತ 'ಇಂಡಿಯಾ ಟುಡೆ' ಪತ್ರಿಕೆಯಲ್ಲಿ ಓದಿದ್ದೆ. ಅಯ್ಯೋ, ಇದೇನು ಗ್ರಹಚಾರ! ಇಷ್ಟು ದಿನ ಚೆನ್ನಾಗಿದ್ದ ನನಗೆ ಈ ಬೆಡ್ ಕಾಫಿಯಿಂದ 'ರೋಗಿಷ್ಠ' ಎಂಬ ಬಿರುದು ಬಂತಲ್ಲಪ್ಪಾ ಅಂತ ಸಂಕಟ ಗಂಟಲಲ್ಲಿ ಒತ್ತಿಕೊಂಡು ಬಂತು. ಉಸಿರಾಡೋದೇ ಕಷ್ಟವಾಗಿ ಕಿಟಕಿ ಬಾಗಿಲು ತೆಗೆದಾಗ ವಾಕಿಂಗ್ ಹೋಗ್ತಿರೋ ಜನಗಳ ಗುಂಪನ್ನು ನೋಡಿ ನನ್ನ ಮನಸ್ಸು ಹಗುರವಾಯಿತು. ರೋಗಿಷ್ಠ ನಾನೊಬ್ಬನೇ ಅಲ್ಲ, ರಸ್ತೆ ತುಂಬ ಇದ್ದಾರೆ ಅನ್ನಿಸಿತು. ಇವರಿಗೆಲ್ಲ ಒಂದಲ್ಲ ಒಂದು ರೋಗ ಇಲ್ಲದೇ ಹೋದರೆ ಯಾಕೆ ಬೆಳಗಿನ ಜಾವದಲ್ಲಿ ವಾಕಿಂಗ್ ಮಾಡ್ತಾರೆ? ಅನ್ನೋ ಸಂಶಯ ಬಂತು.

ನಾನು ವಾಕಿಂಗ್ ಶುರು ಮಾಡಿ ಹತ್ತು ದಿನ ಕೂಡಾ ಆಗಿಲ್ಲ. ಬೆಳಿಗ್ಗೆ ಛಳಿಯಲ್ಲಿ ನಡೆದು ಬರುತ್ತಿದ್ದ ಒಂದು ಡಜನ್ ವಾಕಿಂಗ್ ಸ್ಟಿಕ್ಕುಗಳು ನನ್ನನ್ನು ಹಠಾತ್ತನೆ ನಿಲ್ಲಿಸಿ, ಕೈ ಕುಲುಕಿ, 'Welcome to our new member' ಅನ್ನೋದೇ? 'ಶುಗರ್ ಇನ್ನೂರು ಇದ್ದರೂ ಗಾಬರಿ ಪಡಬೇಡಿ. ವಾಕಿಂಗ್ ಮಾಡ್ತಾ ಇದ್ರೆ It will come under control' ಅಂದ ಒಬ್ಬ ಖದೀಮ. ಎಲಾ ಇವನಾ! ನನ್ನ ಬ್ಲಡ್ ಶುಗರ್ ಪ್ರಾಬ್ಲಮ್ ಇವನಿಗೆ ಹೇಗೆ ಗೊತ್ತಾಯ್ತು? ಅಂತ ನಾನು ತನಿಖೆ ಮಾಡಿದೆ. 'ವಾಕಿಂಗ್ ಮುಗಿಸಿದ ಮೇಲೆ ನೀವು ಕ್ಯಾಂಟೀನ್‌ನಲ್ಲಿ ಕಾಫಿ ಕುಡಿಯುವಾಗ ಸರ್ವರ್ ನಿಮಗೆ ಒಂದು ಶುಗರ್ ಲೆಸ್ ಕಾಫಿ ಅಂತ ಕೂಗಿದಾಗ ನಮಗೆಲ್ಲ ಗೊತ್ತಾಯ್ತು ನಿಮಗೆ ಶುಗರ್ ಪ್ರಾಬ್ಲಮ್ ಇದೆ ಅಂತಾ' ಅಂದ ಆ ಖದೀಮ. ಈ ವಾಕಿಂಗ್‌ನಿಂದ ನನ್ನ ಆರೋಗ್ಯದ ರಹಸ್ಯ ಬೀದಿ ಪಾಲಾಯಿತಲ್ಲ ಅಂತ ನನಗೆ ಸ್ವಲ್ಪ ಬೇಜಾರಾಯಿತು.

ನಾನು ವಾಕಿಂಗ್ ಶುರು ಮಾಡಿದ ಮೇಲೆ ನನ್ನ ಕಣ್ಣು, ಕಿವಿ ತುಂಬ ಚುರುಕಾದವು. ಹಲವಾರು ವಾಕಿ ಟಾಕಿಗಳು ಸ್ನೇಹಿತರಾದರು. ಬೀದಿಯುದ್ದಕ್ಕೂ ಮಾತೇ ಮಾತು. ನನ್ನ ಜೊತೆ ನಡೆಯುತ್ತಿದ್ದ ಬೀದಿ ಸ್ನೇಹಿತರು ಒಂದಲ್ಲ ಒಂದು ರೀತಿಯ ರೋಗಿಗಳಾದ್ದರಿಂದ ನನಗೆ ಹಲವಾರು ರೋಗಗಳ ಚಿಕಿತ್ಸೆಗಾಗಿ ಇಂಗ್ಲಿಷ್ ಹಾಗೂ ದೇಶೀಯ ಔಷಧಿಗಳು, ಆಯುರ್ವೇದ ಮತ್ತು ಹೋಮಿಯೋಪತಿಗಳು ಹೇಳುವ ನಿವಾರಣೋಪಾಯಗಳನ್ನು ತಿಳಿದುಕೊಳ್ಳುವ ಸುಯೋಗ ಲಭಿಸಿದ್ದು ಪೂರ್ವಜನ್ಮದ

ಪಾಪ ಫಲ! ಕರಿ ಕುರಂಗು ಲೇಹ್ಯ, ಒಣ ಶುಂಠಿ ಭಸ್ಮ, ಅಶ್ವಗಂಧಿ ರಸಾಯನ, ಮಲಬದ್ಧತೆಗೆ ನಾರಿಕೇಳ ಗುಟಕ, ಕಸ್ತೂರಿ ಮಾತ್ರೆ, ಕ್ಲೇಶ ವರ್ಧಿನಿ ತೈಲ, ನೆಲ್ಲಿಕಾಯಿ ಎಣ್ಣೆ ಮುಂತಾದ ಔಷಧಿಗಳ ಪರಿಚಯವಾಗಿ ಬರುಬರುತ್ತಾ ಅದರ ಸೇವನೆ ಕೂಡಾ ಶುರು ಮಾಡಿದೆ. ಆದರೆ ಅದರಿಂದ ನನ್ನ ದೇಹ ಸ್ಥಿತಿ ಕೊಂಚವೂ ಸುಧಾರಿಸಲಿಲ್ಲ. ಜೇಬಿನಲ್ಲಿದ್ದ ಹಣ ಮಾತ್ರ ಕರಗಿತು.

ಒಂದು ದಿನವೂ ತಪ್ಪದೆ ಬೆಳಿಗ್ಗೆ ಚಳಿಯಲ್ಲಿ ವಾಕಿಂಗ್ ಹೋಗುವ ನೂರಾರು ಜನರ ಮಾನಸಿಕ ಒತ್ತಡಗಳನ್ನೂ, ಚಿತ್ರವಿಚಿತ್ರ ಭೌತಿಕ ಚರ್ಯೆಗಳನ್ನೂ, ಅವರ ಶಬ್ದ ಪ್ರಯೋಗಗಳನ್ನೂ ಗಮನವಿಟ್ಟು ನೋಡಿ, ಕೇಳಿದಾಗಲೇ ನನಗೆ ವಾಕಿಂಗ್ ಪ್ರಪಂಚದ ನಗೆ–ಹೊಗೆ ಗೊತ್ತಾಗಿದ್ದು. ಫಾರಿನ್ನಿನಲ್ಲಿರೋ ಮಗ ನೀಗ್ರೋ ಹುಡುಗಿಯನ್ನು ಪ್ರೀತಿಸಿ ಮದುವೆ ಆಗಿದ್ದು, ಕ್ಯಾಲಿಫೋರ್ನಿಯಾಗೆ ಹೋದ ಮಗಳು ಪ್ರೀತಿಯಿಂದ ಅವಳ ಅಪ್ಪನಿಗೆ ಸಾವಿರ ಡಾಲರು ಕಳಿಸಿದ್ದು, ಕಂಪ್ಯೂಟರ್ ಎಂಜಿನಿಯರ್ ಅಳಿಯ ವಾಹನ ಅಪಘಾತಕ್ಕೆ ಸಿಕ್ಕಿ ಸತ್ತಿದ್ದು, ರಾಣೆಬೆನ್ನೂರು ಅತ್ತೆ ಬೆಂಗಳೂರು ಸೊಸೆಗೆ ಕಿರುಕುಳ ಕೊಟ್ಟಿದ್ದು, ಬೆಂಗಳೂರಿನ ಸೊಸೆ ಅತ್ತೆ ಕಾಲು ಜಾರಿ ಬೀಳೋ ಹಾಗೆ ಮಾಡಿ ಅತ್ತೆಯ ಕಾಲು ಮುರಿದಿದ್ದು, ಲಂಚ ಕೊಟ್ಟು ಪ್ರಾಣ ಕಳೆದುಕೊಂಡ ಟೀವಿ ಸೀರಿಯಲ್ ಕಥೆ.....ಇವೇ ಮುಂತಾದ ವೈವಿಧ್ಯಮಯವಾದ ಬದುಕಿನ ಅನುಭವಗಳೇ ದಾರಿಯುದ್ದಕ್ಕೂ ನಡೆಯುವ ಸಂಭಾಷಣೆಯ ತಿರುಳು. ವಾಕಿಂಗ್ ಮಾಡುವಾಗ ಹೀಗೆ ಒಬ್ಬರಿಗೊಬ್ಬರು ತಮ್ಮ ತಮ್ಮ ಬದುಕಿನ ಕಷ್ಟ, ನಷ್ಟಗಳನ್ನು ಹೇಳಿಕೊಂಡು ಮನಸ್ಸಿನ ಟೆನ್ಷನ್ ಕಡಿಮೆ ಮಾಡಿಕೊಳ್ಳುತ್ತಾರೆ. ಇದರಿಂದ ಮನಸ್ಸಿನ ಒತ್ತಡ ಕಡಿಮೆಯಾಗಿ ಎಷ್ಟೋ ಬಗೆಯ ಖಾಯಿಲೆಗಳು ನಿವಾರಣೆ ಆಗಿದ್ದೂ ಇದೆ ಅಂತ ಕೆಲವರ ಅಂಬೋಣ. ನಮ್ಮ 'ಇಂಡಿಯಾ ಮೆಡಿಕಲ್ ಕೌನ್ಸಿಲ್'ನವರು ಬರೀ ವಾಕಿಂಗಿನಿಂದ ಎಷ್ಟೋ ಖಾಯಿಲೆಗಳು ಗುಣವಾಗುತ್ತವೆ ಎಂಬುದನ್ನು ಕಂಡು ಹಿಡಿದು 'ಸಿಂಪ್ಲಿ ವಾಕ್' ಅಂತ ಜಾಹೀರಾತನ್ನೂ ಕೊಡುತ್ತಾರೆ. ಅಷ್ಟೆಲ್ಲ ದುಡ್ಡು ಖರ್ಚು ಮಾಡಿ ಹೈ ಟೆಕ್ ಆಸ್ಪತ್ರೆ ಕಟ್ಟುವ ಬದಲು ಈ 'ಸಿಂಪ್ಲಿ ವಾಕ್' ಜಾಹೀರಾತಿನಿಂದ ಎಷ್ಟು ಹಣ ಉಳಿಸಬಹುದು!

ವಾಕಿಂಗ್ ಹೋಗುವಾಗ ತರಹಾವರಿ ಜನರನ್ನು ನೀವು ನೋಡುತ್ತೀರಿ ಅಂತ ಈಗ ತಾನೆ ಹೇಳಿದೆನಲ್ಲ. ಅದರ ಕೆಲವು ಉದಾಹರಣೆಗಳು ಇಲ್ಲಿವೆ ನೋಡಿ.

೧. ತಲೆಯ ಮೇಲೆ ಗಾಂಧಿ ಟೋಪಿ ಹಾಕ್ಕೊಂಡು, ಬಾಯಲ್ಲಿ ವಿಷ್ಣು ಸಹಸ್ರ ನಾಮ ಜಪಿಸುತ್ತಾ ಕೈಯಲ್ಲಿರುವ ಚೈನಿನಲ್ಲಿ ಒಂದು ನಾಯಿಯನ್ನು ಎಳೆದುಕೊಂಡು ಎದುರಿಗೆ ಬಂದ ಪ್ರಾಯದ ಹೆಂಗಸರನ್ನೆಲ್ಲ ಕಣ್ಮರೆಯಾಗುವತನಕ ನೋಡುವ 'ಸಭ್ಯ' ವಾಕರುಗಳು.

೨.ಮನೆ, ಕಟ್ಟಡಗಳ ಮಧ್ಯೆ ಚಾಮುಂಡಿ ಬೆಟ್ಟ ಕಣ್ಣಿಗೆ ಬಿದ್ದಾಕ್ಷಣ ಉದ್ದಂಡ ನಮಸ್ಕಾರ ಮಾಡುವ ಭಕ್ತಾಗ್ರೇಸರ ವಾಕರುಗಳು.

೩.ಕೈಯನ್ನು ಗಾಳಿಯಲ್ಲಿ ಗುದ್ದುತ್ತಾ, ಕತ್ತನ್ನು ನಾನಾ ರೀತಿಯಲ್ಲಿ ತಿರುಗಿಸುತ್ತಾ ಬರುವ ಎಕ್ಸರ್ಸೈಸ್ ಎಂಥ್ಯೂಸಿಯಾಸ್ಟ್ ವಾಕರುಗಳು.

೪.ಒಂದು ಕ್ಷಣವೂ ಬಿಡದೆ ನಿರಂತರವಾಗಿ ಚಪ್ಪಾಳೆ ಹೊಡೆಯುತ್ತಾ ವಾಕ್ ಮಾಡುವ ಚಪ್ಪಾಳೆ ತೆರಪಿ ವಾಕರುಗಳು ಇತ್ಯಾದಿ, ಇತ್ಯಾದಿ

ಚಪ್ಪಾಳೆ ಹೊಡೆಯುತ್ತಿರುವ ಒಬ್ಬ ಮಹಾನುಭಾವನನ್ನು 'ಯಾಕೆ ಹೀಗೆ ಚಪ್ಪಾಳೆ ಹೊಡೀತೀರಾ?' ಅಂತ ಕೇಳಿದೆ.

'ದಿನಕ್ಕೆ ೧೨೦ ಸಾರಿ ತಲೆಯ ಮೇಲೆ ಚಪ್ಪಾಳೆ ತಟ್ಟಿದರೆ ಡಯಾಬಿಟಿಸ್ ಮಾಯವಾಗುತ್ತದೆ. ಹಾರ್ಟ್ ಫೈಲ್ಯೂರ್ ಇರುವವರು ಬೆನ್ನ ಹಿಂದೆ ಚಪ್ಪಾಳೆ ತಟ್ಟಬೇಕು. ಆಸ್ತಮಾ ಇರುವವರು ಎದೆಯ ಮುಂದೆ ಚಪ್ಪಾಳೆ ತಟ್ಟಬೇಕು' ಅಂತ ಬೇರೆ ಬೇರೆ ಖಾಯಿಲೆಗಳ ನಿವಾರಣೆಗೆ ಬೇರೆ ಬೇರೆ ಭಂಗಿಗಳಲ್ಲಿ ಚಪ್ಪಾಳೆ ತಟ್ಟುವ ವಿವರಣೆಯನ್ನು ಕೊಟ್ಟರು! ನನಗೆ ಬಹಳ ಖುಷಿಯಾಗಿ ನಾನೂ ಯಾಕೆ ಚಪ್ಪಾಳೆ ತೆರೆಪಿ ಪ್ರಾರಂಭ ಮಾಡಬಾರದು? ಅನ್ನಿಸಿ ಒಂದು ದಿನ ವಾಕಿಂಗ್ ಮಧ್ಯೆ ಚಪ್ಪಾಳೆ ಹಾಕಿದೆ. ನನ್ನ ಮುಂದೆ ಒಬ್ಬಳು ಯುವತಿ ಬೆಕ್ಕಿನ ತರಹ ನಡೆದುಕೊಂಡು ಹೋಗುತ್ತಿದ್ದಳು. ಚಪ್ಪಾಳೆ ಶಬ್ದಕ್ಕೆ ಹಿಂದೆ ತಿರುಗಿ ಕೆಂಗಣ್ಣು ಬಿಡುತ್ತಾ 'ನಿಮಗೆ ಇಷ್ಟು ವಯಸ್ಸಾಗಿದ್ರೂ ನಾಚಿಕೆ ಆಗಲ್ವಾ ಹೀಗೆ ಚಪ್ಪಾಳೆ ಹೊಡೆದು ಬೀದೀಲಿ ಹೋಗೋ ಹೆಂಗಸರನ್ನು ಕರೆಯೋಕೆ?' ಅಂತ ಕಪಾಳಕ್ಕೆ ಹೊಡೆಯೋರ ತರಹ ಕೇಳಿದಳು.

'ಅಮ್ಮಾ, ತಾಯಿ, ದೇವರಾಣೆ ನಿಮ್ಮನ್ನ ಕರೀಲಿಲ್ಲ. ನನ್ನ ಡಯಾಬಿಟಿಸ್ ಹೋಗಲಿ ಅಂತ ಚಪ್ಪಾಳೆ ತೆರೆಪಿ ಮಾಡ್ತಿದ್ದೆ ಅಷ್ಟೆ' ಅಂತ ಸಣ್ಣ ಮುಖ ಮಾಡಿಕೊಂಡು ಹೇಳಿದೆ.

'ಈ ತರಾ ಬೀದೀಲಿ ಚಪ್ಪಾಳೆ ತಟ್ಟೋ ಬದಲು ನಿಮ್ಮನೆ ಬಾಲ್ಕನೀಲಿ ನಿಂತುಕೊಂಡು ನಿಮಗೆ ಇಷ್ಟ ಬಂದಷ್ಟು ಚಪ್ಪಾಳೆ ತಟ್ಟಿ' ಅಂದಳು ಆಕೆ!

ನಮ್ಮ ನಗರದ ಮುಖ್ಯ ವಾಕಿಂಗ್ ಲೇನಿನಲ್ಲಿ ಅವರವರ ವಯೋಧರ್ಮಕ್ಕೆ ಹಾಗೂ ವಿಭಿನ್ನ ರೋಗಗಳ ಅಗತ್ಯಕ್ಕೆ ಅನುಗುಣವಾಗಿ ಕಾಲಿಗೆ ಕ್ಯಾನ್ವಾಸ್ ಶೂಸ್, ತಲೆಗೆ ಟೋಪಿ ಅಥವಾ ಮಫ್ಲರ್, ತುಂಬು ತೋಳಿನ ಸ್ವೆಟರ್ ಅಥವಾ ಕಾಶ್ಮೀರಿ ಶಾಲು, ನೈಟೀ ಮುಂತಾದ ಬಣ್ಣಬಣ್ಣದ ಪೋಷಾಕುಗಳನ್ನು ಧರಿಸಿ ಸೂರ್ಯೋದಯಕ್ಕೆ ಮುಂಚೆ ಜನ ನಡೆಯುತ್ತಿರುವ ದೃಶ್ಯವನ್ನು ನೀವು ಮುಂದಿನ ಸಾರಿ ಇಂಡಿಯಾಗೆ ಹೋದಾಗ ನೋಡಿ ಅನುಭವಿಸಲೇಬೇಕು. ಒಂದೇ ಮಾತಿನಲ್ಲಿ ಹೇಳುವುದಾದರೆ ಈ ವಾಕಿಂಗ್ ಅನ್ನೋದು ನಮ್ಮ ನಗರಗಳಲ್ಲಿ ಬೆಳೆದು ಬಂದಿರುವ ಒಂದು ಮಹತ್ವಪೂರ್ಣ ಸಾಂಸ್ಕೃತಿಕ ಕಾರ್ಯಕ್ರಮ ಆಗಿಬಿಟ್ಟಿದೆ!

ನಮ್ಮ ಮನೆ ಮೈಸೂರಿನಲ್ಲಿ ಡಬಲ್ ರೋಡ್ ಪಕ್ಕದಲ್ಲೇ ಇದೆ. ಅಲ್ಲಿ ಪ್ರತಿ ದಿನ ಆರು ಜನ ಧಡೂತಿ ಹೆಂಗಸರು ವಾಕಿಂಗ್ ಹೋಗುತ್ತಾರೆ. ಅವರ ಸಂಭಾಷಣೆಯಂತೂ ಯಾವಾಗಲೂ ಕಾಂಗ್ರೆಸ್ ಕಡ್ಲೆ, ಪುರಿ ಉಂಡೆ, ಕೋಡುಬಳೆ, ಕರಿದ ಅವರೇಕಾಳು, ನಿಪ್ಪಟ್ಟು, ಮೈಸೂರ್ ಬೋಂಡಾ ಮುಂತಾದ ತಿಂಡಿಗಳನ್ನು ತಯಾರಿಸುವ ವಿಧಾನದಲ್ಲೇ ಗಿರಕಿ ಹೊಡೆಯುತ್ತಾ ಇರುತ್ತೆ. ಅವರು ಡಬಲ್ ರೋಡಿನಲ್ಲಿ ಒಂದು ರೌಂಡ್ ಬರುವಷ್ಟರಲ್ಲಿ ನನ್ನಾಕೆ ನಾಲ್ಕು ರೌಂಡ್ ಹಾಕಿರುತ್ತಾಳೆ. ಇಷ್ಟು ಜೋರಾಗಿ ನಡೆಯುವ ಈಕೆ ಯಾರೆಂದು ಪತ್ತೆ ಹಚ್ಚಬೇಕೆಂದು ಆ ಹೆಂಗಸರ ಗುಂಪು ಒಂದು ದಿನ ಬೇಕೆಂದೇ ತಾವು ನಡೆಯುವ ದಿಕ್ಕನ್ನೇ ಬದಲಾಯಿಸಿ ಎದುರಿನಿಂದ ನನ್ನವಳು ಸಿಕ್ಕುವ ರೀತಿಯಲ್ಲಿ ನಡೆದರು. ಇವಳು ಎದುರಿಗೆ ಬಂದಾಗ ಅವಳನ್ನು ನಿಲ್ಲಿಸಿ 'ಏನು ಮೇಡಂ ಇಷ್ಟು ಬೇಗ ಬೇಗ ನಡೀತೀರಿ!' ಅಂದರು.

'ನನಗೆ ಹೀಗೆ ನಡೆಯೋದೇ ಅಭ್ಯಾಸ' ಎಂದಳು ನನ್ನಾಕೆ.

'ಬೇಗ ಬೇಗ ನಡೆದರೆ ಕೀಲುಗಳು ಸವೆಯುತ್ತೆ, ಮೈ ಬರುತ್ತೆ ಅಂತಾರಲ್ಲ ಡಾಕ್ಟರು. ಇದು ನಿಜವೆ?' ಅಂತ ಕೇಳಿದರು. ಹೀಗೇ ಮಾತಿಗೆ ಮಾತು ಬೆಳೆಸಿ, ನಮಗೆ ಇಬ್ಬರು ಗಂಡು ಮಕ್ಕಳಿದ್ದಾರೆ ಎಂಬುವುದನ್ನು ತಿಳಿದು 'ಅವರಿಗೆ ಮದುವೆ ಆಗಿದೆಯೆ?' ಎಂದು ವಿಚಾರಿಸಿದರು. ನಮ್ಮ ಮಕ್ಕಳ ವಯಸ್ಸಿಗೆ ಆ ಆರು ಜನರಲ್ಲಿ ಯಾರ ಮಗಳಿಗೆ ವಯಸ್ಸು ಹೊಂದಬಹುದು ಎಂಬ ಮಾಹಿತಿಯನ್ನೆಲ್ಲ ಸಂಗ್ರಹಿಸಿದರು. ಅವರ ಮಾತಿನ ಧಾಟಿಗೆ ಹೆದರಿ ನನ್ನಾಕೆ ಕೆಲವು ದಿನಗಳ ಮಟ್ಟಿಗೆ ಡಬಲ್ ರೋಡಿನಲ್ಲಿ ನಡೆಯುವುದನ್ನೇ ನಿಲ್ಲಿಸಿಬಿಟ್ಟಳು!

ನಾನು ಹೀಗೇ ಒಂದು ದಿನ ವಾಕಿಂಗ್ ಹೊಗುತ್ತಿದ್ದಾಗ ಒಂದು ಮುದುಕರ ಗುಂಪು ಅಲ್ಲೇ ಹತ್ತಿರದ ಪಾರ್ಕಿನಲ್ಲಿ ಒಟ್ಟಾಗಿ ನಿಂತು ಸಿಕ್ಕಾಪಟ್ಟೆ ನಗುತ್ತಿದ್ದಿದ್ದು ಕಾಣಿಸಿತು. ಮರು ದಿನವೂ ಅದೇ ಮುದುಕರ ಗುಂಪು ಹಾಗೇ ನಗುತ್ತಿತ್ತು! ಅರೆ, ಇದು ಹೇಗೆ ಸಾಧ್ಯ! ಅನ್ನಿಸಿತು ನನಗೆ. ಮೂರನೆಯ ದಿನವೂ ಅದೇ ದೃಶ್ಯ ಕಣ್ಣಿಗೆ ಬಿದ್ದಾಗ 'ಇದು ಏನು ಸಮಾಚಾರ?' ಅಂತ ಕಂಡು ಹಿಡಿಯಲೇಬೇಕು ಅಂತ ಆ ಗುಂಪಿನ ಹತ್ತಿರ ಹೋಗಿ ವಿಚಾರಿಸಿದೆ. ಅದು ಲಾಫಿಂಗ್ ತೆರಪಿಯಂತೆ!

ಈ ಇಳಿವಯಸ್ಸಿನ ಮುದುಕರೆಲ್ಲ ರಾಮೋಜಿ ಪಾರ್ಕಿನಲ್ಲಿ ಬೆಳಿಗ್ಗೆ ನಾಲ್ಕೂವರೆಗೆ ಒಟ್ಟಾಗಿ ಲಾಫಿಂಗ್ ತೆರಪಿ ಮಾಡುತ್ತಾರೆ. ಕಾರಣ ಇಲ್ಲದೆಯೇ ಸುಮ್ಮನೆ ನಗಬೇಕು. ಹೊಟ್ಟೆ ಹುಣ್ಣಾಗೋ ಹಾಗೆ ನಕ್ಕರೆ ದೇಹಕ್ಕೂ ವ್ಯಾಯಾಮ, ಮನಸ್ಸೂ ಹಗುರಾಗುತ್ತೆ ಅನ್ನೋ ಸಿದ್ಧಾಂತ ಇವರದ್ದು. ಇವರಿಗೆಲ್ಲ ಒಬ್ಬರು ಲೀಡರ್ ಇರ್ತಾರೆ. ಅವರು ಬೇರೆ ಬೇರೆ ರೀತಿಯಲ್ಲಿ ನಕ್ಕಾಗ ಗುಂಪಿನವರೆಲ್ಲ ಹಾಗೇ ನಗಬೇಕು!

ನಾನೂ ಆ ಗುಂಪಿನಲ್ಲಿ ಒಂದಾಗಿ ಅವರು ಆಡುವ ತರಹವೇ ಆಡಿದೆ. ಮನಸ್ಸು ಆನಂದದಿಂದ ತೇಲಿತು. ಕೊನೆಯಲ್ಲಿ ಆ ಲೀಡರು 'ಈಗ ನೀವು ಮನಸ್ಸಿಗೆ ಬಂದ ಹಾಗೆ ನಗಬಹುದು' ಅಂದರು. ನಾನು ಕಾಲು ಕುಟ್ಟುತ್ತಾ ಕುಪ್ಪಳಿಸಿ, ದೊಡ್ಡ ದನಿಯಲ್ಲಿ ಜೋರಾಗಿ ನಕ್ಕು ಒಳ್ಳೆ ಕೋತಿಯ ತರಹ ಹಾರಾಡಿದೆ. ನಗುತ್ತಿದ್ದ ಮುದುಕರೆಲ್ಲ ಒಮ್ಮೆಲೆ ಸೀರಿಯಸ್ಸಾಗಿಬಿಟ್ಟರು. ಒಬ್ಬ ಮುದುಕ ವಾಕಿಂಗ್ ಸ್ಟಿಕ್ ಮೇಲೆತ್ತಿ 'ಯಾವೋನೋ ಅವನು, ಬಡ್ಡಿ ಮಗ! ಹಾಕ್ಬಿಡ್ತೀನಿ ನೋಡು' ಅಂತ ಕೋಲನ್ನು ಬೀಸಾಡಿದರು. ಇನ್ನೂ ಹತ್ತಾರು ವಾಕಿಂಗ್ ಸ್ಟಿಕ್ಕುಗಳು ಮೇಲೆ ಹೋಗಿದ್ದು ಮಬ್ಬಿನಲ್ಲಿ ಕಾಣಿಸಿತು. ನನ್ನ ಎದೆ ಡವ ಡವ ಅಂತ ಜೋರಾಗಿ ಹೊಡ್ಕೊಳ್ಳೋಕೆ ಶುರುವಾಯಿತು. ಅಲ್ಲಿಂದ ತಕ್ಷಣ ಕಾಲು ಕಿತ್ತೆ. ನನ್ನ ಜೀವನದಲ್ಲಿ ಇಷ್ಟೊಂದು ಜೀವ ಭಯ ಎಂದೂ ಆಗಿರಲಿಲ್ಲ! ಈಗಲೂ ಮೈಸೂರಿನಲ್ಲಿ ವಾಕಿಂಗ್ ಹೋದಾಗ ಅಪ್ಪಿತಪ್ಪಿಯೂ ರಾಮೋಜಿ ಪಾರ್ಕ್ ಹತ್ತಿರ ತಲೆ ಹಾಕೋದಿಲ್ಲ.

ನಮ್ಮ ಇಂಡಿಯಾದಲ್ಲಿ ಸಾಮಾನ್ಯವಾಗಿ ಆರೋಗ್ಯವಾಗಿರುವವರು ವಾಕಿಂಗ್ ಹೋಗೋದೇ ಇಲ್ಲ. 'ನನಗೆ ಯಾವ ಖಾಯಿಲೇನೂ ಇಲ್ಲ. ವಾಕಿಂಗ್ ಮಾಡಿ ಮೈ ಕೈ ಯಾಕೆ ನೋಯಿಸಿಕೋಬೇಕು?' ಅಂತಾರೆ. ಬೆಳಿಗ್ಗೆ ವಾಕ್ ಮಾಡ್ತಿರೋ ಜನಗಳನ್ನ ನಿಲ್ಲಿಸಿ 'ಯಾಕೆ ವಾಕಿಂಗ್ ಹೋಗ್ತೀರಿ' ಅಂತ ಕೇಳಿದರೆ ನನಗೆ ಬಿಪಿ, ನಾನು ಹಾರ್ಟ್ ಪೇಶೆಂಟು, ಡಯಾಬಿಟಿಸ್, ಆಸ್ತಮಾ ಅಂತ ಏನಾದರೊಂದು ಕಾರಣ ಕೊಡುತ್ತಾರೆ. 'ನಿಜವಾಗ್ಲೂ ನನಗೆ ಆರೋಗ್ಯ ಸರಿ ಇದ್ದಾಗ ವಾಕ್ ಮಾಡಿದ್ರೆ ಈ ಖಾಯಿಲೆ ಬರ್ತಾ ಇರ್ಲಿಲ್ಲ' ಅಂತ ಹೇಳ್ಕೊಂಡು ಒದ್ದಾಡ್ತಾರೆ.

ವೈದ್ಯ ವೃತ್ತಿಯವರು ಪ್ರಾಕ್ಟಿಸ್ ಶುರು ಮಾಡೋ ಮೊದಲು ಒಂದು ಬಡಾವಣೆಯಲ್ಲಿ ಎಷ್ಟು ಜನ ವಾಕಿಂಗ್ ಹೋಗ್ತಾರೆ ಎಂಬುದರ ಬಗ್ಗೆ ಕೆಲವು ಅಂಕಿ ಅಂಶಗಳನ್ನು ಸಂಗ್ರಹಿಸಬೇಕು. ಬೆಳಿಗ್ಗೆ ವಾಕ್ ಮಾಡುವವರ ದೇಹಸ್ಥಿತಿಯನ್ನು ವಿಚಾರಿಸಿದರೆ ನೂರಕ್ಕೆ ಎಂಬತ್ತು ಜನರಿಗೆ ಡಯಾಬಿಟಿಸ್, ಆಸ್ತಮಾ, ಬಿಪಿ, ಸೈಕಿಯಾಟ್ರಿಕ್ ಪ್ರಾಬ್ಲಮ್ ಏನಾದರೂ ಇದ್ದೇ ಇರುತ್ತದೆ. ಹೊಸ ವೈದ್ಯರು ಯಾವ ಬಡಾವಣೆಯಲ್ಲಿ ಜಾಸ್ತಿ ಜನ ವಾಕಿಂಗ್ ಹೋಗ್ತಾರೋ ಅಲ್ಲಿ ಪ್ರಾಕ್ಟಿಸ್ ಶುರು ಮಾಡಿದರೆ ಚೆನ್ನಾಗಿ ಪ್ರವರ್ಧಮಾನಕ್ಕೆ ಬರುತ್ತಾರೆ. ಮೈಸೂರಿನಲ್ಲಿ ಅಪೋಲೊ ಹಾಸ್ಪಿಟಲ್‌ನವರು ಡಬಲ್ ರೋಡಿನಲ್ಲಿ ಒಂದು ಮೇಜು ಹಾಕ್ಕೊಂಡು ಬಂದವರಿಗೆಲ್ಲ ಕರೆದು ಚೀಟಿ ಕೊಟ್ಟು ಸೋಮವಾರ ಈ ಚೀಟಿ ತೋರಿಸಿದರೆ ಬಿಪಿ ಚೆಕ್ ಉಚಿತವಾಗಿ ಮಾಡ್ತೀವಿ, ಗುರುವಾರ ಬ್ಲಡ್ ಶುಗರ್ ಚೆಕ್ ಉಚಿತವಾಗಿ ಮಾಡ್ತೀವಿ ಅಂತ ಚೀಟಿ ಹಂಚುತ್ತಾರೆ.

ನಮ್ಮ ಕುವೆಂಪು ನಗರದಲ್ಲಿ ರಸ್ತೆಗಳ ಹೆಸರು ತುಂಬ ಚೆನ್ನಾಗಿದೆ- ನವಿಲು ರಸ್ತೆ, ನೃಪತುಂಗ ರಸ್ತೆ, ಅಗ್ನಿಹಂಸ, ಲಲಿತಾದ್ರಿ ಅಂತ ಕುವೆಂಪು ಅವರ ಕವನಗಳಿಂದ ಆಯ್ದು ಹೆಸರುಗಳಿವೆ. ಆದರೆ ಈ ವಾಕಿಂಗ್ ನಾಗರಿಕರು ಆ ರಸ್ತೆಗಳಿಗೆ ಬೇರೆ ಬೇರೆ ಅಡ್ಡ ಹೆಸರು ಇಟ್ಟಿದ್ದಾರೆ- ಡಯಾಬಿಟಿಕ್ ಲೇನ್, ಬಿಪಿ ರೋಡ್, ಆಸ್ತಮಾ ಕಾರ್ನರ್, ಗಾಲ್ ಬ್ಲ್ಯಾಡರ್ ಫೀಲ್ಡ್, ಡಬಲ್ ಬೈಪಾಸ್ ರೋಡ್, ಹಾರ್ಟ್ ಹೈವೇ, ಕಾರ್ಡಿಯೋ ಪಾರ್ಕ್, ರೊಮ್ಯಾಂಟಿಕ್ ಲೇನ್ (ಈ ರಸ್ತೆಯಲ್ಲಿ ತುಂಬ ಪೊದೆಗಳಿವೆ!) ಇತ್ಯಾದಿ, ಇತ್ಯಾದಿ.

ನಮ್ಮ ಬಡಾವಣೆಯಲ್ಲಿ ವಾಕಿಂಗ್ ಮಾಡುವ ರಸ್ತೆಗಳಲ್ಲಿ ಕಳ್ಳತನ, ಸರಗಳನ್ನು ಕತ್ತಿನಿಂದ ಕೀಳುವುದು, ಮಗ್ಗಿಂಗ್, ಪಿಕ್ ಪಾಕೆಟ್ ಮುಂತಾದ ಯಾವ ಹೀನ ಕೃತ್ಯಗಳೂ ನಡೆದಿಲ್ಲ. ಯಜಮಾನರನ್ನು ಕಡ್ಡಾಯವಾಗಿ ವಾಕಿಂಗ್ ಹೋಗುವಂತೆ ಮಾಡುವ ಕಂತ್ರಿ ನಾಯಿಗಳು ರಸ್ತೆಗಳಿಗೆ ಒಳ್ಳೆ ಸೆಕ್ಯುರಿಟಿ ವ್ಯವಸ್ಥೆ ಮಾಡಿವೆ! ಈ ಕಂತ್ರಿ ನಾಯಿಗಳು ನೆಲ ಮೂಸುತ್ತಾ ಗುರ್ ಗುರ್ ಅಂತ ಶಬ್ದ ಮಾಡುತ್ತಾ ನಡೆಯುವುದನ್ನು ನೋಡಿಯೇ ಕಳ್ಳರ ಸೈನ್ಯವೆಲ್ಲಾ ಭಯ ಪಟ್ಟು ಮನೆಯಲ್ಲೇ ಕುಳಿತಿರಬೇಕು!

ಹಾ, ಇನ್ನೊಂದು ಮರೆತಿದ್ದೆ. ರಾಮಕೃಷ್ಣ ವೃತ್ತದಲ್ಲಿ ಈಗ ಒಂದು ಆಯುರ್ವೇದಿಕ್ ವ್ಯಾನ್ ನಿಂತಿರುತ್ತೆ. ಒಂದು ಮೇಜಿನ ಮೇಲೆ ಎಂಟು ಹತ್ತು ಬಗೆಯ ಕಷಾಯ ಇಟ್ಟುಕೊಂಡಿರುತ್ತಾರೆ. ಸಕ್ಕರೆ ಖಾಯಿಲೆಯವರಿಗೆ ಹಾಗಲ ಕಾಯಿ ಕಷಾಯ, ಬೇವಿನ ಸೊಪ್ಪು ತುಳಸಿ ಮಿಶ್ರಣ ಕಷಾಯ(ಅದ್ಯಾವುದೋ ಒಂದು ಖಾಯಿಲೆಗೆ), ಅಸ್ತಮಾದವರಿಗೆ ದಾಳಿಂಬ್ರೆ ಸೊಪ್ಪಿನ ರಸ....ನಿಮಗೆ ಏನು ಖಾಯಿಲೆ ಇದ್ದರೆ ಅದಕ್ಕೆ ತಕ್ಕ ಒಂದು ಕಷಾಯ! ಯಾವ ಕಷಾಯ ಬೇಕಾದರೂ ಕುಡೀರಿ. ಒಂದು ಪ್ಲಾಸ್ಟಿಕ್ ಲೋಟಕ್ಕೆ ಹತ್ತು ರೂಪಾಯಿ. ನೀವು ಊಹಿಸಿದ ಹಾಗೆ ಅವನಿಗೂ ರೋರಿಂಗ್ ಬಿಸಿನೆಸ್!

ಖಂಡಿತಾ ನೀವು ಮುಂದಿನ ಸಾರಿ ಭಾರತಕ್ಕೆ ಹೋದಾಗ ವಾಕಿಂಗ್ ಪ್ರಪಂಚದ ರಸಾನುಭವಗಳನ್ನು ಅನುಭವಿಸಿ, ಆನಂದಿಸಿ ಎಂದು ಹಾರೈಸುತ್ತಾ ಮುಗಿಸುತ್ತೇನೆ.

ವಿ.ಸೂ. ಎಲ್ಲರಿಗಿಂತ ಮುಂಚೆ ವಾಕಿಂಗ್ ಹೋಗುವವರು ಕೈಯಲ್ಲಿ ಒಂದು ಪ್ಲಾಸ್ಟಿಕ್ ಚೀಲ ಇಟ್ಟುಕೊಂಡು ಹೋದರೆ ದೇವರ ಪೂಜೆಗೆ ತುಂಬ ಹೂ ಸಿಕ್ಕುತ್ತಂತೆ!

ಸ್ಫೂರ್ತಿ: ಬಹಳ ವರ್ಷಗಳ ಹಿಂದೆ 'ಅಪರಂಜಿ'ಯಲ್ಲಿ ಓದಿದ್ದ ಒಂದು ಲೇಖನ. ಹೆಸರು ನೆನಪಿಲ್ಲ. ಕ್ಷಮೆ ಇರಲಿ.



# ಓಂಶಾಂತಿಃ

## ಪಿ.ಎಸ್. ವೈಯ

ಅಮೆರಿಕಾಗೆ ಬಂದ ಮೇಲೆ ಭಾರತದ ಎಲ್ಲ ಗಂಡಸರೂ 'ಅಮ್ಮಾವ್ರ ಗಂಡ' ಆಗಿಬಿಟ್ಟಿದ್ದಾರೆ! ನೀವೇ ಸುತ್ತಮುತ್ತ ನೋಡಿ. ಗೊತ್ತಾಗುತ್ತೆ. ಇಲ್ಲಿ ಎಲ್ಲ ಸಂಘ, ಸಂಸ್ಥೆಗಳ ಬೆನ್ನೆಲುಬು ಹೆಂಗಸರೇ. ಹೆಸರಿಗೆ ಒಬ್ಬ ಪೆದ್ದಂಭಟ್ಟನನ್ನು 'ಅಧ್ಯಕ್ಷ' ಅಂತ ಮಾಡಿ ಕೂರಿಸ್ತಾರೆ. ಆಮೇಲೆ ಎಲ್ಲ ವಹಿವಾಟುಗಳನ್ನೂ ಹೆಂಗಸರೇ ನೋಡಿ-ಕೊಳ್ಳೋದು. ಯಾವ ಯಾವ ಕಾರ್ಯಕ್ರಮ ಇಟ್ಕೋಬೇಕು, ಆ ಕಾರ್ಯಕ್ರಮಗಳು ಯಾವತ್ತು, ಎಲ್ಲಿ, ಹೇಗೆ ನಡೆಯಬೇಕು, ಯಾವ ವೇಳೆಗೆ ಶುರುವಾಗಬೇಕು, ಅಂದಿನ ಊಟಕ್ಕೆ ಏನೇನು ಐಟಂ ಎಲ್ಲ ಹೆಂಗಸರೇ ನಿರ್ಧರಿಸೋದು!

ಪ್ರೇಕ್ಷಕ ಮಹಾಶಯರೂ ಹಾಗೇ. ಸಮಾರಂಭ ಅರ್ಧ ಕೂಡಾ ಆಗಿರಲ್ಲ. ಆಗಲೇ ಗಂಡಸರಿಗೆ ಮನೆಗೆ ಹೋಗುವ ಕಾತರ ಶುರುವಾಗುತ್ತೆ. ಆದರೆ ಅವರವರ ಅಮ್ಮಾವ್ರು ಕೇಳಬೇಕಲ್ಲ! ಅವರು ಉಳಿದ ಅಮ್ಮಾವ್ರ ಜೊತೆ ಸೀರೆ, ಒಡವೆ, ಅಡಿಗೆ ರೆಸಿಪಿ ಮುಂತಾದ ಸ್ವಾರಸ್ಯಕರವಾದ ಸಂಭಾಷಣೆ ನಡೆಸುತ್ತಾ ಜಾಲಿಯಾಗಿ ಕೂತಿರುತ್ತಾರೆ. ಪೆಚ್ಚು ಮೋರೆ ಮಾಡಿಕೊಂಡು ಬಾಗಿಲ ಹತ್ತಿರ ಕಾಯುತ್ತಿರುವ 'ಗಂಡ' ಅನ್ನೋ ಬಡಪ್ರಾಣಿಯ ಕಡೆ ಮರೆತು ಕೂಡಾ ನೋಡ್ಡೋಲ್ಲ. ಕೊನೆಗೊಮ್ಮೆ ಅಮ್ಮಾವ್ರು ಹೊರಡುವ ಸೂಚನೆ ತೋರಿಸಿ 'ನಾನು ಬರ್ತೀನಮ್ಮ ಇನ್ನು' ಅನ್ನುತ್ತಾ ಎದ್ದು ನಿಂತರೋ, ಗಂಡನ ಮುಖ ಅರಳುತ್ತದೆ! 'ಉಸ್ಸಪ್ಪಾ' ಅಂತ ನಿಟ್ಟುಸಿರಿಟ್ಟು ನಗುಮೊಗದಿಂದ ಕಾರಿನ ಕಡೆ ಹೆಜ್ಜೆ ಹಾಕುತ್ತಾನೆ.

ಮನೆಮನೆಗಳಲ್ಲೂ ಇದೇ ಕಥೆ! ಯಾವ ಫರ್ನಿಚರ್ ತಗೋಬೇಕು, ಎಲ್ಲಿ ವೆಕೇಶನ್ ಹೋಗ್ಬೇಕು, ಯಾವತ್ತು ಪಾರ್ಟಿ ಇಟ್ಟುಕೋಬೇಕು, ಆ ಪಾರ್ಟಿಗೆ ಯಾರ್‍ಯಾರನ್ನು ಕರೀಬೇಕು, ಏನೇನು ಅಡುಗೆ ಮಾಡಬೇಕು ಎಲ್ಲವನ್ನೂ ಹೆಂಗಸರೇ ನಿರ್ಧರಿಸೋದು!

ಆಮೇಲೆ 'ಗಂಡ' ಅನ್ನಿಸ್ಕೊಂಡೋನಿಗೆ ಏನು ಕೆಲಸ ಅಂತೀರಾ? ಅವನಿಗೂ ಕೆಲಸ ಇದೆ. ಬಂದವರಿಗೆಲ್ಲ ಡ್ರಿಂಕ್ಸ್ ಕೊಡೋದು, ಆಮೇಲೆ ಚೆನ್ನಾಗಿದ್ದೀರಾ? ಅಂತ ಕೇಳೋದು ಅವನ ಕೆಲಸ (ಮುಂದಿನ ಮಾತೆಲ್ಲ ಅಮ್ಮಾವ್ರೇ ಆಡ್ತಾರೆ). ಇಷ್ಟು ಕೆಲಸವನ್ನ ಅಮ್ಮಾವ್ರು ದೊಡ್ಡ ಮನಸ್ಸು ಮಾಡಿ ಗಂಡನಿಗೆ ವಹಿಸಿಕೊಟ್ಟಿದ್ದಾರೆ. ನಾನೇನು ಹೇಳೋಕೆ ಬಂದೆ ಅಂದರೆ, ಒಂದು ಸಲ 'ಮದುವೆ' ಅನ್ನೋ ಹಳ್ಳಕ್ಕೆ ಬಿದ್ದ ಮೇಲೆ 'ಬಡವ ಮಡಗಿದಹಂಗಿರು' ಅನ್ನೋ ಧೋರಣೆ ಬೆಳೆಸಿಕೋಬೇಕಾಗುತ್ತೆ ಗಂಡಸರು.

ಹೀಗೇ ಒಂದಾನೊಂದು ಅಮೆರಿಕಾದ ಊರಿನಲ್ಲಿ ಒಬ್ಬಾನೊಬ್ಬ ಅಮ್ಮಾವ್ರ ಗಂಡನಿದ್ದ. ಅವನಿಗೆ ಅದೇನೋ ನಿಶ್ಶಬ್ದ ವಾತಾವರಣ ಅಂದರೆ ಪ್ರೀತಿ. ಅದು ಅವನ ಮನಸ್ಸಿಗೆ ಶಾಂತಿ ಕೊಡುತ್ತಂತೆ! ಅಂಥಾದ್ದರಲ್ಲಿ 'ಮದುವೆ' ಅನ್ನೋ ಮಹಾ ತಪ್ಪನ್ನು ಮಾಡೋದೇ ಈ ಮನುಷ್ಯ! ಮಾಡಿದ್ದಂತೂ ಆಯಿತು, ಇನ್ನಾದರೂ 'ಶಾಂತಿ', 'ಶಾಂತಿ' ಅಂತ ಹಂಬಲಿಸೋದನ್ನ ಬಿಟ್ಟುಬಿಡಬೇಕು. ಅಕ್ಕ ಮಹಾದೇವಿ ಹೇಳಿದ ಹಾಗೆ 'ಸಂತೆಯೊಳಗಿದ್ದು ಶಬ್ದಕ್ಕಂಜಿದೊಡೆಂತಯ್ಯ' ಅಂತ ಅಂದುಕೋಬೇಕು, ಅಲ್ಲವೆ? ಇಲ್ಲ. ಈ ಮನುಷ್ಯಂಗೆ ಇನ್ನೂ ಅದೇನೋ ಶಾಂತಿಯ ಗೀಳು.

ಪುಣ್ಯಕ್ಕೆ ಅದ್ಯಾವ ಜನ್ಮದ ಪುಣ್ಯಫಲವೋ ಏನೋ, ಅವನಿಗೆ ಕನಸಿನಲ್ಲಿ ದೇವರುಗಳ ಜೊತೆ ಸಂಭಾಷಣೆ ನಡೆಸುವ ಸಿದ್ಧಿ ಪ್ರಾಪ್ತಿಯಾಗಿತ್ತು. 'ಸಂಕಟ ಬಂದಾಗ ವೆಂಕಟರಮಣ' ಅಂತ ಗಾದೆಯೇ ಇದೆಯಲ್ಲ. ಹಾಗೇ ನಮ್ಮ ಕಥಾನಾಯಕ ಒಂದು ರಾತ್ರಿ ಈಶ್ವರನ ಹತ್ತಿರ ಮಾತಾಡಬೇಕೆಂದು ಸಂಕಲ್ಪ ಮಾಡಿ ನಿದ್ದೆ ಹೋದ. ತಕೋ, ಈಶ್ವರ ಬಂದೇ ಬಿಟ್ಟ ಅವನ ಕನಸಿನಲ್ಲಿ!

'ಭಕ್ತ, ಏತಕ್ಕಾಗಿ ನನ್ನನ್ನು ಬರಮಾಡಿಕೊಂಡೆ?' ಅಂತ ವಾತ್ಸಲ್ಯಪೂರ್ವಕವಾಗಿ ಕೇಳಿದ, ಶಿವ. 'ಹೇ, ಶಂಭೋ, ಶಿವ ಶಂಕರ, ನಿನಗೆ ಗೊತ್ತಿಲ್ಲದ್ದು ಏನಿದೆ? ಸಮಸ್ತ ಲೋಕದೊಡೆಯ ನೀನು. ಆದರೂ ಹೇಳುತ್ತೇನೆ. ನನಗೆ ಮದುವೆಯಾದಾಗಿನಿಂದಲೂ ಶಾಂತಿಯೇ ಸಿಕ್ಕಿಲ್ಲ. ನೀನಾದರೂ ಶಾಂತಿಯ ಮಾರ್ಗ ಹೇಳು' ಅಂದ ನಮ್ಮ ಭಕ್ತಾಗ್ರೇಸರ. ಉಜ್ವಲ ಪ್ರಭೆಯಿಂದ ಬೆಳಗುತ್ತಿದ್ದ ಈಶ್ವರನ ಮುಖಮಂಡಲ ಭಕ್ತನ ಮಾತನ್ನು ಕೇಳುತ್ತಿದ್ದಂತೆ ನಿಸ್ತೇಜವಾಯಿತು. 'ಅಯ್ಯೋ ಮಾರಾಯಾ. ಇಷ್ಟಕ್ಕೋಸ್ಕರ ನನ್ನನ್ನು ಕರೆಸಿದೆಯಾ? ನಿನಗಾದರೂ ಒಬ್ಬಳೇ ಹೆಂಡತಿ. ನನಗೋ ಇಬ್ಬಿಬ್ಬರು. ನಿನ್ನ ಎಲ್ಲ ಸಮಸ್ಯೆಗಳೂ ನನಗೆ ಡಬಲ್ ಸೈಜಿನಲ್ಲಿ ಬರುತ್ತವೆ. ಗೊತ್ತಿಲ್ಲವೇ? ಒಮ್ಮೊಮ್ಮೆ ಇವರಿಬ್ಬರ ಗಲಾಟೆ ತಾಳಲಾರದೆ ನಾನು ಭಕ್ತರಿಗೆ ವರ ಕೊಡುವ ನೆಪ ಮಾಡಿಕೊಂಡು ಮನೆ ಬಿಟ್ಟು ಹೋಗಿಬಿಡುತ್ತೇನೆ. ಆದರೆ ಗಂಗೆಯನ್ನಂತೂ ಅಕ್ಷರಶಃ ನನ್ನ ತಲೆ

ಮೇಲೆ ಕೂರಿಸಿಕೊಂಡು ಬಿಟ್ಟಿದ್ದೀನಲ್ಲ. ಅವಳನ್ನು ಬಿಟ್ಟು ಹೋಗೋಕಾಗೋದೇ ಇಲ್ಲ. ಹಾಗೆ ನಾನು ಮಾಡಿದಾಗೆಲೆಲ್ಲ, ಪಾಪ, ಪಾರ್ವತಿ ನನ್ನನ್ನ ಮಿಸ್ ಮಾಡಿಕೋತಾಳೆ. ಅವಳಿಗೂ ಮಗರಾಯ ಗಣೇಶ ಉಪದ್ರ ಕೊಡುತ್ತಾ ಇರುತ್ತಾನೆ. ಅವನಿಗೆ ಯಾವಾಗಲೂ ತಿನ್ನೋದೇ ಯೋಚನೆ. ಮಗನ ಹೊಟ್ಟೆಯನ್ನು ತಣಿಸುವ ಸನ್ನಾಹದಲ್ಲೇ ಪಾರ್ವತಿಗೆ ಸುಸ್ತಾಗುತ್ತೆ. (ಭಕ್ತಾದಿಗಳು ಬೇಕಾದಷ್ಟು ತಿಂಡಿ ತೀರ್ಥ ತಂದು ಪೂಜೆ ಮಾಡ್ತಾರೆ. ಆದರೆ ವಾಪಸು ಹೋಗುತ್ತಾ ಅವನ್ನೆಲ್ಲ ಕಟ್ಟಿಕೊಂಡು ಹೋಗ್ತಾರೆ!) ನಾನು ಮನೆಯಲ್ಲಿದ್ದಾಗೆಲ್ಲ 'ಅಷ್ಟು ತಿನ್ನಬೇಡ ಮಾರಾಯಾ. ನಿನ್ನ ಹೊಟ್ಟೆ ಮತ್ತೂ ದೊಡ್ಡದಾಗುತ್ತೆ. ಅದೂ ಅಲ್ಲದೆ, ಪಾಪ, ಆ ಇಲಿಮರಿಗೆ ನಿನ್ನನ್ನ ಹೊತ್ತುಕೊಂಡು ನಡೆಯೋದು ಇನ್ನೂ ಕಷ್ಟ ಆಗುತ್ತೆ' ಅಂತ ಹೇಳ್ತಾ ಇರ್ತೀನಿ. ಆದರೆ ಅವನು ಕೇಳಬೇಕಲ್ಲ. 'ಅದಕ್ಕೇ ನಾನು ದಿನಾ ಬೇರೆ ಬೇರೆ ಇಲಿಮೇಲೆ ಸವಾರಿ ಮಾಡೋದು. ನಮ್ಮ ಉಗ್ರಾಣದಲ್ಲಿ ಇಲಿಗಳಿಗೇನು ಕೊರತೆ?' ಅಂತ ಎದುರುತ್ತರ ಕೊಡುತ್ತಾನೆ. ಅವನಿಗೆ ಮೂಗಿನ ತುದಿಯಲ್ಲೇ ಕೋಪ ಯಾವಾಗಲೂ. ಒಂದು ಸಾರಿ ತನ್ನ ದಂತವನ್ನೇ ಮುರಿದು ಚಂದ್ರನಿಗೆ ಹೊಡೆಯೋಕೆ ಹೋಗಿದ್ದ. ನಿನಗೂ ಗೊತ್ತಿರಬಹುದು. ಈಗ ನನ್ನ ಮೇಲಿನ ಸಿಟ್ಟಿಗೆ ಇನ್ನೊಂದು ದಂತವನ್ನೂ ಮುರಿದುಕೊಂಡರೆ ಏನು ಗತಿ! ಅಂತ ನಾನು ಅವನಿಗೆ ಹೆಚ್ಚಿಗೆ ಹೇಳೋಕೆ ಹೋಗೋಲ್ಲ'.

'ಹಾಗೆ ನೋಡಿದರೆ ನಾನೂ ಕೋಪಿಷ್ಠನೇ. ಒಂದು ಸಾರಿ ಪಾರ್ವತಿಯನ್ನ ನೋಡೋಕೆ ಹೋದಾಗ ಸ್ನಾನದ ಮನೆಗೆ ಕಾವಲಿದ್ದ ಗಣೇಶನ ತಲೆಯನ್ನು ಸಿಟ್ಟಿನಲ್ಲಿ ಹಾರಿಸಿದ್ದು ನಾನೇ ತಾನೇ? ಏನೇ ಆಗಲಿ. ಗಣೇಶ ನನಗಿಂತ ಬುದ್ಧಿವಂತನೇ ಅನ್ನಬೇಕು, ನೋಡು. ನಾನು ಎರಡೆರಡು ಸಾರಿ ಮಾಡಿದ ತಪ್ಪನ್ನು ಅವನು ಒಂದು ಸಾರಿಯೂ ಮಾಡಲಿಲ್ಲ. ಮದುವೇನೇ ಆಗಲಿಲ್ಲ!'

'ಒಟ್ಟಿನಲ್ಲಿ ಹೇಳೋದಾದ್ರೆ ಒಂದು ಸಾರಿ ಮದುವೆ ಆದಮೇಲೆ ಶಾಂತಿ ಸಿಕ್ಕೋದು ಕಷ್ಟ. ಇಬ್ಬರು ಹೆಂಡಿರಿದ್ದರಂತೂ ಶಾಂತಿ ಅಸಾಧ್ಯ. ಅದಕ್ಕೆ ನಾನೇ ಸಾಕ್ಷಿ. ಮೂವರು ಹೆಂಡಿರಿದ್ದರಂತೂ ಪ್ರಾಣ ಹಿಂಡಿಬಿಡುತ್ತಾರೆ. ಅದಕ್ಕೆ ದಶರಥನೇ ಸಾಕ್ಷಿ. ನಿಜ ಹೇಳಬೇಕಂದ್ರೆ ಪ್ರಾಣ ಹಿಂಡೋಕೆ ಒಬ್ಬ ಹೆಂಡತೀನೇ ಸಾಕು. ಅದಕ್ಕೇ ಅಲ್ವೆ ಪುರಂದರ ದಾಸರು 'ಹೆಂಡತಿ ಪ್ರಾಣ ಹಿಂಡುತಿ' ಅಂತ ಹಾಡಿದ್ದು!'

'ನನ್ನ ಕಥೆ ಕೇಳಿ ನಿನಗೆ ಬೋರ್ ಅಯ್ತೋ ಏನೋ. ಏನೇ ಆಗಲಿ. ಈ ವಿಷಯದಲ್ಲಿ ವಿಷ್ಣುವನ್ನು ಒಮ್ಮೆ ವಿಚಾರಿಸಿ ನೋಡು...' ಅಂತ ಹೇಳಿ ಈಶ್ವರ ಅಂತರ್ಧಾನನಾದ.

ತಕ್ಷಣ ನಿದ್ದೆಯಿಂದ ಎಚ್ಚರವಾದಾಗ ನಮ್ಮ ಅಮ್ಮಾವ್ರ ಗಂಡನಿಗೆ ಈಶ್ವರನ ಸಮಸ್ಯೆಗಳನ್ನು ನೆನೆದು ಮನಸ್ಸು ಪಿಚ್ಚೆನಿಸಿತು. ಇದ್ದಿದ್ದರಲ್ಲಿ ನಾನೇ ವಾಸಿ ಅಂತ

ಸಮಾಧಾನವೂ ಆಯಿತು. ಏನೇ ಆಗಲಿ. ಈಶ್ವರ ಹೇಳಿದ ಹಾಗೆ ನಾಳೆ ವಿಷ್ಣುವನ್ನ ಭೇಟಿಯಾಗಿ ಕೇಳಬೇಕು ಅಂದುಕೊಂಡ.

ಮರುದಿನ ರಾತ್ರಿ ವಿಷ್ಣು ದರ್ಶನವನ್ನು ಮನಸ್ಸಿನಲ್ಲಿ ಸಂಕಲ್ಪಿಸಿ ಮಲಗಿದ. ಇನ್ನೇನು ಗೊರಕೆ ಹೊಡೆಯೋಕೆ ಶುರುವಾಗಬೇಕು ಅನ್ನುವಾಗ ಕನಸಿನಲ್ಲಿ ಬಂದೇಬಿಟ್ಟ ವಿಷ್ಣು! ನಮ್ಮ ಕಥಾನಾಯಕ ತಾನು ಅಮ್ಮಾವ್ರ ಗಂಡ ಆದಮೇಲೆ ತನ್ನ ಬದುಕಿನಲ್ಲಿ ಶಾಂತಿ ಕಣ್ಮರೆಯಾಗಿರುವುದನ್ನು ಕಣ್ಣೀರು ಸುರಿಸಿ ವಿನಂತಿಸಿ ಕೊಂಡ.

'ಹೇ, ಮಹಾವಿಷ್ಣು, ಭಕ್ತವತ್ಸಲ ನೀನು. ನನಗೆ ದಯವಿಟ್ಟು ಶಾಂತಿಯ ಮಾರ್ಗ ತೋರಿಸು' ಅಂತ ಗೋಗರೆದ.

ವಿಷ್ಣು ಬರುತ್ತಾ ಒಬ್ಬನೇ ಬಂದಿರಲಿಲ್ಲ. ಪಕ್ಕದಲ್ಲಿ ಲಕ್ಷ್ಮಿಯೂ ಇದ್ದಳು. ಅವಳಿರುತ್ತಾ ತನ್ನ ದಾಂಪತ್ಯದ ಬಗ್ಗೆ ಹೇಗೆ ದೂರಿಯಾನು ಅವನು! ಆದರೆ ಈ ದೇವತೆಗಳು ಯಾವಾಗಲೂ ಸುತ್ತಿ ಬಳಸಿ ಮಾತಾಡುವವರು.

'ನೋಡಪ್ಪಾ, ನಿಜ ಹೇಳಬೇಕಂದರೆ ಈ ತ್ರಿಮೂರ್ತಿಗಳ ಪೈಕಿ ನನಗೇ ಸ್ವಲ್ಪ ಫ್ರೀ ಟೈಂ ಇರೋದು. ಬ್ರಹ್ಮ ಅಂತೂ ಸೃಷ್ಟಿ ಮಾಡ್ತಾನೇ ಇರಬೇಕು. ಮಧ್ಯೆ ನಿಲ್ಲಿಸೋಕಾಗಲ್ಲ. ಈಶ್ವರನಿಗೆ ಅವನ ಸಂಸಾರದ ಸಮಸ್ಯೆಗಳೇ ಸಾಕಾಗಿವೆ. ನನ್ನದು maintenance ಕೆಲಸ ಅಲ್ವಾ? ಅದು ಒಂದು ಥರಾ ಸರಕಾರಿ ಕೆಲಸ ಇದ್ದ ಹಾಗೆ. ಮಾಡಿದರೂ ನಡೆಯುತ್ತೆ. ಮಾಡದಿದ್ದರೂ ನಡೆಯುತ್ತೆ. ನಾನು ಮಾಡೋಕಿಂತ ಮಾಡದೆ ಇರೋದೇ ಜಾಸ್ತಿ. ನಿನಗೆ ಭೂಮಿ ಮೇಲೆ ಈಗ ಇರುವ ಅವ್ಯವಸ್ಥೆ ನೋಡಿದರೇ ಗೊತ್ತಾಗುತ್ತಲ್ಲ. ಆರಾಮವಾಗಿ ಹಾಲಿನ ಸಮುದ್ರದಲ್ಲಿ ಹಾವಿನ ಹಾಸಿಗೆಯ ಮೇಲೆ ರಿಲ್ಯಾಕ್ಸ್ ಮಾಡ್ತಾ ಇರ್ತೀನಿ. ನಿಮ್ಮಲ್ಲಿ ಎಲ್ಲರಿಗೂ ಹಾವೆಂದರೆ ವಿಪರೀತ ಹೆದರಿಕೆ. ಹಾಗಾಗಿ ಯಾರೂ ನನ್ನನ್ನ ಬಂದು ಡಿಸ್ಟರ್ಬ್ ಮಾಡಲ್ಲ. ಆದರೆ ಈ ಕಿತಾಪತಿ ನಾರದರದ್ದೇ ಒಂದು ಪ್ರಾಬ್ಲಂ. ನಾನು ವಿಶ್ರಮಿಸುತ್ತಿರುವಾಗಲೇ ಬಂದು ಬಿಡುತ್ತಾರೆ– ನಾರಾಯಣ, ನಾರಾಯಣ ಅಂತ ತಂಬೂರಿ ಮೀಟುತ್ತಾ. ಬಂದು ಮೂರು ಲೋಕದಲ್ಲಿ ನಡೆಯುವ ಎಲ್ಲ ಸುದ್ದಿಯ ಮೇಲೂ ಹರಟೆ ಹೊಡೀತಾರೆ. ಶುದ್ಧ ಬೋರ್. ಎಷ್ಟೋ ಸಾರಿ ಕೌಟುಂಬಿಕ ವಿಚಾರಗಳಲ್ಲಿ ತಲೆ ಹಾಕಿ ಗಂಡ–ಹೆಂಡತಿ ಮಧ್ಯೆ ವೈಮನಸ್ಯ ತಂದು ಹಾಕ್ತಾರಂತೆ. ಸದ್ಯ, ನಾನು ಯಾವಾಗಲೂ ಲಕ್ಷ್ಮಿಯ ಜೊತೇಗೇ ಇರೋದ್ರಿಂದ ನಮಗೆ ಹಾಗೇನೂ ಆಗಿಲ್ಲ......'

ಹೀಗೇ ಎಷ್ಟು ಹೊತ್ತು ಮುಂದುವರಿಸುತ್ತಿದ್ದನೋ ಏನೋ. ಮಧ್ಯದಲ್ಲೇ ನಮ್ಮ ಅಮ್ಮಾವ್ರ ಗಂಡ ಸ್ವಲ್ಪ ಕೆಮ್ಮಿದಂತೆ ಮಾಡಿ 'ಅದೇ ನಾನ್ ಹೇಳಿದ್ದು....ಶಾಂತಿ... 'ಅಂತ ನೆನಪು ಮಾಡಿಕೊಟ್ಟ.

'ಹೌದಲ್ಲ, ಮರೆತೇ ಬಿಟ್ಟಿದ್ದೆ. ನಾನು ಮುಂಚೇನೇ ಹೇಳಿದೆನಲ್ಲ. ನಾನು ಸರಕಾರಿ ಕೆಲಸದವರ ತರಾ ಆರಾಮು ಮಾಡುವವನು ಅಂತ. ಅಲ್ಲದೆ ನೀನು ಈ ವಿಷಯಕ್ಕೆ ನಿನ್ನನ್ನು ಹುಟ್ಟಿಸಿದ ಬ್ರಹ್ಮನನ್ನೇ ಕೇಳೋದು ಒಳ್ಳೇದು' ಅಂತ ಹೇಳಿ ಮಾಯವಾದ.

ಮರುದಿನ ರಾತ್ರಿ ಕನಸಿನಲ್ಲಿ ಬ್ರಹ್ಮನೂ ಬಂದ. 'ಓ, ಬ್ರಹ್ಮ ದೇವಾ, ಈ ಜೀವನದಲ್ಲಿ ಇದುವರೆಗೂ ನನಗೆ ಶಾಂತಿ ಅನ್ನೋದು ಸಿಕ್ಕಿಲ್ಲ. ಮುಖ್ಯ ಕಾರಣ ಅಮ್ಮಾವ್ರ ಗಲಾಟೆ. ನಿನಗೂ ನನ್ನ ಹಾಗೆ ಒಬ್ಬಳು ಹೆಂಡತಿ ಇದ್ದಾಳೆ. ಆದರೂ ನೀನು ಶಾಂತಿಯಿಂದ ಇದ್ದೀಯಾ? ಹಾಗಾದರೆ ನಿನ್ನ ಶಾಂತಿಯ ಗುಟ್ಟೇನು?' ಎಂದು ಮನ ಕರಗುವಂತೆ ನಿವೇದಿಸಿಕೊಂಡ ಈ ಅಮ್ಮಾವ್ರ ಗಂಡ.

ಬ್ರಹ್ಮ ಉವಾಚ 'ನೋಡಪ್ಪಾ ನಾನು ಒಂದು ಕಮಲದ ಹೂ ಮೇಲೆ ಕೂತುಕೊಂಡು ಸೃಷ್ಟಿಗೆ ಸಂಭಂದಪಟ್ಟ ಎಲ್ಲ ಕೆಲಸಗಳನ್ನೂ ಮಾಡುತ್ತಾ ಇರುತ್ತೀನಿ. ನನ್ನ ಕೆಲಸ ವಿಷ್ಣುವಿನ ಕೆಲಸದಷ್ಟು ಸುಲಭ ಅಲ್ಲ. ನಾನು ಹೆಚ್ಚು ಕಡಿಮೆ ಪ್ರಪಂಚದ ಎಲ್ಲ ಜೀವಿಗಳನ್ನೂ ಒಂಥರಾ maintenance free ಆಗಿಯೇ ಮಾಡಿರುತ್ತೀನಿ ನನಗೆ ವಿಷ್ಣುವಿನ ಸೋಮಾರಿತನ ಗೊತ್ತಿರೋದ್ರಿಂದ. ನನಗೋ, ಹುಟ್ಸೋಕೆ ಮುಂಚೆ ಪ್ರತಿಯೊಬ್ಬನಿಗೂ ಎಷ್ಟು ಉಚ್ಛ್ವಾಸ, ನಿಶ್ವಾಸ ಎಲ್ಲ ಲೆಕ್ಕ ಹಾಕಬೇಕು. ಈ ಉಸಿರಾಟದ ಸಂಖ್ಯೆ ಅವರವರ ಕರ್ಮದ ಮೇಲೆ ಹೊಂದಿಕೊಂಡು ಹೋಗುತ್ತದೆ. ಈ ಉಸಿರಾಟದ ಲೆಕ್ಕಾಚಾರ ನಿಮ್ಮ ಯಾವ ಸೂಪರ್ ಕಂಪ್ಯೂಟರ್‌ನಿಂದಲೂ ಮಾಡೋಕಾಗಲ್ಲ. ಅದಕ್ಕೇ ನಾನು ಒಂದಲ್ಲ, ಎರಡಲ್ಲ, ನಾಲ್ಕು ತಲೆ ಇಟ್ಟುಕೊಂಡಿದ್ದೇನೆ. ನಾನು ಇರೋ ಕಮಲದ ಹೂನಲ್ಲಿ ಜಾಗ ತುಂಬ ಚಿಕ್ಕದು. ಸರಸ್ವತಿ ಏನಾದರೂ ತೊಡೆಯ ಮೇಲೆ ಇದ್ದರೆ ಇನ್ನೂ ಇಕ್ಕಟ್ಟು. ಅವಳಿಗೂ ಸಂಗೀತ ಅಂದರೆ ತುಂಬ ಇಷ್ಟ–ನಿನ್ನ ಅಮ್ಮಾವ್ರ ಹಾಗೆ. ಯಾವಾಗಲೂ ವೀಣೆ ಹಿಡಿದುಕೊಂಡು ಟುಂಯ್, ಟುಂಯ್ ಅಂತ ಬಾರಿಸ್ತಾ ಇರ್ತಾಳೆ. ನನ್ನ ಕೆಲಸದಲ್ಲಿ ಇದು ತುಂಬಾ distractionಉ. ಅದರಿಂದ ಒಂದೊಂದು ಸಾರಿ ನನ್ನ ಉಸಿರಾಟದ ಲೆಕ್ಕಾಚಾರ ತಪ್ಪಿ ಹೋಗಿ ಕೆಲವರನ್ನು ಬೇಗ ಪರಲೋಕಕ್ಕೆ ಕಳಿಸುವುದೂ ಉಂಟು.....

ಅಮ್ಮಾವ್ರ ಗಂಡನಿಗೆ ಒಂದು ಮಾತಂತೂ ಖಚಿತವಾಗಿ ಹೋಯಿತು. ಈ ದೇವತೆಗಳಿಗೆ ಯಾರಿಗೂ ತಮ್ಮ ಪಾಯಿಂಟು ಏನು ಅಂತ ಸ್ಪಷ್ಟವಾಗಿ ಹೇಳೋಕೆ ಬರಲ್ಲ. ಏನೋ ಕೇಳಿದರೆ ಏನೋ ಹೇಳ್ತಾರೆ!

ಮತ್ತೆ ಒಮ್ಮೆ ಗಂಟಲು ಸರಿಪಡಿಸಿಕೊಂಡು 'ಅಲ್ಲ ನಾ ಹೇಳಿದ್ದು...ಅದೇ ಶಾಂತಿ.... ' ಅಂದ. ' ಓ, ಮರೆತೇ ಬಿಟ್ಟಿದ್ದೆ. ನಿನಗೆ ಶಾಂತಿ ಬೇಕು ಅಲ್ವಾ? ನೋಡಪ್ಪಾ. ಭೂಲೋಕದಲ್ಲಿ ಎಲ್ಲರೂ ಹಣ, ಅಧಿಕಾರ ಎಲ್ಲ ಇದ್ದರೆ ಸುಖ, ಶಾಂತಿ ಸಿಕ್ಕುತ್ತೆ

ಅಂದುಕೊಂಡುಬಿಟ್ಟಿದ್ದಾರೆ. ಸುಳ್ಳು. ಸುಳ್ಳು. ಬೀದಿ ಭಿಕಾರಿಯ ಮುಖದಲ್ಲಾದರೂ ನಗು ಕಾಣಬಹುದು, ಶಾಂತಿಯ, ತೃಪ್ತಿಯ ನಗು.....ಹಣವಂತರ ಮುಖದಲ್ಲಿ ಕಾಣಲ್ಲ. ಈ ಗುಟ್ಟು ಇಂಡಿಯಾದಲ್ಲಿ ಎಲ್ಲ ಸಾಧು ಸಂತರಿಗೆ, ಋಷಿಗಳಿಗೆ ಶತಮಾನಗಳಿಂದಲೂ ಗೊತ್ತು. ನೀನು ಸೀದಾ ಹಿಮಾಲಯಕ್ಕೆ ಹೋಗು. ಅಲ್ಲಿ ನನ್ನ ಭಕ್ತರಾಗಿರುವ ಸ್ವಾಮಿ ಅಮೆರಿಕಾನಂದ ಇದ್ದಾರೆ. ಅವರು ನಿನಗೆ ಪ್ರಾಣಾಯಾಮ ಮತ್ತು ಯೋಗ, ಹಾಗೂ ಧ್ಯಾನದ ಮೂಲಕ ಶಾಂತಿ ಹೇಗೆ ಸಿದ್ಧಿಸುತ್ತದೆ ಅಂತ ಹೇಳಿಕೊಡುತ್ತಾರೆ'.

'ಒಂದೇ ಒಂದು ಪ್ರಶ್ನೆ ದೇವಾ. ಅಲ್ಲಿ ಹಿಮಾಲಯಾದಲ್ಲಿ ನನಗೆ ಹೊತ್ತುಹೊತ್ತಿಗೆ ಇಡ್ಲಿ, ಸಾಂಬಾರ್, ಚಪಾತಿ, ಪಲ್ಯ, ಅನ್ನ, ಸಾರು ಮುಂತಾದುವನ್ನು ಯಾರು ಮಾಡುತ್ತಾರೆ?'

ಉಕ್ಕಿ ಬಂದ ನಗುವನ್ನು ತಡೆಯಲು ಪ್ರಯತ್ನಿಸುತ್ತಾ ಬ್ರಹ್ಮ ಹೇಳಿದ 'ಎಲೆ ಅಮ್ಮಾವ್ರ ಗಂಡನೇ, ನಿನಗೆ ನಿಜವಾಗಿಯೂ ಶಾಂತಿ ಬೇಕಾಗಿದ್ದರೆ ನೀನು ಈ ಬಗೆಯ ಇಂದ್ರಿಯ ಚಾಪಲ್ಯವನ್ನು ಬಿಡಬೇಕಾಗುತ್ತದೆ. ಹೋಗಲಿ, ನಿನಗೆ ಇನ್ನೂ ಏನೇನು ಇಷ್ಟ, ಹೇಳು'.

ಸ್ವಲ್ಪ ಸೀರಿಯಸ್ಸಾಗಿ ಯೋಚಿಸಿ ನಮ್ಮ ಭಕ್ತಾಗ್ರೇಸರ ಹೇಳಿದ, 'ನನಗೆ ಮೆಡಿಟೇಶನ್ ಮಾಡುತ್ತಾ ಕೂತಿರುವಾಗ ಹಿನ್ನೆಲೆಯಲ್ಲಿ ಹಗುರಾಗಿ ನನ್ನವಳ ಅಡುಗೆಯ, ಅದರಲ್ಲೂ ಇಂಗಿನ ಒಗ್ಗರಣೆಯ ವಾಸನೆ ತೇಲಿ ಬಂದರೆ ಏನೋ ಖುಷಿ ಆಗುತ್ತೆ, ಆಮೇಲೆ ಬಾತ್‌ರೂಮಿನಲ್ಲಿ ಶೇವ್ ಮಾಡಿಕೊಳ್ಳುವಾಗ ಡ್ರಾಯರಿನಲ್ಲಿ ಅವಳ ಹೇರ್ ಪಿನ್, ಲಿಪ್‌ಸ್ಟಿಕ್ ಕಣ್ಣಿಗೆ ಬಿದ್ದಾಗ ಕಚಗುಳಿ ಇಟ್ಟಹಾಗೆ ಆಗುತ್ತೆ. ನಿದ್ದೆಯ ಜೊಂಪಿನಲ್ಲೂ ಪಕ್ಕದಲ್ಲಿ ಅವಳ ದೀರ್ಘ ಉಸಿರಾಟ ಕೇಳುವಾಗ ಏನೋ ನೆಮ್ಮದಿ ಅನ್ನಿಸುತ್ತೆ'.

'ಅರ್ಥವಾಯಿತು. ನೀನು ಭವಬಂಧನದಿಂದ ಇನ್ನೂ ಪೂರ್ತಿ ಬಿಡುಗಡೆ ಹೊಂದಲು ಸಿದ್ಧನಿಲ್ಲ. ಹಾಗಿದ್ದರೆ ಒಂದು ಕೆಲಸ ಮಾಡು. ಅಮಾವ್ರಿಂದ ಹೇಗೆ ನಿನ್ನ ಶಾಂತಿ ಕದಡಿಹೋಯಿತು ಅನ್ನೋ ಬಗ್ಗೆ ಸದಾ ಯೋಚನೆ ಮಾಡುತ್ತಾ ಕೂರಬೇಡ. ಬದಲು ಈಗ ತಾನೇ ಹೇಳಿದೆಯಲ್ಲ ಜೀವನದ ಕ್ಷಣ, ಕ್ಷಣದಲ್ಲೂ ನಿರಾಯಾಸವಾಗಿ ದೊರಕುವ ದಾಂಪತ್ಯದ ಮಧುರ ಅಮೃತದ ಹನಿಗಳು..ಅದರ ಮೇಲೆ ಹೆಚ್ಚು ಗಮನ ಹರಿಸು. ನಾನು ಏನಪ್ಪಾ ಹೇಳ್ತೀನಿ ಅಂದರೆ, ಕೊಡ ಅರ್ಧ ಬರಿದಾಗಿದೆ ಅನ್ನಬೇಡ. ಅರ್ಧ ತುಂಬಿದೆ ಅಂತ ಯೋಚಿಸು'. ಇಷ್ಟು ಹೇಳಿ ಬ್ರಹ್ಮ ಅದೃಶ್ಯನಾದ.

ಎಚ್ಚರವಾದಾಗ ನಮ್ಮ ಅಮ್ಮಾವ್ರ ಗಂಡನಿಗೆ ಜೀವನದಲ್ಲಿ ಶಾಂತಿಯ ಗುಟ್ಟು ಏನು ಅಂತ ಬ್ರಹ್ಮ ಹೇಳಿದ್ದು ನೆನಪಾಗಿ ಏನೋ ನಿಧಿ ಸಿಕ್ಕಿದಷ್ಟು ಖುಷಿ ಆಯಿತು.

ಜೊತೆಗೆ ಬ್ರಹ್ಮನ ಆದೇಶದ ಮೇರೆಗೆ ತನ್ನ ಜೀವನದಲ್ಲಿ ನಿಜವಾಗಿಯೂ ಸುಖ ಕೊಡುವ ಗಳಿಗೆಗಳು ಯಾವವು? ಎಂದು ತನ್ನೊಳಗೇ ನೋಡಿಕೊಂಡಾಗ ಇದುವರೆಗೂ ಅವಿತುಕೊಂಡಿದ್ದ ಬಾಳಿನ ಅರ್ಥಪೂರ್ಣತೆ ಈಗ ಒಮ್ಮೆಲೆ ಬೆತ್ತಲೆಯಾಗಿ ತನ್ನೆದುರು ನಿಂತಂತಾಯಿತು. ಪಕ್ಕದಲ್ಲಿ ಇದ್ಯಾವುದರ ಪರಿವೆಯೂ ಇಲ್ಲದೆ ನಿದ್ದೆ ಹೋಗಿದ್ದ ಆಮ್ಮಾವ್ರ, ಅಲ್ಲ ಅರ್ಧಾಂಗಿಯ ಸುತ್ತ ಪ್ರೀತಿಯಿಂದ ತೋಳು ಬಳಸಿ ಮತ್ತೆ ನಿದ್ದೆ ಹೋದ.



# ಸಂದರ್ಶನಗಳಲ್ಲಿ some-ದರ್ಶನ

ಶರತ್ ಯಳಂದೂರ್

೨೦೦೭ರ ಜನವರಿ ಒಂದನೆಯ ತಾರೀಖು ಪ್ರತಿ ವರ್ಷದಂತೆ ಈ ವರ್ಷವೂ ಹಲವಾರು ನಿರ್ಣಯಗಳು, ಹಾಗು ಕನಸುಗಳನ್ನು ಪಟ್ಟಿ ಮಾಡಿ ಸಿದ್ದ ಮಾಡಿಟ್ಟೆ. ಈಗ್ಗೆ ಕೆಲವು ವರ್ಷಗಳ ಹಿಂದೆ ಹೊಸ ಪಟ್ಟಿ ಮಾಡುವ ಅವಶ್ಯಕತೆಯೇ ಬರುತ್ತಿರಲಿಲ್ಲ.... ಏಕೆಂದರೆ ಹಿಂದಿನ ವರ್ಷದ ಪಟ್ಟಿಯಲ್ಲಿನ ಯಾವ ನಿರ್ಣಯಗಳೂ ಕಾರ್ಯರೂಪಕ್ಕೆ ಬಂದಿರುತ್ತಿರಲಿಲ್ಲ! ಆದ್ದರಿಂದ ಬರೀ ಇಸವಿ ಬದಲಾಯಿಸಿಬಿಟ್ಟರೆ ಹೊಸ ವರ್ಷದ ಪಟ್ಟಿ ರೆಡಿಯಾಗಿ ಬಿಡುತ್ತಿತ್ತು. ಈಗ ಎರಡು ಮೂರು ವರ್ಷಗಳಿಂದ ಅಲ್ಪ-ಸ್ವಲ್ಪ ನಿರ್ಣಯಗಳು ಕಾರ್ಯರೂಪಕ್ಕೆ ಬಂದು, ಪಟ್ಟಿಯಿಂದ ಬಿಡುಗಡೆ ಹೊಂದುತ್ತಿದ್ದವು. ಈ ಬದಲಾವಣೆಯ ಮುಖ್ಯ ಯಶಸ್ಸು ನನ್ನ ಹೆಂಡತಿಗೆ ಸೇರಬೇಕು. ತಿಂಗಳಿಗೊಮ್ಮೆಯಾದರೂ ಪಟ್ಟಿಯಲ್ಲಿನ ಕೆಲವನ್ನಾದರು ನೆನಪಿಸಿ ಮಾತಿನ ಚಾವಟಿ ಬೀಸುತ್ತಿರುತ್ತಾಳೆ. ಅದನ್ನು ತಪ್ಪಿಸಿಕೊಳ್ಳಲು ಅಷ್ಟೋ ಇಷ್ಟೋ ಮಾಡ ತೊಡಗಿ ಹಲವಾರು ಬಾರಿ ಸಫಲವಾಗಿರುವುದುಂಟು. ಅನುಮಾನವಿದ್ದರೆ ನೀವೂ ನಿಮ್ಮ ಪಟ್ಟಿಯನ್ನು ನಿಮ್ಮ ಹೆಂಡತಿಯ ಕೈಗೆ ಕೊಟ್ಟು ಪ್ರಯತ್ನಿಸಿ. ಆದರೆ ಹೆಚ್ಚು ಕಮ್ಮಿಯಾಗಿ ಮಾತಿನ ಚಾವಟಿ ಬದಲು ನಿಜವಾದ ಚಾವಟಿಯ ಹೊಡೆತ ತಿಂದರೆ, ನನ್ನನ್ನು ದೂರಬೇಡಿ.

ಬಹಳ ವರ್ಷಗಳಿಂದ, ಪತ್ರಕರ್ತನಾಗಿ ಹಲವು ಪ್ರಮುಖ ವ್ಯಕ್ತಿಗಳನ್ನು ಸಂದರ್ಶನ ಮಾಡಬೇಕೆಂಬ ಹಿರಿಯಾಸೆ ನನಗೆ. ಕೈತುಂಬ ಸಂಬಳ ತರುವ Computer ಕೆಲಸ ಬಿಟ್ಟು 'ಪತ್ರಕರ್ತನಾಗುತ್ತೇನೆ' ಅಂದಕೂಡಲೆ, ಕೆಲವರು, 'ಇದು ಯಾವುದೋ ಮೆಂಟಲ್-ಕೇಸ್ ಪ್ರಾಣಿ ಇರಬೇಕು. ಎಲ್ಲರೂ ನಾಮುಂದು ತಾಮುಂದು ಎಂದು I T ಕೆಲಸಗಳಿಗೆ ಹಾತೊರೆಯುತ್ತಿದ್ದರೆ, ಇವನ್ಯಾವನೋ ಗುಳ್ಡು ಇರಬೇಕು' ಎಂಬಂತೆ ನೋಡುತ್ತಿದ್ದರು.

ಏನಾದರಾಗಲಿ, ಈ ವರ್ಷದಲ್ಲಿ ಹವ್ಯಾಸಿ ಪತ್ರಕರ್ತನಾಗಿಯಾದರೂ ಕೆಲವು ಸಂದರ್ಶನ ಮಾಡಲೇಬೇಕೆಂದು ಈ ವರ್ಷಗಳ ಪಟ್ಟಿಯ Topನಲ್ಲಿಟ್ಟೆ. ಟಾಪ್‌ನಲ್ಲಿಟ್ಟ 'ತಾಪ' ತಡೆಯಲಾರದೆ ಯಾರನ್ನಾದರು Tap ಮಾಡಿಯೇ ಬಿಡುವುದೆಂದು ನಿರ್ಧರಿಸಿ ಹೊರಟೆ.

೧

ಮೊದಲಿಗೆ ಸಿದ್ರಾಮಯ್ಯನವರ ಹತ್ತಿರ ಬಂದೆ. ಈಗ ತಾನೆ ಕೆಲವು ದಿನಗಳ ಹಿಂದೆ ಮರು ಚುನಾವಣೆ ಗೆದ್ದ ಸಂಭ್ರಮದಲ್ಲಿ ಅನೇಕ planಗಳನ್ನು ಮಾಡಿಕೊಂಡಿರಬಹುದು ಎಂದು ನನ್ನ ಪ್ರಶ್ನೆಗಳನ್ನು ಮುಂದಿಟ್ಟೆ.

ಪ್ರಶ್ನೆ: 'ಕಂಗ್ರ್ಯಾಟ್ಸ್ ಸಿದ್ರಾಮಣ್ಣೋರೇ! ತಾವು ಗೆದ್ದಿದ್ದು ಬಹಳ ಸಂತೋಷ ... ಗೆಲುವಿನೊಂದಿಗೆ ಹೊಸ ವರ್ಷಕ್ಕೆ ಕಾಲಿಡುತ್ತಿದ್ದೀರ, ಈ ವರ್ಷದಲ್ಲಿ ಅಹಿಂದದ ಭವಿಷ್ಯ ಹೇಗಿದೆ?!!'

ಸಿದ್ದು: 'ನೋಡ್ರೀ ಶರಭತ್ ಅವರೇ ...'(ನಾನು ಆ ಕಡೆ ಈ ಕಡೆ ನೋಡಿದೆ ಆಮೇಲೆ ತಿಳಿಯಿತು... ನನ್ನ ಹೆಸರು ಶರತ್ ಎಂದು ಪರಿಚಯಿಸಿಕೊಂಡದ್ದನ್ನು ಬೊ ಪ್ರೀತಿಯಿಂದ ?!! ಶರಭತ್ ಮಾಡಿದ್ದರು... ಇರಲಿ ಎಂದು ಅವರು ಹೇಳುವುದರ ಕಡೆ ಗಮನ ಕೊಟ್ಟೆ)

ಸಿದ್ದು: 'ಅಹಿಂದ ಕೈ ಹಿಡಿದು ದೇವೇಗೌಡರನ್ನು ಹಿಂದಕ್ಕೆ ಹಾಕಿದ ಮೇಲೆ ಇನ್ನೂ ಯಾಕ್ರಿ ಹಿಂದ, ಹಿಂದ ಅನ್ನುತ್ತೀರೀ ? ಈಗೇನಿದ್ದರು ನಾ ಮುಂದ, ನಾ ಮುಂದ. ಮಗು ನಡೆಯೋದನ್ನು ಕಲಿಯೋತನಕ ಕೈ ಹಿಡ್ಕೊಂಡು ನಡೀತೈತ್ರೀ ಆಮೇಲೆ ಅದರ ಪಾಡಿಗೆ ಅದು ನಡೀತೈತೆ..ನಡೀಬೇಕು ಅಂಗೇಯಾ ನಾನೂ ಕೂಡ. ದೇವೇಗೌಡ್ರು ಈಗ ಹಿಂದ ಹಿಂದ ನಾ ಮುಂದ ಮುಂದ ...' ಇವರ್‍ಯಾಕೊ ರಾಮಾ ಶಾಮಾ ಭಾಮಾ ಚಲನ ಚಿತ್ರದ ಕಮಲಹಾಸನರಂತೆ ಮುಂದ ಮುಂದ ಅನ್ನುತ್ತಿದ್ದಾರಲ್ಲಾ?? ಇದ್ಯಾವುದೋ ಹೊಸ ಸಂಘಟನೆ ಇರಬೇಕು ಎಂದು ಅದರ ಬಗ್ಗೆ ಕೇಳೋಣ ಅಂತ ಬಾಯಿ ತೆರೆದೆ. ಅಷ್ಟರಲ್ಲಿ ದಿಲ್ಲಿಯಿಂದ 'Madam' ಅವರ ಕಾಲು(ಫೋನು) ಎಂದು P.A.ಅವರ ಕಿವಿಯಲ್ಲಿ ಉಸುರಿದ ತಕ್ಷಣ.. ಸಿದ್ರಾಮಣ್ಣೋರು ಭಯ-ಭಕ್ತಿಯಿಂದ, ಫೋನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಫೋನೆತ್ತಿ ಮಾತಾಡತೊಡಗಿದರು. ಅವರ P.A. ನನ್ನ ಗುರಾಯಿಸಿ ನೋಡ ತೊಡಗಿದ 'ದೊಡ್ಡವರು ಮಾತೋಡೋವಾಗ ನಿನ್ನದೇನು ಕೆಲಸ ಗೂಬೆ' ಅನ್ನುವಂತಿತ್ತು.. ಅವನ ದೃಷ್ಟಿ. ಅವನನ್ನೆ ಮಾತಾಡಿಸೋಣ ಅಂತ, ಅದೇನು ... phoneಗೇ ನಮಸ್ಕಾರ ಮಾಡಿ

ಮಾತಾಡ್ತಾರಲ್ಲಾ?' ಎಂದೆ. ಅದಕ್ಕೆ ಅವರ P.A., 'ಇದು Delhi Madam ಕಾಲು ಇನ್ನೇನು ಕೆಲವೇ ದಿನಗಳಲ್ಲಿ ಕುಮಾರಣ್ಣನ ಸರ್ಕಾರ ಬಿದ್ರೆ, ನಮ್ಮ ಸಿದ್ರಾಮಣ್ಣೋರೇ ಮುಂದಿನ C.M. ಅದೇ ವಿಸ್ಯ ಮತಾಡಕ್ಕೆ ಅಂತ ಮೇಡಂ call ಮಾಡವ್ರೆ' ಅಂದ. ಅದಕ್ಕೆ ನಾನು 'ನಿಮ್ಮದು ಕೈ-ಪಕ್ಷ ಅದ್ಯಾಕೆ call ಮಾಡವ್ರೆ' ಅಂತ ಸ್ವಲ್ಪ ಕಿಚಾಯಿಸಿದೆ. P.A.ಗೆ ನಖ ಶಿಖಾಂತ ಉರಿದೊಯಿತು.. ಇನ್ನು ಅಲ್ಲೇ ಇದ್ದರೆ ನನ್ನ ಗ್ರಹಚಾರ ಕೆಟ್ಟಂಗೆ, ಅಂತ ಅಲ್ಲಿಂದ ಒಂದೇ ಉಸಿರಿಗೆ ಓಡಿ ಕುಮಾರಣ್ಣನ ಬಳಿ ಬಂದೆ.

೨

ಕುಮಾರಣ್ಣನ P.A. ಎದುರಾದ. 'ಅಣ್ಣಾವ್ರು ಮಲ್ಗವ್ರೆ' ಅಂದ. 'ಇದೇನಪ್ಪ ಬೆಳಗ್ಗೆ ಹೊತ್ತು ಮಲಗಿದ್ದಾರ?!! ದ್ಯಾವೇಗೌಡ್ರೆ ವಾಸಿ.. ಸಭೆ ಸಮಾರಂಭಕ್ಕೆ ಹೋಗಿ ವೇದಿಕೆಯ ಮೇಲೆ ತಮ್ಮ ನಿದ್ರಾ ಕಾರ್ಯಕ್ರಮ ಮುಗಿಸಿಕೊಂಡು ಆಮೇಲೆ ಸಕ್ಕತ್ 'productive' ಆಗಿ ಕೆಲ್ಸ ಮಾಡ್ತ ಇದ್ದರಲ್ಲಾ?' ಎಂದೆ. ಅದಕ್ಕವನು 'ಅಣ್ಣಾವ್ರು ಏನು ಕಮ್ಮಿಯಿಲ್ಲ ರಾತ್ರಿಯೆಲ್ಲ ಹಳ್ಳಿಗಳಲ್ಲಿ ತಿರುಗಾಡಿ ನಿದ್ರೆ ಬಂದಿಲ್ಲಾ.. ಅದಕ್ಕೆ ಈಗ ಮಲ್ಗವ್ರೆ' ಅಂದ. 'ಅಲ್ಲಪ್ಪಾ ಕುಮಾರಣ್ಣ ಹೋಗಿದ್ದು ಹಳ್ಳಿಗಳಲ್ಲಿ ಮಲಗಲಿಕ್ಕೆ ಅಂತ ಅಲ್ವಾ?!! ' ಅಂದೆ. ಅದಕ್ಕವನು 'ಅದೇನೋ ಸರೀನೆ ಮಲಗೋಕೆ ಅಂತ ಓಗಿದ್ರು ಆದ್ರೆ ಸೊಳ್ಳೆ ಕಾಟ. ಅದೂ ಹಳ್ಳಿ ಸೊಳ್ಳೆಗಳು. ಪೇಟೆಯಿಂದ ತಗೊಂಡೋಗಿದ್ದ ಸೊಳ್ಳೆ ಪರದೆನ್ನೆಲ್ಲಾ ತೂತು ಮಾಡಿ ಕುಮಾರಣ್ಣನ ನಿದ್ರಾಭಂಗ ಆಗೋಯಿತು' ಅಂದ. ಅಷ್ಟರಲ್ಲಿ ಕುಮಾರಣ್ಣೋರು ಸ್ನಾನ ಮಾಡಿ ಶುಭ್ರವಾದ ಗರಿ ಗರಿಯಾದ ಬಿಳೀ ಶರ್ಟು ಪಂಚೆ ಉಟ್ಟುಕೊಂಡು ಬಂದ್ರು ಅವರ freshness ನೋಡಿದರೆ ಸಾಕು ನಮ್ಮ ಆಯಾಸ ಎಲ್ಲಾ ಓಡಿಹೋಗಬೇಕು ಹಂಗಿದ್ರು.

ಕುಮಾರಣ್ಣ: 'ಎನಪ್ಪಾ ಶರತ್ತೂ ಏನಾಗ ಬೇಕಿತ್ತೂ? (ಇವಯಾರ್ಕೋ ಥೂ ಥೂ ಅಂತಾರಲ್ಲಾ..?!! ಇರಲಿ ಅಂತ ಸಂದರ್ಶನ ಶುರು ಹಚ್ಕೊಂಡೆ)

ಪ್ರಶ್ನೆ: 'ಎನ್ನಾರ್ ಹೊಸ ವರ್ಷ ಹೆಂಗಿದೆ? ಗಣಿ – ರೆಡ್ಡಿಯಿಂದ ಹೊಸ ತೊಂದ್ರೆ ಏನು ಇಲ್ಲಾ ತಾನೆ?'

ಕುಮಾರಣ್ಣ: 'ಅಲ್ಲಾ ಬ್ರದರ್ ಆ ರೆಡ್ಡಿಗೆ ಸ್ವಲ್ಪಾನು ಲೇಟೇಸ್ಟ್ ಟೆಕ್ನಾಲಜಿ ಬಗ್ಗೆ ನಾಲೆಜ್ಜೆ ಇಲ್ಲಾ. ಈವಾಗೆಲ್ಲ ಆ DVD, USB ಡ್ರೈವ್, Flash ಡ್ರೈವ್, Jump ಡ್ರೈವ್ ಕಾಲ. (ಅಂತ ಸ್ವಲ್ಪ ಜಂಪ್ ಮಾಡ್ಕೊಂಡೆ ಮಾತಾಡಿದ್ರು) ಇಂತ ಕಾಲದಲ್ಲಿ ಇನ್ನೂ ಹಳೇ ಕಾಲದ CD ಇಟ್ಕೊಂಡು ವ್ಯಾಪಾರಾ ಮಾಡ್ತೀನಿ ಅಂತಾನೆ. ಆ CDನಲ್ಲಿ ವಿಡೀಯೋ ಆಗಲಿ ಆಡಿಯೋ ಆಗಲಿ ಒಳ್ಳೆ ಕ್ವಾಲಿಟಿನಲ್ಲಿ ಇಲ್ಲ. ಒಗ್ಗಿ ಮೊದಲೇ

ಏಳಿದ್ರೆ ಒಳ್ಳೆ High definition ಕ್ಯಾಮೆರಾದಲ್ಲೆ ಶೂಟಿಂಗ್ ಮಾಡ್ಬೋದಾಗಿತ್ತೂ' ಎಂದು ತಮ್ಮ ಸಿನಿಮಾ ಪ್ರಪಂಚದ ನಾಲೆಜ್ ಪ್ರದರ್ಶಿಸಿದರು.

'ಅದು ಸರಿ....' ಅಂತ ಮುಂದಿನ ಪ್ರಶ್ನೆ ಬಿಟ್ಟೆ.

ಪ್ರಶ್ನೆ: 'ಏನ್ಸಾರ್ ನಿಮ್ಮ ೨೦ ತಿಂಗಳ ಸರದಿ ಮುಗಿದ ಮೇಲೆ ಯಡ್ಡಿ ಅವರಿಗೆ 'C.M. seat' ಉ....' ಇನ್ನು ನನ್ನ ಮಾತು ಪೂರ್ತಿಯಾಗಿರಲಿಲ್ಲ ಅಷ್ಟರಲ್ಲಿ ಕುಮಾರಣ್ಣ ಗಡಿಬಿಡಿಯಲ್ಲಿ ಹೊರಡುತ್ತ 'ನೋಡಿ ಬ್ರದರ್ ನೀವು ನೆನಪು ಮಾಡಿದ್ದು ಒಳ್ಳೆಯದಾಯಿತು ಅದೇ ವಿಷಯದ ಬಗ್ಗೆ ಡಿಸ್ಕಷನ್ಗೆ ಓಗಬೇಕು. ನಮಪ್ಪ ಹಾಗು ರೇವಣ್ಣ ಕಾಯ್ತಾ ಇರ್ತಾರೆ ಬರ್ಲ್ಲಾ ಬ್ರದರ್ ಮತ್ತೆ ಸಿಗ್ತೀನಿ' ಅಂತ ಹೊರಟೇ ಬಿಟ್ಟರು. ಈ ರಾಜಕೀಯದವರೆಲ್ಲಾ ಇಷ್ಟೆ. ಕಾಲಲ್ಲಿ ಚಕ್ರ ಕಟ್ಕೊಂಡೆ ತಿರುಗ್ತಾಯಿರ್ತಾರೆ ಯಾರಾದರು ಸಿನಿಮಾದವರನ್ನು ಬೇಟಿ ಮಾಡೋಣಾಂತ ಹೊರಟೆ.

೩

ಬಹಳ ವರ್ಷಗಳ ಆಸೆ ರಾಜ್ ಅಣ್ಣಾವ್ರ ಸಂದರ್ಶನ ಮಾಡಬೇಕೆಂದು. ಅದು ಕೈ ಗೂಡುವಷ್ಟರಲ್ಲಿ ದೇವರು ಅವರನ್ನ ಕರೆದುಕೊಂಡುಬಿಟ್ಟ. ಅಣ್ಣಾವ್ರ ನಂತರ ಮನಸ್ಸಿಗೆ ಬಂದಿದ್ದು, ವಿಷ್ಣುವರ್ಧನ್ ಅವರು. ಸರಿ, ಅವರನ್ನೆ ಮಾತಾಡಿಸೋಣ ಅಂತ ಅವರ ಮನೆ ತಲುಪಿದೆ. ವಿಶಾಲವಾದ ಮನೆ, ದೊಡ್ಡದಾದ ಹಾಲಿನೊಳಗೆ ಪ್ರವೇಶಿಸುತ್ತಿದ್ದಂತೆ.. ಘಂ ಎನ್ನುವ ಗಂಧದ ಕಡ್ಡಿಯ ಪರಿಮಳ. ಇದು ಯಾವುದೊ ಹೊಸ ಬ್ರ್ಯಾಂಡ್ ಪರಿಮಳ ಅಂತ ಯೋಚಿಸುತ್ತಾ ಮುಂದೆ ನಡೆದೆ. ಅಲ್ಲೆ ಮುಂದೆ ಸ್ವಲ್ಪ ಎತ್ತರವಾದ ಪೀಠದಲ್ಲಿ ಬಿಳೀ ಜುಬ್ಬ ಪಾಯಿಜಾಮ ತೊಟ್ಟು ವಿಷ್ಣುವರ್ಧನ್ ಅವರು ಆಸೀನರಾಗಿದ್ದರು, ಧ್ಯಾನ ಮಾಡುತ್ತಿದ್ದಂತೆ ತೋರಿತು. ಹೆಜ್ಜೆಯ ಸಪ್ಪಳಕ್ಕೆ ಕಣ್ಣು ತೆರೆದು ನೋಡಿ ಮುಗುಳ್ನಕ್ಕರು. ತಲೆಯ ಮೇಲೆ ಬಿಳೀ ಟೋಪಿ, ಕೆಂಚಗಿನ ಗಡ್ಡ, ಒಳ್ಳೆ ಸಿಂಹ ಗಾಂಭೀರ್ಯದ ಮುಖ.. 'ಸಾಹಸಸಿಂಹ' ಬಿರುದು ಸರಿಯಾಗಿದೆ, ಅನ್ನಿಸಿತು. ನನ್ನತ್ತ 'ಏನಾಗಬೇಕಿತ್ತು?!' ಎಂಬಂತೆ ಪ್ರಶ್ನಾರ್ಥಕ ನೋಟ. ನಾನೇ ಪರಿಚಯಿಸಿಕೊಂಡು ವಿಷ್ಣುಗೆ ಡಾಕ್ಟರೇಟ್ ಬಿರುದು ಬಂದಿದ್ದಕ್ಕೆ ಅಭಿನಂದಿಸಿದೆ. ಪ್ರತಿಯಾಗಿ ವಿಷ್ಣು ಕೈ ಮುಗಿದು ಎರಡು ಕೈ ಮೇಲೆ ಮಾಡಿ ನೋಡತೊಡಗಿದರು. 'ತನ್ನದೇನು ಇಲ್ಲ ಎಲ್ಲಾ ಭಗವಂತನ ಕೃಪೆ' ಎನ್ನುವಂತೆ ನಾನೆ ಮತ್ತೆ ಪ್ರಶ್ನೆ ಕೇಳಿದೆ. 'ರಾಜಣ್ಣಾವ್ರಿಲ್ಲದೆ .. ಕನ್ನಡ ಚಲನಚಿತ್ರ ರಂಗ ಹೇಗಿದೆ ?!'

ಅಣ್ಣಾವ್ರ ಬಗ್ಗೆ ನೆನಪಿಸಿದ್ದೆ ತಡ ತಮ್ಮ ಸಿನಿಮ ಶೈಲಿಯಂತೆ ಹೃದಯದ ಮೇಲೆ ಕೈ ಆಡಿಸಿ ಬಾಯಿಯ ಮೇಲೆ ಬೆರಳಿಟ್ಟು ಕಣ್ಣು ತುಂಬಿಕೊಂಡು ಆ ಕಡೆ ಈ ಕಡೆ

ನೋಡಿ ಮತ್ತೆ ನನ್ನತ್ತ ನೋಡುತ್ತಾ, ಎಡಗೈ ಮುಂದೆ ತಂದರು. ವಿಷ್ಣು ಅವತ್ತು ಆಧ್ಯಾತ್ಮಿಕ ಲೋಕದಲ್ಲಿ ವಿಹರಿಸುತ್ತಾ ಮೌನ ವ್ರತದಲ್ಲಿದ್ದಂತೆ ಕಂಡಿತು. ಸರಿ ಮತ್ತಿನ್ನೇನು ಮಾತು ಎಂದು ನಮಸ್ಕರಿಸಿ 'ಮತ್ತೆ ಬರುತ್ತೇನೆ' ಎಂದು ಹೇಳಿ ಹೊರಟೆ. ವಿಷ್ಣು ಪ್ರತಿಯಾಗಿ ನಮಸ್ಕರಿಸಿ ಮತ್ತೆ ಖಂಡಿತ ಬನ್ನಿ ಎಂಬ ಭಾವನೆಯಿಂದ ನೋಡತೊಡಗಿದರು.

೪

ಸರಿ ಅಲ್ಲಿಂದ ಹೊರಟ ಮೇಲೆ ಈ ಸಿನಿಮಾದವರ ಸಹವಾಸವು ಸಾಕು. ಯಾರಾದರೂ Sport Starನ ಸಂದರ್ಶನ ಮಾಡುವ, ಅಂತ ಕರ್ನಾಟಕದ ಕ್ರೀಡಾ ಕಲಿ 'Great wall' ರಾಹುಲ್ ದ್ರಾವಿಡರನ್ನು ಭೇಟಿಯಾದೆ. ಉಭಯ ಕುಶಲೋಪರಿಯ ನಂತರ ಮಾತಿಗಿಳಿಯುತ್ತಾ 'ಏನು ದ್ರಾವಿಡ್ ಅವರೆ, ಹೊಸ ವರ್ಷದಲ್ಲಿ ನಿಮ್ಮ ಭವಿಷ್ಯ ಹೇಗಿದೆ?! ಭಾರತ ಕ್ರಿಕೆಟ್ ತಂಡದ ಭವಿಷ್ಯ ಹೇಗಿದೇ?!!' ಎಂದೆ. ಅವರ ಮುಖ ಬಹಳ ಬಾಡಿ ಹೋಯಿತು. 'ಯಾಕೋ ಗ್ರಹಚಾರ ನೆಟ್ಟಗಿಲ್ಲ ಎಲ್ಲಾ ಪಂದ್ಯ ಸೋಲುತ್ತಿದ್ದೇವೆ ಏನು ಮಾಡುವುದೋ ತಿಳಿಯುತ್ತಿಲ್ಲ' ಎಂದರು. 'ಸಚಿನ್‌ರಂತೆ ಕುಕ್ಕೆ ಸುಬ್ರಮಣ್ಯಕ್ಕೆ ಹೋಗಿ ಯಾಕೆ ಪೂಜೆ ಮಾಡಿಸಬಾರದು?' ಎಂದೆ. ಗುರುಗುಟ್ಟಿ ನನ್ನ ಕಡೆ ನೋಡತೊಡಗಿದರು, 'ಅಷ್ಟೂ ತಿಳಿಯದೆ? ನನಗೆ' ಎನ್ನುವಂತೆ. 'ಎಲ್ಲಾ ಪೂಜೆಯೂ ಆಯಿತು. ಆದರೂ ಸರಿ ಹೊಗ್ತಾಯಿಲ್ಲ' ಅಂದರು. 'ಗಂಗೂಲಿಯೇನಾದರು ಶಾಪ ಕೊಟ್ಟಿದ್ದಾರೇನೋ. ಅವರನ್ನು ಸುಮ್ಮನೆ ಟೀಮಿನಲ್ಲಿ ಇಟ್ಟುಕೊಳ್ಳೋದೆ ಅದೃಷ್ಟ ಅನ್ನಿಸುತ್ತೆ' ಅಂದೆ. ಏನನ್ನಿಸಿತೋ ದ್ರಾವಿಡ್ ಫೋನೆತ್ತಿಕೊಂಡು ಒಳಗಡೆ ಓಡಿದರು.

ಅರ್ಧ ಗಂಟೆಯಾದರೂ ಆಸಾಮಿ ನಾಪತ್ತೆ. ಮೆಲ್ಲಗೆ ಒಳಗೆ ಕಿವಿಯಿಟ್ಟು ಕೇಳಿಸಿಕೊಂಡೆ. ಆ ಕಡೆಯಿಂದ ಚಾಪೆಲ್‌ರ ಧ್ವನಿಯಿದ್ದಂತಿತ್ತು ಮಾತುಕತೆ ಸ್ವಲ್ಪ ಬಿರುಸಾಗೆ ನಡೆದಿತ್ತು. ಇಬ್ಬರ ಜಗಳದಲ್ಲಿ ಮೂರನೆಯವನಿಗೆ ಹೊಡೆತ ಅಂತ ನನ್ನ ಮೇಲೆ ತಿರುಗಿದರೆ ಕಷ್ಟ ಅಂತ ಅಲ್ಲಿಂದ ಮೆಲ್ಲಗೆ ಕಳಚಿಕೊಂಡೆ.

೫

ಮುಂದೆಲ್ಲಿಗೆ ಹೋಗುವುದೋ ತಿಳಿಯದಾಯಿತು ಯಾವುದಾದರು ಪ್ರಾಣಿಗಳ ಸಂದರ್ಶನ ಮಾಡುವ idea ಬಂತು. ಮೊದಲಿಗೆ ಕಂಡು ಬಂದದ್ದು ಬೀದಿ ನಾಯಿಗಳು. ಹೇಗೂ ಬೆಂಗಳೂರಿನಲ್ಲಿ ನಾಯಿಗಳು ಬಹಳ ಸುದ್ದಿಯಲ್ಲಿವೆ. ಅವನ್ನೆ ಸಂದರ್ಶಿಸೋಣ, ಎಂದು ಹೋಗಿ 'ಹಾಯ್' ಹೇಳಿದ್ದೇ ತಡ, ಅದು ಕಚ್ಚೋಕ್ಕೇ ಬಂತು. ಹಂಗು ಹಿಂಗು ಸಮಾಧಾನ ಮಾಡಿ ಬಂದ ವಿಷಯ ತಿಳಿಸಿದೆ 'ಯಾರೋ ನಾಯಿ ಹಿಡಿಯುವವರು

ಇರಬೇಕೆಂದು ಕಚ್ಚೋಕೆ ಬಂದೆ' ಅಂತು. 'ಯಾಕೆ ಇಷ್ಟೊಂದು ರೌಡಿಸಂ ಬುದ್ಧಿ ಬಂತು ನಾಯಿಗಳಿಗೆ?!!' ಅಂತ ಕೇಳಿದೆ. ನಾಯಿ ಹೇಳಿತು: 'ಅವನ್ಯಾವನೋ Prem ಅಂತ Film Director ಇದ್ದಾನಂತಲ್ಲಾ ಅವನು ನಿಜ ಜೀವನದ ರೌಡಿಗಳನ್ನು ಸಿನಿಮಾದಲ್ಲಿ ತೋರಿಸಿ ಫೇಮಸ್ ಅಂತೆ?' ಅಂತು. ಅದಕ್ಕೆ ನಾನು 'ಹೌದು, ಅವನೇನೋ ಸಿನಿಮಾದಲ್ಲಿ ರೌಡಿಗಳನ್ನು ತೋರಿಸಿದರೆ ನೀವ್ಯಾಕೆ ಹಿಂಗೆ?' ಅಂದೆ. ಆಗ ತಿಳಿಯಿತು ಇದೇ ನಾಯಿ ಇನ್ನೂ ಹಲವಾರು ನಾಯಿಗಳೊಂದಿಗೆ ಪ್ರೇಮ್ ಹತ್ತಿರ ಹೋಗಿ ಸಿನಿಮಾದಲ್ಲಿ ಅವಕಾಶ ಕೇಳಿತಂತೆ. ಅದಕ್ಕೆ ಪ್ರೇಮ್ 'ನಿಮ್ಮ talent ಹತ್ತಾರು ಜನಗಳಿಗೆ ಗೊತ್ತಾಗುವಂಥ ಕೆಲಸ ಮಾಡಿ, ಅಮೇಲೆ ನೋಡೋಣ' ಅಂದನಂತೆ. ಅದಕ್ಕೇ ಈ ನಾಯಿಗಳದ್ದು, ರೌಡಿಸಂ ತೋರಿಸಿ ಸಿನಿಮಾದಲ್ಲಿ ಅವಕಾಶಗಿಟ್ಟಿಸಿ 'ಆದರ್ಶ ನಾಯಿ' ಬಿರುದು ಪಡೆಯುವ ಉದ್ದೇಶವಂತೆ. ಆದರೂ 'ಸಾಮಾನ್ಯ ಜನರು ಮತ್ತು ಮಕ್ಕಳಿಗೆ ಯಾಕ್ರಪ್ಪ ತೊಂದರೆ ಕೊಡ್ತೀರ?' ಎಂದು ಕೇಳಿದೆ. ಅಷ್ಟರಲ್ಲಿ ಇನ್ನೊಂದು ನಾಯಿ ಬಂದು 'ಏ ಬಚ್ಚಾ, ಈ ವಯ್ಯನ ಮಾತೆಲ್ಲಾ ಕೇಳ್ತಾ ಕುಂತ್ಕಾಬ್ಯಾಡ ಸ್ಯಾನೆ ಕೆಲ್ಸ ಐತೆ ಇನ್ನು ಏಟೊಂದು ಜನಕ್ಕೆ ಕಚ್ಚಬೇಕು ನಮ್ಮ target reach ಆಗಕ್ಕೆ'ಅಂತು. ಅಷ್ಟರಲ್ಲಿ ಇನ್ನೊಂದು ನಾಯಿ ಬಂದು 'ಮಗ, ಮಖ ಏನು ನೋಡ್ತಾ ನಿಂತ್ತೀದ್ದೀಯಾ ಈ ವಯ್ಯನ್ನೆ ಇಡ್ಕೋ, ನಮ್ಮ ಪಟ್ಟಿಗೆ ಒಂದು extra count ಆಗೋಯ್ತುದೆ' ಅಂತು ಆಗ ಮೂರು ನಾಯಿಗಳು 'ಕಚ್ಚು ಮಗ, ಕಚ್ಚು ಮಗ, ಬಿಡ ಬ್ಯಾಡ ಅವನ್ನ' ಅಂತ ಜೋಗಿ styleನಲ್ಲೆ ಅಟ್ಟಿಸಿಕೊಂಡು ಬಂದವು. ಈ ಸಂದರ್ಶನಗಳ ತಂಟೇನೇ ಬೇಡ ಅಂತ ಎದ್ದೆನೋ ಬಿದ್ದೆನೋ ಅಂತ ಅಲ್ಲಿಂದ ಓಟ ಕಿತ್ತೆ.



## ಬಾಲ್ಡಿಕತೆ

### ಎಚ್.ಕೆ. ನಂಜುಂಡಸ್ವಾಮಿ.

'ರೋಮ ರಾಶಿ ಪ್ರವರ್ಧಕ' ರುದ್ರಣ್ಣಪಂಡಿತರ ಪೂರ್ವಜರು ತಲೆತಲಾಂತರದಿಂದ ತಂಗಳೂರಿನಲ್ಲಿ ನೆಲೆಸಿದ್ದರು. ಬೋಳುತಲೆ ಚಾಮರಾಜರು, ತಮ್ಮ ತಲೆಗೂದಲು ಬೀಳಲು ಪ್ರಾರಂಭವಾದಾಗಲೇ ಇವರ ಪೂರ್ವಜರ ಶುಶ್ರೂಷೆಗೆ ಒಳಗಾಗಿ ತಮ್ಮ ಕೂದಲು ಪೂರ್ತಿ ಉದುರಿ, ತಲೆ ಬಟ್ಟಗಾಗುವ ತನಕ ಅವರಲ್ಲಿಯೇ ಶುಶ್ರೂಷೆ ಪಡೆದರೆಂದು ಪ್ರತೀತಿ. ತಂಗಳೂರಿನ ಪಾಳೆಯಗಾರರಾಗಿದ್ದ ಬಟ್ಟತಲೆ ತಿಮ್ಮರಸರು ಪಂಡಿತರ ಮುತ್ತಜ್ಜನವರ ವೈದ್ಯಕೀಯ ಸಾಮರ್ಥ್ಯವನ್ನು ಮೆಚ್ಚಿ ಅವರಿಗೆ 'ರೋಮರಾಶಿ ಪ್ರವರ್ಧಕ' ಎಂಬ ಬಿರುದನ್ನು ದಯಪಾಲಿಸಿ, ಈ ಬಿರುದನ್ನು ಅವರು ವಂಶ ಪಾರಂಪರ್ಯವಾಗಿ ಉಪಯೋಗಿಸಬಹುದೆಂದು ವಿಧಾಯ ಮಾಡಿದರಂತೆ. ಅಂದಮೇಲೆ ಕೇಳಬೇಕೆ?

ರುದ್ರಣ್ಣ ಪಂಡಿತರು ತಮ್ಮ ಹಿರಿಯರಂತೆಯೇ ವೈದ್ಯರು. ತಮ್ಮ ಚಿಕ್ಕಪ್ಪನವರಿಂದ ಅವರ 'ಕೇಶ ನಾಶ ಚಿಕಿತ್ಸಾಲಯ'ವನ್ನು ತಾವು ವಹಿಸಿಕೊಂಡು ಇನ್ನೂ ಕೆಲವೇ ದಿವಸಗಳಾಗಿದ್ದವು. ತಮ್ಮ ಪರಿಣತಿಯಿಂದ ಇಡೀ ತಂಗಳೂರಿಂದ ಬಟ್ಟತಲೆಯನ್ನು ನಿರ್ನಾಮ ಮಾಡಬೇಕೆಂಬುದು ಅವರ ಮಹದಾಶಯ. ತಮ್ಮ ಹಿರಿಯರ ಅನುಭವಗಳು, ಹಿಂದಿನ ತಾಳೇಗರಿ ಹೊತ್ತಿಗೆಗಳಿಂದ ಇಂದಿನ ಪುಸ್ತಕಗಳವರೆಗೆ ತಾವು ಓದಿ ಬೆಳೆಸಿಕೊಂಡಿದ್ದ ಜ್ಞಾನ ಮತ್ತು ತಮ್ಮ ಸ್ವಂತ ಸಂಶೋಧನೆಗಳಿಂದ ತಾವೇ ಕಂಡುಹಿಡಿದಿದ್ದ ಆವಿಷ್ಕಾರಗಳು, ಇವನ್ನು ತಮ್ಮ ಪೇಷಂಟುಗಳ ಮೇಲೆ ಪ್ರಯೋಗಿಸಿ ಅವರಿಗೆ ಆನಂದವನ್ನು ಉಂಟುಮಾಡಬೇಕೆಂಬುದು ಅವರ ಜೀವನದ ಉದ್ದೇಶ. ಆದರೆ ಏಕೋ ಏನೋ, ತಂಗಳೂರಿನ ತುಂಬ ಬಟ್ಟತಲೆಯವರು ತುಂಬಿದ್ದರೂ, ರುದ್ರಣ್ಣ ಪಂಡಿತರ ಚಿಕಿತ್ಸಾಲಯ ಮಾತ್ರ ಖಾಲಿ!

ಹೀಗೆ, ಒಂದುದಿನ ಮಧ್ಯಾಹ್ನ ಪಂಡಿತರು ಊಟಮಾಡಿ, ಎಲೆಡಿಕೆ ಜಗಿಯುತ್ತ, ಹೊಟ್ಟೆಯನ್ನು ಸವರಿಕೊಳ್ಳುತ್ತ, ಮನೆಯ ಜಗುಲಿಯ ಮೇಲೆ ಕುಳಿತು ಕನಸು ಕಾಣುತ್ತಿದ್ದರು. ಆಗ ಇದ್ದಕ್ಕಿದ್ದಂತೆ ಎಲ್ಲಿಂದಲೋ, ಅರವತ್ತರಂತೆ ಕಾಣುತ್ತಿದ್ದ, ಆದರೆ ಮೂವತ್ತೈದರ ವಯಸ್ಕನೊಬ್ಬ ಪಂಡಿತರ ಮುಂದೆ ಬಂದು ಅವರನ್ನು ಎಬ್ಬಿಸಿ, ಅವರ ಮುಖದ ಮುಂದೆ ತನ್ನ ತಲೆಯನ್ನು ಒಡ್ಡಿದ. ಅವನ ತಲೆಯಲ್ಲಿ ತಮ್ಮ ಮುಖವನ್ನು ಕಂಡ ಪಂಡಿತರಿಗೆ ಸಕಲವೂ ಅಭಿಪ್ರಾಯವಾಯಿತು. ಧಡಬಡನೆ ಎದ್ದು ಆ ಯುವಕ–ಶಿವಣ್ಣ–ನನ್ನು ಮನೆಯೊಳಕ್ಕೆ ಕೈಹಿಡಿದು ಕರೆದೊಯ್ದರು. ಅಲ್ಲಿ ಕೂರಿಸಿ ನಿಂಬೆ ಹಣ್ಣಿನ ಪಾನಕವನ್ನು ಕೊಟ್ಟು, ಅವನ ತಲೆಯನ್ನು ಎಚ್ಚರಿಕೆಯಿಂದ ಪರೀಕ್ಷಿಸಲು ಪ್ರಾರಂಭಿಸಿದರು.

ಸೊಗಸಾದ ತಲೆ. ಫಳಫಳ ಹೊಳೆಯುತ್ತಿತ್ತು. ನೆತ್ತಿಯಮೇಲೆ ಅಂಡಾಕಾರದ ಬಟ್ಟತಲೆ. ಆದರೆ ಅದರ ಸುತ್ತ ದಟ್ಟವಾದ ಕೇಶರಾಶಿ! ಸಾಧಾರಣವಾಗಿ ಬಟ್ಟತಲೆಯುವರೆಲ್ಲರೂ ಹೀಗೆಯೇ ಅಲ್ಲವೇ? ಎಂದು ಮನಸ್ಸಿನಲ್ಲೇ ಯೋಚಿಸಿಕೊಂಡರು. ತಾವೇ ಕಂಡುಹಿಡಿದಿದ್ದ, ಅಜಿನ 'ಸಂಕೋಚನ ಸಿದ್ಧಾಂತ'ವನ್ನು ಪ್ರಯೋಗಿಸಲು ಇದೊಂದು ಸದವಕಾಶ ಎಂದು ಮನಸ್ಸಿನಲ್ಲೇ ಹಿಗ್ಗಿದರು.

ಶಿವಣ್ಣನನ್ನುದ್ದೇಶಿಸಿ 'ಅಪ್ಪಾ, ಮುಂದಿನ ವಾರ ಬಂದರೆ, ನಿನ್ನನ್ನು ನಮ್ಮ ಮೂರು ತಿಂಗಳ ಚಿಕಿತ್ಸೆಗೆ ಸೇರಿಸಿಕೊಳ್ಳುತ್ತೇನೆ' ಮೂರು ತಿಂಗಳ ಕೊನೆಯಲ್ಲಿ ನಿನ್ನ ನೆತ್ತಿಯಮೇಲೆ ಕೂದಲಿಲ್ಲದೇ ಹೋದರೆ, ನಾನು ಇನ್ನೆಂದೂ 'ಕೇಶರಾಶಿ ಪ್ರವರ್ಧಕ' ಎಂಬ ಬಿರುದನ್ನು ಉಪಯೋಗಿಸುವುದೇ ಇಲ್ಲ, ಖಂಡಿತ' ಎಂದರು. ಶಿವಣ್ಣನಿಗೆ ಆದ ಆನಂದಕ್ಕೆ ಪಾರವೇ ಇಲ್ಲ. ಪಂಡಿತರ ಕಾಲು ಹಿಡಿದು ನಮಸ್ಕಾರ ಮಾಡಿ, ಹೆಂಡತಿಗೆ ಈ ಸುಖ ಸುದ್ದಿಯನ್ನು ಕೊಡಲು ಓಡಿದ.

ಪಂಡಿತರೂ ಕೂಡಲೆ ಕೆಲಸಕ್ಕಿಳಿದರು. ಮಾಡಬೇಕಾದ ಕೆಲಸ ತುಂಬವಿತ್ತು. ಏನೇ ಆದರೂ ಒಂದು ವಾರದೊಳಗೇ ಚಿಕಿತ್ಸೆಗೆ ಸಿದ್ಧವಾಗಬೇಕಲ್ಲ. ಅವರು ಮಾಡಬೇಕಾದ ಮೊದಲ ಕೆಲಸ ಶಿವಣ್ಣನ ತಲೆಯನ್ನು ಚಿಕಿತ್ಸೆಗೆ ಹದಗೊಳಿಸಬೇಕಷ್ಟೆ. ಹೀಗೆ ಯೋಚಿಸುತ್ತ ಪಂಡಿತರು ಹತ್ತಿರದ ಓತೀಕ್ಯಾತಸಂದ್ರದ ಸಂಗೀತ ವಿದ್ವಾನ್ ತಾಳಭೂಷಣ ವೆಂಕಣ್ಣಪಿಳ್ಳೆಯವರಿಗೆ ಬುರಹೇಳಿ ಕಳಿಸಿದರು. ಅದೇ ಸಂಜೆ ಪಿಳ್ಳೆಯವರು ಬಂದರು. ಅವರೂ ಪಂಡಿತರ ಚಿಕ್ಕಪ್ಪನವರ ಹಳೆಯ ಪೇಷಂಟು. ಪಿಳ್ಳೆಯವರು ಮೂಲತಹ ಬೆಂಗಳೂರಿನವರಾದ್ದರಿಂದ ಅವರಿಗೆ ಕನ್ನಡ ಬರದು. ಪಂಡಿತರಿಗೆ ತಮಿಳು 'ವರದಿಲ್ಲೆ!' ಪಿಳ್ಳೆಯವರಿಗೆ ಕನ್ನಡದಲ್ಲಿ ಮಾತನಾಡಲು ಇಷ್ಟ. ಪಂಡಿತರಿಗೆ ತಮಿಳಿನಲ್ಲಿ ಮಾತನಾಡುವ ಆಸೆ. ಅವರ ಸಂಭಾಷಣೆ ಹೀಗೆ ನಡೆಯಿತು:

ಪಂಡಿತರು: 'ಎನ್ನ ಸಾರ್, ಸೌಖ್ಯಮಾ?'

ಪಿಳ್ಳೆಯವರು: 'ಸೌಖ್ಯ. ನಿಮಕೆ ಎಂಗೆ?'

ಪಂ:'ಪಾರುಂಗೋ. ಇನ್ನು ಮೂರು ಮಾಸಮ್ ನಮಕೆ ನಿಮ್ಮ ಸಹಾಯಂ ವೇಣುಂ'.

ಪಿ: 'ಸಹಾಯವಾ? ಏನಂತ ಹೇಳಿವಿಡಿ'.

ಪಂ: 'ಪಾರುಂಗೋ, ಇನ್ನು ಮೂರು ಮಾಸಂ, ವಾರಕ್ಕೆ ಮೂರು ಸಲಂ ಬೆಳಕ್ಕೆ ಇಂಗೆ ವಂದುಟ್ಟು, ನೀಂಗಳ ತಬಲಂ ಇಂಗೆಯೇ ಅಭ್ಯಾಸ ಪಣ್ಣುಣುಮ್. ನಿಮ್ಮ ಖರ್ಚಮ್ ನಾನು ಕುಡುಕರೆ'.

ಪಿ: 'ಅಶ್ಟೆಯಾ. ಆಕಲಿ ಅಂಗೆಯೇ ಮಾಟುತ್ತೀನಿ'.

ಪಂ: 'ನೀಂಗಳ ತಬಲಂ ತರವೇಂಡುಂ'.

ಪಿ: 'ಬೇಡವಾ? ಎಂತಕೇ?'

ಪಂ: 'ಎಂಗಳ ಒರು ಪೇಷಂಟ್ ಇರ್ಕ. ಅವನ ತಲೆಯಂ ನಿಂಗಳಿಗೆ ಕುಡುಕರೆ. ಅವಾಳ ತಲೆಯ ಮೇಲೆಯೇ ನೀಂಗಳ್ ಪ್ರಾಕ್ಟೀಸ್ ಪಣ್ಣುಣುಂ'.

ಪಿ: 'ಓ! ಆಕಲಿ, ಆಕಲಿ'.

ಇದೇನು ಇದು ವಿಚಿತ್ರ ಎಂದು ನೀವು ಕೇಳುತ್ತಿದ್ದೀರಿ. ಗೊತ್ತು. ಈ ಮೇಲಿನ ಸಂಭಾಷಣೆಗೆ ಕಾರಣ ಇಷ್ಟು: ಬಟ್ಟತಲೆಗೆ ಕಾರಣ ಆ ಚರ್ಮಕ್ಕೆ ಸಾಕಷ್ಟು ರಕ್ತ ಸಂಚಾರವಿಲ್ಲದೇ ಇರುವುದು, ಎಂಬುದನ್ನು ಪಂಡಿತರು ಎಲ್ಲೋ ಓದಿದ್ದರು. ಹಾಗಾದರೆ ಶಿವಣ್ಣನ ತಲೆಯ ಚರ್ಮಕ್ಕೆ ರಕ್ತ ಸಂಚಾರ ಹೆಚ್ಚುವಂತೆ ಮಾಡುವುದು ಹೇಗೆ? ಎಂದು ಯೋಚಿಸಿದರು. ಮಕ್ಕಳ ಕೆನ್ನೆಗೆ ಹೊಡೆದಾಗ, ಕಿವಿ ಹಿಂಡಿದಾಗ ಆ ಜಾಗ ರಕ್ತ ಸಂಚಾರದಿಂದ ಕೆಂಪಗಾಗುವುದನ್ನು ಕಂಡಿದ್ದರು. ಆದರೆ ತಲೆಯನ್ನು ಹಿಂಡುವುದಕ್ಕೆ ಆಗುವುದಿಲ್ಲವಲ್ಲ ಮತ್ತು ತಲೆಗೆ ಹೊಡೆದರೆ ಆ ಏಟುಗಳನ್ನು ಮೂರು ತಿಂಗಳಕಾಲ ಶಿವಣ್ಣ ಸಹಿಸುತ್ತಾನೆಯೇ? ಅರ್ಧ ಚಿಕಿತ್ಸೆಯಲ್ಲೇ ಅದನ್ನು ಬಿಟ್ಟು ಓಡಿಹೋಗುವ ಸಂಭವವಿಲ್ಲವೇ? ಪಿಳ್ಳೆಯವರು ನಿಧಾನವಾಗಿ ಪ್ರಾರಂಭ ಮಾಡಿ ಆಮೇಲೆ ತಬಲದ ಬಡಿತವನ್ನು ಜೋರುಮಾಡುವುದನ್ನು ಪಂಡಿತರು ಕಂಡಿದ್ದರು. ಆದ್ದರಿಂದ ಪಿಳ್ಳೆಯವರಂಥ ತಬಲವಿದ್ವಾಂಸರಿಂದ ಶಿವಪ್ಪನ ತಲೆ ತಟ್ಟಿಸುವುದೇ ಒಳ್ಳೆಯದು, ರಕ್ತ ಸಂಚಾರವೂ ಜಾಸ್ತಿಯಾಗುತ್ತದೆ. ಅವನ ತಲೆಯೂ ನಿಧಾನವಾಗಿ ಒಗ್ಗಿಕೊಳ್ಳುತ್ತದೆ ಎನಿಸಿತು ಪಂಡಿತರಿಗೆ.

ಇನ್ನು ಬೇಕಾದ ಔಷಧ ದ್ರವ್ಯಗಳು, ಮದ್ದುಗಳು. ಮನೆಯ ಮೇಲಿನ ಅಟ್ಟದಲ್ಲಿ ಹುಡುಕಿ, ಬಡುವಿನ ಮೇಲಿದ್ದ ಡಬ್ಬಗಳನ್ನು ತಲಾಶೆ ಮಾಡಿ, ಗುಜರಿಯ ಅಂಗಡಿಯಲ್ಲಿದ್ದ ಕೆಲವು ಸಾಮಾನುಗಳನ್ನು ಕೊಂಡು, ಮಾರನೆಯ ದಿನ ಪಂಡಿತರು ತಮ್ಮ ಸ್ವಕಲ್ಪಿತ ಔಷಧವನ್ನು ತಯಾರಿಸತೊಡಗಿದರು. ಒಂದು ಪೌಂಡು ಹಲಸಿನ ಮರದ ಗೋಂದು, ಅರ್ಧ ಪೌಂಡು ಇಂಗು, ಹದಿನಾರು ಪ್ರತಿಮುಂಡೇಕಾಯಿಗಳನ್ನು ತೇದು ಮಾಡಿದ ಗಂಧ, ನಾಲ್ಕು ಅಂಟುವಾಳದ ಕಾಯಿಗಳು, ಎರಡು ಚಿಕ್ಕ ಮರದಷ್ಟು ಸಗಣಿ, ಒಂದು ಚಪಾತಿಗಾಗುವಷ್ಟು ಗೋಧೀ ಹಿಟ್ಟು, ಅಮೆರಿಕದಿಂದ ತರಿಸಿ ಯಾರೋ ಎಸೆದಿದ್ದ ಮೂರು ಟ್ಯೂಬು ಸೂಪರ್ ಗ್ಲೂ, ಒಂದು ಲೋಟ ಬೆಳ್ಳುಳ್ಳಿ ಕಷಾಯ, ಆರು ಗುಳುಪಾವಟೆ ಉಂಡೆಗಾಗುವಷ್ಟು ಹಿಟ್ಟು, ಹತ್ತು ಚಮಚದಷ್ಟು ಕರಗಿದ ಟಾರು, ಇನ್ನೂ ಏನೇನೋ ಪದಾರ್ಥಗಳನ್ನು ಬೇರೆ ಬೇರೆ ಪ್ರಮಾಣದಲ್ಲಿ ಬೆರೆಸಿ ನೋಡುತ್ತ ಕಡೆಗೆ ತಮಗೆ ಬೇಕಾಗಿದ್ದಂತೆ ಅವೆಲ್ಲವನ್ನೂ ಸೇರಿಸಿ ತಿರುವಿ ಮಂದವಾದ, ಅಂಟು ಅಂಟಾದ ಒಂದು ಪೇಸ್ಟನ್ನು ತಯಾರಿಸಿ ಶಿವಣ್ಣನಿಗಾಗಿ ಕಾದು ಕುಳಿತರು.

ಹಿಂದೆಯೇ ನಿರ್ಧರಿಸಿದಂತೆ, ಆಷಾಢ ಬಹುಳ ದ್ವಾದಶಿಯ ದಿವಸ ರಾಹುಕಾಲ ಮುಗಿದೊಡನೆ ಶಿವಣ್ಣ, ಪಂಡಿತರ ಮನೆಯಲ್ಲಿ ಹಾಜರಾದ. ಅವನ ಹಿಂದೆಯೇ ಪಿಳ್ಳೆಯವರು. ಶಿವಣ್ಣ, ಪಿಳ್ಳೆಯವರ ಮುಂದೆ ಕುಳಿತು ತನ್ನ ತಲೆಯೊಡ್ಡಿದ. ಪಿಳ್ಳೆಯವರು ಅವನ ತಲೆಯನ್ನು ಸವರುತ್ತ, ಆಗಾಗ ಅಲ್ಲಲ್ಲಿ ಕುಟ್ಟಿ, ಪಂಡಿತರನ್ನು ಕುರಿತು:

"ಏನು ಸಾರ್, ಯಾವ ತಾಳಮ್?' ಎಂದು ಕೇಳಿದರು.

'ಎಂಥ ತಾಳಮಾದರೂ ಪರವಾ ಇಲ್ಲೆ. ಪ್ರತಿದಿನಮ್ ಅರ್ಧಗಂಟೆ ತಟ್ಟುಂಗೊ'. ಮೊದಲ್ಕೋ, ನಯಮಾಗಿ ತಟ್ಟುಂಗೋ. ಅವನಿಗೆ ಅಭ್ಯಾಸಮಾಗಿ ಪೋದ ನಂತರಂ, ಜೋರಾಗಿಯೇ ತಟ್ಟುಂಗೊ. ಪರವಾಯಿಲ್ಲೆ!' ಎಂದರು ಪಂಡಿತರು.

ಅಂದಿನಿಂದ ವಾರಕ್ಕೆ ಮೂರುದಿನ, ಶಿವಣ್ಣ ಮಧ್ಯಾಹ್ನ ಹನ್ನೆರಡಕ್ಕೆ ಚಿಕಿತ್ಸಾಲಯಕ್ಕೆ ಹಾಜರ್. ಪಿಳ್ಳೆಯವರು ಅರ್ಧಗಂಟೆ ಅವನ ತಲೆಯನ್ನು ನಾನಾ ವಿಧವಾದ ತಾಳಗಳಿಂದ ತಟ್ಟುವರು. ಆಮೇಲೆ ಪಂಡಿತರು ಅವನ ತಲೆಯನ್ನು ಪರೀಕ್ಷಿಸಿ, ರಕ್ತ ಸಂಚಾರ ಚೆನ್ನಾಗಿದೆಯೆಂದು ಮನಸ್ಸಿಗೆ ದೃಢಮಾಡಿಕೊಂಡು, ನಂತರ ತಾವು ತಯಾರಿಸಿದ್ದ ಪೇಸ್ಟ್‌ನ್ನು ಅವನ ಬಟ್ಟತಲೆಗೆ ಚೆನ್ನಾಗಿ ತಟ್ಟಿ, ಬೋಳು ಭಾಗವನ್ನು ಪೂರ್ತಿಯಾಗಿ ಆ ಪೇಸ್ಟಿನಿಂದ ಮುಚ್ಚುವರು. ಆಮೇಲೆ, ಶಿವಣ್ಣ ಮಧ್ಯಾಹ್ನದ ಉರಿಬಿಸಿಲಿನಲ್ಲಿ ಸೂರ್ಯನಿಗೆ ತಲೆಯೊಡ್ಡಿ ಒಂದು ಗಂಟೆ ಕುಳಿತಿದ್ದು ತಲೆ ಕಾಯಿಸಬೇಕು. ನಂತರ ಪಂಡಿತರು ತಮ್ಮ ಹಳೆಯ ಪಂಚೆಯೊಂದನ್ನು ಅವನ ತಲೆಗೆ ರುಮಾಲು ಕಟ್ಟಿ ಅವನನ್ನು ಮನೆಗೆ ಕಳಿಸುತ್ತಿದ್ದರು. ಇದು ಶಿವಣ್ಣನ ದಿನಚರಿಯಾಯಿತು.

ಎರಡು ತಿಂಗಳು ಈ ರೀತಿ ಕಳೆದ ಮೇಲೆ, ಒಂದು ದಿನ ಶಿವಣ್ಣನು, ಪಂಡಿತರನ್ನು ಕುರಿತು:

'ಪಂಡಿತರೇ, ತಲೆ ಹೇಗೆ ಕಾಣುತ್ತಿದೆ?' ಎಂದು ಧೈರ್ಯಮಾಡಿ ಕೇಳಿದ.

'ಚೆನ್ನಾಗಿದೆಯಪ್ಪ. ನಾವು ಹೇಳಿದಂತೆ ಕೇಳುತ್ತಿದೆ ನಿನ್ನ ತಲೆ' ಎಂದರು ಪಂಡಿತರು.

'ಹಾಗಾದರೆ ಚೆನ್ನಾಗಿ ಕೂದಲು ಬೆಳೆಯುತ್ತಿದೆಯೇ?' ಶಿವಣ್ಣ ಕೇಳಿದ, ಕುತೂಹಲವನ್ನು ತಡೆಯಲಾರದೆ.

'ಇಲ್ಲ' ಎಂದರು ಪಂಡಿತರು.

ಅವರ ಉತ್ತರವನ್ನು ಕೇಳಿ ಶಿವಣ್ಣ ಹೌಹಾರಿದ.

'ಹಾಗಾದರೆ, ಈ ಎರಡು ತಿಂಗಳು ಪಟ್ಟ ಕಷ್ಟವೆಲ್ಲ ವ್ಯರ್ಥವೇ?'

'ಹಾಗಲ್ಲಪ್ಪ, ಕೇಳು ಹೇಳುತ್ತೇನೆ. ನಾವು ಈಗ ಕೊಡುತ್ತಿರುವ ಚಿಕಿತ್ಸೆಯಿಂದ ನಿನ್ನ ಬಟ್ಟತಲೆಯ ಮೇಲೆ ಕೂದಲು ಬೆಳೆಯುವುದಿಲ್ಲ. ಏಕೆಂದರೆ ಅದು ಬಂಜರು ಭೂಮಿಯಂತಾಗಿದೆ. ಆದರೆ, ನಮ್ಮ ಚಿಕಿತ್ಸೆಯಿಂದ ನಿನ್ನ ಬಟ್ಟತಲೆಯ ಮೇಲಿರುವ ಚರ್ಮ ಸಂಕುಚಿತವಾಗಲು (Shrink) ಪ್ರಾರಂಭವಾಗುತ್ತದೆ. ಹಾಗೆ ಸಂಕುಚಿತವಾದಂತೆ, ಆ ಚರ್ಮ ಸುತ್ತಲಿನ ಕೂದಲಿರುವ ಚರ್ಮವನ್ನು ನೆತ್ತಿಯ ಮೇಲಕ್ಕೆ ಎಳೆಯುತ್ತದೆ. ಹೀಗೆ ನಿನ್ನ ಬಟ್ಟತಲೆ ಸಂಕುಚಿತವಾಗುತ್ತಿದ್ದಂತೆ ಆ ಜಾಗವನ್ನು ಕೂದಲು ಆಕ್ರಮಿಸುತ್ತದೆ. ಚಿಕಿತ್ಸೆ ಪೂರ್ತಿ ಮುಗಿಯುವ ಹೊತ್ತಿಗೆ ನಿನ್ನ ಬಟ್ಟತಲೆ ಸಂಕುಚಿತವಾಗಿ ಒಂದು ಗೆರೆಯಂತಾಗುತ್ತದೆ. ನಿನ್ನ ನೆತ್ತಿಯಮೇಲೆ ಸೊಗಸಾದ ಕೂದಲು ಪಕ್ಕದಿಂದ ಬಂದು ಶೋಭಿಸುತ್ತದೆ'.

ಶಿವಣ್ಣನಿಗೆ ಅರ್ಥವಾಗಲಿಲ್ಲ. ಆದರೆ ಪಂಡಿತರು ತನ್ನ ಚಿಕಿತ್ಸೆಯ ಪ್ರಗತಿಯಿಂದ ತೃಪ್ತಿ ಹೊಂದಿದ್ದಾರೆಂದು ತಿಳಿದು ಸಮಾಧಾನ ಪಟ್ಟುಕೊಂಡ.

ಶಿವಣ್ಣನ ಮೂರು ತಿಂಗಳ ಚಿಕಿತ್ಸೆ ಸಾಂಗವಾಗಿ ಮುಗಿಯಿತು. ಕಡೆಯ ದಿನ ಪಂಡಿತರು ಅವನ ತಲೆಯನ್ನು ಪರೀಕ್ಷಿಸಿ, ಶಿವಣ್ಣನ ಕೈಯನ್ನು ಅವನ ನೆತ್ತಿಯ ಮೇಲಿಟ್ಟರು. ನೆತ್ತಿಯ ಮೇಲೆ ಹುಲುಸಾಗಿ ಬೆಳೆದ ಕೂದಲು ಸವರುತ್ತ, ಶಿವಣ್ಣನು ಆನಂದ ತುಂದಿಲನಾದ. ಇನ್ನೂ ಮೂರುವಾರ ರುಮಾಲು ಹಾಕಿರುವುದೇ ಮೇಲು ಎನ್ನುತ್ತ, ಪಂಡಿತರು ಅವನ ರುಮಾಲನ್ನು ಪುನಃ ಕಟ್ಟಿ ಮನೆಗೆ ಕಳಿಸಿದರು.

ಶಿವಣ್ಣ ಮನೆಯನ್ನು ಸೇರಿದುದೇ ತಡ ತನ್ನ ಹೆಂಡತಿಗೆ ತೋರಿಸಲು ತನ್ನ ರುಮಾಲು ಬಿಚ್ಚಿದ. ಅವಳು ಅವನ ತಲೆಯನ್ನು ನೋಡಿ ಮೊದಲು ಹಿಗ್ಗಿದರೂ, ಕ್ಷಣಮಾತ್ರದಲ್ಲಿ

ಚೀರಿ, ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭ ಮಾಡಿದಳು. ಏಕೆ ಎಂದು ಗೊತ್ತಾಗದೆ ಶಿವಣ್ಣ ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡ. ತನ್ನ ಬಟ್ಟತಲೆಯ ಮೇಲೆ ಈಗ ಬೇಕಾದಷ್ಟು ಕೂದಲು. ಮಧ್ಯೆ ಸಣ್ಣ ಬೈತಲೆಯಂತೆ ಅವನ ಹಿಂದಿನ ಬಟ್ಟತಲೆಯ ಅವಶೇಷ. ನೋಡಲು ಚೆನ್ನಾಗಿಯೇ ಕಾಣುತ್ತಿತ್ತು. ಆದರೆ ಅವನ ಎರಡೂ ಕಿವಿಗಳು ಈಗ ನೆತ್ತಿಯ ಮೇಲೆ ಬಂದು ಕೂತಿದ್ದವು! ಪಂಡಿತರ ಚರ್ಮ ಸಂಕೋಚನ ಚಿಕಿತ್ಸೆ ಅವನ ಕಿವಿಗಳನ್ನು ನೆತ್ತಿಯ ಮೇಲಕ್ಕೆ ಎಳೆದಿತ್ತು!

ಶಿವಣ್ಣ ನಾಗಾಲೋಟದಲ್ಲಿ ಓಡುತ್ತ ಪಂಡಿತರ ಹತ್ತಿರ ಬಂದ. ಅವರಿಗೆ ತನ್ನ ತಲೆ ತೋರಿಸಿದ. ಅತ್ತ. ಪಂಡಿತರು, 'ಇದು ಚಿಕಿತ್ಸೆಯ ಸಹಜವಾದ ಪರಿಣಾಮ. ಬಟ್ಟ ತಲೆಯ ಚರ್ಮ ಸಂಕುಚಿತವಾದಾಗ ಅದು ಕೂದಲಿರುವ ಪಕ್ಕದ ಚರ್ಮವನ್ನು ಮೇಲಕ್ಕೆ ಎಳೆದಂತೆಯೇ ಅದರ ಪಕ್ಕದಲ್ಲಿರುವ ಕಿವಿಯನ್ನೂ ಎಳೆಯಿತು. ಇದು ಸಹಜವಲ್ಲವೇ?' ಎಂದು ಅವನನ್ನೇ ಕೇಳಿದರು. 'ಪಂಡಿತರೇ, ದಯವಿಟ್ಟು ಮೊದಲಿದ್ದಂತೆಯೇ ಮಾಡಲು ಸಾಧ್ಯವೇ?' ಎಂಬ ಕಳಕಳಿಯ ಪ್ರಶ್ನೆಗೆ, 'ಇಲ್ಲ. ಖಂಡಿತ ಸಾಧ್ಯವಿಲ್ಲ. ಯಾವ ಹಾರ್ವರ್ಡಿನ ಪ್ಲಾಸ್ಟಿಕ್ ಸರ್ಜನ್‌ನಿಗೂ ಸಾಧ್ಯವಿಲ್ಲ. ಸುಮ್ಮನೆ ಅದಕ್ಕೆಲ್ಲ ದುಡ್ಡು ಖರ್ಚು ಮಾಡಬೇಡ. ತೊಗೋ, ಇದನ್ನು ಹಾಕಿಕೋ. ಯಾರಿಗೂ ನಿನಗೆ ಕಿವಿ ಇದೆಯೇ? ಇಲ್ಲವೇ? ಅಥವ ಎಲ್ಲಿದೆ? ಎಂದು ಗೊತ್ತಾಗುವುದಿಲ್ಲ' ಎನ್ನುತ್ತ ಒಂದು ದೊಡ್ಡ ಗಾಂಧಿ ಟೋಪಿಯನ್ನು ಅವನ ತಲೆಗೆ ಹಾಕಿದರು.

ಶಿವಣ್ಣ ಅಂದು ಹಾಕಿಕೊಂಡ ಟೋಪಿಯನ್ನು ತೆಗೆಯಲೇ ಇಲ್ಲ. ಈಗ ದೇಶಭಕ್ತನೆಂದು ಹೆಸರುವಾಸಿಯಾಗಿದ್ದಾನೆ. ರಾಜಕೀಯ ಪಾರ್ಟಿಯೊಂದಕ್ಕೆ ನಾಯಕನಾಗಿದ್ದಾನೆ. ರುದ್ರಣ್ಣ ಪಂಡಿತರ ಪ್ರಾವೀಣ್ಯತೆಯನ್ನು ಮೆಚ್ಚಿ ಸರಕಾರ ಅವರಿಗೆ, 'ವೈದ್ಯ ಭಯಂಕರ' ಎಂಬ ಬಿರುದನ್ನು ದಯಪಾಲಿಸಿ, ಸನ್ಮಾನಿಸಿದೆ.

ಆದರೂ ಯಾಕೋ ಏನೋ, ತಂಗಳೂರಿನ ತುಂಬ ಬಟ್ಟತಲೆಯ ಜನ ತುಂಬಿದ್ದರೂ, ಪಂಡಿತರ ಚಿಕಿತ್ಸಾಲಯ ಮಾತ್ರ ಯಾವಾಗಲೂ ಖಾಲಿ!



# ಹಾಸ್ಯ ಲೋಕ

## ವೈ.ಆರ್. ಮೋಹನ್

ನಗು ನಮಗೆ ದೇವರು ಕೊಟ್ಟ ವರ. ನಮ್ಮ ದುಃಖ–ದುಮ್ಮಾನಗಳಿಗೆ ಮದ್ದು ನಗೆ. ನಗುವಿಲ್ಲದ ಲೋಕವನ್ನು ಊಹಿಸಲೂ ಸಾಧ್ಯವಿಲ್ಲ. ಸಮಸ್ಯೆಗಳು ಎದುರಾದಾಗ ಅವುಗಳನ್ನು ನಗುನಗುತ್ತಾ ಪರಿಹರಿಸಲು ಪ್ರಯತ್ನಿಸುವುದು ಜಾಣತನ. ಬವಣೆ ತುಂಬಿದ ಬದುಕಿಗೆ ಹಾಸ್ಯಪ್ರಜ್ಞೆಯೇ ಊರುಗೋಲು. ಜೀವನ ಒಂದು ಕಲೆ. ಜೀವನದಲ್ಲಿ ಬೆಲ್ಲ–ಸಕ್ಕರೆಯಾಗಿ, ನಾವು ನಕ್ಕು ನಲಿದು, ಇತರರನ್ನೂ ನಗಿಸಿ, ನಲಿಸಿ ಬದುಕುವುದನ್ನು ಕಲಿಯುವುದಲ್ಲವೆ ಸಾರ್ಥಕ ಬದುಕು?

ನಿತ್ಯ ಜೀವನದಲ್ಲಿ ನಗೆಹನಿಗಳನ್ನು ಸಿಂಚಿಸುವ ಸನ್ನಿವೇಶಗಳು ಅನೇಕ. ಅವನ್ನು ಮತ್ತೆ ಮೆಲಕು ಹಾಕುತ್ತ ಅಸ್ವಾದಿಸುವ ಪ್ರಯತ್ನ ಈ ಲೇಖನ.

**

ಮಧ್ಯಾಹ್ನ ಉಪಹಾರ ಮಾಡಲು ಲಂಚ್ ಡಬ್ಬಿಯ ಮುಚ್ಚಳ ತೆಗೆದ ರಾಮು ಗಾಬರಿಯಿಂದ 'ಅಯ್ಯೋ, ದೇವ್ರೆ!' ಎಂದ. 'ಯಾಕೋ, ಏನಾಯ್ತು?' ಎಂದು ಪಕ್ಕದಲ್ಲಿದ್ದ ಸಹೋದ್ಯೋಗಿ ಕೇಳಿದ. 'ಲಂಚಿಗೆ ಉಪ್ಪಿನಕಾಯಿ ಕಳ್ಸು ಅಂತ ನನ್ನ ಹೆಂಡ್ತೀಗೆ ಹೇಳಿದ್ದೆ. ಬರೀ ಉಪ್ಪಿನಕಾಯೇ ತುಂಬಿಸಿ ಕಳ್ಸಿದ್ದಾಳೆ ಕಣೋ!' ಎಂದು ಮುಖ ಸಪ್ಪಗೆ ಮಾಡಿಕೊಂಡ!

*

ಗೋಪಾಲ್ ತಮ್ಮ ಮದುವೆಯ ಹತ್ತನೆಯ ವಾರ್ಷಿಕೋತ್ಸವಕ್ಕೆ ತನ್ನ ಹೆಂಡತಿಗೆ ಒಂದು ಸೆಲ್ ಫೋನ್ ಉಡುಗೊರೆಯಾಗಿ ಕೊಟ್ಟ. ಅವಳು ಆನಂದದಿಂದ ಆ ಫೋನ್

ಉಪಯೋಗಿಸುವುದು ಹೇಗೆ ಎಂದು ಗಂಡನನ್ನು ಕೇಳಿ ತಿಳಿದುಕೊಂಡಳು. ಮಾರನೆಯ ದಿನ ಅವಳು ಚಿಕ್ಕಪೇಟೆಯ ಅಂಗಡಿಗೆ ಸೀರೆ ಕೊಳ್ಳಲು ತನ್ನ ಗೆಳತಿಯೊಂದಿಗೆ ಹೋದಳು. ಅವಳು 'ಸ್ಯಾರಿ ಪ್ಯಾಲೆಸ್'ನಲ್ಲಿರುವಾಗ ಅವಳ ಕೈಚೀಲದಲ್ಲಿದ್ದ ಸೆಲ್ ಫ಼ೋನ್ ಧ್ವನಿ ಹೊರಡಿಸಿತು. ಅವಳು ಫ಼ೋನ್ ಕೈಗೆತ್ತಿಕೊಂಡು 'ಹಲೋ' ಎಂದಳು. ಆ ಕಡೆಯಿಂದ ಅವಳ ಗಂಡ ಉತ್ಸಾಹದಿಂದ 'ನಿನ್ನ ಹೊಸ ಫ಼ೋನ್ ಹೇಗಿದೆ?' ಎಂದು ಕೇಳಿದ. ಅವಳು ಉಕ್ಕಿ ಬಂದ ಪ್ರೀತಿಯಿಂದ 'ನೀವು ಕೊಟ್ಟ ಫ಼ೋನ್ ನನಗೆ ಬಹಳ ಇಷ್ಟವಾಗಿದೆ. ನೀವು ಮಾತಾಡಿದ್ದು ಎಷ್ಟು ಚೆನ್ನಾಗಿ ಕೇಳ್ಸುತ್ತೆ ಅಂದ್ರೆ ನೀವು ಇಲ್ಲೇ ನನ್ನ ಪಕ್ಕ ಇದ್ದ ಹಂಗೇ ಅನ್ಸುತ್ತೆ. ಆದ್ರೆ ಒಂದು ಸಂಗ್ತಿ ನನಗೆ ಅರ್ಥ ಆಗ್ಲಿಲ್ಲ'. ಗಂಡ ಕೇಳಿದ: 'ಯಾವ ಸಂಗ್ತಿ?' 'ನಾನು ಸೀರೆ ಅಂಗ್ಡೀಲಿರೋದು ನಿಮಗೆ ಹೆಂಗೊತ್ತಾಯ್ತು ಅಂತ!'

*

ನಾಣಿಗೆ 'ಆಗಿದ್ದೆಲ್ಲಾ ಒಳ್ಳೆಯದಕ್ಕೇ ಆಯ್ತು ಬಿಡು' ಅಂತ ಹೇಳುವ ಒಂದು ದುರಭ್ಯಾಸ ಅಂಟಿಕೊಂಡಿತ್ತು. ಸಂಗತಿ ಎಷ್ಟೇ ದುಃಖಪೂರಿತವಾಗಿರಲಿ, ದುರಂತವಾಗಿರಲಿ 'ಆಗಿದ್ದೆಲ್ಲಾ ಒಳ್ಳೆಯದಕ್ಕೇ ಆಯ್ತು ಬಿಡು' ಎಂದು ಹೇಳಿ ಸಂಗತಿಯನ್ನು ನಿವಾರಿಸಿಬಿಡುತ್ತಿದ್ದ. ಅವನು ಹೀಗೆ ಹೇಳುವುದನ್ನು ಬಿಡಿಸಬೇಕೆಂದು ಅವನ ಸ್ನೇಹಿತರು ಕಲ್ಲು ಮನಸ್ಸು ಕರಗಿ ನೀರಾಗುವಂತಹ ಕರುಣಾಜನಕ ಸುದ್ದಿಯೊಂದನ್ನು ಸೃಷ್ಟಿಮಾಡಿದರು. ಮಾರನೆಯ ದಿನ ಕ್ಲಬ್ಬಿನಲ್ಲಿ ಅವರು ನಾಣಿಯನ್ನು ಕಂಡಾಗ ಕಿಟ್ಟಿ 'ಲೋ ನಾಣಿ, ಕೇಳಿದ್ಯೇನೋ ನಮ್ಮ ಗುಂಡನ ಸುದ್ದೀನ? ಗುಂಡ ನಿನ್ನೆ ರಾತ್ರೆ ಮನೆಗೆ ಬಂದಾಗ ಅವನ ಹೆಂಡತಿ ಯಾರೋ ಗಂಡಸಿನ ಜೊತೆ ಮಲಗಿದ್ದು ಕಂಡು ಕೋಪದಿಂದ ಕೆಂಡಕಾರುತ್ತಾ ಅವರಿಬ್ಬರನ್ನೂ ಗುಂಡಿಕ್ಕಿ ಕೊಂದು ಅನಂತರ ಅದೇ ಪಿಸ್ತೂಲಿನಿಂದ ತನಗೆ ಗುಂಡು ಹಾರಿಸಿಕೊಂಡು ಸತ್ತನಂತೆ!' ಎಂದು ಗಂಭೀರ ಧ್ವನಿಯಲ್ಲಿ ಹೇಳಿದ. ನಾಣಿ ಅನುಕಂಪ ತೋರಿಸುತ್ತ 'ಛೇ ಪಾಪ ಎಂಥಾ ಅನ್ಯಾಯವಾಯ್ತು' ಎಂದು ನಿಟ್ಟುಸಿರು ಬಿಟ್ಟು ಸುಮ್ಮನಾದ. ಸ್ವಲ್ಪ ಸಮಯದ ನಂತರ ನಾಣಿ 'ಹೋಗಲಿ ಬಿಡಿ, ಆಗಿದ್ದೆಲ್ಲಾ ಒಳ್ಳೆಯದಕ್ಕೇ ಆಯಿತು!' ಎಂದ. ಆಶ್ಚರ್ಯಚಕಿತರಾದ ಸ್ನೇಹಿತರು 'ಅದು ಹೇಗಯ್ಯಾ ಒಳ್ಳೆಯದು?' ಎಂದು ಕೇಳಿದರು. ಅದಕ್ಕೆ ನಾಣಿ 'ನಿನ್ನೆ ರಾತ್ರಿ ಅಲ್ಲದೆ ಮೊನ್ನೆ ರಾತ್ರಿ ಆಗಿದ್ದರೆ ನಾನು ಉಳೀತಿರ್ಲಿಲ್ಲ!' ಎಂದ.

**

ನಮ್ಮ ರಾಜಕೀಯ ಜೀವನವನ್ನು ಅವಲೋಕಿಸಿದರೆ ಅನೇಕ ಹಾಸ್ಯ ಪ್ರಸಂಗಗಳು ಕಾಣಸಿಗುತ್ತವೆ. ಅಂಥ ಕೆಲವನ್ನು ನೋಡೋಣ.

ಬೆಂಗಳೂರಿನಿಂದ ಬೊಂಬಾಯಿಗೆ ಹೋಗುವ ವಿಮಾನ ಸಿದ್ಧವಾಗಿ ನಿಂತಿತ್ತು. ಚೆನ್ನಾಗಿ ಅಲಂಕಾರ ಮಾಡಿಕೊಂಡು ಗತ್ತಿನಿಂದ ಬಂದ ಹೆಂಗಸೊಬ್ಬಳು ಫಸ್ಟ್ ಕ್ಲಾಸ್‌ನಲ್ಲಿ ಕುಳಿತುಕೊಂಡಾಗ ಫ್ಲೈಟ್ ಅಟೆಂಡೆಂಟ್ ಅವಳ ಬಳಿ ಬಂದು 'ಕ್ಷಮಿಸಿ, ದಯವಿಟ್ಟು ನಿಮ್ಮ ಟಿಕೆಟ್ ತೋರಿಸಿ' ಎಂದಳು. ಆ ಹೆಂಗಸು ತೋರಿಸಿದ ಟಿಕೆಟ್ ಪರೀಕ್ಷಿಸಿದ ಅವಳು 'ಇದು ಕೋಚ್ ಟಿಕೇಟ್ ಆದುದರಿಂದ ನೀವು ಇಲ್ಲಿ ಕೂರುವ ಹಾಗಿಲ್ಲ, ನೀವು ಕೋಚ್ ವಿಭಾಗಕ್ಕೆ ಹೋಗಿ ಕುಳಿತುಕೊಳ್ಳಿ' ಎಂದಳು. ಅದಕ್ಕೆ ಆ ಹೆಂಗಸು ಗರ್ವದಿಂದ: 'ನನ್ನನ್ನು ಯಾರಂತ ತಿಳಿದಿದ್ದೀಯ? ನಾನು ಹೊಸದಾಗಿ ಚುನಾಯಿತಳಾಗಿರುವ ಎಂ.ಎಲ್.ಎ. ಗೊತ್ತಾಯ್ತಾ? ಮುಖ್ಯವಾದ ಮೀಟಿಂಗಿಗಾಗಿ ಮುಂಬೈಗೆ ಹೋಗ್ತಿದ್ದೀನಿ. ನಾನು ಎಂ.ಎಲ್.ಎ. ಆಗಿರೋದ್ರಿಂದ ಫಸ್ಟ್ ಕ್ಲಾಸ್‌ನಲ್ಲೇ ಪ್ರಯಾಣ ಮಾಡೋದು!' ಎಂದು ವಾದಿಸಿದಳು. ವಿಧಿಯಿಲ್ಲದೆ ಫ್ಲೈಟ್ ಅಟೆಂಡೆಂಟ್ ಹೋಗಿ ಸೂಪರ್‌ವೈಸರನ್ನು ಕರೆತಂದಳು. ಅವನು ಆಕೆಗೆ: 'ನೋಡಿ ನೀವು ಕೊಂಡಿರೋದು ಫಸ್ಟ್ ಕ್ಲಾಸ್ ಟಿಕೆಟ್ ಅಲ್ಲ. ದಯವಿಟ್ಟು ಕೋಚ್ ಸೀಟಿಗೆ ಹೋಗಿ, ವಿಮಾನ ಹೊರಡಲು ತಡವಾಗ್ತಿದೆ' ಎಂದು ವಿನಯಪೂರ್ವಕವಾಗಿ ಹೇಳಿದ. ಅವಳು 'ನಾನು ಎಂ.ಎಲ್.ಎ., ಫಸ್ಟ್ ಕ್ಲಾಸಿನಲ್ಲೇ ಹೋಗೋದು' ಎಂದು ಜಂಬದಿಂದ ಹೇಳಿದಳು. ಸೂಪರ್‌ವೈಸರ್ ವಿಧಿಯಿಲ್ಲದೆ ಹೋಗಿ ಕ್ಯಾಪ್ಟನನ್ನು ಕರೆತಂದ. ಕ್ಯಾಪ್ಟನ್ ಆ ಹೆಂಗಸಿನ ಹತ್ತಿರ ಹೋಗಿ ಅವಳ ಕಿವಿಯಲ್ಲಿ ಏನೋ ಪಿಸುಗುಟ್ಟಿದ. ಕೂಡಲೆ ಆ ಹೆಂಗಸು ಅಲ್ಲಿಂದ ಎದ್ದು ಹೋಗಿ ಕೋಚ್ ವಿಭಾಗದಲ್ಲಿ ಕುಳಿತುಕೊಂಡಳು! ಫ್ಲೈಟ್ ಅಟೆಂಡೆಂಟ್, ಸೂಪರ್‌ವೈಸರ್ ಎಲ್ಲರಿಗೂ ಆಶ್ಚರ್ಯವೋ ಆಶ್ಚರ್ಯ! ಅವರು ಪಿಸುಮಾತಿನಲ್ಲಿ ಕ್ಯಾಪ್ಟನ್ ಕುರಿತು 'ಆ ಹೆಂಗಸಿಗೆ ನೀನು ಪಿಸುಗುಟ್ಟಿದ್ದೇನು?' ಎಂದು ಕುತೂಹಲದಿಂದ ಕೇಳಿದರು. ಕ್ಯಾಪ್ಟನ್ ನಗುತ್ತಾ 'ಫಸ್ಟ್ ಕ್ಲಾಸ್ ಬೊಂಬಾಯಿಗೆ ಹೋಗೋದಿಲ್ಲ ಅಂತ ಹೇಳ್ದೆ!' ಎಂದ.

*

ಪ್ರೈಮರಿ ಸ್ಕೂಲು ಮೇಷ್ಟರೊಬ್ಬರು ಬೆಂಗಳೂರಿನ ಸೆಲೂನೊಂದರಲ್ಲಿ ಕ್ಷೌರ ಮಾಡಿಸಿಕೊಂಡು ಎಷ್ಟು ಹಣ ಕೊಡಬೇಕೆಂದು ಕೇಳಿದರು. ಅವರು ಶಾಲಾಮಾಸ್ತರೆಂದು ತಿಳಿದು ಆ ಕ್ಷೌರಿಕ 'ಸರ್, ನಿಮ್ಮಿಂದ ಹಣ ತೆಗೆದುಕೊಳ್ಳಲು ನನಗೆ ಮನಸ್ಸಿಲ್ಲ. ನಿಮಗೆ ನಾನು ಮಾಡಿದ ಸೇವೆ ಸರಸ್ವತಿ ಸೇವೆ ಎಂದುಕೊಳ್ಳುತ್ತೇನೆ' ಎಂದು ನಮಸ್ಕರಿಸಿ ಅವರನ್ನು ಕಳುಹಿಸಿದ. ಮಾರನೆಯ ದಿನ ಕ್ಷೌರಿಕ ಅಂಗಡಿ ಬಾಗಿಲು ತೆಗೆಯಲು ಬಂದಾಗ ಬಾಗಿಲ ಮುಂದೆ ಮಕ್ಕಳಿಗೆ ಬೇಕಾದ ಮಗ್ಗಿ ಪುಸ್ತಕಗಳು, ಕೆಲವು ಚಿಕ್ಕ ಕತೆ ಪುಸ್ತಕಗಳನ್ನೆಲ್ಲ ಮೇಷ್ಟ್ರು ತಂದಿಟ್ಟು ಹೋಗಿದ್ದರು. ಕೆಲವು ದಿನಗಳ ನಂತರ ಪಕ್ಕದ ರಸ್ತೆಯಲ್ಲಿ ಕ್ಲಿನಿಕ್

ನಡೆಸುತ್ತಿದ್ದ ಡಾಕ್ಟರ್ ಕ್ಷೌರ ಮಾಡಿಸಿಕೊಳ್ಳಲು ಬಂದರು. ಕ್ಷೌರ ಮಾಡಿಸಿಕೊಂಡ ಮೇಲೆ 'ಹಣ ಎಷ್ಟಾಯಿತು?' ಎಂದು ಕೇಳಿದರು. ಕ್ಷೌರಿಕ: 'ಡಾಕ್ಟ್ರೆ, ನೀವು ಎಷ್ಟೋ ಬಡವರಿಗೆ ಸಹಾಯ ಮಾಡಿದ್ದೀರಿ. ನಿಮ್ಮಿಂದ ನಾನು ಹಣ ತೊಗೊಳ್ಳೋದಿಲ್ಲ' ಎಂದು ನಮಸ್ಕರಿಸಿ ಅವರನ್ನು ಕಳುಹಿಸಿದ. ಮಾರನೆಯ ದಿನ ಅಂಗಡಿ ಬಾಗಿಲು ತೆಗೆಯಲು ಬಂದಾಗ ಬಾಗಿಲ ಮುಂದೆ ದಿನ ನಿತ್ಯದ ಉಪಯೋಗಕ್ಕೆ ಬರುವ ಕೆಲವು ಔಷಧಗಳು, ಮಾತ್ರೆಗಳು ಮುಂತಾದುವನ್ನು ಡಾಕ್ಟರ್ ತಂದಿಟ್ಟು ಹೋಗಿದ್ದರು.

ಇದಾದ ಕೆಲವು ದಿನಗಳ ಮೇಲೆ ಎಂ.ಎಲ್.ಎ. ಒಬ್ಬರು ಕ್ಷೌರ ಮಾಡಿಸಿಕೊಳ್ಳಲು ಬಂದರು. ಕ್ಷೌರ ಮುಗಿದ ಮೇಲೆ ಹಣ ಎಷ್ಟೆಂದು ಕೇಳಿದರು. ಕ್ಷೌರಿಕ: 'ನೀವು ದೇಶಸೇವೆ ಮಾಡುವವರು. ನಿಮ್ಮಿಂದ ಹಣ ತೆಗೆದುಕೊಳ್ಳೋದಿಲ್ಲ. ನಿಮಗೆ ಮಾಡಿರುವ ಸೇವೆ ದೇಶಸೇವೆ ಎಂದು ಭಾವಿಸುತ್ತೇನೆ' ಎಂದು ನಮಸ್ಕರಿಸಿ ಅವರನ್ನು ಕಳುಹಿಸಿದ. ಮಾರನೆಯ ದಿನ ಅವನು ಅಂಗಡಿ ಬಾಗಿಲು ತೆಗೆಯಲು ಬಂದಾಗ ಹತ್ತು ಎಂ.ಎಲ್.ಎ.ಗಳು ಅವನಿಗಾಗಿ ಕಾದು ಕುಳಿತಿದ್ದರು!

*

ರಾಜಕಾರಣಿಗಳು ಮತ್ತು ಪುಡಾರಿಗಳು ಪ್ರಯಾಣಿಸುತ್ತಿದ್ದ ಮಾರುತಿ ವ್ಯಾನ್ ರಿಪೇರಿಯಿಲ್ಲದ ರಸ್ತೆಯ ಗುಂಡಿಗೆ ಹಾರಿ ಪಲ್ಟಿ ಹೊಡೆದು ಪಕ್ಕದ ಹೊಲದೊಳಕ್ಕೆ ಉರುಳಿಬಿತ್ತು. ವ್ಯಾನ್ ಜಜ್ಜಿ ಹೋಗಿ ಒಳಗಿದ್ದವರೆಲ್ಲ ವಿಪರೀತ ಗಾಯಗೊಂಡು ರಕ್ತ ಸುರಿಸುತ್ತ ಮೂರ್ಛೆಹೋಗಿ ಸತ್ತವರಂತೆ ಬಿದ್ದಿದ್ದರು. ಹೊಲದಲ್ಲಿ ಕೆಲಸ ಮಾಡುತ್ತಿದ್ದ ರೈತರು ಓಡಿಬಂದು ಗಾಯಗೊಂಡವರನ್ನೆಲ್ಲ ವ್ಯಾನಿನಿಂದ ಹೊರಗೆಳೆದು ಹುಲ್ಲಿನ ಮೇಲೆ ಮಲಗಿಸಿದರು. ಕೆಲವರು ಹೋಗಿ ಊರ ಪಟೇಲರನ್ನು ಕರೆತಂದರು. ಪಟೇಲರು ಪರಿಸ್ಥಿತಿಯನ್ನೆಲ್ಲ ಪರಿಶೀಲಿಸಿ ಅನಂತರ ಒಂದು ದೊಡ್ಡ ಗುಂಡಿ ತೋಡಿಸಿ ಸತ್ತಂತೆ ಬಿದ್ದಿದ್ದವರನ್ನೆಲ್ಲ ಹೂಳಿಸಿದರು. ಸಾಯಂಕಾಲ ಕತ್ತಲಾಗುವ ಹೊತ್ತಿಗೆ ಪೊಲೀಸ್ ಅಧಿಕಾರಿಗಳು ತನಿಖೆ ಮಾಡಲು ಬಂದರು. ಪೊಲೀಸರು ರೈತರನ್ನೆಲ್ಲ ಕರೆಸಿದರು. ರೈತರು ತಮ್ಮ ಪಟೇಲರನ್ನು ಮುಂದಿಟ್ಟುಕೊಂಡು ಬಂದು ನಿಂತರು. ಪೊಲೀಸ್ ಅಧಿಕಾರಿ, 'ಏನ್ರೀ, ಪಟೇಲ್ರೆ, ಅವಸರದಲ್ಲಿ ಹೆಣಗಳ್ನೆಲ್ಲ ಹೂಳಿಸಿಬಿಟ್ಟಿದ್ದೀರಲ್ಲ ಏಕೆ? ನಾವು ಬರೋ ತನಕ ಕಾಯೋಕೇನಾಗಿತ್ತು?' ಎಂದು ಘರ್ಜಿಸಿದ. ಪಟೇಲ ನಮ್ರಭಾವದಿಂದ 'ಬುದ್ದೀ, ಈ ಸುತ್ತ ಮುತ್ತ ನರಿ, ಹಂದಿಗಳ ಹಾವಳಿ ಹೆಚ್ಚು. ಅದಕ್ಕೆ ಹೆಣಗಳನ್ನ ಬೇಗ ಹೂಳಿಸಿಬಿಟ್ಟೆ' ಎಂದು ವಿನಂತಿಸಿದ. ಪೊಲೀಸ್ ಅಧಿಕಾರಿ 'ಹೂಳೋಕ್ಮುಂಚೆ ಎಲ್ಲರೂ ಸತ್ತಿದ್ದರು ಅಂತ ಖಾತ್ರಿ ಮಾಡ್ಕೊಂಡಿದ್ರಿ ತಾನೆ?' ಎಂದು ಕೇಳಿದ. ಪಟೇಲ 'ಕೆಲವು ಪುಡಾರಿಗಳು 'ನಾವ್ ಸತ್ತಿಲ್ಲ, ನಾವ್ ಸತ್ತಿಲ್ಲ ಅಂದ್ರು; ಪುಡಾರಿಗಳ

ಮಾತು ನಂಬಕ್ಕಾಯ್ತದಾ ಬುದ್ಧಿ!' ಎಂದು ಪೋಲೀಸ್ ಅಧಿಕಾರಿಯ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದ.

**

ಶಾಲಾಕಾಲೇಜುಗಳಲ್ಲಿ ಹಾಸ್ಯಪ್ರಸಂಗಗಳು ನಿತ್ಯವೂ ನಡೆಯುತ್ತಲೇ ಇರುತ್ತವೆ, ಅವಕ್ಕೆ ಮಿತಿಯಿಲ್ಲ. ಅಂಥ ಒಂದೆರಡು ಇಲ್ಲಿವೆ:

*

ಕನ್ನಡ ತರಗತಿಯಲ್ಲಿ ನಾ. ಕಸ್ತೂರಿಯವರ 'ಚೆಂಗೂಲಿ ಚೆಲುವ' ಕಾದಂಬರಿ ಚರ್ಚೆ ನಡೆಯುತ್ತಿತ್ತು. ಚೆಂಗೂಲಿ ಚೆಲುವ ಹಳ್ಳಿಯಿಂದ ಬೊಂಬಾಯಿಗೆ ಕೆಲಸ ಹುಡುಕಿಕೊಂಡು ಹೊರಟಿದ್ದ ಸಮಯದಲ್ಲಿ ತನ್ನ ತಾಯಿಗೆ ನಮಸ್ಕರಿಸಿದಾಗ ಅವಳು ಆಶೀರ್ವದಿಸುತ್ತಾ 'ದೊಡ್ ಪಟ್ಣಕ್ಕೋಗ್ತಿದೀಯ ಮಗಾ, ಉಸಾರಾಗಿ ನೋಡ್ಕೋ, ಕೈಯಿ, ಬಾಯಿ, ಕಚ್ಚೆ ಸುದ್ದವಾಗಿಟ್ಕೋ ಮಗ!' ಎನ್ನುತ್ತಾಳೆ. ಆಗ ಮುಂದಿನ ಬೆಂಚಿನಲ್ಲಿ ಕುಳಿತಿದ್ದ ಕಿಲಾಡಿ ಹುಡುಗ ಎದ್ದುನಿಂತು 'ಕಚ್ಚೆ ಅಂದ್ರೆ ಎನು ಸಾರ್?' ಎಂದು ಕೇಳಿದ. ಅದಕ್ಕೆ ಪ್ರಾಧ್ಯಾಪಕರು 'ಅದನ್ನೆಲ್ಲ ಇಲ್ಲಿ ಬಿಚ್ಚಬಾರ್ದು ಕೂತ್ಕೊ!' ಎಂದು ಹೇಳಿ ಹುಡುಗನ ಬಾಯಿ ಮುಚ್ಚಿಸಿದರು!

*

ಕಾಲೇಜು ಮುಗಿಸಿದ ಅನುಪಮ ಕೆಲಸಕ್ಕೆ ಅರ್ಜಿ ಹಾಕಿದ್ದಳು. ಸಂದರ್ಶನಕ್ಕೆ ಕರೆ ಬಂತು. ಸಂದರ್ಶನದಲ್ಲಿ ಕಂಪೆನಿ ಚೇರ್ಮನ್ ಅನುಪಮಳನ್ನು ಕುರಿತು 'ನಿಮ್ಮ ಜೀವಮಾನದ ಮೇಲೆ ಅತ್ಯಂತ ಪ್ರಭಾವ ಬೀರಿದ ಪುಸ್ತಕಗಳು ಯಾವುವು?' ಎಂದು ಕೇಳಿದರು. ಅದಕ್ಕೆ ಅವಳು 'ಬಹಳ ಪ್ರಭಾವ ಬೀರಿದ ಪುಸ್ತಕಗಳೆಂದರೆ ನಮ್ಮ ತಾಯಿಯ ಅಡುಗೆ ಪುಸ್ತಕ ಮತ್ತು ನಮ್ಮ ತಂದೆಯ ಚೆಕ್ ಪುಸ್ತಕ!' ಎಂದಳು.

**

ರೋಗಿಗಳು–ವೈದ್ಯರ ನಡುವೆ ನಡೆಯುವ ಹಾಸ್ಯಪ್ರಸಂಗಗಳು ಅನೇಕ. ಕೆಲವನ್ನು ನೋಡಿ:

*

ಗುಂಡ ತನ್ನ ಹದ್ದುಮೀರಿ ಬೆಳೆಯುತ್ತಿದ್ದ ಬೊಜ್ಜು ಕರಗಿಸಲು ನಿರ್ಧರಿಸಿ ಸಲಹೆ ಕೇಳಲು ಡಾಕ್ಟರಲ್ಲಿಗೆ ಹೋದ. ಅವನನ್ನು ಪರೀಕ್ಷಿಸಿದ ಡಾಕ್ಟರು 'ನೀನು ಪ್ರತಿದಿನ

ಐದು ಮೈಲಿಯಂತೆ ಮುನ್ನೂರು ದಿನಗಳು ಓಡಿದರೆ ಎಪ್ಪತ್ತೈದು ಪೌಂಡು ತೂಕ ಕರಗಿಸಬಹುದು' ಎಂದರು. ಗುಂಡ 'ನೀವು ಹೇಳಿದಂತೆ ಮಾಡುತ್ತೇನೆ ಮುನ್ನೂರು ದಿನಗಳಾದ ಮೇಲೆ ನಿಮ್ಮನ್ನು ಕರೆದು ಪರಿಣಾಮ ತಿಳಿಸುತ್ತೇನೆ' ಎಂದು ಹೇಳಿ ಹೋದ. ಮಾತುಕೊಟ್ಟಂತೆ ಮುನ್ನೂರು ದಿನಗಳಾದ ಮೇಲೆ ಗುಂಡ ಡಾಕ್ಟರಿಗೆ ಟೆಲಿಫೋನ್ ಮಾಡಿ 'ಎಪ್ಪತ್ತೈದು ಪೌಂಡು ತೂಕ ಕಳೆದುಕೊಂಡಿದ್ದೇನೆ' ಎಂದು ಹೇಳಿ 'ಆದರೆ..' ಎಂದ. 'ಆದರೆ ಏನು?' ಎಂದು ಡಾಕ್ಟರ್ ಕೇಳೀದಾಗ ಗುಂಡ 'ಆದರೆ ಈಗ ನಾನು ಮನೆಯಿಂದ ಸಾವಿರದ ಐನೂರು ಮೈಲಿ ದೂರದಲ್ಲಿದ್ದೇನೆ!' ಎಂದ.

*

ರಂಗಣ್ಣ ತಮ್ಮ ಮನೆ ಡಾಕ್ಟರನ್ನು ಹೊಗಳುತ್ತ 'ಡಾಕ್ಟ್ರೆ, ನೀವು ಕೊಡೋಹಾಗೆ ಬೇರೆ ಯಾರೂ ಔಷಧಿ ಕೊಡೋಲ್ಲ' ಎಂದು ಹೇಳಿ ಹೂವು, ಹಣ್ಣು, ಸಿಹಿತಿಂಡಿ ಕೊಟ್ಟು ನಮಸ್ಕರಿಸಿದ. ತನ್ನ ಸಮಾನರು ಯಾರೂ ಇಲ್ಲ ಎಂದು ಜಂಬ ಕೊಚ್ಚಿಕೊಳ್ಳುತ್ತಿದ್ದ ಡಾಕ್ಟರು ಮತ್ತಷ್ಟು ಜಂಬದಿಂದ ತಮ್ಮ ಸುತ್ತಲಿನ ರೋಗಿಗಳತ್ತ ನೋಡುತ್ತ ಹೆಮ್ಮೆಯಿಂದ ಕೇಳಿದರು: 'ರಂಗಣ್ಣ, ನನ್ನ ಔಷಧಿಯಿಂದ ನಿಮ್ಮ ಮಾವನವರಿಗೆ ವಾಸಿ ಆಯ್ತಾ?' ಅದಕ್ಕೆ ರಂಗಣ್ಣ 'ಬರಿ ವಾಸೀನಾ ಸ್ವಾಮಿ? ಕೈಲಾಸವಾಸಿ! ಅವರ ಆಸ್ತಿ ಎಲ್ಲ ನನ್ನ ಹೆಂಡತೀಗೆ ಬಂತು! ಎಲ್ಲ ನಿಮ್ಮ ಕೈಗುಣ!' ಎಂದು ಮತ್ತೊಮ್ಮೆ ಕೈಮುಗಿದ!

**

ನಿತ್ಯಜೀವನದ ವ್ಯವಹಾರಗಳಲ್ಲಿ ಹಾಸ್ಯ ಹಾಸುಹೊಕ್ಕಾಗಿರುತ್ತದೆ. ಹಾಸ್ಯಕ್ಕೆ ಇಂಥದೇ ಸನ್ನಿವೇಶ ಇರಬೇಕೆಂದಿಲ್ಲ. ಇಲ್ಲಿ ನೋಡಿ.

*

ಬೆಣ್ಣೆ ಅಂಗಡಿಯವನು ಆಫೀಸರನ್ನು ಕೇಳಿದ: 'ಏನು ಸಾರ್, ಅರ್ಧ ಕೆ.ಜಿ. ಸಾಕೆ? ವಾರಕ್ಕೆ ಒಂಬತ್ ಕೆ.ಜಿ. ಬೆಣ್ಣೆ ತೊಗೋತಿದ್ರಿ! ಏನು ರೆವಿನ್ಯೂ ಇಲಾಖೆಯಿಂದ ವರ್ಗ ಆಯ್ತೆ ಸಾರ್?'

*

ಆಫೀಸಿನಿಂದ ಆಗತಾನೆ ಬಂದ ಗಂಡನಿಗೆ ಹೆಂಡತಿ ಹೇಳಿದಳು: ಹೊಸ ಅಡುಗೆ ಪುಸ್ತಕ ನೋಡಿ ಈ ತಿಂಡಿ ಮಾಡಿದ್ದೀನಿ, ತಿಂದು ನೋಡಿ'. ಗಂಡ ತಟ್ಟೆ ತೆಗೆದುಕೊಂಡು 'ನಾನು ನೋಡಿರೋ ಯಾವ ತಿಂಡಿ ಥರ ಇಲ್ವಲ್ಲೇ ಇದು! ಎಲ್ಲಿ ಆ ಅಡುಗೆ ಪುಸ್ತಕ

ತೊಗೊಂಡ್ಬಾ' ಎಂದ. ಆವಳು 'ಅಡುಗೆ ಪುಸ್ತಕ ಯಾಕೆ?' ಎಂದಳು. ಗಂಡ: 'ಇದನ್ನು ತಿನ್ನೋ ವಿಧಾನಾನೂ ಬರೆದಿದ್ದಾರೋ ನೋಡೋಣಾ ಅಂತ!'

**

ಬಸ್ಸನ್ನು ಬಲಾತ್ಕಾರವಾಗಿ ನಿಲ್ಲಿಸಿ ಬಸ್ಸಿನೊಳಗೆ ನುಗ್ಗಿ ದರೋಡೆ ಮಾಡುತ್ತಿದ್ದವನಿಗೆ ಪ್ರಯಾಣಿಕನೊಬ್ಬ ಕೇಳಿದ: 'ಎರಡೂ ಕೈ ಮೇಲಕ್ಕೆತ್ತು ಅಂತೀಯ, ಪುನಃ ದುಡ್ಡು ತೆಗಿ ಅಂತೀಯ. ಹೇಗಯ್ಯಾ ತೆಗೀಲಿ?'

**

ಜೈಲಿನಲ್ಲಿ ಇಬ್ಬರು ಖೈದಿಗಳ ನಡುವೆ ಮಾತುಕತೆ ನಡೆದಿತ್ತು:

ಖೈದಿ ನಂ. ೧: 'ಏನಣ್ಣ, ನಿನ್ನ ಜೈಲಿಗೆ ಹಾಕಿದ್ದು ಯಾಕೆ?'

ಖೈದಿ ನಂ. ೨: 'ಸರ್ಕಾರಕ್ಕೆ ಹೊಟ್ಟೆಕಿಚ್ಚು ನನ್ಮೇಲೆ, ಅದಕ್ಕೇ!'

ಖೈದಿ ನಂ. ೧: 'ಹೊಟ್ಟೆಕಿಚ್ಚು ಯಾಕಣ್ಣ?'

ಖೈದಿ ನಂ. ೨: 'ಸರ್ಕಾರ ಪ್ರಿಂಟ್ ಮಾಡೋಕಿಂತ ಚೆನ್ನಾಗಿ ನೋಟ್‌ಗಳ್ನ ಪ್ರಿಂಟ್ ಮಾಡ್ತಿದ್ದೆ ಅದಕ್ಕೆ!'

**

ಆನೆ ಹಿಂಡಿನ ಹಾವಳಿ ತಡೆಯಲಾರದ ರೈತನೊಬ್ಬ ಹೇಳಿದ್ದು: 'ಆನೆ ಹಿಂಡು ಬೆಳೇನೆಲ್ಲ ಹಾಳ್ಮಾಡ್ತಿದ್ವು. ಅದಕ್ಕೇ ಈಗ ವೀರಪ್ಪನ್ ಬೆಚ್ಚು ಮಾಡಿ ನಿಲ್ಸೀವಿ!'



# ಸಮಸ್ಯೆ

ಎಚ್.ವೈ.ರಾಜಗೋಪಾಲ್

ಸಮಸ್ಯೆ ಬಂದಡರಿದಾಗ–
ಯೋಚಿಸಬೇಕು
ಉತ್ತರ ಹೊಳೆಯುತ್ತದೆ ಅನ್ನುತ್ತಾರೆ.

ಯೋಚಿಸಿದೆ
ಉತ್ತರ ಹೊಳೆಯಲಿಲ್ಲ.

ಬಾತ್ ರೂಮಿಗೆ ಹೋದೆ
ಟಬ್ಬಿನಲ್ಲಿ ಭರ್ತಿ ನೀರು ತುಂಬಿಸಿ
ಧಡಕ್ಕನೆ ಅದರಲ್ಲಿ ಬಿದ್ದೆ
ನೀರೇನೋ ಹೊರಗೆ ಚೆಲ್ಲಿತು
'ಯುರೇಕಾ' ಎಂದೂ ಕೂಗಿಕೊಂಡೆ
(Power of positive thinking, ಸ್ವಾಮೀ)
ಆದರೂ–
ಉತ್ತರ ಹೊಳೆಯಲಿಲ್ಲ.
ಆಮೇಲೆ ಹೆಂಡತಿ ಬಂದು ನೋಡಿದಳು
'ನೆಲ ಎಲ್ಲ ಒರೆಸಿ' ಎಂದಳು.
ಒರೆಸಿದೆ
ನೆಲದಲ್ಲಿ ಉತ್ತರ ಕೊರೆದಿದೆಯೇನೋ ಎಂಬಾಸೆಯಿಂದ
ನೆಲ ಮೊದಲಿನ ಹಾಗೇ ಇತ್ತು.

ಸ್ಲೇಟು ಬಳಪ ತಂದೆ
ಸ್ಲೇಟನ್ನು ಚೆನ್ನಾಗಿ ಒರೆಸಿಟ್ಟೆ
(ಗಣಿತಜ್ಞ ರಾಮಾನುಜನ್ ಸ್ಲೇಟಿನಲ್ಲೇ ಅಂತೆ ಲೆಕ್ಕ ಮಾಡುತ್ತಿದ್ದುದು)
ಸಮಸ್ಯೆ ತುಂಬ ಕಾಡಿದಾಗ
ದೇವಿ ನಾಮಗಿರಿ ಅಮ್ಮಾಳ್
ಕನಸಿನಲಿ ಬಂದು ಉತ್ತರ ನೀಡಿ ಹೋಗುತ್ತಿದ್ದಳಂತೆ.
ನಾಮಗಿರಿ ಅಮ್ಮನಿಗೆ ಪ್ರಾರ್ಥನೆ ಮಾಡಿ
ಕಣ್ಣು ಮುಚ್ಚಿದೆ.
ಥೂ, ನಾಯಿಗಳ ಬಗುಳಾಟ, ನಿದ್ದೆಯೇ ಬರಲಿಲ್ಲ
ಇನ್ನು ಕನಸೆಲ್ಲಿಂದ ಬರಬೇಕು?
ನಾಮಗಿರಿ ಅಮ್ಮ ಕನಸಿನ ಗಂಟಿನಲ್ಲೇ ಉಳಿದಳು.

ಬೀಟಲ್ Paul McCartneyಯನ್ನು ನೆನಸಿಕೊಂಡೆ
'Let it be, let it be, O, let it be' ಹಾಡಿದೆ
ಮೂರು ಸಲ ಹಾಡಿದೆ
Mother Maryಯೂ ಹಾಗೇ ಅಂದಳು:
Let it be...
Answer ಮಾತ್ರ ಸಿಕ್ಕಲಿಲ್ಲ.

ಸಮಸ್ಯೆ ಏನು ಎನ್ನುತ್ತೀರಾ?
–ಈಗ ಅದೂ ಹೊಳೆಯುತ್ತಿಲ್ಲ.



## ಪಿಜ್ಜಾ ಹುಡುಗನ ಅದೃಷ್ಟ

ಉಮಾ ಎಸ್. ರಾವ್

ಪುಟ್ಟನಿಗೆ ಹೇಳಿದೆ:
ನೋಡೋ ಪುಟ್ಟ ಪಿಜ್ಜಾ ಹುಡುಗನ ಕಷ್ಟ!
ಇದ್ದಿದ್ದರೇ ಇವಂಗೆ ಕಾಲೇಜ್ ಇಷ್ಟ!
ಬರುತ್ತಿರಲ್ಲಿಲ್ಲ ಇಷ್ಟು ಕಷ್ಟ.

ನುಡಿದ ದಿಟ್ಟ ಪುಟ್ಟ ತಟ್ಟನೆ:
ಇವನಿಗೇನಿದೆ ಕಷ್ಟ?
ಇವನಿಗಿದೆ ಜಗದೆಲ್ಲಾ ಅದೃಷ್ಟ
ನನಗಿವನ ಕೆಲಸ ಭಾಳಾ ಇಷ್ಟ
ಬೇಕೆಂಬಾಗ, ಬೇಕಾದಷ್ಟು ತಿಂತಾನೆ
ಚೀಸೀ ಪಿಜ್ಜಾ, ಪಿಜ್ಜಾ, ಪಿಜ್ಜಾ!



## ಬೆದರಿಕಾಶ್ರಮವಾಸಿ

ಶ್ರೀವತ್ಸ ದುಗ್ಗಾಪುರ



ಸನ್ಯಾಸಿಯಾಗಿದ್ದೆ.
ಮೋಕ್ಷಕ್ಕೆ ಕಾದಿದ್ದೆ.

ಅವಳಬ್ಬರದಲ್ಲಿ
ಕುಕ್ಕುವ
ಸೌಟು, ತಾಟು,
ದಬರಿಗೆ
ಬೆದರಿ.
ಮೋಕ್ಷ ದೊರಕಿತು;

# ಹರಿತ

ನಳಿನಿ ಮೈಯ

ನಾನು, ನನ್ ಹೆಂಡ್ತಿ
ಹತ್ತ್ತೋಕ್ಮುಂಚೆ ಏರೋಪ್ಲೇನು
ಸೆಕ್ಯುರಿಟಿಯೋನ್ ಕೇಳ್ದ
'ಹರಿತವಾದ್ದೇನಾದ್ರೂ ಇದೆಯೇನು?




ಅದೇನಿದ್ರೂ ಬಿಡ್ಬೇಕಿಲ್ಲೇ
ಗೊತ್ತಾಯ್ತೇನು'
ಹೆಂಡ್ತೀಗ್ ಹೇಳ್ದೆ ನಾನು
'ನನ್ನಯ ಪ್ರೀತಿಯ ಜೇನು
ಇಲ್ಲೇ ಬಿಟ್ಬಿಡಮ್ಮ ನೀನು
ನಿನ್ನಯ ನಾಲಿಗೆಯನ್ನು'



## ಗಾದೆ-ತಗಾದೆ

### ನಳಿನಿ ಮೈಯ

ನನ್ ಹೆಂಡ್ತಿ ನಗ್ ಮುಖ ಬಿಗು ಮುಖವಾದಾಗ
ಏನ್ ಕೇಳಿದ್ರೂ ಮಾತಾಡ್ದೆ ಆಕೆ ಪಾತ್ರೆ ಕುಕ್ತಿದ್ದಾಗ
'ಮೌನಂ ಅಸಮ್ಮತಿ ಲಕ್ಷಣಂ'
ಅಂತ ಗಾದೆ ಕೊಂಚ ಬದಲಾಯಿಸ್ಕೊಂಡೆ



## ಹಾಲಿವುಡ್ ಹಾಸ್ಯ

### ಶ್ರೀನಾಥ್ ಭಲ್ಲೆ

ಸಿನಿಮಾ ನಟಿಯ ವಿವಾಹವೊಂದು ಅದ್ದೂರಿಯಿಂದ ನಡೆಯಿತು. ಅವಳ ಆಪ್ತ ಸ್ನೇಹಿತೆಗೆ ಹೋಗಲಾಗಲಿಲ್ಲ. ನಂತರ ಅವಳನ್ನು ಖುದ್ದಾಗಿ ಕಂಡು 'ಸಾರಿ ಕಣೆ. ಬರಲಿಕ್ಕೆ ಆಗಲಿಲ್ಲ. ಮುಂದಿನ ಸಾರಿ ಖಂಡಿತ ಬರ್ತೀನಿ!' ಎಂದಳು



ಮತ್ತೆ
ಕಪಾಳಕ್ಕೆ.
ಗುರ್ರ್ರ್ ಹಸ್ತದ
ಆ-ಶ್ರಮದಿಂದ.
ನರಳಿದೆ.
ಮರಳಿದೆ.

ಆದೆ
ಬೆದರಿಕಾಶ್ರಮವಾಸಿ.



## ವಿರಹ

ಶ್ರೀವತ್ಸ ದುಗ್ಗಾಪುರ

ಮರುಭೂಮಿ
ರಣ ಬಿಸಿಲು,
ಒಣ ನೆಲದ
ಕಡು ತಾಪ.

ಒಂದೆರಡೋ
ಮಳೆಹನಿ!

ನೀ ನಕ್ಕಂತೆ...



## ನಾಪಾ ವ್ಯಾಲಿಯಲೊಂದು ಪೀಪಾಯಿ ಪಾರ್ಟಿ

ಶ್ರೀವತ್ಸ ದುಗ್ಗಾಪುರ

ಮಲಗಿದರೂ ಊರೆಲ್ಲ
ಮಲಗಗೊಡರಿವರು
ಹಾರುವರು ಬಾರು-ಬಾರಿಗೆ, ತೆಕ್ಕೆಯಲೋ
ಗಂಡುಬೀರಿಯರು

ಹಿಡಿದರೆ ಬಾಟಲಿಯನೊಮ್ಮೆ
ಕೆಳಗಿಡರು ಇವರು
ಕಾಡಿದರೂ, ಬೇಡಿದರೂ
ಗುಂಡು-beer ಈಯರು!



## ಭಾವ-ಭಂಗಿ

### ಜ್ಯೋತಿ ಮಹದೇವ್

ಚಂದದ ಪೆನ್ನು ಕೈಗೆ ಸಿಕ್ಕಾಗ
ಏನೇನೋ ಬರೆಯ ಹೊರಟ ಯುವಕ-
ಚಂದದ ಹೆಣ್ಣು ಕೈಗೆ ಸಿಕ್ಕಾಗ
ಏನೇನೋ ಬಯಸಿ ಆದ ಮೂಕ.



## ರಜೆ–೧

### ಜ್ಯೋತಿ ಮಹದೇವ್

ಅಮ್ಮ, ನಿನ್ನ ಕಾಲದ ಕೂಡುಕುಟುಂಬ–
ಅದೇ ಚೆನ್ನಾಗಿತ್ತು, ನನಗೀಗ ಗೊತ್ತು;
ಬೇಕೋ, ಬೇಡವೋ, ಪ್ರತೀ ತಿಂಗಳೂ
ಮೂರು ದಿನಗಳ ರಜೆಯಂತೂ ನಿನಗಿತ್ತು.
ಆಧುನಿಕತೆ ಅದನ್ನತ್ತ ಇಟ್ಟಿದೆ,
ನನ್ನ ದಿನಚರಿಯಿಂದ ಕಿತ್ತು.



## ರಜೆ–೨

### ಜ್ಯೋತಿ ಮಹದೇವ್

ಅಪ್ಪ, ಅಂದು ಅಮ್ಮನಿಗೆ ಕೊಡುತ್ತಿದ್ದೆ ರಜೆ,
ಮಡಿಯ ಹೆಸರಲ್ಲಿ, ಸಿಡಿಮಿಡಿಗುಡುತ್ತಾ;
ಆದರೂ ಅವಳಿಗೆ ನೀರು, ಊಟ, ಕಾಫ಼ಿ, ತಿಂಡಿ,
ಎಲ್ಲವೂ ಸರಬರಾಜು ಅವಳಿದ್ದತ್ತ....!
ನನಗೆಂಥಾ ಗಂಡನನ್ನು ಹುಡುಕಿದೆ ಹೇಳು?
ಮಡಿಯೊಂದಕಾಗಿ ಅವನು ಸಿಡಿಮಿಡಿಗುಟ್ಟಿದ್ರೆ ಕೇಳು....!



## ಒಂಟೆಯ ಮದುವೆ

ಹಂ.ಕ.ಹರಿಪ್ರಿಯ

ಒಂಟೆಯ ಮದುವೆ, ಕತ್ತೆಯ ಗಾನ
ಒಂಟೆಯು ಹೊಗಳಲು ಭಲೆ ಶಾರೀರ!
ಕತ್ತೆಯು ಹೊಗಳಿತು ಎಂಥ ಶರೀರ!



## ನನ್ನಯ ಬವಣೆ

ಹಂ.ಕ.ಹರಿಪ್ರಿಯ

ಬಟ್ಟೆಯ ಹೊರುವುದೆ ನನ್ನಯ ದುಡಿಮೆ
ಕಷ್ಟದ ಕೆಲಸಕೆ ನನ್ನದೆ ಉಪಮೆ
ಹೆಡ್ಡರ ಬಯ್ಯಲು ನನ್ನದೆ ಸ್ಮರಣೆ
ತಿಳಿಯಿತೆ ನಿಮಗಿದು ನನ್ನಯ ಬವಣೆ?



## ಪಾತ್ರವರ್ಗ:

**ರಾಮಮೂರ್ತಿ:** ಸುಮಾರು ಐವತ್ತೈದು–ಅರವತ್ತು ವಯಸ್ಸಿನ ಗೃಹಸ್ಥ

**ಸುಶೀಲ:** ರಾಮಮೂರ್ತಿಯ ಹೆಂಡತಿ, ಸುಶಿಕ್ಷಿತ ಆಧುನಿಕ ಹೆಂಗಸು

**ಜಯರಾಮ್:** ರಾಮಮೂರ್ತಿಯ ಸ್ನೇಹಿತ, ಸುಮಾರು ಅಷ್ಟೇ ವಯಸ್ಸು, ವಿದುರ.

**ಅರುಣ್:** ರಾಮಮೂರ್ತಿ ಸುಶೀಲರ ಮಗ

**ಉಷ:** ಅರುಣ್ ಹೆಂಡತಿ

**ರವಿ:** ಜಯರಾಮ್ ಮಗ

**ಗೀತ:** ರವಿಯ ಹೆಂಡತಿ

**ಕೇಟಿ:** ಗೀತಳ ತಾಯಿ.

**ರಮೇಶ್:** ರವಿಯ ಸ್ನೇಹಿತ

**ಕುಸುಮ:** ಸುಮಾರು ಐವತ್ತೈದು ವಯಸ್ಸಿನ ಅವಿವಾಹಿತ ಮಹಿಳೆ, ಸುಶೀಲಳ ಸ್ನೇಹಿತೆ

**ಕಾಲ:** ಆಧುನಿಕ

## ದೃಶ್ಯ ೧

(ತೆರೆ ತೆಗೆದಾಗ ಮಧ್ಯಮ ವರ್ಗದ ಕುಟುಂಬವೊಂದರ ಲಿವಿಂಗ್ ರೂಂನಲ್ಲಿ ಮನೆಯ ಯಜಮಾನ, ರಾಮಮೂರ್ತಿ ನ್ಯೂಸ್ ಪೇಪರ್ ಓದುತ್ತಾ ಕುಳಿತಿರುತ್ತಾರೆ. ಅವರ ಹೆಂಡತಿ ಸುಶೀಲ ಪ್ಯಾಂಟ್, ಕುರ್ತ ತೊಟ್ಟುಕೊಂಡು ಒಂದು ಕೈಯಲ್ಲಿ ಪುಟ್ಟದೊಂದು ಜ಼ಿಪ್ಲಾಕ್ ಡಬ್ಬ, ಇನ್ನೊಂದು ಕೈಯಲ್ಲಿ ಆರೆಂಜ್ ಜ್ಯೂಸ್ ಹಿಡಿದು-ಕೊಂಡು ಪ್ರವೇಶಿಸುತ್ತಾಳೆ)

**ಸುಶೀಲ:** (ಒಂದು ಗಳಿಗೆ ನಿಂತು ಗಂಡನನ್ನು ನೋಡಿ)ಓ.. ಇಲ್ಲಿದ್ದೀರ? Backyardನಲ್ಲಿ ಕೆಲಸ ಮಾಡುತ್ತಿದ್ದೀರೆನೊ ಅಂತ ಜ್ಯೂಸ್ ಹಿಡ್ಕೊಂಡು ಎಲ್ಲಾ ಕಡೆ ಹುಡುಕ್ತಿದ್ದೆ. ನೀವು ನೋಡಿದ್ರೆ ಇಲ್ಲಿ ಆರಾಮವಾಗಿ ಕೂತು ಪೇಪರ್ ಓದ್ತಿದ್ದೀರಿ. ನಿಮಗೆ ಯಾಕೆ ಜ್ಯೂಸು. ನಿಮ್ಮನ್ನ ಹುಡುಕಿ ನನಗೇ ಸುಸ್ತು(ಗಟಗಟ ತಾನೆ ಕುಡಿಯುತ್ತಾಳೆ).

**ರಾಮಮೂರ್ತಿ:** (ತಲೆ ಎತ್ತಿ ಅವಳನ್ನು ನೋಡಿ ಜ್ಯೂಸ್‌ಗಾಗಿ ಕೈಚಾಚಿ, ಅವಳೇ ಕುಡಿದಿದ್ದನ್ನು ನೋಡಿ)ಲೇ.. ಲೇ...(ತಲೆಯಳ್ಳಾಡಿಸಿ ಮತ್ತೆ ಓದಲು ಶುರು ಮಾಡುತ್ತಾರೆ)

**ಸುಶೀಲ:** (ಲೋಟ ಕೆಳಗಿಡುತ್ತಾ) ಬೆಳಗಾಗಿ ಎದ್ದು ಮಾಡೊ ಕೆಲಸ ಅಷ್ಟೊಂದು ಇರಬೇಕಾದರೆ ಹೀಗೆ ಗಂಟೆಗಟ್ಟಲೆ ಪೆಪರ್ ಓದ್ತಾ ಕೂತುಕೊಳ್ಳೋದು ಗಂಡಸರಿಗೆ ಮಾತ್ರ ಸಾಧ್ಯ ಹೇಳ್ತೀನಿ ಕೇಳಿ...

**ರಾಮಮೂರ್ತಿ:** ಅಲ್ವೆ ಪ್ರತಿದಿನ ರಾಶಿ ರಾಶಿ ಬಂದು ಬೀಳೋ ಪೇಪರ್‌ನ ಎಷ್ಟೋ ಸಲ ರಬ್ಬರ್ ಬ್ಯಾಂಡೂ ತೆಗೀದೆ reecycle binನಲ್ಲಿ ಹಾಕ್ತೀವಿ. At least ಶನಿವಾರ ಒಂದು ದಿನನಾದ್ರು ನಾನು ಸ್ವಲ್ಪ ಬಿಡುವಾಗಿ ಪೇಪರ್ ಓದ್ತಿದ್ರೆ ನಿನ್ನ Blood preasure ಯಾಕೆ ಏರ್ಹೋಗುತ್ತೆ ಹೇಳು. (ಮತ್ತೆ ಓದು ಮುಂದುವರೆಸುತ್ತಾನೆ).

**ಸುಶೀಲ:** ಓದ್ರಿ.. ನಾನೇಲ್ಲಿ ಬೇಡಾ ಅಂದೆ...ನಾನೂ ಓದ್ತೀನಪ್ಪ..ನಿಂತ್ಕೊಂಡೆ ಅಬ್ಬಬ್ಬ ಅಂದ್ರೆ ಒಂದು ಹತ್ತು ನಿಮಿಷ ಹೆಡ್ ಲೈನ್ಸ್, ಬಿಸಿನೆಸ್ ಸೆಕ್ಷನ್ಸ್ ಮೇಲೆ ಕಣ್ಣಾಡಿಸಿದ್ರೆ ಸಾಕು....ಎಲ್ಲ ಮುಖ್ಯವಾದ ವಿಷಯಗಳೂ ಗೊತ್ತಾಗುತ್ತೆ...ಇವತ್ತಂತು ಎಷ್ಟು ಕೆಲಸ ಇದೆ ಗೊತ್ತಾ? ಮನೇಲಿ ಒಂದು ಚೂರು ಗ್ರೋಸರಿ ಇಲ್ಲ, ಮಧ್ಯಾನ್ಹ ಟೆಂಪಲ್ ಸ್ಟೀರಿಂಗ್ ಕಮಿಟಿ ಮೀಟಿಂಗ್ ಬೇರೆ....ಜೊತೇಗೆ.... ನಾಲ್ಕು ಗ್ರ್ಯಾಜುಯೇಷನ್ ಗಿಫ್ಟ್.... ಮೂರು ಅರಂಗೆಟ್ರಂ ಗಿಫ್ಟ್‌ಗಳನ್ನ ತರಬೇಕು..ಅದು ಹೋಗ್ಲಿ ಮುಂದಿನ ವಾರ ನಮ್ಮ ಮನೆ ಪಾರ್ಟಿಗೆ ಈ ವೈಟ್ ಕಳಿಸಬೇಕು...ಗೆಸ್ಟ್ ಲಿಸ್ಟ್ ಹಾಕಟ್ಟಿದ್ದೀನಿ... ಅವರ ಈಮೈಲ್ ಐಡಿ ಸರಿಯಾಗಿ ಇದ್ಯ ಅಂತಾನಾದ್ರು ನೋಡ್ತೀರ ಸ್ವಲ್ಪ?...(ಗಂಡ ಮಾತಾಡದಿದ್ದುದನ್ನು ನೋಡಿ)ರೀ...ನಿಮ್ಮನ್ನೆ ಕೇಳ್ತಿರೋದು...

**ರಾಮಮೂರ್ತಿ:** (ಬೆಚ್ಚಿ)....ಏನಂದೆ..? Sorry ನಾನು ಯಾವ್ದೋ ಇಂಟರೆಸ್ಟಿಂಗ್ ಸರ್ವೆ ರಿಪೋರ್ಟ್ ಓದ್ತಾಇದ್ದೆ.. ನಿನ್ನ ಮಾತು ಕೇಳಿಸ್ಕೋಳಿಲ್ಲ..(ನಗುತ್ತ) ಈ ಸರ್ವೆ ಪ್ರಕಾರ ಗಂಡಸರು ದಿನಕ್ಕೆ on an average ೧೫,೦೦೦ ಪದಗಳನ್ನ Use ಮಾಡ್ತಾರಂತೆ ....ಹೆಂಗಸರು.. ೩೦,೦೦೦, ಅಂದ್ರೆ ನಮಗೆ ಎರಡರಷ್ಟು ಪದಗಳನ್ನ ಉಪಯೋಗಿಸ್ತಾರಂತೆ ....ಅಬ್ಬಬ್ಬ ಎಷ್ಟು ಮಾತಾಡ್ತೀರೆ....ನನಗೆ ಕೇಳಿ ಸುಸ್ತಾಗಿ ಹೋಯ್ತು....

**ಸುಶೀಲ:** (ವ್ಯಂಗ್ಯವಾಗಿ) ಹೆಂಗಸ್ರು ಯಾಕೆ ಎರಡರಷ್ಟು ಪದಗಳನ್ನ ಬಳಸ್ಬೇಕೂ ಅಂದ್ರೆ...ಅವರು ಗಂಡಸರ ಹತ್ತಿರ ಮಾತಾಡೋವಾಗ....ಹೇಳಿದ್ದನ್ನೆ ಎರಡೆರಡು ಸಲ ಹೇಳ್ಬೇಕು ನೋಡಿ ಅದಕ್ಕೇ.

**ರಾಮಮೂರ್ತಿ:** ಏನಂದೇ..?

**ಸುಶೀಲ:** I rest my case... ಪಾಪ ತಪ್ಪು ನಿಮ್ಮದಲ್ಲ ಬಿಡಿ.. ಆ ಬ್ರಹ್ಮ ನಿಮ್ಮಗಳನ್ನ ಸೃಷ್ಟಿಸೋವಾಗ Attention Deficit Disorder .. hearing problem.. ಎಲ್ಲ ಕೊಟ್ಟುಬಿಟ್ಟಿದ್ದಾನೆ ಅಂತ ಕಾಣುತ್ತೆ....ಪರ್ವಾಗಿಲ್ಲ ಬಿಡಿ....ನಾವು ಅಡ್ಜೆಸ್ಟ್ ಮಾಡ್ಕೋತೀವಿ....ಈಗ ಸ್ವಲ್ಪ ಗಮನ ಕೊಟ್ಟು ಕೇಳಿ.. ಬೇಕಾದ್ರೆ ರಿಪೀಟೂ ಮಾಡ್ತೀನಿ....

**ರಾಮಮೂರ್ತಿ:** ಸಾಕ್ಸಾಕು....ಸ್ವಲ್ಪ ಛಾನ್ಸ್ ಸಿಕ್ಕಿಬಿಟ್ರೆ ಸಾಕು ಶುರು ಮಾಡ್ಬಿಡ್ತೀಯ ...ಸುಮ್ನೆ ಅದೇನು ಮಾಡ್ಬೇಕು ಹೇಳು..(ಅಷ್ಟರಲ್ಲಿ ಕರೆ ಘಂಟೆ ಕೇಳಿಸುತ್ತದೆ)

**ಸುಶೀಲ:** ಅದ್ಯಾರ್ರಿ ಶನಿವಾರ ಇಷ್ಟು ಬೇಗ ಬಂದಿದ್ದಾರೆ...ಸ್ವಲ್ಪ ನೋಡಿ...

**ರಾಮಮೂರ್ತಿ:** ನೋಡು ನನ್ನ ಕೇಳ್ಕೊಂಡು ಈ ಮನೇಗೆ ಒಂದು ನರಪಿಳ್ಳೇನು ಬರೊಲ್ಲ... ಎಲ್ಲ ನಿನ್ನ ಬಳಗವೆ.. ನೀನೇ ಹೊಗ್‌ನೋಡು...

**ಸುಶೀಲ:** ಅಬ್ಬಬ್ಬ....ನಿಮ್ಮನ್ ಕಟ್ಕೊಂಡು ಏಗ್ತಾ ಇದ್ದೀನಲ್ಲ... ನನಗ್ ಬುದ್ಧಿಯಿಲ್ಲ (ಬಾಗಿಲತ್ತ ಹೋಗುತ್ತಾಳೆ)

**ರಾಮಮೂರ್ತಿ:** ಬುದ್ಧಿಯಿಲ್ಲ ಅಂತ ಹೇಳ್ಕೊಂಡೆ ನನಗೆ ಚಳ್ಳೇ ಹಣ್ಣು ತಿನ್ನಿಸ್ತಿದ್ದಾಳೆ....ಇನ್ನು ಬುದ್ದೀನು ಇದೇ ಅಂತ ತಿಳಿದ್ಬಿಟ್ರೆ ನನ್ಗತಿ ಇನ್ನೇನ್ ಆಗ್ಬಿಡ್ತಿತ್ತೋ ...ಈಗ ನೋಡ್ತಿರಿ....ಬಂದೋರ ಎದುರಿಗೆ ರಾಜಾ ಅಂತ ಕರೆದು most loving wife ಆಗ್ಬಿಡ್ತಾಳೆ.

**ಸುಶೀಲ:** (ಹೊರಗಿಂದ. ಇಲ್ಲ ಮನೇಲೆ ಇದ್ದಾರೆ.. ಬನ್ನಿ ಬನ್ನಿ ಎನ್ನುತ್ತಾ ಒಳಗೆ ಬಂದು, ಒಲವಿನ ದನಿಯಲ್ಲಿ)ನೋಡಿ ರಾಜ, ನಿಮ್ಮನ್ನ ಹುಡಕ್ಕೊಂಡು ಯಾರು ಬರೊಲ್ಲ ಅಂತಿದ್ರಲ್ಲ....ನಿಮ್ಮ ಸ್ನೇಹಿತರೆ ಬಂದಿರೋದು

**ರಾಮಮೂರ್ತಿ:** (ಖುಷಿಯಿಂದ)ಅರರೆ ಜಯರಾಮು..ಯಾವಗ್ಬಂದೆ ಚಿಕಾಗೊದಿಂದ.... so nice to see you ಬಾ.. ಬಾ..

**ಜಯರಾಮ:** ಮೊನ್ನೆ ಬಂದೆಕಣಯ್ಯ. ಹೇಗಿದ್ದೀಯ..ಮನೇಲಿರ್ತೀಯೊ ಇಲ್ಲ Golf ಗೀಲ್ಫ್ ಅಂತ ಹೊರಟು ಹೋಗಿರ್ತೀಯೊ ಅಂತ ಅಂದುಕೊಂಡಿದ್ದೆ.

**ರಾಮಮೂರ್ತಿ:** ಇಲ್ಲಾಪ್ಪ ಇವತ್ತು ಮನೇಲೆ ಸಿಕ್ಕಾಪಟ್ಟೆ ಕೆಲ್ಸ. ಸುಶೀಗೆ ಹೆಲ್ಪ್ ಮಾಡ್ತಿದ್ದೆ. (ಸುಶೀಲ ನಂಬಲಾರದವಳಂತೆ ದುರುಗುಟ್ಟಿಕೊಂಡು ನೋಡುತ್ತಾಳೆ) ಅದಿರ್ಲಿ ಇದೇನು ಇದ್ದಕಿದ್ದಹಾಗೆ ಬಂದಿದ್ದು. Business ಮೇಲ..?

**ಜಯರಾಮ:** Business ಅಲ್ಲ....ಒಂದ್‌ತರ Personal business ಅಂತ ಇಟ್ಕೊ. ಅದೂ...ಹುಂ.. ನಿಮ್ಮ ಹತ್ರ ಯಾಕೆ ಮುಚ್ಚುಮರೆ ನಮ್ಮ ರವಿ, ಗೀತ ಇಬ್ಬರಿಗೂ ಯಾಕೋ ಸ್ವಲ್ಪ ಸರಿ ಹೋಗ್ತಿಲ್ಲ ಅಂತ ಗೊತ್ತಾಯ್ತು...

**ರಾಮಮೂರ್ತಿ:** ಅಯ್ಯೊ ಪಾಪವೇ ಅದ್ಯಾಕೆ ಹಾಗಾಯ್ತು? Love Marriage ಅಲ್ವೇನಯ್ಯ ಅವರ್ದು? ಸುಶೀ ನಿನಗೆ ಗೊತ್ತಿತ್ತಾ?

**ಸುಶೀಲ:** ಸ್ವಲ್ಪ ಅನುಮಾನ ಬಂದಿತ್ತು. ಏನೋ ಸ್ವಲ್ಪ ಸಣ್ಣ ಪುಟ್ಟ ಜಗಳ ಇರಬಹುದು ಅಂತ ಅನ್ಕೊಂಡಿದ್ದೆ

**ಜಯರಾಮ:** ನೋಡಿದ್ಯಾ ಹೆಂಗಸರಿಗೆ ಆ ವಿಚಾರದಲ್ಲೆಲ್ಲಾ 6th sense ಇರುತ್ತೆ ಅಂತ ಕಾಣುತ್ತೆ.. ಅವನ ತಾಯಿ ಇದ್ದಿದ್ರೆ ಬೇಗ Guess ಮಾಡ್ತಿದ್ಲೇನೊ. ನನಗವನು ಬಾಯಿ ಬಿಟ್ಟು ಹೇಳೋತನಕ ಗೊತ್ತಾಗ್ಲಿಲ್ಲ

**ಸುಶೀಲ:** ಪಾಪ ನೀವುಬಿಡಿ ಗಂಡಸ್ರು.. ಲವ್ವು, ರೊಮಾನ್ಸು...ಹೆಂಗಸರ ಮನಸ್ಸಿನ ಸೆನ್ಸಿಟಿವಿಟಿ...ಎಲ್ಲದರ ವಿಚಾರದಲ್ಲು ಕ್ಲೂಲೆಸ್...ನೀವಾಯ್ತು..ನಿಮ್ಮ ಪ್ರಪಂಚವಾಯ್ತು...ಪಾಪ..

**ರಾಮಮೂರ್ತಿ:** ಲೇ... ಲೇ ನೀನು ಪಾಪ, ಪಾಪ ಅಂತಾನೆ ಮುಸಿಕಿನೊಳಗಡೆ ಗುದ್ದು ಕೊಡಬೇಡ. ನಮಗೂ ಅರ್ಥ ಆಗುತ್ತೆ ನಿನ್ನ ವ್ಯಂಗ್ಯ.. ಜಯರಾಮು, ಈಗ ಏನ್ಮಾಡ್ಬೇಕೂಂತ ಇದ್ದೀಯ.. ರವಿ ವಿಚಾರದಲ್ಲಿ...

**ಜಯರಾಮು:** ಗೀತನ ತಾಯೀನೂ ಬಂದಿದ್ದಾರೆ. ಇಬ್ರು ಸೇರಿ ಹೇಗಾದ್ರು ಸರಿ ಮಾಡ್ಬೇಕೂ ಅಂತ ಪ್ರಯತ್ನಿಸುತಿದ್ದೀವಿ. ನೋಡ್ಬೇಕು ಏನಾಗುತ್ತೋ....

**ಸುಶೀಲ:** ಗೀತನ ತಾಯೀನೇ.. ಸರಿಹೋಯ್ತು..

**ರಾಮಮೂರ್ತಿ:** ಅದ್ಯಾಕೇ ಹಾಗ್ ರಾಗ ಎಳೀತಿದ್ದಿ... ಅವರ್ಗೇನಾಗಿದೆ?

**ಸುಶೀಲ:** ಅಲ್ಲ ಆಕೇನೆ ಡೈವೋರ್ಸಿ ಅಲ್ವ? ಅವಳೇನು ಬುದ್ಧಿಹೇಳ್ತಾಳೆ ಮಗಳ್ಗೆ?

**ರಾಮಮೂರ್ತಿ:** ಹಾಗಂತ್ ಹೇಳ್ಬಿಟ್ಟು ತಾಯಿಯಾಗಿ ಸುಮ್ನಿರೋಕಾಗುತ್ಯೇನೆ. ಇವನು ಬರೋದು ಇನ್ನು ಸ್ವಲ್ಪ ಲೇಟ್ ಆಗಿದ್ದಿದ್ರೆ ನಮ್ ಮದುವೇನೂ ಡೈವೋರ್ಸ್ ಘಟ್ಟ ಮುಟ್ಟುತ್ತಿತ್ತು...ಹೀಗೆ ಮಾತಾಡ್ತಿರ್ತೀಯೋ ಅವನ್ಗೇನಾದ್ರು ತಿಂಡಿ ಕಾಫಿ ಕೊಡ್ತೀಯೋ?

**ಸುಶೀಲ:** ನೋಡಿ ಅಡುಗೆ ಮನೇನಲ್ಲಿ ಎಲ್ಲ ರೆಡಿಯಾಗಿದೆ. ಖಾರಾಭಾತ್ ಮಾಡಿಟ್ಟೀದ್ದೀನಿ. ಅವರ್ಗೂ ಕೊಟ್ಟು ನೀವು ತಿನ್ನಿ. ನಾನು ಸ್ವಲ್ಪ ಅರುಣ್ ಮನೇಗೆ ಹೋಗಿ ಅವನ್ಗೂ ತಿಂಡಿ ಕೊಟ್ಟು ಬರ್ತೀನಿ. ಶನಿವಾರ ಬಂತೂ ಅಂದ್ರೆ ಅವನ ಹೆಂಡ್ತಿ ಏಳೋ ಹೊತ್ತಿಗೆ ಮಧ್ಯಾನ್ನದ ಊಟದ ಹೊತ್ತೂ ಮೀರಿಹೋಗಿರುತ್ತೆ....ಜಯರಾಮ್ ಯೋಚನೆ ಮಾಡ್ಬೇಡಿ. ನಮ್ಮಿಂದ ಏನ್ ಸಹಾಯ ಬೇಕಾದ್ರು ಸಂಕೋಚವಿಲ್ದೆ ಕೇಳಿ...ಸಾರಿ.. ಈಗ ನಾನು ಹೋಗ್ಬೇಕು...ಖಾರಾಭಾತ್ ಆರಿಹೋಗೋಕ್ ಮೊದಲೇ ಅರುಣ್‌ಗೆ ಕೊಟ್ಟರೆ ಚೆನ್ನಾಗಿ ತಿಂತಾನೆ ಪಾಪ....(ರಾಮಮೂರ್ತಿಯನ್ನು ಕುರಿತು)..ರೀ ಅವರಿಗೂ ಸ್ವಲ್ಪ ಬಿಸಿ ಮಾಡಿಕೊಡಿ ...ಹಾಗೆ ಆದ್ರೆ ಸ್ವಲ್ಪ ಅರಳುಸಂಡಿಗೇನು ಕರಿದುಹಾಕಿ...ಪಾಪ ಅವರ ಮನೇಲಿ ಏನು ಹೆಂಗಸ್ರು ಇದ್ದಾರ್ಯೆ ಬಾಯ್ಗೆ ಬೇಕಾಗಿದ್ದು ಮಾಡಿಹಾಕೋಕೆ?...ಬರ್ತೀನಿ...bye...bye..(ಹೋಗುತ್ತಾಳೆ)

**ರಾಮಮೂರ್ತಿ:** bye...bye... ಹೋಗ್ಬಾ ತಾಯಿ ಹೋಗ್ಬಾ..(ಅವಳು ಹೋದ ಮೇಲೆ). ನೋಡಿದ್ಯೇನಯ್ಯ ಅವಳ ಜಾಣತನಾನ.. ನಿನಗೆ ಉಪಚಾರ ಮಾಡಿದ ಹಾಗು ಇರಬೇಕು.. ತಾನು ಕಷ್ಟಾನೂ ಪಡಬಾರದು... ನಾನೀಗ ಸಂಡಿಗೆ ಕರೀಲಿಲ್ಲ ಅಂತ ಇಟ್ಕೊ....ನೀನು 'ಪಾಪ ಆಕೆ ಅಷ್ಟು ಹೇಳ್ಬಿಟ್ಟು ಹೋದ್ರು ಈ ಬಡ್ಡೀಮಗ ಕರೀಲಿಲ್ಲ ನೋಡು' ಅಂತ ಮನಸ್ನಲ್ಲಾದ್ರು ಅಂದ್ಕೊಳ್ದೆ ಇರ್ತೀಯ?

**ಜಯರಾಮು:** ಬೇಡ ಕಣಯ್ಯ..ನೀನು ಸಂಡಿಗೇನು ಕರೀಬೇಡ.. ಏನೂ ಬೇಡ.. ಪಾಪ ಆಕೆ ಮಾಡಿಟ್ಟೀರೊ ಖಾರಾಭಾತಾದ್ರು ಕೊಡ್ತೀಯೊ ಇಲ್ವೋ?

**ರಾಮಮೂರ್ತಿ:** ನೋಡಿದ್ಯ.. ನೋಡಿದ್ಯ... ನಿನ್ನ ಟೋನ್‌ನಲ್ಲೇ ಗೊತ್ತಾಗುತ್ತೆ.. ನಿನ್ನ annoyanceಉ. ನಾನು ಯಾಕ್ ಹೇಳೊಕೆ ಬಂದೇ ಅಂದರೆ.. ಮದುವೆ ಆಗಿ ೩೫–೩೬ ವರ್ಷ ಆಗಿರೊ ನಾವೇ ಹೆಂಡ್ತೀರ್‍ನ manage ಮಾಡೊಕೆ ಹೆಣಗಾಡ್ತಿರೋವಾಗ ಇನ್ನೂ ೬–೭ವರ್ಷ ಆಗಿರೊ ಅರುಣ್, ರವಿ ಅಂಥ ಹುಡುಗರ ಪಾಡೇನು ಹೇಳು.

**ಜಯರಾಮು:** ಅಂದ್ಹಾಗೆ.. ಅರುಣ್ ಹೇಗಿದ್ದಾನೆ?.. ಎದರುಬದರು ಮನೇಲಿರೋದು ವರ್ಕೌಟ್ ಆಗ್ತಿದ್ಯಾ..? ನೀನೆ ಪುಣ್ಯವಂತ ಕಣಯ್ಯ.. ಮಗನ ಸಂಸಾರದ ಮೇಲೆ ಯಾವಾಗ್ಲು ನಿಗ ಇಟ್ಟಿರಬಹುದು.. ನಾನೂ ರವಿ ಹತ್ತಿರ ಇದ್ದಿದ್ರೆ ಈ ತಾಪತ್ರಯವೇ ಬರ್ತಿರಲ್ಲಿಲ್ವೋ ಏನೋ.

**ರಾಮಮೂರ್ತಿ:** ತೀರ ಹತ್ತಿರದಲ್ಲಿರೋದು ಅಷ್ಟೊಂದು ಒಳ್ಳೇದಲ್ಲ ಅಂತ ಇಟ್ಕೋ.. ಈಗ್ ನೋಡು.. ಇವಳು ನನಗೆ ನಿನಗೆ ತಿಂಡಿ ಬಿಸಿಮಾಡಿ ಕೊಟ್ಟು ಉಪಚಾರ ಮಾಡೋದು ಬಿಟ್ಟು ಅಲ್ಯಾಕೆ ಹೋಗ್ಬೆಕಪ್ಪಾ? ಶನಿವಾರ ..ಇನ್ನೂ ಚಿಕ್ಕವರು.. ಅವರ ಪಾಡಿಗೆ ಅವರು ಯಾವಾಗ ಬೇಕಾದ್ರೆ ಆಗ ಎದ್ದುಕೊಳ್ಳಲಿ ಅಂತ ತೆಪ್ಪಗಿರಬಾರ್ದಾ?

**ಜಯರಾಮು:** ತಾಯಿ ಕರುಳುಕಣಯ್ಯ.. ಪಾಪ ಮಗನಿಗೆ ಹಸಿವು ಅಂತ ಚುರಕ್ ಅಂದಿರಬೇಕು....

**ರಾಮಮೂರ್ತಿ:** ತಾಯಿ ಕರುಳು ಅಲ್ಲ ಮಣ್ಣಾಂಗಟ್ಟಿಯೂ ಅಲ್ಲ.. ತಾನಿಲ್ದೆ ಪ್ರಪಂಚ ನಡಿಯೊಲ್ಲ ಅಂತ ತಿಳ್ಕೊಂಡುಬಿಟ್ಟಿದ್ದಾಳೆ ನನ್ನ ಹೆಂಡ್ತಿ. ಬರೀ ಅವಳೊಬ್ಳೇ ಅಲ್ಲ.. ಪ್ರಪಂಚ ಉಳಿದಿರೋದೆ ತಮ್ಮಿಂದ ಅಂತ ಇಡೀ ಹೆಂಗಸರ ಜನಾಂಗವೇ ತಿಳ್ಕೊಂಡುಬಿಟ್ಟಿದೆ...ಇವರನ್ನ ಕಟ್ಕೊಂಡು ನಾವು ಹೆಣಗಬೇಕು.

**ಜಯರಾಮು:** ಇದ್ದಾಗ ಜಗಳ ಆಡ್ತೀವಿ...ಇಲ್ದಾಗ miss ಮಾಡ್ತೀವಲ್ಲಯ್ಯ ಅದಕ್ಕೇನು ಹೇಳ್ತಿ.

**ರಾಮಮೂರ್ತಿ:** As the saying goes We can not live with them (ಇಬ್ಬರೂ ಒಟ್ಟಿಗೆ) or without them ಬಾ ..ಬಾ.. ತಿಂಡಿ ತಿಂತಾ ಮುಂದಿನ ದಾರಿ ಯೋಚಿಸೋಣ (ಒಳಗೆ ಹೋಗುತ್ತಾರೆ)

(ತೆರೆ)

# ದೃಶ್ಯ ೨

(ಅರುಣ್ ಮನೆ.. ಸುಶೀಲ ಒಂದೇ ಸಮನೆ ಬೆಲ್ಲು ಮಾಡಿದಾಗ ನಿದ್ದೆಗಣ್ಣಿನಲ್ಲಿ ಕಮಿಂಗ್.. ಕಮಿಂಗ್.. ಎಂದುಕೊಂಡು ಆಕಳಿಸುತ್ತ ಅರುಣ್ ರಾತ್ರಿಯ ಉಡುಪಿನಲ್ಲಿ ಬಂದು ಬಾಗಿಲು ತೆಗೆಯುತ್ತಾನೆ)

**ಸುಶೀಲ:** (ಅವನನ್ನು ತಳ್ಳಿಕೊಂಡು ಒಳಗೆ ಬರುತ್ತ..) ಏಷ್ಟ್ ಹೊತ್ತು ಬೆಲ್ ಮಾಡಬೇಕೊ? ಹೊರಗಡೆ ಚಳಿ ಬೇರೆ...

**ಅರುಣ್:** ಅಲ್ಲಮ್ಮ ಶನಿವಾರ ಇಷ್ಟು ಬೇಗ..ನೀನು ಇಲ್ಲೇನು ಮಾಡ್ತಿದ್ದೀಯ.. ಅಪ್ಪ ಸರಿಯಾಗಿದ್ದಾರೆ ತಾನೆ..?

**ಸುಶೀಲ:** ನಿಮ್ಮ ಅಪ್ಪಂಗೇನು ಗುನುಗು..? ಫಸ್ಟ್ ಕ್ಲಾಸ್ ಆಗಿದ್ದಾರೆ. ಕೂತ್ಕಡೆ ಎಲ್ಲ ಉಪಚಾರ ನಡೆಯುತ್ತೆ..

**ಅರುಣ್:** ಮತ್ತೆ ನೀನ್ಯಾಕೆ ಇಷ್ಟು ಬೇಗ ಬಂದಿದ್ದೀಯ..?

**ಸುಶೀಲ:** ಬಿಸಿಬಿಸಿಯಾಗಿ ಖಾರಾಭಾತ್ ಮಾಡಿದ್ದೆ.. ಕೊಟ್ಬಿಟ್ಟು ಹೋಗೋಣಾಂತ ಬಂದೆ..ನೆನ್ನೆ ರಾತ್ರಿ ನಿನ್ನ ಹೆಂಡ್ತಿ ಬಂದಾಗ ರಾತ್ರಿ ಹನ್ನೊಂದು ಘಂಟೆ ಆಗಿಹೋಗಿತ್ತು...ನಾನು ಹುಳಿ ಕೊಟ್ಟಿದ್ನೋ ನೀನು ಬದುಕ್ದೆ..ಇಲ್ದಿದ್ರೆ ನೀನೆ ಮಾಡ್ಕೊಬೇಕಾಗ್ತಿತ್ತು...ಯಾಕಂತೆ ಅಷ್ಟು ಲೇಟು?

**ಅರುಣ್:** ಪಾಪ ಅವ್ಳಿಗೆ ಆಫೀಸ್ನಲ್ಲಿ ತುಂಬ ಕೆಲ್ಸ. ಅಮ್ಮ..ಪ್ಲೀಸ್ ಉಷ ಮಲಗಿದ್ದಾಳೆ.. ಸ್ವಲ್ಪ ಮೆತ್ತಗೆ ಮಾತಾಡು..(ಖಾರಾಭಾತ್ ಪಾತ್ರೆಯನ್ನು ತೆಗೆದುಕೊಳ್ಳುತ್ತಾ) thanks for the KArABAt... actually ನನಗೂ ಇನ್ನೂ ತುಂಬಾ ನಿದ್ದೆ...

**ಸುಶೀಲ:** ಹೌದೇನೋ... ನಿನ್ನ ಪಾಡಿಗೆ ನೀನು ಒಳಗ್ ಹೋಗಿ ಮಲಕ್ಕೊ.. ಮನೆ ನೋಡೋಕಾಗ್ತಿಲ್ಲ.. ನಾನು ಸ್ವಲ್ಪ ಸರಿಮಾಡ್ಬಿಟ್ಟು ಬಾಗಿಲೆಳಕೊಂಡು ಹೋಗ್ತೀನಿ... (ಸರಸರ ಅಲ್ಲಿ ಹರಡಿದ್ದ ಸಾಮಾನುಗಳನ್ನು ಜೋಡಿಸಲಾರಂಭಿಸುತ್ತಾಳೆ)

**ಅರುಣ್:** ಅಮ್ಮ..ಥಾಂಕ್ಸ್ ಬಟ್ ನೋ ಥಾಂಕ್ಸ್.....ನಮಗೆ ಬಿಡುವಾದಾಗ ನಾವೇ ಮಾಡ್ಕೋತೀವಿ...

**ಸುಶೀಲ:** (ಅವನನ್ನು ignore ಮಾಡುತ್ತ ಕೆಲಸವನ್ನು ಮುಂದುವರೆಸಿ)ಆಯಾಯ ಜಾಗದಲ್ಲಿ ಆಯಾಯ ಸಾಮಾನನ್ನ ತಕ್ಷಣ ಇಟ್ಟುಬಿಟ್ರೆ ಈ ಪ್ರಾಬ್ಲಂಮ್ಮೇ ಇರೊಲ್ಲ ನೋಡು. ನೀನು ಮದುವೆಗೆ ಮೊದಲು ಸರಿಯಾಗೇ ಇದ್ದೆ.. ಈಗ ಸಹವಾಸ ದೋಷ ಅಂತ ಕಾಣುತ್ತೆ...(ಕಾಫಿ ಟೇಬಲ್ ಮೇಲಿನ ಕೆಲವು ಸಾಮಾನು ಕೆಳಗೆ ಬಿದ್ದು ಜೋರಾಗಿ ಶಬ್ದವಾಗುತ್ತದೆ).

**ಉಷ:** (ಒಳಗಿಂದ ಜೋರಾಗಿ)ಅರೂಣ್ ...ಅಬ್ಬ ಬೆಳಗಾಗೆದ್ದು ಎಷ್ಟು ಗಲಾಟೆ ಮಾಡ್ತಿದ್ದೀ....ನಾನು ಏಷ್ಟ್ ಹೊತ್ತಿಗೆ ಮಲಗ್ದೇ ಅಂತ ಗೊತ್ತೂ ತಾನೆ....(ನೈಟಿ ಮೇಲೆ ರೋಬ್ ಕಟ್ಟಿಕೊಳ್ಳುತ್ತಾ ಬಂದು)ಯಾರ್ ಹತ್ರ ಮಾತಾಡ್ತಿದ್ದೀಯ...ಅಷ್ಟು ಜೋರಾಗಿ...(ಅತ್ತೆಯನ್ನು ನೋಡಿ ಅಸಹನೆಯ ಧ್ವನಿಯಲ್ಲಿ)'ಅಯ್ಯೋ ನೀವೇನ್ ಮಾಡ್ತಿದ್ದೀರಿ ಇಲ್ಲಿ ಇಷ್ಟು ಬೇಗ?'(ಟೈಮ್ ನೋಡಿಕೊಳ್ಳುತ್ತಾಳೆ)

**ಸುಶೀಲ:** (ತಾನೂ ಗಡಿಯಾರ ನೋಡಿಕೊಂಡು)ತೀರ ಬೇಗೇನೂ ಇಲ್ಲ... ಸಂಸಾರಸ್ಥ್ರು ಏಳೋ ಹೊತ್ತೇ..(ಮತ್ತೆ ಕ್ಲೀನ್ ಮಾಡಲು ತೊಡಗುತ್ತಾಳೆ)

**ಉಷ:** ಅತ್ತೇ ಪ್ಲೀಸ್ ಅದನೆಲ್ಲ ಮಾಡೋಕೆ ಹೋಗ್ಬೇಡಿ..(ಗಂಡನತ್ತ ನೋಡಿ ಮೆತ್ತಗೆ) ಅರುಣ್... do something..

**ಅರುಣ್:** ಅಮ್ಮ ಅದೆಲ್ಲ ಹಾಗೆ ಇರ್ಲಿ..ನಾವ್ ಮಾಡ್ಕೋತೀವಿ ...ನಿನಗೆ ಎಲ್ಲಿಡಬೇಕೂ ಅಂತ ಗೊತ್ತಾಗೊಲ್ಲ.. ಆಮೇಲೆ ಅದು ನಮಗೆ ಬೇಕಾದಾಗ ಸಿಗೊಲ್ಲ..

**ಸುಶೀಲ:**(ಸ್ವಲ್ಪ ಅಸಮಾಧಾನದಿಂದ) ಸರಿಯಪ್ಪ... ನಿಮ್ಮಿಷ್ಟ..ಈಗ ಇಬ್ರೂ ಹೋಗಿ ಹಲ್ಲುಜ್ಜಿಕೊಂಡು ಬನ್ನಿ.. ಬಿಸಿಬಿಸಿ ಖಾರಾಭಾತ್ ತಿಂತೀರಂತೆ..(ಅವರಿಗೆ ಮಾತಾಡಲೂ ಅವಕಾಶ ಕೊಡದೆ ಅರುಣ್ ಕೈಯಲ್ಲಿದ್ದ ಉಪ್ಪಿಟ್ಟಿನ ಪಾತ್ರೆಯನ್ನು ತೆಗೆದುಕೊಂಡು ಕಾಫಿ ಟೇಬಲ್ ಮೇಲೆ ಇಟ್ಟು)ಒಳಗಡೆ ಹೋಗಿ ಪ್ಲೇಟು ಸ್ಪೂನು ತರ್ತೀನಿ. ಹಲ್ ಗಿಲ್ ಉಜ್ಜಿದ್ದೀರಾತಾನೆ? (ಮಾತನಾಡುತ್ತಲೇ ಒಳಗೆ ಹೋಗುತ್ತಾಳೆ).

**ಉಷ:**(ಅಸಹಾಯಕಳಾಗಿ ಅವಳು ಹೋದ ಕಡೆ ನೋಡುತ್ತ) ಅರುಣ್.. ನನಗೆ ಇದೇ ಭಯ ಇದ್ದದ್ದು..ನಿಮ್ಮಮ್ಮ ನಮ್ಮ ಲೈಫ್ನ ಕಂಪ್ಲೀಟ್ ಆಗಿ ತಮ್ಮ ಕಂಟ್ರೋಲ್ಗೆ ತೊಗೊಂಡುಬಿಡ್ತಾರೆ ಅನ್ನೋ ಭಯಕ್ಕೇ ಇಷ್ಟು ಹತ್ತಿರ ಮನೆ ಮಾಡೊಕೆ ನನಗೆ ಇಷ್ಟ ಇರಲಿಲ್ಲ...

**ಅರುಣ್:** ಕಮಾನ್ ಉಷ..ಬೆಳಗಾಗೆದ್ದು ಅಷ್ಟು ಪ್ರೀತಿಯಿಂದ ಹೆಲ್ಪ್ ಮಾಡೋಕೆ ಬಂದಿದ್ದಾರೆ..

**ಉಷ:** ನಿಮಗೆ ಹೆಲ್ಪ್ ಅಂತ ಅನ್ನಿಸಬಹುದು ನನಗೆ ಇಂಟರ್ಫಿಯರೆನ್ಸ್ ಅನ್ನಿಸ್ತಾಯಿದೆ...

**ಅರುಣ್ :** ಹಾಗಾದ್ರೆ ನಿನ್ನ ಆಟಿಟ್ಯೂಡ್ ಛೇಂಜ್ ಮಾಡ್ಕೊ...

**ಉಷ:** ಆಟಿಟ್ಯೂಡ್ ಛೇಂಜ್ ಆಗ್ಬೇಕಾಗಿರೋದು ನನ್ನದಲ್ಲ ನಿಂದು..ನಿಮ್ಮ ಅಮ್ಮಂದು...

**ಅರುಣ್:** ಈಗ ಆಗಿದ್ದಾದ್ರು ಏನು ಅಂಥಾದ್ದು? ನನ್ನ ಏನ್ ಮಾಡು ಅಂತೀಯ.. after all she is my mother..

**ಉಷ:** ಅದು ನನಗೂ ಗೊತ್ತು.. ಬೇರೆ ಯಾರದ್ರು ಹೀಗೆ ನನ್ನ ಲೈಫ್ನಲ್ಲಿ ತಲೆ ಹಾಕಿದ್ರೆ..ಇಷ್ಟು ಹೊತ್ತಿಗೆ ರಿಸಾಲ್ವ್ ಮಾಡಿ ಎಷ್ಟೊ ಹೊತ್ತಾಗಿರ್ತಿತ್ತು...

**ಅರುಣ್:** ಅಲ್ಲಕಣೇ ನಿನ್ನ ಕಂಡ್ರೆ ಎಷ್ಟು ಪ್ರೀತಿ ಇದೆ ಅವರ್ಗೆ...

**ಉಷ:** (ಅಸಹನೆಯಿಂದ) ಪ್ಲೀಸ್ ಸೇವ್ ಇಟ್...ಅವರೂ ಪ್ರಿಟೆಂಡ್ ಮಾಡ್ತಾರೆ.. ನಾನೂ ಪ್ರಿಟೆಂಡ್ ಮಾಡ್ತೀನಿ. ನೀನು ಅವರ ತಮ್ಮನ ಮಗಳನ್ನ ಮದುವೆಮಾಡ್ಕೊಳ್ದೆ ನನ್ನನ್ನ ಮಾಡ್ಕೊಂಡಿದ್ದನ್ನ ಅವರು ಈ ಜನ್ಮದಲ್ಲಿ ಕ್ಷಮಿಸೊಲ್ಲ ತಿಳ್ಕೊ. ಮಾತೇನೊ ಸಕ್ಕರೆ ತರಾನೆ ಇರುತ್ತೆ.. ಅದರಲ್ಲಿ ಅಡಗಿರೋ ವ್ಯಂಗ್ಯ ನಿನಗ್ ಹೇಗ್ ಗೊತ್ತಾಗ್ಬೇಕು ಹೇಳು..after all you are a man...

**ಅರುಣ್**: What do you mean.. ಹಾಗಾದ್ರೆ ಗಂಡಸ್ರೇನು ಮನುಷ್ಯರಲ್ವೆ.... (ಎಂದು ಹೇಳುತ್ತಿರುವಂತೆ)

**ಸುಶೀಲ:** (ಒಳಗಿನಿಂದ ಒಂದು ಕೈಯಲ್ಲಿ ಪ್ಲಾಸ್ಟಿಕ್ ಬ್ಯಾಗನ್ನು ಎರಡು ಬೆರಳಿನ ತುದಿಯಲ್ಲಿ ಹಿಡಿದುಕೊಂಡು ಬಂದು ಉಷಳನ್ನು ಕುರಿತು)ಓ ಮೈ ಡಿಯರ್..ಫ್ರಿಡ್ಜ್ ಕ್ಲೀನ್ ಮಾಡಿ ತುಂಬಾ ದಿನ ಆಗಿರ್ಬೇಕು ಅಲ್ವಾ..? ಬಾಗಿಲ್ ತೆಗೆದ್‌ತಕ್ಷಣ ಗಬ್ ನಾಥ ಹೊಡೀತಿತ್ತು..

**ಉಷ:** ಅದು ಹೇಗೆ ನಾಥ ಹೊಡೆಯುತ್ತೆ ಅತ್ತೆ.. ನಿನ್ನೆ ಎಲ್ಲ ಫಸ್ಟ್‌ಕ್ಲಾಸ್ ಆಗಿತ್ತು..(ಗಡಸು ಧ್ವನಿಯಲ್ಲಿ)ಅಲ್ವ ಅರುಣ್...?

**ಅರುಣ್:** (ಆತುರಾತುರವಾಗಿ)ಹೌದೌದು.. ಫಸ್ಟ್‌ಕ್ಲಾಸ್ ಆಗಿತ್ತು.

**ಸುಶೀಲ:** (ಪಾಟ್ರೊನೈಜ಼್ ಮಾಡುವ ದನಿಯಲ್ಲಿ) ಸ್ವೀಟ್ ಹಾರ್ಟ್ಸ್... ಪಾಪ ನಿಮ್ಮ ಮೂಗಿಗೆ ಆ ವಾಸನೇನೆ ಅಭ್ಯಾಸ ಆಗಿಹೋಗಿರ್ಬೇಕು ನಮ್ಮನೇಗೆ ಹೋಗಿ ಬೇಕಿಂಗ್ ಸೋಡ ಪ್ಯಾಕೆಟ್ ತಂದಿಡ್ತೀನಿ...ಸರಿ ಹೋಗುತ್ತೆ...ಅಂದ್ಹಾಗೆ ಉಷ, ನಾನು ನಿನ್ನೆ ಕೊಟ್ಟುಕಳಿಸಿದ್ದ ಹುಳಿ ನಿನಗೆ ತುಂಬಾ ಇಷ್ಟವಾಗಿರಬೇಕು.. ಸುಮಾರು ಎರಡು ದಿನಕ್ಕಾಗೋವಷ್ಟು ಕಳಿಸಿದ್ದೆ, ಆದ್ರೆ ಡಬ್ಬ ಖಾಲಿ ಆಗಿಹೋಗಿದೇ?!

**ಉಷ:** (ಅರುಣನನ್ನು ಕೆಕ್ಕರಿಸಿಕೊಂಡು ನೋಡುತ್ತಾಳೆ, ಅವನು ತಲೆ ಕೆರೆಯುತ್ತಾ ನಿಲ್ಲುತ್ತಾನೆ) ಓ ಹುಳಿ ನೀವು ಮಾಡಿದ್ದಾ ಅತ್ತೇ? ಅರುಣ್‌ಗೆ ಯಾಕೊ ತಾನೇ ಮಾಡಿದ್ದು ಅಂತ ಭ್ರಮೆ ಬಂದಿತ್ತೂ ಅಂತ ಕಾಣುತ್ತೆ. ಈರುಳ್ಳಿ ಹಚ್ಚಿ ಕಣ್ಣೆಲ್ಲಾ ಉರೀ ಅಂತ ನನ್ನ ಕೈಲಿ ಉಪಚಾರ ಮಾಡಿಸ್ಕೊಂಡ?!

**ಸುಶೀಲ:** (ಮಗನ ಪರ ವಹಿಸಿ) ಯಾರ್ ಮಾಡಿದ್ರೆ ಏನು? ನೀನು ಲೇಟ್ ಆಗಿ ಮನೇಗೆ ಬರೋಹೊತ್ತಿಗೆ ಬಿಸಿ ಬಿಸಿ ಊಟ ಇತ್ತಲ್ಲ ಸಂತೋಷಪಡು. ಈಗ ನಾನು ಮನೇಗ್ ಹೋಗಿ ಬೇಕಿಂಗ್ ಸೋಡ ಪ್ಯಾಕೆಟ್ ತಂದ್ಬಿಡ್ತೀನಿ.

**ಅರುಣ್:** (ಉಷ ಕೋಪದಿಂದ ದುಮುಗುಟ್ಟುತ್ತಾಳೆ. ಅವಳನ್ನು ಸಮಾಧಾನ ಮಾಡಿಕೊಳ್ಳುವಂತೆ ಸನ್ನೆ ಮಾಡುತ್ತ)ಅಮ್ಮ ಫ್ರಿಡ್ಜ್ ಒಳಗಡೆ ಬೇಕಿಂಗ್ ಸೋಡ ಇಡಬೇಕೂ ಅಂತ ನಮಗೂ ಗೊತ್ತು...

**ಸುಶೀಲ:**(ವ್ಯಂಗ್ಯವಾಗಿ ನಗುತ್ತ) ಗೊತ್ತಿದ್ರೆ ಏನೋ ಪ್ರಯೋಜನ.. ತಂದಿಡಬೇಕಲ್ಲ ...(ಉಷಳನ್ನು ಉದ್ದೇಶಿಸಿ)ಈ ತರ ಸಾಮಾನನೆಲ್ಲ ಮನೇಲಿ ನಾನು ಎಕ್ಸ್‌ಟ್ರಾ ತಂದಿಟ್ಟಿರ್ತೀನಿ, ತೊಗೊಂಡು ಇನ್ನು ಐದು ನಿಮಿಷದಲ್ಲಿ ಬಂದುಬಿಡ್ತೀನಿ...(ಉಷ ಅಸಹನೆಯಿಂದ ತಲೆಯಲ್ಲಾಡಿಸುತ್ತ ಒಳಗೆ ಹೋಗುತ್ತಾಳೆ, ಸುಶೀಲ ಹೊರಗಡೆ ಹೋಗುತ್ತಾಳೆ)

**ಅರುಣ್:** ಅಮ್ಮ.. ಅಮ್ಮ.. ಉಷ.. ಉಷ...(ಎಂದು ಏನೋ ಹೇಳಲು ಹೋಗಿ ವಿಫಲನಾಗಿ, ಮತ್ತೇನೂ ಮಾಡಲು ತೋಚದೆ..ತಟ್ಟೆಗೆ ಖಾರಾಭಾತ್ ಹಾಕಿಕೊಂಡು ತಿನ್ನಲು ಆರಂಭಿಸುತ್ತಾನೆ..)

**ಉಷ:** (ರಭಸವಾಗಿ ಒಳಗಿನಿಂದ ಬಂದು ಕೈಯಲ್ಲಿದ್ದ ಬೇಕಿಂಗ್ ಸೋಡ ಪ್ಯಾಕೆಟ್‌ಗಳನ್ನು ಅರುಣ್ ಮುಂದೆ ಕುಕ್ಕಿ) ಇಲ್ನೋಡು ಒಂದಲ್ಲ.. ನಾಕು ಪ್ಯಾಕೆಟ್ ಇತ್ತು ಫ್ರಿಡ್ಜ್‌ನಲ್ಲಿ...ನಿಮ್ಮ ಅಮ್ಮಂಗೆ ಕರೆದು ಹೇಳು...(ಅವನು ತಿನ್ನುತ್ತಿರುವುದನ್ನು ನೋಡಿ ರೇಗಿಹೋಗಿ)ಇಂಥಾ ಸಮಯದಲ್ಲಿ ನಿನಗೆ ಹ್ಯಾಗ್ ತಿನ್ನೋಕೆ ಮನಸ್ ಬರುತ್ತೇ...how can you eat..?

**ಅರುಣ್:** ಅಲ್ವೇ ಅದಕ್ಕೂ ಇದಕ್ಕೂ ಎನ್ ಸಂಬಂಧ... ಖಾರಾಭಾತ್ ಆರಿಹೋಗ್ತಿತ್ತು....(ಎಂದು ಹೇಳುತ್ತಿರುವಂತೆ)

ಉಷ: My God! I can't believe this.. (ಒಳಗಡೆ ಹೊರಟು ಹೋಗುತ್ತಾಳೆ)

**ಅರುಣ್:** (ತಟ್ಟೆ ಕೆಳಗಿಟ್ಟು ಅವಳನ್ನು ಹಿಂಬಾಲಿಸಲು ಹೋಗಿ ಅನಂತರ ಮನಸ್ಸು ಒಪ್ಪಲಿಸಿ ಮತ್ತೆ ಹಿಂದಕ್ಕೆ ಬಂದು ಖಾರಾಭಾತ್ ತಿನ್ನಲಾರಂಭಿಸುತ್ತಾನೆ. ಅಡುಗೆ ಮನೆಯಿಂದ ಪಾತ್ರೆಗಳು ಬಿದ್ದ ಶಬ್ದಬರುತ್ತಿರುತ್ತದೆ)ವಿಮೆನ್.....(ಎಂದು ತಲೆಯಲ್ಲಾಡಿಸುತ್ತ ತಿನ್ನುತ್ತಿರುವಂತೆ ತೆರೆ)

(ತೆರೆ)

# ದೃಶ್ಯ ೩

(ರಸ್ತೆ ದೃಶ್ಯ. ತೆರೆ ತೆಗೆದಾಗ.. ರವಿ ಮತ್ತು ಅವನ ಗೆಳೆಯ ಸುರೇಶ್ ಟೆನ್ನಿಸ್ ರಾಕೆಟ್ ಹಿಡಿದುಕೊಂಡು ಬರುತ್ತಾರೆ).

**ಸುರೇಶ್:** (ಕರ್ಚೀಫಿನಿಂದ ಮುಖ ಒರೆಸಿಕೊಳ್ಳುತ್ತ)ಲೋ ಏನಾಗಿತ್ತೊ ನಿನಗೆ..ಒಳ್ಳೆ ಮೈಮೇಲೆ ಬಂದವನ ತರ ಚೆಚ್ಚಿ ಹಾಕ್ಬಿಟ್ಯಲ್ಲ ಬಾಲನ್ನ?

**ರವಿ:** ಸಾರಿ ಕಣಮ್ಮ.. ನನ್ನ ಮೂಡು ಅಷ್ಟು ಚೆನ್ನಾಗಿಲ್ಲ ಇವತ್ತು

**ಸುರೇಶ್:** ಸೆಕೆಂಡ್ ಸೆಟ್‌ನಲ್ಲಿ ನನ್ನ ಕಡೆಗೆ ಬಾಲ್ ಬದಲು ರಾಕೆಟ್ನೇ ಎಸೆದ್ಯಲ್ಲ ಆಗ್ಲೆ ಗೊತ್ತಾಯ್ತು..ನಿನ್ನ ಮೂಡ್ ಸರಿಯಾಗಿಲ್ಲಾ ಅಂತ.. ಯಾಕೋ.. Trouble in paradiseಆ...?

**ರವಿ:** ಪ್ಯಾರಡೈಸ್ ಎಲ್ಬಂತೋ.. ಪರದೇಶಿ ತರ ಕೂತಿದ್ದೀನಿ...

**ಸುರೇಶ್:** ಅಲ್ವೊ.. ಇರೊ ಒಬ್ಬ ಹೆಂಡ್ತೀನ ಇಂಡಿಯಾಗ್ ಕಳಿಸ್ಬಿಟ್ಟು, ಪ್ರತಿ ದಿನ ಯಾರಾದ್ರು ಊಟಕ್ಕೆ ಕರೀತಾರಾ ಅಂತ ಕಾಯ್ತಾ ಕೂತಿರೊ ನನ್ನ ಪರದೇಶಿ ಅಂದ್ರೆ ಒಪ್ಕೋಬಹುದು.., ಹೆಂಡ್ತಿ ಅಲ್ದೆ, ಅಪ್ಪ.. ಅತ್ತೆ... ಎಲ್ರು ಸುತ್ಕೊಂಡಿರೊ ನೀನು ಹೇಗೊ ಪರದೇಶಿ ಆಗ್ತಿ?

**ರವಿ:** ಲೈ..ಹೆಂಡತೀರ್ನ ಇಂಡಿಯಾಗೆ ವಿಸಿಟ್‌ಗೆ ಕಳ್ಸೋದು ಒಂದು ಲಕ್ಷುರಿ ಕಣೊ..ಲಕ್ಷುರಿ. ಎಷ್ಟು ಮಜಾ ಮಾಡ್ತಿದ್ದೀಯ ನೋಡು..ಹೇಳೋವ್ರಿಲ್ಲ.. ಕೇಳೋವ್ರಿಲ್ಲ.. ಪುಷ್ಪ ಊರಿಗ್ ಹೋದಾಗಿಂದ..ಬಡ್ಡಿಮಗನೇ ನಿನ್ನ ಮುಖದಲ್ಲಿ..ಬ್ಯಾಚುಲರ್ ಡೇಸ್ನಲ್ಲಿ ಇರ್ತಿತಲ್ಲ ಅದೇ ಖಳೆ ತಿರುಗ ಬಂದ್ಬಿಟ್ಟಿದೆ..Don't tell me you are suffering...

**ಸುರೇಶ್:** (ಖುಷಿಯಿಂದ) ರವಿ between you & me ನಿಜವಾಗ್ಲು ಮಜವಾಗಿದೆ ಕಣೋ..ನಾನು ಇಷ್ಟು ಫ್ರೀಯಾಗ್ ಇದ್ದು ಎಷ್ಟೋ ದಿನ ಆಗಿಬಿಟ್ಟಿತ್ತು. ನನ್ನ ಮಿಸ್ಟೇಕ್ ಮಾಡ್ಕೊಬೇಡ. I miss her.. but I love this fredom even more.. (ನಗುತ್ತಾನೆ)

**ರವಿ:** ನನಗೆ ಆ ಛಾನ್ಸೇ ಇಲ್ವಲ್ಲೊ..ನಮ್ಮಪ್ಪ, ಅವರಮ್ಮ.. . ಎಲ್ಲ ಈ ದೇಶದಲ್ಲೆ ಇದಾರಲ್ಲ.. ಈಗಂತು ನಮ್ಮ ಮನೇಲೆ ಝಾಂಡ ಹೂಡ್ಬಿಟ್ಟಿದ್ದಾರೆ. ನಮಗೆ ಹೆಲ್ಪ್ ಮಾಡೊಕೆ ಅಂತ ಬಂದ್ರೂ ಅಂತ ಕಾಣುತ್ತೆ...ಬಟ್ it is not working... ನನಗಂತು ಸಾಕಾಗಿ ಹೋಗಿದೆ..ಡೈವೋರ್ಸ್ ಮಾಡ್ಬಿಟ್ಟು ಎಲ್ಲಾದ್ರು ಹೊರಟ್ ಹೋಗೋಣ ಅನ್ನಿಸ್ತಿದೆ.

**ಸುರೇಶ್:** ಏಯ್.. ಏಯ್.. ಅಷ್ಟೊಂದು ದುಡುಕ್ಬೇಡ ಕಣೋ.. ಜಗಳ ಯಾವ ಗಂಡ ಹೆಂಡತೀರ್ಗೆ ಇರೊಲ್ಲ ಹೇಳು.. ನನ್ಗೂ ಮದುವೆ ಆದ ಹೊಸದರಲ್ಲಿ ಹೀಗೆ ಆಗ್ತಿತ್ತು.. ಎಷ್ಟೋ ಸಲ ಯಾಕ್ ಕೋಪ ಬಂದಿದೇ ಅಂತ ಕೂಡ ಗೊತ್ತಾಗ್ತಿರಲಿಲ್ಲ.

**ರವಿ:** ಹುಂ.. ಕೂತ್ರೆ ನಿಂತ್ರೆ ಕೋಪಿಸ್ಕೋತಾಯಿದ್ರೆ ಏನ್ಮಾಡೊಕಾಗುತ್ತೆ?

**ಸುರೇಶ್:** ಅವರ್ಗೆ ಕೋಪ ಬರದೇ ಇರೋತರ ನೋಡ್ಕೊಬೇಕುಕಣಯ್ಯ, ಹೆಂಡತಿ ಜೊತೆ ಆರ್ಗ್ಯು ಮಾಡೋವಾಗ..ನಿಂದು ತಪ್ಪಾಗಿದ್ರೆ ಒಪ್ಕೊ...ನಿಂದು ಸರಿ ಅನ್ಸಿದ್ರೆ ಬಾಯ್ಮುಚ್ಕೊ... ಆಗ್ ನೋಡು ಜೀವನ ಸ್ವರ್ಗ ಆಗ್ಬಿಡುತ್ತೆ.

**ರವಿ:** ಅದು ಹೇಳೋಷ್ಟು ಸುಲಭ ಅಲ್ಲ.. ನಂದೂ ಬಿಸಿ ರಕ್ತ..

**ಸುರೇಶ್:** ನಿನ್ನ ಬಿಸಿ ರಕ್ತ ಹರಿಸೋಕೆ ಟೆನ್ನಿಸ್ ಕೋರ್ಟು..ನಾನೂ ಇದ್ದೀವಲ್ಲೊ ....ನೊಡು ಮರಿ ಇವತ್ತು ಒಂದು ಕೆಲಸ ಮಾಡು.. ಮನೇಗೆ ಹೋದ ತಕ್ಷಣ turn on your pre-marriage charm, ಗೀತ ಹೇಗೇ ಕಾಣಿಸ್ತಿರ್ಲಿ.. ಕಾಂಪ್ಲಿಮೆಂಟ್ ಕೊಡು. ಲಂಚ್‌ಗೆ ಹೋಗೋಣ ಬಾ ಅನ್ನು. ಬಲವಂತ ಮಾಡು. ನಿನ್ನ male egoನ ಕಟ್ಟಿಟ್ಟು ಸಾರಿ ಹೇಳು.. ಆಗ್ ನೋಡು ಅಮ್ಮಾವ್ರ ಮೂಡ್ ಹೇಗ್ ಚೇಂಜ್ ಆಗುತ್ತೆ ಅಂತ..

**ರವಿ:** ವೆಲ್...ಟ್ರೈ ಮಾಡಂತು ನೋಡ್ತೀನಿ.. anyway ನಿನ್ನ ಮನೇಗೆ ಲಂಚ್ ತಿನ್ನೋಕೆ ಕರಕೊಂಡು ಹೋಗೋಣಾ ಅಂತಿದ್ದೆ. ಆದ್ರೆ ನೀನ್ ಬಂದ್ರೆ ನಾನು ಗೀತನ್ನ ಪೂಸಿ ಹೊಡೆಯೋಕೆ ಆಗೊಲ್ಲ.. ಆದ್ರಿಂದ ನೀನು ಬೇರೆ ಕಡೆ ಲಂಚ್ ಗಿಟ್ಸು.

**ಸುರೇಶ್:** ತುಂಬ Thanks ಕಣಯ್ಯ. ಎಂಥ ಗುರುದಕ್ಷಿಣೆ ಕೊಡ್ತೀಯ ನೋಡು...ಆದ್ರೆ ಈ ಸೆಟ್‌ನಲ್ಲಿ Advantage ನನ್ನದೇ ಯಾಕೇಂದ್ರೆ ನೀವಿಬ್ರು ಸರಿ

ಹೋದ್ರೆ ನೀನು ನನ್ನ ಟೆನ್ನಿಸ್ ಕೋರ್ಟ್‌ನಲ್ಲಿ Abuse ಮಾಡೋದು ತಪ್ಪುತ್ತೆ ಸದ್ಯ..ನಡಿ ... (ಇಬ್ಬರೂ ನಗುತ್ತ ಹೊರಡುತ್ತಾರೆ..ಅಷ್ಟರಲ್ಲಿ ಅರುಣ್ ಜಾಗ್ ಮಾಡುತ್ತಾ ಬಂದು ಸುರೇಶ್‌ಗೆ ಡಿಕ್ಕಿ ಹೊಡೆದು, ಅವರಿಬ್ಬರನ್ನೂ ಗಮನಿಸದೆ ಹೋಗುತಿದ್ದಾಗ)

**ಸುರೇಶ್:** ಲೋ..ಲೋ..ಯಾವನ್ನೋ ಇವ್ನು.. ಅರುಣ್ ಮೆತ್ತಗೋ.. ಸ್ವಲ್ಪ ನೋಡ್ಕೊಂಡು ಓಡ್ಬಾರ್ದೇನೊ....ಇವನು ರಾಕೆಟ್ನೇ ಮೈಮೇಲೆ ಬಿಸಾಕ್ತಾನೆ.. ನೀನು ಡಿಕ್ಕಿ ಹೊಡೆದು ಬೀಳ್ಸೋಕೆ ನೋಡ್ತೀಯ.. ಎಲ್ಲಿಂದ ಸಿಕ್ಕಿದ್ದೀರೊ ಇಂಥಾ ಸ್ನೇಹಿತರು ನನಗೆ?

**ರವಿ:** (ನಗುತ್ತ) ಇವತ್ತು ನಿನ್ನ ಗ್ರಹಚಾರ ಸರಿ ಇಲ್ಲ ಕಣೊ..

**ಅರುಣ್:** ಓ ನೀವೇನ್ರೋ? ಸಾರಿ ನಾನು ಯಾವುದೋ ಜ್ಞಾನದಲ್ಲಿದ್ದೆ.. ನಿಮ್ಮನ್ನ ನೋಡಲಿಲ್ಲ...ಮನಸ್ ಬೇರೆ ಸರಿಯಾಗಿಲ್ಲ...

**ರವಿ ಮತ್ತು ಸುರೇಶ್:** (ಒಬ್ಬರೊನ್ನೊಬ್ಬರು ಅರ್ಥಗರ್ಭಿತವಾಗಿ ನೋಡಿಕೊಂಡು ಒಟ್ಟಿಗೆ, ತಲೆ ಕುಣಿಸುತ್ತ)ಟ್ರಬಲ್ ಇನ್ ಪ್ಯಾರಡೈಸ್!

**ಸುರೇಶ್:** ನಿನಗೂ ಹೆಂಡತಿ ತೊಂದ್ರೆಯೇನಯ್ಯಾ..?

**ಅರುಣ್ :** ನಿನಗೂ ಅಂದ್ರೆ..? ನೀವು ಸೇಯ್ಲಿನ್ಗ್ ಇನ್ ದ ಸೇಮ್ ಬೋಟಾ?

**ಸುರೇಶ್:** ಸ್ವಲ್ಪ ಹೆಚ್ಚು ಕಮ್ಮಿ..ನನಗೆ ವಿರಹದಿಂದ ತೊಂದರೆ.. ರವಿಗೆ ವಿರಸದಿಂದ ತೊಂದರೆ..

**ಅರುಣ್:** ನನಗೆ ವಿಪರ್ಯಾಸದಿಂದ ತೊಂದ್ರೆ...ಅಂದ್ರೆ ಹೆಂಡತಿ ಒಬ್ಬಳಿಂದ ಮಾತ್ರ ಅಲ್ಲ.. ನಮ್ಮಮ್ಮಂದೂ ಸೇರ್ಕೊಂಡಿದೆ.

**ರವಿ:** ಏ ನಿಮ್ಮಮ್ಮ ಎಷ್ಟು ಒಳ್ಳೇವ್ರು.. ಅವರ advice ಕೇಳೊಕೆ ಊರವ್ರೆಲ್ಲಾ ಬರ್ತಾರೆ....ಅವರಿಂದ ನಿನಗೇನೊ ತೊಂದ್ರೆ? ನಿತ್ಯ ಬಿಸಿ ಬಿಸಿ ಊಟ ಬೇರೆ ಸಪ್ಲೈ ಮಾಡ್ತಾರಂತೆ ನಿಮಗೆ?

**ಅರುಣ್:** ಅದೇ ಬಂದಿರೋದು ತಾಪತ್ರಯ ಕಣೊ. ನಮ್ಮಮ್ಮ ನಮಗೆ ಸಹಾಯ ಆಗ್ಲೀ ಅಂತ ಮಾಡೋಲ್ಲ ತಾನು ಎಷ್ಟು 'ಇನ್ ಕಾಂಪಿಟೆಂಟ್ ' ಅಂತ ತೋರ್ಸೋಕೆ ಹಾಗೆಲ್ಲ ಮಾಡ್ತಿದ್ದಾರೆ ಅಂತ ಉಷಳ ಆರ್ಗ್ಯುಮೆಂಟ್. ಅವರು ತಂದುಕೊಟ್ಟಿದ್ದನ್ನ

ನಾನು ತಿಂದ್ರೆ ಅವಳಿಗೆ ಕೋಪ.. ತಿಂದು ಹೊಗಳಿಬಿಟ್ರಂತು.. ದೇವ್ರೇ ಗತಿ..ಅಮ್ಮಾನು ಸ್ವಲ್ಪ ಅತೀ ಮಾಡ್ತಾರೇಂತ ಇಟ್ಕೊ. ಮಧ್ಯದಲ್ಲಿ ನಾನು ಸಿಕ್ಕಿ ಹಾಕ್ಕೊಂಡಿದ್ದೀನಿ..

**ಸುರೇಶ್:** (ರವಿಯನ್ನು ಕುರಿತು) ಇವಂದು ನಿನ್ನದಕ್ಕಿಂತ ಸ್ವಲ್ಪ ಕಾಂಪ್ಲಿಕೇಟೆಡ್ ಪ್ರಾಬ್ಲಮ್ ಕಣೋ...ಖಾಲಿ ಹೊಟ್ಟೇಲಿ ಸಾಲ್ವ್ ಮಾಡೋಕೆ ಆಗೊಲ್ಲ.. ನಡಿಯೊ ಅರುಣ್, ಇವನ ಮನೇಲಂತು ಇವತ್ತು ಲಂಚ್ ಗಿಟ್ಟೊಲ್ಲ.. ನಿನ್ನ ಮನೇಲಿ ನಿಮ್ಮ ಅಮ್ಮ ಕೊಟ್ಟಿರೋದು ಇರ್ಬೇಕಲ್ಲ.. ನೀನ್ ತಿಂದ್ರೆ ಉಷಂಗೆ ಕೋಪ ಬರುತ್ತೆ.. ನನಗ್ ಕೊಟ್ಟಿಡು ಪ್ರಾಬ್ಲಂ ಸಾಲ್ವ್ ಆಗ್‌ಹೋಗುತ್ತೆ...ನಡಿ ನಡಿ ಹೊಟ್ಟೆ ಚುರಕ್ ಅಂತಿದೆ.

**ರವಿ:** (ನಗುತ್ತ) ಅಲ್ಲ ಗಂಡ ಹೆಂಡಿರ ಜಗಳದಲ್ಲಿ ಕೂಸು ಬಡವಾಯ್ತು ಅಂತಾರೆ.. ಇವನು ಗುಂಡ್ಗಾಗ್ತಾನೆ ..ಅಷ್ಟೆ...ನಡೀರಿ ನಡೀರಿ.. (ಮೂವರೂ ನಗುತ್ತ ಹೊರಡುತ್ತಾರೆ)

(ತೆರೆ)

## ದೃಶ್ಯ ೪

(ಗೀತ ಮತ್ತು ರವಿಯ ಮನೆ. ಆಧುನಿಕ ಯುವ ಕುಟುಂಬದ ಲಿವಿಂಗ್ ರೂಮ್. ಗೀತ ಸೆಲ್ ಫೋನ್‌ನಲ್ಲಿ ಮಾತಾಡುತ್ತಿರುತ್ತಾಳೆ)

**ಗೀತ:** ಹಾಗಲ್ಲ ಕಣೆ. ನಿನ್ನ avoid ಮಾಡ್ತಿಲ್ಲ ಉಮ, ನಮ್ಮ ತಾಯಿ, ಮಾವ ಎಲ್ರು ಬಂದಿದ್ದಾರೆ. ಅದಕ್ಕೆ ಬಿಜ಼ಿ ಆಗಿದ್ದೀನಿ ಅಷ್ಟೆ.... ಷೂರ್..ಷೂರ್.. ಕರ್ಕೊಂಡು ಬರ್ತೀನಿ.. ಒಂದ್ನಿಮಿಷ ಇರ್ತೀಯ.. ನನಗೆ ಇನ್ನೊಂದು ಕಾಲ್ ಬರ್ತಾ ಇದೆ. (ಫೋನ್ ದೂರ ಹಿಡಿದು, ತನಗೆ ತಾನೆ)ಅಬ್ಬಬ್ಬ..ಎಷ್ಟೊತ್ತಾದರು ಮಾತು ನಿಲ್ಲಿಸೊಲ್ಲ ಮಹರಾಯ್ತಿ.. ಈಮೈಲ್ ಕಳ್ಸಿದ್ದು ತಲುಪ್ತಾ ಅಂತ ಕೇಳೋಕೆ ಫೋನ್ ಮಾಡಿದ್ದಾಳೆ! ಸುಳ್ಳು ಹೇಳ್ದೆ ಬೇರೆ ವಿಧಿನೇ ಇಲ್ಲ(ಮತ್ತೆ ಫೋನ್‌ನಲ್ಲಿ)ಉಮ ನಾನು ಆ ಕಾಲ್ ತೊಗೊಳ್ಳೇ ಬೇಕು ಕಣೆ. ನಿನ್ನ ಹತ್ರ ಆಮೇಲೆ ತಿರುಗ ಮಾತಾಡ್ತೀನಿ....ಓಕೇ? ಬೈ... (ಫೋನ್ ಮುಚ್ಚಿ) ಅಬ್ಬ ಒಂದಲ್ಲ ಎರಡಲ್ಲ ಪ್ರಾಬ್ಲಮ್ಮು.. ನನಗೂ ರವಿಗೂ ದಿನಬೆಳಗಾದ್ರೆ ಜಗಳ...(ಮತ್ತೆ ಸೆಲ್ ರಿಂಗ್ ಆಗುತ್ತೆ) ಓಹ್ ಗಾಡ್! (ಅಸಹನೆಯಿಂದ) ಹಲೋ...ಓ ಉಷ, ಸಾರಿ ಕಣೆ..ಇಲ್ಲಾಮ್ಮ ..ನಿನ್ನ ಮೇಲೆ ಕೋಪ ಇಲ್ಲ, ಇಷ್ಟೊತ್ತೂ ಆ ಉಮ ಫೋನ್ ಮಾಡಿ ತಲೆ ತಿಂದ್ ಹಾಕಿದ್ಲು ತಿರುಗ ಅವಳೇ ಇರಬೇಕೂ ಅಂತ ಸ್ವಲ್ಪ ಜೋರಾಗಿ ಹಲೋ ಅಂದೆ.. ಸಾರೀಮ್ಮ..(ಸ್ವಲ್ಪ ಹೊತ್ತು ಕೇಳಿ) ಧಾರಾಳವಾಗಿ ಬಾ.. ಯಾವಾಗ ಬರ್ತೀ..ಏನು ನಮ್ಮ ಡ್ರೈವೇಯಿಂದ ಕಾಲ್ ಮಾಡ್ತಿದ್ದೀಯ.. ಪೆದ್ದಿ ಡೋರ್ ಬೆಲ್ಲೇ ಮಾಡ್ಬೋದಾಗಿತ್ತಲ್ಲೆ... ಇರು ಬಾಗಲ್ ತೆಗೀತೀನಿ .. (ಹೊರಗೆ ಹೋಗಿ ಇಬ್ಬರೂ ಜೊತೆಯಾಗಿ ಒಳಗೆ ಬರುತ್ತಾರೆ)

**ಉಷ:** (ಕೆಲವು ಡಿವೀಡಿಗಳನ್ನು ಕೊಡುತ್ತ)ತೊಗೊ ನಿನ್ನ ಹತ್ರ ಬಾರೋ ಮಾಡಿದ್ದ ಡಿವಿಡಿಗ್ಳು.... ಸಾರಿ ಲೇಟ್ ಆಯ್ತು ವಾಪಸ್ ಕೊಡೋದು..

**ಗೀತ:** ಏನು ಪರ್ವಾಗಿಲ್ಲ..ಇದೇನೆ ಶನಿವಾರ ಇಷ್ಟು ಬೇಗ ಬೆಳಗಾಗಿ ಹೋಗಿದೆ ನಿನಗೆ? ಸೂರ್ಯ ಯಾವ್ಕಡೆ ಹುಟ್ಟಿದ?

**ಉಷ:** ಸೂರ್ಯನಾದ್ರು ನನ್ಪಾಡಿಗೆ ನನ್ನ ಬಿಟ್ಟಾನು.. ಆದ್ರೆ ನಮ್ಮತ್ತೆ ಬಿಡಬೇಕಲ್ಲ.. ಬೆಳಗೆದ್ದು ತಮ್ಮ ಮುದ್ದಿನ ಮಗಂಗೆ ಬಿಸಿಬಿಸಿ ಖಾರಾಭಾತ್ ಓಡಕೊಂಡು ಬಂದ್ಬಿಟ್ರು ...ಮಗ ಇರೋ ದಪ್ಪ ಸಾಲ್ದು ಅಂತ. ಅರುಣ್ ಅಂತೂ ಯಾವತ್ತೂ ಕಂಡೇ ಇಲ್ಲವೇನೋ ಅಂತ ಬಾಯ್ ಬಾಯ್ ಬಿಡ್ತಿದ್ದ..ನನಗೆ ಎಷ್ಟು ರೇಗ್ ಹೋಯ್ತು ಗೊತ್ತಾ? ಈ ಗಂಡಸ್ರು ಯಾಕ್ ಹಿಗಾಡ್ತಾರ್ಯೇ?

**ಗೀತ:** ಅಲ್ವೇ ಬೆಳಗಾಗೆದ್ದು ಯಾರಾದ್ರು ಬಿಸಿಬಿಸಿ ತಿಂಡಿ ತಂದ್ಕೊಟ್ರೆ ಯಾರ್ ತಿನ್ನೊಲ್ಲ ಹೇಳು. ಈ ಡಯೆಟ್ ಗಲಾಟೆ ಇಲ್ಲದಿದ್ದಿದ್ರೆ ನಾವೂ ಚೆನ್ನಾಗಿ ಹೊಡಿತಿದ್ವಿ.. ಹಾಗಿರೋವಾಗ ಅಷ್ಟೊಂದು ಬಾಯಿಚಪಲ ಇರೊ ಗಂಡಸರು ಬಿಡ್ತಾರಾ? ನಿನ್ನ ನಿಜವಾಗ್ಲೂ ಬಾದರ್ ಮಾಡ್ತಿರೋದು ಏನ್ ಹೇಳು. ನಿಮ್ಮತ್ತೆಯಂತು ವಿಮೆನ್ಸ್ ಲಿಬ್ ಸಪೋರ್ಟರ್ ಬೇರೆ ಅಲ್ವೇನೇ?

**ಉಷ:** ಅದೇನೋ ನಿಜ. ಆ ವಿಚಾರದಲ್ಲೆಲ್ಲ ಅವರನ್ನ ಬಿಟ್ಟರಲ್ಲ.. ಆದ್ರೆ ನಂಪಾಡಿಗೆ ನಾವು ಇರೋಕೆ ಬಿಡೊಲ್ಲ. ಎಲ್ಲಾದಕ್ಕು ತಲೆ ಹಾಕ್ತಾರೆ. ಈಗ್ಲೂ ಅರುಣ್‌ನ ಮುದ್ದು ಮಾಡೀ ಮಾಡೀ ಕೆಡಸ್ ಹಾಕ್ಬಿಡ್ತಿದ್ದಾರೆ.

**ಗೀತ:** ಅಯ್ಯೋ ಕೆಡಬೇಕಾದವ್ರು.. ಹೇಗಿದ್ರು ಕೆಡತಾರೆ ಬಿಡು ಅಮ್ಮಂದ್ರೇ ಇರಬೇಕಾಗಿಲ್ಲ.. ಈಗ ರವೀನ ನೋಡು.. ಕೆಟ್ಟು ಕುಲಗೆಟ್ಟು ಕೂತಿದ್ದಾನೆ.. ಅವರಮ್ಮ ಹೋಗಿ ಆಗ್ಲೇ ೬ ವರ್ಷ ಆಗ್ತಾ ಬಂತು.

**ಉಷ:** ಕೋರ್ಟ್‌ಷಿಪ್ ಮಾಡೋವಾಗಿರೋ ಛಾರ್ಮ್ ಎಲ್ಲಿ ಹೊರಟು ಹೋಗುತ್ತೋ ಮದುವೆ ಆಗಿ ಒಂದು ಐದು ವರ್ಷ ಆದ್‌ತಕ್ಷಣ?

**ಗೀತ:** ನೋಡು ಕೋರ್ಟ್‌ಷಿಪ್ ಮಾಡೋವಾಗ ಲವ್ವು ನಮ್ಮನ್ನ ಬ್ಲೈಂಡ್ ಮಾಡಿರುತ್ತೆ ಅವರ ಕಿವಿ ಚುರುಕಾಗಿರುತ್ತೆ.. ಮದುವೆ ಆದ್ಮೇಲೆ ನಮ್ಮ ದೃಷ್ಟಿ ಚುರುಕಾಗುತ್ತೆ.. ಅವರ ಕಿವಿ ಮಂದವಾಗಿಬಿಡುತ್ತೆ. ನಮ್ಮ ಬ್ಲೈಂಡ್ನೆಸ್ಸ್ ಟೆಂಪೊರರಿ, ಆದ್ರೆ ಅವರ ಕಿವುಡು ಪರ್ಮನೆಂಟು....ನನಗೂ ರವೀಗು ಅದೇ ಪ್ರಾಬ್ಲಮ್ಮು. ದಿನ ಬೆಳಗಾದ್ರೆ ಜಗಳ. ಈ ಮಧ್ಯ ನಮ್ಮ ಅಮ್ಮ..ಅವರಪ್ಪ ಇಬ್ರೂ ಬಂದು ಕೂತಿದ್ದಾರೆ.

ತಾವಿರೋದ್ರಿಂದ ನಾವಿಬ್ರು ಸರಿ ಹೋಗ್ತೀವಿ ಅಂದುಕೊಂಡಿದ್ದಾರಲ್ಲ..ಅದಕ್ಕಿಂತ ಪೆದ್ದುತನ ಇನ್ನೊಂದಿದ್ಯಾ..?(ಕೇಟಿ ಪ್ರವೇಶಿಸಿ ಅವರ ಮಾತನ್ನು ಕೇಳಿಸಿಕೊಳ್ಳುತ್ತಾ ನಿಲ್ಲುತ್ತಾಳೆ).They are annoying me more than him....

**ಕೇಟಿ:**: (ಮುಂದೆ ಬಂದು) Who is annoying you honey.. (ಉಷಳನ್ನು ನೋಡಿ) ಹಾಯ್ ಉಷ.. ನೀನು ಯಾವಾಗ ಬಂದೆ.

**ಉಷ:** ಒಂದು ಹತ್ತು ನಿಮಿಷ ಆಯ್ತು ಆಂಟಿ.. ಇನ್ನೇನು ಹೊರಡ್ತಿದ್ದೆ. ನೀವು ಹೇಗಿದ್ದೀರ?

ಕೇಟಿ: ಚೆನ್ನಾಗಿದ್ದೀನಿ. How about AruN and your in-laws?

**ಉಷ:** ಎಲ್ಲ ಚೆನ್ನಾಗಿದ್ದಾರೆ ಆಂಟಿ..ನೀವು ಊರಿಗ್ ಹೋಗೋಕೆ ಮೊದಲು ನಮ್ಮ ಮನೆಗೆ ಒಂದ್ಸಲ ಬನ್ನಿ ಆಂಟಿ. ಗೀತ ಖಂಡಿತ ಕರ್ಕೊಂಡ್ ಬಾರೆ..

**ಗೀತ:** ಷೂರ್.. ಅದಕ್ಕೇನಂತೆ..

**ಉಷ:** ನಾನಿನ್ನು ಬರ್ತೀನಿ.. nice seeing you aunty.. bye..

**ಗೀತ ಕೇಟಿ:**(ಒಟ್ಟಿಗೆ) ಬಯ್.....( ಉಷ ಹೊರಗೆ ಹೋಗುತ್ತಾಳೆ)

**ಕೇಟಿ:** now tell me. ಯಾರು ನಿನ್ನ ಅನಾಯ್ ಮಾಡಿದ್ದು.. Ravi or his father..tell me honey I will talk to them .

**ಗೀತ:** Oh God mom.. ನೀನು ಯಾರ ಹತ್ರಾನು ಮಾತಾಡ್ಬೇಡ.. please leave them alone..

**ಕೇಟಿ:** ನಿನಗೆ ಮೆನ್ ವಿಚಾರ ಗೊತ್ತಿಲ್ಲ ಗೀತ

**ಗೀತ:** ನಿನಗೆ ತುಂಬ ಗೊತ್ತು, ಅಲ್ವ? look who is talking...

**ಕೇಟಿ:** What does that mean...? ನಿನ್ನ ಫೇಯಿಲ್ಡ್ ಮ್ಯಾರೇಜ್‌ಗೆ ನನ್ನ ಡೈವೋರ್ಸ್‌ನ ಬ್ಲೇಮ್ ಮಾಡ್ತಿದ್ದೀಯ?

**ಗೀತ:** ಮಾಮ್, listen.. ನನ್ನ ಮದುವೆ is not a failure yet..But ನೀನು ಹೀಗೆ interfere ಮಾಡ್ತಿದ್ರೆ... it will be one soon....My God.. ನನಗಿಲ್ಲಿ ಇನ್ನೊಂದು ಕ್ಷಣಾನೂ ಇರೋಕಾಗೊಲ್ಲ ...(ಟೇಬಲ್ ಮೇಲಿದ್ದ ಹ್ಯಾಂಡ್ ಬಾಗ್ ತೆಗೆದುಕೊಂಡು ಹೊರಗಡೆ ಬಿರಬಿರ ಹೊರಟು ಹೋಗುತ್ತಾಳೆ).

**ಕೇಟಿ:** (ಅಸಹಾಯಕಳಂತೆ ಅತ್ತಿತ್ತ ತಿರುಗುತ್ತಾಳೆಒಂದು ಐಡಿಯ ಹೊಳೆಯುತ್ತದೆ) ...Wow. Now I know how to set them right..I & Jay have to get on their nerves...

**ಜಯರಾಮ:** (ಹೊರಗಿಂದ ಹಿಂದೆ ಹಿಂದೆ ನೋಡಿಕೊಂಡು ಬರುತ್ತ) ಹಾಯ್ ಕೇಟೀ... ಗೀತ ಯಾಕೆ ಹಾಗ್ ಓಡಿ ಹೋಗ್ತಿದ್ಳು?..ನಾನು ಕರದ್ರೆ ಹಿಂದೆ ತಿರುಗಿ ಕೂಡ ನೋಡ್ಲಿಲ್ಲ

**ಕೇಟಿ:** ವೆಲ್, ಅವಳನ್ನ ನಾವಿಬ್ಬರೂ annoy ಮಾಡ್ತೀವಂತೆ.

**ಜಯರಾಮ್:** (ಆಶ್ಚರ್ಯದಿಂದ) ಏನು ?!

**ಕೇಟಿ:** Yes ..But It is good. ನಾವು ಅನಾಯ್ ಮಾಡಿದಷ್ಟೂ Ravi looks better for her. So try your best to get on her nerves.

**ಜಯರಾಮ:** ಏನ್ ಹೇಳ್ತಿದೀರ. ನನಗೆ ಹಾಗೆಲ್ಲ ಇನ್ನೊಬ್ಬರನ್ನ annoy ಮಾಡೋದಕ್ಕೆ ಆಗೊಲ್ಲ

**ಕೇಟಿ:** What a sweet man you are. where were you when I was looking for one?

**ಜಯರಾಮ:** (ನಗುತ್ತಾ) ಹಿಂದಿನ ಮಾತ್ ಯಾಕೆ ಈಗಿದ್ದೀನಲ್ಲ

**ಕೇಟಿ:** There is an idea (ಇಬ್ಬರೂ ಜೋರಾಗಿ ನಗುತ್ತಾರೆ)

**ರವಿ:** (ಪ್ರವೇಶಿಸಿ) ಪರ್ವಾಗಿಲ್ಲ...ಈ ಮನೇಲಿ ಸದ್ಯ ನೀವಾದ್ರೂ ಖುಷಿಯಾಗಿದ್ದೀರಲ್ಲ

**ಜಯರಾಮ:** ಅಯ್ಯೊ ನಮ್ಮನ್ನ ಬಿಡು ..ನೀನೂ ಗೀತ ಖುಷಿಯಾಗಿರಬೇಕುಕಣಯ್ಯ ಅದು ಮುಖ್ಯ.

**ಕೇಟಿ:** (ರವಿಯ ಹತ್ತಿರ ಬಂದು) Ravi, I know that you are a good man and also know that you both love each other

**ರವಿ:** ಅದು ನಿಮಗೆ ತಿಳಿದು ಏನ್ ಪ್ರಯೋಜನ ನಿಮ್ಮ ಮಗಳಿಗೆ ತಿಳೀತಿಲ್ವಲ್ಲ

**ಕೇಟಿ:** She knows it too ಆದ್ರೆ ಮೆನ್‌ಗೂ ವಿಮೆನ್‌ಗೂ ಫಂಡಮೆಂಟ್ಟಲ್ ಪ್ರಾಬ್ಲಂ ಈಸ್ ಇನ್ communication.

**ರವಿ:** ಆ problem ನಮಗಿಲ್ಲ. ಇಬ್ರಿಗೂ ಕನ್ನಡ, ಇಂಗ್ಲಿಷ್, ಹಿಂದಿ ಎಲ್ಲ ಚನ್ನಾಗಿ ಬರುತ್ತೆ.

**ಕೇಟಿ:** Languageಗೂ ಅದಕ್ಕೂ ಏನು ಸಂಬಂಧ ಇಲ್ಲ... It is the interpretation of the words.

**ರವಿ:** ಅಂದ್ರೆ?

**ಕೇಟಿ:** Let me give you some examples.. Women ಎಷ್ಟೋ ಸಲ 'Yes' ಅಂದಾಗ we mean 'No'.

**ರವಿ:** that is Absurd. ಅದು ನಮಗೆ ಹೇಗೆ ಗೊತ್ತಾಗ್ಬೇಕು

**ಜಯರಾಮು:** ಅದೊಂದೆ word ಅಲ್ಲಕಣಯ್ಯ ಅಂಥಾದ್ದು ಇನ್ನೂ ಬೇಕಾದಷ್ಟಿದೆ. ಕೇಟಿ ಇನ್ನೂ ಕೆಲವು ಆ ತರ words ಹೇಳಿ

**ಕೇಟಿ:** Okay ... next ವರ್ಡು 'Fine'!

**ಜಯರಾಮು:** ಹೆಂಗಸರು ಯಾವ್ದಕಾದ್ರು 'Fine' ಅಂತಂದ್ರೆ ನೀನು ಬಾಯ್ಮುಚ್ಚು ಅಂತ...ಅಲ್ವ ಕೇಟಿ?

**ಕೇಟಿ:** Exactly.. ಇನ್ನೊಂದು 'Go Ahead' The meaning of this varies depending on the tone and the arch of the eyebrows.

Go ahead....go ahead...go ahead (ಬೇರೆ ಬೇರೆ ಧ್ವನಿಗಳಲ್ಲಿ, ಬೇರೆ ಬೇರೆ ಭಂಗಿಗಳಲ್ಲಿ ನಿಂತು ತೋರಿಸುತ್ತಾಳೆ, ರವಿ ಮತ್ತು ಜಯರಾಮು ಬೆರಗಿನಿಂದ ನೋಡುತ್ತಿರುತ್ತಾರೆ) Same thing goes with the word 'Thanks' and Watch out when we say 'Thanks a lot'.

**ರವಿ:** 'Wow' ಹೆಂಗಸರು ಮಾತಾಡೋದೆ ಜಾಸ್ತಿ ಅಂದ್ಕೊತಾ ಇದ್ದೆ. ಆದರೆ ಅವರ wordsಗೆ ಬೇರೆ ಬೇರೆ ಅರ್ಥ ಇರುತ್ತೆ ಅಂತ ಗೊತ್ತೆ ಇರಲ್ಲಿಲ್ಲ!

**ಕೇಟಿ:** with all this there is one magical word, ಆದ್ರೆ.. ನಿಮ್ಮ ಮೇಲ್ ಈಗೋ ಅದನ್ನ use ಮಾಡೋಕೆ ಬಿಡೊಲ್ಲ. That word is 'Sorry'.

**ಜಯರಾಮು:** Correct ನೀನು 'Sorry', 'please' ಆಮೇಲೆ 'I Love you' ಈ ಮೂರು ಮಂತ್ರಗಳನ್ನ ಜಾಸ್ತಿ use ಮಾಡಿದಷ್ಟೂ ಹೆಂಗಸರನ್ನ ಗೆಲ್ಲೋದು ಸುಲಭ.

**ಕೇಟಿ:** (ಮೆಚ್ಚುಗೆಯಿಂದ) My God...What Wisdom! Jay...you are incredible!

**ಜಯರಾಮು:** (ಹೆಮ್ಮೆಯಿಂದ ಬೀಗುತ್ತ) ಥಾಂಕ್ಯು.. ಥಾಂಕ್ಯು.

**ರವಿ:** ಓಕೆ...ಓಕೆ...ಗರಾಜ್ ಡೋರ್ ತೆಗೆಯೋತರ ಇದೆ. ಗೀತ ಬಂದಿರಬೇಕು ನೀವಿಬ್ರು ಸ್ವಲ್ಪ ಹೊರಗೆ ಹೋಗ್ತೀರ? back Yardಗಾದ್ರು ಪರವಾಗಿಲ್ಲ...ನಾನು ಗೀತ ಹತ್ರ ಮಾತಾಡ್ಬೇಕು.

(ಕೇಟಿ ಮತ್ತು ಜಯರಾಮ್ ಓಕೆ..ಓಕೆ ಎಂದು ಅತುರಾತುರವಾಗಿ ಹೊರಗೆ ಹೋಗುತ್ತಾರೆ)

**ರವಿ:** (Pocket ಇಂದ Comb ತೆಗೆದು ಬಾಚಿಕೊಂಡು ಅಲ್ಲೆ ಇದ್ದ ಕನ್ನಡಿಯಲ್ಲಿ ಮುಖ ಒರಸಿಕೊಂಡು ತನಗೆ ತಾನೆ Sorry...Please...I Love you...3 mantras..Okay...Okay..ಎಂದು ಹೇಳಿಕೊಳ್ಳುತ್ತ...ಕುರ್ಚಿಯಲ್ಲಿ ಕುಳಿತು ಓದುತ್ತಿರುವಂತೆ pretend ಮಾಡುತ್ತಾನೆ. ಗೀತ ಬರುತ್ತಾಳೆ, ರವಿಯನ್ನು ನೊಡಿಯೂ ನೋಡದಂತೆ ಮಾಡಿ Table ಮೇಲಿದ್ದ Mail ನೋಡತೊಡಗುತ್ತಾಳೆ).

**ರವಿ:** ಹಾಯ್ ಗೀತ ಎಲ್ಹೋಗಿದ್ದೆ?

**ಗೀತ:** (ಗಡುಸಾಗಿ)ಹೊರಗೆ

**ರವಿ:** ಹೊರಗೆ? ಏನ್ಮಾಡ್ದೆ?

**ಗೀತ:** (ಅದೇ ದ್ವನಿಯಲ್ಲಿ) ಕೆಲ್ಸ

**ರವಿ:** (ಆಶ್ಚರ್ಯದಿಂದ) ಇದೇನು ಸೆಲ್ವಾರ್ ಕಮೀಜ್ ಹಾಕ್ಕೊಂಡ್ ಕೆಲ್ಸಕ್ಕೆ ಹೋಗಿದ್ಯ?

**ಗೀತ:** (ಕೋಪದ ಧ್ವನಿಯಲಿ) ಯಾಕೆ? ನಿಮ್ಮ ಕಣ್ಣಿಗೆ ಚೆನ್ನಾಗಿ ಕಾಣಿಸ್ತಿಲ್ವೇನು..? Is it tight..?Do I look Fat?

**ರವಿ:**(ಮೆಲ್ಲಗೆ)ಅಯ್ಯೊ ದೇವ್ರೇ, ಏನೋ ಹೇಳೋಕೆ ಹೋಗಿ ಏನೋ ಆಯ್ತಲ್ಲಪ್ಪ.

**ಗೀತ:** (ಮತ್ತೂ ಕೋಪಗೊಂಡು)ಅದ್ಯಾಕೆ ಗೋಣಗ್ತಾ ಇದೀರ...ಏನಿದ್ರು ಜೋರಾಗಿ ಹೇಳಿ..ನಾನು ದಪ್ಪ ಅನ್ನೊದು ನನಗೇ ಗೊತ್ತು. ನೀವೇನು ಹೇಳ್ಬೇಕಾಗಿಲ್ಲ.

**ರವಿ:** ಗೀತ..ನಿಜವಾಗ್ಲೂ ನೀನು ದಪ್ಪ ಅಂತ ನಾನು ಯಾವತ್ತೂ ಹೇಳಿಲ್ಲ.

**ಗೀತ:** ನೀವು ಅದನ್ನ ಬಾಯಿ ಬಿಟ್ಟು ಹೇಳ್ಬೇಕಾಗಿಲ್ಲ. ನಿಮ್ಮ ಮನಸ್ನಲ್ಲಿ ಏನಿದೆ ಅಂತ ನನಗೆ ಹಾಗೇ ಗೊತ್ತಾಗುತ್ತೆ.

**ರವಿ:** ಹೋಕ್ಕೊಳ್ಳಿ ಬಿಡು. ಈಗ argue ಮಾಡೊದು ಬೇಡ...ಹೊರಗಡೆ Lunch ತಿನ್ನೋಕೆ ಹೋಗೊಣ ಬರ್ತೀಯ?

**ಗೀತ:** (ವಂಗ್ಯವಾಗಿ)Yeh... right.. ಈಗ ನನಗೆ ಅದೇ ಬೇಕಾಗಿರೋದು ...ಹೊರಗಡೆ ಲಂಚ್ ತಿಂದು ಇನ್ನೊಂದು 10 pound gain ಮಾಡೋದು. best solution..Thanks... Thanks a lot..(ಬಿರಬಿರನೆ ಒಳಗೆ ಹೋಗುತ್ತಾಳೆ)

**ರವಿ:** (ಅವಳು ಹೋಗುವುದನ್ನೆ ನೋಡುತ್ತ)ಗೀತ.. ಸಾ.. ಸಾ.(ಅವಳು ನಿಲ್ಲದೆ ಹೊರಟು ಹೋದಾಗ ನಿರಾಸೆಗೊಂಡು) ಸಾರಿ ಹೇಳೋಕೆ ಅವಕಾಶ ಸಿಗಲಿಲ್ಲ..ಇನ್ನು 'I love you'ಗೆ ಎಲ್ಲಿ ಛಾನ್ಸು?! ಸದ್ಯ ಮೌನವ್ರತನಾದ್ರು ಮುರಿದ್ಲಲ್ಲ ...ಸ್ವಲ್ಪ ಕೋಪ ಇಳ್ದಿದೆ ಅಂತ ಆಯ್ತು. ಪೆಚ್ಚು ಕೆಲ್ಸ ಮಾಡ್ದೆ ನಾನು.. ಅವಳ್ಗೆ ತಾನು ಸ್ವಲ್ಪ ದಪ್ಪ ಅನ್ನೊ feeling ಇರೋತಾರ ಇದೆ..ಲಂಚ್‌ಗೆ ಬದಲು Gymಗೆ ಹೋಗೋಣ ಬಾ ಅಂತ ಕರೀಬೇಕಾಗಿತ್ತೇನೊ...ಮುಂದಿನ ಸಲ ಅದನ್ನ try ಮಾಡ್ತೀನಿ... ಹುಂ... ನನಗಂತು..ಟೆನ್ನಿಸ್ ಆಡಿ ಹೊಟ್ಟೆ ಹಸಿವು ಪ್ರಾಣ ಹೋಗ್ತಿದೆ..ಅವರಮ್ಮನಾದ್ರು ಏನಾದ್ರು ತಿನ್ನೋಕೆ ಮಾಡಿಟ್ಟಿದ್ದಾರ ನೋಡೋಣ.(ಒಳಗೆ ಹೋಗುತ್ತಾನೆ, ಇನ್ನೊಂದು ಬಾಗಲಿನಿಂದ ಕೇಟಿ ಮತ್ತು ಜಯರಾಮ್ ಒಳಗೆ ಬರುತ್ತಾರೆ)

**ಕೇಟಿ:** (ಅಲ್ಲಿ ಇಲ್ಲಿ ನೋಡುತ್ತ)ಇಬ್ರು ಇಲ್ಲಾ..

**ಜಯರಾಮು:** ಜೊತೇಲಿ ಹೋದ್ರೋ ಇಲ್ಲಾ ಬೇರೆ ಬೇರೆ ಹೋದ್ರೋ ಗೊತ್ತಾಗ್ಲಿಲ್ಲ..

**ಕೇಟಿ:** Anyway...What do we do now? ಸುಮ್ನೆ ಮನೇಲಿ ಇರೋಕೆ ಬೇಜಾರು.. Movieಗೆ ಹೋಗೋಣ್ವಾ?

**ಜಯರಾಮು:** Why not? ಹೋಗೋಣ ನಡೀರಿ...(ಬಾಗಿಲ ಕರೆಗಂಟೆ ಕೇಳೀಸುತ್ತದೆ)

**ಕೇಟಿ:** ಯಾರ್ ಬಂದ್ರು ಈಗ..?( ಬಾಗಿಲ ಹತ್ತಿರ ಹೋಗಿ ಕುಸುಮಳೊಡನೆ ಒಳಗೆ ಬರುತ್ತಾಳೆ) Jay.. there is a lady asking for you..

**ಜಯರಾಮು:** ನನ್ನ ಕೇಳ್ಕೊಂಡಾ..? ಯಾರು..?

**ಕುಸುಮ:**(ವಯ್ಯಾರವಾಗಿ ಮುಂದೆ ಬಂದು)ಹಾಯ್ ಜಯರಾಮ್..ನಾನು ಕುಸುಮ(ವ್ಯಂಗ್ಯವಾಗಿ)ಜ್ಞಾಪ್ಕ ಇದ್ಯಾ..? ಈಗತಾನೆ ಸುಶೀಲನ ಮನೇಗೆ ಹೋಗಿದ್ದೆ.. ನೀನು ಬಂದಿದ್ದೀಯ ಅಂತ ರಾಮಮೂರ್ತಿ ಹೇಳಿದ್ರು..ನೋಡ್ಕೊಂಡು ಹೋಗೋಣಾಂತ ಬಂದೆ..ಹೇಗಿದ್ದೀಯ?

**ಜಯರಾಮ:** (ಸಂತೋಷದಿಂದ ಕೈ ಕುಲುಕುತ್ತ) ಚೆನ್ನಾಗಿದ್ದೀನಿ ಕುಸುಮ..ನೀನು ಬಂದಿದ್ದು..ತುಂಬ ಸಂತೋಷ... You are looking great..(ಕೇಟಿ ಗಮನ ಸೆಳೆಯುವಂತೆ ಸ್ವಲ್ಪ ಕೆಮ್ಮುತ್ತಾಳೆ, ಒಡನೆ ಜಯರಾಮು) ಇವರು ಯಾರು ಗೊತ್ತಲ್ಲ.. ನಮ್ಮ ಗೀತ ತಾಯಿ.. ಕೇಟಿ.

**ಕುಸುಮ:** ಅವರೆ ಇರಬೇಕು ಅಂದ್ಕೊಂಡೆ..ರವಿ ಮದುವೇಲಿ ಒಂದು ಘಳಿಗೆ ನೋಡಿದ್ದು..(ರಾಗವಾಗಿ) Hai...how are you doing?

**ಕೇಟಿ:** I am fine.. thank you.

**ಜಯರಾಮ:** ಕುಸುಮ ನನ್ನ childhood friend, ಕೇಟಿ. ಬಾಲ್ಯದಲ್ಲಿ ನಮ್ಮ ಮನೆ ಅಕ್ಕ ಪಕ್ಕದಲ್ಲೆ ಇತ್ತು..

**ಕುಸುಮ:** ಸುಮ್ಮನೆ ಹೆಸರಿಗೆ childhood friendಉ..ಒಂದು ಫೋನ್ ಕಾಲ್ ಇಲ್ಲ ಏನು ಇಲ್ಲ..ಒಬ್ಬರ ಕಷ್ಟ ಸುಖಕ್ಕೆ ಇನ್ನೊಬ್ರು ಆಗ್ದಿದ್ದ ಮೇಲೆ ಅದೆಂಥ ಸ್ನೇಹ ಹೇಳು..? ಆದ್ರು ಚಿಕ್ಕ ವಯಸ್ಸಿಂದು ಮರೆಯುತ್ಯೆ...ನೀನು ಬಂದಿದ್ದೀ ಅಂತ ತಿಳಿದ ತಕ್ಷಣ ಓಡಿ ಬಂದೆ..

**ಕೇಟಿ:** (ವ್ಯಂಗ್ಯವಾಗಿ)ಓಡಿಬಂದ್ರಾ? ಪಾಪ, ಅದಕ್ಕೇ ಏದುಸಿರು ಬಿಡ್ತಿದ್ದೀರ ಸ್ವಲ್ಪ ಜ್ಯೂಸ್..ನೀರು ಏನಾದ್ರು ಕೊಡ್ಲಾ?

**ಕುಸುಮ:** (ಮುಖವನ್ನು ಒರೆಸಿಕೊಳ್ಳುತ್ತ) ಏನು ಬೇಡಿ.. ಪರ್ವಾಗಿಲ್ಲ. ಎಷ್ಟು ಚೆನ್ನಾಗಿ ಕನ್ನಡ ಮಾತಾಡ್ತೀರ! ರವಿ ಮದುವೆ ಟೈಮ್‌ನಲ್ಲಿ ನಿಮಗೆ ಬರ್ತಿರ್ಲಿಲ್ಲ ಅಲ್ವಾ?

**ಕೇಟಿ:** ಸ್ವಲ್ಪ ಬರ್ತಿತ್ತು. My Ex- Husband was from Mysore and Geetha grew up there. ಈಗ ಸ್ವಲ್ಪ ಜಾಸ್ತಿ Practice ಆಗ್ತಿದೆ. and Jay is helping me too..

**ಕುಸುಮ:** (ಹುಬ್ಬು ಮೇಲೇರಿಸಿ)ಜೇ..? ಓಹ್ ಜಯರಾಮು ನಾ?...ಒಳ್ಳೆದಾಯ್ತು.

ಅಂಧ್ ಹಾಗೆ ಕೇಟಿ, ನಿಮಗೇನಾದ್ರು ಕೆಲ್ಸ ಇದ್ರೆ ನೀವು ಧಾರಾಳವಾಗಿ ಮಾಡ್ಕೊಳ್ಳಿ ....ನಾನು ಜಯರಾಮುಗೆ Company ಕೊಡ್ತೀನಿ. ನಮಗೆ ಮಾತಾಡೋಕೆ ತುಂಬಾ ವಿಷಯ ಇದೆ.

**ಕೇಟಿ:** Actually we were going to a movie. ನೀವು ಬರಬಹುದಿತ್ತು. ಆದರೆ ನಿಮ್ಮ ಅಮಿಲ್ಯ್ ಮಯ್ ಬೆ ವೈತಿನ್ಗ್ ಅಲ್ವಾಆ?

**ಕುಸುಮ:** (ವಯ್ಯಾರವಾಗಿ) ನನಗೆ ಆ ತಾಪತ್ರಯವೆ ಇಲ್ಲ ಕಣ್ರಿ. (ಜಯರಾಮುವನ್ನು ಕುರಿತು) I am single and free.(ಮತ್ತೆ ಕೇಟಿಗೆ) ನೀವು ಯೋಚಿಸ್ಬೇಡಿ. You carry on....

**ಕೇಟಿ:** (ಜಯರಾಮುವನ್ನು ಕುರಿತು) Do you want to stay back...Go Ahead....(ಛಾಲೆಂಜ್ ಮಾಡುವಂತೆ ಹುಬ್ಬನ್ನು ಮೆಲಕ್ಕೇರಿಸಿ ನೋಡುತ್ತಾಳೆ)

**ಜಯರಾಮ:** (ತನ್ನಲ್ಲಿ ತಾನೆ) ಓಹೋಹೊ. 'Go ahead' Dangerous wordu I....I...(ಸ್ವಲ್ಪ ತೊದಲುತ್ತ..)ಕುಸುಮ..ಪಾಪ ಅವರೊಬ್ಬರೆ ಹೋಗೋದು ಚೆನ್ನಾಗಿರೋಲ್ಲ...ನೀನು ಬಂದ್ಬಿಡು. ಒಟ್ಟಿಗೆ ಹೋಗೋಣ.

**ಕೇಟಿ:** She does not have to come ..ಪಾಪ

**ಕುಸುಮ:** ವೆಲ್... ನಾನು ಬರ್ತೀನಿ ಇಲ್ಲಾದ್ರೇನು..ಸಿನಿಮ ಆದ್ರೇನು...ನಿನ್ನ ಜೊತೆ ಕಾಲ ಕಳೆಯೋದು ಮುಖ್ಯ. ಜಯರಾಮು, ನಾನೆ drive ಮಾಡ್ತೀನಿ..ನೀನು ನನ್ನ ಜೊತೆ ಮುಂದೆ ಕೂತ್ಕೊ...ಪಾಪ ಅವರು ಹಿಂದೆ ಕುತ್ಕೊಳ್ಳಿ(Katie exasperate ಆಗಿ ಕೈ ಎತ್ತುತ್ತಾಳೆ. ಕುಸುಮ ಜಯರಾಮುವಿನ ಮೊಳಕ್ಕೈ ಹಿಡಿದುಕೊಂಡು ಹೊರಗೆ ಹೋಗುತ್ತಾಳೆ)

(ತೆರೆ)

## ದೃಶ್ಯ ೫

(ಸುಶೀಲ ಮತ್ತು ರಾಮಮೂರ್ತಿ ಮನೆ ಲಿವಿಂಗ್ ರೂಮ್. ಸುಶೀಲ ಕೈಯಲ್ಲಿ ಹಾರ ಹಿಡಿದುಕೊಂಡು ಪ್ರವೇಶಿಸುತ್ತಾಳೆ)

**ಸುಶೀಲ:** (ಹಾರ ಮುಂತಾದವನ್ನು ಕೆಳಗಿಡುತ್ತ) Oh My God !I am Euphoric..! ನಾನಿದುವರೆಗೂ ಮಾಡಿರೊ ಭಾಷಣಗಳಲ್ಲಿ.. ಇದೇ ಬೆಸ್ಟ್..ಅನ್ಸತ್ತೆ..ಈ ನಡುವೆ ಅಮೆರಿಕದಲ್ಲಿ ನಮ್ಮ ಹೆಂಗಸ್ರು ಯಾಕೋ ಮದುವೇನೆ ಮಾಡ್ಕೋತಿಲ್ಲ.. ನಮ್ಮ ಬಿಸಿನೆಸ್ ಎಲ್ಲ ಡಲ್ ಆಗ್ಬಿಟ್ಟಿದೆ ನೀವು ಬಂದು ಒಂದು inspirational ಭಾಷಣ ಮಾಡ್ಬೇಕೂ ಅಂತ American Priests assocoation ಅವರು ಕರೆದಾಗ ಒಪ್ಕೊಳ್ಳೋಕೆ ಸ್ವಲ್ಪ ಹಿಂದೆ ಮುಂದೆ ನೋಡ್ದೆ. ಆದ್ರೆ ಎಂಥಾ experience! on the spot ಗೀಚಿದ್ದು ಕವಿತೆ.. ಏನ್ ಚೆನ್ನಾಗಿತ್ತು...ಮೆಲುಕು ಹಾಕ್ತಾನೆ ಇರೋಣಾ ಅನ್ಸತ್ತೆ.. (ಓದುತ್ತಾಳೆ)

ನ ಸ್ತ್ರೀ ಸ್ವಾತಂತ್ರ ಮರ್ಹತಿ
ಹಿಂದೆ ಗುಡುಗಿದನು ಮನು, ಭೂಪತಿ.
ಆ ಬಂಡೆಯಡಿಯಲಿ ನಲುಗಿದರು
ಸೀತೆ ಸಾವಿತ್ರಿ ದ್ರೌಪತಿ.
ಮಾತೃ ದೇವೋಭವ ಎಂದ
ನಾಡಿನ ನೆಲದಲ್ಲಿ,
ಧರ್ಮಶಾಸ್ತ್ರದ ಹೆಸರಲ್ಲಾಯ್ತು
ಸ್ತ್ರೀ ಸ್ವಾತಂತ್ರದ ಬಲಿ!

Excellent... ಸೇರಿದ್ದವ್ರೆಲ್ಲ single women ನ್ನು.. ಅವರ ಮುಂದೆ ನಾನು ಡಯೆಟ್ ಮಾಡೋವರ ಮುಂದೆ ದಂರೋಟ್ ಇಟ್ಟ ಹಾಗೆ ಮಹಿಳೆಯರಿಗೆ ವಿವಾಹದಿಂದಾಗುವ ಅನುಕೂಲಗಳು ಅನ್ನೋದರ ಮೇಲೆ ಭಾಷಣ ಹೇಗೆ ಮಾಡೊದೂ ಅಂತ ಯೋಚಿಸ್ತಾ ಇದ್ದೆ. .ಶುರೂನಲ್ಲಿ ಹೀಗ್ ಪ್ರಾರಂಭಿಸಿ..ಆಮೇಲೆ main topicಗೆ ಬಂದಿದ್ದು brilliant move (ಬಾಗಿಲ ಕರೆಗಂಟೆಯ ಶಬ್ದ ಕೇಳಿಬರುತ್ತದೆ).. ಯಾರು ಬಂದ್ರಪ್ಪ ಈಗ? ಒಂದು ನಿಮಿಷ Self gloryನಲ್ಲಿ ಮುಳುಗಿರೋಣಾ ಅಂದ್ರೆ ಅವಕಾಶ ಇಲ್ಲ ಈ ಮನೇಲಿ..(ಹೊರಗೆ ಹೋಗಿ) ಉಷ.. ಬಾ ..ಬಾ ಒಳಗ್ ಬಾ.. ಏಷ್ಟು ಚೆನ್ನಾಗಿ ಕಾಣ್ತಿದ್ದೀಯ.. ಎಲ್ಲಿಗ್ ಹೋಗಿದ್ದೆ..?

**ಉಷ:** ಎಲ್ಲೂ ಇಲ್ಲ ಅತ್ತೆ..ನಿಮ್ಮ ಭಾಷಣಕ್ಕೆ ಬಂದಿದ್ದೆ..

**ಸುಶೀಲ:** ಅಯ್ಯೋ ನನಗೆ ಕಾಣಿಸ್ಲೇ ಇಲ್ಲ..(ಜಂಬದಿಂದ ಬೀಗುತ್ತ)ತುಂಬ ಜನಾ ಅಂತ ಇಟ್ಕೊ.. ಎಲ್ಲಿ ಕೂತಿದ್ದೇ.. ಗೊತ್ತಾಗಿದ್ರೆ ಮುಂದೆ ಕೂಡಿಸ್ಬಹುದಾಗಿತ್ತು ....ನಿನಗೆ ನನ್ನ ಭಾಷಣದಲ್ಲಿ ಇಂಟ್ರೆಸ್ಟ್ ಇರುತ್ತೇ ಅಂತ ನನಗೆ ಗೊತ್ತೇ ಇರಲಿಲ್ಲ.. ಅದಕ್ಕೇ ನಾನು ಯಾವಾಗ್ಲು ನಿನಗೆ ಹೇಳೊದೆ ಇಲ್ಲ..ಅದೇನು ಇವತ್ತು ಇದ್ದಕ್ಕಿದ್ದ ಹಾಗೆ ಬಂದ್ಬಿಟ್ಟಿದ್ದೆ?

**ಉಷ:** ನನ್ನ ಸ್ನೇಹಿತೇರು ಕೆಲವ್ರು ಹೋಗ್ತಿದ್ರು.. ನನ್ನೂ ಕರದ್ರು..ಅರುಣ್ ಹೇಗಿದ್ರು ನನ್ನ ಮೇಲೆ ಬೆಳಗ್ಗಿಂದ ಗುರ್ ಅಂತ ಇದ್ದ.. ನಿಮ್ಮ ಭಾಷಣಕ್ಕೆ ಹೋದ್ರೆ ಅವನ್ನೂ ಖುಷಿ ಆಗಬಹುದೂ ಅಂತ.. ಬಂದೆ. (ಕೈಯಲ್ಲಿದ್ದ ಹೂ ಗುಚ್ಚ ಕೊಡುತ್ತ) ಭಾಷಣ ತುಂಬಾ ಚೆನ್ನಾಗಿತ್ತು ಅತ್ತೆ.

**ಸುಶೀಲ:** (ತೆಗೆದು ಕೊಳ್ಳುತ್ತ)ಇದೆಲ್ಲ ಯಾಕೆ ತರೋಕೆ ಹೋದೆ..ನೀನು ಬಂದಿದ್ಯಲ್ಲ ಅದೇ ಸಾಕಾಗಿತ್ತು.

**ಉಷ:** ನೀವು ಅಷ್ಟೊಂದು ಹೆಂಗಸರ ಪರ ವಹಿಸಿ ಮಾತಾಡಿದ್ದು ಕೇಳಿ ನನಗೂ ನನ್ನ ಫ್ರೆಂಡ್ಸ್‌ಗೂ ತುಂಬಾ ಖುಷಿ ಆಯ್ತು ಅತ್ತೆ. ಗಂಡಂದಿರ್ನ ಹ್ಯಾಂಡಲ್ ಮಾಡೊದು ಹೇಗೆ ಅಂತ ಎಷ್ಟು ಸುಲಭವಾಗಿ ಹೇಳ್ಕೊಟ್ಬಿಟ್ರಿ..!

**ಸುಶೀಲ:** (ಹತ್ತಿರ ಬಂದು ಹೆಗಲಿನ ಮೇಲೆ ಕೈ ಇಟ್ಟು) ನೋಡು ಮರಿ.. ಪಾಲಿಗ್ ಬಂದಿದ್ದು ಪಂಚಾಮೃತ ಅಂತ.. ಕಟ್ಕೊಂಡಿರೋವ್ರನ್ನೇ.. ನಮಗೆ ಬೇಕಾದ ಹಾಗೆ ಹದ ಮಾಡ್ಕೋ ಬೇಕು..ಅದ್ರಲ್ಲೇ ಇರೋದು ಜಾಣತನ..ಸುಮ್ಸುಮ್ನೆ.. ಡೈವೋರ್ಸ್ ಮಾಡ್ತಾ ಕೂತ್ಕೊಂಡ್ರೆ.. ಅದಕ್ಕೆ ಕೊನೆ ಇಲ್ಲ ಮೊದಲಿಲ್ಲ. ಇಲ್ಲದಿದ್ರೆ ನಾನ್ಯಾಕೆ ನಿಮ್ ಮಾವನ್ನ ಕಟ್ಕೊಂಡು ಇಷ್ಟ್ ದಿನ ಏಗ್ತಿದ್ದೆ ಹೇಳು. 'ಪರ್ಫೆಕ್ಟ್

ಗಂಡ' ಅನ್ನೋ ಪ್ರಾಣಿ ಈ ಪ್ರಪಂಚದಲ್ಲೇ ಇಲ್ಲ ತಿಳ್ಕೊ (ಭಾಷಣ ಬಿಗಿಯುವಂತೆ ಮೈ ಮರೆತು) ಸಂಸಾರ ಅನ್ನೋ ನೌಕೇನ ನಾವು-ಹೆಂಗಸರು ಜಾಣತನದಿಂದ ನ್ಯಾವಿಗೇಟ್ ಮಾಡ್ಬೇಕು. ವೊಳ ಬಿಟ್ಟು ಮಾರ್ ಎಳ್ಕೋಬೇಕು..ಸೋತು ಗೆಲ್ಬೇಕು..ಅದೇ ಭಾರತ ನಾರಿಯ ಲಕ್ಷಣ....(ಎಚ್ಚೆತ್ತು) ಅಯ್ಯಯ್ಯೋ.. ನೋಡಿದ್ಯ ಅಭ್ಯಾಸ ಬಲ.. ನಿಮ್ಮಂದೆ ಇನ್ನೊಂದು ಭಾಷಣ ಬಿಗಿಯೋಕೆ ಶುರು ಮಾಡ್ಬಿಟ್ಟೆ. ಕಾಫಿ ಗೀಫಿ ಕೊಡ್ಲ?

**ಉಷ:** ಏನು ಬೇಡ ಅತ್ತೆ..ಆದ್ರೆ ಒಂದೇ ಒಂದು ರಿಕ್ವೆಸ್ಟು..ನನ್ನ ಗಂಡನ್ನ ನನಗ್ ಬೇಕಾದ ಹಾಗೆ ಹದ ಮಾಡ್ಕೊಳ್ಳೋಕೆ ಸ್ವಲ್ಪ ನಿಮ್ಮ ಹೆಲ್ಪ್ ಬೇಕಾಗಿತ್ತು. ನಮ್ಮಿಬ್ಬರಿಗೆ ಯಾವಾಗ್ಲೂ ಜಗಳ ಬರೋದೆ ಇನ್ನೊಬ್ರು ನಮ್ಮ ಲೈಫ್ನಲ್ಲಿ ಇಂಟರ್ಫಿಯರ್ ಆದಾಗ ಮಾತ್ರ.

**ಸುಶೀಲ:** ಓ ಗೊತ್ತಾಯ್ತು ಬಿಡು.. ತುಂಬ ಜಾಣೆ ನೀನು.. ಬೆರಳು ತೋರಿಸಿದ್ರೆ ಹಸ್ತ ನುಂಗ್ತೀಯ..ನಾಳೆಯಿಂದ ನಾನು ನಿಮ್ಮ ವಿಚಾರದಲ್ಲಿ ತಲೆನೇ ಹಾಕೊಲ್ಲ..

**ಉಷ:** ಅಯ್ಯೋ ನಾನೆಲ್ಲಿ ಹಾಗ್ ಹೇಳ್ದೆ ಅತ್ತೇ?

**ಸುಶೀಲ:** don't insult my inteligence Usha. ನಿನ್ನ ಮಾತಿನ ಗೂಡಾರ್ಥ ಅರ್ಥವಾಗ್ದೇ ಇರೋದಕ್ಕೆ ನಾನೇನು ಗಂಡ್ಸೇ..? ಹಾಗೇ ಆಗ್ಲಿ.. ಇನ್ಮೇಲೆ ನೀನುಂಟು ನಿನ್ನ ಗಂಡ ಉಂಟು..ಹೊಕ್ಕೊಳ್ಳಿ ರಾತ್ರಿ ಇಲ್ಲೇ ಊಟ ಮಾಡ್ತೀರಂತೆ ಅವನನ್ನೂ ಬರಹೇಳಿಬಿಡು. ಅವನಿಗಿಷ್ಟವಾದ ಈರುಳ್ಳಿಹುಳಿ ಮಾಡಿ ಅರಳು ಸಂಡಿಗೆ ಕರ್ದಿದ್ದೀನಿ..

**ಉಷ:** (ತನಗೆ ತಾನೆ)ಓ ಗಾಡ್ ಮತ್ತೆ ಶುರು ಆಯ್ತು But I can play this game too. (ಜೋರಾಗಿ) ಇಲ್ಲ ಅತ್ತೆ ನಿಮ್ಮ ಕೈ ಊಟ ತಿನ್ನೋಕೇನೊ ನಮ್ಮಿಬ್ರಿಗೂ ಇಷ್ಟ ಆದ್ರೆ.. ನಾನು ಇವತ್ತು ಸ್ವಲ್ಪ ಡ್ಯಾಮೇಜ್ ಕಂಟ್ರೋಲ್ ಮಾಡ್ಬೇಕಾಗಿದೆ.. ಆದ್ರಿಂದ ಇನ್ನೊಂದು ದಿನ ಬರ್ತೀವಿ...ಥ್ಯಾಂಕ್ಸ್ ಅತ್ತೆ for the good advice. (ಹತ್ತಿರ ಬಂದು ಹಗ್ ಮಾಡುವಂತೆ ಪ್ರಿಟೆಂಡ್ ಮಾಡಿ) ಬೈ...(ಹೊರಡುತ್ತಾಳೆ)

**ಸುಶೀಲ:** (ಅವಳನ್ನು ಬಾಗಿಲವರೆಗೂ ಕಳಿಸಿ ಬಂದು) ವಾವ್! ಜಾಣೆ ಹುಡುಗಿ.. ಗುರೂಗೆ ತಿರುಮಂತ್ರ ಕಲಿಸ್ತಾಳೆ. ಎಷ್ಟಾದ್ರು ಹೆಣ್ಣಲ್ಲವೇ? ಆದ್ರು ಈ ದಿನ ನಾನು ಒಳ್ಳೆ ಘಳಿಗೇಲಿ ಎದ್ದಿರಬೇಕು.. ಉಷ ಬಂದು ಹೂ ಕೊಟ್ಟೂ ಇಷ್ಟು ಹೊಗಳೋದೂ ಅಂದ್ರೇನು..? ಸಾಲ್ದಕ್ಕೆ ಆ ಸಭೇನಲ್ಲಿ ಆ ಹೆಂಗಸರ ಕೈಲಿ Standing Ovation ಗಿಟ್ಟೇಸೋದು ಅಂದ್ರೆ ಸಾಮಾನ್ಯವೇ..

**ರಾಮಮೂರ್ತಿ:** (ಚಪ್ಪಾಳೆ ತಟ್ಟಿಕೊಂಡು ಬರುತ್ತಾ) ಅಪ್ರದರ ಜೊತೇಗೆ ನಂದೂ ಸೇರಿಸ್ಕೋ... ಭರ್ಜರಿಯಾಗಿತ್ತು ಭಾಷಣ.

**ಸುಶೀಲ:** (ಆಶ್ಚರ್ಯದಿಂದ) ವೈಟ್ ಎ ಮಿನಿಟ್, ನಿಮಗೆ ಹ್ಯಾಗ್ರಿ ಗೊತ್ತಾಯ್ತು. ಅಲ್ಲಿ ಗಂಡಸರಿಗೆ ಪ್ರವೇಶವೇ ಇರಲ್ಲಿಲ್ಲ..

**ರಾಮಮೂರ್ತಿ:** ಹಿಂದುಗಡೆ ಸಾಲಿನಲ್ಲಿ ಬುರ್ಖ ಹಾಕೊಂಡು ಒಬ್ಬರು ಕೂತಿರ್ಲಿಲ್ವೆನೆ....

**ಸುಶೀಲ:** ಅಯ್ಯಯ್ಯೋ ಅದು ನೀವೇನ್ರಿ..ಯಾರಾದ್ರು ಹೆಂಗಸರಿಗೆ ಸುಳಿವು ಸಿಕ್ಕಿದ್ರೆ ಆಗ್ತಿತ್ತು ನಿಮ್ಮ ಗತಿ.

**ರಾಮಮೂರ್ತಿ:** ಬುರ್ಖಾದ ಬಗ್ಗೆ ಬೇಕಾದಷ್ಟು comments ಬಂತು ಬಿಡು. 'ಅಮೇರಿಕಾದಲ್ಲಿದ್ದು ಹೆಂಡ್ತಿಗೆ ಬುರ್ಖ ಹಾಕಿದಾನೆ ನೋಡು ಯಾರೋ ಭಡವ' ಅಂತ ಯಾವನ್ದೋ ಗ್ರಹಚಾರ ಬಿಡಿಸ್ತಿದ್ರು ಕೆಲವು ಮಹಿಳಾಮಣಿಗ್ಳು.. ..ಅಲ್ವೆ ಭಾಷಣದ ಪೂರ್ತಿ ... ಗಂಡಸರನ್ನ control ಮಾಡೋದು ಒಂದು ಕಲೆ ...ಅದನ್ನ ಹೆಂಗಸರು ಕರತಲಾಮಲಕ ಮಾಡ್ಕೊಬೇಕು ಅಂತ ಹೇಳ್ತಿದ್ಯಲ್ಲ control ಮಾಡೊಕೆ ನಾವೇನು ಕುರಿಗ್ಳೆ? ನಮ್ಮನ್ನ guide ಮಾಡೋಕೇ ಅಂತ್ಲೆ ದೇವ್ರು ನಿಮ್ಮನ್ನ ಸೃಷ್ಟಿಸಿದ್ದಾನೆ ಅಂತ ಕೊಚ್ತಿದ್ಯಲ್ಲ ನಾವೇನು ಮಂಕುಗ್ಳೆ ...? ಆ ಜಯರಾಮೂನು ಹೇಳ್ತಿದ್ದ...

**ಸುಶೀಲ:** ನೋಡಿ ಈಗ್‌ತಾನೆ ಎರಡು ನಿಮಿಷಗಳ ಹಿಂದೆ, ಭರ್ಜರಿ ಭಾಷಣ ಅಂದ್ರಲ್ಲ ಅಲ್ಲಿಗೆ ನಿಲ್ಲಿಸ್ಬಿಡಿ. ಸಂಸಾರದಲ್ಲಿ ಸಾಮರಸ್ಯ ಇರುತ್ತೆ...ಇಲ್ದಿದ್ರೆ..(ಡೋರ್ ಬೆಲ್ ಸದ್ದಾಗುತ್ತದೆ) ಅಬ್ಬಬ್ಬ ನಮ್ಮ ಮನೆಗಂತು ಈ ನಡುವೆ ಬರೊ ಹೋಗೋವ್ರ ಕಾಟ ತುಂಬ ಜಾಸ್ತಿಯಾಗಿಹೋಗಿದೆ...ಬಾಗಿಲು ಹಾಕ್ದೆ ಇರೊದೆ ಮೇಲು. ಸ್ವಲ್ಪ ನೋಡ್ತೀರಾ.. ನೀವೆಲ್ಲಿ ಹೋಗ್ತೀರಿ(ಎಂದು ಹೊರಗೆ ಹೊಗಿ ಒಳಗೆ ಬರುತ್ತಾಳೆ. ಅವಳ ಹಿಂದೆ, ಜಯರಾಮು, ಕೇಟಿ ಮತ್ತು ಕುಸುಮ ಬರುತ್ತಾರೆ.)...ಬನ್ನಿ ..ಬನ್ನಿ..ಏನು ಪರವಾಗಿಲ್ಲ

**ರಾಮಮೂರ್ತಿ:** ಅರೆರೆ Think of the Devil ಅಂದ್ರೆ ಬಂದೇ ಬಿಟ್ಟ.

**ಸುಶೀಲ:** ಕುಸುಮ ನೀನು ಎಲ್ಲಿ ಸಿಕ್ದೆ ಇವರಿಗೆ?

**ಕೇಟಿ:** Well.. I and Jay were giong to a Movie...and she tagged along.

**ಕುಸುಮ:** ಜಯರಾಮು ತುಂಬ ಬಲವಂತ ಮಾಡ್ದ...ಅದಕ್ಕೆ ಹೋದೆ. ನಿಮ್ಮನೆ ಹತ್ರದ Theaterಗೆ ಬಂದಿದ್ವಿ.

**ಜಯರಾಮ:** ಹು. ರವಿನೂ phone ಮಾಡಿ ನಾನು ಗೀತಾನು ಅಲ್ಲಿಗೇ ಬರ್ತೀವಿ, ನೀವು ಹೋಗಿರಿ, ಆಮೇಲಿ ಎಲ್ಲರೂ ಹೊರಗೆ ಊಟಕ್ಕೆ ಹೋಗೋಣ ಅಂತ ಅಂದ.

**ರಾಮಮೂರ್ತಿ:** ನೀನು ಒಳ್ಳೆ ಶ್ರೀದೇವಿ ಭೂದೇವಿ ಸಮೇತನಾಗಿ ದಯಮಾಡಿಸ್ದೆ ಅನ್ನು. No problem ಅಲ್ವ ಸುಶಿ..

ಸುಶೀಲ: Of course. ಊಟ ಹೊರಗೆ ಅಂದ್ಮೇಲೆ ಪ್ರಾಬ್ಲಮ್ ಏನ್ಬಂತು. ಸ್ವಲ್ಪ ಕಾಫಿ ಗೀಫಿ ಕೊಡ್ಲ?

**ಕುಸುಮ:** ನಮಗೆ ಬೇಡ. ಜಯರಾಮೂಗೆ ಕೊಡು. ಅವನ್ಗೆ College daysನಿಂದ ಸಿನಿಮ ಆದ ತಕ್ಷಣ coffee ಬೇಕು.

**ಕೇಟಿ:** ಬೇಡ.. ಬೇಡ.. Now a days he drinks just 1 cup in the morning. ಈಗ ಆರೆಂಜ್ ಜ್ಯೂಸ್ ಸಾಕು ಅಲ್ವಾ ಜೇ?

**ಜಯರಾಮ:** (ಮಧ್ಯದಲ್ಲಿ ಸಿಕ್ಕಿಕೊಂಡು, ಏನೂ ತೋಚದೆ ಕುಸುಮ ಮತ್ತು ಕೇಟಿ ಇಬ್ಬರ ಮುಖವನ್ನು ನೋಡುತ್ತಾ, ಸುಶೀಲಳನ್ನು ಕುರಿತು) ಈಗೇನು ಬೇಡಿ.. ಹೇಗಿದ್ರು ಇನ್ನೇನು ಊಟಕ್ಕೆ ಹೋಗಬೇಕಲ್ಲ..

**ಸುಶೀಲ:** ಅಯ್ಯೋ ಹಾಗಂದ್ರೆ ಹೇಗೆ? ಸ್ವಲ್ಪ ಆಪಲ್ ಜೂಸ್ ಆದ್ರು ತೊಗೋಳ್ಳಿ ...ಕೂತ್ಕೊಳ್ಳಿ ಎಲ್ರೂ .. ನಿಂತೇ ಇದ್ದೀರಲ್ಲ.. (ಕುಸುಮಳ ತೋಳು ಹಿಡಿದುಕೊಂಡು ಮುಂದೆ ಬರುತ್ತ) ಬಾರೆ ಸ್ವಲ್ಪ ಹೆಲ್ಪ್ ಮಾಡು(ಮೆಲ್ಲಗೆ) ಏ.. ಏನೆ ಇದೆಲ್ಲಾ..?

**ಕುಸುಮ:** (ನಾಚುತ್ತ)ಗೊತ್ತಾಗ್ ಹೋಯ್ತಾ... ಅವನೂ ಒಂಟಿ.. ನಾನೂ ಒಂಟಿ.. ಜಂಟಿ ಆಗೋಣಾಂತ. ಮೊದಲಿಂದ್ಲು ಒಂದ್ತರಾ.. attraction ಇದ್ದೇ ಇತ್ತು.. just for companionship.. ಏನಂತೀಯ?

**ಸುಶೀಲ:** (ವ್ಯಂಗ್ಯವಾಗಿ) companionshipಗಾ..?

**ಕುಸುಮ:** mostly ಅದಕ್ಕೆ..ಅದರ ಜೊತೆ ಬೇರೆ ಬೆನಿಫಿಟ್ಸೂ ಬಂದ್ರೆ ಬೇಡ ಅನ್ನೋಕೆ ಆಗುತ್ಯೆ..?

**ಸುಶೀಲ:** wow! ಒಳ್ಳೆ ಋಷಿಪಂಚಮಿ ಆಗೋ ವಯಸ್ನಲ್ಲಿ ನೀನು ರೊಮಾನ್ಸ್ ಶುರು ಮಾಡ್ತಿದ್ದೀಯ..ಈ ದೇಶದಲ್ಲಿ ಏನ್ ಬೇಕಾದ್ರು ಆಗ್ಬಹುದು ಬಿಡು..( ಕೇಟಿಯತ್ತ ನೋಡಿ) ಅವಳ್ದೇನು ಸಮಾಚಾರ..? ಜಯರಾಮ್ ಮೇಲೆ ಅವಳೂ ಕಣ್ಣಾಕಿರೋತರ ಇದೆ..ಇಬ್ರಿಗೂ compition ಬೇರೇನಾ?

**ಕುಸುಮ:** (ಬಿಂಕದಿಂದ) ಅಯ್ಯೋ.. ಅವಳ್ಯಾವ ಸೀಮೆ compition ನನಗೆ? ಅವನಂತು ಒಳ್ಳೆ ಹಸೂ ತರ, ನೋಡ್ತಿರು..(ವಯ್ಯಾರವಾಗಿ, ಬಳುಕು ನಡೆಯಲ್ಲಿ ಜಯರಾಮು ಬಳಿ ಹೋಗಿ ಪ್ರೀತಿಯಿಂದ ಅವನ ಭುಜ ಹಿಡಿದುಕೊಂಡು) ಜಯರಾಮು ನನಗೇನೊ ರವೀಗೆ ಕುಜ ದೋಷ ಇರಬಹುದು..ಅಂತ ಅನುಮಾನ ಬಂದಿದೆ, ಯಾರಾದ್ರು ಜ್ಯೋತಿಷಿಗಳಿಗೆ ತೋರಿಸಿ ದೋಷ ಪರಿಹಾರ ಮಾಡಿಸಿದ್ರೆ ವಾಸೀ ಅನ್ಸತ್ತೆ..

**ಜಯರಾಮ:** (ಆತಂಕದಿಂದ) ಹಾಗಂತೀಯ ಕುಸುಮ..?

**ಕೇಟಿ:**(ಎದ್ದು ನಿಂತು ಜಯರಾಮುವಿನ ಮತ್ತೊಂದು ಭುಜವನ್ನು ಹಿಡಿದು ಕೊಂಡು)ಪಾಪ, He was already worried. ಈಗ ಇನ್ನೂ ಜಾಸ್ತಿ ಆಯ್ತು (ಕುಸುಮಳನ್ನು ದೂರುವಂತೆ ನೋಡುತ್ತಾಳೆ)

**ಕುಸುಮ:** ಕುಜ ದೋಷ ಪರಿಹಾರ ಮಾಡಿದ್ರೆ ಶುಕ್ರದೆಸೆ ಶುರು ಆಗುತ್ತೆ ಅಂತ ಹೇಳ್ತಾರಪ್ಪ. ನಮ್ಮ ನಮ್ಮ culture ನಮ್ಗೆ ಅದು ಎಲ್ರುಗೂ ಅರ್ಥ ಆಗುತ್ಯೆ?

**ಸುಶೀಲ:** Culture ಯಾವ್ದ್ ಆದ್ರೆ ಏನೆ. ಗಂಡ ಹೆಂಡತಿ ಅಂದ ಮೇಲೆ ಜಗಳ ಕದನ ಇದ್ದೇ ಇರುತ್ತೆ. First of all ಈ ಗಂಡಸರಿಗೆ ನಾವ್ ಆಡೋ ಮಾತು ಅರ್ಥ ಕಿವೀಗೆ ಬಿದ್ದಿರೊಲ್ಲ..ಅಕಸ್ಮಾತ್ ಅಲ್ಪ ಸ್ವಲ್ಪ ಕಿವೀಗ್ ಬಿದ್ದಿದ್ರೆ ಪಾಪ ಬಡಪಾಯಿಗಳಿಗೆ ಅದು ಅರ್ಥ ಆಗಿರೊಲ್ಲ..(ಅಷ್ಟರಲ್ಲಿ ರವಿ ಗೀತ ಇಬ್ಬರೂ ಖುಷಿಯಾಗಿ ಪ್ರವೇಶಿಸುತ್ತಾರೆ)

**ರವಿ:** ಅಯ್ಯಯ್ಯೋ..ಹಾಗೆ general statement ಮಾಡಿಬಿಟ್ರೆ ಹೇಗೆ ಆಂಟೀ .....ನಮ್ಮಂಥ ಕೆಲವು exceptionsಉ ಇರ್ತಾರಲ್ಲ...ಅಲ್ವಾ ಗೀತ?

**ಗೀತ:** (ಮುಗುಳ್ನಗುತ್ತ)Of course..

**ಜಯರಾಮ:** ಇದೇನಯ್ಯ.. ನೀವಿಬ್ರು ಹೀಗೆ ಜೊತೆಯಾಗಿ ನಗ್ತಾ.. ನಗ್ತ..?

**ಕೇಟಿ:** ಎಸ್.. ಇದು ಹೇಗಾಯ್ತು?

**ರವಿ:** ನಿಮ್ಮೆಲ್ಲರ advice help ಆಯ್ತು.. especially ಆ ಮೂರು ಮ್ಯಾಜಿಕಲ್ ಮಂತ್ರಾಸ್..

**ಗೀತ:** ಯಾವ ಮಾಜಿಕಲ್ ಮಂತ್ರಾಸ್ ರವಿ..?

**ರವಿ:** forget it ಚಿನ್ನ. just remember I love you. (ಎಂದು ಹೇಳೀ ಎಲ್ಲರನ್ನೂ ಅರ್ಥಗರ್ಭಿಥವಾಗಿ ನೋಡುತ್ತಾನೆ)

**ರಾಮಮೂರ್ತಿ:** ಅಂತೂ..ಜ್ಯೋಯಿಸರ ಸಹಾಯ ಇಲ್ದೇನೇ ..ನಿಮ್ಮಿಬ್ಬರಿಗೂ ಕುಜದೊಷ ಪರಿಹಾರ ಆಯ್ತು...ಅಂತಾಯ್ತು...

**ಸುಶೀಲ:** ಅಷ್ಟೇ ಅಲ್ಲಾರೀ..ಅವನ ತಂದೆಗೆ (ಕೇಟಿ, ಕುಸುಮ ಅವರನ್ನು ತೋರಿಸುತ್ತಾ)ಈ ಶ್ರೀದೇವಿ ಭೂದೇವಿಯರ ಜತೆ ಶುಕ್ರದೆಸೆ ಶುರುವಾಗಿದೆ...

**ರವಿ:** (ನಂಬಲಾರದವನಂತೆ) What...!

**ಗೀತ:** (ದಿಗ್ಭ್ರಮೆಯಿಂದ) Oh...My God....

**ಜಯರಾಮ:**(embarass ಆಗುತ್ತಾ) ಶುಕ್ರದೆಸೆಯೂ ಇಲ್ಲ ಗಿಕ್ರದೆಸೆಯೂ ಇಲ್ಲ.. ನಡೀರಿ ಊಟಕ್ಕೆ ಹೋಗೋಣ. ಹೊತ್ತಾಗ್ತಾ ಇದೆ..

**ಕುಸುಮ:** ಹೌದು... ನಡೀರಿ ಹೋಗೋಣ.. ಬಾ ಜಯರಾಮು(ಎಂದು ಅವನ ಮೊಳಕೈ ಹಿಡಿದು ಹೊರಡಲು ಅನುವಾಗುತ್ತಾಳೆ)

**ಕೇಟಿ:** (ಅವನ ಮತ್ತೊಂದು ಕೈ ಹಿಡಿದು) This time he is going to ride with me in the back.

**ಕುಸುಮ:** ಅದು ಹೇಗಾಗುತ್ತೆ?

**ಜಯರಾಮ:** ಪ್ಲೀಸ್, ಈ ಸಲ ನಾನು ಡ್ರೈವ್ ಮಾಡ್ತೀನಿ, ನೀವಿಬ್ಬರೂ ಹಿಂದಿನ ಸೀಟ್‌ನಲ್ಲಿ ಕೂತ್ಕೊಳ್ಳಿ.( ಕೇಟಿ, ಕುಸುಮ ಒಬ್ಬರನ್ನೊಬ್ಬರು challange ಮಾಡುವಂತೆ ನೋಡುತ್ತಿರುತ್ತಾರೆ..)

**ಸುಶೀಲ:** (ನಗುತ್ತ) ನೀವು ಹೊರಡಿ ನಾವು ಅಲಾರಂ ಆನ್ ಮಾಡ್ಬಿಟ್ಟು ಬರ್ತೀವಿ. (ಜಯರಾಮ್, ಕೇಟಿ, ಕುಸುಮ, ಸರಿ ಸರಿ ಎಂದು ಹೊರಡುತ್ತಾರೆ).

**ರವಿ:** ಆಂಟಿ.. ಉಡ್‌ಲಾಂಡ್ಸ್ನಲ್ಲಿ ಬುಕ್ ಮಾಡಿದ್ದೀನಿ. ಅಲ್ಲಿಗ್ ಬಂದ್ಬಿಡಿ.(ರವಿ, ಗೀತ ದಿಗ್ಭ್ರಮೆಯಿಂದ ನೋಡುತ್ತಾ ಅವರನ್ನು ಹಿಂಬಾಲಿಸುತ್ತಾರೆ).

**ಸುಶೀಲ:** (ಅಲ್ಲಿದ್ದ ಸಾಮಾನನ್ನು ಜೋಡಿಸುತ್ತ) ಸ್ವಲ್ಪ ಬೇಗ ಬೇಗ ತೆಗೆದಿಡೋಕೆ ಹೆಲ್ಪ್ ಮಾಡ್ರಿ. ಅವರನ್ನ ಕಾಯಿಸೋದು ಬೇಡ.

**ರಾಮಮೂರ್ತಿ:** ಸುಶಿ, ನಿಜವಾಗಲೂ ಜಯರಾಮೂ ಮೇಲೆ ಆ ಇಬ್ಬರು ಹೆಂಗಸರಿಗೂ ಕಣ್ಣು ಅಂತೀಯ? ಈ ವಯಸ್ಸಲ್ಲಿ....

**ಸುಶೀಲ:** ಅದಕ್ಕೆ ವಯಸ್ಸೇನು ಬಂತ್ರೀ.. ಹುಣಿಸೇ ಮರ ಮುಪ್ಪಾದ್ರೆ ಹುಳಿ ಮುಪ್ಪೇ ಅನ್ನೊ ಗಾದೆ ಕೇಳಿದ್ದೀರ ತಾನೆ?

**ರಾಮಮೂರ್ತಿ:** (ತಲೇ ಅಲ್ಲಾಡಿಸುತ್ತ) ನಂಬೋಕೆ ಆಗ್ತಿಲ್ಲ(ಅಷ್ಟರಲ್ಲಿ, ಹೊರಗಿನಿಂದ ಬಟ್ಟೇ ತುಂಬಿದ ಲಾಂಡ್ರಿ ಬಾಸ್ಕೆಟ್ ಹಿಡಿದುಕೊಂಡು ಉಷ ದಡದಡನೆ ಬರುತ್ತಾಳೆ, ಅವಳ ಹಿಂದೆ ಪೆಚ್ಚುಮೊರೆ ಹಾಕಿಕೊಂಡು ಅರುಣ್ ಪ್ರವೇಶಿಸುತ್ತಾನೆ).

**ಉಷ:** (ಬಾಸ್ಕೆಟ್‌ನ್ನು ನೆಲೆದ ಮೇಲೆ ಕುಕ್ಕಿ)ಅತ್ತೆ ಇವತ್ತು ನಮ್ಮ ಮನೇ ಲಾಂಡ್ರಿ ಯಾರು ಮಾಡಿದ್ದು...?

**ಸುಶೀಲ:** ( ಏನಾಯ್ತು ಎಂದು ಪ್ರಶ್ನಿಸುವಂತೆ ಮಗನನ್ನು ನೋಡುತ್ತಾಳೆ, ಅರುಣ್ 'ನಾನಲ್ಲ ನೀನು ಮಾಡಿದ್ದು' ಎಂದು ಹೇಳೆಂದು ಸನ್ನೆ ಮಾಡುತ್ತಾನೆ)

**ಸುಶೀಲ:** ಯಾಕಮ್ಮ ಏನಾಯ್ತು ಈಗ? ಯಾರು ಮಾಡಿದ್ರೆ ಏನು.. ಕೆಲಸ ಆಗೋದು ಮುಖ್ಯ

**ಉಷ:** ಅತ್ತೇ...ಪ್ರಶ್ನೆಗೆ ಸೀದಾಸಾದ ಉತ್ತರ ಹೇಳಿ..ನನ್ನ ಪಾಟ್ರನೈಜ಼್ ಮಾಡೋಕೆ ಹೋಗ್ಬೇಡಿ..

**ರಾಮಮೂರ್ತಿ:** ಈಗ ಆದದ್ದಾದ್ರೂ ಏನಮ್ಮ..?

**ಉಷ:** (ರೆಗುತ್ತ) ಏನಾಯ್ತಾ ಮಾವ.. ನೋಡಿ, ಇದು ನನ್ನ ಕಾಶ್ಮೀರ್ ಸ್ವೆಟರ್, ಇದು ನನ್ನ ಮರಿನೋ ಉಲ್ ಸ್ವೆಟರ್... ಇದು ನನ್ನ ರೆಡ್ ಟಾಪ್.. ಇದು ಬ್ಲೂಮಿಂಗ್ಡೇಲ್ನಲ್ಲಿ ತೊಗೊಂಡ ಟಾಪು..( ಬಣ್ಣ ಹೋಗಿದ್ದ ಒಂದು ಸಿಲ್ಕ್ ಮಗುಟವನ್ನು ತೋರಿಸುತ್ತ) ಇದು ಅರುಣ್‌ಗೆ ನಮ್ಮಪ್ಪ ಮದುವೇಲಿ ಕೊಟ್ಟಿದ್ದ ಸಿಲ್ಕ್ ಪಂಚೆ... ಎಲ್ಲಾದನ್ನೂ ಯಾರೋ ಪುಣ್ಯಾತ್ಮರು ಕ್ಲೋರಾಕ್ಸ್ ಬ್ಲೀಚ್ ಹಾಕಿ ಒಗೆದಿದ್ದಾರೆ..ನನ್ನ ಹೋಲ್ ವಾರ್ಡ್ರೋಬೇ ಹಾಳಾಗಿ ಹೋಯ್ತು...ಅತ್ತೆ ನೀವು ಒಗೆದಿದ್ರೆ... ಬೇಕಂತ ಹೀಗ್ಮಾಡಿದ್ದೀರ ಅಂದ್ಕೊಬೇಕಾಗುತ್ತೆ...ಅರುಣ್ ಒಗೆದಿದ್ರೆ.. ಇದೇ ಮೊದಲ ಸಲ ಅವನು ಲಾಂಡ್ರಿ ಮಾಡಿರೋದೂ ಅಂತ ಗೊತ್ತಾಗುತ್ತೆ...

**ಅರುಣ್:** (ತನಗೆ ತಾನೆ) either way ನನಗೆ ಗ್ರಹಚಾರ ತಪ್ಪಿದ್ದಲ್ಲ... (ಜೋರಾಗಿ) ಉಷ, ಇವತ್ತು ನಾನೇ ಲಾಂಡ್ರಿ ಮಾಡಿದ್ದು..

**ಉಷ:** ಅಂದ್ರೆ ಇಷ್ಟು ದಿನ.. ಅಲ್ಲ..ಅಲ್ಲ.. ಇಷ್ಟು ವರ್ಷ ನಿಮ್ಮ ಅಮ್ಮನ ಕೈಲಿ ನಮ್ಮ ಮನೆ ಲಾಂಡ್ರಿ ಮಾಡ್ಸಿ ಅದಕ್ಕೆ ನೀನು ಕ್ರೆಡಿಟ್ ತೊಗೋತಾ ಇದ್ಯಾ..? unbelievable..! ಇನ್ನೂ ಯಾವ ಯಾವ ವಿಚಾರದಲ್ಲಿ ನನಗೆ ಟೋಪಿ ಹಾಕಿದ್ದೀರ ಅಮ್ಮ ಮಗ ಇಬ್ರೂ?(ಅತ್ತೆಯ ಕಡೆ ನೋಡುತ್ತ)ಅತ್ತೆ. ನಿಮ್ಮ ಸಪೋರ್ಟ್ ಇಲ್ದೆ ಇದ್ದಿದ್ರೆ

ಇವನು ಇಷ್ಟು ಕೆಡ್ತಾ ಇರಲಿಲ್ಲ...ಇವತ್ತು ತಾನೆ ನಿಮ್ಮನ್ನ ಎಷ್ಟು admire ಮಾಡಿದ್ದೆ.. ನನಗೆ ಬುದ್ಧಿ ಇಲ್ಲ, (ಎನ್ನುತ್ತ ಬಿರಬಿರನೆ ಹೊರಗೆ ಹೋಗುತ್ತಾಳೆ).

**ರಾಮಮೂರ್ತಿ:** ಅಲ್ಲ ಕಣಯ್ಯ.. ನೀನು ಇವತ್ತು ಮಾಡಿದ ಕೆಲಸಾನ ಮದುವೆ ಆದ ಹೊಸದರಲ್ಲೇ ಮಾಡಿದ್ರೆ.. ಆ Blind love stageನಲ್ಲಿ ಎಲ್ಲ ಕೊಚ್ಚಿಕೊಂಡು ಹೋಗಿರೋದು. ನಾನು ಮಾಡಿದ್ದು ಅದೇ ಕೆಲ್ಸ.. ಅವತ್ತಿಂದ ಒಂದು ದಿನ ನಿನ್ನ ಅಮ್ಮ ನನ್ನ ಕೈಲಿ ಲಾಂಡ್ರಿ ಮಾಡಿಸಿಲ್ಲ... ಅದು ಬಿಟ್ಟು ಮದುವೆಯಾಗಿ ೫ ವರ್ಷ ಆದ್ಮೇಲೆ 'ಎಂಟು ವರ್ಷಕ್ಕೆ ನನ್ನ ಮಗ ದಂಟು ಅಂದ' ಅನ್ನೋಹಾಗೆ... ಈಗ ಹೀಗ್ ಮಾಡಿದ್ದೀಯಲ್ಲ...

**ಸುಶೀಲ:** ನಿಮ್ಮ ಜಾಣತನ ನನಗೆ ಗೊತ್ತಾಗ್ಲಿಲ್ಲ ಅಂದ್ಕೋ ಬೇಡಿ.. ಒಂದೊಂದ್ಸಲ ನಾನು ಲಾಂಡ್ರಿ ಮಾಡ್ದಾಗ್ಲೂ ನಿಮ್ಮ ಸೇವಿಂಗ್ಸ್ ಅಕೌಂಟ್‌ನಿಂದ ನನ್ನ ಚೆಕಿಂಗ್ ಅಕೌಂಟ್‌ಗೆ ೨೫ ಡಾಲರ್ ಟ್ರಾನ್ಸ್‌ಫರ್ ಮಾಡ್ಕೋತಿದ್ದೀನಿ ಮೂವತ್ತೈದು ವರ್ಷದಿಂದ

**ರಾಮಮೂರ್ತಿ:** (ಆಶ್ಚರ್ಯದಿಂದ ) ಏನೂ?

**ಸುಶೀಲ:** ಏನಿಲ್ಲ..ನನ್ನ ಲಾಂಡ್ರಿ ಸರ್ವೀಸ್ಗೆ you have paid through your nose ಅಷ್ಟೆ. (ಅರುಣ್ ಕುರಿತು) ಅಲ್ವೋ Step by step instruction ಕೊಟ್ಟಿದ್ದೀನಿ ಆದ್ರೂ ಹೀಗ್ ಮಾಡಿದ್ದೀಯಲ್ಲ..ಹೋಗ್ಲಿ ನಡಿ ನಾವು ಹೇಗಿದ್ರೂ ಹೊರಗೆ ಊಟಕ್ಕೆ ಹೋಗ್ತಿದ್ದೀವಿ..ನೀನೂ ಬಂದು ತಿಂದ್ಬಿಟ್ಟು ಅವಳ್ಗೂ ಸ್ವಲ್ಪ ಕಟ್ಟಿಸಿಕೊಂಡ್ ಬರ್ತೀಯಂತೆ.. ದಾರೀನಲ್ಲಿ ಜ್ಯುಯಲರಿ ಅಂಗಡೀಲಿ ಸೇಲು ಜೋರಾಗ್ ನಡೀತಿದೆ.. ಕಿವೀಗೋ, ಕೈಗೋ ಏನೋ ಒಂದು ತಂದುಕೊಟ್ಟು ಅವಳ ಕೋಪಕ್ಕೆ ಶಾಂತಿ ಮಾಡೋವಂತೆ..ಹಾಗೆ ಬ್ಲೂಮಿಂಗ್ಡೇಲ್ಗೂ ಹೋಗ್ಬಹುದು ಬಾ...ಹೋಗೋಣ.

**ರಾಮಮೂರ್ತಿ:** (ನಡುವೆ ಬಾಯಿಹಾಕಿ)ಅಯ್ಯೋ ಸುಮ್ನೆ ನೀನು ಅವಳ ಮಾತು ಕೇಳ್ತಾ ಕೂತ್ಕೊಬೇಡ. ಬ್ಲೂಮಿಂಗ್ಡೇಲು, ಗಂಜಾಂ ನಾಗಪ್ಪ ಅದೆಲ್ಲ ತುಂಬಾ expensive. ನನ್ನ ಮಾತ್ ಕೇಳು (ಅಲ್ಲೇ ಹೂದಾನಿಯಲ್ಲಿದ್ದ ಹೂವನ್ನು ತೆಗೆದುಕೊಂಡು ಬಂದು ಕೊಡುತ್ತ) ಇದನ್ನ ಕೊಟ್ಟು ಸಾರಿ ಹೇಳು ಬೇಕಾದಷ್ಟಾಯ್ತು.(ಅರುಣ್ ತೆಗೆದುಕೊಳ್ಳುತ್ತಾನೆ)

**ಸುಶೀಲ:** (ತಲೆ ಚೆಚ್ಚಿಕೊಳ್ಳುತ್ತ) ನಿಮ್ಮ ಅಪ್ಪನ ಮಾತು ಕೇಳಿದ್ರೆ ಸೀದ ನೀನು ಡೈವೊರ್ಸ್ ಲಾಯರ್ ಹತ್ರ ಹೋಗ್ಬೇಕಾಗುತ್ತೆ ಅಷ್ಟೆ. ಅದು ಸ್ವಲ್ಪ ಹೊತ್ತಿಗೆ ಮುಂಚೆ ಅವಳೇ ನನಗೆ ತಂದುಕೊಟ್ಟ ಹೂವು. (ಅರುಣ್ ತಕ್ಷಣ ಅದನ್ನ ಕೆಳಗೆ ಇಡುತ್ತಾನೆ) ರೀ ನೀವು ತೆಪ್ಪಗಿರಿ. ನಿಮ್ಮ ಬುದ್ಧೀನ ಅವನ್ಗೂ ಹೇಳ್ಕೊಡ್ಬೇಡಿ. ಲೋ ಅರುಣ್

ನಮ್ಮ ಮನೇನೂ ನಿಮ್ಮ ಮನೇ ತರ ಗಲೀಜ್ ಮಾಡ್ಬೇಡ, ಅದನ್ನೆಲ್ಲ ತೆಗೆದಿಟ್ಟು ಬಿಟ್ಟು ನೀನೂ ಉಡ್‌ಲಾಂಡ್ಸ್‌ಗೆ ಬಾ. ನಡೀರಿ ನೀವು.. (ಸುಶೀಲ ರಾಮಮೂರ್ತಿ ಹೊರಡುತ್ತಾರೆ)

**ಅರುಣ್:** (ಬ್ಯಾಸ್ಕೆಟ್‌ನಲ್ಲಿರುವ ಬಟ್ಟೆಯನ್ನು ಒಂದೊಂದಾಗಿ ತೆಗೆದುನೋಡುತ್ತ) ಅಬ್ಬಬ್ಬ ನನಗಂತು ಏನ್ಮಾಡಿದ್ರೂ ಇದೊಂದೂ ಅರ್ಥ ಆಗೊಲ್ಲ. ಕೆಲ್ಸ ಮಾಡಿದ್ರು ಕಷ್ಟ.. ಮಾಡದಿದ್ರೂ ಕಷ್ಟ.. ಮಾತಾಡಿದ್ರೂ ಕಷ್ಟ ಆಡದಿದ್ರೂ ಕಷ್ಟ...ಆದ್ರೂ ಮದುವೇ ಅನ್ನೋ ಹಳ್ಳಕ್ಕೆ ಬೀಳೋಕೆ ನನ್ನಂಥ ಕುರಿಗ್ಳು ನಾನು ತಾನೂ ಅಂತ ನುಗ್ಗಾಡ್ತಿರುತ್ವೆ... I just don't get it....ನಮ್ಮನ್ನ ನಮ್ಮ ಪಾಡಿಗಿರೋಕೆ ಬಿಟ್ಟು ತಾವೂ ಸುಖವಾಗಿ ಇರಬಾರ್ದು ಈ ಹೆಂಗಸ್ರೂ..? ಯಾವ್ದೋ ಬೇರೆ ಗ್ರಹದಿಂದ ಬಂದವರತರ ಯಾಕ್ ಆಡ್ತಾರೋ..? (ಎಂದೆಂದಿಗೂ ಉತ್ತರ ಸಿಗದ ಪ್ರಶ್ನೆಯ ಜಾಲದಲ್ಲಿ ಸಿಕ್ಕಿ ದಿಕ್ಕು ತೋಚದವನಂತೆ ಎರಡು ಕೈಗಳನ್ನೂ ಮೇಲೆ ಎತ್ತಿ ನಿಂತಿರುವಂತೆ, ತೆರೆ ಸರಿಯುತ್ತಾ ಹೊಗುತ್ತದೆ)

**ಶುಭಂ** 

## ಅನುಬಂಧ–೧

## ಲೇಖಕರ ಪರಿಚಯ

**ಆಹಿತಾನಲ**

'ಆಹಿತಾನಲ' ಕಾವ್ಯನಾಮದಲ್ಲಿ ಬರೆಯುವ ಶ್ರೀ ನಾಗ ಐತಾಳರು, ಹುಟ್ಟಿದ್ದು ಕರ್ನಾಟಕದ ಕರಾವಳಿಯ ಉಡುಪಿ ಜಿಲ್ಲೆಯ ಕೋಟದಲ್ಲಿ. ಸ್ನಾತಕೋತ್ತರ ವಿದ್ಯಾಭ್ಯಾಸ (ಬಯೋಕೆಮಿಸ್ಟ್ರಿಯಲ್ಲಿ Ph.D.) ಬೆಂಗಳೂರಿನ Indian Institute of Scienceನಲ್ಲಿ. ಮುಂದೆ University of Chicagoದಲ್ಲಿ ಸುಮಾರು ೨೭ ವರ್ಷ ಸಂಶೋಧನಾ ಪ್ರಾಧ್ಯಾಪಕರಾಗಿ ಕೆಲಸ ಮಾಡಿ, ಈಗ ನಿವೃತ್ತರಾಗಿ ಲಾಸ್ ಏಂಜಲಿಸ್ ಬಳಿಯ ಉಪನಗರ ಆರ್ಕೇಡಿಯದಲ್ಲಿ ಸಹಧರ್ಮಿಣಿ ಲಕ್ಷ್ಮಿಯ ಜೊತೆಗೆ ವಾಸಿಸುತ್ತಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಅಭಿರುಚಿ ಬೆಳೆಸಿಕೊಂಡು, ಹವ್ಯಾಸಕ್ಕೆಂದು ಆಗಾಗ್ಗೆ ಅಷ್ಟಿಷ್ಟು ಲೇಖನಗಳನ್ನು ಬರೆಯುತ್ತ ತಮ್ಮ ನಿವೃತ್ತ ಜೀವನವನ್ನು ಸವಿಯುತ್ತಿದ್ದಾರೆ. 'ಅಮೆರಿಕನ್ನಡಿಗನೊಬ್ಬನ ದಿನಚರಿಯಿಂದ' ಎಂಬ ಅನುಭವ ಕಥನ, 'ಕಾರಂತ ಚಿಂತನ', 'ಕುವೆಂಪು ಸಾಹಿತ್ಯ ಸಮೀಕ್ಷೆ', 'ಯದುಗಿರಿಯ ಬೆಳಕು' ಮತ್ತು 'ಕನ್ನಡದಮರ ಚೇತನ' ಎಂಬ ನಾಲ್ಕು ಸಂಪಾದಿತ ಗ್ರಂಥಗಳು–ಅವರ ಪ್ರಕಟಿತ ಗ್ರಂಥಗಳು.

816, Othello St.

Arcadia, California 91006

nagaaithal@yahoo.com

**ಅರುಣ್, ಅನುರಾಧ**

ಶ್ರೀಮತಿಯವರು paralegal ವೃತ್ತಿತಜ್ಞರು. ಪುಸ್ತಕಾಲಯದಲ್ಲಿ ಉದ್ಯೋಗಿಯಾಗಿ ಕೆಲಸ ಮಾಡಿದ್ದಾರೆ. ಈಗ ಪತಿ ಅರುಣ್ ಮತ್ತು ಮಗ ಅಶ್ರಿತ್ ಜೊತೆ ಇಲಿನಾಯ್‌ನ

ಬೋಲಿಂಗ್ಬ್ರುಕ್‌ನಲ್ಲಿ ನೆಲೆಸಿದ್ದಾರೆ. ಇವರ ಅನೇಕ ಲೇಖನಗಳು ಚಿಕಾಗೋ ಕನ್ನಡ ಕೂಟದ 'ಸಂಗಮ' ಪತ್ರಿಕೆಯಲ್ಲಿ ಹಾಗೂ ಅಂತರ್ಜಾಲದಲ್ಲಿ ಬೆಳಕು ಕಂಡಿವೆ.

669 Rebecca Lane

Bolingbrook IL 60440

arun 20002@comcast.net

**ಅಯ್ಯಂಗಾರ್, ಅಲಮೇಲು**

ಜನಪ್ರಿಯ ನಾಟಕಗಳನ್ನು ಬರೆದು ಅಮೆರಿಕನ್ನಡಿಗರಲ್ಲಿ ಮನೆಮಾತಾಗಿರುವ ಅಲಮೇಲು ಅಯ್ಯಂಗಾರ್ ಅವರು ಉತ್ತರ ಕ್ಯಾಲಿಫೋರ್ನಿಯದಲ್ಲಿ ನೆಲೆಸಿದ್ದಾರೆ. ಅಮೆರಿಕದ ಉದ್ದಗಲಕ್ಕೂ ಕನ್ನಡಿಗರ ಸಮ್ಮೇಳನಗಳಲ್ಲಿ ಅವರ ನಾಟಕಗಳ ನಿತ್ಯ ಪ್ರದರ್ಶನ ನಡೆಯುತ್ತದೆ. ನಾಟಕಗಳಲ್ಲದೆ, ಕಥೆ, ಕವನ, ಲಘು ಬರಹಗಳು, ಪ್ರಬಂಧಗಳು, ವಿಮರ್ಶಾತ್ಮಕ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ನಾಲ್ಕು ಪ್ರಹಸನಗಳ ಸಂಕಲನ, 'ಹೈಟೆಕ್ ಹಯವದನಾಚಾರ್' ಅವರ ಪ್ರಕಟಿತ ಕೃತಿ. ಶ್ರೀಮತಿಯವರು ಕನ್ನಡದ ಹಿರಿಯ ಸಾಹಿತಿ ಪು.ತಿ.ನ. ಅವರ ಪುತ್ರಿ.

12781 Miller Avenue

Saratoga, CA. 95070

iyengar@mindspring.com

**ಬಾಬು, ಶ್ರೀಕಾಂತ.**

ಶ್ರೀಕಾಂತ ಬಾಬು ಅವರು ನ್ಯೂಜೆರ್ಸಿಯಲ್ಲಿ ಸುಮಾರು ೧೬ ವರ್ಷಗಳಿಂದ ನೆಲೆಸಿರುತ್ತಾರೆ. ಅವರು ನ್ಯೂಯಾರ್ಕ್‌ನ Credit Suisse Bankನಲ್ಲಿ IT Managerಆಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಅವರಿಗೆ ಕನ್ನಡ ಸಾಹಿತ್ಯದಲ್ಲಿ ಹಾಗೂ ಭಾರತೀಯ ಸಂಗೀತದಲ್ಲಿ ತುಂಬಾ ಆಸಕ್ತಿ ಆದರೆ ಸಾಹಿತ್ಯ ರಚನೆ ತಮ್ಮ ಹವ್ಯಾಸವಲ್ಲ, ಎನ್ನುತ್ತಾರೆ.

39 Lavender Drive

Edison, NJ 08820

svenkatesha@hotmail.com

**ಚಂದ್ರಶೇಖರ್, ಎಚ್.ಕೆ.**

ಮೈಸೂರು ಮೆಡಿಕಲ್ ಕಾಲೇಜಿನ ಪದವೀಧರರಾಗಿ, ನಂತರ ಇಂಗ್ಲೆಂಡ್ ಮತ್ತು ಅಮೆರಿಕಗಳಲ್ಲಿ ಉನ್ನತ ವ್ಯಾಸಂಗ ಗಳಿಸಿ, ಕಳೆದ ಮೂವತ್ತೈದು ವರ್ಷಗಳಿಂದ ನ್ಯೂಯಾರ್ಕಿನಲ್ಲಿ, ಪತ್ನಿ ಡಾ. ಶ್ರೀದೇವಿಯವರೊಡನೆ ನೆಲೆಸಿರುವ ಚಂದ್ರಶೇಖರ್ ಅವರು ENT ತಜ್ಞರು. ನ್ಯೂಯಾರ್ಕಿನ ಭಾರತೀಯ ಜನಾಂಗದ ಪ್ರಮುಖ-ರಲ್ಲೊಬ್ಬರಾಗಿದ್ದು, ಅಲ್ಲಿನ ಅನೇಕ ವೈದ್ಯಕೀಯ ಮತ್ತು ಸಾಂಸ್ಕೃತಿಕ ಕಾರ್ಯ-ಕ್ರಮಗಳಲ್ಲಿ ಮುಖ್ಯಪಾತ್ರ ವಹಿಸಿದ್ದಾರೆ. ೧೯೮೭ರಲ್ಲಿ ಅಲ್ಲಿನ ಭಾರತೀಯ ಸಂಸ್ಥೆಗಳ ಅಧ್ಯಕ್ಷರಾಗಿದ್ದರು. ನಂತರದಲ್ಲಿ ಅಲ್ಲಿನ ಮೇಯರ್ ಅವರ ಜನಾಂಗ ಸಮಿತಿಯಲ್ಲಿ ಭಾರತೀಯ ಸದಸ್ಯರಾಗಿದ್ದು, ನ್ಯೂಯಾರ್ಕ್ ನಗರದಲ್ಲಿ ಮಹಾತ್ಮ ಗಾಂಧಿಯವರ ಪ್ರತಿಮೆಯ ಸ್ಥಾಪನೆಗೆ ಕಾರಣರಾದರು. ಕನ್ನಡ ಸಾಹಿತ್ಯದಲ್ಲೂ, ಸಂಸ್ಕೃತಿಯಲ್ಲೂ ಅತ್ಯಂತ ಆಸಕ್ತಿಯುಳ್ಳವರು. ವಿವಿಧ ಪ್ರಬಂಧ ಸಂಕಲನಗಳಲ್ಲಿ, ನಿಯತಕಾಲಿಕೆಗಳಲ್ಲಿ ಇವರ ಲೇಖನಗಳು ಪ್ರಕಟವಾಗಿವೆ. 'ಭಾರತದ ಬೃಹತ್ ಬೇಲಿ' ಎಂಬ ಐತಿಹಾಸಿಕ ವಿಶಿಷ್ಟ ಗ್ರಂಥ ಇವರ ಪ್ರಕಟಿತ ಕೃತಿ.

630, First Avenue, #6B

New York, NY 10016

chandytata@gmail.com

**ದಿವಾಕರ್, ಎಸ್**

ವೃತ್ತಿಯಿಂದ ಪತ್ರಕರ್ತರಾದ ಶ್ರೀ ದಿವಾಕರ್ ಅವರು ಸಂಯುಕ್ತ ಕರ್ನಾಟಕ, ಮಲ್ಲಿಗೆ, ಸುಧಾ ಪತ್ರಿಕೆಗಳಲ್ಲಿ ಕೆಲಸ ಮಾಡಿ, ಈಗ ಪ್ರಜಾವಾಣಿಯಲ್ಲಿ ಸಹ ಸಂಪಾದಕರಾಗಿದ್ದಾರೆ. ಶ್ರೀಯುತರು ಸಣ್ಣಕಥೆ, ಕಾವ್ಯ, ಪ್ರಬಂಧ, ವಿಮರ್ಶೆ, ಭಾಷಾಂತರ, ಅಂಕಣ ಬರಹ–ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಭಾರತ ಸರ್ಕಾರದ ಸಂಸ್ಕೃತಿ ಇಲಾಖೆಯ ಸೀನಿಯರ್ ಫೆಲೋಷಿಪ್, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಕನ್ನಡ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಡಾ.ಶಿವರಾಮ ಕಾರಂತ ಪ್ರಶಸ್ತಿ, ಮುದ್ದಣ ಕಾವ್ಯ ಪ್ರಶಸ್ತಿ, ಅಖಿಲ ಭಾರತ ಹಿಂದಿ ಪುರಸ್ಕಾರ್– ಇವು ಇವರು ಗಳಿಸಿರುವ ಪ್ರಶಸ್ತಿ–ಪುರಸ್ಕಾರಗಳಲ್ಲಿ ಕೆಲವು. 'ಇತಿಹಾಸ', 'ಎಲ್ಲ ಬಲ್ಲವರಿಲ್ಲ ಈ

ಊರಿನಲ್ಲಿ', 'ಆತ್ಮಚರಿತ್ರೆಯ ಕೊನೆಯ ಪುಟ', 'ಸಾಪತ್ತೆಯಾದ ಗ್ರಾಮಾಫೋನು ಮತ್ತು ಇತರ ಪ್ರಬಂಧಗಳು' ಇವು ಇವರ ಕೆಲವು ಪ್ರಕಟಿತ ಕೃತಿಗಳು. ಇವಲ್ಲದೆ ಅನೇಕ ಭಾಷಾಂತರಗಳನ್ನೂ, ಸಂಪಾದಿತ ಕೃತಿಗಳನ್ನೂ ಪ್ರಕಟಿಸಿದ್ದಾರೆ.

471, 22nd Cross, Banashankari 2nd Stage
Bangalore- 560 070. India.
Ph: 99862-11308 (c)

## ದುಗ್ಗಾಪುರ ಶ್ರೀವತ್ಸ

ವೃತ್ತಿಯಲ್ಲಿ ಸಾಫ್ಟ್‌ವೇರ್ ಎಂಜಿನಿಯರ್. ಕಲೆ, ಸಾಹಿತ್ಯ ಹಾಗೂ ಸಂಗೀತದಲ್ಲಿ ಅಪಾರವಾದ ಆಸಕ್ತಿ. ೨೦೦೩ ಹಾಗೂ ೨೦೦೪ನೇ ವರ್ಷದಲ್ಲಿ, ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟದ ವಾರ್ಷಿಕ ಸಂಚಿಕೆಯಾದ 'ಸ್ವರ್ಣಸೇತು'ವಿನ ಸಂಪಾದಕರಾಗಿ ದುಡಿದಿರುವ ಶ್ರೀವತ್ಸ ಅವರಿಗೆ ವನ್ಯಜೀವಿಗಳ ಛಾಯಾಗ್ರಹಣ, ಗ್ರಾಫಿಕ್ ಡಿಸೈನ್‌ನಲ್ಲಿ ಸಾಕಷ್ಟು ಒಲವು. ಚಿತ್ರಕಲೆ, ರಂಗಭೂಮಿ, ಸುಗಮ ಸಂಗೀತ, ಚಾರಣ ಇವರ ಇತರ ಹವ್ಯಾಸಗಳಲ್ಲಿ ಕೆಲವು.

1053 W. Olive Ave #3
Sunnyvale CA-94086
vatsee@hotmail.com

## ಗುಂಡೂರಾವ್, ವೈ.ಎನ್.

ವೈ.ಎನ್. ಗುಂಡೂರಾವ್ ಅವರು ೧೯೪೫ರಲ್ಲಿ, ಈಗಿನ ಚಾಮರಾಜನಗರ ಜಿಲ್ಲೆಯಲ್ಲಿ ಜನಿಸಿದರು. ಬಿ. ಕಾಂ., ಪದವಿ ಪಡೆದು ಇಂಡಿಯನ್ ಟೆಲಿಫೋನ್ ಇಂಡಸ್ಟ್ರಿಯಲ್ಲಿ ಉದ್ಯೋಗದಲ್ಲಿದ್ದಾರೆ. 'ನಗೆ ಮಿಂಚು', 'ನಗೆ ಮಲ್ಲಿಗೆ', 'ಅಡ್ಜೆಸ್ಟ್‌ಮಾಡ್ಕೋ ಬೇಕ್ರಿ......', 'ಅಸಲಿ ನಕಲಿ' ಇವು ಅವರ ಪ್ರಕಟಿತ ಹಾಸ್ಯ ಸಂಕಲನಗಳು. 'ಅನಾವರಣ' ಅವರ ಪ್ರಕಟಿತ ಕಥಾ ಸಂಕಲನ. 'ನಗೆ ಹೂರಣ', 'ನಾಡಿಗೇರರ ಆಯ್ದ ನಗೆ ಬರಹಗಳು'. 'ದಾಶರಥಿ ದೀಕ್ಷಿತರ ಆಯ್ದ ನಗೆ ಬರಹಗಳು', 'ಹಾಸ್ಯಾಂಬರ', 'ಬೆಸ್ಟ್ ಆಫ್ ಸುನಂದಮ್ಮ', 'ಬೆಸ್ಟ್ ಆಫ್ ಕಸ್ತೂರಿ'ಇವು ಇವರ ಸಂಪಾದಿತ ಕೃತಿಗಳು.

Mr. Y.N. Gundu Rao
No.1231, 13th Cross, II Phase, Girinagar

BANGALORE 560 085

Telephone: (Res) 091-080-26722731

Mobile: 9880109109

**ಹೆಗಡೆ, ಭುವನೇಶ್ವರಿ**

ಸುಮಾರು ಮುನ್ನೂರಕ್ಕೂ ಮಿಕ್ಕು ಹಾಸ್ಯ ಪ್ರಬಂಧಗಳನ್ನು ರಚಿಸಿರುವ ಶ್ರೀಮತಿ ಭುವನೇಶ್ವರಿ ಹೆಗಡೆಯವರು ಕನ್ನಡದ ಹೆಸರಾಂತ ಹಾಸ್ಯ ಸಾಹಿತಿಗಳಲ್ಲೊಬ್ಬರು. ಉತ್ತರ ಕನ್ನಡ ಜಿಲ್ಲೆಯ ಕತ್ರಗಾಲದಲ್ಲಿ ಜನಿಸಿದ ಶ್ರೀಮತಿಯವರು, ಕರ್ನಾಟಕ ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರದಲ್ಲಿ ಎಂ.ಎ. ಪದವಿಯನ್ನು ಪಡೆದು ಈಗ ಮಂಗಳೂರು ವಿಶ್ವವಿದ್ಯಾಲಯದಲ್ಲಿ ಅರ್ಥಶಾಸ್ತ್ರದ ಉಪನ್ಯಾಸಕಿಯಾಗಿದ್ದಾರೆ. ಕನ್ನಡದ ಎಲ್ಲ ಪ್ರಮುಖ ಪತ್ರಿಕೆಗಳಲ್ಲಿ ಇವರ ಲೇಖನಗಳು ಪ್ರಕಟವಾಗಿವೆ. ಇವರಿಗೆ ದೊರಕಿರುವ ಹಲವಾರು ಪ್ರಶಸ್ತಿಗಳಲ್ಲಿ, ಬೀchi ಹಾಸ್ಯ ಪ್ರಶಸ್ತಿ (೧೯೮೩, ೧೯೮೪, ೧೯೮೫), ಕನ್ನಡ ಸಾಹಿತ್ಯ ಪರಿಷತ್ ಪ್ರಶಸ್ತಿ (೧೯೮೬), ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೮೮, ೧೯೯೭), ಪಡುಕೋಣೆ ರಮಾನಂದ ಪ್ರಶಸ್ತಿ (೧೯೯೭) ಇವು ಕೆಲವು. 'ಮುಗುಳು', 'ನಕ್ಕು ಹಗುರಾಗಿ', 'ಎಂಥದು ಮಾರಾಯ್ರೇ', 'ವಲಲ ಪ್ರತಾಪ', 'ಹಾಸ ಭಾಸ', 'ಮೃಗಯಾ ವಿನೋದ', 'ಬೆಟ್ಟದ ಭಾಗೀರತಿ', 'ಮಾತಾಡಲು ಮಾತೇ ಬೇಕೇ?', 'ಪುಟ್ಟಿಯ ಪಟ್ಟೆ ಹುಲಿ', 'ಕೈಗುಣ ಬಾಯ್‌ಗುಣ'ಇವು ಇವರ ಪ್ರಕಟಿತ ಕೃತಿಗಳು.

101 Rathna apartments,

Kadri Market, Mangalore 2

Karnataka India.

**ಹೇಮಾವತಿ, ಪ್ರಕಾಶ್**

ಶಿಕಾಗೋ ಬಳಿಯ ನೇಪರ್‌ವಿಲ್ಲಿನಲ್ಲಿ ನೆಲೆಸಿರುವ ಪ್ರಕಾಶ್ ಹೇಮಾವತಿಯವರು ವೃತ್ತಿಯಲ್ಲಿ ವಾಸ್ತುಶಿಲ್ಪಿ. ಚಿಕ್ಕಂದಿನಿಂದಲೂ ಕರ್ನಾಟಕದ ಚರಿತ್ರೆ, ಸಾಹಿತ್ಯಗಳಲ್ಲಿ ಆಸಕ್ತಿಯಿದ್ದು ಹಲವಾರು ಕಥೆ, ಕವನ, ಲೇಖನ ಹಾಗೂ ನಾಟಕಗಳನ್ನು ರಚಿಸಿರುವುದಲ್ಲದೆ ಕರ್ನಾಟಕದ ಚರಿತ್ರೆಯನ್ನು ಸಂಕ್ಷಿಪ್ತವಾಗಿ ರಚಿಸಿ, ವಿದ್ಯಾರಣ್ಯ ಕನ್ನಡ ಕೂಟದ 'ಸಂಗಮ'ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಶಿಕಾಗೋ ಕಲಾರಂಗ, 'ಶಿಖರ'ಎನ್ನುವ ನಾಟಕ ತಂಡವನ್ನು ಪ್ರಾರಂಭಿಸಿ, ಉತ್ತಮ ನಾಟಕಗಳನ್ನು ಪ್ರದರ್ಶಿಸುವ ಕಾರ್ಯದಲ್ಲಿಯೂ ಸಹ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

525 Peacock Court

Naperville, IL 60565

phemavathi@yahoo.com

**ಜೋಶಿ, ಶ್ರೀವತ್ಸ**

ಮೂಲತಃ ಉಡುಪಿ ಜಿಲ್ಲೆಯ ಕಾರ್ಕಳದವರಾದ ಶ್ರೀವತ್ಸ ಜೋಶಿಯವರು, ಕಂಪ್ಯೂಟರ್ ವಿಭಾಗದಲ್ಲಿ ತಾಂತ್ರಿಕ ಶಿಕ್ಷಣ ಪಡೆದು ದೆಹಲಿ, ಹೈದರಾಬಾದ್, ಬೆಂಗಳೂರು ಮುಂತಾದ ಕಡೆ ಉದ್ಯೋಗದ ನಂತರ ಈಗ ಅಮೆರಿಕಕ್ಕೆ ವಲಸೆ ಬಂದು ವೃತ್ತಿ ಜೀವನ ನಡೆಸುತ್ತಿದ್ದಾರೆ. ಪ್ರಸ್ತುತ ಐ.ಬಿ.ಎಂ ಕಂಪೆನಿಯಲ್ಲಿ ಉದ್ಯೋಗಿಯಾಗಿದ್ದು ವರ್ಜೀನಿಯಾದ ರೆಸ್ಟನ್‌ನಲ್ಲಿ ವಾಸಿಸುತ್ತಿದ್ದಾರೆ. ಕನ್ನಡ ನಾಡು-ನುಡಿ-ಭಾಷೆ-ಸಂಸ್ಕೃತಿಯ ಬಗ್ಗೆ ಅಭಿಮಾನವಷ್ಟೇ ಅಲ್ಲದೆ ಪತ್ರಿಕಾರಂಗದ ಬಗ್ಗೆಯೂ ಆಸಕ್ತಿಯಿರುವ ಇವರು 'ದಟ್ಸ್‌ಕನ್ನಡಡಾಟ್‌ಕಾಮ್'ಅಂತರ್ಜಾಲ ಕನ್ನಡ ಪತ್ರಿಕೆಯಲ್ಲಿ 'ವಿಚಿತ್ರಾನ್ನ' ಎಂಬ ಶೀರ್ಷಿಕೆಯ ಸಾಪ್ತಾಹಿಕ ಅಂಕಣದಲ್ಲಿ ಲೇಖನ ಪ್ರಕಟಿಸುತ್ತಿದ್ದಾರೆ. ಈ ಲೇಖನಗಳ ಸಂಕಲನವು 'ವಿಚಿತ್ರಾನ್ನ' ಹೆಸರಿನ ಪುಸ್ತಕವಾಗಿ ಪ್ರಕಟವಾಗಿದೆ. ಇವರ ಹಲವು ಲೇಖನಗಳು, ಲಘುಬರಹಗಳು 'ವಿಜಯ ಕರ್ನಾಟಕ' ದಿನಪತ್ರಿಕೆಯಲ್ಲೂ ಮತ್ತಿತರ ನಿಯತಕಾಲಿಕೆಗಳಲ್ಲೂ ಪ್ರಕಟವಾಗಿವೆ. ವಾಷಿಂಗ್‌ಟನ್ ಪ್ರದೇಶದ 'ಕಾವೇರಿ ಕನ್ನಡ ಸಂಘ'ದ ಪತ್ರಿಕೆ 'ಭಾವನದಿ'ಯ ಸಂಪಾದಕತ್ವವನ್ನೂ ನಿರ್ವಹಿಸಿದ್ದಾರೆ.

11880 Breton Ct,

Reston, VA 20191.

Email: srivathsajoshi@yahoo.com

**ಕಾಗಿನೆಲೆ, ಗುರುಪ್ರಸಾದ್**

ಹುಟ್ಟಿದ್ದು ಶಿವಮೊಗ್ಗ. ಬೆಳೆದದ್ದು ಮೈಸೂರು ಮತ್ತು ಮಂಡ್ಯ ಜಿಲ್ಲೆಯ ನಾಗಮಂಗಲದಲ್ಲಿ. ಬಳ್ಳಾರಿಯ ಸರಕಾರಿ ವೈದ್ಯಕೀಯ ವಿದ್ಯಾಲಯದಲ್ಲಿ ಎಂ.ಬಿ.ಬಿ.ಎಸ್ ಮತ್ತು ಎಂ.ಡಿ ಪದವಿಗಳನ್ನು ಪಡೆದರು. ೧೯೯೫ರಲ್ಲಿ ಅಮೆರಿಕಕ್ಕೆ ಬಂದು ನೆಲೆಸಿದರು. ಸದ್ಯಕ್ಕೆ ಮಿನಿಸೋಟದ ರಾಚೆಸ್ಟರ್‌ನಲ್ಲಿ ಪತ್ನಿ ಪದ್ಮ ಮತ್ತು ಮಕ್ಕಳಾದ ಪ್ರಣಿತ ಮತ್ತು ಪ್ರಭವರೊಟ್ಟಿಗೆ ವಾಸ. ಇವರ ಸಣ್ಣಕಥೆಗಳು ಮತ್ತು ಪ್ರಬಂಧಗಳು ಕನ್ನಡದ ನಿಯತಕಾಲಿಕೆಗಳಲ್ಲಿ, ಸಾಪ್ತಾಹಿಕಗಳಲ್ಲಿ ಮತ್ತು ಅಂತರ್ಜಾಲ ಪೋರ್ಟಲ್‌ಗಳಲ್ಲಿ ಪ್ರಕಟವಾಗಿವೆ. 'ನಿರ್ಗುಣ'(ಕಥಾಸಂಕಲನ), 'ವೈದ್ಯ, ಮತ್ತೊಬ್ಬ'(ಲೇಖನ ಸಂಗ್ರಹ) ಮತ್ತು 'ಶಕುಂತಳಾ'(ಕಥಾಸಂಕಲನ) ಇವರ ಪ್ರಕಟಿತ ಕೃತಿಗಳು. 'ಆಚೀಚೆಯ ಕಥೆಗಳು'ಇವರ ಸಂಪಾದಿತ ಕಥಾ ಸಂಕಲನ.

6044 Granite Drive NW
Rochester, MN. 55901.
gkaaginele@hotmail.com

**ಕೃಷ್ಣಮೂರ್ತಿ, ಮಧು**

ಮೂಲತಃ ಬೆಂಗಳೂರಿನವರಾದ ಮಧು ಕೃಷ್ಣಮೂರ್ತಿ ಎಲೆಕ್ಟ್ರಾನಿಕ್ ತಂತ್ರಜ್ಞಾನದಲ್ಲಿ ಬಿ.ಇ. ಪದವಿಯನ್ನು ಹಾಗು ಕಂಪ್ಯೂಟರ್ ವಿಜ್ಞಾನದಲ್ಲಿ ಎಂ. ಎಸ್. ಪದವಿಯನ್ನು ಪಡೆದಿದ್ದಾರೆ. ಸಿಲಿಕಾನ್ ಕಣಿವೆಯಲ್ಲಿ ಸಾಫ್ಟ್‌ವೇರ್ ಇಂಜಿನಿಯರ್ ಆಗಿ ಕೆಲಸ ಮಾಡುತ್ತಿರುವ ಇವರು ಅಲ್ಲಿನ ಕನ್ನಡ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ. ಇವರ ಅನೇಕ ಹಾಸ್ಯ ಲೇಖನಗಳು ಮತ್ತು ಕಥೆಗಳು ಅಂತರ್ಜಾಲ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರು ನಾಲ್ಕು ಕನ್ನಡ ನಾಟಕಗಳನ್ನು ರಚಿಸಿ, ನಿರ್ದೇಶಿಸಿ, ರಂಗದ ಮೇಲೆ ಪ್ರದರ್ಶನ ಮಾಡಿದ್ದಾರೆ. ಕನ್ನಡದಲ್ಲಿ ಸ್ಟ್ಯಾಂಡ್‌ಅಪ್ ಕಾಮಿಡಿ ಮಾಡುವುದು, ಕನ್ನಡ ರೇಡಿಯೊ ಕಾರ್ಯಕ್ರಮ ನಡೆಸಿಕೊಡುವುದು, ಕನ್ನಡ ಮತ್ತು ಆಂಗ್ಲ ಸಾಹಿತ್ಯ ಓದುವುದು ಹಾಗು ಅವುಗಳ ಬಗ್ಗೆ ಉಪನ್ಯಾಸ ನೀಡುವುದು ಇವರ ಇತರ ಹವ್ಯಾಸಗಳು.

5022 Miramar Avenue
San Jose
CA 95129, USA
Email: madhukanthk@yahoo.com

**ಕೃಷ್ಣಪ್ರಿಯ, ಹಂ.ಕ.**

ಕೃಷ್ಣಪ್ರಿಯ ಅವರು ಬೆಂಗಳೂರಿನಲ್ಲಿ ಬೆಳೆದು ಬೊಂಬಾಯಿ, ನ್ಯೂಯಾರ್ಕ್, ಅಯೋವಗಳ ಮೂಲಕ ಕ್ಯಾಲಿಫ಼ೋರ್ನಿಯಕ್ಕೆ ಬಂದು ನೆಲಸಿದ್ದಾರೆ. ಇನ್ನು ಮುಂದೆ ಇದೇ ರೀತಿ ಮುಂದುವರಿದರೆ ಪುನಃ ಬೆಂಗಳೂರು ಸೇರುವ ಸಾಧ್ಯತೆ ಇದೆ. ಅವರು ಹೇಳುವಂತೆ ಉದರನಿಮಿತ್ತವಾಗಿ ಇವರು ಹಾಕಿರುವ ವೇಷಗಳು–ಗಣಿತಾನ್ವೇಷಕ, ಗಣಿತ ಬೋಧಕ, ಹಾಸ್ಪಿಟಲ್‌ನಲ್ಲಿ ಹೌಸ್‌ಕೀಪರ್ ಮತ್ತು ಟ್ರಾನ್ಸ್ಪೋರ್ಟೇಷನ್ ಅಸಿಸ್ಟೆಂಟ್, ಕಂಪ್ಯೂಟರ್ ಎಂಜಿನಿಯರ್. ಬರೆಯುವ ಹವ್ಯಾಸವಿರುವ ಸಂಸಾರದಲ್ಲಿ ಹುಟ್ಟಿ ಬೆಳೆದ ಇವರು, ಈಚೆಗೆ ತಮ್ಮ ಕೆಲವು ರಚನೆಗಳನ್ನು ದಟ್ಸ್‌ಕನ್ನಡಡಾಟ್ ಕಾಂನಲ್ಲಿ, ಉತ್ತರ ಕ್ಯಾಲಿಫ಼ೋರ್ನಿಯದ ವಾರ್ಷಿಕ ಸಂಚಿಕೆಯಾದ 'ಸ್ವರ್ಣಸೇತು'ವಿನಲ್ಲಿ, ಮತ್ತಿತರ ಜಾಗಗಳಲ್ಲಿ ಪ್ರಕಟಿಸಿದ್ದಾರೆ. 'ಕನ್ನಡದಮರ ಚೇತನ'ಎಂಬ ಮಾಸ್ತಿಯವರ

ಜೀವನ, ಸಾಹಿತ್ಯದ ಮೇಲಿನ ಲೇಖನಗಳ ಸಂಕಲನದ ಸಹಸಂಪಾದಕರಾಗಿ ಕೆಲಸ ಮಾಡಿದ್ದಾರೆ.

21251 Gardena Drive

Cupertino CA 95014

krishnapri@member.ams.org

**ಲೋಕೇಶ್, ಹರವು**

ಶ್ರೀ ದೇವೇಗೌಡ ಮತ್ತು ಶ್ರೀಮತಿ ಸುಶೀಲಮ್ಮನವರ ಹಿರಿಯ ಮಗನಾಗಿ ಹಾಸನದಲ್ಲಿ ಹುಟ್ಟಿದರು. ಬೆಳೆದದ್ದು ಮತ್ತು ವ್ಯಾಸಂಗ ಮಂಡ್ಯದಲ್ಲಿ. ಮೈಸೂರು, ಮಂಗಳೂರು, ಇಂಗ್ಲೆಂಡ್, ಐರ್ಲೆಂಡ್ ಮತ್ತು ನ್ಯೂಯಾರ್ಕ್‌ಗಳಲ್ಲಿ ವೈದ್ಯಕೀಯ ವಿದ್ಯಾಭ್ಯಾಸ ಮುಗಿಸಿ, ಮಕ್ಕಳ ತಜ್ಞರಾಗಿ ಫ್ಲಾರಿಡದಲ್ಲಿ, ಪತ್ನಿ ಸ್ವರ್ಣ, ಮಕ್ಕಳು ಸ್ನೇಹ ಮತ್ತು ಅಭಿಮನ್ಯುವಿನ ಜೊತೆ ನೆಲಸಿದ್ದಾರೆ. ಚಿಕ್ಕಂದಿನಿಂದ ಕನ್ನಡ ಸಾಹಿತ್ಯದಲ್ಲಿ ಅಭಿಲಾಶೆ. ಹೊರನಾಡ ಕನ್ನಡಿಗರ ಕೂಟದ ಚಟುವಟಿಕೆಗಳಲ್ಲಿ ಸಕ್ರಿಯನಾಗಿರಲು ಆಸಕ್ತಿ. ಅನೇಕ ಕವನಗಳನ್ನೂ, ಪ್ರಬಂಧಗಳನ್ನೂ ರಚಿಸಿದ್ದಾರೆ.

3893 Mullenhurst Drive.

Palmharbor. 34685. FL

hlokesh@pol.net

**ಮಹದೇವ್, ಜ್ಯೋತಿ**

ಹುಟ್ಟಿ, ಬೆಳೆದದ್ದು ಕಾರ್ಕಳದಲ್ಲಿ. ಕ್ಯಾಲಿಫೋರ್ನಿಯದ ಕೂಪರ್ಟೀನೋವಿನಲ್ಲಿ ವಾಸ. ಮಗಳಾಗಿ, ಮಡದಿಯಾಗಿ, ಮಾತೆಯಾಗಿ, ಇವುಗಳೊಂದಿಗಿನ ಇನ್ನೆಲ್ಲಾ ಪಾತ್ರಗಳಾಗಿ, ಜೊತೆಜೊತೆಗೆ ಕಥೆಗಳಿಗಿಂತಲೂ ಕವನಗಳನ್ನು ಬರೆಯುವ ಹುಚ್ಚನ್ನು ಹವ್ಯಾಸವಾಗಿ ಹಚ್ಚಿಕೊಂಡ ಮಹಿಳೆ. ಮನಶ್ಶಾಸ್ತ್ರದಲ್ಲಿ ಎ.ಎ., ಕನ್ನಡದಲ್ಲಿ ಎಂ.ಎ., ಜೀವವಿಜ್ಞಾನದಲ್ಲಿ ಬಿ.ಎಸ್‌ಸಿ. ಪದವಿಗಳು. ೧೯೮೦ರಿಂದ ಆರಂಭಿಸಿ ಸುಮಾರು ಇನ್ನೂರಕ್ಕೂ ಮೀರಿ ಕವನಗಳ ರಚನೆ. ಹೃದಯವಾಹಿನಿ ಪತ್ರಿಕೆ ಏರ್ಪಡಿಸಿದ್ದ 'ವಿಶ್ವ ಮಟ್ಟದ ಕಥಾ ಸ್ಪರ್ಧೆ'ಯಲ್ಲಿ 'ಶಿವಾನಿ' ಕಥೆಗೆ ಪ್ರಥಮ ಬಹುಮಾನ. ಸಪ್ನ ಬುಕ್ ಹೌಸ್ ಸಹಯೋಗದಲ್ಲಿ ದಟ್ಸ್‌ಕನ್ನಡ ಏರ್ಪಡಿಸಿದ್ದ 'ಜಾಗತಿಕ ದೀಪಾವಳಿ ಕವನ ಸ್ಪರ್ಧೆ'ಯಲ್ಲಿ 'ಹೇಳು ಮನಸೇ' ಕವನಕ್ಕೆ ಪ್ರಥಮ ಬಹುಮಾನ. ಅಮೆರಿಕದ ಕೆಲವು ಕನ್ನಡ ಕೂಟಗಳ ಸಾಹಿತ್ಯ ಸಂಚಿಕೆಗಳಿಗೆ, ವಿಶ್ವ ಕನ್ನಡ ಸಮ್ಮೇಳನಗಳ ಸ್ಮರಣ

ಸಂಚಿಕೆಗಳಿಗೆ ಕಥೆ, ಕವನ, ಲೇಖನ ಹಾಗೂ ಪ್ರಬಂಧಗಳ ಬರವಣಿಗೆ. ೧೯೯೬ರಲ್ಲಿ ಹಾಗೂ ೨೦೦೨ರಲ್ಲಿ ಉತ್ತರ ಕ್ಯಾಲಿಫ಼ೋರ್ನಿಯಾ ಕನ್ನಡ ಕೂಟದ ವಾರ್ಷಿಕ ಸಾಹಿತ್ಯ ಸಂಚಿಕೆಯ ಸಂಪಾದಕ ಸಮಿತಿಯ ಸದಸ್ಯೆ. 'ಸಾಹಿತ್ಯಾಂಜಲಿಡಾಟ್‌ಆರ್ಗ್' ಸಂಪಾದಕ ಮಂಡಳಿ ಸದಸ್ಯೆ. 'ಭಾವಲಹರಿ', 'ಭಾವಗಾನ'ಇವರ ಪ್ರಕಟಿತ ಕವನ ಸಂಕಲನಗಳು.

7926, McClellan Road, Apt # 3,

Cupertino, CA, 95014.

jyothimahadev@yahoo.com

**ಮೂರ್ತಿ, ಅರುಣ್**

ಶಿಕಾಗೋ ವಿದ್ಯಾರಣ್ಯ ಕನ್ನಡ ಕೂಟದ ಸದಸ್ಯರಾದ ಅರುಣ್ ಮೂರ್ತಿ ಅಲ್ಲಿನ ಕಾರ್ಯಚಟುವಟಿಕೆಯಲ್ಲಿ ಆಸಕ್ತಿ ಮತ್ತು ಉತ್ಸಾಹದಿಂದ ಅನೇಕ ವರ್ಷಗಳಿಂದ ಸಕ್ರಿಯವಾಗಿ ಭಾಗವಹಿಸುತ್ತ ಬಂದಿದ್ದಾರೆ. ಸಾಹಿತ್ಯ ಮತ್ತು ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿರುವ ಇವರು ಕೂಟದ ಕೆಲವು ನಾಟಕಗಳಲ್ಲಿ ಕೂಡ ಪಾತ್ರವಹಿಸಿದ್ದಾರೆ. ಇವರ ರೇಖಾ ಮತ್ತು ವ್ಯಂಗ್ಯ ಚಿತ್ರಗಳು ಕೂಟದ 'ಸಂಗಮ' ಪತ್ರಿಕೆಯಲ್ಲದೆ, 'ಅಮೆರಿಕನ್ನಡ' ಹಾಗೂ 'ನ್ಯೂಸ್ ಇಂಡಿಯಾ' ಪತ್ರಿಕೆಗಳಲ್ಲೂ ಪ್ರಕಟಗೊಂಡಿವೆ. ಕಂಪ್ಯೂಟರ್ ಮತ್ತು ಇನ್ಫರ್‌ಮೇಷನ್ ಸೈನ್ಸ್‌ನಲ್ಲಿ ಎಂ. ಎಸ್. ಪದವಿ ಪಡೆದಿರುವ ಅರುಣ್ ಮೂರ್ತಿ ಅವರು ಸ್ವಂತ ಉದ್ಯಮದಲ್ಲಿದ್ದಾರೆ. ಇವರು ತಮ್ಮ ಪತ್ನಿ ಹಾಗು ಮಕ್ಕಳೊಂದಿಗೆ ಶಿಕಾಗೋ ಬಳಿಯ ನೇಪರ್ವಿಲ್‌ನಲ್ಲಿ ನೆಲಸಿದ್ದಾರೆ.

arunsmurthy@gmail.com

**ಮೈಯ, ನಳಿನಿ**

ನಳಿನಿ ಮೈಯ ಅವರು ಚಿಕಾಗೋ ನಗರದ ಉಪನಗರ ಡೇರಿಯನ್‌ನಲ್ಲಿ ಪತಿ ಸುಬ್ರಾಯ ಮೈಯ ಅವರೊಡನೆ ವಾಸವಾಗಿದ್ದಾರೆ. ಇವರ ಕಥೆ, ಲೇಖನಗಳು ಅಮೆರಿಕನ್ನಡ, ಕನ್ನಡ ಪ್ರಭ, ಉದಯವಾಣಿ, ಪ್ರಜಾವಾಣಿ ಮತ್ತು ದಟ್ಸ್ ಕನ್ನಡ ಡಾಟ್ ಕಾಂ ಮುಂತಾದ ಕಡೆ ಪ್ರಕಟವಾಗಿವೆ. 'ಮರೀಚಿಕೆ ಮತ್ತು ಇತರ ಕಥೆಗಳು' ಇವರ ಪ್ರಕಟಿತ ಕಥಾಸಂಕಲನ. 'ಕಾರಂತ ಚಿಂತನ', 'ಕುವೆಂಪು ಸಾಹಿತ್ಯ ಸಮೀಕ್ಷೆ' ಮತ್ತು 'ಆಚೀಚೆಯ ಕಥೆಗಳು' ಗ್ರಂಥಗಳ ಸಹ ಸಂಪಾದಕಿಯಾಗಿ ಕೆಲಸ ಮಾಡಿದ್ದಾರೆ. 'ಕನ್ನಡ ಸಾಹಿತ್ಯ ರಂಗ'ದ ಆಡಳಿತ ಮಂಡಳಿಯ ಅಧ್ಯಕ್ಷಿಣಿಯಾಗಿದ್ದಾರೆ.

18 W, 194 Holly Avenue.

Darien. IL. 60561

nmaiya@hotmail.com

**ಮೈಯ.ಪಿ.ಎಸ್.**

ಪಿ.ಎಸ್.ಮೈಯ ಅವರು ತಮ್ಮ ಹಾಸ್ಯ ಲೇಖನಗಳ ಮೂಲಕ ಜನರ ಗಮನವನ್ನು ಸೆಳೆದಿದ್ದಾರೆ. ಇವರ ಲೇಖನಗಳು ಅಮೆರಿಕನ್ನಡ, ಸಂಗಮ ಹಾಗೂ ದಟ್ಸ್‌ಕನ್ನಡ ಅಂತರ್ಜಾಲ ತಾಣಗಳಲ್ಲಿ ಪ್ರಕಟವಾಗಿವೆ. ವಾಸ ಶಿಕಾಗೊ ನಗರದ ಹತ್ತಿರದ ಡೇರಿಯನ್ ಉಪನಗರದಲ್ಲಿ. ಆರ್ಗಾನ್ ನ್ಯಾಷನಲ್ ಲ್ಯಾಬೊರೇಟರಿಯಲ್ಲಿ ವಿಜ್ಞಾನಿಯಾಗಿ ಸಂಶೋಧನೆ ನಡೆಸುತ್ತಿದ್ದರು. ಈಗ ನಿವೃತ್ತರಾಗಿದ್ದಾರೆ.

18W, 194 Holly Avenue

Darien. IL. 60561

**ಮೋಹನ್, ವೈ.ಆರ್.**

ಸಮಾಜಶಾಸ್ತ್ರದಲ್ಲಿ ಪ್ರಾಧ್ಯಾಪಕರಾಗಿದ್ದು, ಈಗ ನಿವೃತ್ತರಾಗಿ ಅಲಬಾಮ ಸಂಸ್ಥಾನದ ಟಸ್ಕಲೂಸದಲ್ಲಿ ಪತ್ನಿ ನಂದಾ ಅವರೊಡನೆ ನೆಲೆಸಿದ್ದಾರೆ. ಇವರ ಲೇಖನಗಳು, ಕವನಗಳು ಪ್ರಜಾವಾಣಿ, ತರಂಗ ಪತ್ರಿಕೆಗಳಲ್ಲೂ, ವಿಶ್ವ ಕನ್ನಡ ಸಮ್ಮೇಳನದ ಸ್ಮರಣ ಸಂಚಿಕೆಗಳಲ್ಲೂ ಬೆಳಕು ಕಂಡಿವೆ. ಇವರ 'ನೆನಪುಗಳು' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆ. 'ಪಾರ್ಕಿನ್‌ಸನ್ ಖಾಯಿಲೆಯಿಂದ ನಾನು ಕಲಿತದ್ದೇನು?' ಎಂಬ ಅಪೂರ್ವ ಅನುಭವ ಕಥನವನ್ನೂ, 'ಅಮೆರಿಕಾಯಣ' ಎಂಬ ಐತಿಹಾಸಿಕ ಬೃಹತ್ ಗ್ರಂಥವನ್ನೂ ರಚಿಸಿದ್ದಾರೆ.

826 37th Street,NE

Tascaloosa, Alabama. 35406

yrmohan@worldnet.att.net

**ನಂಜುಂಡಸ್ವಾಮಿ, ಎಚ್.ಕೆ.**

ನಲವತ್ತೈದು ವರ್ಷಗಳ ಹಿಂದೆಯೇ ಅಮೆರಿಕಕ್ಕೆ ಬಂದು ನೆಲಸಿದ ನಂಜುಂಡಸ್ವಾಮಿಯವರು ವೈದ್ಯರು. ಐದು ವರ್ಷಗಳ ಹಿಂದೆ ಶಸ್ತ್ರಚಿಕಿತ್ಸಾ ವೃತ್ತಿಯಿಂದ

ವಿಶ್ರಾಂತರಾಗಿ ತಮ್ಮ ಒಲವಿನ ಪ್ರವೃತ್ತಿಗಳಾದ ಸಂಗೀತ, ನಾಟಕ ಮತ್ತು ಸಾಹಿತ್ಯದ ಅಭ್ಯಾಸವನ್ನು ಮುಂದುವರಿಸಿದವರು. ಕಳೆದ ಆರು ವರ್ಷಗಳಲ್ಲಿ ಅವರು ಆರು ಜನಪ್ರಿಯ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವು–ಕನ್ನಡದಲ್ಲಿ–'ನಿಶ್ಶಬ್ದ ಸಂಗೀತ', 'ಕಾನನದ ಮಲ್ಲಿಗೆ', 'ಕಲಸುಮೇಲೋಗರ', 'ಸುಶ್ರುತ ನಡೆದ ಹಾದಿಯಲ್ಲಿ,...' ಮತ್ತು ಇಂಗ್ಲಿಷಿನಲ್ಲಿ -'Silent Music' ಮತ್ತು 'Where the angels roamed'. ನಂಜುಂಡಸ್ವಾಮಿಯವರು ಅಮೆರಿಕದ ಕನ್ನಡಿಗರಲ್ಲಿ ಹಾಸ್ಯ ಪ್ರಧಾನ ಪುಸ್ತಕಗಳನ್ನು ಪ್ರಕಟಿಸಿದವರಲ್ಲಿ ಮೊದಲಿಗರು.

3650 SW 24th Avenue Road
Ocala, FL. 34474.
sita@peoplepc.com

**ನಾರಾಯಣರಾವ್, ಸರೋಜ**

ಬಾಲ್ಯದಿಂದಲೇ ಬರೆಯಲು ಪ್ರಾರಂಭಿಸಿದ ಸರೋಜ ನಾರಾಯಣರಾವ್ ಅವರು ಇದುವರೆಗೆ ಕಥಾ ಸಂಕಲನ, ಕಾದಂಬರಿ, ಮಕ್ಕಳಿಗಾಗಿ ಕಿರು ಕಾದಂಬರಿಗಳು ಮತ್ತು ಕಥಾ ಸಂಕಲನಗಳನ್ನು ರಚಿಸಿರುವುದಲ್ಲದೆ 'ಸ್ನೇಹ–ಸೌಹಾರ್ದ' ಎಂಬ ವಿಶಿಷ್ಟವಾದ ಸಂಕಲನವನ್ನೂ ಸಂಪಾದಿಸಿದ್ದಾರೆ. ಈ ಸಂಕಲನ ೨೦೦೬ರಲ್ಲಿ ಬಾಲ್ಟಿಮೋರ್‌ನಲ್ಲಿ ನಡೆದ ಅಕ್ಕ ವಿಶ್ವ ಕನ್ನಡ ಸಮ್ಮೇಳನದಲ್ಲಿ ಬಿಡುಗಡೆಯಾಯಿತು. 'ಉಡುಗೊರೆ' ಮಕ್ಕಳ ಕತೆಗಳ ಧ್ವನಿಸುರುಳಿ ಹಾಗೂ ಸಿ.ಡಿ. ಬಿಡುಗಡೆಯಾಗಿದೆ. ಇವರ ಅನೇಕ ಕತೆಗಳು ಬಾನುಲಿ ಮತ್ತು ದೂರದರ್ಶನಗಳಲ್ಲಿ ಪ್ರಸಾರವಾಗಿವೆ. ಇದೀಗ ಅಮೆರಿಕದಲ್ಲೇ ಇರುವ ಇವರು, ಇಲ್ಲಿ ಅನೇಕ ಸಂಘಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತ ಅಲ್ಲಲ್ಲಿ ಮಕ್ಕಳಿಗೆ ಕತೆಗಳನ್ನೂ ಹೇಳಿದ್ದಾರೆ.

30 Shinnecock Road,
Dover, DE 19904,
vhiraesave@verizon.net

**ನಟರಾಜ, ಮೈ.ಶ್ರೀ.**

ಮೈ.ಶ್ರೀ. ನಟರಾಜ ವೃತ್ತಿಯಿಂದ ಇಂಜಿನಿಯರು, ಪ್ರವೃತ್ತಿಯಿಂದ ಬರಹಗಾರರು. ಬೆಂಗಳೂರು ವಿಶ್ವವಿದ್ಯಾಲಯದ ಯೂನಿವರ್ಸಿಟಿ ಕಾಲೇಜ್ ಆಫ್ ಇಂಜಿನಿಯರಿಂಗ್–ನಿಂದ ಬಿ.ಇ. ಪದವಿ, ಮುಂಬಯಿ ಐ. ಐ. ಟಿಯಿಂದ ಎಮ್.ಟೆಕ್ ಪದವಿ ಮತ್ತು ಪಿಟ್ಸ್‌ಬರ್ಗ್ ವಿಶ್ವವಿದ್ಯಾಲಯದಿಂದ ಪಿ.ಎಚ್.ಡಿ ಪದವಿಗಳನ್ನು ಗಳಿಸಿರುವ

ನಟರಾಜರು, ಅಮೆರಿಕ ಕೇಂದ್ರ ಸರ್ಕಾರದ ಅಣುಶಕ್ತಿನಿಯಂತ್ರಣ ಸಂಸ್ಥೆಯಲ್ಲಿ ತಾಂತ್ರಿಕ ನಿಪುಣರಾಗಿ ಅಂತರರಾಷ್ಟ್ರೀಯ ಖ್ಯಾತಿ ಪಡೆದಿದ್ದಾರೆ. ಇವರು ಕನ್ನಡದಲ್ಲಿ ಎರಡು ನಾಟಕ ಸಂಕಲನಗಳನ್ನೂ, ಎರಡು ಕವನ ಸಂಕಲನಗಳನ್ನೂ ಬರೆದು ಪ್ರಕಟಿಸಿದ್ದಾರೆ. ಇವರ ಮೊದಲ ಕವನ ಸಂಗ್ರಹ 'ನಾನೂ ಅಮೆರಿಕನ್ ಆಗಿಬಿಟ್ಟೆ'(೧೯೮೮) ಅತ್ಯಂತ ಜನಪ್ರಿಯವಾಗಿದೆ. ಇವರ ಇತ್ತೀಚಿನ ಕವನ ಸಂಕಲನ 'ಮಧುಚಂದ್ರ-ಸಿರಿಕೇಂದ್ರ'ಕ್ಕೆ ೨೦೦೩ರಲ್ಲಿ ಗೊರೂರು ಪ್ರತಿಷ್ಠಾನದ ಪ್ರಶಸ್ತಿ ದೊರಕಿದೆ.

ಇವರು 'thatskannada.com'ಎಂಬ ಅಂತರ್ಜಾಲ ಪತ್ರಿಕೆಯಲ್ಲಿ 'ಜಾಲತರಂಗ' ಎಂಬ ಅಂಕಣದಲ್ಲಿ ಬರೆದ ಲೇಖನಗಳು ಇತ್ತೀಚೆಗೆ ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ. ಇವರು ತಮ್ಮ ಪತ್ನಿ ಗೀತಾ ಮತ್ತು ಮಕ್ಕಳೊಂದಿಗೆ ಮೇರೀಲ್ಯಾಂಡಿನ ಪೊಟೋಮೆಕ್‌ನಲ್ಲಿ ವಾಸಿಸುತ್ತಾರೆ.

10510 Beechknoll lane,
Potomac, MD 20854,
mysreena@aol.com

### ರಾಜಗೋಪಾಲ್, ವಿಮಲ

ಪ್ರಸಿದ್ಧ ಕನ್ನಡ ಸಾಹಿತಿ ಶ್ರೀ ಎಲ್. ಗುಂಡಪ್ಪನವರ ಮಗಳಾಗಿ ಬೆಂಗಳೂರಿನಲ್ಲಿ ಹುಟ್ಟಿ ಸಂಗೀತ ಸಾಹಿತ್ಯ ಪರಂಪರೆಯಲ್ಲಿ ಬೆಳೆದ ಇವರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ B.A. (Hons.) ಪದವಿ ಪಡೆದು ಆಕಾಶವಾಣಿಯಲ್ಲಿ ಹಲವು ವರ್ಷ ಕೆಲಸ ಮಾಡಿದರು. ಕನ್ನಡ ಜಾನಪದ ಸಂಗೀತ ಕ್ಷೇತ್ರದಲ್ಲಿ ಇವರೂ ಇವರ ಸೋದರಿಯರಾದ ಡಾ. ಎಲ್.ಜಿ. ಸುಮಿತ್ರ ಮತ್ತು ಕಮಲ ಎಂ.ಎಸ್. ಬಾಲು ಅವರೂ ಎಲ್.ಜಿ. ಸೋದರಿಯರೆಂದು ಶಾಲಾದಿನಗಳಿಂದಲೇ ಪ್ರಸಿದ್ಧಿ ಪಡೆದವರು. ಕನ್ನಡ ಜಾನಪದ ಸಂಗೀತದ ಮೂಲಸ್ವರೂಪವನ್ನು ತೋರಿಸುವಂಥ ಉತ್ತಮ ಧ್ವನಿ ಮುದ್ರಿಕೆಯನ್ನು ಹೊರತಂದಿದ್ದಾರೆ. ಪು.ತಿ.ನ. ಅವರ 'ಗೋಕುಲ ನಿರ್ಗಮನ'ವನ್ನು ಅವರಿಂದಲೇ ಕಲಿತು ಅದನ್ನು ಜನಪ್ರಿಯಗೊಳಿಸಿದವರು. University of Pennsylvaniaದಲ್ಲಿ ಹಲವಾರು ವರ್ಷಗಳಿಂದ ಕನ್ನಡ ಕಲಿಸುತ್ತಿದ್ದಾರೆ. Elwyn, Inc. ಸಂಸ್ಥೆಯಲ್ಲಿ Music and Recreation Therapist ಆಗಿ ಕೆಲಸಮಾಡುತ್ತಿದ್ದಾರೆ. ಹಲವಾರು ಗ್ರಂಥಗಳಲ್ಲಿ ಅವರ ಕತೆ, ಲೇಖನಗಳು ಪ್ರಕಟಗೊಂಡು ಹೆಸರು ಗಳಿಸಿವೆ.

604 Autumn Lane
Media, Pennsylvania 19063,
hyr1195@aol.com

**ರಾಜಗೋಪಾಲ್, ಎಚ್.ವೈ.**

ವೃತ್ತಿಯಲ್ಲಿ ಇಂಜಿನಿಯರು. ಮೈಸೂರಿನ NIE (B.E.), ಬೆಂಗಳೂರಿನ IISc (M.E.) ಮತ್ತು ಅಮೆರಿಕದ Pennsylvania State University (Ph.D.)ಗಳಲ್ಲಿ ವಿದ್ಯಾಭ್ಯಾಸ. Villanova University, Raytheon Engineers & Constructors, Inc. ಸಂಸ್ಥೆಗಳಲ್ಲಿ ಕೆಲಸ ಮಾಡಿ ಈಗ ನಿವೃತ್ತರಾಗಿದ್ದಾರೆ. ಫಿಲಡೆಲ್ಫಿಯ ಪ್ರದೇಶದ ಹಲವಾರು ಸಂಸ್ಥೆಗಳ ಸ್ಥಾಪಕರು, ಕಾರ್ಯ ನಿರ್ವಾಹಕರು. ಮುಖ್ಯವಾದವು: 'ಕನ್ನಡ ಸಾಹಿತ್ಯ ರಂಗ'(ಪ್ರಸ್ತುತ ಕಾರ್ಯಕಾರೀ ಸಮಿತಿಯ ಅಧ್ಯಕ್ಷರು), ಕನ್ನಡ ಸಾಹಿತ್ಯ ಮತ್ತು ಕಲಾ ವಿಷಯಗಳಿಗೆ ಮೀಸಲಾದ 'ಪ್ರಸ್ತಾಪ' ಎಂಬ ವಿಚಾರ ವೇದಿಕೆ ಮತ್ತು Sruti, India Music and Dance Society. ಇವರ ಲೇಖನಗಳು ಹಲವಾರು ಗ್ರಂಥಗಳಲ್ಲಿ ಪ್ರಕಟವಾಗಿವೆ.

604 Autumn Lane

Media, Pennsylvania 19063, USA

hyr1195@aol.com

**ರಾಮಮೂರ್ತಿ, ಬೇಲೂರು**

ಆಂತರಿಕ ಲೆಕ್ಕಪರಿಶೋಧಕರಾಗಿ ಮತ್ತು ಮಾನವ ಸಂಪನ್ಮೂಲ ಸಲಹೆಗಾರರಾಗಿ ಉದ್ಯೋಗದಲ್ಲಿರುವ ಬೇಲೂರು ರಾಮಮೂರ್ತಿಯವರು, ಹಾಸ್ಯಲೇಖಕರು, ಕಾದಂಬರಿಕಾರರು, ಕಿರುತೆರೆ-ಹಿರಿತೆರೆಯ ಕಲಾವಿದರು. ಸುಮಾರು ೧೨೦ ಹಾಸ್ಯ ಲೇಖನಗಳನ್ನೊಳಗೊಂಡ 'ಸಮಗ್ರ ಹಾಸ್ಯ' ಸಂಕಲನವನ್ನೊಳಗೊಂಡು, ೧೨ ಹಾಸ್ಯ ಲೇಖನಗಳ ಸಂಕಲನಗಳು ಮತ್ತು ೪೦ಕ್ಕೂ ಹೆಚ್ಚು ಕಾದಂಬರಿಗಳು ಪ್ರಕಟಿತವಾಗಿವೆ. ಇವರ ಕೃತಿ 'ಮಹಾಕವಿ ಮುದ್ದಣ' ಗೊರೂರು ಪ್ರಶಸ್ತಿ, ರನ್ನ ಪ್ರಶಸ್ತಿ ಮತ್ತು ಕುವೆಂಪು ಪ್ರಶಸ್ತಿಯನ್ನೂ, ಇವರ ಹಾಸ್ಯ ಸಾಹಿತ್ಯ 'ಪಡುಕೋಣೆ ರಮಾನಂದ ಪ್ರಶಸ್ತಿ'ಯನ್ನೂ, ಕೇಫ಼ ಪ್ರಶಸ್ತಿಯನ್ನೂ ಪಡೆದಿದೆ. ಬೆಂಗಳೂರಿನಲ್ಲಿ ಪ್ರತಿ ವರ್ಷ ನಡೆಯುವ 'ಹಾಸ್ಯೋತ್ಸವ'ದ ಆಯೋಜಕರಾಗಿ ನಗೆ ಹೊನಲ ಹರಿಸಿದ್ದಾರೆ.

`Sukeshava` 2nd Cross,20th Main

BTM 1st stage. Bangalore. 560068. India.

brmurthy@dataone.in

ramamurthybeluru@yahoo.com

**ರಾಮಪ್ರಿಯನ್, ಹಂ.ಕ.**

ರಾಮಪ್ರಿಯನ್ ಅವರು ಹುಟ್ಟಿದ್ದು ಹಾಸನದಲ್ಲಿ, ಬೆಳೆದದ್ದು ಬೆಂಗಳೂರಿನಲ್ಲಿ. ಬೆಂಗಳೂರಿನ Indian Institute of Scienceನಲ್ಲಿ M. E. ಪದವಿಯನ್ನು ಗಳಿಸಿದ ನಂತರ ಸ್ನಾತಕೋತ್ತರ-ಉನ್ನತ-ವಿದ್ಯಾರ್ಜನೆಗಾಗಿ ೧೯೬೬ರಲ್ಲಿ ಅಮೆರಿಕಕ್ಕೆ ಬಂದು ೧೯೭೬ರಿಂದ ವಾಷಿಂಗ್ಟನ್ನಿನ ಬಳಿ ವಾಸಮಾಡುತ್ತಿದ್ದಾರೆ. ಆಗಿನಿಂದಲೂ ಅವರ ಉದ್ಯೋಗ NASAದಲ್ಲಿ. ಚಿಕ್ಕಂದಿನಿಂದಲೂ ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಉತ್ಸುಕ ವಿದ್ಯಾರ್ಥಿಯೂ ಕುಮಾರ-ಕವಿಯೂ ಆಗಿದ್ದು, ಇತ್ತೀಚೆಗೆ ಕವಿತೆಗಳನ್ನೂ ಮತ್ತು ಆಗಾಗ್ಗೆ ಪುಟ್ಟ ಲೇಖನಗಳನ್ನೂ ಬರೆಯುವ ಹವ್ಯಾಸವನ್ನು ಪುನರುಜ್ಜೀವಿಸಿ-ಕೊಂಡಿದ್ದಾರೆ. ಅವರ ಅನೇಕ ಕವನಗಳು thatskannada.com ಜಾಲಪುಟಗಳಲ್ಲಿ ಪ್ರಕಟಿತವಾಗಿವೆ.

11860 Linden Chapel Rd.,

Clarksville, MD 21029.

Ramapriyan@verizon.net.

**ರಮೇಶ್, ಮುಳುಕುಂಟೆ.**

ಮುಳುಕುಂಟೆ ರಮೇಶ್ ಅವರು ತುಮಕೂರು ಜಿಲ್ಲೆಯಲ್ಲಿ ೧೯೬೪ರಲ್ಲಿ ಜನಿಸಿದರು. ಇವರು ಎಂ.ಎ., ಎಂ.ಎಡ್., ಪಿಎಚ್.ಡಿ., ಎಲ್.ಎಲ್.ಬಿ., ಪದವೀಧರರು. ಇವರು ಬೆಂಗಳೂರಿನ ವಿದ್ಯಾಸಂಸ್ಥೆಯೊಂದರಲ್ಲಿ ಕನ್ನಡ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರ ಪ್ರಕಟಿತ ಕೃತಿಗಳೆಂದರೆ 'ಬಣ್ಣದಬುಗುರಿ'(ಮಕ್ಕಳ ಸಚಿತ್ರ ಕವನ ಸಂಕಲನ), 'ಬಿ.ಜಿ.ಎಲ್.ಸ್ವಾಮಿ'(ಬದುಕು ಬರಹ), 'ಐನಾತಿ ಐಲುದೊರೆ ಮತ್ತು ಕೃಷ್ಣಸಂಭವ'(ನಾಟಕಗಳು) ಬೆಂಗಳೂರು ವಿಶ್ವವಿದ್ಯಾಲಯವು ಇವರ 'ಕನ್ನಡ ಗದ್ಯ ಮತ್ತು ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯ' ಪ್ರಬಂಧಕ್ಕೆ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ. ಪ್ರಸ್ತುತ ಇವರು ಬೆಂಗಳೂರಿನಲ್ಲಿ ವಾಸಿಸುತ್ತಿದ್ದಾರೆ.

2610, 8th Main. 17th Cross

Banashankari IInd Stage

Bangalore. 560070.

**ರಂಗಾಚಾರ್, ಎಚ್.ವಿ.**

ಶ್ರೀ ರಂಗಾಚಾರ್ಯರು ವೃತ್ತಿಯಿಂದ ಎಲೆಕ್ಟ್ರಾನಿಕ್ ಎಂಜಿನಿಯರು. ಬೆಂಗಳೂರು ಎಂಜಿನಿಯರಿಂಗ್ ಕಾಲೇಜಿನಿಂದ ಬಿ.ಇ. ಪದವಿ ಪಡೆದು, ನಂತರ ಅಮೆರಿಕದಲ್ಲಿ

ಎಂ.ಎಸ್., ಮತ್ತು ಪಿಎಚ್.ಡಿ., ಪದವಿಗಳನ್ನು ಗಳಿಸಿ RCA ಮತ್ತು Bell Laboratories ನಲ್ಲಿ ಕೆಲಸಮಾಡಿ ಈಗ ನಿವೃತ್ತರಾಗಿದ್ದಾರೆ. ಶ್ರೀಯುತರು ಅಮೆರಿಕದ ಕನ್ನಡ ಬರಹಗಾರರಲ್ಲಿ ಮೊದಲಿಗರು. ಪ್ರಬಂಧ, ಕವನ ಮತ್ತು ಭಾಷಾಂತರಗಳು ಅವರ ಕ್ಷೇತ್ರ. 'ನೆಲದ ಕರೆ'(ಕವನ ಸಂಕಲನ), 'ಹೇರೋದೋತನ ಸಮರ ಕಥೆಗಳು' (ಕಥಾಸಂಗ್ರಹ), 'Hill Temple'(ಪು.ತಿ.ನ. ಅವರ 'ಮಲೆದೇಗುಲ'ದ ಆಂಗ್ಲಾನುವಾದ) ಮತ್ತು 'ತರಗೆಲೆಯ ಹಾರಾಟ'(ಪ್ರಬಂಧ ಸಂಕಲನ) ಅವರ ಪ್ರಕಟಿತ ಕೃತಿಗಳು.

6 Somer Court

English Town. NJ.07726

Padmaranga3@aol.com

**ರಾವ್. ಅಶ್ವತ್ಥ**

ಅಶ್ವತ್ಥ ನಾ. ರಾವ್ ಅವರು ಹುಟ್ಟಿ ಬೆಳೆದದ್ದು ತುಮಕೂರಿನಲ್ಲಿ. ಅಲ್ಲಿ ಕಾಲೇಜು ವಿದ್ಯಾಭ್ಯಾಸ ಮುಗಿಸಿ, ನಂತರ ಮೈಸೂರಿನ ಮೆಡಿಕಲ್ ಕಾಲೇಜಿನಿಂದ ವೈದ್ಯಕೀಯ ಪದವೀಧರರಾದರು. ೧೯೬೩ರಲ್ಲಿ ಉನ್ನತ ಶಿಕ್ಷಣಕ್ಕಾಗಿ ಅಮೆರಿಕಕ್ಕೆ ಬಂದು ಆರ್ಥೋಪೆಡಿಕ್ಸ್ ಶಸ್ತ್ರಚಿಕಿತ್ಸೆಯಲ್ಲಿ ಉನ್ನತ ವ್ಯಾಸಂಗವನ್ನು ಮುಗಿಸಿ, ಸೈಂಟ್ ಲೂಯಿಸ್‌ನ ವಾಷಿಂಗ್‌ಟನ್ ಯೂನಿವರ್ಸಿಟಿಯಲ್ಲಿ ಉಪಪ್ರಾಧ್ಯಾಪಕರಾಗಿ ಕೆಲಸ ಮಾಡಿ ೨೦೦೦ನೆಯ ಇಸವಿಯಲ್ಲಿ ನಿವೃತ್ತರಾಗಿದ್ದಾರೆ.ಶ್ರೀಯುತರು ಸೈಂಟ್‌ಲೂಯಿಸ್ ನಗರದ ಕನ್ನಡ ಸಂಘದ ನೇತೃತ್ವದಲ್ಲಿ ಬಿಡುಗಡೆಯಾದ, 'ಸಂಗಮ', 'ತುರಾಯಿ' ಮತ್ತು 'ಸಂಭ್ರಮ' ಎಂಬ ಸಂಚಿಕೆಗಳಿಗೆ ಪ್ರಧಾನ ಸಂಪಾದಕರಾಗಿದ್ದರು. ಅಮೆರಿಕನ್ನಡ ಮತ್ತು ಹ್ಯೂಸ್ಟನ್, ಡೆಟ್ರಾಇಟ್ ನಗರಗಳಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನಗಳ ಅಂಗವಾಗಿ ಬಿಡುಗಡೆಯಾದ ಸ್ಮರಣ ಸಂಚಿಕೆಗಳ ಸಂಪಾದಕ ವೃಂದದಲ್ಲಿ ಕೆಲಸ ಮಾಡಿದ್ದಾರೆ. ಇವರ ಲೇಖನಗಳು ಅಮೆರಿಕ ಹಾಗೂ ಕರ್ನಾಟಕದ ಹಲವು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. 'Detour To Happiness' ಮತ್ತು 'ಮೋಡ ಕರಗಿದ ಮೇಲೆ' ಇವರ ಪ್ರಕಟಿತ ಕಥಾಸಂಕಲನಗಳು.

2319 Todforth Way.

Saint Louis. MO. 63131

Gsv1415@aol.com

**ರಾವ್, ಮಾಲಾ**

ಹುಟ್ಟಿದ್ದು ಮೈಸೂರಿನಲ್ಲಿ. ಬೆಳೆದದ್ದು ಚಿತ್ರದುರ್ಗ, ತುಮಕೂರು ಸೇರಿಸಿ ಕರ್ನಾಟಕದ ಹಲವು ಊರುಗಳಲ್ಲಿ. ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಸಣ್ಣಕಥೆ, ಲೇಖನಗಳು ಮತ್ತು ಲಲಿತ ಪ್ರಬಂಧ ಬರೆಯುವುದರಲ್ಲಿ ಆಸಕ್ತಿ. ಕೆಲವು ಕವನಗಳನ್ನೂ, ಸುನೀತಗಳನ್ನು ಬರೆದದ್ದೂ ಉಂಟು. ನಾಡಿನ ಹೆಸರಾಂತ ಪತ್ರಿಕೆಗಳಾದ ತರಂಗ, ತುಷಾರ ಮುಂತಾದುವುಗಳಲ್ಲದೆ, ಪೋರ್ಟಲ್‌ಗಳಾದ ದಟ್ಸ್‌ಕನ್ನಡ, ಕನ್ನಡಧ್ವನಿಗಳಲ್ಲಿ ಕಥೆಗಳು, ಲಲಿತ ಪ್ರಬಂಧಗಳು ಮತ್ತು ಲೇಖನಗಳು ಪ್ರಕಟಗೊಂಡಿವೆ. 'ಚಿತ್ರ-ದುರ್ಗ' (ಚಿತ್ರ-ದುರ್ಗ.ಬ್ಲಾಗ್ ಸ್ಪಾಟ್.ಕಾಂ) ಎಂಬ ವಿಶಿಷ್ಟ ಬಗೆಯ ಬ್ಲಾಗ್‌ನಲ್ಲಿ ಬರವಣಿಗೆ ನಿರಂತರವಾಗಿ ಸಾಗಿದೆ. ಸದ್ಯಕ್ಕೆ ಪ್ರಕ್ಷುಬ್ಧ ದೇಶ 'ಲೆಬನಾನ್'ವಾಸದ ಅನುಭವ ನಿರೂಪಿಸುವ ಹಾಸ್ಯಲೇಪಿತ ಪ್ರವಾಸ ಕಥನದ ಬರವಣಿಗೆಯಲ್ಲಿ ನಿರತರಾಗಿದ್ದಾರೆ. ಫೋಟೊಗ್ರಫಿ, ಅಪರೂಪದ ಹೂಗಿಡಗಳನ್ನು ಬೆಳೆಸುವುದು, ಕ್ವಿಲ್ಟ್ ಹೊಲೆಯುವಿಕೆ, ಪ್ರವಾಸ ಇವು ಅವರ ಇತರ ಆಸಕ್ತಿಗಳು

1063, Morse Ave.

6#104 Sunnyvale, CA. 94089

Mala1427@yahoo.com

**ರಾವ್ ಎಸ್ ಉಮಾ**

ಉಮಾ ಎಸ್. ರಾವ್ ಶಿಕಾಗೋ ಬಳಿಯ ನೇಪರ್ವಿಲ್, ಇಲಿನಾಯ್ ನಿವಾಸಿ ಮೂಲತಃ ಮೈಸೂರಿನವರು. ವೃತ್ತಿಯಲ್ಲಿ ಇಂಜಿನಿಯರ್. ಕಲೆ, ಸಾಹಿತ್ಯ ಹಾಗೂ ನಾಟಕ ಇವರ ಆಸಕ್ತಿ. 'ಗೀತಾ ಬುಕ್ ಹೌಸ್' ಪ್ರಕಾಶಕರ ಪರಿವಾರದವರಾದುದ್ದರಿಂದ ಸಾಹಿತಿಗಳ ಪರಿಚಯ ಹಾಗೂ ಸಾಹಿತ್ಯ ಪ್ರಪಂಚದೊಡನೆ ಹತ್ತಿರದ ಬಾಂಧವ್ಯ. ನೇಪರ್ವಿಲ್‌ನಲ್ಲಿ ಪತಿ ಮತ್ತು ಏಳು ವರ್ಷದ ಸುಪುತ್ರನೊಡನೆ ವಾಸ.

೩೨೮೦, ಕೂಲ್ ಸ್ಪ್ರಿಂಗ್ಸ್ ಕೋರ್ಟ್

ನೇಪರ್ವಿಲ್, ಇಲಿನಾಯ್

**ಶಾಸ್ತ್ರಿ, ವಲ್ಲೀಶ**

ಹಾಸನ ಜಿಲ್ಲೆಯ ಮತ್ತಿಗೋಡಿನಲ್ಲಿ ಜನನ. ಅಲ್ಲಿ ಮತ್ತು ಬೆಂಗಳೂರಿನಲ್ಲಿ ವ್ಯಾಸಂಗ. ವೃತ್ತಿಯಲ್ಲಿ ಕಂಪ್ಯೂಟರ್ ಕನ್ಸಲ್ಟೆಂಟ್. ಸೌದಿ ಅರೇಬಿಯ, ಇಟಲಿ ಮತ್ತು

ಇಂಗ್ಲೆಂಡ್‌ಗಳಲ್ಲಿ ಕೆಲಸ ಮಾಡಿ ಕಳೆದ ಏಳು ವರ್ಷಗಳಿಂದ ಅಮೆರಿಕದಲ್ಲಿ ನೆಲೆಸಿದ್ದಾರೆ. ಶ್ರೀಯುತರು ನಾಟಕ ಕರ್ತೃ ಮತ್ತು ಹವ್ಯಾಸೀ ನಾಟಕ ರಂಗದಲ್ಲಿ ಪಳಗಿದ ನಟರು. ಅಂತರ್ಜಾಲದಲ್ಲಿ ಇವರ ಲೇಖನಗಳು ಪ್ರಕಟಿತವಾಗಿವೆ. ಇವರ 'ನ್ಯೂಯಾರ್ಕ್‌ನಲ್ಲಿ ಯಮ', 'ಯಮನ ಕಾಲ್ ಸೆಂಟರ್' ಮತ್ತು 'ವೀಕ್ ಎಂಡ್ ಗಂಡ' ಎಂಬ (ಅಪ್ರಕಟಿತ) ಪ್ರಹಸನಗಳು ಜನಪ್ರಿಯವಾಗಿವೆ.

16352 Willow Mist Court
Chino Hills, CA. 91709
vshastry@yahoo.com

**ಶಿವರಾಂ, ಮೈಸೂರು**

ಮೈಸೂರಿನಲ್ಲಿ ಹುಟ್ಟಿ ಅಲ್ಲಿನ ವೈದ್ಯಕೀಯ ಕಾಲೇಜಿನಲ್ಲಿ ಪದವೀಧರರಾಗಿ ಮುಂದೆ ಚಿಕಾಗೋನಲ್ಲಿ ಅಸ್ಥಿಚಿಕಿತ್ಸಾ ವಿಭಾಗದಲ್ಲಿ ಉನ್ನತ ಪರಿಣತಿ ಹೊಂದಿ ೧೯೭೯ರಿಂದ ಮಿಲ್‌ವಾಕೀ ನಗರದಲ್ಲಿ ವೈದ್ಯವೃತ್ತಿ ನಡೆಸುತ್ತಿದ್ದಾರೆ. ಮೊದಲಿಂದಲೂ ಕನ್ನಡದಲ್ಲಿ ವಿಶೇಷ ಆಸಕ್ತಿ ಉಳ್ಳ ಇವರು, ಅನೇಕ ನಾಟಕಗಳಲ್ಲಿ ನಿರ್ದೇಶನ, ಪಾತ್ರ ನಿರ್ವಹಣೆ ಮಾಡಿರುವುದಲ್ಲದೆ, ಹಲವಾರು ಪ್ರಹಸನಗಳನ್ನೂ ಬರೆದಿದ್ದಾರೆ.

chamundi@sbcglobal.net

**ಶ್ರೀಕಂಠ, ಹೇಮ**

ಹುಟ್ಟಿ ಬೆಳೆದದ್ದು ಮೈಸೂರು ನಗರದಲ್ಲಿ. ಮೈಸೂರು ವಿಶ್ವವಿದ್ಯಾಲಯದಲ್ಲಿ ಬಿ.ಎ. ಮತ್ತು ಎಲ್.ಎಲ್.ಬಿ. ಮುಗಿಸಿ, ನಂತರ ಅಮೆರಿಕಕ್ಕೆ ಬಂದು, ಪತಿ ಶ್ರೀಕಂಠ್, ಮಕ್ಕಳು ದೀಪ ಮತ್ತು ಆರತಿ ಅವರೊಡನೆ ಸೈಂಟ್ ಲೂಯಿಸ್‌ನಲ್ಲಿ ನೆಲೆಸಿದ್ದಾರೆ. ಸೈಂಟ್ ಲೂಯಿಸಿನಲ್ಲಿ ಜೆರಂಟಾಲಜಿಯಲ್ಲಿ ಎಂ.ಎ. ಪದವಿಯನ್ನು ಗಳಿಸಿ, ಮಿಸ್ಸೋರಿ ಸರ್ಕಾರದ ಸೀನಿಯರ್ ಸರ್ವಿಸಿನಲ್ಲಿ ಸಮಾಜ ಸೇವಕಿಯಾಗಿ ಕೆಲಸ ಮಾಡುತ್ತಿದ್ದಾರೆ. ಅವರ ಅನೇಕ ಕಥೆ, ಕವನಗಳು 'ಅಮೆರಿಕನ್ನಡ', 'ಸಂಗಮ' ಮತ್ತು 'ದಟ್ಸ್‌ಕನ್ನಡಡಾಟ್ ಕಾಂ'ಗಳಲ್ಲಿಯೂ, ಅವರು ಕಾರಂತರ ಬಗ್ಗೆ ಬರೆದ ಪ್ರಬಂಧ 'ಕಾರಂತ ಚಿಂತನ' ಗ್ರಂಥದಲ್ಲಿಯೂ ಪ್ರಕಟವಾಗಿವೆ.

10388 Forest Brook Lane.
St.Louis, MO. 63146
Mallige321@yahoo.com

### ಶ್ರೀನಿವಾಸ್, ಸೌಮ್ಯ

ಸೌಮ್ಯ ಶ್ರೀನಿವಾಸ್ ಅವರು ಮೈಸೂರಿನಲ್ಲಿ ಜನಿಸಿದರು. ಅಲ್ಲೇ ವ್ಯಾಸಂಗ. ಮಹಾರಾಣಿ ಕಾಲೇಜು ಮತ್ತು ಮಾನಸ ಗಂಗೋತ್ರಿಯಲ್ಲಿ ಅಭ್ಯಾಸಮಾಡಿ ಕನ್ನಡ ಸಾಹಿತ್ಯದಲ್ಲಿ (೧೯೬೭ರಲ್ಲಿ) ಎಂ.ಎ. ಪದವಿಯನ್ನು ಗಳಿಸಿದರು. ನಂತರ 'ಕನ್ನಡದಲ್ಲಿ ಏಕಾಂಕ ನಾಟಕಗಳು' ಎಂಬ ವಿಷಯದ ಬಗ್ಗೆ ಸಂಶೋಧನೆ ನಡೆಸಿದ್ದಾರೆ. ೧೯೭೦ರಲ್ಲಿ ವಿವಾಹಿತರಾಗಿ ಲಾಸ್ ಏಂಜಲಿಸ್‌ಗೆ ಬಂದು ಅಲ್ಲೇ ಪತಿ ಶ್ರೀನಿವಾಸ್ ಮತ್ತು ಇಬ್ಬರು ಮಕ್ಕಳೊಡನೆ ನೆಲೆಸಿದ್ದಾರೆ. ಶ್ರೀಮತಿಯವರು ಅಮೆರಿಕದ ಮತ್ತು ಕರ್ನಾಟಕದ ಅನೇಕ ಪತ್ರಿಕೆಗಳಿಗೆ ಲೇಖನಗಳನ್ನು ಬರೆದಿದ್ದಾರೆ..ಅವರು ಉತ್ತಮ ವರ್ಣಚಿತ್ರಕಲಾವಿದರೂ ಸಹ. ಶ್ರೀಮತಿಯವರು ಕನ್ನಡದ ಸುಪ್ರಸಿದ್ಧ ಸಾಹಿತಿ, 'ಕನ್ನಡ ಕಾಳಿದಾಸ' ಪರಮೇಶ್ವರ ಭಟ್ಟರ ಮಗಳು.

5639 Holt Avenue.
Los Angeles. CA. 90056
Dev_srinivasa@hotmail.com

### ಶ್ರೀನಿವಾಸರಾವ್, ಕೆ. ತ್ರಿವೇಣಿ

ಹುಟ್ಟೂರು–ಚಿಕ್ಕಮಗಳೂರು ಜಿಲ್ಲೆಯ ಕಡೂರು. ಪ್ರಾರಂಭದ ಕವನಗಳು ಬೆಳಕು ಕಂಡಿದ್ದು 'ಲಂಕೇಶ್ ಪತ್ರಿಕೆ'ಯಲ್ಲಿ. ನಾಡಿನ ಪ್ರಮುಖ ಮಾಸಿಕಗಳಾದ ತುಷಾರ, ಮಯೂರಗಳಲ್ಲಿ ಅನೇಕ ಸಣ್ಣ ಕಥೆಗಳು ಬೆಳಕು ಕಂಡಿವೆ. 'ದಯಾಮರಣ' ಎಂಬ ಸಣ್ಣ ಕಥೆಯೊಂದು ಅದೇ ಹೆಸರಿನಿಂದ ಕಿರುಚಿತ್ರವಾಗಿ ಬೆಂಗಳೂರು ದೂರದರ್ಶನದಲ್ಲಿ ಪ್ರಸಾರವಾಗಿದೆ. ಆಕಾಶವಾಣಿಯಲ್ಲಿಯೂ ಅನೇಕ ಬಾರಿ ಸ್ವರಚಿತ ಕವನ, ಸಣ್ಣ ಕಥೆಗಳನ್ನು ವಾಚಿಸುವ ಅವಕಾಶ ದೊರತಿದೆ. ಕನ್ನಡದ ಪ್ರಮುಖ ಅಂತರ್ಜಾಲ ಪತ್ರಿಕೆ 'ದಟ್ಸ್‌ಕನ್ನಡಡಾಟ್‌ಕಾಂ'ನಲ್ಲಿ ಅನೇಕ ಕವಿತೆ, ಲೇಖನಗಳು ಪ್ರಕಟವಾಗಿದ್ದು ಸದ್ಯಕ್ಕೆ 'ತುಳಸಿವನ' ಅಂಕಣ, ವಿದ್ಯಾರಣ್ಯ ಕನ್ನಡಕೂಟದ 'ಸಂಗಮ' ಸಂಪಾದಕತ್ವ ನಿರ್ವಹಣೆ. ಲಲಿತ ಪ್ರಬಂಧ, ವೈಚಾರಿಕ ಲೇಖನಗಳಲ್ಲಿ ಹೆಚ್ಚಿನ ಆಸಕ್ತಿ. ಪ್ರಸ್ತುತ ವಾಸ, ಅಮೆರಿಕದ ಇಲಿನಾಯ್ ರಾಜ್ಯದ 'ಹ್ಯಾನೋವರ್ ಪಾರ್ಕ್' ಬಡಾವಣೆಯಲ್ಲಿ.

1762 Saint Ann Drive
Hanover Park
Illinois - 60133- USA
sritri@gmail.com

**ಸ್ವಾಮಿ, ಜನಾರ್ಧನ**

ದಾವಣಗೆರೆ ಮತ್ತು ಬೆಂಗಳೂರಿನಲ್ಲಿ ಬೆಳೆದ ಶ್ರೀ ಜನಾರ್ಧನ ಸ್ವಾಮಿಯವರು ವೃತ್ತಿಯಿಂದ ಎಂಜಿನಿಯರ್. ದಾವಣಗೆರೆಯ ಬಿ.ಡಿ.ಟಿ.ಎಂಜಿನಿಯರಿಂಗ್ ಕಾಲೇಜಿನಿಂದ ಬಿ.ಇ. ಪದವಿ ಪಡೆದು, ಬೆಂಗಳೂರಿನ Indian Institute of Scienceನಿಂದ ಸ್ನಾತಕೋತ್ತರ ಪದವಿಯನ್ನು ಗಳಿಸಿ ೧೯೬೮ರಲ್ಲಿ ಕ್ಯಾಲಿಫೋರ್ನಿಯಕ್ಕೆ ಬಂದು, ಸಾನ್ ಫ್ರಾನ್ಸಿಸ್ಕೋ ಸರಹದ್ದಿನಲ್ಲಿ ನೆಲೆಸಿದ್ದಾರೆ. ಶ್ರೀಯುತರು ಉತ್ತಮ ವ್ಯಂಗ್ಯ ಚಿತ್ರಕಾರರೆಂದು ಖ್ಯಾತಿ ಪಡೆದಿದ್ದಾರೆ. ವಿದ್ಯಾರ್ಥಿ ದಿನಗಳಿಂದಲೇ, ರಾಜ್ಯ ಮತ್ತು ರಾಷ್ಟ್ರಮಟ್ಟದ ಪತ್ರಿಕೆಗಳಲ್ಲಿ ವ್ಯಂಗ್ಯಚಿತ್ರಗಳನ್ನು ಪ್ರಕಟಿಸಿದ್ದಾರೆ ಮತ್ತು ಪ್ರಶಸ್ತಿಗಳನ್ನು ಗಳಿಸಿದ್ದಾರೆ. ತಾವು ಓದಿದ ಬಿ.ಡಿ.ಟಿ. ಕಾಲೇಜಿನ ಪದವೀಧರ ಎಂಜಿನಿಯರುಗಳಿಗಾಗಿ ಉತ್ತಮ ಮಾದರಿಯ ಅಂತರ್ಜಾಲ ತಾಣವೊಂದನ್ನು ನಿರ್ಮಿಸಿ ನಡೆಸುತ್ತಿದ್ದಾರೆ. 'ನಗೆಗನ್ನಡಂ ಗೆಲ್ಗೆ!'ಯ ಸುಂದರ, ಅರ್ಥಪೂರ್ಣ ಮುಖಪುಟವನ್ನು ರಚಿಸಿದವರು ಇವರೇ.

jswamy@jswamy.com

**ವೈದ್ಯ, ಶ್ರೀನಿವಾಸ**

ಇಂದಿನ ಕನ್ನಡದ ಹಿರಿಯ ಹಾಸ್ಯ ಸಾಹಿತಿಗಳಲ್ಲೊಬ್ಬರಾದ ಶ್ರೀನಿವಾಸ ವೈದ್ಯರು ಧಾರವಾಡದಲ್ಲಿ ಹುಟ್ಟಿ ಬೆಳೆದವರು. ಅವರ ಉನ್ನತ ವ್ಯಾಸಂಗ ಪುಣೆಯಲ್ಲಿ. ವೃತ್ತಿಯಿಂದ ಬ್ಯಾಂಕಿನಲ್ಲಿ ಉನ್ನತ ಅಧಿಕಾರಿಗಳು. ಶ್ರೀಯುತರಿಗೆ ಮೊದಲಿನಿಂದ ಸಾಹಿತ್ಯದಲ್ಲಿ, ಅದರಲ್ಲೂ ಹಾಸ್ಯ ಸಾಹಿತ್ಯದಲ್ಲಿ ತುಂಬ ಅಭಿಲಾಶೆ. ಅಪರಂಜಿ-ತಿಳಿನಗೆಯ ಮಾಸ ಪತ್ರಿಕೆಯ ಜನನದಿಂದಲೇ ಪ್ರಾರಂಭವಾದ ಇವರ ಸಾಹಿತ್ಯ ಕೃಷಿ, ಬಿಡುವಿಲ್ಲದೆ ನಡೆದಿದೆ. 'ತಲೆಗೊಂದು ತರ ತರ', 'ಮನಸುಖರಾಯನ ಮನಸು', 'ರುಚಿಗೆ ಹುಳಿಯೊಗರು' ಇವು ಇವರ ಪ್ರಕಟಿತ ಹಾಸ್ಯ ಸಂಕಲನಗಳು. ಇವರ ಕಾದಂಬರಿ 'ಹಳ್ಳ ಬಂತು ಹಳ್ಳ' ರಾಜ್ಯ ಸಾಹಿತ್ಯ ಅಕಾಡೆಮಿಯ ೨೦೦೪ನೆಯ ಇಸವಿಯ ಅತ್ಯುತ್ತಮ 'ಕನ್ನಡ ಕಾದಂಬರಿ' ಪ್ರಶಸ್ತಿಯನ್ನು ಪಡೆದಿದೆ.

136, 43rd Cross, 3rd Main

3th block. Jayanagar

Bangalore, 560 082. India.

## ಯಳಂದೂರು, ಶರತ್

ಹುಟ್ಟಿದ್ದು ಓದಿದ್ದು ಬರೆದದ್ದು ಎಲ್ಲಾ ಬೆಂಗಳೂರಿನಲ್ಲೆ. ಆದರೂ ಹೆಸರಿನ ಜೊತೆಗೆ ತಂದೆಯವರ ಹುಟ್ಟೂರಾದ ಯಳಂದೂರಿನೊಂದಿಗೆ ನಂಟು. ಅಮೆರಿಕೆಗೆ ಬಂದು ಮೂರು ವರ್ಷವಾಯಿತು. ಚಿಕ್ಕಂದಿನಿಂದ ಕತೆ ಕೇಳುವ ಹುಚ್ಚು. ಬರವಣಿಗೆ ಇತ್ತೀಚೆಗೆ ರೂಡಿಸಿಕೊಂಡ ಹವ್ಯಾಸ . ಬರೆದದ್ದಕ್ಕಿಂತ ತಲೆಯಲ್ಲಿ ಮಿಂಚಿ ಮಾಯವಾದ ಯೋಚನೆಗಳೇ ಹೆಚ್ಚು ಎನ್ನುತ್ತಾರೆ. ಹಾಸ್ಯ ಲೇಖನಗಳಲ್ಲಿ ಇದು ಇವರ ಮೊದಲನೆ ಪ್ರಯತ್ನ. 'ಗಂಭೀರವಾದ ವಿಚಾರಾರ್ಹ ಲೇಖನಗಳನ್ನು ಬರೆಯುವ ಕಡೆ ಹೆಚ್ಚು ಒಲವು' ಎಂದಿದ್ದಾರೆ.

8 Willedrob Road
Apt # 10, Bloomington
Illinois – 61701
Sharath_yelandur@yahoo.com

## ಶ್ರೀನಾಥ್ ಭಲ್ಲೆ

ವಾಸಸ್ಥಳ: ರಿಚ್ಮಂಡ್, ವರ್ಜಿನಿಯ, ಯು.ಎಸ್.ಎ. ಅಮೆರಿಕದ ಪ್ರತಿಷ್ಠಿತ ಕಂಪನಿಯೊಂದರಲ್ಲಿ ಸೀನಿಯರ್. ಸಿಸ್ಟಮ್ಸ್ ಆಡಳಿತಾಧಿಕಾರಿ. ಲೇಖನ, ಕವನ, ನಾಟಕ, ಪದರಂಗಗಳ ರಚನೆ, ನಾಟಕ- ನಟನೆ ಹಾಗೂ ನಿರ್ದೇಶನ ಇತ್ಯಾದಿ ಇವರ ಹವ್ಯಾಸಗಳು. ರಿಚ್ಮಂಡ್ ಕನ್ನಡ ಸಂಘದ ೨೦೦೬–೨೦೦೮ ಸಾಲಿನ ಅಧ್ಯಕ್ಷತೆ ಮುಂತಾದ ಹಲವು ಜವಾಬ್ದಾರಿಗಳನ್ನು ಪ್ರೀತಿಯಿಂದ ನಿರ್ವಹಿಸಿದ್ದಾರೆ.

srinathbhalle@yahoo.com

## ಅನುಬಂಧ - ೨

# ಕನ್ನಡ ಸಾಹಿತ್ಯ ರಂಗ

ಅಮೆರಿಕದಲ್ಲಿ ಭಾರತೀಯ ವಲಸೆಗಾರರ ಸಂಖ್ಯೆ ಹೆಚ್ಚಿದಂತೆಲ್ಲ, ಅವರು ಸ್ಥಾಪಿಸಿಕೊಂಡಿರುವ ಸಂಸ್ಥೆಗಳ ಸಂಖ್ಯೆಯೂ ಹೆಚ್ಚುತ್ತಿದೆ. ಮೂವತ್ತಕ್ಕೂ ಮೀರಿ ಕನ್ನಡ ಸಂಸ್ಥೆಗಳೇ ಇವೆ. ಆದರೆ ಅವುಗಳಲ್ಲಿ ಬಹುಪಾಲಿನವು ಸಾಂಸ್ಕೃತಿಕ ಸಂಸ್ಥೆಗಳು. ವರ್ಷದಲ್ಲಿ ಏಳೆಂಟು ಹಬ್ಬ ಮತ್ತಿತರ ಕಾರ್ಯಕ್ರಮಗಳನ್ನು ನಡೆಸಿ ಜನರ ಸಾಂಸ್ಕೃತಿಕ ಅಗತ್ಯಗಳನ್ನು ಪೂರೈಸುತ್ತವೆ. ಜನಕ್ಕೆ ಬೇಕಾದ ಸಂಪರ್ಕ ಒಡನಾಟ ಒದಗಿಸುತ್ತವೆ. ಈಗಂತೂ ಎರಡು ವರ್ಷಕ್ಕೊಮ್ಮೆ ದೇಶದ ಪ್ರಮುಖ ನಗರವೊಂದರಲ್ಲಿ ಅತ್ಯಂತ ಅದ್ಧೂರಿಯಿಂದ ವಿಶ್ವ ಕನ್ನಡ ಸಮ್ಮೇಳನ ನಡೆಯುತ್ತದೆ. ಸಾವಿರಾರು ಕನ್ನಡಿಗರು ಒಂದೆಡೆ ಸೇರುತ್ತಾರೆ. ಇಲ್ಲಿ ನಾನಾ ರೀತಿಯ ಕಾರ್ಯಕ್ರಮಗಳಿರುತ್ತವೆ. ಸಾಹಿತ್ಯಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳನ್ನು ಕಾರ್ಯಕರ್ತರು ಎಷ್ಟೇ ಶ್ರಮವಹಿಸಿ ಸಿದ್ಧಪಡಿಸಿದರೂ, ಅಲ್ಲಿನ ಸಂಭ್ರಮದ ವಾತಾರಣದಲ್ಲಿ ನೆಮ್ಮದಿಯಿಂದ ಕುಳಿತು ಗಂಭೀರವಾದ ಸಾಹಿತ್ಯ ವಿಚಾರಗಳನ್ನು ಚರ್ಚಿಸುವ ವ್ಯವಧಾನ ಇರುವುದಿಲ್ಲ. ಹಾಗಾಗಿ ಸಾಹಿತ್ಯಕ ಅಗತ್ಯಗಳ ಪೂರೈಕೆ ಸಮರ್ಪಕವಾಗಿ ಆಗುತ್ತಿರಲಿಲ್ಲ. ಈ ಪರಿಸ್ಥಿತಿಯನ್ನು ಗಮನಿಸಿ ಹಲವರು ಸಾಹಿತ್ಯಾಸಕ್ತರು ಸಾಹಿತ್ಯಕ್ಕೇ ಬೇರೊಂದು ವೇದಿಕೆ ನಿರ್ಮಿಸಬೇಕೆಂದು ನಿರ್ಧರಿಸಿ ೨೦೦೪ರಲ್ಲಿ **ಕನ್ನಡ ಸಾಹಿತ್ಯ ರಂಗ**ವನ್ನು ಸ್ಥಾಪಿಸಿದರು. ಈ ಸಂಘದ ನಿರ್ದಿಷ್ಟ ಗುರಿ ಇಲ್ಲಿನ ಕನ್ನಡಿಗರ ಸಾಹಿತ್ಯಾಸಕ್ತಿಯನ್ನು ಪೋಷಿಸುವುದು, ಬೆಳಸುವುದು; ಅದರ ಸಾಧನೆಗಾಗಿ ಬೇಕಾದ ಎಲ್ಲ ಕಾರ್ಯಕ್ರಮಗಳನ್ನೂ ಕೈಗೊಳ್ಳುವುದು. ಸದ್ಯದಲ್ಲಿ ಅಮೆರಿಕದಲ್ಲಿರುವ ಕನ್ನಡ ಸಂಸ್ಥೆಗಳಲ್ಲಿ ಹೀಗೆ ಸಾಹಿತ್ಯಕ್ಕೇ ಮೀಸಲಾದ ರಾಷ್ಟ್ರೀಯ ಸಂಸ್ಥೆ ಇದೊಂದೇ ಎಂದು ನಮ್ಮ ಎಣಿಕೆ.

**'ಕನ್ನಡ ಸಾಹಿತ್ಯ ರಂಗ'** ಇದುವರೆಗೆ ಫಿಲಡೆಲ್ಫಿಯ (೨೦೦೪) ಮತ್ತು ಲಾಸ್ ಏಂಜಲಿಸ್ (೨೦೦೫) ಬಳಿ ಎರಡು ರಾಷ್ಟ್ರೀಯ ಸಮ್ಮೇಳನಗಳನ್ನು ನಡೆಸಿದೆ. ದೇಶದ ಹಲವಾರು ಸಂಸ್ಥಾನಗಳಿಂದ ಜನ ಈ ಒಂದು ದಿನದ ಸಮ್ಮೇಳನಗಳಿಗೆ ಬಂದು ದಿನವಿಡೀ ಸಾಹಿತ್ಯಾತ್ಮಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಸಂತೋಷಪಟ್ಟು ಹೋಗಿದ್ದಾರೆ. ಕುವೆಂಪು ಜನ್ಮಶತಾಬ್ದಿಯನ್ನು ಭಾಗವಾಗಿ ಹೊಂದಿದ್ದ ಮೊದಲ ಸಮ್ಮೇಳನಕ್ಕೆ ಡಾ. ಪ್ರಭುಶಂಕರರೂ, ಕನ್ನಡ ಸಾಹಿತ್ಯದಲ್ಲಿ ಸೃಜನಶೀಲತೆಯನ್ನು ಮುಖ್ಯವಸ್ತುವಾಗಿ ಇರಿಸಿಕೊಂಡ ಎರಡನೆಯ ಸಮ್ಮೇಳನಕ್ಕೆ ಪ್ರೊ. ಬರಗೂರು ರಾಮಚಂದ್ರಪ್ಪನವರೂ ಮುಖ್ಯ ಅತಿಥಿಗಳಾಗಿ ಆಗಮಿಸಿ ಉತ್ತಮವಾದ ಭಾಷಣಗಳನ್ನು ನೀಡಿದರು. (ಈ ಭಾಷಣಗಳನ್ನು ರಂಗ ತನ್ನ ಭಾಷಣ ಮಾಲೆಯಲ್ಲಿ ಪ್ರತ್ಯೇಕವಾಗಿ ಮುದ್ರಿಸಿದೆ) ಈ ಸಮ್ಮೇಳನಗಳಲ್ಲಿ ಮುಖ್ಯ ಅತಿಥಿಗಳ ಭಾಷಣ, ಅವರೊಂದಿಗಿನ ಸಂವಾದಗಳಷ್ಟೇ ಅಲ್ಲದೆ, ಇತರ ಅನೇಕ ಸಾಹಿತ್ಯಾತ್ಮಕ ಕಾರ್ಯಕ್ರಮಗಳೂ ಇರುತ್ತವೆ. ಉದಾಹರಣೆಗೆ: ಸಮ್ಮೇಳನದ ವಿಶೇಷ ಗ್ರಂಥ ಬಿಡುಗಡೆ, ಕವಿಗೋಷ್ಠಿ, ನಮ್ಮ ಬರಹಗಾರರ ಮತ್ತು ಅವರ ಕೃತಿಗಳ ಪರಿಚಯ, ಅಮೆರಿಕದಲ್ಲಿ ನಡೆಯುತ್ತಿರುವ ಸಾಹಿತ್ಯ ವಿಚಾರಗೋಷ್ಠಿಗಳ ಬಗ್ಗೆ ವಿವರಣೆ, ಕನ್ನಡ ಕಲಿಯಲು ಕಾಲೇಜು ಮಟ್ಟದಲ್ಲಿ ಇಲ್ಲಿರುವ ಅವಕಾಶಗಳು, ಹಿರಿಯ ಸಾಹಿತಿಗಳ ಸ್ಮರಣೆ, ಇತ್ಯಾದಿ. ಇವಲ್ಲದೆ ಉತ್ತಮವಾದ ನಾಟಕ ಪ್ರದರ್ಶನ, ಜಾನಪದ, ಭಾವಗೀತೆಗಳ ಗಾಯನವೂ ಇರುತ್ತದೆ. ಇಲ್ಲಿನ ಬರಹಗಾರರ ಪುಸ್ತಕಗಳನ್ನು ಕೊಳ್ಳಲು ಅನುಕೂಲವಾಗುವಂತೆ ಒಂದು ಪುಸ್ತಕಾಲಯವೂ ಇರುತ್ತದೆ.

ಇಲ್ಲಿನ ಕನ್ನಡಿಗರ ಸಾಹಿತ್ಯ ಪ್ರತಿಭೆಯನ್ನು ಪ್ರತಿಬಿಂಬಿಸುವಂಥ ಪುಸ್ತಕಗಳ ಪ್ರಕಟನೆ ನಮ್ಮ ರಂಗದ ಒಂದು ಮುಖ್ಯ ಯೋಜನೆ. ರಂಗ ಇದುವರೆಗೆ ಎರಡು ಪುಸ್ತಕಗಳನ್ನು ಹೊರತಂದಿದೆ. ಮೊದಲನೆಯದು **ಕುವೆಂಪು ಸಾಹಿತ್ಯ ಸಮೀಕ್ಷೆ**, ಕುವೆಂಪು ಸಾಹಿತ್ಯವನ್ನು ಕುರಿತ ವೈಚಾರಿಕ ಪ್ರಬಂಧಗಳ ಸಂಕಲನ (ಪ್ರಧಾನ ಸಂ. ಆಹಿತನಲ, ಪ್ರ.ವಸಂತ ಪ್ರಕಾಶನ, ೨೦೦೪); ಎರಡನೆಯದು, ಇಲ್ಲಿನ ಕತೆಗಾರರ ಸೃಜನಶೀಲತೆ-ಯನ್ನು ಪ್ರತಿಬಿಂಬಿಸುವಂಥ ಕಥಾಸಂಕಲನ **ಆಚೀಚೆಯ ಕತೆಗಳು**(ಪ್ರಧಾನ ಸಂ. ಗುರುಪ್ರಸಾದ್ ಕಾಗಿನೆಲೆ, ಪ್ರ. ಕನ್ನಡ ಸಾಹಿತ್ಯ ರಂಗ ಮತ್ತು ಅಭಿನವ-೨೦೦೫). ಈ ಪುಸ್ತಕಗಳು ಡಾ. ಜಿ.ಎಸ್. ಶಿವರುದ್ರಪ್ಪ, ವ್ಯಾಸರಾಯ ಬಲ್ಲಾಳ, ಯಶವಂತ ಚಿತ್ತಾಲ, ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರಂಥ ಪ್ರಮುಖ ಸಾಹಿತಿಗಳ, ಇತರ ವಿಮರ್ಶಕರ ಮೆಚ್ಚುಗೆ ಗಳಿಸಿವೆ.

ಸ್ವಂತವಾಗಿ ಸಾಹಿತ್ಯ ಕಾರ್ಯಕ್ರಮಗಳನ್ನು ನಡೆಸುವುದಲ್ಲದೆ, ರಂಗ ಇತರ ಸಂಸ್ಥೆಗಳ ಸಾಹಿತ್ಯ ಯೋಜನೆಗಳಿಗೂ ಬೆಂಬಲ ನೀಡಿದೆ. ಈ ಕಳೆದ ಫೆಬ್ರುವರಿಯಲ್ಲಿ

ಲಾಸ್ ಏಂಜಲಿಸ್‌ನ ಸಾಹಿತ್ಯಾಂಜಲಿ ಮತ್ತು ಅಭಿನವ ಪ್ರಕಾಶನದವರು ಪ್ರಕಟಿಸಿದ **ಕನ್ನಡದಮರ ಚೇತನ–ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸಾಹಿತ್ಯ ಸಮೀಕ್ಷೆ–** (ಸಂ. ಆಹಿತಾನಲ ಮತ್ತು ಹಂ.ಕ. ಕೃಷ್ಣಪ್ರಿಯ) ಗ್ರಂಥವನ್ನು ಹೊರತರುವಲ್ಲಿ ಕನ್ನಡ ಸಾಹಿತ್ಯ ರಂಗ ಯಥಾಶಕ್ತಿ ಧನಸಹಾಯ ಮಾಡಿದೆ.

೨೦೦೬ರಲ್ಲಿ ರಂಗ ನಡೆಸಿದ ಮುಖ್ಯ ಕಾರ್ಯಕ್ರಮ ಕನ್ನಡ ಸಾಹಿತ್ಯ ಶಿಬಿರದ ಯೋಜನೆ, ನಿರ್ವಹಣೆ. ಈ ಶಿಬಿರದ ಮುಖ್ಯ ಉದ್ದೇಶ ಇಲ್ಲಿ ನೆಲಸಿದ ಕನ್ನಡ ಸಾಹಿತ್ಯಾಸಕ್ತರಿಗೆ, ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಕ್ರಮಬದ್ಧವಾಗಿ ಒಬ್ಬ ಉತ್ತಮ ಪ್ರಾಧ್ಯಾಪಕರ ಮುಖೇನ ಕಲಿತುಕೊಳ್ಳುವ ಅವಕಾಶ ಕಲ್ಪಿಸುವುದು. ಈ ಶಿಬಿರವನ್ನು ಅತ್ಯಂತ ಯಶಸ್ವಿಯಾಗಿ ನಡೆಸಿಕೊಟ್ಟವರು ಕನ್ನಡದ ಪ್ರಮುಖ ಕವಿ ವಿಮರ್ಶಕ ವಿದ್ವಾಂಸರಲ್ಲೊಬ್ಬರೂ, ಸಮರ್ಥ ಉಪನ್ಯಾಸಕರೂ ಆದ ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು. ಜೂನ್–ಆಗಸ್ಟ್ ತಿಂಗಳ ಅವಧಿಯಲ್ಲಿ ದೇಶದ ಒಂಬತ್ತು ನಗರಗಳಲ್ಲಿ ನಡೆದ ಎರಡು ದಿನದ ಈ ಶಿಬಿರದಲ್ಲಿ, ಒಟ್ಟು ೨೦೦ಕ್ಕೂ ಹೆಚ್ಚು ಮಂದಿ ಪಾಲ್ಗೊಂಡರು. ಇಷ್ಟು ದೊಡ್ಡ ಪ್ರಮಾಣದಲ್ಲಿ ಇಂಥ ಶಿಬಿರ ದೇಶಾದ್ಯಂತ ನಡೆದದ್ದು ಇದೇ ಮೊದಲು. ಅದರಲ್ಲಿ ಭಾಗವಹಿಸಿದವರೆಲ್ಲರೂ ಆ ಕಾರ್ಯಕ್ರಮದ ಮುಲಭೂತ ಉಪಯುಕ್ತತೆಯನ್ನು ಗ್ರಹಿಸಿ, ಆ ಯೋಜನೆಯನ್ನು ಮುಂದುವರೆಸುವ ಬಗ್ಗೆ ತೀವ್ರ ಅಭಿಲಾಶೆ ತೋರಿದ್ದಾರೆ. ಇನ್ನೊಂದು ಗಮನಿಸಬೇಕಾದ ಸಂಗತಿ: ಈ ಉಪನ್ಯಾಸಗಳ ಮುಖ್ಯ ಅಂಶಗಳನ್ನು ಪದೇ ಪದೆ ಕೇಳಿಸಿಕೊಳ್ಳಲು ಅನುವಾಗುವಂತೆ ಡಾ. ಲಕ್ಷ್ಮೀ–ನಾರಾಯಣ ಭಟ್ಟರು ಈ ಸಂದರ್ಭದಲ್ಲಿ ನಾಲ್ಕು ಧ್ವನಿಮುದ್ರಿಕೆಗಳ (CD) ಸಂಪುಟ ತಯಾರಿಸಿದ್ದಾರೆ.

ಕನ್ನಡ ಸಾಹಿತ್ಯ ರಂಗ ಒಂದು ವಿಶಿಷ್ಟ ಸಂಸ್ಥೆ. ಅದಕ್ಕೆ ಒಂದು ನಿರ್ದಿಷ್ಟವಾದ ಕಾರ್ಯಕ್ಷೇತ್ರವಿದೆ, ಗುರಿಯಿದೆ. ಅದರ ಕಾರ್ಯಸಾಧನೆಗೆ ಸಾಹಿತ್ಯದಲ್ಲಿ ಒಲವುಳ್ಳ ಕನ್ನಡಿಗರೆಲ್ಲರ ಬೆಂಬಲ, ಪ್ರೋತ್ಸಾಹ, ಸಹಾಯ ಅಗತ್ಯ. ಅದು ಇದುವರೆಗೆ ಮಾಡಿರುವ ಕೆಲಸ ಅದರ ಬಗ್ಗೆ ನಿಮ್ಮಲ್ಲಿ ಭರವಸೆ ಮೂಡಿಸುವುದೆಂದು ನಂಬಿದ್ದೇವೆ. ಅದು ಲಾಭೋದ್ದೇಶವಿಲ್ಲದ ಸಂಸ್ಥೆ (Non-profit organization). ಇದುವರೆಗೆ ನಡೆದಿರುವುದೆಲ್ಲ ಜನರ ಉದಾರ ಸಹಾಯದಿಂದ. ನಮ್ಮಲ್ಲಿ ಆ ವಿಶ್ವಾಸ ತೋರಿ ನಮ್ಮ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ನಮ್ಮನ್ನು ಪ್ರೋತ್ಸಾಹಿಸಿರುವ ಎಲ್ಲ ಸಹೃದಯರಿಗೂ ರಂಗದ ಪರವಾಗಿ ನಮ್ಮ ಧನ್ಯವಾದಗಳು.

ನಮ್ಮ ಪುಸ್ತಕ ಪ್ರಕಟನೆಯ ಕಾರ್ಯದಲ್ಲಿ ಅತ್ಯಂತ ವಿಶ್ವಾಸದಿಂದ, ಮುತುವರ್ಜಿಯಿಂದ ಸಹಕರಿಸಿರುವ ಅಭಿನವ ಸಂಸ್ಥೆಗೆ ನಮ್ಮ ಹೃತ್ಪೂರ್ವಕ ವಂದನೆಗಳು. ನಮ್ಮ ಎರಡನೆಯ ಪುಸ್ತಕ 'ಆಚೀಚೆಯ ಕತೆಗಳು' ಪ್ರಕಟನೆಯಿಂದ

ಮೊದಲಾದ ನಮ್ಮ ಸಹೋದ್ಯಮ ಹೀಗೆಯೇ ಬಹು ಕಾಲ ಸಾರ್ಥಕವಾಗಿ ಮುಂದುವರೆಯಲಿ ಎಂದು ಹಾರೈಸುತ್ತೇವೆ.

ನಮ್ಮ ರಂಗದ ಯೋಜನೆಗಳನ್ನು ಕನ್ನಡ ಜನಕ್ಕೆ ತಿಳಿಸುವುದರಲ್ಲಿ ನಮಗೆ thatskannada.com ಅಂತರ್ಜಾಲ ತಾಣದ ಶ್ರೀ ಎಸ್.ಕೆ. ಶ್ಯಾಮ ಸುಂದರ ಮತ್ತು ಶ್ರೀ ಪ್ರಸಾದ ನಾಯಕರು ಬಹು ಕಾಲದಿಂದಲೂ ಬೆಂಬಲ ನೀಡಿದ್ದಾರೆ. ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಈ ವರ್ಷ ರಂಗ **ನಗೆಗನ್ನಡಂ ಗೆಲ್ಗೆ!** ಎಂಬ ಪುಸ್ತಕವನ್ನು ಓದುಗರಿಗೆ ಅರ್ಪಿಸುತ್ತಿದೆ. ಈ ಪುಸ್ತಕ ನಮ್ಮ ಕನ್ನಡ ಜನತೆಯ ಮುಖಗಳಲ್ಲಿ ನಗು ಮೂಡಿಸಿದ ಹಾಸ್ಯಸಾಹಿತಿಗಳನ್ನು ಪ್ರೀತಿಯಿಂದ, ಕೃತಜ್ಞತೆಯಿಂದ ನೆನೆಯುವುದಲ್ಲದೆ, ಅಮೆರಿಕದ ಕನ್ನಡಿಗರ ಹಾಸ್ಯ ಲೇಖನಗಳನ್ನೂ ನಿಮ್ಮ ಕೈಲಿಡುತ್ತಿದೆ. ಹಿಂದಿನ ಪುಸ್ತಕಗಳಂತೆ ಇದೂ ಕನ್ನಡಿಗರ ಮೆಚ್ಚಿಕೆ ಗಳಿಸುವುದೆಂದು ಹಾರೈಸುತ್ತೇವೆ.

**–ಎಚ್. ವೈ. ರಾಜಗೋಪಾಲ್,** ಕಾರ್ಯಕಾರೀ ಸಮಿತಿಯ ಅಧ್ಯಕ್ಷ

**–ನಳಿನಿ ಮೈಯ,** ಆಡಳಿತ ಮಂಡಲಿಯ ಅಧ್ಯಕ್ಷೆ

## ಅನುಬಂಧ – ೩

### ೧. ಆಚೀಚೆಯ ಕಥೆಗಳು

(ಕಡಲಾಚೆಯ ಕನ್ನಡ ಕಥಾಸಂಕಲನ)

ಪ್ರಧಾನ ಸಂಪಾದಕ: **ಗುರುಪ್ರಸಾದ್ ಕಾಗಿನೆಲೆ**

(ಪ್ರ) ಕನ್ನಡ ಸಾಹಿತ್ಯ ರಂಗ ಮತ್ತು ಅಭಿನವ, ೨೦೦೫, ೩೦೦ ಪುಟಗಳು

'ಆಚೀಚೆಯ ಕತೆಗಳು' ಕನ್ನಡದಲ್ಲಿ ನಡೆದ ಇತ್ತೀಚಿನ ಆಕರ್ಷಕ ಪ್ರಯೋಗವಾಗಿದೆ. ತಾಯಿನೆಲದಿಂದ ದೂರವಾದ–ಕನ್ನಡದ ಜೀವಂತ ಸಂಪರ್ಕ ಅಸಾಧ್ಯವಾದ– ಜಾಗದಲ್ಲಿ ಕುಳಿತು, ಕೇವಲ ತಮ್ಮ ಮಾತೃಭಾಷೆಯ ಪ್ರೀತಿಗಾಗಿ–'ಎಂದೆಂದಿಗೂ ಕನ್ನಡವಾಗಿರುವ' ಹಟದಲ್ಲಿ–ರಚಿಸಿದ ಈ ಕತೆಗಳು ಕನ್ನಡ ಕಥಾಸಾಹಿತ್ಯಕ್ಕೆ ಕಡಲಾಚೆಯ ಕನ್ನಡಿಗರಿತ್ತ ಅಪೂರ್ವ ಕೊಡುಗೆಯಾಗಿವೆ...

**–ಯಶವಂತ ಚಿತಾಲ** (ಬೆನ್ನುಡಿಯಿಂದ)

ಈ ಕೃತಿಯ ಮಾಲೆಯಲ್ಲಿ ಸೇರಿರುವ ಇಪ್ಪತ್ತೆರಡು ಹೊಚ್ಚಹೊಸ ಕತೆಗಳಲ್ಲಿ ಪ್ರತಿಯೊಂದು ಹೂವೂ ಬೇರೆ–ಬೇರೆ ರೀತಿಯ ಬರವಣಿಗೆಯನ್ನು ಹೊಂದಿವೆ. ಓದಿ ಮುಗಿಸಿದ ಮೇಲೆ ಇಪ್ಪತ್ತೆರಡು ವಿವಿಧ ಮನಸ್ಸಿನೊಂದಿಗೆ ಒಡನಾಡಿದ, ಅಲ್ಲಿಯ ಪಾತ್ರಗಳೊಂದಿಗೆ ಮೌನ ಸಂವಾದ ನಡೆಸಿದ ಖುಷಿಯ ಅನುಭವವಾಗುತ್ತದೆ...

ತುಂಬಾ ವಿಸ್ತಾರವಾದ ಬದುಕಿನ ಕ್ರಮ, ಸಂಸ್ಕೃತಿಯ ಸಂಘರ್ಷ, ಆಸೆ, ನಿರಾಸೆ, ಪ್ರೇಮ, ಕಾಮ, ದುಃಖ, ಸಂಕಷ್ಟ, ಸುಖಭೋಗ, ಹೊಂದಾಣಿಕೆ ಇವುಗಳೆಲ್ಲ ಜೀವಿಯೊಬ್ಬನ ಮನಸ್ಥಿತಿಯನ್ನು ಹೇಗೆ ರೂಢಿಸುತ್ತವೆ ಹಾಗೂ ನಮ್ಮಲ್ಲಿ ಬೇರೆ ಬೇರೆ ದೃಷ್ಟಿಕೋನಗಳು ನಿರ್ಮಾಣಗೊಳ್ಳುವ ಹಂತದಲ್ಲಿ ಈ ಕತೆಗಳು ತನ್ನದೇ ಆದ ಒಂದು ಪ್ರಾಮಾಣಿಕ ಹಸಿತನ ಮತ್ತು ಬಿಗಿಯಲ್ಲಿ ಓದುಗನ ಮನಸ್ಸನ್ನು ಹೇಗೆ ಪಕ್ವಗೊಳ್ಳುತ್ತಾ

ಹಾಗುತ್ತವೆ ಎಂಬ ಬಗ್ಗೆ ಅಚ್ಚರಿ ಎನಿಸುತ್ತದೆ. ಆ ನಿಟ್ಟಿನಲ್ಲಿ ಇಲ್ಲಿಯ ಪ್ರತಿ ಕತೆಯೂ ಒಂದಿಲ್ಲೊಂದು ಕಾರಣದಿಂದ ಮಹತ್ವದ್ದೇ...

**–ಸುನಂದಾ ಪ್ರಕಾಶ ಕಡಮೆ**, 'ಗಾಂಧಿ ಬಜ಼ಾರ್' ಪತ್ರಿಕೆ.. ಜೂನ್ ೨೦೦೬

..ಇಲ್ಲಿನ ಕಥೆಗಳಲ್ಲಿ ಸುಮಾರು ಹತ್ತಕ್ಕೂ ಮೀರಿ ಒಳ್ಳೆಯ ಕಥೆಗಳಿವೆ ಎಂಬ ಅಂಶವೇ ಒಂದು ಆಪ್ತತೆಯನ್ನು ಸಂಕಲನದಮಟ್ಟಿಗೆ ಒದಗಿಸುವಂತದು. ಬಿಟ್ಟುಬಂದ ದೇಶದ ಅನುಭವಗಳ ಒಟ್ಟೊಟ್ಟಿಗೆ ಸೇರಿದ ದೇಶದಲ್ಲಿ ಸೌಭಾಗ್ಯವಾಗಿ ಬಂದ ಅನುಭವಗಳ ಹಿನ್ನೆಲೆಯಲ್ಲಿ ಕಥೆಗಳೆಲ್ಲ ಬಹುತೇಕ ಅನನ್ಯತೆ ಪಡೆಯುತ್ತವೆ.

**–ಮಹಾಬಲಮೂರ್ತಿ ಕೂಡ್ಲೆಕೆರೆ**.ವಿಜಯ ಕರ್ನಾಟಕ, ಆಗಸ್ಟ್ ೨೦, ೨೦೦೬

ಸಂಸ್ಕೃತಿಯ ಪಲ್ಲಟಗಳು, ವಲಸೆಗಾರರ ದ್ವಂದ್ವಗಳು, ಆಧುನಿಕ ಬದುಕಿನ ವೈಪರೀತ್ಯಗಳು, ಜಾಗತಿಕ ಪರಿಸರದಲ್ಲಿ ನೆಲೆಸಿ ಕನ್ನಡತನ ಉಳಿಸಿಕೊಳ್ಳುವ ಹಂಬಲ– ಇವೆಲ್ಲ ಕಥೆಗಳಾಗಿವೆ...

**–ರಘುನಾಥ ಚ.ಹ.**, ಸುಧಾ..

## ಕುವೆಂಪು ಸಾಹಿತ್ಯ ಸಮೀಕ್ಷೆ

### ಪ್ರಧಾನ ಸಂಪಾದಕ: ಆಹಿತಾನಲ

ಪ್ರ: ವಸಂತ ಪ್ರಕಾಶನ, ಬೆಂಗಳೂರು. ೨೦೦೪, ೩೫೩ ಪುಟಗಳು

'....ಕುವೆಂಪು ಸಾಹಿತ್ಯ ಸಮೀಕ್ಷೆ' ಕುವೆಂಪು ಸಾಹಿತ್ಯದ ಹಲವು ಮುಖಗಳನ್ನು ಕುರಿತು ಕಡಲಾಚೆಯ ಕನ್ನಡಿಗರು ಬರೆದ ಲೇಖನಗಳ ಒಂದು ಸಂಪುಟ.... ಅಮೆರಿಕದಲ್ಲಿದ್ದೂ, ತಮ್ಮ ಕನ್ನಡ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಸಂರಕ್ಷಕ ಕವಚಗಳನ್ನು ಕಂಡುಕೊಳ್ಳುವುದು ಅವರಿಗೆ ಅಗತ್ಯವಾಗಿದೆ.... ತಮ್ಮೊಳಗಿನ ಕನ್ನಡತನವನ್ನು ತುಕ್ಕು ಹಿಡಿಯದಂತೆ ಕಾಪಾಡಿಕೊಂಡಿದ್ದಾರೆ. ಹೀಗೆ ... ತಮ್ಮ ಕನ್ನಡತನವನ್ನು ...ಉಳಿಸಿಕೊಂಡಿದ್ದರ ಸಂಕೇತವೇ ಈ 'ಕುವೆಂಪು ಸಾಹಿತ್ಯ ಸಮೀಕ್ಷೆ' ... ಕುವೆಂಪು ಸಾಹಿತ್ಯ ನಿರ್ಮಿತಿಯನ್ನು ಕುರಿತು ಒಂದು ಒಳ್ಳೆಯ ಸಮೀಕ್ಷೆ ಇದು....

**–ಜಿ.ಎಸ್. ಶಿವರುದ್ರಪ್ಪ**

....ಅನಿವಾಸಿ ಕನ್ನಡಿಗರ ಈ ಕೊಡುಗೆ ಕುವೆಂಪು ಅವರಿಗೆ ಅರ್ಪಿಸುವ ಒಂದು ದೊಡ್ಡ ನಮನ. ಕರ್ನಾಟಕದ ಸಮಕಾಲೀನ ಲೇಖಕರ ಮಟ್ಟಕ್ಕೇನೂ ಕಮ್ಮಿಯಿಲ್ಲದ ಲೇಖನಗಳು ಇಲ್ಲಿ ಹೊರಬಂದಿದೆ ಎನ್ನಲು ಹೆಮ್ಮೆಯಾಗುತ್ತದೆ.

**–ಪ್ರಭುಶಂಕರ**

....'ಕುವೆಂಪು ಸಾಹಿತ್ಯ ಸಮೀಕ್ಷೆ'ಯಲ್ಲಿ ಅಧ್ಯಯನಪೂರ್ಣ ಲೇಖನಗಳನ್ನು ಬರೆದಿರುವ ಅಮೆರಿಕದ ಲೇಖಕರ ಬಗ್ಗೆ ಕರ್ನಾಟಕದ ಕನ್ನಡಿಗರೂ ಅಭಿಮಾನ ಪಡಬೇಕು. ಕುವೆಂಪು ಸಾಹಿತ್ಯದ ವಿವಿಧ ಮುಖಗಳನ್ನು ಆಸಕ್ತಿಯಿಂದ ಚರ್ಚಿಸಿದ ಎಲ್ಲ ಲೇಖಕ ಲೇಖಕಿಯರೂ ತಾವು ಆರಿಸಿಕೊಂಡ ವಸ್ತುವಿನ ಬಗ್ಗೆ ಸಮರ್ಥವೆನಿಸುವ ಗ್ರಹಿಕೆಯನ್ನು ವ್ಯಕ್ತಪಡಿಸಿದ್ದಾರೆ....

**– ವ್ಯಾಸರಾಯ ಬಲ್ಲಾಳ**

....'ಕುವೆಂಪು ಸಾಹಿತ್ಯ ಸಮೀಕ್ಷೆ' ಕೃತಿಯು ಸುಂದರವಾಗಿ ರೂಪುಗೊಂಡಿದೆ. ಕನ್ನಡದ ಹಿರಿಯ ಕವಿಗೆ ಸಾಗರದಾಚೆಯ ಕನ್ನಡಿಗರ ಯೋಗ್ಯ ಉಡುಗೊರೆ ಇದು. ಅದಕ್ಕಾಗಿ ಸಂಪಾದಕ ಮಂಡಳಿ ಮತ್ತು ಲೇಖಕರಿಗೆ ಹಾರ್ದಿಕ ಅಭಿನಂದನೆಗಳು

**–ಟಿ. ವಸಂತಕುಮಾರ(ಮುಂಬಯಿ ವಿ.ವಿ.ದ ಕನ್ನಡ ವಿಭಾಗದ ಮುಖ್ಯಸ್ಥರು)**

ಅಮೆರಿಕದಲ್ಲಿ ನೆಲೆಸಿರುವ ಕನ್ನಡಿಗರು ಕಳೆದ ಮೂರ್ನಾಲ್ಕು ದಶಕಗಳಲ್ಲಿ ಅನೇಕ ಕನ್ನಡ ಕೂಟಗಳನ್ನು ಸ್ಥಾಪಿಸಿಕೊಂಡಿದ್ದಾರೆ....ಆದರೆ, ಕನ್ನಡ ಸಾಹಿತ್ಯಕ್ಕೆಂದೇ ಮೀಸಲಾದ ಸಂಘಟನೆ–ಕನ್ನಡ ಸಾಹಿತ್ಯ ರಂಗ...ಅಮೆರಿಕದಲ್ಲಿ ಮನೆಮಾಡಿ, ಇಂಗ್ಲಿಷ್ ಪರಿಸರದಲ್ಲಿ ಕನ್ನಡವನ್ನು ನೆನಪು ಮಾಡಿಕೊಳ್ಳುವುದೇ ದೊಡ್ಡ ಸಂಗತಿ. ಅದರಲ್ಲೂ ಕುವೆಂಪು ಕುರಿತು ೩೫೪ ಪುಟಗಳ ಬೃಹತ್ ಗ್ರಂಥ ಹೊರತರುವುದಿದೆಯಲ್ಲ ಅದು ನಿಜಕ್ಕೂ ಅಭಿನಂದನಾ ವಿಷಯ. ಈ ಪುಸ್ತಕದಿಂದ ನಾವು ಕಲಿಯುವಂಥದು ಸಾಕಷ್ಟಿದೆ. ಅಮೆರಿಕನ್ನಡಿಗರ ಪ್ರೀತಿಗೆ ಸಲಾಮು

**–ವಿಶ್ವೇಶ್ವರ ಭಟ್(ವಿಜಯ ಕರ್ನಾಟಕ ಸಂಪಾದಕೀಯ)**

ಕರ್ನಾಟದ ವಿವಿಧ ಭಾಗಗಳಿಂದ ಕನ್ನಡಿಗರು ಉದ್ಯೋಗಾರ್ಥಿಗಳಾಗಿ ವಿದೇಶಕ್ಕೆ ಹೋಗಿದ್ದಾರೆ. ಅದನ್ನು ಪ್ರತಿಭಾ ಪಲಾಯನ, ಡಾಲರ್ ಪೌಂಡ್ ಗಳಿಕೆಯ ಆಸೆ ಅಂತ ಟೀಕಿಸುವವರಿದ್ದಾರೆ. ಭಾಷೆಗಳ ಅಭಿಮಾನದಿಂದ ವಿಮುಖರಾಗಿದ್ದಾರೆಂದು ದೂರುವವರಿದ್ದಾರೆ! ಈ ಅನಿಸಿಕೆ ಸರಿಯಲ್ಲವೆಂದು ಕುವೆಂಪು ಜನ್ಮಶತಾಬ್ದಿ ಸಂದರ್ಭದಲ್ಲಿ ಅಮೆರಿಕನ್ನಡಿಗರ 'ಕುವೆಂಪು ಸಾಹಿತ್ಯ ಸಮೀಕ್ಷೆ' ಎಂಬ ಪುಸ್ತಕ

ಸೂಚಿಸುತ್ತದೆ. ಅಮೆರಿಕನ್ನಡಿಗರ ಈ ಕಾರ್ಯ ಸ್ತುತ್ಯರ್ಹ. ನಮ್ಮ ಸಂಸ್ಕೃತಿ, ನಡೆ-ನುಡಿಗಳೆಲ್ಲವೂ ದೂರಾಯಿತೇನೋ ಅನ್ನುವಾಗಲೇ ಪರದೇಶದ ಪರಿಸರದಲ್ಲೂ 'ಇಲ್ಲೂ ಇದೆ ತುಡಿಯುವ ಎದೆ- ಕನ್ನಡ ನಾಡಿಗೆ ನುಡಿಗೆ' ಎಂಬ ಮಾತನ್ನು ಸಫಲಗೊಳಿಸಿದ್ದಾರೆ.... ಆದರೆ ಇಂಥ ಸಂಗ್ರಹಯೋಗ್ಯ ಮೌಲಿಕವಾದ ಗ್ರಂಥಕ್ಕೆ ಕನ್ನಡ ನಾಡಿನಲ್ಲಿ ಪ್ರಚಾರ ಸಿಗದಿರುವುದು ಖೇದಕರ

**-ಎಚ್.ಜಿ.ಸೋಮಶೇಖರ ರಾವ್(ಪ್ರಜಾವಾಣಿ)**

....ಕುವೆಂಪು ಅವರನ್ನು ಕೇಳಿ, ಓದಿ ಮೆಚ್ಚಿಕೊಂಡು ಇರುವವರ ಹತ್ತಿರ ಕುವೆಂಪು ಬಗ್ಗೆ ನಾಲ್ಕು ಸಾಲು ಬರೆದುಕೊಡಿ ಅಂತ ಕೇಳಿದರೆ ಅವರು ಥಟ್ಟನೆ ಹುಷಾರಾಗುತ್ತಾರೆ ....ಅವರವರು ಕಂಡ ಕುವೆಂಪು ಆ ಲೇಖನಗಳಲ್ಲಿ ಹಣಕಿ ಹಾಕುತ್ತಾರೆ. ಹಾಗಾಗಿಲ್ಲ ಎನ್ನುವುದು 'ಕುವೆಂಪು ಸಾಹಿತ್ಯ ಸಮೀಕ್ಷೆ' ಎಂಬ ಸಂಕಲನ ಹೆಗ್ಗಳಿಕೆ.

**-ಜಾನಕಿ(ದಟ್ಸ್‌ಕನ್ನಡಅಂತರ್ಜಾಲ ಪತ್ರಿಕೆ)**

'...ಎಲ್ಲಿದ್ದರೆ ಏನ್, ಎಂತಿದ್ದರೆ ಏನ್, ನೀ ಮೆಟ್ಟಿದ ನೆಲ ಅದೆ ಕರ್ನಾಟಕ'- ಎಂಬ ಕುವೆಂಪು ಕವನದ ಸಾಲಿನ ಜೇನುನುಡಿಯನ್ನು ಸಾರ್ಥಕಗೊಳಿಸಿಕೊಂಡು, ತಾವಿದ್ದೂರನ್ನೇ ಕರ್ನಾಟಕವಾಗಿಸಿಕೊಂಡು, ಕನ್ನಡವನ್ನು ಉಸಿರಾಗಿಸಿಕೊಂಡು ಅಮೆರಿಕದಲ್ಲಿ ಅನಿವಾಸಿ ಕನ್ನಡಿಗರು ಜೀವನ ನಡೆಸುತ್ತಿದ್ದಾರೆ. ಕುವೆಂಪುರವರು ಕೈಗೊಂಡ ಸಾಹಿತ್ಯ ಕೃಷಿಯನ್ನು ಅವಲೋಕಿಸಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ, 'ಕುವೆಂಪು ಸಾಹಿತ್ಯ ಸಮೀಕ್ಷೆ ' ಎಂಬ ಒಂದು ಉತ್ತಮ ಗ್ರಂಥವನ್ನು ಸಾಹಿತ್ಯ ಲೋಕಕ್ಕೆ ಅರ್ಪಿಸಿದ್ದಾರೆ...

**-ಮೂಗಲು ಮಲ್ಲಿಕಾರ್ಜುನ ದಟ್ಸ್‌ಕನ್ನಡ ಅಂತರ್ಜಾಲ ಪತ್ರಿಕೆ**



ಮನೆ/ಕಛೇರಿ : 23505825
ಸಂಚಾರಿ: 9448804905

17/18-2, ಮೊದಲನೆಯ ಮುಖ್ಯರಸ್ತೆ , (ಮುನೇಶ್ವರ ದೇವಸ್ಥಾನದ ಹತ್ತಿರ) ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - 560 040. E-mail: abhinavaravi@gmail.com

ನಿಲ್ಲಿಸಬೇಡ ಕಾಯುವುದನ್ನು(ಕವನ)ಭಾರತೀದೇವಿ 40/-
ಕನಸು ಕನ್ನಡಿ(ಕವನ)ಸರಸ್ವತಿ ಗಂಗೊಳ್ಳಿ 40/-
ಇದರ ಹೆಸರು(ಕವನ)ಅಂಕುರ್ ಬೆಟಗೇರಿ 75/-
ಗುಬ್ಬಿಯ ಸ್ವರ್ಗ(ಮಕ್ಕಳ ಪದ್ಯಗಳು) ಭಾಗೀರಥಿ ಹೆಗಡೆ 25/-
ಹೂ ಅಂದ್ರ ಹೂ(ಪುಟಾಣಿಗಳಿಗಾಗಿ ಪುಟಾಣಿ ಪದ್ಯಗಳು)ಆನಂದ ಪಾಟೀಲ 40/-
ಕನ್ನಡ-ಇಂಗ್ಲಿಷ್ ನಿಘಂಟು – ಪ್ರಭುಶಂಕರ ಮತ್ತು ಬಾ.ವೇ. ಶ್ರೀಧರ 250/-
ದೇಸಿ ನಗು(ಲೇಖನಗಳು)ಎಂ.ಎಸ್. ಮೂರ್ತಿ 60/-
ಜೀವಜಾಲ(ಪರಿಸರ ವಿಜ್ಞಾನ)ಕೆ. ಪುಟ್ಟಸ್ವಾಮಿ, ಕೃಪಾಕರ–ಸೇನಾನಿ 100/-
ನಮಸ್ಕಾರ(ಸಾಹಿತ್ಯ ವಿಮರ್ಶೆ) ಎಚ್.ಎಸ್. ರಾಘವೇಂದ್ರರಾವ್ 150/-
ಎಲ್ಲಬಲ್ಲವರಿಲ್ಲ(ಆಯ್ದ ಲೇಖನಗಳು) ಎಚ್.ವೈ. ಶಾರದಾಪ್ರಸಾದ್ 75/-
ಆಕಾಶದಗಲ ನಗುವಿನ ಅವಧೂತ(ಬೆಳಗೆರೆ ಕೃಷ್ಣಶಾಸ್ತ್ರೀ ಅವರನ್ನು ಕುರಿತು) 50/-
ನನಗೆ ದೇವರ ಗೊಡವೆ ಕೂಡ ಬೇಡ(ಮಿರ್ಜಾ ಗಾಲಿಬ್ ಜೀವನ- ಕೃತಿಗಳು) 60/-
ನೆಲಕ್ಕೆ ಬಿದ್ದ ನಕ್ಷತ್ರಗಳು (ಹೂ ಕುರಿತು) ಸಂ. ರವಿಕುಮಾರ 75/-
ಟಿಬೆಟ್ (ಜಗತ್ತು ಕೇಳಿಸಿಕೊಳ್ಳಬೇಕಾದ ಆರ್ತಮೊರೆ) ಮಂಗ್ಳೂರ ವಿಜಯ 375/-
ಡಂಡಂ ಊರಿಗೆ ಡಿಂಡಿಂ ಗಾಡಿ (ಮಕ್ಕಳಿಗಾಗಿ) ಆನಂದ ಪಾಟೀಲ 20/-
ವೈದ್ಯರ ಶಿಕಾರಿ(ಶಿಕಾರಿಯಲ್ಲದ ಶಿಕಾರಿಅನುಭವಗಳು) ಟಿ.ಎಸ್.ರಮಾನಂದ್) 70/-
ಈ ತನಕದ ಕಥೆಗಳು ಅಬ್ದುಲ್ ರಷೀದ್ 150/-
ನಮ್ಮ ಕನ್ನಡ(ಕನ್ನಡ ಚಿಂತನೆ) ಕೆ.ವಿ.ತಿರುಮಲೇಶ್ 60/-
ಆಚೀಚೆಯ ಕಥೆಗಳು
(ಕಡಲಾಚೆಯ ಕನ್ನಡ ಕಥಾ ಸಂಕಲನ) ಸಂ.ಗುರುಪ್ರಸಾದ್ ಕಾಗಿನೆಲೆ 150/-
ನೀರತೇರು(ಕವನ) ಕವಿತಾ ರೈ 60/-
ಅಬ್ದುಲ್ಲನ ಕೈಲಾಸ(ಕವಿತೆ)ಸುದೇಶ್ ಮಹಾನ್ 50/-
ನಿಮ್ಮ ಸಿಮ್ಮ (ಅಂಕಣ ಬರಹ) ಸಿ.ಆರ್.ಸಿಂಹ 125/-
ನಿನ್ನ ನೆನಪಿಗೊಂದು ನವಿಲುಗರಿ(ಕವನ ಸಂಕಲನ)ಆನಂದ ಋಗ್ವೇದಿ 50/-
ಪಂಜರಿಯರವ (ಜಾನಪದ ಅಧ್ಯಯನ) ಎನ್.ಪಿ. ಶಂಕರ ನಾರಾಯಣರಾವ್ 150/-
ಹವಳ ಹಾರಿದ ಹೊತ್ತು (ಕವನ ಸಂಕಲನ) ಸ.ಉಷಾ 50/-
ಪುಗಳೇಂದಿ ಪ್ರಹಸನ (ನಾಟಕ) ರಾಮನಾಥ 60/-
ಬೆಂಕಿಯ ನೆನಪು(ಪರ್ಯಾಯಚರಿತ್ರೆ)ಎಡುವರ್ಡೊ ಗೆಲಿಯಾನೊ/ಕೆ.ಪಿ. ಸುರೇಶ 75/-
ಹಿಡಿದ ಉಸಿರು (ಕವನ ಸಂಕಲನ) ಅಂಕುರ್ ಬೆಟಗೇರಿ 40/-
ಯದುಗಿರಿಯ ಬೆಳಕು (ಪು.ತಿ.ನ ಸಾಹಿತ್ಯ ಕುರಿತು)ಸಂ. ಆಹಿತಾನಲ 150/-
ಮರೆಯಲಾದೀತೆ? (ನೆನಪುಗಳು) ಬೆಳಗೆರೆ ಕೃಷ್ಣಶಾಸ್ತ್ರೀ 250/-
ಎಲೆಮರೆಯ ಅಲರು(ಉಳಿದ ನೆನಪುಗಳು)ಬೆಳಗೆರೆ ಕೃಷ್ಣಶಾಸ್ತ್ರೀ 45/-
ಹೇ ರಾಮ್ (ಭಾರತದ ಆತ್ಮಚ್ಛೇದ ಕಥನ) ಸಂ. ನ. ರವಿಕುಮಾರ 275/-
ಭಾರತೀಯತತ್ವಶಾಸ್ತ್ರದ ರೂಪುರೇಖೆಗಳು ಮೂಲ:ಎಂ.ಹಿರಿಯಣ್ಣ/ಪ್ರಭುಶಂಕರ 275/-
ಅಮೆರಿಕಾಯಣ ವೈ.ಆರ್. ಮೋಹನ್ 650/-

| | | |
|---|---|---|
| ಅಮೂರ್ತತೆ ಮತ್ತು ಪರಿಸರ (ವಿಮರ್ಶೆ) | ರಾಜೇಂದ್ರ ಚೆನ್ನಿ | 180/- |
| ಫಾದರ್ 55 (ಕವನ ಸಂಕಲನ) | ವಿ.ಎಂ.ಮಂಜುನಾಥ್ | 50/- |
| ಮಂದಹಾಸ ಮೀಮಾಂಸೆ(ಸಮಗ್ರ ಲಲಿತ ಪ್ರಬಂಧ) | ಪ್ರಭುಶಂಕರ | 150/- |
| ಖಲೀಲ್ ಗಿಬ್ರಾನ್ (ಜೀವನ ದರ್ಶನ) | ಪ್ರಭುಶಂಕರ | 60/- |
| ಆಂಟೋನಿಯೊ ಗ್ರಾಮ್ಷಿ (ಶತಮಾನ ಚಿಂತನೆ) | ಕೆ. ಫಣಿರಾಜ್ | 50/- |
| ಹಳೆಯಕಾಲದ ಹೊಸಕತೆ(ಕಥಾ ಸಂಕಲನ) | ಕೆ.ಸತ್ಯನಾರಾಯಣ | 125/- |
| ಮನುಕುಲದ ಮಾತುಗಾರ (ಚಾಮ್‌ಸ್ಕಿ ಚಿಂತನೆ/ದರ್ಶನ) | ವಿವಿಧ ಲೇಖಕರು | 150/- |
| ಮಾಯಾಪಾತಾಳ (ಕವಿತೆ) | ರಾಮಲಿಂಗಪ್ಪ ಟಿ.ಬೇಗೂರು | 50/- |
| ಯುಗಪಲ್ಲಟ (ಸಂಸ್ಕೃತಿ ಚಿಂತನೆ) | ಯು.ಆರ್.ಅನಂತಮೂರ್ತಿ | 80/- |
| ಹಕ್ಕಿ ಪುಟಾಣಿ (ಮಕ್ಕಳ ಕವಿತೆ) | ಆನಂದ ವಿ. ಪಾಟೀಲ | 50/- |
| ಅರಹಂತ (ನಾಟಕ) | ರಾಮನಾಥ | 75/- |
| ಪ್ರೀತಿಸುವುದೆಂದರೆ (ಆರ್ಟ್ ಆಫ್ ಲವಿಂಗ್) | ಮೂಲ : ಎರಿಕ್ ಫ್ರಾಂ<br>ಅನು : ಕೆ.ವಿ.ನಾರಾಯಣ, ಎಚ್.ಎಸ್. ರಾಘವೇಂದ್ರರಾವ್ | 75/- |
| ಯೇಗ್ದಾಗೆಲ್ಲಾ ಐತೆ | ಬೆಳಗೆರೆ ಕೃಷ್ಣಶಾಸ್ತ್ರಿ | 50/- |
| ಗೊಂದಲಪುರ (ಹಿಂಸೆ ಕುರಿತು*) | ಸಂ.ನ.ರವಿಕುಮಾರ, ಡಿ.ಆರ್.ಚಂದ್ರಮಾಗಡಿ | 175/- |
| ಕರುಳಬಳ್ಳಿಯ ಸೊಲ್ಲು(ಬೇಂದ್ರೆ ಕಾವ್ಯ ವಿಮರ್ಶೆ*) | ರಾಜೇಂದ್ರ ಚೆನ್ನಿ | 40/- |
| ಫಾದರ್(ಸ್ಟ್ರಿಂಡ್‌ಬರ್ಗ್ ನಾಟಕ) | ಅನು : ಸಿ. ನಾಗಣ್ಣ | 40/- |
| ಬೆಳದಿಂಗಳು(ಮಕ್ಕಳ ಕಾದಂಬರಿ*) | ಆನಂದ ವಿ. ಪಾಟೀಲ | 15/- |
| ರಚನೆ-ನಿರಚನೆ(ವಿಮರ್ಶೆ*) | ಕೇಶವಶರ್ಮ. ಕೆ | 80/- |
| ಯಾರ ಜಪ್ತಿಗೂ ಸಿಗದ ನವಿಲುಗಳು<br>(ದೇವನೂರ ಮಹಾದೇವ ಸಾಹಿತ್ಯ ಕುರಿತು) | ಸಂ. ಪಿ. ಚಂದ್ರಿಕಾ | 120/- |
| ನೀಲಿತತ್ತಿ(ಕವನ ಸಂಕಲನ*) | ಲಕ್ಷ್ಮೀಪತಿ ಕೋಲಾರ | 50/- |
| ಜನ್ನ ಮತ್ತು ಅನೂಹ್ಯ ಸಾಧ್ಯತೆ(ಕಥಾ ಸಂಕಲನ*) | ಆನಂದ ಋಗ್ವೇದಿ | 50/- |
| ವಿರೋಧ ವಿಲಾಸ(ವಕ್ರೋಕ್ತಿ ವರಸೆಗಳು) | ಎಮ್.ಎಸ್.ಕೆ. ಪ್ರಭು | 30/- |
| ದೇಶೀ ದರ್ಶನಗಳು* | ವಿವಿಧ ಲೇಖಕರು | 60/- |
| ನಮ್ಮ ತನಕ ತಲ್ಲಣಗಳು(ಲೇಖನಗಳು*) | ಕೆ.ವಿ. ಸುಬ್ಬಣ್ಣ | 60/- |
| ಮಾಗಿ ಮೂವ್ವತ್ತೈದು(ಕಥೆಗಳು) | ಕೇಶವ ಮಳಗಿ | 65/- |
| ಪಾತಿದೋಣಿ (ಕಥೆಗಳು*) | ಉಮಾ ಹೆಗಡೆ | 45/- |
| ಶಬ್ದರೇಖೆ* (ವಿಮರ್ಶೆ) | ಕೇಶವಶರ್ಮ ಕೆ. | 50/- |
| ಅನಾಹತನಾದ (ಸಂಗೀತ ಕುರಿತು*) | ವಿವಿಧ ಲೇಖಕರು | 35/- |
| ಕದಳೀವನ ಕರ್ಪೂರ(ಪರಿಸರ ಚಿಂತನೆ*) | ವಿವಿಧ ಲೇಖಕರು | 50/- |
| ಯದುಗಿರಿಯ ಅಂಗಳದಿಂದ (ಪು.ತಿ.ನ. ಸಾಹಿತ್ಯ ಕುರಿತು*) | ವಿವಿಧ ಲೇಖಕರು | 45/- |
| ಕ್ಯಾಪ್ಸೂಲಗಿತ್ತಿ(ಅಂಕಣ ಬರಹ) | ನಾಗೇಶ ಹೆಗಡೆ | 30/- |
| ಚಲ್ ಮೇರಿ ಲೂನಾ (ಪ್ರಬಂಧಗಳು*) | ಆರ್. ನಿರ್ಮಲಾ | 50/- |
| ಪಾ.ವೆಂ. ಹೇಳಿದ ಕಥೆ(ಕಥೆಗಳು) | ರವಿ ಬೆಳಗೆರೆ | 100/- |

| | | |
|---|---|---|
| ದಾಂಪತ್ಯಕ್ಕೊಂದು ಶೀಲ(ಪ್ರಬಂಧಗಳು) | ಕೆ. ಸತ್ಯ ನಾರಾಯಣ | 30/- |
| ಒಂದು ಅನುರಾಗಕ್ಕಾಗಿ ಎಷ್ಟೆಲ್ಲಾ(ಕವನ*) | ಕೆ.ಪಿ. ಮೃತ್ಯುಂಜಯ | 20/- |
| ಆಶಯ ಆಕೃತಿ (ವಿಮರ್ಶೆ*) | ಸಿ. ಎನ್. ರಾಮಚಂದ್ರನ್ | 120/- |
| ಖಾಸ್‌ಬಾತ್ 97(ಅಂಕಣ ಬರಹ*) | ರವಿ ಬೆಳಗೆರೆ | 100/- |
| ಕಂಪ್ಯೂಟರ್‌ಗೊಂದು ಕನ್ನಡಿ* | ಸಿ.ಪಿ.ರವಿಕುಮಾರ್ | 27/- |
| ನೋಟಪಲ್ಲಟ(ದೃಶ್ಯ ಸಂಸ್ಕೃತಿ ಕುರಿತು) | ಎಚ್.ಎ. ಅನಿಲ್‌ಕುಮಾರ್ | 35/- |
| ಇಚ್ಚಾಶಕ್ತಿಯ ನಿರೂಪ(ವೋಲೆ ಷೋಯಿಂಕಾ ಸಾಹಿತ್ಯ ಕುರಿತು*) | ವಿವಿಧ ಲೇ | 35/- |
| ಅಂಧಮಕ್ಕಳ ಅರಿವಿನಂಗಣ (ಮಹಾ ಪ್ರಬಂಧ) | ಎಮ್.ಆರ್. ಮಂದಾರವಲ್ಲಿ | 25/- |
| ಮೊದಲ ಕಟ್ಟಿನ ಗದ್ಯ(ಲೇಖನಗಳು) | ಎಚ್.ಎಸ್. ಶಿವಪ್ರಕಾಶ್ | 70/- |
| ಗೌರವ (ಜಿ.ಎಸ್.ಎಸ್. 75) | ಸಂ.ಚಿ. ಶ್ರೀನಿವಾಸರಾಜು | 250/- |
| ಆಟ-ಮಾಟ(ಸೃಜನಶೀಲತೆ ಕುರಿತು) | ಕೆ.ಜಿ.ಸುಬ್ರಹ್ಮಣ್ಯನ್/ಶ್ರೀನಿವಾಸಮೂರ್ತಿ | 100/- |
| ನಮನ(ಅನುಭಾವಿ ಕಥನ) | ಆನಂದ ಪಾಟೀಲ | 50/- |
| ಕಲ್ಲರಳಿ ಹೂವ್ವಂತೆ (ಕೆ.ಟಿ.ಶಿವಪ್ರಸಾದ್ ಕುರಿತು) | ಸಂ.ಕೆ. ಪುಟ್ಟಸ್ವಾಮಿ | 150/- |
| ಮಕ್ಕಳಸಾಹಿತ್ಯಶತಮಾನ(ಮಕ್ಕಳಸಾಹಿತ್ಯಸಮೀಕ್ಷೆ) | ಸಂ:ಆನಂದಪಾಟೀಲ/ನ. ರವಿಕುಮಾರ | 75/- |

* ಪ್ರತಿಗಳು ಮುಗಿದಿವೆ

# ಕನ್ನಡ ಸಾಹಿತ್ಯ ರಂಗ ಪುಸ್ತಕ ಮಾಲೆ ೨

ಕತೆ, ಕವಿತೆ ಮತ್ತು ಕಾದಂಬರಿಗಳಿಗೆ ಅತಿಯಾದ ಮಹತ್ವಕೊಟ್ಟು, ಉಳಿದ ಪ್ರಕಾರಗಳನ್ನು ನಿರ್ಲಕ್ಷಿಸಿರುವ ಕರ್ನಾಟಕದ ನಮಗೆ ಬುದ್ಧಿಕಲಿಸುವಂತೆ, ಈ ಕೃತಿಯು ಪ್ರಕಟವಾಗಿದೆ. ಅನಿವಾಸಿ ಕನ್ನಡಿಗರು ಬರೆದ ಕಥೆಗಳ ಸಂಕಲನ, ಮಾಸ್ತಿ ಹಾಗೂ ಪು.ತಿ.ನ. ಅವರನ್ನು ಕುರಿತು ಈಗಾಗಲೇ ಪ್ರಕಟವಾಗಿರುವ ಸಂಪುಟಗಳು ಮತ್ತು ಈ ಪುಸ್ತಕವು, ಅವರ ಸೃಜನಶೀಲತೆ ಮತ್ತು ಕ್ರಿಯಾಶೀಲತೆಗಳಿಗೆ ಸಾಕ್ಷಿಯಾಗಿವೆ. ಉದ್ಯೋಗದ ಒತ್ತಡಗಳ ಫಲವಾಗಿ ಇವರು ಬಳಸುವ ಭಾಷೆಯು ಇಂಗ್ಲಿಷ್. ಆದರೆ, ಕನ್ನಡದಲ್ಲಿ ಅಳುವುದನ್ನು, ಕನ್ನಡದಲ್ಲಿ ನಗುವುದನ್ನು ಅಭ್ಯಾಸ ಮಾಡಿಕೊಂಡ ಈ ಮನಸ್ಸುಗಳು ತಮ್ಮ ಅಂತರಂಗವನ್ನು ಇಲ್ಲಿ ಹಂಚಿಕೊಂಡಿವೆ. ನಕ್ಕು ನಗಿಸುವ ವರವನ್ನು ಕೇಳಿಕೊಂಡುಬಂದ ಮಹನೀಯರಿಗೆ ನುಡಿನಮನವನ್ನು ಸಲ್ಲಿಸಿವೆ.

ಬಾಲ್ಯಾನುಭವಗಳ ಮರೆಯಲಾಗದ ಲೋಕವು ಇಲ್ಲಿನ ಹಾಸ್ಯದ ಒಂದು ಮೂಲವಾದರೆ, ಸ್ವಕೀಯವಾಗಿಯೂ ಅನ್ಯವಾದ ಅಮೆರಿಕಾದ ಅನಾವರಣವು ಅದರ ಇನ್ನೊಂದು ನೆಲೆ. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಿಂದ, ವಿಭಿನ್ನ ಕಾಲಗಳಲ್ಲಿ ವಲಸೆಹೋದ ಕನ್ನಡಿಗರಲ್ಲಿ, ಕೆಲವರು ಅಮೆರಿಕನ್ ಹಾಸ್ಯದ ವಿಭಿನ್ನ ಪರಿಗಳನ್ನು ಅನಾವರಣ ಮಾಡಿದ್ದಾರೆ, ಉಳಿದ ಅನೇಕರು ಕನ್ನಡದ ಹಾಸ್ಯ ವಿಡಂಬನೆಗಳ ಪರಂಪರೆಯನ್ನು ಮುಂದುವರಿಸಿದ್ದಾರೆ. ಬದುಕನ್ನು ಸಹನೀಯವಾಗಿಸುವ ನಗೆ ಸನ್ನಿವೇಶಗಳನ್ನು ಅಂತೆಯೇ ಕನ್ನಡ ಭಾಷೆಯ ಮೂಲೆಮುಡುಕುಗಳಲ್ಲಿ ಅಡಗಿರುವ ನಗೆಸಾಧ್ಯತೆಗಳನ್ನು ಇಲ್ಲಿ ಹುಡುಕಲಾಗಿದೆ. ಅನೇಕ ಲೇಖಕರು, ಇಂದಿನ ಕರ್ನಾಟಕದಲ್ಲಿಯೂ ಮರವೆಗೆ ಸಂದಿರುವ ವಿವರಗಳನ್ನು, ಜೀವನಕ್ರಮಗಳನ್ನು ಜತನವಾಗಿ ಕಾಪಾಡಿಕೊಂಡು, ಮರಳಿ ನೀಡಿದ್ದಾರೆ.

ಕನ್ನಡದ ಹಾಸ್ಯಸಾಹಿತ್ಯವನ್ನು ಬೆಳೆಸಿದ ಮಹನೀಯರ ಸಾಧನೆಗಳನ್ನು ಬಹುಮಟ್ಟಿಗೆ ಮೆಚ್ಚಿಗೆಯಿಂದ, ಅಪರೂಪಕ್ಕೆ ವಿಮರ್ಶಾತ್ಮಕವಾಗಿ ನೋಡಿರುವ ಲೇಖನಗಳು ಈ ಪುಸ್ತಕದ ಮಹತ್ವವನ್ನು ಹೆಚ್ಚಿಸಿವೆ. ಕೈಲಾಸಂ, ರಾಜರತ್ನಂ, ರಾಶಿ, ಬಿ.ಜಿ.ಎಲ್. ಸ್ವಾಮಿ, ಅ.ರಾ.ಸೇ. ಅವರಂತಹ ಹಿರಿಯರಿಂದ ಮೊದಲಾಗಿ ದುಂಡಿರಾಜ್ ಅವರವರೆಗೆ ಈ ಲೇಖನಗಳ ಹರಹಿದೆ. ಕರಾವಳಿ, ಉತ್ತರ ಕರ್ನಾಟಕ, ಜಾನಪದ ಮುಂತಾದವಕ್ಕೆ ವಿಶಿಷ್ಟವಾದ ಹಾಸ್ಯ–ವಿನೋದಗಳ ಸಮೀಕ್ಷೆಯೂ ಇಲ್ಲಿ ನಡೆದಿದೆ. ಇದು ಉಪಯುಕ್ತವಾದ, ಸಂತೋಷಕೊಡುವ ಸಂಪುಟ. ನಗೆಗನ್ನಡವು ಇಲ್ಲಿ ಗೆದ್ದಿದೆ.

ಎಚ್. ಎಸ್. ರಾಘವೇಂದ್ರರಾವ್

ಕನ್ನಡ ಸಾಹಿತ್ಯ ರಂಗ

